ಕನ್ನಡ ಸಾಹಿತ್ಯ ಪರಿಷತ್ತು
ವಜ್ರಮಹೋತ್ಸವವನ್ನು ಆಚರಿಸುತ್ತಿರುವ
ಸವಿನೆನಪಿನ ವರ್ಷದಲ್ಲಿ (೧೯೭೭) ಪ್ರಕಟಿತ.



ಇಳಿದು ಬಾ ತಾಯಿ



ವರಕವಿ ಡಾ. ದ. ರಾ. ಬೇಂದ್ರೆ

ಅವರಿಗೆ

ಅವರ ಹಿರಿಯರು, ಮಿತ್ರರು, ಅಭಿಮಾನಿಗಳು ಮತ್ತು ಕಾವ್ಯಾಭ್ಯಾಸಿಗಳು

ಅರ್ಪಿಸಿದ ಅಭಿನಂದನ ಗ್ರಂಥ.

# ಇಳಿದು ಬಾ ತಾಯಿ

## ( ಶ್ರೀ ಬೇಂದ್ರೆ ಅಭಿನಂದನ ಗ್ರಂಥ )







ಸಂಪಾದಕರು :

ಡಾ. ಬುದ್ದಣ್ಣ ಹಿಂಗಮಿರೆ

ಸಾಹಿತ್ಯ ಮಂಟಪ, ಹುಬ್ಬಳ್ಳಿ

ಹಾಗೂ

ಸಮಾಜ ಪುಸ್ತಕಾಲಯ, ಧಾರವಾಡ

ಇವರ ಸಹಪ್ರಕಟಣೆ

'*ILIDUBATAYI*'-Bendre Felicitation Volume. A Collection of 66 Critical Essays by Various Authours on the Life and Works of Dr. D. R. Bendre, a geat poet of Karnataka, Known as 'Ambikatanaya Datta'. Edited by Dr. B. B. Hingamire and Published by M. B. Ghanekar, B.A., B.Com., Samaj Book Depot, Dharwar in Collaboration with Sahitya Mantap, (Hubli). * First Edition 1977, * Price Rs. 65.
( Demy Octevo : pp. XVI + 790; 1000 Copie.s )

ಮೊದಲ ಮುದ್ರಣ : ೧೯೭೭


ಪ್ರಕಾಶಕರು :
ಮನೋಹರ ಘಾಣೇಕರ, ಬಿ. ಎ., ಬಿ. ಕಾಂ.
ಸಮಾಜ ಪುಸ್ತಕಾಲಯ, ಧಾರವಾಡ

ಮುದ್ರಕರು :
ರವೀಂದ್ರ ಘಾಣೇಕರ, ಬಿ. ಎ., ಪ್ರಿಂಟರ್.
ಪ್ರತಿಭಾ ಮುದ್ರಣ, ಧಾರವಾಡ

## ಸಂಪಾದಕರ ನುಡಿ



ಬೇಂದ್ರೆಯವರಿಂದ ಒಂದು ಕಾವ್ಯಪರಂಪರೆ ಉಚ್ಛ್ರಾಯ ಸ್ಥಿತಿಯನ್ನು ಮುಟ್ಟಿದ್ದು, ಅವರ ಪ್ರತಿಭೆ ಅನೇಕ ದಿಕ್ಕಿನಲ್ಲಿ ದುಡಿದಿದೆ. ವರ್ಡ್ಸ್‌ವರ್ಥ್‌ನ ಹಾಗೆ ರೋಮ್ಯಾಂಟಿಕ್ ಕಾವ್ಯಪರಂಪರೆಯನ್ನು ಗಟ್ಟಿಗೊಳಿಸುವಲ್ಲಿ ಬೇಂದ್ರೆ-ಯವರು ಮಾಡಿದ ಸಾಧನೆ ಅತ್ಯಂತ ಅರ್ಥಪೂರ್ಣವಾದದ್ದು. ಭೂಮಿ-ಗಗನ, ಮಾನವ-ದೇವ, ಸಂಸ್ಕೃತಿ-ನಾಗರಿಕತೆ, ಆತ್ಮ-ಅಧ್ಯಾತ್ಮ, ಸಾಫಲ್ಯ-ವೈಫಲ್ಯ ಹೀಗೆ ಹಲವು ತರಹದ ದ್ವಂದ್ವ ಹಾಗೂ ಹೋರಾಟದಲ್ಲಿ ಬೇಂದ್ರೆಯವರ ಕಾವ್ಯ ಆವಿಷ್ಕಾರ ಪಡೆದಿರುವುದು ಗಮನಾರ್ಹವಾಗಿದೆ.

ನಿಜವಾದ ಅರ್ಥದಲ್ಲಿ ಮಣ್ಣಿನ ಸತ್ವವನ್ನು ರೂಢಿಸಿಕೊಂಡ ಪ್ರಥಮ ಪ್ರಾಶಸ್ತ್ಯ ಬೇಂದ್ರೆಯವರಿಗೆ ಸಲ್ಲುವುದು. ಬೇಂದ್ರೆಯವರ ಕಾವ್ಯ ಅಂಥ ಮಣ್ಣಿನಿಂದ ಅರಳಿರುವುದು ಅಷ್ಟೆ ಅಲ್ಲ ಜನ ಅನುಭವಿಸುವ ಸುಖ-ದುಃಖದ ಸಂವೇದನೆಯನ್ನೊಳಗೊಂಡು, ಹೃನ್ಮನಗಳನ್ನು ತಟ್ಟುವ ಗುಣ ಪಡೆದುಕೊಂಡಿರುವುದು. ನಿಸರ್ಗ ಹಾಗೂ ಬದುಕಿನ ಆಳದಲ್ಲಿ ದುಮುದುಮಿಸುವ ಹಲವು ನಾದಗಳನ್ನು ಸೆರೆ ಹಿಡಿದು, ಅವಕ್ಕೆಲ್ಲ ಬಾಯಿಕೊಟ್ಟಿದ್ದಾರೆ ಕವಿ ಬೇಂದ್ರೆ. ಅವರು ಪಟ್ಟ ಪಾಡೆಲ್ಲ ಹುಟ್ಟು ಹಾಡಾಗುತ್ತ, ನವನವೋನ್ಮೇಷಶಾಲಿನಿಯಾದ ಪ್ರತಿಭೆ ಕಲ್ಪನೆಯ ನವೀನ ದಿಗಂತಗಳನ್ನು ತೆರೆದು ತೋರುತ್ತ ಬೆರಗುಗೊಳಿಸುವಂಥಾದ್ದು.

'ಇಳಿದು ಬಾ ತಾಯಿ'—ಬೇಂದ್ರೆಯವರ ಗಂಗಾವತರಣ ಪದ್ಯವನ್ನು ಮಾತ್ರ ಸಂಕೇತಿಸದೆ, ಒಟ್ಟು ಪ್ರತಿಭೆಯನ್ನು ಸಂಕೇತಿಸುವುದರಿಂದ ಅಭಿನಂದನ ಗ್ರಂಥಕ್ಕೆ ಈ ಹೆಸರನ್ನಿಟ್ಟಿರುವುದು. 'ತಾಯಿ'ಯ ಅನಂತ ಮುಖಗಳ ದರ್ಶನ, ಹೊಳಹನ್ನು ಸೂಚಿಸುವ ಅರ್ಥದಲ್ಲಿ ಇದರ ಮಹತ್ವವಿರುವುದು. ಬದುಕಿನ ಸಾಮಾನ್ಯ ಕ್ಷಣಗಳಿಂದ ಆರಂಭಿಸಿ, ಅರ್ಥೈಸಲು ಕ್ಲಿಷ್ಟವೆನ್ನಿಸುವ ಆಧ್ಯಾತ್ಮಿಕ ಅನುಭವಶಿಖರವಾಗಿರುವ ಪದ್ಯಗಳ ವರೆಗೂ—ಬೇಂದ್ರೆಯವರ ಅಭಿಜಾತ ಪ್ರಜ್ಞೆ ದುಡಿಯುತ್ತ ಬಂದಿದೆ.

ವೈಯಕ್ತಿಕ ಹಾಗೂ ಸಾರ್ವತ್ರಿಕ ಅನುಭವದ ಹಲವು ಹಂತಗಳನ್ನು ಬೇಂದ್ರೆಯವರ ಕಾವ್ಯದಲ್ಲಿ ಗುರ್ತಿಸಬಹುದು. ಬೇಂದ್ರೆಕಾವ್ಯದ ಚತುರ್ಮುಖ ಸೌಂದರ್ಯವನ್ನು ಆಸ್ವಾದಿಸಬೇಕಾದರೆ ಅವರ ಕಾವ್ಯದ ವಿಮರ್ಶೆ–ವಿಶ್ಲೇಷಣೆ ಬೆಳೆದು ಬರುವುದು ಅತ್ಯಂತ ಅವಶ್ಯವಾದದ್ದು. ಬೇಂದ್ರೆಯವರ ಕಾವ್ಯ ಕೇಳುವುದಕ್ಕೆ ಆಕರ್ಷಕವಾದಷ್ಟು, ನಾದದಿಂದ ಸೆರೆ ಹಿಡಿಯುವಷ್ಟು ಕಾವ್ಯದ ವಿಶ್ಲೇಷಣೆ, ವಿಮರ್ಶೆ ಅಷ್ಟು ಸುಲಭ ಗ್ರಾಹ್ಯವಲ್ಲ. ಬೇಂದ್ರೆಯವರು ಉತ್ತರ ಕರ್ನಾಟಕದ ಭಾಷೆಯನ್ನು ವಿಶಿಷ್ಟವಾಗಿ ರೂಢಿಸಿಕೊಳ್ಳುವರಾದ್ದರಿಂದ, ಪದ್ಯಗಳು ಮಣ್ಣಿನ ಸತ್ತ್ವವನ್ನು, ನೈಸರ್ಗಿಕ ಹಾಗೂ ಸಹಜ ಲಯಗಳನ್ನು ಪಡೆದುಕೊಂಡು ವಿಜೃಂಭಿಸುತ್ತವೆ. ಬೇಂದ್ರೆಯವರ ಕಾವ್ಯದ ಮೂಲಸ್ರೋತ ಜಾನಪದ ಬದುಕಿನಲ್ಲಿರುವುದರಿಂದ, ಬೇಂದ್ರೆಯವರ ಪದ್ಯಗಳನ್ನು ವಿಮರ್ಶಿಸುವುದು ಕಷ್ಟದ್ದೆಂದು ತೋರುವುದು. ಬೇಂದ್ರೆಯವರ ಪದ್ಯಗಳು ಮನಸೆಳೆದಷ್ಟು ಇನ್ನಾರ ಪದ್ಯಗಳೂ ಮನಸೆಳೆಯಲಿಲ್ಲ ಎಂದು ಹೇಳಬಹುದು. ಬೇಂದ್ರೆಯವರ ಕಾವ್ಯ, ವಿಮರ್ಶೆಯನ್ನೂ, ವಿಮರ್ಶಕನನ್ನೂ ಬೆಳೆಸುತ್ತ ಹೋಗುವಂಥ ಸಾಮರ್ಥ್ಯವನ್ನು ಪಡೆದಿರುವಂಥಾದ್ದು. ನಾಲ್ಕು ಹುಡುಗರು ಎದ್ದು 'ಬೌ' ಎಂದ ಮಾತ್ರಕ್ಕೆ ಆ ಕವಿಯ ಮಹತ್ವವೇನೂ ಕಡಿಮೆಯಾಗುವುದಿಲ್ಲ. ಇಂದಿಗೂ ಬೇಂದ್ರೆಯವರ ಕಾವ್ಯವನ್ನು ವಿಮರ್ಶಿಸುವುದು–ವಿಮರ್ಶಕನ ಕಣ್ಣೆದುರು ಅದೊಂದು ದೊಡ್ಡ ಸವಾಲಾಗಿ ನಿಂತಿರುವುದು. ಬೇಂದ್ರೆಯವರ ಕಾವ್ಯದ ಮಹತ್ವ ಅದರ ಸಾಂಸ್ಕೃತಿಕ ಅಭಿನಿವೇಶನದಲ್ಲಿರುವುದು. ಒಂದು ಸಂಸ್ಕೃತಿಯನ್ನು ಆತ್ಮಸಾತ್ ಮಾಡಿಕೊಂಡು, ಬದುಕಿನ ಮೌಲ್ಯಗಳನ್ನು ಶೋಧಿಸುವ ಉಪಕ್ರಮದಲ್ಲಿರುವುದು.

ಬೇಂದ್ರೆಯವರ ಕಾವ್ಯಸೃಷ್ಟಿ–ಅನೇಕ ದೃಷ್ಟಿಯಿಂದ ಮಹತ್ವದ್ದಾಗಿರುವಂಥಾದ್ದು. ಬೇಂದ್ರೆಯವರ ಕಾವ್ಯ ಒಂದರ್ಥದಲ್ಲಿ ಕನ್ನಡಕಾವ್ಯದ ಭಾವಗೀತದ ಸಮೃದ್ಧಸ್ಥಿತಿಯನ್ನು ನಿರ್ದೇಶಿಸುತ್ತದೆ. ಭಾವಗೀತದ ಸಾಧ್ಯತೆಗಳನ್ನು ವಿಸ್ತರಿಸುವುದರೊಂದಿಗೆ, ಸಾರ್ವಕಾಲಿಕ ಸಮಸ್ಯೆಗಳ ಕುರಿತು ಚಿಂತಿಸುವ ವಿಧಾನವೂ ಬೇಂದ್ರೆ ಕಾವ್ಯದ ವೈಶಿಷ್ಟ್ಯ. ಮನಸ್ಸಿಗೆ ಹೊಳೆದದ್ದನ್ನು, ಅದರ ಥಳಕನ್ನು ಇದ್ದಕ್ಕಿದ್ದಂತೆ ಕಾವ್ಯದಲ್ಲಿ ಹಿಡಿದಿಟ್ಟು ಜಿಜ್ಞಾಸೆಯನ್ನು ಕೆರಳಿಸುವ ಗುಣ ಇಂಥಾ ಕಾವ್ಯದ್ದು. ಬೇಂದ್ರೆ ಕಾವ್ಯದ ಥಳಕು–ಬೆಳಕನ್ನು ನಿದರ್ಶಿಸುವ ಹಲವು ಲೇಖನಗಳು 'ಇಳಿದು ಬಾ ತಾಯಿ' ಗ್ರಂಥದಲ್ಲಿದ್ದು, ಬೇಂದ್ರೆಕಾವ್ಯದ ರೂಪ – ವಿನ್ಯಾಸವನ್ನು, ಸಾಹಿತ್ಯಸೃಷ್ಟಿಗೆ ಪ್ರೇರಕವೆನಿಸುವ ಕೆಲವು ಮಹತ್ವದ ಅಂಶಗಳು, ವೈಯಕ್ತಿಕ ಅನುಭವ ಸಾರ್ವತ್ರಿಕವಾಗಿ, ಪರಿವರ್ತಿತವಾಗಿ ಉನ್ನತ ಕಾವ್ಯದ ಹೊಳಹನ್ನು ಸೂಚಿಸಬಲ್ಲ ಹಲವು ವಿಚಾರಗಳು ಇಲ್ಲಿಯ ಲೇಖನಗಳಲ್ಲಿ ವ್ಯಕ್ತ–

ವಾಗಿರುವುದನ್ನು ಗುರ್ತಿಸಬಹುದು. ಬೇಂದ್ರೆ ಕಾವ್ಯದ ಹರಹು ದೊಡ್ಡದಾಗಿದ್ದು ಅದನ್ನೆಲ್ಲ ವಿಶ್ಲೇಷಿಸಿ, ಅಭ್ಯಸಿಸುವುದು ಕೂಡ ಒಬ್ಬೊಬ್ಬರಿಗೆ ಒಂದೊಂದು ಬಗೆಯ ಅನುಭವವುಂಟಾದರೆ ಆಶ್ಚರ್ಯವೇನಲ್ಲ.

ಬೇಂದ್ರೆಯವರು ಕಾವ್ಯಕ್ಕೆ ಬಳಸುವ ಭಾಷೆ, ವಿಶಿಷ್ಟ ಛಂದೋಲಯಗಳು, ರೂಪಕಗಳು, ಆಧ್ಯಾತ್ಮಿಕ ಸಂಕೇತಗಳು ಇಂಥ ವಿಷಯುಗಳ ಕುರಿತು ಇನ್ನೂ ಬೇಕಾದಷ್ಟು ಅಭ್ಯಾಸ ನಡೆಯಬೇಕಾದದ್ದೆ. ಬೇಂದ್ರೆಯವರ ಕಾವ್ಯದಲ್ಲಿ ಭಾವ, ರಸ, ರೂಪ, ಛಂದ ಅಲ್ಲದೆ ಮಾನವನ ಕಷ್ಟ–ನಷ್ಟಗಳ ನಿವೇದನೆ, ದೈವೋಪಾಸನೆ, ಸೌಂದರ್ಯಾರಾಧನೆ, ಸತ್ಯಶೋಧನೆ ಮುಂತಾದ ವಿವಿಧ ವಿಷಯುಗಳನ್ನೊಳಗೊಂಡ ಲೇಖನಗಳು ಇಲ್ಲಿ ಸಂಕಲಿತವಾಗಿದ್ದು – ಕಾವ್ಯಮೀಮಾಂಸೆಗೆ, ಅಭ್ಯಾಸಕ್ಕೆ ಸಾಮಗ್ರಿಯನ್ನೊದಗಿಸಬಲ್ಲವು.

ಕಾವ್ಯವಲ್ಲದೆ ಬೇಂದ್ರೆಯವರ ಇನ್ನಿತರ ಅನೇಕ 'ಗದ್ಯರಚನೆ'ಗಳ ಕುರಿತೂ ಕೆಲವು ಲೇಖನಗಳು ಈ ಗ್ರಂಥದಲ್ಲಿವೆ. ಈ ಗ್ರಂಥದಲ್ಲಿ ಬೇಂದ್ರೆಯವರ ಲೇಖನ, ಭಾಷಣಗಳೆಲ್ಲವನ್ನೂ, ಸಾಹಿತ್ಯವನ್ನೂ ಕುರಿತ ಆ ಸಮಗ್ರದೃಷ್ಟಿ ಒಡಮೂಡುವ ಹಾಗಿದೆ. ಸಾಹಿತ್ಯದ ವಿರಾಟ್‌ಸ್ವರೂಪ ಹಾಗೂ ಅವರ ವಿಮರ್ಶಾಪ್ರಬಂಧಗಳ ಕುರಿತು ಅಭ್ಯಾಸವಾಗುವುದಾದರೆ ಪ್ರತ್ಯೇಕ ಗ್ರಂಥವೇ ಬೇಕಾದೀತು. ಅಭಿನಂದನ ಗ್ರಂಥದ ಮಿತಿಯಲ್ಲಿ – ಎಲ್ಲವನ್ನೂ ಸಂಗ್ರಹಿಸಲು ಸಾಧ್ಯವಾಗಿಲ್ಲ.

ವರಕವಿ ಬೇಂದ್ರೆಯವರ ಸಾಹಿತ್ಯ ಮತ್ತು ವ್ಯಕ್ತಿತ್ವದ ಅಧ್ಯಯನಕ್ಕೆ ಸಂಬಂಧಿಸಿದ 'ಇಳಿದು ಬಾ ತಾಯಿ' ಅಭಿನಂದನ ಗ್ರಂಥದಲ್ಲಿ ಏಳು ಭಾಗ-ಗಳಿವೆ.

೧. ವಿಮರ್ಶಾತ್ಮಕ ಲೇಖನಗಳು.

೨. ಕೆಲವು ಬಿಡಿಪದ್ಯಗಳ ಹಾಗೂ ಕೃತಿಗಳ ವಿಶ್ಲೇಷಣೆ.

೩. ಬೇಂದ್ರೆಯವರ ಜೀವನ ಪರಿಚಯ.

೪. ಪರಿಚಯ – ಅಭಿಮಾನ.

೫. ರಸನಿಮಿಷಗಳು.

೬. ವೈಜ್ಞಾನಿಕ – ವಿಶ್ಲೇಷಣೆ.

೭. ವಿಶೇಷ ಲೇಖನಗಳು.

ಬೇಂದ್ರೆಯವರ ಕಾವ್ಯ ಹಾಗೂ ಸಾಹಿತ್ಯಸೃಷ್ಟಿಗೆ ಸಂಬಂಧಿಸಿದಂತೆ-ವಿಮರ್ಶಾತ್ಮಕ ಲೇಖನಗಳು ಈ ಗ್ರಂಥದ ಮುಖ್ಯಭಾಗ, ಇನ್ನೊಂದು ಕವಿ-ಕಾವ್ಯ ಪರಿಚಯಾತ್ಮಕ, ಮತ್ತೊಂದು ರಸನಿಮಿಷಗಳಿಂದ ಕೂಡಿದ್ದು.

‘ ಇಳಿದು ಬಾ ತಾಯಿ ’ — ಕಾವ್ಯಾಭಿರುಚಿಯುಳ್ಳ ಹಲವರಿಗೆ ಬೇಂದ್ರೆ ಕಾವ್ಯದ ಹೊಳಹನ್ನು ಮಿಂಚಿಸಿ, ನಾದಲೋಕದಲ್ಲಿ ಮೀಯಿಸಲು ಸಹಾಯಕ-ವಾದೀತೆಂದು ಭಾವಿಸಿದ್ದೇವೆ.

ಧಾರವಾಡ<br>
೨೦–೩–೭೭

—ಬುದ್ದಣ್ಣ ಹಿಂಗಮಿರೆ

## ಸಮಾಜ ಪುಸ್ತಕಾಲಯದ ಪರವಾಗಿ ವರಕವಿಗೆ ಅಭಿನಂದನೆ

ಬಹು ಹಿಂದೆ ಹುಬ್ಬಳ್ಳಿಯ 'ಸಾಹಿತ್ಯ ಮಂಟಪ'ದವರು ಶ್ರೀ ಬೇಂದ್ರೆ ಕಾವ್ಯವನ್ನು ಕುರಿತು ಅನೇಕರಿಂದ ಉಪನ್ಯಾಸಗಳನ್ನು ಏರ್ಪಡಿಸಿ, ಆಯಾ ಉಪನ್ಯಾಸಗಳನ್ನೇ ಲೇಖನಗಳನ್ನಾಗಿ ಬರೆಸಿ ತರಿಸಿಕೊಂಡು ಪುಸ್ತಕರೂಪದಲ್ಲಿ ಹೊರತರಬೇಕೆಂಬ ಹವಣಿಕೆಯಲ್ಲಿದ್ದರು.

ಮಂಟಪದ ಪರವಾಗಿ ಶ್ರೀ ವಾಲಿಶೆಟ್ಟರ ಹಾಗೂ ಡಾ. ಹಿಂಗಮಿರೆಯವರು ಈ ವಿಷಯವನ್ನು ನಮ್ಮೆದುರು ಸಹಜವಾಗಿ ಪ್ರಸ್ತಾಪಿಸಿದರು. ಶ್ರೀ ಬೇಂದ್ರೆಯವರ ಎಲ್ಲ ಕೃತಿಗಳ ಪ್ರಕಾಶಕರಾದ ನಮ್ಮ ತಲೆಯಲ್ಲಿ ಈ ವಿಷಯಕ ಪ್ರಸ್ತಾಪವು ಬೇರೊಂದು ಭವ್ಯಕಲ್ಪನೆಯನ್ನೇ ಮಿಂಚಿಸಿತು. ಸದ್ಯ ಕೂಡಿರುವ ಕೆಲವು ಲೇಖನಗಳನ್ನಲ್ಲದೆ, ಇನ್ನಷ್ಟು ಲೇಖನಗಳನ್ನು ಬರೆಸಿ ತರಿಸಿಕೊಂಡು, ಮಂಟಪ ಹಾಗೂ ಸಮಾಜ ಪುಸ್ತಕಾಲಯಗಳ ಸಂಯುಕ್ತ ಪ್ರಕಟಣೆಯಾಗಿ, ಶ್ರೀ ಬೇಂದ್ರೆ ಅಭಿನಂದನ ಗ್ರಂಥವನ್ನೇ ಏಕೆ ಹೊರತರಬಾರದು ಎಂಬ ಈ ಸ್ಫುರಿತ ಕಲ್ಪನೆಯನ್ನು ನಾವು ಅವರೆದುರು ಮಂಡಿಸಿದೆವು. ಮಂಟಪದವರು ನಮ್ಮ ಈ ಆಶಯವನ್ನು ಸಂತೋಷದಿಂದ ಸ್ವಾಗತಿಸಿದರು. ಇದರ ಫಲವಾಗಿ ಶ್ರೀ ಬೇಂದ್ರೆ ಅಭಿನಂದನ ಗ್ರಂಥ ಸಮಿತಿಯೊಂದು ಏರ್ಪಟ್ಟಿತು.

ಸರ್ವಶ್ರೀ ಡಾ. ಡಿ. ಎಸ್. ಕರ್ಕಿ, ಡಾ. ಆರ್. ಸಿ. ಹಿರೇಮಠ, ಪ್ರಹ್ಲಾದರಾವ್ ನರೇಗಲ್, ಬಾಲಚಂದ್ರ ಘಾಣೇಕರ, ದೇಸಾಯಿ ದತ್ತಮೂರ್ತಿ, ಚೆನ್ನವೀರ ಕಣವಿ, ಡಾ. ಬಿ. ಬಿ. ಹಿಂಗಮಿರೆ, ಕೆ. ಟಿ. ಪಾಟೀಲ, ನಿರಂಜನ ವಾಲಿಶೆಟ್ಟರ, ಮನೋಹರ ಘಾಣೇಕರ

—ಇವರೆಲ್ಲರು ಸಮಿತಿಯ ಸದಸ್ಯರಾದರು. ಶ್ರೀ ಬೇಂದ್ರೆಯವರ ಬಹುಮುಖ ಪ್ರತಿಭೆಯನ್ನು ಪ್ರತಿನಿಧೀಕರಿಸುವ ಕಾವ್ಯ, ನಾಟಕ, ಕಥೆ, ಸಾಹಿತ್ಯ-ಸಂಶೋಧನೆ ಹಾಗೂ ಇತರ ಗದ್ಯಸಾಹಿತ್ಯವನ್ನು ಕುರಿತ ವಿದ್ವತ್ಪೂರ್ಣ ಲೇಖನಗಳನ್ನೊಳಗೊಂಡ ಅಭಿನಂದನ ಗ್ರಂಥವನ್ನು 'ಸಮಾಜ ಪುಸ್ತಕಾಲಯ'ವು ಪ್ರಕಟ ಮಾಡುವುದಾಗಿ ತಿಳಿಸಿ, ಈ ಸಮಿತಿಯು ಡಾ. ಹಿಂಗಮಿರೆಯವರನ್ನು ಸಂಪಾದಕ ಸ್ಥಾನದಲ್ಲಿರಿಸಿ, ನಾಡಿನ ಬೇರೆ ಬೇರೆ ವಿದ್ವಾಂಸರಿಗೆ ಕಾಗದ ಬರೆಸಿತು. ಅವರ

ಲೇಖನಗಳನ್ನು ಇದಕ್ಕಾಗಿ ಕೇಳಿಕೊಂಡಿತು. ಹೀಗೆ ಈ ಕಾರ್ಯವನ್ನು ಹಮ್ಮಿ-
ಕೊಂಡು ಪತ್ರವ್ಯವಹಾರದಲ್ಲಿ ತೊಡಗಿದಾಗ, ಪ್ರಸ್ತುತ ಗ್ರಂಥವನ್ನು ಶ್ರೀ ಬೇಂದ್ರೆ
ಯವರ ೭೫ನೆಯ ಹುಟ್ಟುಹಬ್ಬದಂದು ಪ್ರಕಟಿಸುವ ಮನೀಷೆಯಿತ್ತು. ಸಮಿತಿಯ
ವತಿಯಿಂದ ಕಳಿಸಿದ ಪರಿಪತ್ರಗಳನ್ನು ಅನುಸರಿಸಿ ಅನೇಕ ಲೇಖನಗಳೇನೋ ಬಂದು
ಸೇರಿದವು. ಆದರೆ ಅಭಿನಂದನ ಗ್ರಂಥದ ಸ್ವರೂಪವು ಹೊಸ ಹೊಸ ಆಯಾಮ
ಗಳನ್ನು ಹೊಂದುತ್ತ ಹೋದುದರಿಂದ ಕಾರ್ಯದ ವ್ಯಾಪ್ತಿ ಬೆಳೆಯುತ್ತಹೋಯಿತು.
ಇಷ್ಟು ವಿಲಂಬವಾದರೂ, ಮಹಾಕವಿಗೆ ಎಂಬತ್ತೊಂದು ತುಂಬುತ್ತಿರುವ ಈ ಶುಭ
ಸಂದರ್ಭದಲ್ಲಿ, ಈ ಕಾರ್ಯ ಪೂರ್ತಿಗೊಳ್ಳುತ್ತಿರುವುದು ನಮಗೆ ಒಂದು ಬಗೆಯ
ಸಮಾಧಾನ ತಂದಿದೆ.

ಮಹತ್ವದವೆನಿಸಿದ ಬೇರೆ ಬೇರೆ ವಿಷಯಗಳ ಮೇಲೆ ಪ್ರಕಾಶಕರಾದ ನಾವೇ
ಅನೇಕರಿಂದ ಲೇಖನ ಬರೆಸಿ ತರಿಸಿಕೊಳ್ಳುವುದಕ್ಕೆ ಸಂಪಾದಕ ಹಿಂಗಮಿರೆಯವರು
ನಮಗೆ ಸ್ವಾತಂತ್ರ್ಯ ಕೊಟ್ಟುದರಿಂದ ಈ ಅಭಿನಂದನ ಗ್ರಂಥವು ಬರಿ ಅಭಿನಂದನ
ಗ್ರಂಥವಾಗದೆ ಬೇಂದ್ರೆ ಸಾಹಿತ್ಯಾಭ್ಯಾಸಿಗಳಿಗೆ ಒಂದು ಸಮಗ್ರ, ಮೌಲಿಕ, ವಿಮ-
ರ್ಶಾತ್ಮಕ, ಸಂದರ್ಭ ಗ್ರಂಥವಾಗಲಿ ಎಂಬ ನಮ್ಮ ಬಯಕೆ ಬಹುಪಾಲು ಈಡೇರಿದೆ
ಎಂದು ನಮ್ರವಾಗಿ ಹೇಳಬಹುದು. ಸಾಹಿತ್ಯಾಭ್ಯಾಸಿಗಳಿಗೆ ಈ ಬಗೆಯಲ್ಲಿ ಪ್ರಯೋ
ಜನವಾದರೆ ನಾವು ನಿಜಕ್ಕೂ ಕೃತಕೃತ್ಯರು! ಇನ್ನೂ ಅನೇಕ ವಿದ್ವಾಂಸರನ್ನು
ಬೇರೆ ಬೇರೆ ವಿಷಯಗಳ ಮೇಲೆ ಲೇಖನ ಬರೆಯಲು ಕೇಳಿಕೊಂಡಿದ್ದೆವು. ಆದರೆ
ಅನೇಕರು ಸಮಯಾಭಾವ, ಆರೋಗ್ಯಾಭಾವಗಳಿಂದಾಗಿ ಲೇಖನ ಬರೆದು ಕಳಿಸ-
ಲಿಲ್ಲ. ಏನೇ ಇರಲಿ, ನಾವು ಬರೆಯಲು ಕೊಟ್ಟ ಎಲ್ಲ ಲೇಖನಗಳೂ ಕೈಗೆಬಂದಿದ್ದರೆ
ಈ ಸಂಭಾವನಾ ಗ್ರಂಥ ಒಂದೂವರೆ ಸಹಸ್ರ ಪುಟಗಳಿಗೂ ಮಿಕ್ಕುವಷ್ಟಾಗುತ್ತಿತ್ತು
ಎಂಬುದು ಮಾತ್ರ ಖಾತ್ರಿ!

ನಮ್ಮ ಕರೆಗೆ ಓಗೊಟ್ಟು, ಸರ್ವಶ್ರೀ ಪು. ತಿ. ನ, ಗೊರೂರು, ಕೀರ್ತಿನಾಥ
ಕುರ್ತಕೋಟಿ, ರಾ. ಯ. ಧಾರವಾಡಕರ, ಶ್ರೀನಿವಾಸ ಹಾವನೂರ, ಕೆ.
ರಾಘವೇದ್ರರಾವ್, ಸದಾನಂದ ನಾಯಕ, ರಮೇಶ ಉಪಾಧ್ಯಾಯ, ಚೆನ್ನವೀರ
ಕಣವಿ, ಶೇಷ ನವರತ್ನ, ವಾಮನ ಬೇಂದ್ರೆ, ಆರ್. ಎಸ್. ಸುಂಕದ, ಜಿ. ಎಂ.
ಹೆಗಡೆ, ಟಿ. ಆರ್. ಭಟ್, ಎಸ್. ಪಿ. ಪಾಟೀಲ, ಪ್ರಹ್ಲಾದ ನರೇಗಲ್, ಜಿ.
ಎನ್. ಕುಂದರಗಿ, ಪಂಢರೀನಾಥಾಚಾರ್ಯ ಗಲಗಲಿ, ವಿ. ಕೃ. ಗೋಕಾಕ, ನಿ.
ಶ್ರೀಶ ಬಲ್ಲಾಳ–ಮುಂತಾದವರು, ನಾವು ಸೂಚಿಸಿದ ವಿಷಯಗಳ ಮೇಲೆ ಲೇಖನ
ಗಳನ್ನು ಬರೆದುಕೊಡುವದರ ಮೂಲಕ ಅಥವಾ ತಮ್ಮ ಪ್ರಕಟಿತ ಲೇಖನವನ್ನು
ಉದ್ಧರಿಸಿಕೊಳ್ಳಲು ಅನುಮತಿ ನೀಡುವುದರ ಮೂಲಕ ನಮ್ಮೊಡನೆ ಆತ್ಮೀಯತೆ
ಯಿಂದ ಸಹಕರಿಸಿದರು. ಅದಕ್ಕಾಗಿ ಈ ಎಲ್ಲ ಮಹನೀಯರಿಗೂ ನಮ್ಮ ನೆನಕೆಗಳು,

ಪ್ರಸ್ತುತ ಗ್ರಂಥಕ್ಕೆ ಉಪಯೋಗಿಸಿಕೊಳ್ಳಲು ಕೆಲವು ಪಡಿಯಚ್ಚುಗಳನ್ನು ಒದಗಿಸಿದ ಪ್ರಾಧ್ಯಾಪಕ ಶ್ರೀರಾಮ ಪೂಜಾರಿ ಅವರಿಗೂ, ಬೇಂದ್ರೆ ಹಾಗೂ ಬೇಂದ್ರೆ ಕುಟುಂಬಕ್ಕೆ ಸಂಬಂಧಿಸಿದ ಅನೇಕ ಅಪರೂಪದ ಭಾವಚಿತ್ರಗಳನ್ನು ದಯವಿಟ್ಟು ಕೊಟ್ಟ ಡಾ. ವಾಮನ ಬೇಂದ್ರೆಯವರಿಗೂ ನಾವು ಋಣಿಗಳು.

ನಮ್ಮಿಂದ ಇಷ್ಟೊಂದು ಬೃಹತ್ ಪ್ರಮಾಣದ ಅಭಿನಂದನ ಗ್ರಂಥ ಪ್ರಕಟ-ವಾಗುವುದಕ್ಕೆ ಮೂಲಪ್ರೇರಣೆಯಾಗಿರುವ 'ಸಾಹಿತ್ಯ ಮಂಟಪ'ಕ್ಕೂ, ಡಾ. ಹಿಂಗಮಿರೆ ಅವರಿಗೂ, ಆತ್ಮೀಯ ಗೆಳೆಯರಾದ ಶ್ರೀ ಜಿ. ಎಂ. ಹೆಗಡೆ, ಶ್ರೀ ಶೇಷ ನವರತ್ನ ಅವರಿಗೂ ನಮ್ಮ ಕೃತಜ್ಞತೆಗಳು.

ಧಾರವಾಡ
೨೦-೩-೭೭

ಮನೋಹರ ಘಾಣೇಕರ
(ಸಮಾಜ ಪುಸ್ತಕಾಲಯ, ಧಾರವಾಡ)

## ಸಾಹಿತ್ಯ ಮಂಟಪದ ಪರವಾಗಿ

ಹುಬ್ಬಳ್ಳಿಯ ಸಾಹಿತ್ಯ ಮಂಟಪ ಬೇಂದ್ರೆಯವರಿಗೆ ಅಭಿನಂದನ ಗ್ರಂಥ ಅರ್ಪಿಸುವುದನ್ನು ಹಮ್ಮಿಕೊಂಡು ಆ ದಿಕ್ಕಿನಲ್ಲಿ ಕಾರ್ಯಪ್ರವೃತ್ತವಾಯಿತು. ಬೇಂದ್ರೆಯವರ ಕಾವ್ಯ, ಸಾಹಿತ್ಯದ ಬಗ್ಗೆ ವಿದ್ವಜ್ಜನಗಳಿಂದ ಲೇಖನವನ್ನು ದೊರಕಿಸುವುದು- ಅದನ್ನು ಗ್ರಂಥರೂಪದಲ್ಲಿ ತರಬೇಕಾದರೆ ಐದಾರು ವರ್ಷ ಅವಧಿ ಹಿಡಿಯಿತು. ಅಪೇಕ್ಷಿತ ಸ್ವರೂಪದಲ್ಲಿ ಗ್ರಂಥ ಬರಬೇಕೆಂಬುದು ನಮ್ಮ ಆಶಯವಾಗಿತ್ತು.

ಗ್ರಂಥಕ್ಕೆ ಬೃಹತ್‌ಸ್ವರೂಪ ಪ್ರಾಪ್ತವಾಗುವಂತೆ ಧಾರವಾಡ 'ಸಮಾಜ ಪುಸ್ತಕಾಲಯ'ದ ಮನೋಹರ ಘಾಣೇಕರ ಅವರು ಮುಂದೆ ಬಂದು, ಸಾಹಿತ್ಯ ಮಂಟಪ ಮತ್ತು ಸಮಾಜ ಪುಸ್ತಕಾಲಯದ ಸಂಯುಕ್ತ ಪ್ರಕಟಣೆಗೆ ಒಪ್ಪಿ-ಕೊಂಡರು. 'ಇಳಿದು ಬಾ ತಾಯಿ'—ಇಷ್ಟೊಂದು ಬೃಹತ್‌ಪ್ರಮಾಣದಲ್ಲಿ ಹೊರ ತರಲು ಸಮಾಜ ಪುಸ್ತಕಾಲಯದ ಶ್ರೀ ಮನೋಹರ ಘಾಣೇಕರ ಅವರು ತೋರಿದ ಸಹಕಾರ ಹಾಗು ಪಟ್ಟ ಪರಿಶ್ರಮಗಳಿಗಾಗಿ ನಮ್ಮ ಕೃತಜ್ಞತೆಗಳು.

ಸಂಪಾದಕತ್ವವನ್ನು ನಿರ್ವಹಿಸಿಕೊಡು ವ್ಯವಸ್ಥಿತ ರೂಪದಲ್ಲಿ ಬರುವಂತೆ ದುಡಿದ ಡಾ. ಬುದ್ದಣ್ಣ ಹಿಂಗಮಿರೆ ಅವರ ಶ್ರಮದ ಪ್ರತೀಕ 'ಇಳಿದು ಬಾ ತಾಯಿ' ಗ್ರಂಥ. ನಮ್ಮ ಕಾರ್ಯದಲ್ಲಿ ನೆರವಾದ ಹಿರಿಯರು ಹಾಗೂ ಸಾಹಿತ್ಯಾಭಿಮಾನಿ ಸ್ನೇಹಿತರಿಗೆಲ್ಲ ನಮ್ಮ ವಂದನೆಗಳು.

ಹುಬ್ಬಳ್ಳಿ
೨೦-೩-೭೭

ಕೆ. ಟಿ. ಪಾಟೀಲ
ನಿರಂಜನ ವಾಲಿಶೆಟ್ಟರ
(ಸಾಹಿತ್ಯ ಮಂಟಪ, ಹುಬ್ಬಳ್ಳಿ)

# ಪರಿವಿಡಿ



*** ವಿಮರ್ಶಾತ್ಮಕ ಲೇಖನಗಳು *** ಪುಟ

### * ಕೆಲವು ಪದ್ಯಗಳ ಹಾಗೂ ಕೃತಿಗಳ ವಿಶ್ಲೇಷಣೆ *



### * ಬೇಂದ್ರೆಯವರ ಜೀವನ ಪರಿಚಯ *



### * ಪರಿಚಯ – ಅಭಿಮಾನ *

* ರಸನಿಮಿಷಗಳು *



* ವೈಜ್ಞಾನಿಕ ವಿಶ್ಲೇಷಣೆ *



* ವಿಶೇಷ ಲೇಖನಗಳು *

# ೧

# ನಾದಲೀಲೆ

ಶ್ರೀನಿವಾಸ

ಶಿವಮೊಗ್ಗಿಯ ಕರ್ನಾಟಕ ಸಂಘದ ನನ್ನ ಮಿತ್ರರು ತಾವು ಪ್ರಕಟಿಸಲಿರುವ ಶ್ರೀ ಬೇಂದ್ರೆಯವರ ಈ ಕವನ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು ಬರೆಯಬೇಕೆಂದು ನನ್ನನ್ನು ಕೇಳಿದಾರೆ. ನನ್ನ ಪ್ರಿಯಮಿತ್ರರಾದ ಕವಿ ಈ ವಿಷಯದಲ್ಲಿ ತಮ್ಮ ಸಮ್ಮತಿಯನ್ನು ತಿಳಿಸಿದಾರೆ. ಈ ಕಾರ್ಯವು ಬಹು ಗೌರವವನ್ನು ತರತಕ್ಕದ್ದೆಂದು ನಾನು ಬಲ್ಲೆನು. ಹಾಗೆಯೇ ಅದು ಸುಖವನ್ನು ತರತಕ್ಕದೂ ಆಗಿದೆ. ಆದ್ದರಿಂದ ನಾನು ಇದಕ್ಕೆ ಬಹು ಸಂತೋಷದಿಂದ ಒಪ್ಪಿದೇನೆ.

ಈ ಸಂದರ್ಭದಲ್ಲಿ ಮೊದಲು ಹೇಳಬೇಕಾದ ಮಾತು, ಬೇಂದ್ರೆಯವರು ನಿಜವಾಗಿ ಕವಿ ಎನ್ನುವುದು. ಎಂದರೆ ಒಬ್ಬನ ಕೃತಿಯನ್ನು ಕಾವ್ಯವೆಂದು ಮಾಡುವ ಗುಣಗಳಲ್ಲಿ ಮುಖ್ಯಗುಣ ಅಥವಾ ಜೀವಗುಣ ಯಾವುದೋ ಅದು ಇವರ ಕೃತಿಯಲ್ಲಿದೆ ಎನ್ನುವುದು. ಒಂದು ಕೃತಿಯನ್ನು ಕಾವ್ಯವೆನಿಸುವ ಲಕ್ಷಣಗಳು ಹಲವು. ಕೆಲವು ವೇಳೆ ಅವು ಭಾವದ ಸೊಗಸೆಂದು, ಕೆಲವು ವೇಳೆ ಮಾತಿನ ಸೊಗಸೆಂದು, ಕೆಲವು ವೇಳೆ ರೀತಿಯ ಸೊಗಸೆಂದು ಕಾಣುತ್ತದೆ. ಕಾವ್ಯಲಕ್ಷಣಗಳೆಲ್ಲ ಈ ಮೂರು ಬಗೆಯಲ್ಲಿ ಅಡಕವಾಗುತ್ತವೆ. ಆದರೆ ಈ ಮೂರು ಬಗೆಯ ಸೊಗಸೂ ಒಂದುಗೂಡಿ ಮೊತ್ತವಾಗಿ ಕಾಣುವುದು ಕಾವ್ಯದ ಜೀವಗುಣ ಇರುವಲ್ಲಿ ಮಾತ್ರ. ಕವಿಯ ಮನೋಧರ್ಮ ಎಷ್ಟು ತೀವ್ರವಾಗಿ ಕಾವ್ಯಜಾತಿಯದಾದರೆ ಕಾವ್ಯ ಅಷ್ಟು ಸ್ಪಷ್ಟವಾಗಿ ಈ ಲಕ್ಷಣಗಳನ್ನು ತೋರಿಸುತ್ತದೆ. ಆಡುವ ಮಾತನ್ನೆಲ್ಲ ಕಾವ್ಯ ಮಾಡುವ ಮನೋಧರ್ಮ ಶ್ರೀ ಬೇಂದ್ರೆಯವರಲ್ಲಿದೆ. ಅದು ಸಹಜವೂ ತೀವ್ರವೂ ಬಹು-ಮುಖವೂ ಆಗಿದೆ.

ನಾನು ಬೇಂದ್ರೆಯವರ ಕೃತಿ ಒಂದಕ್ಕೆ ಮನಸೋತದ್ದು ಈಗ್ಗೆ ಬಹು ವರ್ಷದ ಹಿಂದಿನ ಮಾತು. ಆಗ್ಗೆ ನಾನು ಇವರನ್ನು ನೋಡಿರಲಿಲ್ಲ. ಧಾರವಾಡದ "ಸ್ವಧರ್ಮ" ಪತ್ರಿಕೆಯಲ್ಲಿ ಪ್ರಕಟವಾದ ಆ ಪದ್ಯ 'ಮೂಡಲ ಮನೆಯಾ

ಮುತ್ತಿನ ನೀರಿನ ಎರಕ್ಕವ ಹೊಯ್ದಾ' ಎಂದು ಆರಂಭವಾಗಿ ಒಂದು ಉದಯವನ್ನು ವರ್ಣಿಸಿತ್ತು. ಅದರಲ್ಲಿ ಕಂಡ ಊಹೆ ವಿಲಕ್ಷಣವಾಗಿತ್ತು. ಎಷ್ಟೋ ಕವಿಗಳು ಈ ಮೊದಲೇ ಮಾಡಿರುವ ವರ್ಣನೆಯಲ್ಲಿ ಈ ಕವಿ ಒಂದು ಹೊಸ ಚೆಲುವನ್ನು ತಂದಿದ್ದರು. ಕೊನೆಗೆ ಇದ್ದ ಮುದ್ರಿಕೆಯಿಂದ ಕವಿಯ ಪರಿಚಯ ವ್ಯಕ್ತವಾಗಿರಲಿಲ್ಲ. ಆದರೆ ಈ ಕವಿಯ ದೃಷ್ಟಿಯೇ ಬೇರೆಯೆನ್ನುವದು ಆ ಪದ್ಯದಲ್ಲಿ ಕಾಣುತ್ತಿತ್ತು. ಉದಯದಲ್ಲಿ ಹಕ್ಕಿಗಳು ಹಾಡುವುದನ್ನು 'ಗಿಡಗಂಟಿಯ ಕೊರಳಿನಿಂದ ಸ್ವರ ಹೊರಟಿದೆ' ಎಂದು ಇವರು ವರ್ಣಿಸಿದ್ದರು. ಹಾಡುವ ಹಕ್ಕಿ ಗಿಡಗಂಟಿಯ ಕೊರಳು. ಉದಯದಲ್ಲಿ ಗಿಡ ಪಡುವ ಆನಂದವನ್ನು ಹಕ್ಕಿಯ ಹಾಡು ಹೊರಸೂಸುತ್ತದೆ. ಇಂಥ ಮಾತಿನಲ್ಲಿ ಮಿಗಿಲಾದ ಚಾತುರ್ಯ ಮಾತ್ರ ಇಲ್ಲ. ಪ್ರಕೃತಿಯನ್ನು ಕುರಿತ ವಿಲಕ್ಷಣ ಭಾವನೆಯಿದೆ. ವರ್ಣನೆಯ ಚಾತುರ್ಯವೆಂದು ಕಾಣುವ ಈ ಉಕ್ತಿಭಂಗಿ ಭಾವನೆಯ ಫಲ. ಈ ಭಾವನೆಯೇ ಬೇಂದ್ರೆಯವರ ಎಲ್ಲ ಕವಿತೆಯ ಬಲದ ಬೇರು. ಇದಾದ ಕೆಲವು ವರ್ಷದ ಮೇಲೆ ಆ ಮುದ್ರಿಕೆಯ ಕವಿ ಶ್ರೀ ಬೇಂದ್ರೆಯವರು ಎಂದು ನನಗೆ ತಿಳಿಯಿತು. ಆ ತರುಣದಲ್ಲಿ ಅವರನ್ನು ಕಂಡಾಗ ನಾನು ಆ ಪದ್ಯವನ್ನು ಹೊಗಳಿ ಅವರಿಗೆ ನನ್ನ ಸಂತೋಷವನ್ನು ಸೂಚಿಸಿದೆನು. ಆ-ಮೇಲೆ ಒಂದೆರಡು ವರ್ಷದಲ್ಲಿ ಇವರನ್ನು ಬೆಳಗಾಂವಿಯ ಸಾಹಿತ್ಯಸಮ್ಮೇಲನದಲ್ಲಿ ಮತ್ತೆ ಕಂಡೆನು. ಆ ಸಮ್ಮೇಲನದಲ್ಲಿ ಬೇಂದ್ರೆಯವರು 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ತಮ್ಮ ಕವನವನ್ನು ಓದಿದರು ಅದನ್ನು ಕೇಳಿದ ಜನ ಎಂಥ ಆನಂದವನ್ನು ಅನುಭವಿಸಿದರೆಂದು ಈಗ ಹೇಳುವುದು ಸಾಧ್ಯವಲ್ಲ. ಆ ಕವಿತೆಯ ಎಲ್ಲ ಅರ್ಥವನ್ನೂ ಅರಿಯುವುದಕ್ಕೆ ಆ ಒಂದು ಓದು ಸಾಕಲ್ಲವೇ ಅಲ್ಲ; ಆದರೆ ಆ ಒಂದು ಓದಿನಿಂದ ಕಂಡಷ್ಟು ಕಾವ್ಯಗುಣದಿಂದಲೇ ಸಾವಿರ ಜನರ ಸಭೆ ಚಕಿತವಾಯಿತು. ಕಾವ್ಯ ಪ್ರಪಂಚದಲ್ಲಿ ಬಳಕೆಯುಳ್ಳವರು ಈ ಕವಿಯ ಶಕ್ತಿ ಇವನದೇ ಆದ ಒಂದು ಹೊಸ ಶಕ್ತಿ ಎಂದು ಮನಗಂಡರು. ಮಾರನೆಯ ವರ್ಷ ಮೈಸೂರಿನಲ್ಲಿ ನಡೆದ ಸಮ್ಮೇಲನಕ್ಕೆ ಬಂದ ಸಂದರ್ಭದಲ್ಲಿ ಬೇಂದ್ರೆಯವರು ಮೈಸೂರು, ಬೆಂಗ-ಳೂರು ಮತ್ತು ಮೈಸೂರಿನ ಬೇರೆ ಬೇರೆ ದೊಡ್ಡ ಊರುಗಳಲ್ಲಿ ತಮ್ಮ ಕೃತಿಗಳಿಂದ ಜನರನ್ನು ಮುಗ್ಧರನ್ನಾಗಿ ಮಾಡಿದರು. ಈಚೆಗೆ ಇವರ ಕೀರ್ತಿ ಹೇಗೆ ಬೆಳೆದಿದೆಯೆಂದು ನಾಡೆಲ್ಲ ಬಲ್ಲುದು. ಇವರ ಕೃತಿಗಳಲ್ಲಿ ಅನೇಕ, ನಮ್ಮ ಜನರಿಗೆ ನಿತ್ಯದ ಬಳಕೆಯ ಕವಿತೆಗಳಾಗಿವೆ. ಈ ಕಾವ್ಯಲತೆ ಇನ್ನೂ ಬೆಳೆಯುತ್ತಿದೆ. ಇದರಿಂದ ಇನ್ನೆಷ್ಟೆಷ್ಟು ಕವಿತೆ ಬರಲೆಂದು ಆದರ ದೇವರು ಕರುಣಿಸಿರುವನೋ ಅದು ನಮಗೆ ತಿಳಿಯದು. ಆದರೆ ಈಗ ಆಗಿರುವಷ್ಟು ಕಾರ್ಯದಿಂದಲೇ ಶ್ರೀ ಬೇಂದ್ರೆಯವರು ಕನ್ನಡದ ಕಾವ್ಯಸಮುದಾಯಕ್ಕೆ ಅನೇಕ ಅತ್ಯುತ್ತಮ ಕವಿತೆಗಳನ್ನು ಸೇರಿಸಿದ್ದಾರೆ. ಹೀಗೆ ಮಾಡುವುದರಲ್ಲಿ ಇವರು ಪ್ರಪಂಚದ ಕಾವ್ಯಸಂಪತ್ತನ್ನೇ ಬೆಳೆಸಿದಾರೆ.

ಈ ಕೃತಿಗಳ ವಿಷಯವು ಬಹುವಿಧವಾದುದು. ‘ಮೂಡಲ ಮನೆಯಾ ಮುತ್ತಿನ ನೀರಿನ ಎರಕ್ಕವ ಹೊಯ್ದಾ’ ಎಂಬ ರೀತಿಯ ಪ್ರಕೃತಿಯ ವರ್ಣನೆಯ ಕವಿತೆ; ‘ಮುಗಿಲ ಮೋರೆಗೆ ರಾಗರತಿಯ ರಂಗು ಮೂಡಿತ್ತು’ ಎಂಬ. ರೀತಿಯ ಹೆಣ್ಣು-ಗಂಡಿನ ಒಲವನ್ನು ಕುರಿತವು; ‘ಮೂವತ್ತುಮೂರು ಕೋಟಿ’ ಮುಂತಾದ ದೇಶಪ್ರೇಮದ ಗೀತಗಳು; ‘ಚೀಂತೆ,’ ‘ಹೂ,’ ‘ಚಳಿಯಾಕೆ’ ಈ ರೀತಿಯ ಊಹೆಯ ವಿಲಾಸದಿಂದ ಉದ್ಭವಿಸಿರುವ ಪದ್ಯಗಳು; ‘ನರಬಲಿ,’ ‘ಹೆಣದ ಹಿಂದೆ’ ಮುಂತಾಗಿ ಸಮಾಜದ ಸ್ಥಿತಿಗತಿಯನ್ನು ನೋಡಿ ಕವಿಗೆ ತೋರುವ ಭಾವನೆಯನ್ನು ಕುರಿತವು, ‘ಮಲ್ಲಾಡದ ಗಿಣಿ’ ಮುಂತಾಗಿ ಕವಿ ತನ್ನ ಬಾಳುವೆ ಯನ್ನು ಕುರಿತು ಮಾಡುವ ಯೋಚನೆಗೆ ಅನ್ಯಾಪದೇಶದ ಆಕಾರವನ್ನು ಕೊಡುವ ಸಾಮತಿಗಳು; ‘ಮನದನ್ನೆ’ ಮುಂತಾಗಿ ಸಂಸಾರದ ಸರ್ವಸಾಮಾನ್ಯವಾದ ಅನುಭವಗಳಿಗೆ ಆಕಾರವನ್ನು ಕೊಡುವ ಗೀತಗಳು; ಒಂದು ಭಾವನೆಯನ್ನು ಹಿಡಿದು ಬಗೆ ಬಗೆಯಾಗಿ ಎಳೆ ಎಳೆಯುವ ‘ಕುಣಿಯೋಣು ಬಾರ’ ಎಂಬಂಥ ಗೀತಗಳು; ‘ಹಕ್ಕಿ ಹಾರುತಿದೆ,’ ‘ಭೃಂಗದ ಜೆನ್ನೇರಿ ಬಂತು,’ ‘ಸಚ್ಚಿದಾನಂದ’ ಮುಂತಾಗಿ ಬುದ್ಧಿಯ ಅಥವಾ ಆತ್ಮದ ಅರಿವಿಗೆ ಮಾತನ್ನು ಕೊಡುವ ಗೀತ; ‘ಅವರ್ಣನೀಯ ಅರ್ವಾಚೀನ ಸೌಂದರ್ಯ,’ ‘ಕರಿಮರಿ ನಾಯಿ’ ಎಂಬಂಥ ವಿಕಲ್ಪ ವಾಗಿ ಬರುವ ವಿಡಂಬನ ಕಾವ್ಯಗಳು; ಹೀಗೆ ಬಹು ವಿಧವಾದ ಕೃತಿ ಇವರಲ್ಲಿ ಇವೆ. ಈ ಬಗೆಯ ಕೃತಿಯಲ್ಲಿ ಕವಿ ಅನುಸರಿಸಿರುವ ಪದ್ಧತಿ ಅನನ್ಯಸಾಧಾರಣವಾದದ್ದು. ಉದಯದ ವರ್ಣನೆಯ ‘ಗಿಡಗಂಟೆಯ ಕೊರಳು’ ಎಂಬ ಮಾತಿನಿಂದಲೇ ಇದನ್ನು ಉದಾಹರಿಸಬಹುದು. ಗಿಡದ ಆನಂದ, ತನ್ನ ಆನಂದ, ಗಿಡದಲ್ಲಿ ಕುಳಿತ ಹಕ್ಕಿಯ ಆನಂದ, ಬೀಸುವ ಗಾಳಿಯ ಆನಂದ ಇವು ಬೇರೆ ಬೇರೆ ಎಂದು ತಿಳಿದವನು ಅದನ್ನು ಬಿಡಿಸಿ ಬಿಡಿಸಿ ಹೇಳುತ್ತಾನೆ. ಇವುಗಳೆಲ್ಲ ಒಂದು ಆನಂದ, ನಾಲ್ಕು ಕಡೆ ಕಂಡಿರತಕ್ಕದ್ದು ಎಂದು ಬುದ್ಧಿಯಿಂದ ತಿಳಿಯುವವನು ಇದೊಂದು ವಿಚಾರ ಎಂಬಂತೆ ಹೇಳುತ್ತಾನೆ. ಇದಕ್ಕೂ ಮುಂದಿನ ಒಮ್ಮೆಯನ್ನು ಅರಿತವನು ಬೇಂದ್ರೆ ಯವರು ಹೇಳಿರುವಂತೆ ‘ಗಿಡಗಂಟೆಯ ಕೊರಳು’ ಆನಂದದಿಂದ ಹಾಡಿತು ಎನ್ನು ತ್ತಾನೆ. ಬಾಳೆಲ್ಲ ಒಂದು ಎನ್ನುವುದು ತಿಳಿವಿಗೆ ಮಾತ್ರ ಕಂಡಾಗ ಅಲ್ಲ. ಅನುಭವ ದಿಂದ ಕಂಡಾಗ ಮಾತ್ರ ಈ ಮಾತು ಪ್ರಯತ್ನವಿಲ್ಲದೆ ಬರುತ್ತದೆ. ಇದು ಬರುವ ರೀತಿಯಲ್ಲಿ ಕವಿಗೆ ತನ್ನ ಮಾತು ಎಂಥ ಸಿದ್ಧಿಯ ಮಾತು ಎಂದು ತಿಳಿದಿದೆಯೋ ಇಲ್ಲವೋ ಎನ್ನುವಂಥ ಸಹಜತೆ ಇರುತ್ತದೆ. ಒಲುಮೆಯನ್ನು ಕುರಿತ ಗೀತಗಳಲ್ಲಿ ಬೇಂದ್ರೆಯವರು ತರುವ ರಸ ಹೀಗೆಯೇ ವಿಲಕ್ಷಣವಾದುದು ಉದಯದ ವ್ಯಾಪಾರ ಗಳನ್ನು ಕಣ್ಣು ತೆರೆದು, ಮನಸ್ಸು ತೆರೆದು ನೋಡಿರುವಂತೆ ಇವರು ಜನದ ಬಾಳುವೆ ಯಲ್ಲಿ ಪ್ರೇಮ ಹರಿಯುವ ರೀತಿಯನ್ನು ಕಣ್ಣು ತೆರೆದು, ಮನಸ್ಸು ತೆರೆದು ನೋಡಿ ದ್ದಾರೆ. ಆದರಿಂದ ಇವರ ವಿವರಣದಲ್ಲಿ ಮಾತು ಮಾತು ನಿಜವನ್ನು ಹೇಳುತ್ತದೆ,

ಮನಸ್ಸನ್ನು ಮುಟ್ಟುತ್ತದೆ, ಹೃದಯದಲ್ಲಿ ರಸದ ಊಟೆಯನ್ನು ಉಕ್ಕಿಸುತ್ತದೆ. ದೇಶಪ್ರೇಮದ ಗೀತೆಗಳಾದರೂ ಇಂಥವೇ ಒಂದು ತೀವ್ರವಾದ ಅನುಭವದಿಂದ ಬಂದಿರತಕ್ಕವು. ಹೀಗೆಯೇ ಸಮಾಜದ ಸ್ಥಿತಿಗತಿಗಳನ್ನು ಕುರಿತ ಗೀತೆಗಳು. ಇಲ್ಲಿಯ ತೀವ್ರ ಅನುಭವ ವಿಪುಲಭಾವ, ಕವಿತೆಯಲ್ಲಿ ಸಾಗರದ ಅಲೆಯ ಮಾಲೆ ಯಂತೆ ಮೇಲೆ ಮೇಲೆ ಉರುಬಿ ಬರುತ್ತದೆ. ಇದೇ ಕ್ರಮವೇ ಸಂಸಾರದ ಅನುಭವದ ಗೀತಗಳಲ್ಲಿ ಬರುತ್ತದೆ. ಇಲ್ಲಿ ಕಾಣುವುದು ದೊಡ್ಡ ಕಲ್ಲುಗಳನ್ನು ಮೇಲೆ ಮೇಲೆ ಹೇರಿ ಕಟ್ಟಿದ ಒಂದು ಹರ್ಮ್ಯ ಪ್ರಾಕಾರದ ಕಟ್ಟಡದ ರೀತಿ• 'ಚಿಂತೆ,' ಅಥವಾ 'ಹೂ' ಗೀತೆಗಳಲ್ಲಿ ಇದರಿಂದ ಸ್ವಲ್ಪ ಬೇರೆಯಾದ ಕ್ರಮ ವೊಂದು ಕಾಣುತ್ತದೆ. ಭಾವ ಸೂಚಿಸುವ ಒಂದು ಸಾಮ್ಯ ಅಥವಾ ರೂಪಕವನ್ನು ಊಹೆ ತೆಗೆದುಕೊಂಡು ಬಳ್ಳಿಬಳ್ಳಿಯಾಗಿ ಬೆಳೆಸಿ, ರಂಗವಲ್ಲಿಯ ಒಂದು ಚಿತ್ರ ದಂತೆ ಹರಹುತ್ತದೆ. ಇದೇ ಕ್ರಮವೇ ಪ್ರತಿಭೆಯ ಮಟ್ಟವನ್ನು ಮುಟ್ಟಿ ಬರುವ ಪದ್ಯಗಳಲ್ಲಿ ಅಂತರಾತ್ಮದ ಅತಿ ನಿಕಟ ಅನುಭವವು ಹೆಪ್ಪುಗಟ್ಟಿ ಕಣ್ಣಿಗೆ ಕಾಣುತ್ತದೆ. ಉಳಿದಲ್ಲಿ ಎರಡು ಮಾತನ್ನು ಬಿಟ್ಟರೆ ನಷ್ಟವಿಲ್ಲ, ಚಿತ್ರ ಹೇಗೂ ಚೆನ್ನಾಗಿಯೇ ಇರುತ್ತದೆ. ಇಲ್ಲಿ ಯಾವ ಮಾತನ್ನು ಬಿಟ್ಟರೆ ಭಾವವು ಮುಕ್ಕಾ ದೀತೋ ಎಂಬ ಭಯ ಹುಟ್ಟುತ್ತದೆ. ಈ ಕೃತಿಗಳಲ್ಲಿ ಯಾವುದರಲ್ಲಿಯಾದರೂ ವಿಷಯ ಬಹು ಜನರು ಕಂಡದ್ದು; ವಿವರ ಕವಿಯ ಮನಸ್ಸಿಗೆ ಮಾತ್ರ ಕಂಡದ್ದು. ಅದನ್ನು ಹೇಳುವ ರೀತಿ ಇದರಲ್ಲಲ್ಲದೆ ಇನ್ನೆಲ್ಲಿಯೂ ಇರಲಾರದೆಂಬಷ್ಟು ವೈಯಕ್ತಿಕ ವಾಗಿದೆ. ಕವಿತೆ ಉತ್ತಮವಾಗಬೇಕಾದರೆ ಅದು ಬಾಳ ಆಳದಿಂದ ಬರಬೇಕು. ಹಾಗೆ ಬಂದ ಕವಿತೆ ಈ ರೀತಿಯಲ್ಲಿ ಕವಿಯ ಟಂಕೆಯಿಂದ ತಾನೇ ಒಂದು ಜಾತಿಯ ದಾಗಿ ಕಾಣುತ್ತದೆ. ಬೇಂದ್ರೆಯವರ ಕೃತಿಯಲ್ಲಿ ಅವರ ಟಂಕೆ ಸ್ಪಷ್ಟವಾಗಿ ಬಿದ್ದಿರುತ್ತದೆ.

ಇಷ್ಟು ತೀವ್ರವಾದ ರಸಾನುಭವವುಳ್ಳ ಕವಿಗೆ ವಿಚಾರಶಕ್ತಿ ಇಲ್ಲದೆ ಹೋಗ ಬಹುದು. ಆದರೆ ಬೇಂದ್ರೆಯವರಿಗೆ ಅನುಭವದ ತೀವ್ರತೆಗೆ ಸಮನಾಗಿ ನಿಶಿತವಾದ ವಿಚಾರಶಕ್ತಿಯಿದೆ. ಇವರು ತಮ್ಮ ಅನುಭವವನ್ನೂ ಇತರರ ಅನುಭವವನ್ನೂ ಎಳೆಎಳೆಯಾಗಿ ಬಿಡಿಸಬಲ್ಲರು, ತೋರಿಸಬಲ್ಲರು. ನಿಶಿತವಾಗಿರುವ ಈ ವಿಚಾರದ ಕ್ಷೇತ್ರವೂ ವಿಸ್ತಾರವಾಗಿದೆ. ಎಷ್ಟು ಅನುಭವಿಗಳೋ ಅಷ್ಟು ವಿಚಾರಿಗಳೂ ಆಗಿರು ವುದರಿಂದ ಇವರ ಕೃತಿಗಳಲ್ಲಿ ರಾಗದ ಭಾಗದ ಬದಿಗೆ ಬುದ್ಧಿಯ ಭಾಗ ಸಮ ಸಮನಾಗಿ ನಡೆಯುತ್ತದೆ. ಎಲ್ಲಿಯೇ ಆಗಲಿ ಕವಿ ತತ್ತ್ವವನ್ನು ಬಿಟ್ಟು ಮಾತ ನಾಡಿದನೋ ಎಂದು ಶಂಕೆ ಬರುವುದಿಲ್ಲ.

ತಮ್ಮ ಕಾವ್ಯದ ಈ ಸಂಪತ್ತಿನಿಂದ ಕವಿ ನಮ್ಮ ಜನದ ಮನಸ್ಸನ್ನು ಸೂರೆ ಮಾಡಿದ್ದಾರೆ. ಇವರು ಪದ್ಯಗಳನ್ನೋದುವಾಗ ಕೇಳುತ್ತ ನಾನು ಅವುಗಳ ಸೊಗ-

ಸಿಗೆ ಮರುಳಾಗಿದ್ದೇನೆ. ಮರುಳು ಎಂದರೆ ಜನರು ಸರಿಯಾಗಿ ಅರ್ಥಮಾಡಿಕೊಳ್ಳುವರೋ ಇಲ್ಲವೋ ನನಗೆ ಸಂದೇಹ. ಆದರೆ ಆ ಸಂದರ್ಭದಲ್ಲಿ ನನ್ನಂತೆ ಅನೇಕರಿಗೆ ಒದಗುವ ಸ್ಥಿತಿ ಆನಂದದಿಂದ ಉಂಟಾಗುವ ಮರುಳು ಎಂದೇ ಹೇಳಬೇಕು. ಬೇಂದ್ರೆಯವರು ಬೆಳಗಾಂವಿಯಲ್ಲಿ 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ಪದ್ಯವನ್ನು ಓದುವಾಗ ತಲೆಗೆ ಹಿಂದುಸ್ತಾನದ ಪಗಡಿಯೊಂದನ್ನು ಸುತ್ತಿ ನಿಂತಿದ್ದರು. ಇವರ ಆಗಿನ ನಿಲುವು ನನ್ನ ಕಣ್ಣಿಗೆ ಗಾರುಡಿಗನೊಬ್ಬನ ನಿಲುವಂತೆ ಕಂಡಿತು. ಈಗಲೂ ನನಗೆ ಬೇಂದ್ರೆಯವರ ಸಹಜವಾದ ನಿಲುವು ಆ ಗಾರುಡಿಗನ ನಿಲುವೆಂದು ಕಾಣುತ್ತದೆ. ಅವರನ್ನು ಕುರಿತು ನಾನು ಬರೆದ ಒಂದು ಅಷ್ಟಷಟ್ಪದಿಯಲ್ಲಿ ಈ ಅಭಿಪ್ರಾಯಕ್ಕೆ ರೂಪು ಕೊಟ್ಟೆನು. ಮರುಳುಮಾಡು, ಗಾರುಡಿಗ ಎಂಬ ಮಾತುಗಳಲ್ಲಿ ಈಗ ನಮಗೆ ಅಲ್ಪ ಕಲ್ಪನೆಗಳು ಕಾಣುತ್ತವೆ. ಅವುಗಳ ಮೂಲಅರ್ಥದಲ್ಲಿ ಶಕ್ತಿ, ಕಾಂತಿ, ಓಜಸ್ಸು ಮಾತ್ರ ಸೂಚಿತವಾಗುತ್ತದೆ. ಅಷ್ಟನ್ನು ಮಾತ್ರ ನಾನು ಇಲ್ಲಿ ಉದ್ದೇಶಿಸಿದೇನೆ. ಬೇಂದ್ರೆಯವರ ಕವಿತೆಯ ವಿಶೇಷಲಕ್ಷಣ ಈ ಶಕ್ತಿ, ಈ ಕಾಂತಿ, ಈ ಓಜಸ್ಸು. ಇವರ ಕವಿತೆಯನ್ನು ಅರಿಯುವ ಜನರಿಗೆ ಇವಕ್ಕೆ ಮನ ತಗ್ಗಿಸದೆ ನಿಲುಗಡೆ ಇಲ್ಲ.

ಬೇಂದ್ರೆಯವರ ಕೃತಿ ಈ ಗುಣಗಳನ್ನು ಪಡೆಯುವದಕ್ಕೆ ಒಂದು ಹಿರಿಯ ಕಾರಣ ಅವರು ಜನದ ಬಾಳುವೆಯಲ್ಲಿ ಸೇರಿ ಬೆಳೆದಿರುವುದು. ಇವರು ಜನದ ಬಾಳನ್ನು ಚೆನ್ನಾಗಿ ನೋಡಿದ್ದಾರೆ; ಜನಪದ ಸಾಹಿತ್ಯಕ್ಕೆ ಮನಸ್ಸನ್ನು ತೆತ್ತಿದ್ದಾರೆ. ಹಲವು ಓದನ್ನು ಓದಿ, ಹಲವು ಕವಿಗಳ ಕೃತಿಗಳನ್ನು ನೋಡಿ ಪ್ರಚೋದಿತವಾಗಿರುವ ಪಾಂಡಿತ್ಯದ ಕಾವ್ಯ ಒಂದು ರೀತಿ. ಇದು ಬಹು ಚೆನ್ನಾಗಿರಬಹುದು. ಆದರೆ ಜನರ ಬಾಳಿನಿಂದ, ಜನದ ನಡೆಯಿಂದ, ಜನದ ನುಡಿಯಿಂದ ಪ್ರಚೋದಿತವಾಗುವ ಕಾವ್ಯ ಅದರಿಂದ ನೂರುಮಡಿ ಹೆಚ್ಚು ಜೀವಂತವಾಗುತ್ತದೆ. ಕನ್ನಡದ ಜನತೆಯ ಕಾವ್ಯ ಎಷ್ಟು ಉತ್ತಮವಾದುದೆಂದು ಹೇಳುವುದಕ್ಕೆ ಈಗ ಹತ್ತು ವರ್ಷದಿಂದ ನಮಗೆ ತುಂಬ ಸಾಮುಗ್ರಿ ದೊರೆತಿದೆ. ಈ ಸಾಹಿತ್ಯದಲ್ಲಿ ಕಾಣುವ ಭಾವದ ಊಟೆ, ಮಾತಿನ ಔಚಿತ್ಯ, ಚಿತ್ರಕರ್ಮದ ಕಲೆ ಪ್ರಪಂಚದ ಅತ್ಯುತ್ತಮ ಸಾಹಿತ್ಯದ ಮಟ್ಟವನ್ನು ಮುಟ್ಟುತ್ತದೆ. ಬೇಂದ್ರೆಯವರು ಇಷ್ಟು ಉತ್ತಮವಾದ ರೀತಿಯ ಜನಪದ ಸಾಹಿತ್ಯವನ್ನು ಪ್ರೇಮದಿಂದ ಉಪಾಸಿಸಿದಾರೆ. ಆ ಉಪಾಸನೆಯ ಕಾರಣವೂ ಜನತೆಯ ಪ್ರೇಮ; ಅದರಿಂದ ಬರುವ ಫಲವೂ ಜನತೆಯ ಪ್ರೇಮ. ಸಹಜವಾದ ಜನತೆಯ ಪ್ರೇಮ ಸಾಹಿತ್ಯದ ಪರಿಚಯದಿಂದ ಬೆಳೆದು ಸಹಜವಾದ ಕವನಶಕ್ತಿ ಇದೇ ಪರಿಚಯದಿಂದ ಮಸೆದು ಹಸನಾಗಿ, ಇವರ ಕವಿತೆಯಲ್ಲಿ ಭಾವಕ್ಕೆ ಮಾತಿನ ಅರ್ಥವನ್ನೂ, ಸಿದ್ಧಿಯನ್ನೂ ತಂದಿವೆ. ಇವರ ಒಲುಮೆಯ ಗೀತೆಗಳಲ್ಲಿ ಕಾಣುವ ನಿಲುವು ಜನದ ಬಾಳುವೆಯ, ಜನದ ಸಾಹಿತ್ಯದ ಒಲುಮೆಯ ನಿಲುವು. ಇವರ ಅನೇಕ ಪದ್ಯಗಳಲ್ಲಿ ಕಾಣುವ ಮಾತುಗಳ ಸರಳತೆ ಜನದ ನಾಲಗೆಯ, ಜನದ

ಕವಿತೆಯ ಮಾತಿನಲ್ಲಿ ದೊರೆಯುವ ಸರಳತೆ. ‘ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸ’ ಎಂಬ ಕಡೆ ಮೂರ್ತಿಯನ್ನು ಬಿಟ್ಟು ಮುಖ್ಯವಾದ ಒಂದು ಅಂಶವನ್ನು ತೆಗೆದುಕೊಳ್ಳುವ ಕ್ರಮ, ‘ಮೂಗಿನ ಮೂಗುತಿ ನಕ್ಕರೆ ಕರಿಹಲ್ಲು’ ಎಂದು ಹಲಸಂಗಿ ಜಕ್ಕವ್ವನನ್ನು ಹೊಗಳುವ ಪದದ ಚಾತುರ್ಯ. ಸುರುಳಿ-ಸುರುಳಿಯಾಗಿ ಸುತ್ತುತ್ತ ಹೃದಯವನ್ನು ರೇಶಿಮೆಯ ದಾರದಿಂದೆಂಬಂತೆ ಕಟ್ಟುವ ಮರಮರಳಿ ಬರುವ ಪ್ರಾಸಪಂಙ್ತಿಗಳ ‘ಸಚ್ಚಿದಾನಂದ’ ಕವಿತೆಯ ಮಾಯೆ, ಕಿನ್ನರಿ ಹಿಡಿದು ಭಾವದ ಗೀತಗಳನ್ನು ಹಾಡುವ ಜಂಗಮನ ಅಥವಾ ಹರಿದಾಸನ ಹಾಡಿನ ಒಂದು ಮಾಯೆ. ತಾನು ಪಂಡಿತನು ಎಂಬ ಕವಿ ಈ ಚಾತುರ್ಯ ಈ ಮಾಯೆಯನ್ನು ಲಕ್ಷಣಶಾಸ್ತ್ರವನ್ನನುಸರಿಸಿ ಬರೆದ ಕವಿತೆಯಲ್ಲಿ ಕಾಣುವುದಿಲ್ಲ; ಕಂಡರೂ ಅದು ಒಂದು ಮಾಯೆ, ಒಂದು ಚಾತುರ್ಯ ಎಂದು ಗುರುತಿಸುವದಿಲ್ಲ; ಹಾಗೆ ಅದನ್ನು ಗುರುತಿಸಿದರೂ ಅದನ್ನು ತನ್ನ ಕವಿತೆಯಲ್ಲಿ ತರುವದು ತನ್ನ ಮರ್ಯಾದೆಗೆ ಕಡಿಮೆ ಎಂದು ತಿಳಿಯುವನು. ಜನ್ಮತಃ ಕವಿಯಾದವನಿಗೆ, ಈ ಚಾತುರ್ಯ ಈ ಮಾಯೆಯೇ ಕಾವ್ಯದ ಜೀವಾಳ, ಇದು ಎಲ್ಲಿ ಕಂಡರೂ ಒಂದೇ ಎಂದು ತೋರುತ್ತದೆ. ಆದರ ಮೂಲ ಕಾವ್ಯದೇವತೆಯ ಚಳಕಹಾಸ ಎಂದು ಅವನ ಮನಸ್ಸಿಗೆ ದೃಥವಾಗಿರುತ್ತದೆ. ಅದು ತನ್ನನ್ನು ಬಳಸುವದೇ ತನಗೆ ಗೌರವವೆಂದು ಅವನು ತಿಳಿದಿರುತ್ತಾನೆ. ದೇವರನ್ನು ಸಖನೆಂದ ಅರ್ಜುನನಂತೆ ಒಂದೊಂದು ವೇಳೆ ಅದನ್ನು ತಾನು ಬಳಸುತ್ತಾನೆ. ಪಂಡಿತನಾದರೂ ಸಹಜ ಕವಿ ಈ ಗುಣವನ್ನು ತನ್ನ ಕಾವ್ಯದಲ್ಲಿ ತರಬಹುದು. ಇದಕ್ಕೆ ಬೇಂದ್ರೆಯವರೇ ನಿದರ್ಶನ. ಅವರ ಕವಿತೆಯ ಭವ್ಯತೆಗೆ ಅವರು ಜನತೆಯ ಹೃದಯವನ್ನು, ಜನತೆಯ ಕವಿತೆಯನ್ನು ಅರಿತಿರುವುದೇ ಕಾರಣ.

ಈಗ ಎರಡು ವರ್ಷದ ಹಿಂದೆ ನಮ್ಮ ಮಿತ್ರರೊಬ್ಬರು ಮದರಾಸಿನ ಒಂದು ಇಂಗ್ಲೀಷು ಪತ್ರಿಕೆಯಲ್ಲಿ ಬೇಂದ್ರೆಯವರನ್ನು ಕುರಿತು ಪ್ರಕಟಿಸಿದ ಒಂದು ಲೇಖನದಲ್ಲಿ ಬೇಂದ್ರೆಯವರ ಕೃತಿ promising, ಎಂದರೆ ಮುಂದೆ ಫಲಿಸತಕ್ಕದ್ದು, ಎಂದು ಹೇಳಿದರು. promise ಎನ್ನುವದಕ್ಕೆ ಅರ್ಥದಲ್ಲಿ ಪ್ರತಿ fulfilment, ಎಂದರೆ ಫಲಿಸಿರುವುದು ಅಥವಾ ಸಿದ್ಧಿ. ಕವಿಯ ಸಮೀಪ ಮಿತ್ರರಾದುದರಿಂದ ಆ ಲೇಖಕರು ಹೆಚ್ಚಿನ ಪ್ರಶಂಸೆ ಹೇಳುವುದು ಅನುಚಿತವಾಗಬಹುದೆಂದು ಭಯಪಟ್ಟರು. ಮಿತ್ರರಿಗೆ ಸಂಕೋಚ; ಇತರರಿಗೆ ತೋರುವುದಿಲ್ಲ. ಎಲ್ಲಿ ಒಳ್ಳೆಯದಕ್ಕೂ ದಾರಿದ್ರ್ಯ ಅಡಸಿರುವ ನಮ್ಮ ಈಗಿನ ಸ್ಥಿತಿಯಲ್ಲಿ ಹೀಗೆ ಒಳ್ಳೆಯ ಮಾತಿಗೂ ಸ್ವಲ್ಪ ಬರವೇ ಬಂದಿದೆ. ಯಾರಾದರೂ ಅದನ್ನು ಹೆಚ್ಚಾಗಿ ಹೇಳಿದರೆ ಒಡತನದಲ್ಲಿ ದುಂದು ಮಾಡುವವನ ವಿಷಯ ಹೇಗೆ ಬೇಸರ ಹುಟ್ಟಬಹುದೋ ಹಾಗೆ ನಮ್ಮ ಜನಕ್ಕೆ ಬೇಸರವೂ ಹುಟ್ಟುತ್ತದೆ. ಆದರೆ ಒಳ್ಳೆಯ ಮಾತು ಕೊಟ್ಟರೆ ವೆಚ್ಚವಾಗುವ

ಜೋಳವಲ್ಲ ರಾಗಿಯಲ್ಲ. ಅದು ನಿಜವಾದಲ್ಲಿ ಅದನ್ನು ಹೇಳುವುದಕ್ಕೆ ಸಂಕೋಚಪಡ ಬೇಕಾದದ್ದಿಲ್ಲ. ನಾನು ಸಂಕೋಚವಿಲ್ಲದೆ ಬೇಂದ್ರೆಯವರ ವಿಷಯವಾಗಿ ಇದನ್ನು ಹೇಳುತ್ತೇನೆ. ಅವರ ಕಾವ್ಯ promising ಮಾತ್ರವಲ್ಲ; ಅದರಲ್ಲಿ fulfilment ಎನ್ನುವದು ಕಂಡಿದೆ. ಅಥವಾ ಇದನ್ನು ಯಾರಾದರೂ promising ಎಂದೇ ಹೇಳಬೇಕೆಂದು ಅಪೇಕ್ಷಿಸಿದರೆ ಈ ಕವಿತೆ ಹುಟ್ಟಿಸುವ ಆಸೆ ಸರಕಾರದ ನೋಟು ಇಷ್ಟು ರೂಪಾಯಿ ಕೊಡುತ್ತೇನೆ ಎಂದು ಮಾಡುವ promise ನ ರೀತಿಯದು. ಅದು ಆಕಾರದಲ್ಲಿ "ಪ್ರಾಮಿಸ್", ನಿಜವಾಗಿ ಸಿದ್ಧಿ. ಬೇಂದ್ರೆಯವರ ಕವಿತೆ, ಕಾವ್ಯ ಮಾಡಬೇಕಾದ ಕೆಲಸವನ್ನು ಮಾಡಿದೆ ಎಂದ ಮಾತ್ರಕ್ಕೆ ಇದು ಮತ್ತೇನೂ ಮಾಡಬೇಕಾದದ್ದಿಲ್ಲ ಎಂದು ಅರ್ಥವಲ್ಲ. ಕಾವ್ಯ ಭೂಲೋಕದಲ್ಲಿ ನಂದನವನ. ಈ ಕವಿಯ ಬಾಳು ಅಲ್ಲಿ ಹೂ ಬಿಡಲು ತೊಡಗಿರುವ ಒಂದು ಮಂದಾರ. ಈಗಾಗಲೆ ಹೂ ಬಿಟ್ಟಿರುವ ಈ ತರು ಮತ್ತೆ ಮತ್ತೆ ಹೂ ಬಿಡುತ್ತದೆ. ಈಗ ಯಾವ ಸೊಗಸನ್ನು ನಮ್ಮ ಬಾಳಿಗೆ ಒದಗಿಸಿ ತಂದಿದೆಯೋ ಅದನ್ನು ಮತ್ತೆ ಮತ್ತೆ ತರುತ್ತಿರುತ್ತದೆ. ಕನ್ನಡದ ಜನತೆ ತಮ್ಮ ಒಂದು ವೈಶಿಷ್ಟ್ಯವನ್ನು ತೋರುವುದು ಇಂಥ ಕವಿತೆ ಯಿಂದ. ಪ್ರಪಂಚದ ಸಾಹಿತ್ಯದಲ್ಲಿ ಸ್ಥಾನವನ್ನು ಪಡೆಯಬಹುದಾದ ಕೃತಿಗಳು ನಮ್ಮ ಸಾಹಿತ್ಯದಲ್ಲಿ ಒದಗುವದು ಹೀಗೆ. ಇಂಥ ಕಾವ್ಯದ ಪರಿಚಯಕ್ಕಾಗಿಯೇ ಬೇರೆ ದೇಶದ ಜನರು ಆಸೆಪಡುವದು. ಬೇರೆ ನಾಡಿನ ಜನರು ಅರಿತರೆ ಅರಿಯಲಿ, ಅರಿಯದಿದ್ದರೆ ಬಿಡಲಿ. ಅವರು ಅರಿಯಬೇಕಾದ ಮಟ್ಟಕ್ಕೆ ನಮ್ಮ ಕವಿತೆ ಮುಟ್ಟಲಿ ಎನ್ನುವದು ನಮ್ಮೆಲ್ಲರಿಗೂ ಇರುವ ಆಸೆ. ಈ ಮಟ್ಟವನ್ನು ಮುಟ್ಟಿರುವ ಕೆಲವು ಕವಿತೆಗಳ ಹೆಸರನ್ನು ನಾನು ಹಿಂದೆ ಒಂದು ಸಂದರ್ಭದಲ್ಲಿ ಹೇಳಿದೆನು, ಅವುಗಳಲ್ಲಿ ಒಂದು ಬೇಂದ್ರೆಯವರದು. ಆಗಲೇ ಅವರ ಕೃತಿ ಇನ್ನು ಕೆಲವನ್ನು ಆ ಗುಂಪಿ ನಲ್ಲಿ ಸೇರಿಸಬಹುದಾಗಿತ್ತು. ಈಗ ಮತ್ತಷ್ಟು ಕೃತಿಗಳನ್ನು ಆ ಪಂಙ್ತಿಯಲ್ಲಿ ಸೇರಿಸ ಬಹುದು. ಇಂಥ ಕವಿತೆಯಿಂದ ಕನ್ನಡಕ್ಕೆ ಸೇವೆ ಮಾಡುತ್ತಿರುವ ಕವಿ, ತಾನು ಧನ್ಯನು. ನಾಡನ್ನೂ ಅವನು ಧನ್ಯವಾಗಿ ಮಾಡುತ್ತಾನೆ. ಭಾಷೆ ಇದರಿಂದ ಒಂದು ಹಿರಿಮೆಯನ್ನು ಪಡೆಯುತ್ತದೆ. ಈ ಹಿರಿಮೆಯನ್ನು ಇನ್ನೂ ಹೆಚ್ಚಿಸುತ್ತ ತಮ್ಮ ಕೀರ್ತಿಯನ್ನು ಮತ್ತಷ್ಟು ಹರಹುತ್ತ ಜನದ ಆನಂದವನ್ನು ಮರಳಿ ಮರಳಿ ಅರಳಿಸುತ್ತ ಶ್ರೀಮಾನ್ ಬೇಂದ್ರೆಯವರು ತಾಯ್ನುಡಿಯ ಸೇವೆಗೆ ಬಹು ಕಾಲ ನಿಲ್ಲಲಿ ಎಂದು ನಾನು ನಾಡಿನ ಸೌಭಾಗ್ಯದೇವತೆಯ ಸನ್ನಿಧಿಯಲ್ಲಿ ಪ್ರಾರ್ಥನೆ ಮಾಡುತ್ತೇನೆ. *

§ § § §

* 'ನಾದಲೀಲೆ'ಗೆ ಶ್ರೀನಿವಾಸರು ಬರೆದ ಮುನ್ನುಡಿ

೨

# ಬೇಂದ್ರೆಯವರ ಕಾವ್ಯ ಹಾಗೂ ವ್ಯಕ್ತಿತ್ವದ ಕೆಲವು ಮುಖಗಳು

ವಿ. ಕೃ. ಗೋಕಾಕ

ಬೇಂದ್ರೆಯವರಿಗೆ ಕರುಣಿಸಲ್ಪಟ್ಟ ಕೆಲವು ಉಜ್ವಲ ಆಧ್ಯಾತ್ಮಿಕ ಅನುಭವದ ಕ್ಷಣಗಳು, ಹಾಗೂ ಅವರು ಹೊಂದಿದ ಕೆಲವು ಆಯ್ದ ಸ್ನೇಹಿತರ ಸಂಗವಿಲ್ಲ ದಿದ್ದಲ್ಲಿ, ತಾವು ಮಾನವದ್ವೇಷಿಯಾಗುತ್ತಿದ್ದರೇನೋ ಎಂದು ಒಂದು ಬಾರಿ ಅವರು ಹೇಳಿದ್ದಾರೆ. ಅವರ ವಿಡಂಬನಾತ್ಮಕ ಟೀಕೆಗಳು ತೀಕ್ಷ್ಣವಾಗಿಯೂ ಆಘಾತ ವನ್ನುಂಟುಮಾಡುವಂಥವೂ ಆಗಿರಬಲ್ಲವು. ಮಾನವಕುಲ ತನ್ನ ಪಶುತ್ವವನ್ನು ಮೀರಿ, ಉದಾತ್ತ ಜೀವನದ ಕರೆಗೆ ಓಗೊಡಲು ಸಾಮಾನ್ಯವಾಗಿ ಇಷ್ಟಪಡದಿರುವದ ರಿಂದುಂಟಾದ ಜಿಗುಪ್ಸೆಯೇ ಅವರ ವಿಡಂಬನೆಯ ಮೂಲ. ಅವರ ಕೆಲವು ಭಾವ ಗೀತೆಗಳು ದುರಂತದ ತೀವ್ರತೆಯಿಂದ ತುಂಬಿ ತುಳುಕಿ, ಪ್ರಪಾತದ ಅಂಚಿನಲ್ಲಿ ಬಂದು ನಿಲ್ಲುತ್ತವೆ. ದೈವತ್ವದಲ್ಲಿ ಅವರಿಗಿರುವ ಅಳಿಸಲಾಗದ ನಂಬಿಕೆಯೇ ಅವರನ್ನು ಹಿಡಿದು ನಿಲ್ಲಿಸಿ, ಜೀವನದಲ್ಲಿ ಹೊಂದಾಣಿಕೆಯನ್ನು ಕಂಡುಕೊಳ್ಳಲು ಉತ್ತೇಜನ ನೀಡುತ್ತದೆ. ಅವರ "ಹೆಣದ ಹಿಂದೆ" ಕನ್ನಡದಲ್ಲಿರುವ ಅತ್ಯಂತ ಉದಾತ್ತ ಕವಿತೆಗಳಲ್ಲೊಂದು. ಹಳ್ಳಿಯ ಓರ್ವ ಬಡಹೆಣ್ಣುಮಗಳು ತನ್ನ ಗಂಡನನ್ನು ಕಳೆದುಕೊಳ್ಳುತ್ತಾಳೆ. ದುಃಖದಿಂದ ಹುಚ್ಚಳಾಗಿ ಶವವನ್ನು ಹಿಂಬಾಲಿ ಸುತ್ತ ಅವಳು ದೇವರನ್ನೂ ಮಾನವನನ್ನೂ ಶಪಿಸುತ್ತಾಳೆ. ಈ ದೃಶ್ಯವನ್ನು ನೋಡಿದ ಕವಿ ಬಹಳವಾಗಿ ಕಸಿಕರಗೊಳ್ಳುತ್ತಾನೆ. ದೈವೀಶಕ್ತಿ ತನ್ನ ಸಂತೋ-ಷಕ್ಕಾಗಿ ನಿರ್ಮಿಸಿದ ಈ ಪ್ರಪಂಚದಲ್ಲಿ ಮಾನವರು ದಾರುಣದುಃಖಕ್ಕೊಳಗಾಗಿ ಶಪಿಸುವಂತಾಗಬೇಕೇ ? ಆ ಹೆಣ್ಣುಮಗಳು ತನ್ನ ಹಸಿವನ್ನು ತನ್ನ ದುಃಖದಿಂದಲೇ ಹಿಂಗಿಸಿಕೊಳ್ಳುವ ಬಲಾತ್ಕಾರಕ್ಕೊಳಗಾಗಬೇಕೆ ? ಕವಿ ಉದ್ಗರಿಸುತ್ತಾರೆ:

ತನ್ನ ದುಃಖ ನುಂಗಿಕೊಂಡು
ಅವಳು ಹಸಿವ ಕಳೆಯಬೇಕು.
ತಾನೆ ಅತ್ತು ಹಾಡಿಕೊಂಡು
ತನ್ನ ತಾನು ರಮಿಸಬೇಕು.

ಹೆಣಕೆ ಉಂಟು ಮಸಣ ಬಟ್ಟೆ,
ಜನಕೆ ತಮ್ಮ ಮನೆಯ ಹಾದಿ,
ಅವಳಿಗಾವ ಕೆರೆಯ ದಾರಿ ?
ಹೆಣ್ಣ ಪಾಡು ನಾಯಿ ಪಾಡು

ನಂತರ ಕವಿಯ ತ್ವೇಷ (Frenzy) ಕಡಿಮೆಯಾಗುತ್ತದೆ. ಹೆಣ್ಣಿಗೆ, ಭೂಮಿಯ ಹಾಗೆ, ಸಹನೆಯೇ ಜೀವನ. ಹೆಣ್ಣು ಮುಂಬರುವ ಪ್ರವಾದಿಯ ತಾಯಿಯಾಗಿರುತ್ತಾಳೆ (Saviour). ಈ ಸೂಚ್ಯಾರ್ಥದೊಂದಿಗೆ ಕವಿತೆ ಮುಕ್ತಾಯವಾಗುತ್ತದೆ.

ಸಂಘಜೀವನದ ದುರಂತ ಇನ್ನೂ ಹೆಚ್ಚು ಆಘಾತಕರವಾಗಿದೆ. ಕವಿಯು ದೌರ್ಜನ್ಯ (Tyranny) ಮತ್ತು ದಮನಗಳ ವಿರುದ್ಧ ಬಂಡೇಳುತ್ತಾರೆ. ೨೦ನೆಯ ಸಾಲಿನಲ್ಲಿ ಅವರು ಬರೆದ ಒಂದು ಕವನದಲ್ಲಿ, ಸ್ವಾತಂತ್ರ್ಯವು ಮನುಷ್ಯನ ಜನ್ಮಸಿದ್ಧಹಕ್ಕು ಮತ್ತು ಸ್ವಾತಂತ್ರ್ಯಕ್ಕಾಗಿ ಜೇಲು ಅನುಭವಿಸುವದು ಮುಕ್ತಿಯೆಡೆಗೆ ದಾರಿ ಎಂದು ದೃಢವಾಗಿ ಹೇಳಿದರು. ಇದಕ್ಕಾಗಿ ಬ್ರಿಟಿಷ್ ಸರಕಾರ ಅವರನ್ನು ಜೇಲಿಗಟ್ಟಿತು. ಜೇಲಿನ ಗೋಡೆಗಳ ಮಧ್ಯೆಯೂ ತಿಳಿವಳಿಕೆ ಮೂಡುತ್ತದೆ. ಆದರೆ ಕಾಳಿ ಸ್ವಾತಂತ್ರ್ಯವನ್ನು ತುಳಿಯುತ್ತಾಳೆ. ಸ್ವಾತಂತ್ರ್ಯವನ್ನು ಬಿಟ್ಟುಕೊಡುವ ಮುನ್ನ ಅವಳು ಮಾನವ ರಕ್ತದಲ್ಲಿ ಮಿಂದು ರುಂಡಮಾಲೆ ಹಾಕಿಕೊಳ್ಳಲೆಳಸುತ್ತಾಳೆ. ಯುದ್ಧವೇ ಸ್ವಾತಂತ್ರ್ಯಕ್ಕೆ ಕೊಡಬೇಕಾದ ನಿಖರ ಬೆಲೆ ಎಂದು ಸಾರಿ ಹೇಳುತ್ತಾಳೆ. ಅವಳು ಭೂಮಿಯಿಂದ ಆಕಾಶದ ಎತ್ತರಕ್ಕೆ ಪಸರಿಸಿರುವ ಒಂದು ಬರಡು ಕಾಳ್ಗಿಚ್ಚು.

ಪ್ರಪಂಚದಲ್ಲಿ ಎಲ್ಲೆಲ್ಲೂ ತಾಂಡವವಾಡುತ್ತಿರುವ ಈ ಅನಾಗರಿಕತೆ, ಹಾಗೂ ಕ್ರೌರ್ಯ, ಕವಿಯನ್ನು ಬಹಳವಾಗಿ ಜಿಗುಪ್ಸೆಪಡಿಸುತ್ತದೆ. ದುಃಖದಲ್ಲಿ ಮುಳುಗಿದ ತಂದೆ ತಾಯಿಯರು, ಗಂಡನನ್ನು ಕಳೆದುಕೊಂಡು ವಿಧವೆಯಾದ ಹೆಂಡತಿ, ನರಳಾಡುತ್ತಿರುವ ಮಕ್ಕಳು — ಈ ದೃಶ್ಯಗಳು ಕವಿಯನ್ನು ಬಹಳವಾಗಿ ಚುಚ್ಚುತ್ತವೆ. ಅಯ್ಯೋ ! ಸ್ವಾತಂತ್ರ್ಯದ ಫಲ–ಸಾವು, ಸಾಮೂಹಿಕ ಕೊಲೆಯಾಗಬೇಕೆ ? ದೇವರು, ಈ ಆಶೆಬುರುಕ, ಪಾಪ ಅಸೂಯೆಗಳಿಂದ ಕೂಡಿದ ಈ ಮನುಷ್ಯನನ್ನು ನಿರ್ಮಿಸಿದ್ದಕ್ಕೆ ತನ್ನನ್ನು ತಾನೇ ಶಪಿಸಿಕೊಳ್ಳುತ್ತಿರಬೇಕು. ಶಿವನ ಮೂರು ಕಣ್ಣುಗಳು, ವಿಷ್ಣುವಿನ ನಾಲ್ಕು ತೋಳುಗಳು–ತಮ್ಮ ಶಕ್ತಿಯನ್ನೇ ಕಳೆದುಕೊಂಡಿವೆಯೆ ? ಬ್ರಹ್ಮ ಮೂಕನಾಗಿದ್ದಾನೆಯೆ ? ದೇವರುಗಳೆಂದರೆ, ಬರಿಯ ನಾಶವಾಗದ ಹೆಣಗಳೇ ? ಅವರು ಇತ್ತ ಕಡೆಗೆ ಗಮನವೀಯುವದಿಲ್ಲವೆ ? ಶಿವನ ತಾಂಡವನೃತ್ಯ, ಬ್ರಹ್ಮನ ಧ್ಯಾನ, ಕೃಷ್ಣನ ಕ್ಷೀರಸಾಗರದಲ್ಲಿಯ ನಿದ್ರೆ ಯಾರಿಗೆ ಬೇಕು ? ಈ ಮೂವರು ಸಹಚರಿಗಳು ತಾವೇ ನಿರ್ಮಾಣ ಮಾಡಿದ ಗೊಂದಲದೆಡೆಗೆ ದೃಷ್ಟಿಸರಿಸಲಿ !

ದೇವರುಗಳೇ ಈ ಪರಿಸ್ಥಿತಿಯನ್ನು ಸುಧಾರಿಸದಿದ್ದಲ್ಲಿ, ಮನುಷ್ಯನ ಗತಿ ಏನು ? ಮನುಷ್ಯ ತನ್ನ ಸಹಜೀವಿಗಳನ್ನು ಬಿಟ್ಟು ಬೇರೆ ಎಲ್ಲ ವಸ್ತುಗಳೊಡನೆಯೂ ಅನುಕಂಪೆಯನ್ನು ತೋರುತ್ತಾನೆ. ಈಗಿನ ಕಾಲ ಮಾನವೀಯ ಸಂಸ್ಕೃತಿಯ ಕಾಲ ಎಂದು ಹೇಳಲ್ಪಡುತ್ತದೆ. ಭೂಮಿಯ ಮೇಲಿನ ಸಮಸ್ತ ಮೂಕ ಪ್ರಾಣಿಗಳಿಗೆ ದಯೆ ತೋರಿಸುವ ಉದ್ದೇಶ ಹೊಂದಿರುವ ಅನೇಕ ಸಂಸ್ಥೆಗಳು ಜನ್ಮತಾಳಿವೆ.

ಆಹಾರಕ್ಕಾಗಿ ಪಶುಪಕ್ಷಿಗಳನ್ನು ಕೊಂದರೆ ಒಂದು ಆಂದೋಲನವೇ ಏಳುತ್ತದೆ. ಬುದ್ಧನ ಶಾಂತಿಮಂತ್ರವನ್ನು ಪಠಿಸುವ ಅನೇಕ ವ್ಯಾಸಂಗಗೋಷ್ಠಿಗಳಿವೆ. ಆದರೆ ಮನುಷ್ಯನನ್ನು ಕೊಂದರೆ ಯೋಚಿಸುವರಾರು ? ಅವರೆಲ್ಲರೂ ಒಕ್ಕೊರಲಿನಿಂದ ಹೇಳುವದೊಂದೇ: ಮನುಷ್ಯ ಆತ್ಮಾರ್ಪಣೆ ಮಾಡಿಕೊಳ್ಳುತ್ತಾನೆ!

ಆಧ್ಯಾತ್ಮಿಕತೆ ಹಾಗೂ ಅಪ್ಪಟ ಭಾವುಕತೆ, ಬೇಂದ್ರೆಯವರ ಕಾವ್ಯದ ಎರಡೂ ಮುಖ್ಯ ಎಳೆಗಳಾದರೆ, ವಿಡಂಬನೆಯೂ ಅಷ್ಟೇ ಮುಖ್ಯವಾದ ಎಳೆ. ಈ ಎಲ್ಲ ವಿಧದ ಎಳೆಗಳೂ- ಉದ್ದೇಶಗಳೂ, ಬೇಂದ್ರೆಯವರ ಬಹುಮುಖ ವ್ಯಕ್ತಿತ್ವದಲ್ಲಿ ಹೊಂದಾಣಿಕೆಯೊಡನೆ ಅಡಕವಾಗಿವೆ. ವ್ಹಿಟ್‌ಮನ್ ಕವಿಯ ಹಾಗೆ, ಬೇಂದ್ರೆಯವರು ವಿಕ್ಷಿಪ್ತತೆ (Contradiction) ಯನ್ನು ಮೀರಿ ವಿವಿಧತೆಯನ್ನು ತಮ್ಮಲ್ಲಿ ಒಳಗೊಳ್ಳುತ್ತಾರೆ. ಅವರ ಕಾವ್ಯಪ್ರಜ್ಞೆ ಹಾಗೂ ಅದರಿಂದ ಮೂಡಿಬರುವ ದರ್ಶನ, ಅವರ ವಿವಿಧ ಅನುಭವದ ಕ್ಷೇತ್ರಗಳನ್ನು ಸುಲಭವಾಗಿ, ನಿರಾಯಾಸವಾಗಿ ಒಂದುಗೂಡಿಸುತ್ತವೆ.

ಬೇಂದ್ರೆಯವರು ನಿರ್ಮಿಸಿದ ಸಾಹಿತ್ಯವನ್ನು ವಿಮರ್ಶಿಸಿದಾಗ, ಅವರ ಮೇಧಾಶಕ್ತಿಯ ಆಳ ಮತ್ತು ವ್ಯಾಪ್ತಿಯ ಅರಿವುಂಟಾಗುತ್ತದೆ. ಅವರ ಮೂಲಭೂತ ದೃಷ್ಟಿ, ಕವಿ ಹಾಗೂ ಋಷಿಯ ದೃಷ್ಟಿ. ' ಗರಿ 'ಯಿಂದ ಹಿಡಿದು ' ನಮನ 'ದ ವರೆಗೆ, ಇಪ್ಪತ್ತಕ್ಕಿಂತಲೂ ಹೆಚ್ಚು ಕಾವ್ಯ ಸಂಕಲನಗಳನ್ನು ಅವರು ರಚಿಸಿದ್ದಾರೆ. ಸಖೀಗೀತದಂಥ ಕಾವ್ಯದಲ್ಲಿ ಅವರು ವರ್ಡ್ಸ್‌ವರ್ಥ್ ಕವಿಯ " ದಿ ಪ್ರಿಲ್ಯೂಡ್ "ನ ಮಹಾಕಾವ್ಯ ಲಕ್ಷಣಗಳುಳ್ಳ ರಚನೆಯನ್ನು ಸಮೀಪಿಸುತ್ತಾರೆ. ' ಕೃಷ್ಣಕುಮಾರಿ ' ನಾಟಕೀಯ ರಚನೆಯನ್ನು ಹೊಂದಿದ ಒಂದು ಭಾವಗೀತೆ. ಸಖೀಗೀತ ಮತ್ತು ಕಾಳಿದಾಸನ ಮೇಘದೂತದಿಂದ ಸ್ಫೂರ್ತಿಪಡೆದು ಅದಕ್ಕೆ ಸರಿಸಮಾನವೆನಿಸಬಲ್ಲ ' ಮೇಘದೂತ ' ಕವನಗಳಲ್ಲಿ ಅನೇಕ ಹೊಸ ಗದ್ಯಪ್ರಾಸಗಳಿವೆ. ಹಳೆಯ ಕಾಲದ ಷಟ್ಪದಿಯಲ್ಲಿ, ಚಂಪೂಕಾವ್ಯದಲ್ಲಿ, ಶೋಕಗೀತೆ, ಇನ್ನೂ ಅನೇಕ ನವ್ಯರಾದ ನುಡಿರಚನೆಯನ್ನು ಹೊಂದಿದ ಕವನಗಳು, ವಚನಕಾರರು ಹಾಗೂ ದಾಸರ ಕೃತಿಗಳನ್ನು ಹೋಲುವ ಕವನಗಳೂ ಇಲ್ಲಿವೆ. ಅವರ ಕಾವ್ಯದ ವಸ್ತು ಸರ್ವಜೀವ ಮತ್ತು ಪ್ರಕೃತಿಯನ್ನು ಒಳಗೊಂಡು, ಆಳವಾದ ಪ್ರಜ್ಞೆ ಹಾಗೂ ಆಧ್ಯಾತ್ಮಿಕ

ಜೀವನದ ಸೂಕ್ಷ್ಮ ಅನುಭವಗಳನ್ನು ತೋರಿಸುತ್ತದೆ. ಬಹಳ ಸುಲಭವಾಗಿ ಗ್ರಾಮ್ಯ ಭಾಷೆಯಿಂದ ಪ್ರಬುದ್ಧ ಭಾಷೆಗೆ ಪರಿವರ್ತನಗೊಂಡು, ತನ್ನ ಏಕತೆ ಹಾಗೂ ಸತ್ತ್ವವನ್ನು ಕಳೆದುಕೊಳ್ಳದಿರುವ ಭಾಷೆ, ಪುನಃಶ್ಚೇತನಗೊಳಿಸಲ್ಪಟ್ಟ ಪರಂಪರೆಯಿಂದಲೂ ಔದ್ಯೋಗೀಕರಣದಿಂದುಂಟಾದ ಹೊಸ ಪಟ್ಟಣಗಳ ವಾತಾವರಣದಿಂದಲೂ ಬಲವನ್ನು ಪಡೆದ ರೂಪಕಗಳು, ನವುರಾದ ಮತ್ತು ಅನಿರೀಕ್ಷಿತ ಅರ್ಥವಿನ್ಯಾಸವನ್ನು, ಲಯವನ್ನು ಹೊಂದಿದ ಪದಲಾಲಿತ್ಯ— ಇವು ಹಾಗೂ ಇನ್ನಿತರ ಅವರ ಕಾವ್ಯದ ಅವತರಣಿಕೆಗಳು, ಅದಕ್ಕೆ ತನ್ನದೇ ಆದ ಒಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಫ್ರಾನ್ಸ ದೇಶದ ಸಾಂಕೇತಿಕ ಕಾವ್ಯ, ಬೇಂದ್ರೆಯವರ ಕಾವ್ಯವನ್ನು ತೀರ ಸಮೀಪದಲ್ಲಿ ಹೋಲುತ್ತದೆ.

'ಉದ್ಧಾರ,' 'ನಗೆಯ ಹೊಗೆ,' 'ಜಾತ್ರೆ,' 'ತಿರುಕರ ಪಿಡುಗು' ಹಾಗೂ 'ಹೊಸ ಸಂಸಾರ' ಎಂಬ ಏಕಾಂಕ ನಾಟಕಗಳಲ್ಲಿ, ಬೇಂದ್ರೆಯವರ ಋಷಿದೃಷ್ಟಿ ವ್ಯಕ್ತವಾಗಿದೆ. 'ನಿರಾಭರಣಸುಂದರಿ' ಯಲ್ಲಿ ಒಳಗೊಂಡಿರುವ ಅವರ ವಿಡಂಬನೆಗಳು, ಸಣ್ಣ ಕಥೆಗಳು, ಹಾಗೂ ನಿಬಂಧಗಳ ಬಗ್ಗೆಯೂ ಹೀಗೆಯೇ ಹೇಳಬಹುದು. 'ವಿಚಾರ ಮಂಜರಿ' ಯಲ್ಲಿ ಅವರು ಬರೆದ ವಿಚಾರಪೂರಿತ ಲೇಖನಗಳು, ಸಾಮಾಜಿಕ ಹಾಗೂ ಆಧ್ಯಾತ್ಮಿಕ ಸಮಸ್ಯೆಗಳ ಬಗ್ಗೆ ಅವರಿಗಿರುವ ದೃಢವಿಚಾರತತ್ಪರತೆಯನ್ನು ತೋರಿಸುತ್ತವೆ. ಸಮಕಾಲೀನ ಸಾಹಿತ್ಯಿಕ ವ್ಯಕ್ತಿಗಳ ಮೇಲೆ ಅವರು ಮಾಡಿದ ಟೀಕೆ ಟಿಪ್ಪಣಿಗಳು, ಅವರ ನಿಸ್ಪೃಹ ಅನುಕಂಪೆ, ಆಳವಾದ ಪ್ರಜ್ಞೆಯನ್ನು ತೋರಿಸುತ್ತವೆ. ಸಾಹಿತ್ಯಸಂಶೋಧನೆ ಹಾಗೂ ವಿಚಾರ ಮಂಜರಿಗಳಲ್ಲಿರುವ ಅವರ ಹಳೆ, ಮಧ್ಯಕಾಲೀನ ಹಾಗೂ ಹೊಸಗನ್ನಡ ಸಾಹಿತ್ಯದ ಮೇಲಿನ ವಿಮರ್ಶಾತ್ಮಕ ಲೇಖನಗಳು, ಸಾಹಿತಿಯ ವ್ಯಕ್ತಿತ್ವದ ಜೀವಾಳವನ್ನು ಅರಿತುಕೊಳ್ಳಬಲ್ಲ ಸಹೃದಯಶೀಲ ವಿಮರ್ಶಕ ಅವರು ಎನ್ನುವದನ್ನು ತಿಳಿಯಪಡಿಸುತ್ತವೆ.

ಸಾಹಿತ್ಯ ಹಾಗೂ ವಿಮರ್ಶೆಯ ಮೇಲೆ ಅವರು ಬರೆದ ಪ್ರಬಂಧಗಳು ಇದಕ್ಕೂ ಹೆಚ್ಚು ವಿಶಿಷ್ಟವಾದುವೂ ಅವರ ಕಾವ್ಯದ ಹೃದಯದೊಂದಿಗೆ ನಿಕಟ ಸಂಪರ್ಕ ಹೊಂದಿದುವೂ ಆಗಿವೆ. ಈ ದಿಶೆಯಲ್ಲಿ ಅವರು ನೀಡಿದ ಕೊಡುಗೆ, ಶ್ರೀ ಅರವಿಂದೋ ಅವರು ಪೂರ್ವ ಪಶ್ಚಿಮಗಳ ವಿಚಾರಧಾರೆಯನ್ನು ಸಮಗ್ರ ದೃಷ್ಟಿಯಿಂದ ನೋಡುವದರ ಒಂದು ವಿಸ್ತರಣೆಯೇ ಆಗಿದೆ. ಸ್ವಲ್ಪದರಲ್ಲಿ ಹೇಳುವುದಾದರೆ ಬೇಂದ್ರೆಯವರ ಬರವಣಿಗೆಗಳು ನಾಳಿನ ಪ್ರಪಂಚವನ್ನು ನಿರ್ಮಾಣ ಮಾಡುವ ಜೀವನ ಮಾರ್ಗವನ್ನು ಧ್ವನಿಸುತ್ತವೆ. ಭಾರತ ಮತ್ತು ಯುರೋಪ್, ಹಳೆಯ ಮತ್ತು ಹೊಸ ಸಂಸ್ಕೃತಿ, ವಿಜ್ಞಾನ ಹಾಗೂ ಕಲೆಗಳನ್ನು ಒಂದುಗೂಡಿಸುವ ವಿಚಾರಧಾರೆ ಇದು. ಈ ಎಲ್ಲ ವಿಭಿನ್ನ ವಿಚಾರಧಾರೆಗಳನ್ನು ಒಂದುಗೂಡಿಸದ ಹೊರತು,

ಸುಧಾರಣೆ ಸಾಧ್ಯವಿಲ್ಲ. ಏಶಿಯಾದಲ್ಲಾಗಲಿ, ಯುರೋಪಿನಲ್ಲಾಗಲಿ ನಿರ್ಮಿ-ಸಲ್ಪಟ್ಟಿರುವ ಶ್ರೇಷ್ಠ ಆಧುನಿಕ ಸಾಹಿತ್ಯ, ಈ ಒಂದು ಸಮಗ್ರ ದೃಷ್ಟಿಯಿಂದಲೇ ತನ್ನ ಹಿರಿಮೆಯನ್ನು ತೋರಿಸಿಕೊಟ್ಟಿದೆ. ಪ್ರತಿಯೊಬ್ಬ ಶ್ರೇಷ್ಠ ಆಧುನಿಕ ಲೇಖಕನೂ ತನ್ನದೇ ಆದ ರೀತಿಯಲ್ಲಿ ಈ ಸಮಗ್ರದೃಷ್ಟಿಯನ್ನು ವ್ಯಕ್ತಪಡಿಸಿದ್ದಾನೆ. ಬೇಂದ್ರೆಯವರೂ ಕೂಡ ಇದೇ ದೃಷ್ಟಿಯನ್ನು ಬಹಳ ಚೆನ್ನಾಗಿ ವ್ಯಕ್ತಪಡಿಸುವದರ ಮೂಲಕ, ಅವರು ಅತ್ಯಂತ ಶ್ರೇಷ್ಠ ಆಧುನಿಕ ಕವಿಗಳೊಲ್ಲೊಬ್ಬರೆಂದು ತೋರಿಸಿಕೊಟ್ಟಿದ್ದಾರೆ.

ಬೇಂದ್ರೆಯವರ ‘ ಅರಳು ಮರಳು ’ ಅವರ ಅರವತ್ತನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಪ್ರಕಟಿಸಿದ ಒಂದು ಕಾವ್ಯಸಂಗ್ರಹ.

ಬೇಂದ್ರೆಯವರ ಕಾವ್ಯವನ್ನು ಹೆಚ್ಚು ಹೆಚ್ಚು ಆಳವಾಗಿ ಅಭ್ಯಾಸ ಮಾಡಿ-ದಂತೆಲ್ಲಾ, ಅವರ ಪ್ರತಿಭೆಯ ವ್ಯಾಪ್ತಿ ಮತ್ತು ಆಳದ ಅರಿವು ಹೆಚ್ಚುಹೆಚ್ಚಾಗಿ ಆಗುತ್ತದೆ. ಕಲ್ಪನೆಯ ತುತ್ತತುದಿಯಲ್ಲಿ ವಿರಳವಾದ ಒಂದು ಖಗ ತನ್ನ ಗೂಡನ್ನು ಕಟ್ಟಿಕೊಂಡಿದೆ. ತಮ್ಮ ಮಾನವ ಜೀವನದ ಅನುಭವವನ್ನು ತಮ್ಮದೇ ಆದ ಋಷಿದೃಷ್ಟಿಯಿಂದ, ಉದಾತ್ತ ಕಾವ್ಯವಾಗಿ ಪರಿವರ್ತಿಸುತ್ತಾರೆ. ಬೇಂದ್ರೆ-ಯವರು ಆಕಾಶದಲ್ಲಿ ಹಾರುತ್ತಿರುವ ಒಂದು ಪಟದ ದಾರವನ್ನು ಹಿಡಿದಿರುವ ಒಬ್ಬ ಸೂತ್ರಧಾರ. ಬೇಂದ್ರೆಯವರು ಇಪ್ಪತ್ತನೆಯ ಶತಮಾನದ ಭಾರತೀಯ ನಾಗರಿಕನಾದರೆ, ಅವರಲ್ಲಿರುವ ಕವಿತಾಶಕ್ತಿ ಅವರನ್ನು ಪ್ರಪಂಚದ ನಾಗರಿಕತೆಗೆ ಯೋಗ್ಯವಾಗಿಸುತ್ತದೆ. ತಮ್ಮ ಋಷಿದೃಷ್ಟಿಯಿಂದ ನಿರ್ದೇಶಿಸಲ್ಪಟ್ಟ ಪ್ರಯೋಗ-ಗಳನ್ನು ಬೇಂದ್ರೆಯವರು ತಮ್ಮ ಜೀವನದಲ್ಲಿ ಮಾಡುತ್ತಾರೆ. ಚಿರಕಾಲ ಬಾಳುವ ಅನುಭವದ ತುಣಕುಗಳನ್ನು ಅವರ ಋಷಿದೃಷ್ಟಿ ಕಾವ್ಯವಾಗಿಸಿ, ನಶ್ವರವಾದ ಅನುಭವಗಳನ್ನು ಗಾಳಿಗೆ ತೂರುತ್ತದೆ. ಹಾಗೆಯೇ ಅದು ದೈವೀವಾಣಿಯನ್ನು ಆಲಿಸಿ, ಬೇಂದ್ರೆಯವರನ್ನು, ಅದನ್ನು ಗುರುತುಮಾಡಿಕೊಳ್ಳಲು ಒಲಿಸುತ್ತದೆ. ಈ ಎಲ್ಲ ಅರ್ಥವಿನ್ಯಾಸಗಳಿಂದಾಗಿ, ಬೇಂದ್ರೆಯವರ ಕಾವ್ಯದೃಷ್ಟಿ, ಋಷಿದೃಷ್ಟಿ ಎಂದು ನಾನು ಹೇಳಿದ್ದೇನೆ.

ಈ ಕವನ ಸಂಗ್ರಹದಲ್ಲಿ, ಜೀವನ ಹಾಗೂ ಪ್ರಕೃತಿಯ ಭೀತಿ ಮತ್ತು ಗೋಳು, ಸೌಂದರ್ಯ ಹಾಗೂ ಸಾಧನೆಗಳು ಅನಂತತೆಯ ದೃಷ್ಟಿಯಿಂದ ವ್ಯಕ್ತ ಮಾಡಲ್ಪಟ್ಟಿವೆ. ಈ ದೃಷ್ಟಿಕೋಣದಿಂದಲೇ, ವ್ಯಕ್ತಿ ಹಾಗೂ ಸಮಾಜದ ರೀತಿ ನೀತಿಗಳು ಕರ್ನಾಟಕದಲ್ಲಾಗಲಿ, ಭಾರತದಲ್ಲಾಗಲಿ, ಪ್ರಪಂಚದಲ್ಲೇ ಆಗಲಿ — ವಿಮರ್ಶಿಸಲ್ಪಟ್ಟಿವೆ. ನಿರಂತರ ಹಾಗೂ ಸಮಕಾಲೀನ ಸಮಸ್ಯೆಗಳನ್ನು ಇಂತಹ ಒಂದು ದೃಷ್ಟಿಕೋಣದಿಂದ ಅಳೆಯುವ ಅವಕಾಶವನ್ನು ಹೊಂದಿರುವದು, ಕನ್ನಡ ಕಾವ್ಯಾಭ್ಯಾಸಿಯ ಸುದೈವ.

ಬೇಂದ್ರೆಯವರು ತಮ್ಮ ಕಾವ್ಯ ರಚಿಸಲು ಆರಂಭಿಸಿದಾಗ, ಕನ್ನಡ ಕಾವ್ಯ ಒಂದು ಹೊಸ ಬೆಳಗಿನ ಹೊಸ್ತಿಲಲ್ಲಿತ್ತು. ಬೇಂದ್ರೆ ಹಾಗೂ ಇತರ ಕವಿಗಳ ಸ್ಫೂರ್ತಿಪಡೆದು, ಈಗ ನೂರಾರು ಕವಿವಾಣಿಗಳು ಕೇಳಿಬರುತ್ತಿವೆ. ಕರ್ನಾಟಕ ಆಗ ಇಪ್ಪತ್ತೈದಕ್ಕಿಂತ ಹೆಚ್ಚು ಆಡಳಿತವಿಭಾಗಗಳಲ್ಲಿ ಹಂಚಿ ಹೋಗಿತ್ತು. ಈಗ ಅದು ಏಕೀಕೃತವಾಗಿ ಒಂದು ರಾಜ್ಯದ ಆಡಳಿತಕ್ಕೊಳಪಟ್ಟಿದೆ. ಭಾರತ ಆಗ ಇನ್ನೂ ಸ್ವಾತಂತ್ರ್ಯಪಡೆದಿರಲಿಲ್ಲ. ೧೯೪೭ ರಿಂದ ಅದು ತನ್ನ ಸ್ವತಂತ್ರಜೀವನ ವನ್ನು ಆರಂಭಿಸಿದೆ. ಈ ಎಲ್ಲ ಸಾಧನೆಗಳನ್ನು ನೋಡಿ, ಬೇಂದ್ರೆಯವರಿಗೆ ಒಂದು ರೀತಿಯ ಸಮಾಧಾನವಾಗಿದ್ದರೆ, ಆಶ್ಚರ್ಯಪಡಬೇಕಾಗಿಲ್ಲ. ಈ ಒಂದು ಸಂತೃಪ್ತ ಭಾವನೆಯೇ ಅವರ 'ನೆನಪು' ಎನ್ನುವ ಕವನದಲ್ಲಿ ಅಡಕವಾಗಿದೆ.

ಬೇಂದ್ರೆಯವರ ಕಾವ್ಯ ತನ್ನದೇ ಆದ ವಿಶಿಷ್ಟ ಪರಂಪರೆಯನ್ನು ಕನ್ನಡ ಕಾವ್ಯದಲ್ಲಿ ಆರಂಭಿಸಿದೆ. "ಗರಿ" ಮತ್ತು "ನಾದಲೀಲೆ" ಕವನ ಸಂಗ್ರಹಗಳು ಕನ್ನಡ ಜನತೆಗೆ ಈ ಪರಂಪರೆಯ ಅರಿವುಂಟುಮಾಡಿಕೊಟ್ಟರೆ, "ಅರಳುಮರಳು" ಕವನ ಸಂಗ್ರಹ ಅದೇ ಪರಂಪರೆಯನ್ನು ಮುಂದುವರೆಸುತ್ತಿದೆ. ಷಟ್ಪದಿ ಹಾಗೂ ನುಡಿಪ್ರಾಸಗಳಲ್ಲಿ (Quantitative metre) ಕೆಲವು ಕವನಗಳಲ್ಲಿ 'ಸಕಾಲ' ಮತ್ತು "ವಸುಧಾ" ಎನ್ನುವ ಸಾನೆಟ್‌ಗಳು ಬೇಂದ್ರೆಯವರ ಮುಂಚಿನ ಸಾನೆಟ್‌ಗಳ ಸೂಕ್ಷ್ಮ ಹಾಗೂ ತೀಕ್ಷ್ಣ ಭಾವನೆಗಳ ನೆನಪನ್ನು ತಂದು ಕೊಡುತ್ತವೆ. ಕವನಗಳ 'ಅಘೋಷಿತ ರಾಜ'ನಂತಿರುವ ಬೇಂದ್ರೆಯವರು,"ಹುಚ್ಚನ ಹಾಡು" "Placing her hand on her waist" ಎನ್ನುವ ಕವನಗಳಮೂಲಕ, ಈ ಮಾದರಿಯ ಕವನಗಳಲ್ಲಿ ಶ್ರೇಷ್ಠ ಕವನಗಳನ್ನು ನೀಡಿದ್ದಾರೆ. ಒಬ್ಬ ವ್ಯಕ್ತಿ ಅಥವಾ ಒಂದು ಸ್ಥಿತಿಯನ್ನು ಸುಂದರವಾಗಿ ಸಂಪೂರ್ಣ ವಾಗಿ ನಿರೂಪಣೆ ಮಾಡಿದಾಗ, ಆ ನಿರೂಪಣೆಯೇ ಒಂದು ಸೂಚ್ಯಾರ್ಥವನ್ನು ಒಳಗೊಳ್ಳುವದನ್ನು ಈ ಕವನಗಳು ತೋರಿಸುತ್ತವೆ. ಕವಿಯ ಮೂಲಭೂತ ದರ್ಶನವನ್ನು ವ್ಯಕ್ತಪಡಿಸಲು, ಗ್ರಾಮ್ಯಭಾಷೆ ಹಾಗೂ ಗ್ರಾಮ್ಯಧ್ವನಿ ಸಹಾಯ ಮಾಡುತ್ತವೆ. 'ಕ್ರೆಸೆಂಟ್ ಮೂನ್' ಅತ್ಯುತ್ತಮವಾದ ಒಂದು ಮಕ್ಕಳ ಭಾವಗೀತೆ. ಮಕ್ಕಳ ಭಾವಗೀತೆಗಳು ಮಕ್ಕಳಾಟಿಕೆಯಾಗುವ ಅಪಾಯ ಯಾವಾಗಲೂ ಇದ್ದೇ ಇದೆ. ಆದರೆ ಬೇಂದ್ರೆಯವರ ಮಕ್ಕಳ ಭಾವಗೀತೆಗಳು, ವಯಸ್ಕರನ್ನೂ ಮಕ್ಕ-ಳನ್ನೂ ಒಂದೇ ರೀತಿಯಲ್ಲಿ ತೃಪ್ತಿಪಡಿಸಬಲ್ಲವು. 'ಮೇಘದೂತ'ದಲ್ಲಿ ಕಾಳಿ-ದಾಸನ ಭಾವಗೀತೆಯ ರಮ್ಯಭಾಷಾಂತರವನ್ನು ನೀಡಿದ್ದಾರೆ. 'ಒಮರ' 'ಆನಂದಲಹರಿ,' ಮತ್ತು 'ರಾಮನ ಹೃದಯ' ಕವನಗಳಲ್ಲಿ, ಬೇರೆ ಕೆಲವು ವ್ಯಕ್ತಿಗಳ ಪ್ರತಿಭೆಯ ವಿವೇಚನೆಯನ್ನು ಮಾಡಿದ್ದಾರೆ. ಶ್ರೀ ಅರವಿಂದೋ ಅವರ ಭಾವಗೀತೆಗಳ ಅನೇಕ ಭಾಷಾಂತರಗಳೂ ಈ ಸಂಗ್ರಹದಲ್ಲಿ ಸೇರಿವೆ.

ಬೇಂದ್ರೆಯವರ ಹಾಸ್ಯ ಮತ್ತು ವಿಡಂಬನೆ ಎಂದಿನಂತೆ ಮಿಂಚುತ್ತವೆ. 'ಬೀದಿನಾಯಿ ರಾಘೆ,' 'ಜಡ ವಾರಪತ್ರಿಕೆ' ಮತ್ತು "ಗಿರಡೀ ಬುರಡೀ ಅವರ ಸಾಮಾಜಿಕ ತತ್ತ್ವಜ್ಞಾನ" ಎಂಬ ಕವನಗಳು, ಆದರ್ಶದ ಅಳತೆಗೋಲಿನಿಂದ, ನೈಜತೆಯ ಅವಗುಣಗಳನ್ನು ಅಳೆಯುತ್ತವೆ. "ದೀಪದ ಮಲ್ಲಿ" ಮತ್ತು "ನವಯುಗ ರಂಭಾ" ಎಂಬ ಕವನಗಳು ವಿಶಿಷ್ಟವಾದ ಪ್ರತಿಮೆಯೊಂದನ್ನು ಆಯ್ದು ಸರಳ ಸುಂದರ ಶೈಲಿಯಲ್ಲಿ ಅದಕ್ಕೆ ಮೂರ್ತಸ್ವರೂಪ ಕೊಡುತ್ತವೆ. "ಗಾಳಿಗಳು" ಮತ್ತು "ಶ್ರಾವಣ, ಒಂದು ವಾರ್ಷಿಕ ಶೀರ್ಷಿಕೆ" ಎನ್ನುವ ಕವನಗಳು, ಬೇಂದ್ರೆಯವರ ಪ್ರಾರಂಭಿಕ ಪ್ರಕೃತಿ ವರ್ಣನೆಯನ್ನು ಒಳಗೊಂಡಿವೆ. 'ಗಾಂಧಿ,' 'ಮಧ್ವ,' ಮತ್ತು 'ಕಾಳಿದಾಸ' ಕವನಗಳು, ಈ ಪ್ರತಿಯೊಂದು ವ್ಯಕ್ತಿಯ ಜೀವಾಳದ ಅರಿವನ್ನು ಎತ್ತಿ ತೋರಿಸುತ್ತವೆ. 'ಯುವಕನ ಕನಸು' ಎನ್ನುವ ಕವನದಲ್ಲಿ, ಹಳೆಯ ಪರಂಪರೆಯ ವಚನ ಕಾವ್ಯವನ್ನು ಅಳವಡಿಸಲಾಗಿದೆ. ಮಂತ್ರಡೋಪಾಡಿಯಲ್ಲಿ 'ರುದ್ರವೀಣೆ' ಎಂಬ ಕವನದಲ್ಲಿ ವ್ಯಕ್ತವಾಗಿರುವ ಮಹಾಸಂದೇಶ "ಸಾವಿರ ತಂತಿಗಳ ವೀಣೆ" ಎನ್ನುವ ಕವನದಲ್ಲಿ ಪುನಃ ವ್ಯಕ್ತವಾಗಿದೆ.

ಆದರೆ ಕವಿಯು ಯಾವಾಗಲೂ ಹೊಸ ದಾರಿಗಳನ್ನು ಗುರುತಿಸಲು, ಹಾಗೂ ಹೊಸಕ್ಷಿತಿಜಗಳನ್ನರಸಲು ಉತ್ಸುಕನಾಗಿರುತ್ತಾನೆ. ಈ ಕಾವ್ಯಸಂಗ್ರಹ, "ಹೃದಯ ಸಮುದ್ರ" ವಿಭಾಗದಲ್ಲಿ ಬೇಂದ್ರೆಯವರು ಹೊಸ ದಿಕ್ಕಿನಲ್ಲಿಟ್ಟ ಹೆಜ್ಜೆಗಳ ಒಂದು ದಾಖಲೆಯಾಗಿದೆ ಒಂದು ಹೊಸ ವಿವೇಚನಾಶಕ್ತಿ ಮತ್ತು ಹೊಸ ಪ್ರತಿಮಾವಿಧಾನ 'ಇಂದ್ರಜಾಲ' ಮತ್ತು 'ಮಹಾಪ್ರಸ್ಥಾನ' ಎನ್ನುವ ಕವನಗಳಲ್ಲಿ ಕಂಡು ಬರುತ್ತವೆ. ಇವು ನಮ್ಮನ್ನು ಕವಿಯ ನಿಗೂಢವಾದ ಪ್ರಜ್ಞಾಪ್ರಪಂಚಕ್ಕೆ ಕೊಂಡೊಯ್ಯುತ್ತವೆ. ಬೇಂದ್ರೆಯವರ ಮೊದಲಿನ ಕಾವ್ಯದಲ್ಲಿ, ಇದರ ಇಣುಕುನೋಟ ಗೋಚರವಾಗಿತ್ತು. ಆದರೆ ಇಲ್ಲಿ ಅದು ವಿಶಿಷ್ಟವಾದ ಒಂದು ಪ್ರತಿಮೆಯಾಗಿರದೆ, ಕಾವ್ಯಸೃಷ್ಟಿಯ ಒಂದು ಪೂರ್ಣ ನೋಟವಾಗಿದೆ. ಎರಡನೆಯದಾಗಿ, ಇಲ್ಲಿ ಇನ್ನೂ ಹೆಚ್ಚು ವಿವೇಚನಾತ್ಮಕವಾದ ಕವನಗಳಿವೆ. ಬುದ್ಧಿಯ ಪರಿಪಕ್ವತೆಯಿಂದ, ಮೂಲಭೂತ ಸತ್ಯಗಳನ್ನು, ನಿರರ್ಗಳವಾಗಿ ಸ್ನೇಹಪೂರ್ಣವಾಗಿ, ಇವು ವ್ಯಕ್ತಪಡಿಸುತ್ತವೆ, "ಕಿಡಿಕಿಡಿ," "ಬಿಡಿ ಮುತ್ತು" ಮತ್ತು 'ಕಾಣಿಕೆ' ಈ ರೀತಿಯ ಕವನಗಳು. ಮೂರನೆಯದಾಗಿ, ಇಲ್ಲಿ ಬೇಂದ್ರೆಯವರು ವೇದಗಳ ಪ್ರಾಸಕ್ಕೆ ಸರಿಹೋಲುವ ಹೊಸ ಪ್ರಾಸಗಳನ್ನು 'ಸಪ್ತಕಾಲ' ಮತ್ತು 'ಸ್ವಪ್ನನೌಕೆ' ಎನ್ನುವ ಕವನಗಳಲ್ಲಿ ಕಂಡು ಹಿಡಿದಿದ್ದಾರೆ. 'ಸಪ್ತಕಾಲ'ದಲ್ಲಿ ಈ ಹೊಸ ಪ್ರಾಸ, ಒಂದು ಉದಾತ್ತ ಕಾವ್ಯವಸ್ತುವಿನೊಡನೆ ಬೆರೆತಿದೆ. ಈ ಕವನ ಸಪ್ತ ಕುಶಲಕಲೆಗಳ ಉಗಮದ ಒಂದು ವಿವೇಚನೆ. ಕವಿ ಇದಕ್ಕೆ ಒಂದು ವಿಶಾಲ

ಹಾಗೂ ವಿಶಿಷ್ಟ ಅರ್ಥವನ್ನು ಕಲ್ಪಿಸುತ್ತಾನೆ. ನಾಲ್ಕನೆಯದಾಗಿ, ' ಸಂಖ್ಯಾಂಕಿತ ' ಇನ್ನೊಂದು ಅದ್ಭುತವನ್ನು ಸಾಧಿಸುತ್ತದೆ. ಅದು ಗಣಿತವನ್ನು ಕಾವ್ಯ-ವನ್ನಾಗಿ ಮಾರ್ಪಡಿಸುತ್ತದೆ. ಒಬ್ಬ ಅಮೇರಿಕದ ಕವಿ, ಯೂಕ್ಲಿಡ್ ಒಬ್ಬನೇ ನಗ್ನಸೌಂದರ್ಯೋಪಾಸಕ ಎಂದು ಹೇಳಿದ್ದಾನೆ. ಇಂತಹ ನಿರಾಲಂಕೃತ ಸೌಂದರ್ಯವೇ ಬೇಂದ್ರೆಯವರ ಕವನದಲ್ಲಿ ರೂಪುಗೊಳ್ಳುತ್ತದೆ. ಐದನೆಯದಾಗಿ, ' ಮಧುವಾತಾ ಋತಾಯತೇ ' ಮತ್ತು ' ದರಿದ್ರನಾರಾಯಣ ' ಎನ್ನುವ ಕವನಗಳಲ್ಲಿ ಭಾವಮಾಧುರ್ಯ ಮತ್ತು ವಿಡಂಬನೆಯ ಶಕ್ತಿ ಒಂದಕ್ಕೊಂದು ಹೆಣೆದುಕೊಂಡಿವೆ. ಈ ರೀತಿಯಲ್ಲಿಯೇ ಬೇಂದ್ರೆಯವರ ಪ್ರತಿಭೆ ನವ್ಯಕಾವ್ಯದ ತಂತ್ರವನ್ನು ಅಳವಡಿಸಿ ಕೊಳ್ಳುತ್ತದೆ.

ಈ ಕವನ ಸಂಗ್ರಹ, ಕವಿಯ ಜೀವನದೃಷ್ಟಿ ವಿಕಾಸಗೊಳ್ಳುವದನ್ನು ತೋರಿ ಸುತ್ತದೆ. ಇಲ್ಲಿ ಆ ದೃಷ್ಟಿ ಇನ್ನೂ ಆಳವಾಗುತ್ತದೆ. ಒಂದು ಕವನದಲ್ಲಿ ದೈವೀ ಮಾತೆ ಸೂರ್ಯಗೋಲದ ಮೇಲೆ ಕಾವು ಕುಳಿತು, ಹೊಸ ಜನಾಂಗವನ್ನೇ ನಿರ್ಮಾಣ ಮಾಡಿದ ವರ್ಣನೆ ಇದೆ. ದೈವತ್ವದ ಅರಿವಿಲ್ಲದೆಯೇ ದೈವವಾಣಿ ನುಡಿಯಲು ಹೇಗೆ ಸಾಧ್ಯ ? ಎಂದು ಕವಿ ಪ್ರಶ್ನಿಸಿಸುತ್ತಾರೆ. ದೇವರು ಎಂದರೆ, ವ್ಯಕ್ತಿಯಲ್ಲಿ ಅಡಗಿ ಕುಳಿತಿರುವ ಒಂದು ಚೇತನ, ಹಾಗೂ ಈ ಚೈತನ್ಯದ ಗುಟ್ಟು ಶ್ರದ್ಧೆ ಎಂದು ಅವರಿಗೆ ಚೆನ್ನಾಗಿ ಗೊತ್ತಿದೆ. ಜೀವನಿರ್ಮಾಣದ ನಿಗೂಢತ್ವದ ಬಗ್ಗೆ ಅವರು ಯೋಚಿಸುತ್ತಾರೆ. ಈ ಪ್ರಪಂಚವನ್ನು ಯಾರು ನಿರ್ಮಾಣ ಮಾಡಿದರು ಮತ್ತು ಯಾರ ಪ್ರೀತಿಗಾಗಿ, ಎನ್ನುವದು ಪರಮಾತ್ಮನಿಗೇ ಗೊತ್ತು. ಈ ಪ್ರಪಂಚದಲ್ಲಿ ಒಂದು ಹೊಸ ಮುಂಜಾವು ಮೂಡಲಿದೆ ಎನ್ನುವ ಬಲವಾದ ನಂಬಿಕೆ ಅವರಿಗಿದೆ. ಎಲ್ಲವೂ ಕಾಲಕ್ಕೆ ಸರಿಯಾಗಿ ಪಕ್ವವಾಗುತ್ತದೆ. ಗಾಂಧೀಜಿಯವರ ಕೊಲೆ, ಯಾವ ಸಂಗತಿಯೂ ಪರಮಾತ್ಮನ ಅನುಜ್ಞೆ ಇಲ್ಲದೆ ನಡೆಯಲಾರದು ಎಂದು ಉದ್ಗರಿಸಲು ಹಚ್ಚುತ್ತದೆ.

> ' ಆಕಸ್ಮಿಕ ಒಂದು ಹುಲ್ಲು ಕಡ್ಡಿಯನ್ನೂ ಅಲುಗಿಸದ,
> ಬೆಟ್ಟ ಗುಂಡಿಗೆ ಬೀಳಲಹುದೆ ?

ಸಾಮಾಜಿಕ ಅನ್ಯಾಯ ಅವರ ಹೃದಯವನ್ನು ಕರಗಿಸಿ, ಅನುಕಂಪೆ ಕಾಠಿಣ್ಯಗಳ ಮೂರ್ತಿಯನ್ನಾಗಿಸುತ್ತದೆ ಕಾಯಕವೇ ಕೈಲಾಸ ಎನ್ನುವದರಲ್ಲಿ ಯಾವ ಅನು ಮಾನವೂ ಇಲ್ಲ. ಆದರೆ ಭಕ್ತರು ಯಾವಾಗಲೂ ಉಪವಾಸ ವ್ರತಕ್ಕೂ, ಸನ್ಯಾಸಿ ಗಳು ವನವಾಸ ಧರ್ಮ–ದುರಂತಗಳಿಗೂ ಬಲಿಬೀಳುತ್ತಾರೆ. ಯೋಜನಾಯುಗದ ಈ ನಾನಾ ಯೋಜನೆಗಳ ಬಗ್ಗೆ ಅವರಿಗೆ ಬಹಳಷ್ಟು ಅಪನಂಬಿಕೆ. ಈ ಪರಿಸ್ಥಿತಿ ಯಲ್ಲಿ ತಾಳಿದವನೇ ಬಾಳಿಯಾನು ಎಂದು ಅವರು ಹೇಳುತ್ತಾರೆ. ಅಂಥವನೇ ಸರ್ವೋದಯ ಎನ್ನುವ ಸಂತೋಷ ಕೂಟದಲ್ಲಿ ಸಲ್ಲುವ ಅತಿಥಿ. ಕರಡಿ ತನ್ನ

ಯಜಮಾನನ ಹಾಡಿಗೆ ತಕ್ಕಂತೆ ಕುಣಿಯುವುದನ್ನು ನೋಡಿ, ಮನುಷ್ಯ ಬುದ್ಧಿಯೂ ಇದೇ ರೀತಿಯಲ್ಲಿ ಅನ್ನ ಮತ್ತು ಅನ್ನದಾತನ ಗುಲಾಮನಾಗಿರುತ್ತದೆ ಎಂದು ಕವಿ ಉದ್ಗರಿಸುತ್ತಾರೆ.

ಈ ಎಲ್ಲ ವಿಚಾರಗಳ ಹಿಂದೆಯೂ, ಬೇಂದ್ರೆಯವರಿಗೆ ಭಾರತದಲ್ಲಿರುವ ನಂಬಿಕೆ, ವಿಶಿಷ್ಟವಾಗಿ ಕಂಡುಬರುತ್ತದೆ. ಲೋಕತಾಂತ್ರಿಕ ಪ್ರಜಾಪ್ರಭುತ್ವ ತನ್ನದೇ ಆದ ಯುಗವಲ್ಲಿ ಕಾಲಿರಿಸಿದೆ. ಒಂದು ಹೊಸ ಮನ್ವಂತರ ಆರಂಭವಾಗಿದೆ. ಯುದ್ಧ ಆಗಾಗ್ಗೆ ತಲೆ ಎತ್ತುವ ಭಯವಿದ್ದರೂ, ಶಾಂತಿಯ ತಂಗಾಳಿ ಎಲ್ಲೆಡೆ ಬೀಸ ಲಾರಂಭಿಸಿದೆ. ಮಾನವಕುಲ ಒಂದು ಎನ್ನುವುದನ್ನು ಅರ್ಥಮಾಡಿಕೊಳ್ಳಲು ಆರಂಭಿಸಿದ್ದೇವೆ. ಶಕ್ತಿದೇವತೆ-ಜ್ಞಾನದೇವತೆಯರು ಒಂದಾಗಿ ಕೆಲಸಮಾಡಲು ಪ್ರಾರಂಭಮಾಡಿದ್ದಾರೆ. “ಸಿಂಹಮುಖದ ಸುತ್ತ ನವಿಲುಗರಿಗಳು ಕಂಗೊಳಿಸುತ್ತಿವೆ.”

ಬೇಂದ್ರೆಯವರ ಕಾವ್ಯಶೈಲಿ ತನ್ನದೇ ಆದ ಒಂದು ಕ್ಲಿಷ್ಟ ಸ್ವರೂಪವನ್ನು ಹೊಂದಿದೆ. ಮಾತಿನ ಚಮತ್ಕಾರ ಅದರ ಸಾಮಾನ್ಯ ಸಂಗಾತಿ. ಆದರೆ ಕೋಲ-ರಿಜ್ ಹೇಳಿದಂತೆ, ಮಾತಿನ ಚಮತ್ಕಾರ ಕಾವ್ಯವನ್ನು ಉದಾತ್ತ ಶಿಖರಕ್ಕೇರಿಸಬಹುದು. ಮಾತಿನ ಚಮತ್ಕಾರ, ಅನಿರೀಕ್ಷಿತ ಪ್ರಾಸಗಳು, ಹಾಗೂ ಭಾರತ ಪಾಶ್ಚಾತ್ಯ ರಾಷ್ಟಗಳ ಪೌರಾಣಿಕ ಮತ್ತು ತಾತ್ವಿಕ ಉಲ್ಲೇಖಗಳು, ಪದಗಳು ಘಂಟೆಯಂತೆ ಮೊಳಗುವ ಒಂದು ಹೊಸ ವಾತಾವರಣವನ್ನೇ ಕಲ್ಪಿಸಿವೆ. ಅವುಗಳಲ್ಲಿ ಪ್ರತಿಮೆಯ ಆಕರ್ಷಣೆಯೂ ಬೌದ್ಧಿಕ ಸಂತೃಪ್ತಿಯೂ ಮೂಡಿಬಂದಿವೆ. ಬೇಂದ್ರೆಯವರ ಕಾವ್ಯಶೈಲಿ ಭಾವಗೀತೆಯಂತೆ ಉಪಯೋಗಿಸಿದ, ಒಂದು ಮಹಾ-ಕಾವ್ಯಶೈಲಿ.

ಅವರ ಭಾವಗೀತೆಗಳ ರಚನೆಯಲ್ಲೂ ನಾವಿದನ್ನು ನೋಡಬಹುದು. ಪದ-ಗಳು ಬಂಗಾರದ ಇಟ್ಟಿಗೆಗಳಾಗಿ ಮಾರ್ಪಟ್ಟು, ನಮ್ಮ ಕಣ್ಣಮುಂದೆ ಬಂಗಾರದ ಕಾವ್ಯಗೋಪುರವೇ ನಿರ್ಮಾಣವಾಗುತ್ತದೆ. ಈ ಕಾವ್ಯಸೃಷ್ಟಿಯು ನಮ್ಮನ್ನು ಚಕಿತಗೊಳಿಸುತ್ತದೆ. ಈ ಚಮತ್ಕಾರವನ್ನು ನಾವು ‘ಮಧುವಾತಾ ಋತಾಯತೆ’ ಎಂಬ ಕವನದಲ್ಲಿ ನೋಡಬಹುದು. ಈ ಭಾವಗೀತೆಯ ಮೊದಲಭಾಗದಲ್ಲಿ, ಕಾವ್ಯದ ಗೊತ್ತುಗುರಿಗಳನ್ನು ಕುರಿತು ವಿವೇಚಿಸುತ್ತಾರೆ. ಸ್ಫೂರ್ತಿಯ ಉಗಮ, ಕವಿಯ ಭಾವಾನುಭವ, ಪ್ರತಿಮೆ, ಪ್ರಾಸ, ಶೈಲಿಗಳ ಮೂಲಕ ವ್ಯಕ್ತವಾಗುವ ರೀತಿಯನ್ನು ಹೇಳುತ್ತದೆ. ಭಾವಗೀತೆ ಹೀಗೆಯೇ ಉಗಮವಾಗಿ ಬೆಳೆಯುತ್ತದೆ. ಇದುವಿಕೆ ಆನಂದದ ವಿಕಾಸವಾಗುತ್ತದೆ. ಸಿರಿ ಗಾಳಿಗಳು ಎಲ್ಲ ದಿಕ್ಕುಗಳಲ್ಲೂ ಬೀಸಲಾರಂಭಿಸುತ್ತವೆ.

ಎರಡನೆಯ ಭಾಗ, ಜೀವನದಲ್ಲಿ ಈ ಕಟ್ಟಳೆಯನ್ನು ವಿರೋಧಿಸಿದಾಗ ಉಂಟಾಗುವ ಗೊಂದಲವನ್ನು ಕುರಿತು ವಿವೇಚಿಸುತ್ತದೆ. ವಸಂತಕಾಲ ಅನೇಕ ಜೇನ್ನೊಣಗಳನ್ನು ಕರೆದು ತಂದಿದೆ. ಆದರೆ ಯಾವ ಜೇನುಗೂಡುಗಳನ್ನು ಅವು ಅರಸುತ್ತಿವೆ? ಕವಿಯು ಜೀವನದ ಈ ಗೊಂದಲ ಮತ್ತು ಅನಿಶ್ಚಿತತೆಯನ್ನು ನವ್ಯಕಾವ್ಯದ ರೀತಿಯಲ್ಲಿ ವರ್ಣಿಸಿದ್ದಾರೆ.

ಆದರೆ ನಿಜವಾದ ಮುಂಜಾವು ಇನ್ನೂ ಮೂಡಬೇಕಾಗಿದೆ. ಪರದೆಯ ಹಿಂದೆ ಆಳವಾದ ಭಾವಸಮುದ್ರವಿದೆ. ಋಷಿಯೋಪಾದಿಯಲ್ಲಿ ಶಾಂತ ಹಾಗೂ ನಿರ್ವಿಕಾರ ಮನಸ್ಸಿನಿಂದ ಇದನ್ನು ಅಭ್ಯಸಿಸುವ ರೀತಿಯನ್ನು ರೂಢಿಸಿಕೊಳ್ಳಬೇಕು. ಆಗ ಮಾತ್ರ ಒಂದು ಶ್ರೇಷ್ಠ ಕಲಾಕೃತಿ ನಿರ್ಮಾಣವಾಗಬಲ್ಲುದು. ಈ ಕವನದ ಪದ ಜೋಡಣೆಯಲ್ಲಿ, ಭಾರತೀಯ ತತ್ವಜ್ಞಾನದ ನಾನಾ ಮುಖಗಳ ರಚನಾತ್ಮಕ ಸಂಯೋಜನೆಯನ್ನು ಕಾಣಬಹುದು. ಇಲ್ಲಿ ಕಂಡುಬರುವ ಸೂಕ್ಷ್ಮ ಪ್ರತಿಮೆಗಳಿಗೆ ಭದ್ರ, ತಾತ್ವಿಕ ಬುನಾದಿಯಿದೆ.

§ § § §

೩

# ಬೇಂದ್ರೆಯವರ ವಾತ್ಸಲ್ಯವೈಭವ

ಜಿ. ವರದರಾಜರಾವ್

ಇಂದಿನ ಕನ್ನಡಕವಿಗಳಲ್ಲಿ ಕೆಲವರು ನೂರಾರು ಕವನಗಳನ್ನು ಬರೆದು ಹಲವಾರು ಕವನ ಸಂಕಲನಗಳನ್ನು ನಮಗೆ ನೀಡಿರುತ್ತಾರೆ. ಅಂಥವರ ಕೃತಿಗಳನ್ನು ಅಧ್ಯಯನ ಮಾಡಿದಾಗ ಒಬ್ಬೊಬ್ಬರ ಮೂಲಮನೋಧರ್ಮವೇನು ಎನ್ನುವುದು ನಮಗೆ ಸ್ಥೂಲವಾಗಿಯಾದರೂ ಅರ್ಥವಾಗಬಲ್ಲುದು. ಜೀವನವನ್ನು ಪಾವನವೆಂದು ಭಾವಿಸಿ ಅದರ ಅಮೃತವನ್ನು ನೀಡುವವರು ಕೆಲವರಿದ್ದರೆ, ಬಾಳನ್ನು ಗೋಳಿನ ಕರೆಯೆಂದು ತೆಗಳಿ ಅದರ ಹಾಲಾಹಲವನ್ನೇ ಮೊಗೆದು ಕೊಡುವವರೂ ಸಾಕಷ್ಟು ಇದ್ದಾರೆ. ತಮ್ಮ ಆಶಾವಾದದಿಂದ ಆಕಾಶದೆತ್ತರಕ್ಕೆ ನಮ್ಮನ್ನು ಕರೆದೊಯ್ಯುವವರಿದ್ದರೆ, ತಮ್ಮ ನಿರಾಶಾವಾದದಿಂದ ನರಕಕ್ಕೆ ದೂಡುವವರೂ ಉಂಟು. ಬೇಂದ್ರೆಯವರ ವಾಣಿಯಾದರೋ ಅನಂತಮುಖವಾಗಿ ಕೇಳಿಬರುವುದು. ಈ ಜೀವನವು ಎಷ್ಟು ವೈವಿಧ್ಯಮಯವೋ ಅದನ್ನು ಅವಲಂಬಿಸಿ ಅವರು ಸೃಷ್ಟಿಸಿರುವ ಸಾಹಿತ್ಯವೂ ಅಷ್ಟೇ ವರ್ಣಮಯವಾದುದು. ಹಿಗ್ಗಿನಿಂದ ಹಾಡಿದಾಗ ಅವರ ಕವನಧಾರೆ ಅಮೃತವರ್ಷವೆನ್ನಿಸಿದರೆ ಕೊರಗಿ ಬಾಯ್ತೆರೆದಾಗ ಅವರ ಹೃದಯದ ನೋವು ಕರುಳನ್ನೇ ಹಿಂಡಿದಂತಾಗುವುದು. ಈ ಬದುಕಿನ ಸಹಸ್ರ ಮುಖಗಳು ಕವಿಯ ಹೃದಯಾನುಭವವಲ್ಲಿ ಹಾದು ಬಂದಾಗ ಒಂದೊಂದೂ ಒಂದು ರಸದ ಮಡುವಾಗಬಲ್ಲದು. ಜೀವನಕ್ಕೆ ನಲಿವನ್ನೂಡುವ ವಿವಿಧ ಭಾವಗಳಲ್ಲಿ ವಾತ್ಸಲ್ಯವೂ ಒಂದು. ಪ್ರಣಯ ಪ್ರಧಾನವೆನ್ನಿಸಿದಾಗ ಬೇಂದ್ರೆಯವರ ವಾಣಿ ಸಖೀಗೀತವಾಗಿ ಹೊರಹೊಮ್ಮಿ ಹೇಗೆ ರಸಿಕರ ಹೃದಯವನ್ನು ತಣಿಸಬಲ್ಲುದೋ ಹಾಗೆಯೇ ಅಪ್ಪಟವಾದ ಹಾಲಿನ ಕೆನೆಯಂತೆ ಅವ್ಯಾಜವಾದ ವಾತ್ಸಲ್ಯ ಉಕ್ಕಿ ಬಂದಾಗ ಅದು ಕರುಳಿನ ವಚನಗಳಾಗಿ ರೂಪತಾಳಿ ನಮ್ಮ ಮನಸ್ಸನ್ನು ಸೆರೆ ಹಿಡಿಯಬಲ್ಲುದು. ಒಳಗಿನ ಕೊರಗನ್ನು ಕವಿ ಹೊರಗೆ ತೋಡಿಕೊಂಡಾಗ ಅದು ಸವಿಯ ಸೊಲ್ಲಾಗಬಹುದೆಂಬ ಷೆಲ್ಲಿಯ ಸಿದ್ಧಾಂತವಷ್ಟೇ! (Our sweetest songs are those that tell of saddest thought) ಈ ಮಾತನ್ನು

ನಮ್ಮಲ್ಲಿ ಎಷ್ಟು ಜನ ಕವಿಗಳಿಗೆ ಅನ್ವಯಿಸಬಹುದೋ ಏನೋ ನಾ ಹೇಳಲಾರೆ. ಬೇಂದ್ರೆಯವರಾದರೋ 'ಅಳು ನುಂಗಿ ನಗು ಒಮ್ಮೆ ನಾನೂನು ನಕ್ಕೇನs' ಎಂಬ ತತ್ವಸುಧೆಯನ್ನು ಸವಿದ ಮಹಾನುಭಾವರು. ತಮ್ಮ ದುಃಖವೆಷ್ಟೇ ಇರಲಿ ಅದು ಅವರ ರಸಾನುಭವದ ಸ್ಪರ್ಶದಿಂದ ರಸಿಕರಿಗೆ ರಸಾಯನವಾಗಿ ಪರಿಣಮಿಸಿದ ಹಲವಾರು ನಿದರ್ಶನಗಳಿವೆ. ಅಂಥ ಅಪೂರ್ವಸೃಷ್ಟಿಯಲ್ಲಿ ಅವರ 'ಕರುಳಿನ ವಚನಗಳು' ಎಂಬ ಗೊಂಚಲೂ ಒಂದು.

ಬೇಂದ್ರೆಯವರ 'ಉಯ್ಯಾಲೆ'ಯಲ್ಲಿ ಕುಳಿತು ತೂಗಾಡಲು ಹೊರಟಲ್ಲಿ, ಅವರು ನಮ್ಮನ್ನು ತಮ್ಮ ವಾತ್ಸಲ್ಯದ ತೊಟ್ಟಿಲಿನಲ್ಲಿಟ್ಟು ಹಾಡಲು ತೊಡಗುವುದನ್ನು ಕಂಡು ಬೆರಗಾಗುವಂತಾಗುತ್ತದೆ.* ಸಮಗ್ರ ಕನ್ನಡ ಸಾಹಿತ್ಯವನ್ನು ಸಮೀಕ್ಷಿಸಿದಾಗಲೂ ವಾತ್ಸಲ್ಯದ ಸುಳಿವಾಗಲಿ, ಹೊಳಹಾಗಲಿ ಸ್ವಲ್ಪ ವಿರಳವೆಂದೇ ಹೇಳಬಹುದು. ಅಷ್ಟಾದಶವರ್ಣನೆಗಳಲ್ಲಿ ಅದಕ್ಕೆ ಎಡೆ ದೊರೆಯದೆ ಹೋದುದರಿಂದ ನಮ್ಮ ಕವಿಗಳ ಗಮನವೂ ಆ ಕಡೆ ಅಷ್ಟಾಗಿ ಹರಿಯಲಿಲ್ಲವೋ ಏನೊ! ಹಾಗೂ ಒಮ್ಮೊಮ್ಮೆ ಹರಿದಾಗ, ಅದು ಅನೇಕ ವೇಳೆ ಹೆಣ್ಣಿನ ಸಂತಾನಾಪೇಕ್ಷೆಯಲ್ಲಿ ಮುಕ್ತಾಯವಾಗುವುದೇ ವಿನಾ ಸ್ವತಂತ್ರವಾಗಿ ವಿಕಾಸಗೊಂಡಿರುವ ನಿದರ್ಶನಗಳು ಸಾಕಷ್ಟಿಲ್ಲ. ಜನಪದ ಸಾಹಿತ್ಯ ಹಾಗೂ ಹರಿದಾಸ ಸಾಹಿತ್ಯಗಳಲ್ಲಿ ಪ್ರಾಸಂಗಿಕವಾಗಿ ಕಂಡುಬರುವ ವಾತ್ಸಲ್ಯದ ನಿರೂಪಣೆ ಈ ಕೊರತೆಯನ್ನು ತಕ್ಕಮಟ್ಟಿಗೆ ಹೋಗಲಾಡಿಸಿದೆಯೆಂದರೆ ತಪ್ಪಾಗಲಾರದು. ಹಳೆಯ ಸಾಹಿತ್ಯದ ಮಾತು ಹಾಗಿರಲಿ; ಹೊಸಗನ್ನಡ ಸಾಹಿತ್ಯದಲ್ಲಿಯೂ ಈ ನವನೀತಾನುಭವವನ್ನು ಬೇಂದ್ರೆಯವರಷ್ಟು ಗಾಢವಾಗಿ, ಗೂಢವಾಗಿ, ಹೃದಯಸ್ಪರ್ಶಿಯಾಗಿ, ವೈವಿಧ್ಯಪೂರ್ಣವಾಗಿ, ರಸವತ್ತಾಗಿ ನಿರೂಪಿಸಿದವರು ಎಷ್ಟು ಜನ ದೊರೆತಾರು? ಈ ಅಪೂರ್ವ ನಿಧಿಯನ್ನು ಸ್ವಲ್ಪಮಟ್ಟಿಗೆ ಇಲ್ಲಿ ಪರಿಚಯ ಮಾಡಿಕೊಡುವುದೇ ನನ್ನ ಉದ್ದೇಶ.

ಈ ಮೊದಲೇ ಸೂಚಿಸಿದಂತೆ ಬೇಂದ್ರೆಯವರ 'ಕರುಳಿನ ವಚನಗಳ' ಹಿನ್ನೆಲೆಯೇನೋ ಕರುಳು ಹಿಂಡುವಂತಹುದೇ ಸರಿ. ಅದು ಕವಿಯ ಪಾಲಿಗೆ ಪಾಡಾಗಿ ಮಿಡಿದರೆ ನಮ್ಮ ಪಾಲಿಗೆ ಹಾಡಾಗಿ ಲಭಿಸಿದೆ. ಈ ವಾತ್ಸಲ್ಯ ಪ್ರಕರಣದ ಮೊದಲಿನ ಎಸಳೇ ತಮ್ಮ ಕ್ಷೇಮೇಂದ್ರನಿಗೆ ಕವಿ ಕೊಟ್ಟ ಕಂಬನಿಯ ಕಾಣಿಕೆ. ಎಂಥವರ ಕವನದಲ್ಲಿಯೇ ಆಗಲಿ ಆಡಿದ ಮಾತೆಲ್ಲವೂ ಅಪರಂಜಿಯಾಗುವುದು ಅಸಂಭವ. ಒಂದೆರಡು ಮಾತುಗಳೋ, ಪಂಕ್ತಿಗಳೋ ಮಾಣಿಕ್ಯವೆನ್ನಿಸಿದರೆ ಉಳಿದುವು ಅವುಗಳಿಗೆ ಪೋಷಕವೆನ್ನಿಸುವುದು ಸಹಜ. ಪ್ರಕೃತದಲ್ಲಿ 'ಅರ್ಪಣ–ತರ್ಪಣ' ಎಂಬ ವಚನದಲ್ಲಾದರೋ ಒಂದೊಂದು ಪದವೂ ಪ್ರಶಸ್ತವೆನ್ನಿಸುತ್ತದೆ.

* 'ಉಯ್ಯಾಲೆ' ಎಂಬ ಕವನ ಸಂಕಲನದಲ್ಲಿ (೧೯೩೮) 'ಕರುಳಿನ ವಚನಗಳು' ಎಂಬುದು ಒಂದು ಭಾಗ.

ಹೀಗಿರುವಲ್ಲಿ ವಾಕ್ಯವನ್ನು ಆಯ್ದು ಉದಾಹರಿಸುವುದು ಎಷ್ಟು ಕಷ್ಟವೆಂದು ಬೇರೆ ಹೇಳಬೇಕಾಗಿಲ್ಲ. 'ಪುಷ್ಪವಿದ್ದಂತೆ ಮೊಗ್ಗೆಯನರ್ಪಿಸಿಕೊಂಡ ಶಿವನು! ಪಕ್ವವಾದ ಫಳವಿದ್ದಂತೆ ಕಸುಗಾಯ ಕೊಯ್ದನು ಶಿವನು!' ಎಂಬ ಪುರಾತನ ಉಕ್ತಿಯೊಂದನ್ನು ಜಪಿಸುತ್ತಿದ್ದಾಗ ಕವಿಗೆ ತಮ್ಮ ಕ್ಷೇಮೇಂದ್ರನನ್ನು ಕಳೆದುಕೊಂಡ ತಾಪ ತಟ್ಟಿ, ಬಿಟ್ಟ ಸಿಟ್ಟುಸಿರೇ ಮಾತಾಗಿ ಹೊಮ್ಮುತ್ತದೆ. "ಕೊಳಲಾಗಬಹುದಾಗಿತ್ತು, ಕಳಿಲಿದ್ದಾಗಲೇ ಕಡಿದ ಕಾಳ!.... ಮನೆಯವನೆಂದು ತಿಳಿದಿದ್ದೆ ಅವನಾದ ಅತಿಥಿ!.... ಹುಳಹುಪ್ಪಡಿಯ ತಿನಸಾಯಿತು ಮೋಹದ ಮುದ್ದೆ! ಜೀವಗಳೆದ ದೇಹವನ್ನು ಕಣ್ಣೀರ್ಸುರಿಸಿ ಕೊಟ್ಟೆ ಕೃಷ್ಣಾರ್ಪಣವೆಂದು ಪಿತನ ಪಾಪದ ಪಿಂಡ ಕಣ್ಮರೆಗಾಯಿತು; ಪುಣ್ಮರೆಯಾಯ್ತು.... ಮಾತೆಯ ಶಾಪದ ಮೂರ್ತಿ ಬಯಲಾಯಿತು"— ಇಂಥ ಒಂದೊಂದು ಮಾತೂ ಜೀವನದ ಕುಲುಮೆಯ ಮೇಲೆ ನೋವಿನ ಸುತ್ತಿಗೆಯನ್ನು ಎತ್ತಿ ಬಡಿದಾಗ ಸಿಡಿದ ಕಿಡಿಯಂತಿದೆ. ಆದರೆ ಹೃದಯ ವಿದ್ರಾವಕವಾದ ಇಂಥ ಘಟನೆಯೂ ಕವಿಗೆ ಜೀವನದ ಒಳಗುಟ್ಟನ್ನು ಬಿಡಿಸಿ ತೋರುವ ಒಂದು ಸಂಹಿತೆಯಾಗಿದೆ. 'ನಿಮಿತ್ತ ಮಾತ್ರ, ಕ್ಷಣಿಕವಾಗಿ ಬಂದ ಕೂಸೇ! ಸಂಸಾರದ ಸವಿ ಸುಖದುಃಖದ ಸರಿಬೆರಿಕೆಯೆಂದು ಕಲಿಸಿದೆ' ಎಂದು ಮನಗಾಣುವರು. ಕಂದ ಕಣ್ಮರೆಯಾದರೂ, ಉಕ್ಕಿ ಬಂದ ಅಕ್ಕರೆ ಅಲ್ಲಿಯೇ ಬತ್ತಿ ಹೋಗಲಿಲ್ಲ. ಅದಕ್ಕಾಗಿಯೇ ಅವರು 'ಆದರೆ, ನಿಜವಾದ ಅಖಂಡ ಪ್ರೀತಿ ಝರಿಯನ್ನು ಪ್ರವಹಿಸಿದೆ, ಅದರ ತೀರಸಿವಾಸಿಯಾದ ಈ ವಾಣಿ ಹಾಡುವುದು' ಎಂದು ದನಿಯೆತ್ತಿ, ಮುಂದೆ ಒಂದೊಂದಾಗಿ ತಮ್ಮ ಕರುಳಿನ ವಚನಗಳನ್ನು ನಿರೂಪಿಸ ತೊಡಗುವರು. ಅನಿರೀಕ್ಷಿತವಾಗಿ ಬೆನ್ನಟ್ಟಿ ಬಂದ ಇಂಥ ದುರ್ಮ್ಮಾನವನ್ನು ಅದುಮಿಟ್ಟು "ನನ್ನ ಮನದ ಸುಮ್ಮಾನಕ್ಕಾಗಿ ಈ ಕಾವ್ಯ ತಂದೆ ಕೊಟ್ಟ ಮುದ್ದು" ಎಂದು ಹೇಳುವ ಎದೆಗಾರಿಕೆಯಾಗಲಿ, ಕಲೆಗಾರಿಕೆಯಾಗಲಿ ಎಷ್ಟು ಜನರಿಗೆ ಸಾಧ್ಯ? 'ಅಜ್ಜಿ ಅಮ್ಮಂದಿರ ಸಮಾಧಾನಕ್ಕಾಗಿ' ಆಡಿದ ಈ ಒಂದೊಂದು ವಚನವೂ, ಕವಿಸಹಜವಾದ ಹೃದಯ ಮಾತೃವಾತ್ಸಲ್ಯಕ್ಕೆ ಮಣಿದಾಗ ಎಂಥ ಅಪೂರ್ವವಾದ ಅಮೃತವನ್ನು ನೀಡಬಲ್ಲುದೆಂಬುದನ್ನು ವಿದಿತಪಡಿಸುತ್ತದೆ.

ಹೆಣ್ಣಿನ ಹಂಬಲವೆಲ್ಲ ಕುದಿಕುದಿದು, ಅದು ಕಂದನಾಗಿ ಅವತರಿಸಿ ಬಂದಾಗ ಆಕೆಗಾಗುವ ಆನಂದ, ಆಶ್ಚರ್ಯ, ಆತಂಕಗಳನ್ನು ವರ್ಣಿಸಿ ಹೇಳಲು ಸಾಧ್ಯವೆ? ಭಾವುಕ ಹೃದಯಕ್ಕೆ ಅದು ವೇದ್ಯವಾದಾಗ ಸಾಧ್ಯವಾದೀತು ಎಂಬುದಕ್ಕೆ ಈ ವಚನ ಸಂಕಲನದ 'ಕಂಡೆ' ಎಂಬ ರಚನೆಯೇ ಸಾಕ್ಷಿ. ಹೂವಿನೆಸಳಿಗಿಂತಲೂ ಕೋಮಲವಾಗಿರುವ ತನ್ನ ಹಸುಗೂಸನ್ನು ಕಂಡ ತಾಯಿ 'ನನ್ನ ಬಯಕೆಗಳ ಬಸಿರಲ್ಲಿ ಮೊಳೆದ, ನನ್ನ ಬಸಿರಿನ ಬಯಕೆಯಲ್ಲಿ ಹೊಳೆದ ಮುದ್ದು ಮೊಗವೆ! ಬಂದೆಯಾ ಇಂದು ಕಂದನಾಗಿ ನನ್ನೊಡಲಲಿ?' ಎಂದು ಆಶ್ಚರ್ಯ–

ಚಕಿತಳಾಗಿ ಪ್ರಶ್ನಿಸುವಳು. ಆವರಿಗೆ ತಾನು ಕಲ್ಪಿಸಿಕೊಂಡಿದ್ದ ಒಂದೊಂದು ಚಿತ್ರವನ್ನೂ ಬಿತ್ತರಿಸುವಳು.

ನನ್ನ ಮನಸಿನ ಹಂದರದಲ್ಲಿದ್ದ ಒಲವಿನ ಮಿಡಿಯೆ !
ನನ್ನ ಕನಸಿನ ಗುಡಿಯಲ್ಲಿದ್ದ ನಲಿವಿನ ಕುಡಿಯೆ !
ನನ್ನ ನನಸಿನ ಬಸಿರಲ್ಲಿದ್ದ ಚೆಲುವಿನ ಕೈಪಿಡಿಯೆ !
ಕೈಗೆ ಬಂದು 'ಕಂಡೆನು' ಎನ್ನಿಸಿದ ಕಂದಯ್ಯಾ !

ಹೆಣ್ಣಿನ ಹಿಗ್ಗನ್ನು ಇದಕ್ಕಿಂತ ಹಿರಿದಾಗಿ ಹೇಳಲು ಸಾಧ್ಯವೆ ? ಆಕೆಯ ಮನೋಭಾವವನ್ನೆಲ್ಲ ಕವಿ ಬಹಳ ಸಹಜವಾಗಿ ವ್ಯಕ್ತಪಡಿಸಿದ್ದಾರೆ. ಕಂಡ ಮಾತ್ರದಿಂದ ಈ ಸುಖ ಪೂರ್ಣವಾಗುವುದಿಲ್ಲ. ಆ ವಾತ್ಸಲ್ಯದ ಸವಿಯನ್ನೂ ಚಪ್ಪರಿಸಬೇಕಷ್ಟೆ. ಅದಕ್ಕಾಗಿಯೇ ಈ ವಚನ—'ಉಂಡೆನು' ಎನ್ನಿಸುವೆಯಾ—ಬಾಯಿಗೆ ಬಂದು— ಮುದ್ದೆ ? — ಎಂಬ ಕೋರಿಕೆಯಲ್ಲಿ ಉಚಿತವಾಗಿ ಕೊನೆಗೊಳ್ಳುವುದು.

ಎಳೆಯ ಮಗುವಿನ ಒಂದೊಂದು ನಿಲುವೂ ತಾಯಿಗೆ ಗೆಲುವನ್ನುಂಟು ಮಾಡುವುದರಲ್ಲಿ ಸಂದೇಹವಿಲ್ಲ. ಅದರ ಆಟಪಾಟಗಳನ್ನು ಕಂಡಾಗ ಆಕೆಗೆ ಎಷ್ಟು ಕೊಂಡಾಡಿದರೂ ತೃಪ್ತಿಯಿಲ್ಲ. ದೈವಸೃಷ್ಟಿಯಲ್ಲಿ ಒಂದೊಂದು ಪ್ರಾಣಿಗೆ ಒಂದೊಂದು ವಿಶಿಷ್ಟವಾದ ಬೆಡಗುಂಟು; ಲಾವಣ್ಯವುಂಟು. ಆ ಸಮಸ್ತ ಸೌಂದರ್ಯವನ್ನು ತಾಯಿಯಾದವಳು ತನ್ನ ಮಗುವಿನಲ್ಲಿಯೇ ಕಾಣಬಯಸುವಳು.

ನನ್ನ ಮದ್ದಾನೆಯೆ ! ನಿನ್ನ ತೋಳ ಸೊಂಡಿಲಾಡಿಸಪ್ಪಾ
ಮಗುವೆ ! ಆಡು-ಆಡು.
ನನ್ನ ಪಾರಿವಾಳವೆ ! ನಿನ್ನ ಗೋಣನ್ನಾಡಿಸಪ್ಪಾ
ಮಗುವೆ ! ಆಡು-ಆಡು.
ನನ್ನ ಅರಸಂಚೆಯೆ ! ಅಡಿಯಿಡು, ನಡೆ ನಡೆ
ಮಗುವೆ ! ಆಡು-ಆಡು.
ನನ್ನ ಅರಗಿಳಿಯೆ ! ತುಟಿ ಬಿಚ್ಚು, ನುಡಿ ನುಡಿ
ಮಗುವೆ ! ಆಡು-ಆಡು.

ಮದ್ದಾನೆಯ ಸೊಂಡಿಲಾಟ, ಪಾರಿವಾಳದ ಗೋಣಕುಣಿತ, ಅರಸಂಚೆಯ ನಡೆ-ಬೆಡಗು, ಅರಗಿಳಿಯ ಗಳಹು, ನವಿಲಿನ ಲಾಸ್ಯಗಳು ಹೃದಯಂಗಮವಾದುವು. ಮಗುವಿನ ತೊದಲ್ನುಡಿಯನ್ನು ಕೇಳಿದಾಗ ಆಕೆಯ ಹೃದಯ ಹರುಷದ ಹೆಗ್ಗಡಲಾಗುತ್ತದೆ. 'ನನ್ನ ಪುಟ್ಟ ಪುರಂದರವಿಠಲಾ, ಕೈಯ ತಾರಮ್ಮಯ್ಯಕ್ಕೆ

ತೊದಲು ನುಡಿಯು ಶಿಲ್ಪಾಲಿಣ ಬಾಯಬಿಲ್ಲವ ಚಪ್ಪರಿಸಿ ಕಾಯಪರವಶನಾದೆ' ಎಂದು ಮೈಮರೆಯುವಳು. 'ಮಾತಿನ ಸೂತಕವಿಲ್ಲದನಾದವ ನಾದುವ ಸೊಲ್ಲ'ನ್ನು ಆಲಿಸಿ, 'ಅರ್ಥದ ಪಾತಕವಿಲ್ಲದ ಜೀವದ ಭಾವದ ಸೊಲ್ಲ'ನ್ನು ಲಾಲಿಸಿ, ಅದರ ಅಂತರಾಳ ವನ್ನು ಬಿಡಿಸಲರಿಯದೆ 'ನಿನ್ನೀ ಪಾಡು ವಾಚಾಮಗೋಚರವೇ– ಈ ನಿನ್ನ ಧ್ವನಿ ಕಾವ್ಯ' ಎಂದು ವಿಸ್ಮಯಪಡುವಳು 'ಹಂಗ ಹಿಂಗಿಸಲು ಬಂದೆಯೊ ? ಭವವ ಭಂಗಿ-ಸಲು ಬಂದೆಯೋ ? ಜಗದಿ ಏತಕ್ಕೆ ಬಂದೆನ್ನ ರಂಗನಾಥಾ !' ಎಂದು ತನ್ನ ಮಗು ವಿನ ಆಗಮನದ ರಹಸ್ಯವನ್ನೇ ಭೇದಿಸತೊಡಗುವಳು. 'ನನ್ನ ನನಸಿನ ನನೆಯೇ ! ನನ್ನ ಕನಸಿನ ಕೆನೆಯೆ ! ಹಣ್ಣಾಗುವೆಯಾ ಬಳಗದ ಬನದಲ್ಲಿ ? ಬೆಣ್ಣೆ ಯಾಗುವೆಯಾ ಜಗದ ಹುಳಿತಿಳಿಯಲ್ಲಿ ?' ಎಂದು ಕಂದಮ್ಮನ ಬಾಳಿನ ಜಾಡನ್ನೇ ರೂಪಿಸಿಕೊಂಡು 'ಸಂಸಾರವೆಂಬ ಕಡಲ ಉಕ್ಕಿನ ತೆರೆಗಳ ತ್ರಕ್ಕೆಯಲ್ಲಿ ಕೂಡಿ ಬಂದ ಮರದ ತುಂಡುಗಳಂತಿರಬಹುದೇ ನೀನು ನನ್ನ ಪಡೆದುದು, ನಾನು ನಿನ್ನ ಹಡೆದುದು ?' ಎಂದು ಸೋಜಿಗಗೊಳ್ಳುವಳು.

ಬಗೆಹರಿಯದ ಈ ಪ್ರಶ್ನೆಗಳ ಸುರಿಮಳೆಯನ್ನು ಅತ್ತ ಒತ್ತಟ್ಟಿಗಿಟ್ಟು ಮಗು ವಿನ ಲೀಲಾವಿನೋದಗಳನ್ನು ನೋಡುತ್ತಿದ್ದಂತೆಯೇ ತಾಯಿಯಾದವಳಿಗೆ ಅದು ಪರಮಾತ್ಮನ ಪ್ರತಿನಿಧಿಯೆನ್ನಿಸಿ, ವಿಷ್ಣುವಿನ ದಶಾವತಾರದ ಲೀಲೆಗಳೆಲ್ಲ ತನ್ನ ಮಗುವಿನಲ್ಲಿಯೇ ಅಳವಟ್ಟಿರುವಂತೆ ಅನುಭವವಾಗುವುದು. ಕವಿಯ ಈ ರಮ್ಯ ಕಲ್ಪನೆಯನ್ನೂ, ಬಾಲಲೀಲೆಯ ಈ ನೂತನ ವ್ಯಾಖ್ಯಾನವನ್ನೂ ನೋಡಿ :

ನೆಲದ ಮೇಲೆ ಈಸುವುದು,
ನೋಡಿದಿರಾ ಮೀನಾವತಾರ !
ಮನುಕುಲೋದ್ಧಾರಕ ನನ್ನ ಕುವರ !

ಬಯಲನ್ನೆಲ್ಲ ಬೆನ್ನಲಿ ಹೊತ್ತಿರುವುದು,
ನೋಡಿದಿರಾ ಕೂರ್ಮಾವತಾರ !
ವಂಶಾಧಾರಸ್ತಂಭ ನನ್ನ ಕುವರ !

ಮುಗಿಲನ್ನೆ ಮೊಗದಿಂದೆತ್ತಲು ಹವಣಿಸುವುದು,
ನೋಡಿದಿರಾ ವರಾಹಸ್ವಾಮಿ !
ಹೂಂಕರಿಸುವ ನನ್ನ ಕುವರ !

ತನ್ನ ತಾಯ ಬಸಿರನ್ನೆ ಬಗೆದು ಅವಳ ಕರುಳ ಮಾಲೆಯನ್ನು
ಧರಿಸುವ ವಿಚಿತ್ರ ನರಸಿಂಹಸ್ವಾಮಿ !
ನೋಡಿದಿರಾ ಬಾಲ ಪ್ರಹ್ಲಾದ ನನ್ನ ಕುವರ !

ತಾಯಿಯ ಮೇಲೆ ಕೈಯೆತ್ತಲು ಬಂದ
ದಿಟ್ಟ ಪರಶುರಾಮನ ಕಂಡಿರಾ!
ಶಾಪಚಾಪ ಸವ್ಯಸಾಚಿ ನನ್ನ ಕುವರ!

ಪ್ರತಿಯೊಬ್ಬರೂ ಪ್ರತಿನಿತ್ಯವೂ ತಮ್ಮ ತಮ್ಮ ಮಕ್ಕಳಲ್ಲಿ ಕಾಣುವ ಚಿರಪರಿಚಿತವಾದ ಬಾಲಲೀಲೆಗಳೇ ಕವಿಯ ಕಣ್ಣಿಗೆ ಎಂತಹ ಅನುಪಮವಾದ ಲೀಲೆಗಳೆನ್ನಿಸಿವೆ! ಮಗುವಿನಲ್ಲಿ ಭಗವಂತನ ಅಂಶವನ್ನು ಗುರುತಿಸುವ ಈ ದರ್ಶನ ತುಂಬ ಸ್ತುತ್ಯವಾದುದು.

ತಾಯಿಯ ಅಂತಃಕರಣಕ್ಕೆ ಪಾರವೇ ಇಲ್ಲ. ಎಳೆಯ ಮಗು ತನ್ನ ಮುಷ್ಟಿಯನ್ನು ಮುಚ್ಚಿಕೊಂಡಿರುವುದನ್ನು ನಾವೆಲ್ಲರೂ ಕಂಡಿರುವೆವಷ್ಟೆ! ಆದರೆ ಅದರ ಅರ್ಥವನ್ನೇನಾದರೂ ನಾವು ಬಲ್ಲೆವೆ ? ಸುತರಾಂ ಇಲ್ಲ! ಕವಿಯ ಕುತೂಹಲ ಆ ರಹಸ್ಯವನ್ನೂ ಭೇದಿಸಲು ಹವಣಿಸುತ್ತದೆ. ತಾಯಿಗೆ ಆ ಮುಷ್ಟಿಯನ್ನು ಬಿಚ್ಚಿ ನೋಡಲೇ ಎಂಬ ತವಕ! ಆದರೆ ಮರುಗಳಿಗೆಯಲ್ಲಿಯೆ ಆ ಗುಟ್ಟನ್ನು ಒಡೆದು ನೋಡಬಾರದೆಂಬ ಸಂಯಮ! ಆದರೇನು ? ಕಲ್ಪನೆಗೇನು ಅಡ್ಡಿಯುಂಟೆ ? ಪ್ರಶ್ನೆಗಳ ಸುರಿಮಳೆ ಮೊದಲಾಗುತ್ತದೆ. ಆಕೆ ತನಗೆ ತಾನೇ ಪ್ರಶ್ನಿಸಿಕೊಂಡು, ಭಾವಪೂರ್ಣವಾದ ಉತ್ತರವನ್ನೂ ಕಂಡುಕೊಂಡು ಸಮಾಧಾನಪಡುತ್ತಾಳೆ, 'ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ ಮೂಲೋಕದೊಡೆತನವಿರಬಹುದು. ತೆರೆದು ನೋಡಲೆ.... ? ಬೇಡ! ಭಾಗ್ಯ ತೆರೆದಮೇಲೆ ಕೈ ತೆರೆವುದೇನು ತಡ ?,' 'ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ ಕುಬೇರನ ಸಂಪತ್ತಿಯಿರಬಹುದು. ತೆರೆದು ನೋಡಲೆ....? ಬೇಡ! ಕೊಡುಗೈ–ದೊರೆಯಾದ ಮೇಲೆ ಕೈ ತೆರೆವುದೇನು ತಡ ?' — ಹೀಗೆ ಅಲ್ಲಿ ಹುದುಗಿರಬಹುದಾದ ಅನಂತಶಕ್ತಿಗಳನ್ನೂ, ಸಂಪತ್ತನ್ನೂ ಮಾತೃಹೃದಯ ಪರಿಭಾವಿಸಿ, ಕಡೆಗೆ ಮುಷ್ಟಿಯನ್ನು ಬಿಚ್ಚಿ ನೋಡುವುದಕ್ಕಿಂತಲೂ ಅದರ ರಹಸ್ಯವನ್ನು ಹಾಗೆಯೇ ಉಳಿಯಗೊಡುವುದು ಲೇಸೆಂಬ ಕಲ್ಪನೆ ಧ್ವನಿಪೂರ್ಣವಾದುದು. ಅಷ್ಟೇ ಅಲ್ಲ, ತಾನು ಭಾವಿಸಿದ್ದೆಲ್ಲ 'ಅಂಗೈಯಲ್ಲಿರದಿದ್ದರೂ ಮುಂಗೈಯಲ್ಲಾದರೂ ಇರಬಹುದು' ಎಂದು ಮುಕ್ತಾಯವಾಗುವ ವಾಕ್ಯವಂತೂ ತಾಯಿಯ ನಿರೀಕ್ಷೆಗೆ ಎಂದಿಗೂ ಸೋಲಿಲ್ಲವೆಂಬ ತತ್ವವನ್ನು ಸಾರಿ ಹೇಳುವಂತಿದೆ.

ಹೀಗೆಯೇ ಕ್ಷಣಕ್ಷಣವೂ, ದಿನದಿನವೂ ತನ್ನ ವಿವಿಧ ವಿಲಾಸಗಳಿಂದ ಮರುಳು ಮಾಡುವ ಮಗುವನ್ನು ಕಂಡ ತಾಯಿಗೆ ಒಮ್ಮೆ ಅವನು ಮಲ್ಲಾರಿ ಮಾರ್ತಂಡನೆನ್ನಿಸಿದರೆ, ಇನ್ನೊಮ್ಮೆ ಗುಡ್ಡದ ಕುಮಾರಸ್ವಾಮಿಯಾಗಿ ತೋರಿಬರುತ್ತಾನೆ. ಅವನ ನೈಜವಾದ ಅಂದಚೆಂದಗಳನ್ನು ಕಂಡಾಗ ರತಿಯಿಲ್ಲದ

ಕಾಮಣ್ಣನೆನ್ನಿಸಿದರೆ, ಪವಡಿಸಿಕೊಂಡಿರುವಾಗ ಅನಂತಶಯನನ ನೆನಪಾಗುತ್ತದೆ. ಅವನೊಬ್ಬನಲ್ಲಿಯೇ ಜೋಕುಮಾರ, ವೆಂಕಟರಮಣರು ನೆಲಸಿರುವಂತೆ ಭಾಸವಾಗುವುದು. ಟೊಂಕದ ಮೇಲೆ ಕೈಯಿಟ್ಟು ನಿಂತ ಪೋರನನ್ನು ನೋಡಿದ ಕೂಡಲೆ ಆಕೆ 'ಅವ್ವಾ ನೋಡಿರೆ! ಮುದ್ದು ವಿಠ್ಠಲನ, ದಾಸರ ದಾಸನ, ಟೊಂಕದ ಮೇಲೆ ಕೈಯಿಟ್ಟವನ' ಎಂದು ಪರಮಾನಂದದಿಂದ ಪುಳಕಿತಳಾಗುವಳು.

ಎಳೆಮಗುವಿನ 'ಅಳು ಚೆನ್ನವೋ ನಗು ಚೆನ್ನವೋ?' ಎಂದು ಯಾರಾದರೂ ಪ್ರಶ್ನೆ ಹಾಕಬಹುದಲ್ಲವೆ? ಅದಕ್ಕೆ ಬೇಂದ್ರೆಯವರ ಉತ್ತರ ಸಿದ್ಧವಾಗಿಯೇ ಇದೆ. 'ನನ್ನ ಬೆಲ್ಲದಚ್ಚಿನ ಬೊಂಬೆಯೆ! ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ' ಎಂದು ಹೇಳತೊಡಗುವ ತಾಯಿ, ತನ್ನ ಮಗುವಿನ ಆ ಅಳು-ನಗುಗಳ ಸವಿಯನ್ನೆಲ್ಲ ಚಿತ್ರಿಸಿ, ಕಡೆಯಲ್ಲಿ—'ನೀನು ನಕ್ಕರೆ ಬೆಳಕಿನ ಬೆಳೆ, ನೀನು ಅತ್ತರೆ ಮುತ್ತಿನ ಮಳೆ; ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ' ಎಂದು ಎರಡನ್ನೂ ಸಮನ್ವಯ ಮಾಡಿರುವ ಆ ಮಾತುಗಳು ಎಷ್ಟು ಸರಳವೋ ಅಷ್ಟೇ ಸಾರವತ್ತಾಗಿವೆ. ಇಷ್ಟಾದರೂ ಮಗುವಿನ ಮನಸ್ಸನ್ನು ಅರಿತವರಾರು? 'ನಕ್ಕರೆ ನಕ್ಕೇ ನಗುವುದು, ಅತ್ತರೆ ಅತ್ತೇ ಅಳುವುದು—ಒಮ್ಮೊಮ್ಮೆ.' ಅದಕ್ಕಾಗಿಯೇ ಆಗ ಅದನ್ನು 'ಹುಚ್ಚು ಖೋಡಿ' ಎಂದು ಕರೆಯುವಳು. ಮಗುವಿನ ಮುಗುಳ್ನಗೆಯನ್ನು ಕಂಡಾಗ ಅದಕ್ಕಿಂತಲೂ ಮಿಗಿಲಾದ ಸುಖವಿಲ್ಲವೆನ್ನಿಸುವುದು. ಅದಕ್ಕೆ ಟೀಕೆ ಬರೆಯಲು ಸಾಧ್ಯವೆ ಎಂದು ಕೇಳಿದರೆ ಮಾತೃ ಹೃದಯ ಅರ್ಥಕಲ್ಪಿಸುವುದಕ್ಕೆ ಹಿಂಜರಿಯುವುದಿಲ್ಲ. 'ಅಂತರಗಂಗೆಯರಿಯದ ಗಂಗೆ-ನಿನ್ನ ನಗೆ' ಎಂದು ಮಗುವಿನ ನಗೆಯನ್ನು ಮೆಚ್ಚಿಕೊಂಡು, ಅದು 'ಎಳನೇಸರಿನ ಹೊಂಬಿಸಿಲ ಕಂದಿಸಿತು' 'ಮಳೆಗಾಲ ಸಂಜೆಯ ಹೂಬಿಸಿಲ ಬಾಡಿಸಿತು' 'ಮಾಗಿಯಿರುಳ ಬೆಳುದಿಂಗಳ ಮರೆಯಿಸಿತು' 'ಗಗನಕ್ಕೇರಿ ಗಲ್ಲಿಸಿ ತಾರೆಗಳನು ತುಳುಕಾಡಿಸಿತು,' 'ಅಸ್ತವನರಿಯದ ಬೆಳ್ಳಿ-ನಿನ್ನ ನಗೆ' ಎಂದು ಸಾಧಾರವಾಗಿ ಸಮರ್ಥಿಸಬಲ್ಲಳು.

ಮಗುವಿನ ಮೈಸೋಂಕಿನ ಸುಖ ಅನಿರ್ವಚನೀಯ. ಅದರ ಮುದ್ದುಮೊಗ ಮೋಹಿಸಿಯ ಕೈಯೊಳಗಿನ ಮೋಹಪಾತ್ರಸಮಾನವಾದುದು. ಆ ಮುಖರಸದ ಸವಿಯನ್ನು ಅದರ ಅಂಗಾಂಗಗಳಲ್ಲಿ ನೆಲಸಿರುವ ದೇವದೇವತೆಗಳಲ್ಲಿ ಬಲ್ಲರು. ಆ ಮುಖದಿಂದ ಹೊಮ್ಮಿ ಬರುವ ಸೊಲ್ಲಾಗಲಿ, ಜೊಲ್ಲಾಗಲಿ ವಾತ್ಸಲ್ಯದ ಸೆಲೆಯನ್ನೇ ತೆರೆದು ತೋರಿಸುತ್ತದೆ. ಬಂಜೆಗೂ ತಾಯಿಯಾಗುವ ಹಂಬಲವನ್ನು ಮಿಡಿಯಬೇಕಾದರೆ ಇನ್ನು ಹೇಳುವುದೇನು? ಆ ಮುಖದಲ್ಲಿ ಮೊಳೆವಲ್ಲ ಮಿಂಚೋ, ಚೀರು ತೊದಲ ಗುಡುಗೋ ಕಾಣಿಸಿಕೊಂಡು,

ಸಂತೋಷದ ಸುಧಾರಸವೋ ಎಂಬಂತೆ ಮುಖರಸವನ್ನು ಸೋನೆಗರೆದಾಗ, ತಾಯಿಯ ಮೈ ನವಿರೇಳದಿರಲು ಸಾಧ್ಯವೆ? ಆ ರಸರೋಮಾಂಚನವೇ ವಾತ್ಸಲ್ಯದ ಬೆಳೆ; ಅದನ್ನು ಪಡೆದ ಜೀವರಾಯನೆಂಬ ಒಕ್ಕಲಿಗ ಧನ್ಯನಾಗುತ್ತಾನೆ. (ಇದೇ ಸಂದರ್ಭದಲ್ಲಿ 'ಶಿರಾಘ್ರಾಣ' ವನ್ನು ಕುರಿತ ಒಂದು ಕವಿತೆ ಏಕೆ ಕವಿಗೆ ಸ್ಫುರಿಸಲಿಲ್ಲವೋ ಏನೋ?)

ಇಂಥ ಹಾಲು ಹಸುಳೆಗೆ ತನ್ನ ಮೊಲೆವಾಲನ್ನು ಕುಡಿಸುವ ಆ ತಾಯಿಯ ಸೌಭಾಗ್ಯ ಹೇಳತೀರದು! ಆ ಮಾತೆಯ ಪುಣ್ಯವನ್ನೂ ಆನಂದವನ್ನೂ ಬೇಂದ್ರೆಯವರು ಆಕೆಯ ಬಾಯಿಂದಲೇ ಅತ್ಯಂತ ರಮಣೀಯವಾಗಿ ತಿಳಿಸಿದ್ದಾರೆ.

> ನನ್ನ ಬಾಲಗೋಪಾಲನ ಗೋದಲೆಗಳವ್ವಾ ಇವು;
> ಕಪಿಲೆಕಾಮಧೇನುಗಳು ಕಟ್ಟಿಹವಿಲ್ಲಿ
> ಅವನಿಗೇನು ಕಡಿಮೆ ?
>
> × × × × ×
>
> ವಾತ್ಸಲ್ಯದ ವಿಜಯಯಾತ್ರೆಯಲ್ಲಿ
> ನನ್ನ ಕಂದನೂದುವ ಅವಳಿ ಶಂಖಗಳಿವು
> ಅವನಿಗೇನು ಕಡಿಮೆ ?
>
> × × × × ×
>
> ಹಾಲಿನ ಬಟ್ಟಲುಗಳಲ್ಲ; ಮಾಂಸದ ಬಟ್ಟಲುಗಳಲ್ಲ
> ಜಗದಂಬೆಯು ಜೀವಶಿಶುವನ್ನು ಮಲಗಿಸಿ ತೂಗುವ
> ತೊಟ್ಟಿಲ ಕಾಲುಗಳಿವು–
> ಅವನಿಗೇನು ಕಡಿಮೆ ?

ಇಲ್ಲಿನ ಒಂದೊಂದು ಮಾತೂ ಅಮೃತದ ಬಿಂದುಗಳಂತಿವೆ. ಪ್ರತಿಭಾಶಾಲಿಯಾದ ಕವಿಯ ವಾಣಿಯಲ್ಲಿ ನಿರ್ಮಲವಾದ ಅಂತಃಕರಣ ಹೇಗೆ ದಾಂಗುಡಿಯಿಡಬಹುದೆಂಬುದನ್ನು ಇಲ್ಲಿ ಯಾರಾದರೂ ಮನಗಾಣಬಹುದು. ಅಕ್ಕರೆ ತುಂಬಿಬಂದಿರುವ ತಾಯಿ ತನ್ನ ಮೊಲೆವಾಲನ್ನು ಮಗುವಿಗೆ ನೀಡುವಲ್ಲಿ ಎಂಥ ಸುಖವನ್ನು ಅನುಭವಿಸುತ್ತಾಳೆ ಎಂಬುದನ್ನು ಇಲ್ಲಿ ಅತ್ಯಂತ ಭಾವಪೂರ್ಣವಾಗಿ ಚಿತ್ರಿಸಲಾಗಿದೆ. ವಾತ್ಸಲ್ಯದ ಮುಂದೆ ಬೇರೆ ಯಾವ ಭಾವವೂ ಮಿಗಿಲಾಗಿ ಮೆರೆಯಲಾರದೆಂಬಂತೆ ಈ ವಚನಪಾನದಲ್ಲಿ ಒಂದು ಅಪೂರ್ವವಾದ ಮೋಡಿಯಿದೆ. ಈ ಅನುಭವವಾಗಲಿ, ಇಲ್ಲಿನ ನಿರೂಪಣೆಯಾಗಲಿ ಕನ್ನಡಕ್ಕೆ ಒಂದು ಅಕ್ಷಯನಿಧಿಯೇ ಸರಿ.

ಆಟಪಾಟಗಳನ್ನು ಆಡಿ ತಾಯಿಯನ್ನು ತಣಿಸುವ ಕಂದನು ಸ್ವಲ್ಪ ಸಪ್ಪಗಾದ ಕೂಡಲೆ ಆಕೆಯ ಹೃದಯ ತಲ್ಲಣಿಸುವುದು. 'ಯಾರ ದೃಷ್ಟಿ ತಾಕಿತು ತನ್ನ ಕಂದವ್ವಗೆ– ಯಾರ ದೃಷ್ಟಿ ?' ಎಂದು ಒಂದೇ ಸಮನೆ ಕಳವಳ ಪಡುವಳು. ಕಂಡವರ ದೃಷ್ಟಿತಾಕಿದೆಯೋ ಎನ್ನಲು ಅವನನ್ನು ಆಕೆ ಎಲ್ಲಿಗೂ ಒಯ್ದಿಲ್ಲ ! ಆದರೂ 'ಹೂಗಳು ಕಣ್ಣುಬಿಟ್ಟುವೊ ? ಚಂದ್ರನ ಕಿರಣ ನೆಟ್ಟುವೊ ?' ಎಂದು ಆಕೆ ಸಂಶಯಗ್ರಸ್ತಳಾಗುವಳು. ತನ್ನ ಮಗು ಅಷ್ಟು ಮೃದು, ಅಷ್ಟು ಕೋಮಲ ! ಕಡೆಗೆ, ಬೇರೆ ಯಾರು ಬೇಕು 'ತಾಯಿಯ ದೃಷ್ಟಿ ನಾಯಿಯ ದೃಷ್ಟಿ' ಎಂಬಂತೆ ತನ್ನ ದೃಷ್ಟಿಯೇ ಮಗುವಿಗೆ ನಂಜಾಯಿತೋ ಎಂಬ ಶಂಕೆ ಅವಳನ್ನು ಕೊರೆಯುತ್ತದೆ. ಇದೊಂದು ಧರ್ಮ ಸಂಕಟವೇ ಸರಿ. 'ಎಲ್ಲಿ ಬಚ್ಚಿಡಲಿ—ಎಲ್ಲಿ ಮುಚ್ಚಿಡಲಿ—ನನ್ನ ಕಂದವ್ವನ ? ತಾಯಿ ಕಾಡಿದ ಮೇಲೆ ಕಾಯುವರದಾರು ?' ಎಂದು ತನ್ನನ್ನು ತಾನೇ ನಿಂದಿಸಿಕೊಳ್ಳುವಳು. 'ಈ ಪಾಪಿದೃಷ್ಟಿ ಮುಚ್ಚಿ ಕಂದನು ಕಣ್ದೆರೆಯಲವ್ವಾ' ಎಂದು ಸಂಗಡಿಗರೊಡನೆ ಹೇಳಿಕೊಳ್ಳುವಳು. ತಾಯಿಯ ಕರುಳಿನ ತಿರುಳಿದು ! ( ಇಂಥ ಸಂದರ್ಭದಲ್ಲಿ ನೆಟಕೆ ಮುರಿಯುವ ಪದ್ಧತಿಯತ್ತ ಕವಿಯ ಕಣ್ಣು ಯಾಕೆ ಹಾಯಲಿಲ್ಲವೋ ಕಾಣೆ ! )

ತನು ಮನಗಳನ್ನು ತನ್ನೆಡೆಗೆ ಸೆಳೆಯುವ ಮಗುವಿನ ಆ ಸುಂದರ ಸೃಷ್ಟಿಯನ್ನು ಮನವಾರೆ ಮೆಚ್ಚಿಕೊಂಡಾಗ ತಾಯಿಯಾದವಳ ಹೃದಯ, ಪ್ರೀತಿಯಿಂದ ತುಂಬಿ ತುಳುಕಾಡುತ್ತದೆ. 'ಹೊಟ್ಟೆಯಾ ಮಾಣಿಕದ ಹರಳು ಮಗು ಚೆಂದ' ಎಂದು ಜಾನಪದ ಕವಿ ಹಾಡಿಕೊಂಡಂತೆ ಅವಳೂ ಆ ಪುತ್ಥಳಿಯ ಜನ್ಮ ರಹಸ್ಯವೇ ನಿರಬಹುದೆಂಬುದನ್ನು ಬಗೆಬಗೆಯಾಗಿ ಆಲೋಚಿಸತೊಡಗುತ್ತಾಳೆ. ಮೊದಲು ಅದರ ಬಾಹ್ಯ ಸೌಂದರ್ಯದತ್ತ ಆಕೆಯ ಗಮನ ಹರಿಯುತ್ತದೆ.

> "ಎಳೆಬಾಳೆಯ ಸುಳಿಯೆಲೆಗಿಂತಲೂ
> ತೆಳುವಾದ ನಿನ್ನ ಮೈದೊಗಲ ನೋಡುತ್ತಲೆ
> ಕಾಣುವುದು–ನೇಕಾರರ ನಯದ ಕಣ್–ನೆಲೆ."

ಎಂದು, ಮುಟ್ಟಿದರೆ ಬಾಡಿ ಹೋಗುವಂತಿರುವ ಅದರ ನುಣುಪಾದ ಮೈಯನ್ನು ಕಂಡು ಆಕೆ ಆ ಮಾಟಕ್ಕೆ ಮರುಳಾಗುವಳು. ಅದು ನೇಕಾರರ ಕಲೆಯ ಪರಮಾವಧಿಯೆನ್ನಿಸುವುದು. ಮಳೆಗಾಲದ ಮುಗಿಲ ಬಣ್ಣವನ್ನು ಮೀರಿಸಿ ಹೊಳೆಯುವ ಕಣ್ಣನ್ನು ಕಂಡಾಗ 'ಜಿನುಗಾರರ ಜಿನುಗಿನ ಗೊತ್ತು' ಎಂತಹುದೆಂದು ಬೆರಗಾಗುವಳು. ಮಗುವಿನ ಉಸಿರಾಟದ ಲಯಗತಿಯನ್ನು ಆಲಿಸಿದಾಗ 'ಹಾಡುಗಾರರ ತಾಳಗತ್ತಿನ ಮೇಳ'ದ ಆಳವೆಲ್ಲಿದೆಯೆಂಬ ಅರಿವಾಗುವುದು.

ಕೈಕಾಲಿನ ಬೆರಳುಗಳ ನಯವೋ, ನಲಿವೋ, ನುಣುಪೋ, ಹೇಳತೀರದು. ಅವು ತಾವರೆಯ ಎಸಳಿನ ಮಾಟಕ್ಕಿಂತಲೂ ಕೋಮಲ, ಕಮನೀಯ. ಇದು ಕವಿ ಹೇಳುವಂತೆ ಆಯಾ 'ಕೈವಾಡದವರ ಕೈಚಳಕದ ಕುಸುರಿನ ಮೇಲುಪಂಕ್ತಿ' ಯಾದರೂ ಆಗಬಹುದು, ಇಲ್ಲವೇ ಆ ಕೈಚಳಕದ ಉತ್ತಮೋತ್ತಮ ರಸಸೃಷ್ಟಿಯೆಂದರೂ ಒಪ್ಪೀತು !

ಮಗುವಿನ ಮುಗ್ಧ ಸೌಂದರ್ಯವನ್ನು ವರ್ಣಿಸುವ ಈ ಒಂದು ಸರಣಿಯನ್ನು ಕಂಡೆವಷ್ಟೆ. ಈಗ ಇನ್ನೊಂದು ವಿಧಾನದತ್ತ ಹೋಗೋಣ. ಅದು ಮತ್ತಷ್ಟು ಆತ್ಮೀಯವೆನ್ನಿಸುತ್ತದೆ. ತಾಯಿಯಾದವಳು ಮಗುವಿನ ಕಣ್ಣ ನೋಟದ ಸವಿಯನ್ನು ಅನುಭವಿಸಿ 'ನೋಡವ್ವಾ–ನೋಡು ನಿನ್ನ ಸೊಬಗಿನ ಕಣ್ಣಿನಿಂದೆ ನನ್ನ ತಾಳಿಯ ಮಣಿಯೊಳಗಿನ ತೇಜವಲ್ಲವೆ ನೀನು ?' ಎಂದು ಅದಕ್ಕೆ ಭಾಷ್ಯ ಬರೆಯುವಳು. ಅದರ ವರದ ಹಸ್ತದ ಸ್ಪರ್ಶ ಪುಳಕವನ್ನುಂಟುಮಾಡಲು 'ನನ್ನ ಬೇಳೆಯ ಮಣಿಯೊಳಗಿನ ಬಂಗಾರವಲ್ಲವೆ ನೀನು' ಎಂದು ಶ್ಲಾಘಿಸುವಳು. ಅದರ ತೊದಲ ನುಡಿಯು ಜೇನುತುಪ್ಪ ತೊಟ್ಟಿಕ್ಕಿದಾಗ 'ನನ್ನ ಕೈಯ ಕಂಕಣಗಳ ಕಣಕಣವಲ್ಲವೆ ನೀನು ?' ಎಂದು ಕೊಂಡಾಡುವಳು. ಆ ಪುಟ್ಟ ಕಂದಮ್ಮನಲ್ಲಿಯೇ ತನ್ನ ನಾಡದೇವತೆಗಳ ಅಂಶಗಳೆಲ್ಲ ಬೀಡುಬಿಟ್ಟಿರುವಂತೆ ಭಾವಿಸುವಳು. ಒಟ್ಟಿನಲ್ಲಿ ಮಾಂಗಲ್ಯಭಾಗ್ಯದ ಸಾರ್ಥಕ್ಯವನ್ನು ಹೆಣ್ಣು ತನ್ನ ತಾಯ್ತನದಲ್ಲಿ ಕಂಡುಕೊಂಡು ತಾನು ಕೃತಾರ್ಥಳಾದೆನೆಂದು ಹಿಗ್ಗುವ ಈ ಚಿತ್ರ ಚಿತ್ತಾಕರ್ಷಕವೆನ್ನಿಸುತ್ತದೆ.

ಇದೇ ಸರಣಿ ಮತ್ತಷ್ಟು ಮುಂದುವರಿದಾಗ ಅದು ಹೇಗೆ ತಾತ್ವಿಕಪರವಾಗಬಲ್ಲುದೆಂಬುದನ್ನು ಈ ವಚನ ಸಂಕಲನದ 'ಅರ್ಧನಾರಿ–ನಟೇಶ್ವರ' ಎಂಬ ಚೊಕ್ಕ ಬಂಧದಲ್ಲಿ ಕಾಣಬಹುದು. 'ಕಂದಾ! ನಿನ್ನ ಮುಖದ ಮುದ್ರಾಕೃತಿಯು ನನ್ನಂತಿದೆ; ಆದರೆ ದೇಹದ ಭದ್ರಾಕೃತಿಯು ಅವರಂತಿದೆ,' 'ಕಂದಾ! ನಿನ್ನ ಕಣ್ಣೊಳಗಿನ ಕರುಣೆ ನನ್ನಂತಿದೆ; ಆದರೆ ನೋಟದೊಳಗಿನ ಸರಣಿ ಅವರಂತಿದೆ.' 'ಕಂದಾ ನಿನ್ನ ಗದ್ದದ ಮೇಲಣ ಕುಣಿಯು ನನ್ನಂತಿದೆ; ಆದರೆ ಮೂಗಿನ ಕೆಳಗಣ ಮಣಿಯು ಅವರಂತಿದೆ,' 'ಕಂದಾ! ನಿನ್ನ ಹುಬ್ಬಿನ ಕೊನೆಯು ನನ್ನಂತಿದೆ; ಆದರೆ ಮೂಗಿನ ತೆನೆಯು ಅವರಂತಿದೆ'— ಎಂದು ಮಗುವಿನ ರೂಪಲಾವಣ್ಯದ ಒಂದೊಂದು ಚೆಂದವನ್ನೂ ತಮ್ಮ ದಾಂಪತ್ಯದ ಅನುರಾಗದೊಂದಿಗೆ ತಾಳೆ ನೋಡಿ 'ಅಹಹ! ಹುಟ್ಟಾ ಗೆಲ್ಲಬಲ್ಲ ಸೋಲದ ಸೊಬಗುಗಾರ ! ಗುಡುಗಾಡಿಯಲ್ಲಿ ಹೆಣ್ಣಮೋಡಿ ಬೆರೆತು, ಅರ್ಧನಾರಿ— ನಟೇಶ್ವರನ ಅಭಿನವಸೃಷ್ಟಿಯಾದೆಯಲ್ಲ !' ಎಂಬ ಚಿರನೂತನವೂ ಸನಾತನವೂ ಆದ ಸತ್ಯವನ್ನು ಮನಗಾಣುವಳು.

ಮಗುವನ್ನು ಹಡೆಯುವುದಕ್ಕಿಂತಲೂ, ಹುಟ್ಟಿದ ಹುಸುಳೆಗೆ ಮನವೊಪ್ಪುವ ಹೆಸರಿಡಲು ಒಮ್ಮೊಮ್ಮೆ ಬಹಳ ಪ್ರಯಾಸವೆನ್ನಿಸುತ್ತದೆ. ತಾಯಿಯ ಆಸೆ ಅಪಾರವಾದ್ದರಿಂದ ಹೆಸರಿನ ಚೌಕಟ್ಟಿನಲ್ಲಿ ಅದನ್ನು ಹುದುಗಿಡುವುದು ಕಷ್ಟವೋ ಏನೋ !

ಆ ಮಾತೃಸ್ವಭಾವದ ವಿಶ್ಲೇಷಣೆಯನ್ನು ಬೇಂದ್ರೆಯವರು ಮಾಡಿರುವ ಈ ವೈಖರಿ
ಯನ್ನು ನೋಡಿ:

ನನ್ನ ಬಸಿರಿನ ತಾವರೆಯಲ್ಲಿ ಬೆಳೆದ ಬಾಲಬ್ರಹ್ಮಾ !
ಹೆಸರಿನ ಅಪ್ಪಿಗೆಗೆ ಒಪ್ಪದ ಆನಂದಕಂದಾ !
ಏನೆಂದು ಕರೆಯಲಿ, ಏನೆಂದು ಕರೆಯದಿರಲಿ ನಿನ್ನ ?
ಅನಂತನ ಅನಂತನಾಮದಲ್ಲಿಯಾದರೂ ಇಂಬುಂಟೇ ?

ಆನಂದಕಂದ ಎಂಬ ಮಾತಿನಲ್ಲಿಯೇ ಅವಳ ಆನಂದವೆಲ್ಲ ಆವರಿಸಿಬಂದಂತಾಗು
ತ್ತದೆ. ನಿಮಿತ್ತ ಮಾತ್ರಕ್ಕೆ ನಾಮಕರಣವೇ ವಿನಾ ಅದು ತಾಯಿಯ ಆಸೆಯೆಲ್ಲ
ವನ್ನೂ ಪೂರೈಸಲಾರದು. ಇಂತೆಯೇ ಅವಳ ಮಗುವಿನ ಪ್ರತಾಪವನ್ನು
ಊಹಿಸಿಕೊಂಡಾಗ ಆಕೆಯ ಆಕಾಂಕ್ಷೆ ಆಕಾಶದವರೆಗೂ ವ್ಯಾಪಿಸುವುದು. ರಮ್ಯ
ಕಥೆಗಳಲ್ಲಿ ಬರುವ ಬಾಲವೀರನನ್ನು ಭಾವಿಸಿಕೊಂಡ ತಾಯಿ ತನ್ನ ಕುವರನೂ
ಅಂತೆಯೇ 'ರೆಕ್ಕೆಯ ಕುದುರೆಯನೇರಿ. ಹಕ್ಕಿಯ ಹಾದಿಯ ಹಿಡಿದು ದಿಕ್ಕಿನ
ತುದಿಗಿದ್ದ ಚಿಕ್ಕೆಗಳ ನಾಡಿನಲ್ಲಿ' ಅಡ್ಡಾಡಿ ಬರುವನೆಂದೂ, 'ರಕ್ಕಸರನ್ನು ಕಾದಿ
ಕೊಂದು ಬೊಕ್ಕಸವನ್ನು ಸೂರೆಗೊಂಡು' ತರುವನೆಂದೂ ಸಾರಿ ಹೇಳುವಳು. 'ಏಳು
ಕಡಲು ಸುತ್ತಿದ ನೆಲವನ್ನು ಆಳುವನವ್ವಾ ನನ್ನ ಕುಮಾರ!' ಎಂದು ಹೆಮ್ಮೆ
ಪಡುವಳು. ವೀರಾಧಿವೀರನಾಗಿ, 'ಧರ್ಮದ ಅರಸನಾಗಿ,—ದೇವರ ಊಳಿಗ
ದವನಾಗಿ,— ಕಂಟಕರಿಗೆ ಕಾಲನಾಗಿ' ತನ್ನ ಮಗನು ಬಾಳಿ ಏಳಿಗೆ ಪಡೆಯುವ
ನೆಂಬ ತಾಯಿಯ ಹಾರೈಕೆ ಸಹಜವೇ ಸರಿ.

ತಾಯಿಗೆ ತನ್ನ ಮಗುವೊಂದು ಕಂಕುಳಿನಲ್ಲಿದ್ದರೆ ಸಮಸ್ತ ವಿಶ್ವವೇ ತನ್ನ
ಬಳಿಯಲ್ಲಿದ್ದಷ್ಟು ನೆಮ್ಮದಿಯಾಗುವುದು. ತನ್ನ 'ಆಶೆ ನಿರಾಶೆಗಳೆರಡಕ್ಕೂ ಅವನು
ಆಕೆಗೆ ಆಶ್ರಯವೆನ್ನಿಸುವನು.' 'ಎಂತೆಂತಹ ಚಿಂತೆಗಳ ಸಂತೆಯಲ್ಲಿ ಹಾದಿ ದೊರೆಯ
ದಾಗಲು, ನಿನ್ನ ಭವ್ಯ ಮುಖದ ಮುಖಾಂತರ ನಿನ್ನ ಭವಿಷ್ಯದ ಮುಗಿಲಲ್ಲಿ ಹಾರು
ವುದು ನನ್ನ ನಿರಾಶೆ' ಎಂದು ಭರವಸೆಯ ಕಿರಣವನ್ನೊಮ್ಮೆ ಕಂಡರೆ, 'ಭವ
ಸಾಗರದ ಸುಳಿಗೆ ಸಿಕ್ಕಿ ಬಂಡೆಗೆ ಬಡಿಬಡಿದು ನುಗ್ಗಾಗಿ ಬಿರುಗಾಳಿಯಲ್ಲಿ ನಿನ್ನ
ಧ್ರುವದೃಷ್ಟಿಯ ನಂಬಿ ಸಾಗುವುದು ನನ್ನ ಆಶೆ' ಎಂದು ಮತ್ತೊಮ್ಮೆ ಧೈರ್ಯ
ಪಡೆಯುವಳು. ಜೀವನದ ಏರಿಳಿತಗಳಲ್ಲಿ ಊರುಗೋಲಿನಂತಿರುವ ಮಕ್ಕಳ ನೆರ
ವನ್ನು ಅರಿತವರಿಗೆ ತಾಯಿಯಾದವಳು 'ನನ್ನ ಹಂಬಲಿನ ಹಂಬಿಗೆ ಹಂದರ ನೀನು;
ನನ್ನ ಬೆಂಬಲದ ನಂಬಿಗೆಯ ಮಂದಿರ ನೀನು; ನೀನೇ ನನ್ನ ಆಶೆನಿರಾಶೆಗಳ ಗಾಳಿ
ಗೋಪುರ' ಎಂಬ ಮಾತುಗಳು ಎಷ್ಟು ಅರ್ಥಪೂರ್ಣವಾದುವು ಎಂಬುದು ಮನ
ವರಿಕೆಯಾಗುವುದು.

ಹೊಟ್ಟೆಯಲ್ಲಿ ಹುಟ್ಟಿದ ಹಸುಗೂಸು ಇಷ್ಟೊಂದು ಸುಖಸಂತೋಷಗಳನ್ನು ತಾನಾಗಿ ನೀಡುತ್ತಿರಬೇಕಾದರೆ ' ಮಕ್ಕಳಿಲ್ಲದಿದ್ದರೆ ಒಂದು ಚಿಂತೆಯಂತೆ, ಇದ್ದರೆ ನೂರೊಂದು ಚಿಂತೆಯಂತೆ ' ಎನ್ನುವವರ ಕೊಂಕುನುಡಿಯನ್ನು ಯಾವ ತಾಯಿಯು ತಾನೆ ಒಪ್ಪಿಯಾಳು ? ಅಂಥವರನ್ನು ಕುರಿತು ' ಅನ್ನುವವರೇನು ಬಲ್ಲರು ? ' ಎಂದು ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸುವುದಲ್ಲದೆ ' ನನ್ನ ಚಿಂತಾಪಹಾರಕ ಚಿಂತಾಮಣಿ ! ಚಿಂತೆಯ ಪಂಚಾಗ್ನಿಯಲ್ಲಿ ತಪನಾಡಿಸಿ ತಪಸ್ವಿನಿಯ ಮಾಡಿಸಿದೆ ' ಎಂದು ಮಗುವಿಗಾಗಿ ಚಿಂತಿಸುವುದೂ ಒಂದು ಸುಕೃತ ವೆಂದೇ ಭಾವಿಸುವಳು. ಮಗುವಿನಿಂದ ಲಭಿಸಬಹುದಾದ ನೋವು ನಲಿವುಗಳೆರಡನ್ನೂ ಅಳೆದು ನೋಡಿ ' ನನ್ನ ಅಮೃತದ ಝರಿಯೇ ! ನಿನ್ನ ವಿಷವುಂಡು ನೀಲಕಂಠಾ ಭರಣಳಾದೆ, ಸುಖ-ದುಃಖ ಸಮನೆಂಬ ಯೋಗಿಯ ಮಾಡಿದೆ. ' ಎಂಬ ಸ್ವಾನು ಭವ ಸಿದ್ಧಾಂತವನ್ನೇ ಸಾರಿ ಹೇಳುವಳು.

ಮಾತೆಯ ಮಮತೆ, ಮಗುವಿನ ಸುತ್ತಮುತ್ತಲೂ ಸರ್ವದಾ ರಕ್ಷಾರೇಖೆ ಯಂತೆ ಆವರಿಸಿಕೊಂಡಿರುತ್ತದೆ. ಅದರ ಆಳ ಅಗಲಗಳನ್ನು ಇಷ್ಟೇ ಎಂದು ನಾವು ಹೇಳಲಾರೆವು. ಕವಿಯಾದರೋ ಅದನ್ನೂ ತಳಮುಟ್ಟಿ ನೋಡ ಬಲ್ಲ. ಹಿಗ್ಗಿನಿಂದ ಮಮತೆ ತೆರೆಯೇರಿ ಬಂದಾಗ ' ಹಿಗ್ಗಿನ ತೊರೆಯಾಗಿ ಬಂತು, ನಗೆಯ ತೆರೆಯಾಗಿ ಬಂತು, ನನ್ನ ಮಗುವಿನ ಮಮತೆ ' ಎಂಬುದಾಗಿಯೂ ಆತಂಕದಿಂದ ಅಕ್ಕರೆ ರಕ್ಷೆಯಾಗಿ ತೋರಿದಾಗ ' ತಳಮಳದ ನೆರೆಯಾಗಿ ಬಂತು, ಕಳವಳದ ನೊರೆಯಾಗಿ ಬಂತು, ನನ್ನ ಮಗುವಿನ ಮಮತೆ ' ಎಂಬು ದಾಗಿಯೂ ಆ ಮಾತೆಯ ಕೈಯಲ್ಲಿಯೇ ಹೇಳಿಸಿರುವುದುಂಟು. ಸುಖದುಃಖ ಗಳೆರಡೂ ಮಮತೆಗೆ ತಳಹದಿಯೆಂಬ ಈ ತತ್ವ ಮಹತ್ವಪೂರ್ಣವಾಗಿದೆ.

ಈ ವರೆಗೆ ಮನಗಂಡಿರುವಂತೆ ವಾತ್ಸಲ್ಯದ ಸುಖ ವಾಸ್ತವವಾಗಿಯೂ ಅಲೌಕಿಕವಾದದ್ದು. ತಾನು ಹುಟ್ಟಿದ ಕ್ಷಣದಿಂದ ತಾಯಿಯ ತನುಮನಗಳನ್ನು ಒಂದೇ ರೀತಿಯಾಗಿ ತಣಿಸುವ ಹಸುಗೂಸಿನ ಹಿರಿಮೆಯನ್ನು ಹೇಳಿ ಮುಗಿಸುವು ದಕ್ಕೆ ಸಾಧ್ಯವಿಲ್ಲ. ಬೆಳೆದ ಬಾಳಿನ ತನ್ನ ಕ್ಲೇಶ ಕಲ್ಮಷಗಳಿಗೂ ಹುಟ್ಟಿದ ಕಂದಮ್ಮನ ಮುಗ್ಧ ಪವಿತ್ರತೆಗೂ ತಾಳೆ ಹಾಕುವುದು ಎಂತೆಂದು ತಾಯಿಯೇ ತಬ್ಬಿಬ್ಬಾಗುವಳೆಂದಮೇಲೆ ಉಳಿದವರ ಪಾಡೇನು ! ' ನನ್ನ ಪಂಕದಲ್ಲಿ ಹುಟ್ಟಿ ಲೇಪವಿಲ್ಲದಿರುವೆ, ನನ್ನ ಪಂಕಜವೆ ! ' ಎಂದು ಆಕೆ ಮಗುವನ್ನು ಕೊಂಡಾಡುವ ಳಲ್ಲದೆ ' ಒಡೆಯ ಬಾರದ ಒಡಪಿನಂತಿರುವೆ' ಬಿಡಿಸಲುಬಾರದ ತೊಡಕಿನಂತಿರುವೆ ನನ್ನ ಮಾನಸದ ಮಡಗನೆ ' ಎಂದು ಆಶ್ಚರ್ಯ ಪರವಶಳಾಗುವಳು. ಮಗು ವಿನ ಅನಂತ ಲೀಲೆಗಳನ್ನೂ, ತನಗಾಗುವ ಅಮಿತವಾದ ಆನಂದವನ್ನೂ ಮೇಲಿಂದ ಮೇಲೆ ನೆನೆದಂತೆಲ್ಲ ಈ ವಾತ್ಸಲ್ಯದ ರಹಸ್ಯವೇನು ಎನ್ನುವುದು ತಾಯಿಯಾದವ

ಳಿಗೇ ಗೋಚರವಾಗದಂತಿದೆ. ಈ ಅವ್ಯಾಜ ಸಂಬಂಧಕ್ಕೆ ಸೋಜಿಗವೊಂದೇ ಸೂಕ್ತವಾದ ವಿವರಣೆ, ಆಕೆ 'ನಿನ್ನಳವು ಅಸದಳವು' 'ನಿನ್ನ ತಿಳಿಗೊಳದ ತಳವು ಕಾಣದು,' 'ಯಕ್ಷಾಂಗುಲಿಕೆಯಂತೆ ನಿನ್ನ ತೊಟ್ಟೊಟ್ಟ ನಿನ್ನೆಲ್ಲ ಗುಟ್ಟರಿಯೆ-ನಾನು. ನವೋನವ ಚಮತ್ಕಾರವೇ ನೀನಾವ ಲೋಕದ ಜೀವಿ ?' ಎಂದು ನಿಬ್ಬೆರಗಾಗುವಳು. ಆ ಗುಟ್ಟು ಬಯಲಾಗದಿರುವುದೇ ಅದರ ಹಿರಿಮೆಗೊಂದು ಭೂಷಣ !

ಇಂಥ ಅನಿರ್ವಚನೀಯವಾದ ವಾತ್ಸಲ್ಯದ ಸವಿಯನ್ನು ಮಾತೃಹೃದಯದ ಮೂಲಕ ತಮ್ಮ ಕವಿವಾಣಿಯಲ್ಲಿ ಅತ್ಯಪೂರ್ವವಾಗಿ ಚಿತ್ರಿಸಿರುವ ಬೇಂದ್ರೆಯವರ ಈ ರಮ್ಯ ಪ್ರಪಂಚವನ್ನು ಪ್ರವೇಶಿಸಿದ್ದೇ ಆದರೆ ಅಲ್ಲಿಂದ ಹೊರಗೆ ಬರಲು ಮನಸ್ಸೇ ಬಾರದು. ಈ ವಚನಗಳ ವೈಭವವನ್ನು ಒಂದು ನಿಟ್ಟಿನಲ್ಲಿ ಹೇಳಿ ಮುಗಿಸಲು ಸಾಧ್ಯವಿಲ್ಲ. ಅವುಗಳನ್ನು ಪುನಃ ಪುನಃ ಚಪ್ಪರಿಸಿದಾಗಲೇ ತಾಯಿಯ ಅಂತರಂಗದ ಅರ್ಥವು ಸ್ವಲ್ಪಮಟ್ಟಿಗಾದರೂ ಆದೀತು. ಆ ಪ್ರಯತ್ನಕ್ಕೆ ಈ ಪ್ರಬಂಧವೊಂದು ಪೀಠಿಕೆಯೇ ವಿನಾ ಇದು ಅವರ ವಾತ್ಸಲ್ಯದ ವಿಸ್ತಾರವಾದ ವ್ಯಾಖ್ಯಾನವಲ್ಲವೆಂದು ಹೇಳಬಯಸುತ್ತೇನೆ.

§ § § §

೪

# ಕಾವ್ಯಸೃಷ್ಟಿ–ಬೇಂದ್ರೆಯವರ ದೃಷ್ಟಿ

ಜಿ. ಎಸ್. ಶಿವರುದ್ರಪ್ಪ

ಸೃಷ್ಟಿರಹಸ್ಯದಷ್ಟೇ ಅದ್ಭುತವೂ ರಮ್ಯವೂ ಆದುದು ಕಾವ್ಯರಹಸ್ಯ. ಏಕೆಂದರೆ ಕಾವ್ಯವೂ ಒಂದು ಸೃಷ್ಟಿ. ಬೀಜದಿಂದ ಭೂಜವೇಳುವ ಕ್ರಿಯೆಯೂ, ಭ್ರೂಣದಿಂದ ಪ್ರಾಣ ಮೈದಾಳಿ ನಿಲ್ಲುವ ಪರಿಯೂ, ಕವಿಯಲ್ಲಿ ಕವಿತೆ ಹುಟ್ಟುವ ಬಗೆಯೂ–ಬಹುಶಃ ಒಂದೇ.

ಕವಿಯ ಕವನವೊಂದನ್ನೋದಿ ನಾವು ಆನಂದಾನುಭವವನ್ನು ಪಡೆಯುತ್ತೇವೆ. 'ಆಹಾ ಎಷ್ಟು ಚಂದ' ಎಂದು ಉದ್ಗಾರವೆತ್ತುತ್ತೇವೆ. ನಾವು ಸವಿದ ಕೃತಿಯನ್ನೋದಿ ನಮ್ಮ ಸುತ್ತಮುತ್ತಲವರಿಗೆ ವ್ಯಾಖ್ಯಾನಿಸಿ ಕೃತಿಯ ಕಡೆ, ಕೃತಿಯನ್ನು ರಚಿಸಿದ ಕವಿಯ ಕಡೆ ಅವರ ಗಮನವನ್ನು ಸೆಳೆಯುತ್ತೇವೆ. ಇಂಥ ರಮ್ಯಸೃಷ್ಟಿಯನ್ನು ಕಂಡ ಕವಿ ನಮಗೆ ಪವಾಡದಂತೆ ತೋರುತ್ತಾನೆ; ನಮ್ಮದನ್ನೇ ನಮ್ಮ ಬಲ್ಲದ ರೀತಿಯಲ್ಲಿ, ನೂತನವೆಂಬಂತೆ ರಮ್ಯವೆಂಬಂತೆ ತೋರಿದ ಅವನ ಕಾವ್ಯದ ಮೋಡಿಗೆ ಬೆರಗಾಗುತ್ತೇವೆ. ಈ ಆನಂದಾಸ್ವಾದದ ನಂತರ ನಮ್ಮಲ್ಲಿ ಪ್ರಶ್ನೆ ಮೂಡುತ್ತದೆ, ಕವಿಯಲ್ಲಿ ಈ ಕವಿತೆ ಹೇಗೆ ಹುಟ್ಟಿತು ಎಂದು.

ಕವಿಯ ಕೃತಿಯನ್ನೋದಿ ಅದರಿಂದ ಬರುವ ಆನಂದವನ್ನು ಸವಿದರೆ ಸಾಲದೆ, ಅದು ಹೇಗೆ ಬಂದರೇನು. ಅದು ನೀಡುವ ಸವಿಯನ್ನು ಅನುಭವಿಸಿದರೆ ಸಾಲದೆ–ಎಂಬ ಚಾರ್ವಾಕಬುದ್ಧಿಯನ್ನು ಒತ್ತಟ್ಟಿಗೆ ಸರಿಸಿ ನಾವು ನಮಗೆ ತೋರಿದಂತೆ ಕಾವ್ಯದ ಉಗಮವನ್ನು ಕುರಿತು ಚಿಂತಿಸುತ್ತೇವೆ; ತಿಳಿದವರು, ವಿಮರ್ಶಕರು ಏನಾದರೂ ಹೇಳಿದ್ದಾರೆಯೆ ಎಂದು ನೋಡುತ್ತೇವೆ; ಕವಿಯ ಮನಸ್ಸನ್ನೂ ಚಿಕತ್ಸೆಗೆ ಒಳಗುಮಾಡಿ ಮನಸ್‌ಶಾಸ್ತ್ರಜ್ಞರೇನಾದರೂ ಹೇಳಿದಾರೆಯೆ ಎಂದು ಹುಡುಕುತ್ತೇವೆ. ಅಲ್ಲೆಲ್ಲಾ ಏನೋ ಒಂದು ರೀತಿಯ ಉತ್ತರ ದೊರೆತರೂ, ಕಡೆಗೆ ಕವಿಯ ಕವನಕ್ಕೇ ಶರಣುಬರುತ್ತೇವೆ: ಕವಿ ತನ್ನ ಕವನವಲ್ಲೇ, ಕಾವ್ಯಮೂಡಿದ ಪರಿಯನ್ನು

ಹೇಳಿರುವುದೂ ಉಂಟು; ಅಂಥ ಕವನಗಳಿಂದ ಈ ವಿಚಾರ ತಕ್ಕಮಟ್ಟಿಗೆ ಸ್ಪಷ್ಟವಾಗುವುದುಂಟು. ಬಸುರಲ್ಲಿ ಬೆಳೆಯುವ ಮಗುವಿನ ವಿಚಾರ ತಾಯಿಯಾದವಳಿಗೆ ಎಷ್ಟು ಗೊತ್ತೋ, ಅಷ್ಟೇ, ಅಥವಾ ಅದಕ್ಕೂ ಮಿಗಿಲಾಗಿ ಕವಿಗೆ ಕಾವ್ಯರಹಸ್ಯ ಗೊತ್ತಿರಬಹುದು ಎಂದುಕೊಂಡು ನಾವು ಕವಿಯನ್ನು ಕೇಳುತ್ತೇವೆ: ಕಾವ್ಯ ನಿಮ್ಮಲ್ಲಿ ಹೇಗೆ ಹುಟ್ಟಿತು ?

ಕಾವ್ಯದಿಂದ ಕವಿಯೋ, ಕವಿಯಿಂದ ಕಾವ್ಯವೋ ? ಬೀಜವೃಕ್ಷನ್ಯಾಯದಂತೆ ಇದೂ ಒಂದು ಒಗಟು. ಬೇಂದ್ರೆಯವರು ಹೇಳುತ್ತಾರೆ. “ ಹಕ್ಕಿಗೆ ಗರಿ ಇದ್ದಂತೆ ಕವಿಗೆ ಕವನ ” [1] ಎಂದು. ಹಕ್ಕಿಗೂ ಗರಿಗೂ ಯಾವ ಒಂದು ಅವಿನಾಸಂಬಂಧವಿದೆಯೋ, ಉದ್ದೇಶವಿದೆಯೋ ಹಾಗೆ ಕವಿಕಾವ್ಯ ಎರಡೂ ಒಂದಕ್ಕೊಂದು ಪೂರಕ. ಹಾಗಾದರೆ ಕವಿ ಎಂದರೆ ಯಾರು ? ಬೇಂದ್ರೆಯವರು ವಂಗಕವಿ ರವೀಂದ್ರರನ್ನು ‘ ಗುರುದೇವ ’ ಎಂದು ಗೌರವಿಸಿ ಪ್ರಶಂಸಿಸುವಲ್ಲಿ ಕವಿ ಎಂದರೆ ಯಾರು ಎಂಬುದನ್ನು ಬಹು ಸೊಗಸಾಗಿ ಹೇಳಿದಾರೆ :

ನುಡಿದು ಬೇಸತ್ತಾಗ | ದುಡಿದುಡಿದು ಸತ್ತಾಗ
ಜನಕ ಹಿಗ್ಗಿನ ಹಾಡು ನೀಡಾಂವ. [2]

ಈ ಲೋಕದಲ್ಲಿ ನಾವು ವೈಸಂವಿನ ಕರ್ಮಗಳಲ್ಲಿ ತೊಡಗಿ ಹೊಟ್ಟೆಯ ಪಾಡಿಗಾಗಿ ದುಡಿದೂ ದುಡಿದೂ ಸಾಯುತ್ತೇವೆ; ಅದಕ್ಕೆ ಸಂಬಂಧಿಸಿದ ಮಾತನ್ನೇ ಆಡಿ ಆಡಿ ಬೇಸರದಲ್ಲಿ ಮುಳುಗುತ್ತೇವೆ. ಹೀಗೆ ಮಾಡಿದ್ದನ್ನೇ ಮಾಡಿ, ಆಡಿದ್ದನ್ನೇ ಆಡಿ ಯಾಂತ್ರಿಕವಾದ ಬದುಕಿನಲ್ಲಿ ತೊಡಗಿರುವ ಈ ಜನಕ್ಕೆ ಕವಿ ಹಿಗ್ಗಿನ ಹಾಡನ್ನು ನೀಡುವವನು. ಕವಿ ನೀಡುವುದು ಹಾಡು; ಹಿಗ್ಗಿನ ಹಾಡು. ಹಾಗಾದರೆ ಕವಿಗೆ ಕುಗ್ಗೆಂಬುದೇ ಇಲ್ಲವೆ? ಅವನು ಹಿಗ್ಗಿನ ಹಾಡನ್ನು ನೀಡಲು ಅಂತಹ ಸುಖಪುರುಷನೆ ? ಅಲ್ಲ; ಅವನೂ ವ್ಯಕ್ತಿಯೇ; ಎಲ್ಲರಿಗೂ ಸಮಾನವಾದ ಪಾಡು ಅವನಿಗೂ ಉಂಟು; ಕವಿ ಹೇಳುತ್ತಾನೆ—

ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ ನಿನಗೆ ! [3]

ನನ್ನ ಪಾಡು ನನಗಿರಲಿ; ಇಗೋ ತೆಗೆದುಕೋ ಅದರ ಹಾಡನ್ನು ಮಾತ್ರ. ಏಕೆಂದರೆ ಅವನಲ್ಲಿ—

---

1 ಗರಿ—ಸಂದರ್ಭಸೂಚನೆ, ಪು. ೪.

2 ಸಖೀಗೀತ.... ಪು. ೪೭.

3 ನಾದಲೀಲೆ.

ಪಟ್ಟಪಾಡೆಲ್ಲವು ಹುಟ್ಟುಹಾಡಾಗುತ
ರಸವಾಗಿ ಹೊಸವಾಗಿ ಹರಿಯುತಿವೆ[1]

ಪಾಡೆಲ್ಲ ಸಹಜವಾಗಿಯೇ ಹಾಡಾಗುತ್ತದೆ; ಹೀಗೆ ರಸವಾಗಿ ಹೊಸವಾಗುತ್ತವೆ. ಈ ಹಾಡಿನಿಂದ ಕವಿ ಬಯಸುವುದಿಷ್ಟು :

ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ[2]

ಕವಿಯ ಕಾವ್ಯವನ್ನೋದಿ, ಸಹೃದಯನ ಕಲ್ಲುಸಕ್ಕರೆಯಂಥ ಹೃದಯ ಕರಗಿದರೆ ಅವನಿಗೆ ತೃಪ್ತಿ. ಹೀಗೆ ಸಹೃದಯನನ್ನು ಕರಗಿಸಬೇಕಾದರೆ ಕವಿ, ಪಾಡನ್ನು ಕೇವಲ ಪಾಡನ್ನಾಗಿಯೇ ನೀಡುವುದಿಲ್ಲ; ಅದನ್ನು ಹಾಡಾಗಿ ಪರಿವರ್ತಿಸುತ್ತಾನೆ. ಹೀಗೆ ಕವಿ, ಜನಕೆ ಹಿಗ್ಗಿನ ಹಾಡನ್ನು ನೀಡುತ್ತಾನೆ.

ಆದರೆ ಪಾಡು ಹಾಡಾಗುವುದು ಹೇಗೆ? ನಮ್ಮಲ್ಲಿ ಪಾಡುಪಾಡಾಗಿಯೇ ಉಳಿದರೆ, ಅದು ಕವಿಯಲ್ಲಿ ಹೇಗೆ ಹಾಡಾಗಿ ಮೂಡಿಬರುತ್ತದೆ? ಈ ಪ್ರಶ್ನೆಗೆ ಕವಿ ಕವಿತೆಯಲ್ಲೇ ಉತ್ತರ ನೀಡಿದ್ದಾರೆ. ಏಕೆಂದರೆ ಕವಿ ಸಹೃದಯನೊಂದಿಗೆ ಮಾತನಾಡುವುದು ಕಾವ್ಯದಲ್ಲೇ :

ತೇಲಾಡುವಾಗ ಮನಸು
ಮೇಲಾಡತಾವ ಕನಸು
ತಾಕಾಡುವಾಗ ಇತ್ತ
ತೇಕಾಡತಾವ ಚಿತ್ತ[3]

ನಾವೆಲ್ಲ ಈ ಲೋಕಕ್ಕೆ ಅಂಟಿಕೊಂಡಿದ್ದೇವೆ. ಲೋಕದ ವಸ್ತುಗಳನ್ನು ನಮಗೆ ಅನುಕೂಲವಾದ ಫಲಾಫಲಗಳ ದೃಷ್ಟಿಯಿಂದ ನೋಡುವುದು ನಮ್ಮ ಸ್ವಭಾವ. ಹೀಗೆ ನಾವು ಈ ಲೋಕದೊಂದಿಗೆ ತಾಕಾಡುತ್ತೇವೆ. ಈ ಕಾರಣದಿಂದ ನಾವು ಈ ಲೋಕವ್ಯಾಪಾರಗಳಲ್ಲಿ ಸುಮ್ಮನೆ ತೇಕಾಡುತ್ತೇವೆ; ತಳಮಳಗೊಳ್ಳುತ್ತೇವೆ. ಆದುದರಿಂದಲೇ ನಾವು ಕವಿ ಕಾಣುವಂಥ ಚೆಲುವನ್ನು ಕಾಣಲು ಅಸಮರ್ಥರಾಗಿದ್ದೇವೆ; ಪಾಡನ್ನು ಹಾಡನ್ನಾಗಿಸಲು ಅಸಮರ್ಥರಾಗಿದ್ದೇವೆ. ಆದರೆ ಕವಿ ಈ ಲೋಕದ ವ್ಯಾವಹಾರಿಕ ಜಂಜಡಗಳಿಂದ ತೇಲಾಡುವುದನ್ನು ಕಲಿತವನು; ಆದುದರಿಂದಲೇ ನಾವು ಕಾಣದ ಕನಸುಗಳು ಅವನ ಮೇಲೆ ಆಡುತ್ತವೆ. ಭವದಿಂದ

1 ಸಖೀಗೀತ, ಪು. ೬೫.
2 ನಾದಲೀಲೆ
3 ಗಂಗಾವತರಣ, ಪು. ೧೩.

ಎದ್ದು ಭಾವದಲ್ಲಿ ತೇಲಾಡುವ, ವಸ್ತುವಿನ ಲೌಕಿಕ ಬಯಕೆಯ ಸೆರೆಯಿಂದ ಮೇಲೆದ್ದು ನಿಲ್ಲುವ ಈ ಕೌಶಲವೇ ಕವಿಯ ಸಾಮರ್ಥ್ಯ. ಈ ಒಂದು ಶಕ್ತಿಯಿಂದ ಅವನು ಪಾಡನ್ನು ಹಾಡನ್ನಾಗಿ ಪರಿವರ್ತಿಸಬಲ್ಲ.

ಹಾಗಾದರೆ ಕವಿ ಕಾಣುವುದು ಕೇವಲ ಕನಸುಗಳನ್ನೇ ? ಎಂಬ ಪ್ರಶ್ನೆ ಏಳುತ್ತದೆ. ಆದರೆ ಇಲ್ಲಿ ಕನಸು ಎಂದರೆ. ತೋರಿ ಮಾಯವಾಗುವ ನಮ್ಮ ಕನಸುಗಳಂತೆ ಅಲ್ಲ. ಕವಿಯ ಕನಸು ಜನದ ಮನಸು. ಅವನ ಇಂದಿನ ಕನಸು, ನಮ್ಮ ಮುಂದಿನ ನನಸು. ಕವಿ ನಮ್ಮ ಆಕಾಂಕ್ಷೆಗಳನ್ನು ಕನಸಾಗಿ ಕಾಣುತ್ತಾನೆ; ಅದನ್ನು ನಾಳಿನ ಜನ ನನಸಾಗಿ ಕಟ್ಟಬೇಕು. ಅಥವಾ ಅವನ ಕನಸು ಕೇವಲ ಕಲ್ಪನಾ ವಿಲಾಸವಾಗಲಿ, ಸದ್ಯದ ಬಾಳಿನೊಂದಿಗೆ ಸಂಪರ್ಕವನ್ನು ಹೊಂದದೆ ಇರುವುದಾಗಲೀ ಅಲ್ಲ; ಕವಿ ಹೇಳಿದ್ದಾನೆ—

ತನ್ನ ಸುತ್ತ ತಿರುಗುತಿತ್ತು ಮೂಕಭಾವ ಯಂತ್ರಾ
ಗರ್ಭಗುಡಿಯ ಗರ್ಭದಲ್ಲಿ ಪಡಿನುಡಿಯುವ ಮಂತ್ರಾ ! [1]

ಈ ಲೋಕ, ಅದರ ವ್ಯವಹಾರಗಳು ಬರಿದೇ ಯಾಂತ್ರಿಕವಾಗಿ ಕವಿಯ ಸುತ್ತ ತನ್ನ ದೈನಂದಿನ ಕರ್ಮದಲ್ಲಿ ತಿರುಗುತ್ತಿವೆ. ಅದಕ್ಕೂ ನೂರಾರು ಬಗೆಯ ಭಾವನೆಗಳಿವೆ; ಆದರೆ ಅದು ಮೂಕ. ಈ ಮೂಕಭಾವಯಂತ್ರ ಕವಿಯ ಸುತ್ತ ತಿರುಗುತ್ತಲಿದೆ. ಆದರೆ ಈ ಲೋಕದ ಭಾವಗಳು ಕವಿಹೃದಯದ ಗರ್ಭಗುಡಿಯ ಗರ್ಭದಲ್ಲಿ ಪಡಿನುಡಿದು ಮಂತ್ರವಾಗುತ್ತವೆ. ಕವಿಹೃದಯ ಗರ್ಭಗುಡಿ; ಪೂಜ್ಯವಾದ, ಪವಿತ್ರವಾದ ಶಕ್ತಿಯೊಂದರ ನೆಲೆ. ಅಲ್ಲಿ ಪಡಿನುಡಿದ ಈ ಲೋಕಭಾವಗಳು 'ಮಂತ್ರ' ವಾಗುತ್ತವೆ. ಯಾವ ಭಾಷೆ ಲೋಕದಲ್ಲಿ ಕೇವಲ ಅಭಿಪ್ರಾಯ ಪ್ರವಹಣತಂತ್ರವೋ ಅದು ಇಲ್ಲಿ ರಸೋದ್ದೀಪನ ಮಂತ್ರವಾಗುತ್ತದೆ ಕವಿಯ ಕಾವ್ಯದಲ್ಲಿ. ಮಂತ್ರ ಎಂದರೆ ಶಕ್ತಿ; ಮಂತ್ರ ಎಂದರೆ ಮೋಹಕತೆ—ಕವಿಯ ಕಾವ್ಯ ಎರಡೂ ಹೌದು. ಅದು ಓದುಗನನ್ನು ಆಕರ್ಷಿಸುವುದು ಮಾತ್ರವಲ್ಲ, ಆಕ್ರಮಿಸುತ್ತದೆ. ಹೀಗೆ ಲೋಕದ ಮಾತು, ಲೋಕದ ಭಾಷೆ, ಕವಿಯಲ್ಲಿ ಮಂತ್ರವಾಗುತ್ತವೆ; ಇಲ್ಲೇ ಕವಿಯ ತಂತ್ರವಿರುವುದು. ಕಾವ್ಯ ಎಂಬುದು :

ಸ್ಫೂರ್ತಾ, ಅಮೂರ್ತಾ, ಆವಿರ್ಭೂತಾ,
ಭವ ಮಂಥನ ತಂತ್ರಾ [2]

ಕವಿಯಲ್ಲಿ ಸ್ಫೂರ್ತಿಗೊಂಡುದ್ದು ಮೊದಮೊದಲು ಅಮೂರ್ತವಾಗಿ ಅನಂತರ ಮೂರ್ತಗೊಂಡು ಕವಿಯು ಅದನ್ನು ಆವಿರ್ಭವಿಸತಕ್ಕದ್ದು. ಅದು 'ಭವಮಂಥನ

1 ನಾದಲೀಲೆ, ಪು. ೪೯.
2 ಸೂರ್ಯಪಾನ, ಪು. ೬.

ತಂತ್ರ' ಈ ಲೋಕದ ಭಾವಗಳು ಪಡಿನುಡಿದುದು ಮಾತ್ರವಲ್ಲ; ಕವಿಯ ಪ್ರತಿಭೆಯ ಕಡೆಗೋಲು ಈ ಭವವನ್ನು ಕಡೆದದ್ದರಿಂದ ಮೂಡಿದುದು. ಹಾಲನ್ನು ಕಾಯಿಸಿ ಹೆಪ್ಪುಹಾಕಿ ಕಡೆಗೋಲಿಂದ ಕಡೆದು ಬೆಣ್ಣೆಯನ್ನು ತೆಗೆಯುವಂತೆ, ಕವಿ ಈ ಭವವನ್ನು ಕಡೆದು ಅದರ ಸಾರವನ್ನು ತೆಗೆಯುವ ತಂತ್ರ ಈ ಕಾವ್ಯ. ಹೀಗೆ ಕಂಡದ್ದನ್ನು ಕಂಡರಿಸುವ ತಂತ್ರ ಕವಿಗೆ ಸಿದ್ಧಿಸಿದಾಗ ಅದನ್ನು 'ರೂಪಕಶಕ್ತಿ' ಎನ್ನುತ್ತೇವೆ. ಈ ರೂಪಕಶಕ್ತಿ ಉದಯವಾದಾಗ—

ಕೊಟ್ಟದ್ದೆ ರೂಪವು ಇಟ್ಟದ್ದೆ ನಾಮವು
ಕಟ್ಟಿದ್ದೆ ಹುರುಳೆಂಬ ಮುದದೊಳಿರೆ
ಬ್ರಹ್ಮಪಟ್ಟವನೇರಿ ರೂಪಕಶಕ್ತಿಯು
ಸೃಷ್ಟಿಯನಳೆಯಿತು ದೃಷ್ಟಿಯೊಳೆ [1]

ಕವಿಯ ದೃಷ್ಟಿ ಬ್ರಹ್ಮಪಟ್ಟವನ್ನೇರಿ, ದೃಷ್ಟಿಯಿಂದ ಸೃಷ್ಟಿಯನ್ನು ಅಳೆಯುತ್ತದೆ. ಆಗ ಅದು ಕೊಟ್ಟದ್ದೆ ರೂಪ, ಇಟ್ಟದ್ದೆ ನಾಮ, ಕಟ್ಟಿದ್ದೆ ಹುರುಳು. ಈ ರೂಪಕ ಶಕ್ತಿಯ ಸೆಳವಿಗೆ ಏನು ಸಿಕ್ಕರೂ ಸಾಕು, ಅದು ಕವಿಯಲ್ಲಿ ಹಾಡಾಗುತ್ತದೆ—

ಕವಿಜೀವದ ಬ್ಯಾಸರ ಹರಿಸಾಕ
ಹಾಡ ನುಡಿಸಾಕ
ಹೆಚ್ಚಿಗೇನು ಬೇಕ ?
ಒಂದ ಹೂತ ಹುಣಸೀಮರ ಸಾಕ

ಒಂದು ಹೂಬಿಟ್ಟ ಹುಣಿಸೆಯಮರವೇ ಸಾಕು; ಕವಿ ಜೀವದ ಬೇಸರವನ್ನು ಹರಿಸಿ ಹಾಡನ್ನು ಹೊಮ್ಮಿಸುತ್ತದೆ. ಹೀಗೆ ಕವಿಯ ರೂಪಕಶಕ್ತಿ ಹಾಡನ್ನು ಕಟ್ಟುವಲ್ಲಿ ಅವನೊಡನೆ ಸಮಸ್ತ ಸೃಷ್ಟಿ ಮತ್ತು ಅದರ ಅನುಭವಗಳು ಸಹಕರಿಸುತ್ತವೆ.

ಋತುಗಳ ಏರಿಳಿತ ಕಾಳ ರಿಂಗಣಗುಣಿತ
ಬಿಡಿಬಿಡಿಸಿ ಬರೆದಂತೆ ಚಿತ್ರದೊಳು !
ಬಡವರ ಅಲೆದಾಟ, ಹೊಟ್ಟೆಯ ಬೆಂಬತ್ತಿ
ಗುಳೆಯೆತ್ತಿ ಹೊರಟವರ ಹೋರಾಟವು
ದುಡಿವರ, ತಿರುಕರ, ಕೂಲಿ ಕುಂಬಳಿಯವರ
ಜೀವನ ಮೂಡಿರೆ ಹಾದಿಯೊಳೆ
ಮಳೆಯಾಕೆ, ಚಳಿಯಾಕೆ ಭೂಮಿಯ ಬೆಳೆಯಾಕೆ

1 ಸಖೀಗೀತ, ಪುಟ ೮೩.
2 ಸಖೀಗೀತ, ಪುಟ ೩೮.

ಬಿಸಿಲಾಕೆ ನನ್ನಾಕೆ ನೆರೆಯಾದರು
ಇರುಳವಳು ಹಗಲವಳು ಬೆಳಕು–ನೆಳಲಿನವಳು
ಬೆಳುದಿಂಗಳವಳು ನಮ್ಮವಳಾದಳು
ಗಿಡಮರ ತೂಗಾಟ ಹಸು ಹಕ್ಕಿ ಕೂಗಾಟ
ಚಿನ್ನಾಟ ನನ್ನಾಟ ಒಂದಾದವು
ಗಾಳಿಯ ಹಾರಾಟ, ಏರಾಟ ಚೀರಾಟ
ಭೋರಾಟ ಕುಣಿದಾಟ ತುಳಿದಾಟವು
ಎಳೆದಾಟ ಶೂರಾಟ ಎಲೆಗಳ ಕಳೆವಾಟ
ಸುಟ್ಟರೆಯ ಗಾಳಿಯ ಹುಡಿಯಾಟವು
ಛಂದೋಗತಿಯ ಚೆಂದ. ತಾಳಲಯಾನಂದ
ಸ್ವಚ್ಛಂದ ಬಂಧವ ಕಲಿಸಿದವು
ನಾಡಬಳಕೆಯ ನುಡಿಗೆ ಸೋತಿದ್ದ ಮನವನ್ನು
ಹಾಡಿನ ಮೋಡಿಗೆ ಒಲಿಸಿದವು [1]

ಕವಿಜೀವಿದ ಮೇಲೆ ಪರಿಣಾಮ ಮಾಡಿದ ಸುತ್ತಲಿನ ವಸ್ತುಗಳ ಪಟ್ಟಿಗೆ ಮೊದಲೆಲ್ಲಿ ಕಡೆ ಎಲ್ಲಿ ? ಮಾನವಪ್ರಪಂಚ—ಪ್ರಕೃತಿಪ್ರಪಂಚ ಎರಡರ ಸಮ್ಮಿಳನ ಕವಿಯ ಅಂತರಂಗದಲ್ಲಿ ಒಂದಾಗಿ ಕವಿಯ ಛಂದಸ್ಸನ್ನು ರೂಪಿಸುತ್ತವೆ. ಪ್ರಕೃತಿಯಲ್ಲಿ ಜೀವನದಲ್ಲಿ ಕವಿ–ಕಂಡ, ಕೇಳಿದ, ತಾಳ–ಲಯ. ಇವು ಕವಿಯಲ್ಲಿ ಹಾಡನ್ನು ಕಟ್ಟುತ್ತವೆ. ಪ್ರಕೃತಿಯ ಭಾಷೆ, ಜನಭಾಷೆ—ಎರಡೂ ಸೇರಿ ಕವಿಯಲ್ಲಿ ಹಾಡಿನ ಮೋಡಿಯನ್ನು ಸೃಜಿಸುತ್ತವೆ. ಈ ಮೋಡಿಗೆ ಸಿಕ್ಕ ಚಿಂತೆಯು ಸಂಗೀತ ವಾಗುತ್ತದೆ.

ನಮ್ಮಿಂದ ಹರಿದು ಚಿಂತಿ
ಜುಮ್ಮನ್ನತಾವ ತಂತಿ [2]

ಹೀಗೆ ಹಾಡಾಗುವಾಗ ಅವು ಸಹಜವಾದ ಪ್ರಾಸವನ್ನು ಪಡೆದು, ಮಾತು ಮಾತು ಮಥಿಸಿ ಬಂದ ನಾದದ ನವನೀತ ವಾಗಿ ಮೂರ್ತಗೊಂಡು ನಿಲ್ಲುತ್ತವೆ. ಅದು ಪರಿಪೂರ್ಣ ಶಿಲ್ಪವಾಗಿ ನಿಂತಾಗ ಕವಿ ಅದನ್ನು ಗುರುತಿಸುತ್ತಾನೆ.

ಕೂಡಿರೆ ಕೈಮೈ ತಾಳಕೆ ತಾಲ
ಅಲ್ಲಿದೆ ನೃತ್ಯದ ನಿತ್ಯದ ಸೊತ್ತು

1 ಸಖೀಗೀತ, ಪುಟ ೮೩.
2 ಗಂಗಾವತರಣ, ಪುಟ ೧೮.

ಹೊಂದಿರೆ ಒಂದೆನೆ ಪ್ರಾಸಕೆ ಪ್ರಾಸ
ಅದುವೇ ಕಾವ್ಯವಿಲಾಸದ ಗೊತ್ತು [1]

ಹೇಗೆ ನಾಟ್ಯದಲ್ಲಿ ಕೈಮೈಗಳ ವಿನ್ಯಾಸಕ್ಕೆ ತಾಳಕ್ಕೆ ತಾಳ ಕೂಡಿದರೆ ಸರಿಯಾದ ನರ್ತನ ವಾಗುವುದೋ ಹಾಗೆ, ಕಾವ್ಯದಲ್ಲೂ ಪ್ರಾಸಕ್ಕೆ ಪ್ರಾಸ ಹೊಂದಿದರೆ ಕಾವ್ಯವಿಲಾಸ ಒಂದು ಗೊತ್ತನ್ನು ಪಡೆಯುತ್ತದೆ. ಕೃತಿ ಸುಂದರವಾಗಿ ರೂಪುವಡೆದು ನಿಂತಾಗ ಅದು ಕವಿಗೇ ಒಂದು ಪವಾಡದಂತೆ ತೋರುತ್ತದೆ; ತನ್ನ ಕಾವ್ಯಕ್ಕೆ ತಾನೇ ಬೆರಗಾಗುತ್ತಾನೆ ಕವಿ—

ಅರೆಮರವು ಮಾಡುವೀ ಬಂಧ
ಯಾವುದೀ ಛಂದ
ಯಾವುದೀ ಧಾಟೀ
ಸವಿರಾಗ ಬೆರಸಿದ್ದೀ ಉಸಿರು
ಇದಕೆ ಯಾ ಹೆಸರು
ಇದಕೆ ಯಾ ಹೆಸ್ಸರೀ
ಅಂಬಿಕಾತನಯನ ಹಾಡೀ
ಬೆಳುದಿಂಗಳ ನೋಡೀ [2]

ಕವಿಯನ್ನೇ ಕೃತಿ ಅಚ್ಚರಿಗೊಳಿಸುತ್ತದೆ. ತನ್ನನ್ನೇ ಅರೆಮರೆವು ಮಾಡುವ ಈ ಬಂಧ ಯಾವುದು ? ತನಗರಿಯದೆ ಮೂಡಿದ ಈ ಛಂದ ಯಾವುದು ? ಇದರ ಧಾಟಿ ಏನು ? ಇದಕ್ಕೆ ಏನು ಹೆಸರು ? ಎನ್ನುತ್ತಾರೆ. ಕಡೆಗೆ ಅಂದುಕೊಳುತ್ತಾರೆ ಇದು ‘ ಸವಿರಾಗ ಬೆರಸಿದಾ ಉಸಿರು. ’ ಕವಿಯ ಉಸಿರು ಎಂದರೆ ಅಂತಸ್ಸತ್ವದ ಸವಿರಾಗ ಬೆರೆತು ಕವಿತೆಯಾಯಿತು. ತನ್ನದೇ ಆದ ವಿಶಿಷ್ಟ ಪದರಚನೆಯಲ್ಲಿ ಕವಿಯ ಉಸಿರಿನಿಂದ ಹೊಮ್ಮಿದ ಈ ಕವಿತೆಯಲ್ಲಿ ಕವಿ ತನ್ನತನವನ್ನು ಕಂಡುಕೊಂಡು ಇದು ಅಂಬಿಕಾತನಯನ ಹಾಡು ಎಂದು ಹೆಸರು ಕೊಡುತ್ತಾರೆ. ಇಲ್ಲಿಗೆ ಕವನ ಮೈಗೊಂಡು ನಿಂತಿತು. ಕವನ ಎಂದರೇನು ಎಂಬುದನ್ನು ಒಂದು ಮಾತಿನಲ್ಲಿ ಹೇಳುವುದಾದರೆ, ಅದು ಹೀಗೆ :

ಗಾಳಿ ಕಿರಿ ಸುಳಿ ಹುಟ್ಟಿತು
ತಾನೆ ತುಸ ಕಣ್ಬಿಟ್ಟಿತು
ಮೆಲ್ಲನೆದೆಯನು ತಟ್ಟಿತು
ಅದುವೆ ಆಗಸ ಮುಟ್ಟಿತು [3]

1 ಗಂಗಾವತರಣ, ಪುಟ ೬೩.
2 ನಾದಲೀಲೆ, ಪುಟ ೭೬.
3 ,, ಪುಟ ೮೧,

ಹೀಗೆ ಅಂತರನುಭವದ ಚೈತನ್ಯಸ್ಪಂದನದಿಂದ ಗಾಳಿಯಂತೆ ಸುಸೂಕ್ಷ್ಮವಾಗಿ ಹೊರಟುಬರುವಾಗ—

ಕಣ್ಣು ಬಣ್ಣವನಿಟ್ಟಿತು
ಉಸಿರು ನಡಿಗೆಯ ಕೊಟ್ಟಿತು
ನೆವಕೆ ನುಡಿಯನ್ನುಟ್ಟಿತು
ಕವನ-ವೇಷವ ತೊಟ್ಟಿತು
.... .... .... .... .... ....
ಭೂತವೂ ಜಡಜಾತವೂ
ಇದರೊಳೋತಪ್ರೋತವು [1]

ಕವಿತೆ ಮೂಡಿತು—ಕವಿಯ ಅನುಭವದ ಪರಿಪಾಕದಿಂದ. ಅದೂ ಒಂದು ಸೃಷ್ಟಿ ! "ಕಲಾಸೃಷ್ಟಿಯಲ್ಲಿಯೂ ಹಳೆಯದರ ಅನುಭವದ ಪ್ರಳಯಾಂಧಕಾರದೊಳಗಿಂದಲೇ ನವೀನ ಸೃಷ್ಟಿಯ ತರಂಗಗಳೇಳುವುವು. ಹೊಸಮೂರ್ತಿಯ ದರ್ಶನವಾಗುವುದು" ಅಂತಹ ಸೃಷ್ಟಿ ಈ ಕಾವ್ಯ. ಆದರೆ ಈ ಸೃಷ್ಟಿ ಬ್ರಹ್ಮಸೃಷ್ಟಿಗೆ ಒಂದು ಮಜಲು ಕಡಿಮೆ—

'ಓಂಕಾರದ ಶಂಖನಾದಕಿಂತ ಕಿಂಚಿದೂನಾ' [2]

ಈ ಕಾರಣದಿಂದಲೇ ಕಾವ್ಯ ನೀಡುವ ಆನಂದವನ್ನು ನಮ್ಮ ಅಲಂಕಾರಿಕರು 'ಬ್ರಹ್ಮಾನಂದ ಸಹೋದರ' ಎಂಬುದು. ಇಂತಹ ಕಾವ್ಯ ಹಿಗ್ಗಿನಿಂದ ಮೂಡಿ ಹಿಗ್ಗನ್ನು ಬೀರಿ ಓದಿದವರನ್ನು ಹಿಗ್ಗಿಸುತ್ತದೆ. ಬೇಂದ್ರೆಯವರು, ಕಾವ್ಯಕ್ಕೆ "ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ" ಎಂದಿದಾರೆ. ಎಂದರೆ ಕವಿತೆಗೆ ಇಂಥದೇ ಎಂಬ ಒಂದು ನಿರ್ದಿಷ್ಟವಾದ ನಿಘಂಟಿನ ಅರ್ಥವಿಲ್ಲ; ಅದು ಅವನವನ ಸಂಸ್ಕಾರಕ್ಕೆ ತಕ್ಕಹಾಗೆ ಅರ್ಥವಾಗುತ್ತಾ ಹೋಗುತ್ತದೆ. ಅಂತೆಯೇ ಅದಕ್ಕೆ ಯಾವ ಸ್ವಾರ್ಥವೂ ಇಲ್ಲ; ಎಂದರೆ ಯಾವ ಲೌಕಿಕ ಬಯಕೆಯ ಪ್ರಚಾರದ ಸಾಧನವೂ ಅದಲ್ಲ; ಪರಾರ್ಥವೇ, ಎಂದರೆ ಹಿಗ್ಗನ್ನು ಬೀರಿ ಹಿಗ್ಗಿಸುವುದೇ ಅದರ ಗುರಿ.

ಇಂತಹ ಕವನವನ್ನೋದಿ ನಾವೇ ಇಷ್ಟೊಂದು ಆನಂದಪಡುವುದಾದರೆ, ಕವಿಗೆ ಆ ಕಾವ್ಯದ ಅನುಭವ ಹೇಗಿದ್ದಿರಬೇಕು ? ಕವಿ ತನಗಾದ ಅನುಭವವನ್ನೆಲ್ಲಾ ಕಾವ್ಯದಲ್ಲಿ ಹಿಡಿದಿಡಲು ಸಾಧ್ಯವಾಗಿದೆಯೆ ? ಕವಿಗೆ ನಿಜವಾಗಿಯೂ

1 ಮೂರ್ತಿ ಮತ್ತು ಕಾಮುಕಸ್ತೂರಿ—ಮುನ್ನುಡಿಯಲ್ಲಿ.
2 ನಾದಲೀಲೆ, ಪುಟ ೮೪.

ಇದರಿಂದ ತೃಪ್ತಿಯಾಗಿದೆಯೆ— ಎಂಬ ಪ್ರಶ್ನೆ ಏಳುತ್ತದೆ ಒಂದೊಂದು ಸಲ. ಕವಿ ಹೇಳುತ್ತಾರೆ—

ಹಾಸಾದ ಮಿಂಚಿನಂದ
ಬೀಸಿದ್ದ ಸೆರಗಿನಿಂದ
ಸೆಳೆದಂತೆ ಎರಡು ನೂಲು
ಉಳಿದಾವ ನಾಕು ಸಾಲು ! 1

ಅದ್ಭುತವಾದ ಭಾವನೆ ಇದು ! ಮಗುವನ್ನು ತನ್ನ ಸೀರೆಯ ಸೆರಗಿನಿಂದ ಹೊದಿಸಿ ತಾಯಿ ಪಕ್ಕದಲ್ಲಿ ಮಲಗುತ್ತಾಳೆ. ಮಗು ತಾಯಿಯ ಸೆರಗನ್ನು ತನ್ನ ಪುಟ್ಟ ಕೈಗಳಲ್ಲಿ ಹಿಡಿದುಕೊಳ್ಳುತ್ತದೆ. ಮಗುವಿಗೆ ನಿದ್ರೆ ಹತ್ತಿದಾಗ ತಾಯಿ ಯಾವಾಗಲೋ ಎದ್ದು ಹೋಗುತ್ತಾಳೆ. ಆಗ ಅದು ಹಿಡಿದ ಸೀರೆಯ ಸೆರಗಿನಿಂದ ನಾಲ್ಕು ನೂಲು ಮಗುವಿನ ಕೈಯಲ್ಲಿ ಉಳಿದುಕೊಳ್ಳುತ್ತದೆ. ಹಾಗೆಯೇ, ದಿವ್ಯ ಪ್ರತಿಭೆ ಕವಿಯ ಮೇಲೆ ತನ್ನ ಮಿಂಚಿನ ಸೆರಗನ್ನು ಬೀಸಿದಾಗ ಕವಿಯ ಕೈಯಲ್ಲಿ ಅದರ-ದೆರಡು ನೂಲನ್ನು ಸೆಳೆದಂತೆ ನಾಲ್ಕು ಸಾಲು ಕವಿತೆ ಉಳಿದುಕೊಳ್ಳುತ್ತದೆ. ಈ ನಾಲ್ಕು ಸಾಲಿನಲ್ಲೇ ನಮಗಿಷ್ಟು ಆನಂದ; ಆ ಸೆರಗಿಗೆ ಸಂದಾಗ ಆ ಕವಿಯ ಆನಂದ ಎಷ್ಟು; ಎಲ್ಲೋ ನಾಲ್ಕು ಸಾಲು ಉಳಿದಾಗ, ಸಂತೋಷದ ಜೊತೆಗೆ ಕೊರಗೂ ಎಷ್ಟು ! ಈ ಕೊರಗು, ಈ ಅತೃಪ್ತಿ ಕವಿಯ ಕಾವ್ಯಕ್ಕೆ ನಿರಂತರ ಪ್ರೇರಣೆ.

ಈ ನಿರಂತರ ಪ್ರೇರಣೆಯಿಂದ ಬಂದ ಕವಿತೆ ಕೇವಲ ಕವಿಯ ಸ್ವಸಂತೋ-ಷಕ್ಕಲ್ಲ; ಪರಾರ್ಥಕ್ಕೆ, ಜನಕ್ಕೆ. ಬೇಂದ್ರೆಯವರ ಕಣ್ಣಿಗೆ ಸದಾ ಜನತೆಯ ಚಿತ್ರ ಕಣ್ಣಿಗೆ ಕಟ್ಟಿದೆ. ಅವರೇ ಹೇಳಿದಾರೆ—

ಏಕಾಂತದ ಜಿನುಗು ಲೋಕಾಂತಕೆಳೆಯಿತು
ಜನವು ಜನಾರ್ದನನೆಂದರಿತೇ. 2

ಅವರ ಕಾವ್ಯದ ಹೊನಲಿನ ಸಂಗಮಸ್ಥಾನ ಜನಸಮುದ್ರ. ತಾನು ಪಡೆದ ಹಾಡು ಜನವನ್ನು ಹಿಗ್ಗಿಸಲಿ; ಅವರ ಪಾಡನ್ನು ತಗ್ಗಿಸಲಿ— ಎಂಬುದೇ ಅವರ ಹಂಬಲ. ಲೋಕೋದ್ಧಾರಕವಾದ ಗಂಗಾಶಕ್ತಿಯನ್ನು ಆಹ್ವಾನಿಸುತ್ತಾ—

ನಾಡಿ ನಾಡಿಯನು ತುತ್ತ ಬಾ
ನಮ್ಮ ನಾಡನ್ನೆ ಸುತ್ತ ಬಾ
ಸತ್ತ ಜನರನ್ನು ಎತ್ತ ಬಾ. 3

ಎನ್ನುತ್ತಾರೆ—

1 ಗಂಗಾವತರಣ, ಪುಟ ೧೯.
2 ಸಖೀಗೀತ, ಪುಟ ೧೦೩.
3 ಗಂಗಾವತರಣ, ಪುಟ ೬.

ತಾಯಿ ಪಾದದಾನಂದ ಗಂಧ ಉಂಡು
ಬೆಂದವರ ಜೀವ ಬೆರಸೋಣ ಬಾ [1]

ಎಂದು ಕರೆಯುತ್ತಾರೆ. ಹೀಗೆ ಇವರು ಜೀವನದ ಪ್ರೀತಿಯನ್ನು ದೈವೀಶ್ರದ್ಧೆಯನ್ನು ಸ್ಫೂರ್ತಿಯನ್ನಾಗಿ ಉಳ್ಳ ಕವಿ. ತಮ್ಮ ಕವಿತೆ ಬಂದುದು ಅಲ್ಲಿಂದ, ಹೋಗುವುದೂ ಅಲ್ಲಿಗೇ. ಅವರೇ ಒಂದೆಡೆ ತಮ್ಮ ನಿಲುವನ್ನು ಹೇಳಿಕೊಂಡಿದ್ದಾರೆ– 'ನನ್ನ ಕವನಗಳೆಂದು ಇದೀಗ ಹೇಳಿದೆನಷ್ಟೆ. ಅದೊಂದು ರೂಢಿಯ ಮಾತು. ಇವು ನನ್ನವಲ್ಲ. ಕನ್ನಡದ ಕವನಗಳು. ಕನ್ನಡದ ಅಶರೀರವಾಣಿಯು ಸಾವಿರ ಬಾಯಿಗಳಿಂದ ತನ್ನ ಕಣಸನ್ನು ಕನ್ನಡಿಸುತ್ತಿದೆ. ಆ ಸಾವಿರ ಬಾಯಿಗಳಲ್ಲಿ ನನ್ನದೊಂದು.' [2]

---

1 ಗಂಗಾವತರಣ, ಪುಟ ೨೦.
2 ಗರಿ— ಮುನ್ನುಡಿಯಲ್ಲಿ.

§ § § §

೫

# ಬೇಂದ್ರೆಯವರ ಕಾವ್ಯದಲ್ಲಿ ಭಾವ, ರಸ

ಬಿ. ಎಚ್. ಶ್ರೀಧರ

"ಗರಿ" ಯಲ್ಲಿಯೇ ಬೇಂದ್ರೆಯವರ ಕಾವ್ಯರಸದ 'ಸಿರಿ' ಉಜ್ವಲಿಸ ತೊಡಗಿತು. "ಭಾವಗೀತ" ಗಳೆಂದು ಆಧುನಿಕಕಾಲದಲ್ಲಿ ಹೆಸರಾದ ಚಿಕ್ಕಪದ್ಯ ಗಳ ಸಂಗ್ರಹಗಳು ಅನಂತರ ಒಂದಾದ ಮೇಲೆ ಒಂದರಂತೆ ಹೊರಡತೊಡಗಿದವು. 'ಅರಳು-ಮರಳು' ಅಂಥ ಭಾವಗೀತಗಳ ಮಹಾಸಂಗ್ರಹ. ಅದಕ್ಕೆ ದಿಲ್ಲಿಯ ಸಾಹಿತ್ಯ ಅಕಾಡೆಮಿಯ ಬಹುಮಾನ ದೊರಕಿತು.

"ನ ಭಾವಹೀನೋಽಸ್ತಿ ರಸಃ, ನ ರಸೋ ಭಾವವರ್ಜಿತಃ" ಎಂಬುದು ಭರತ ಪ್ರತಿಜ್ಞೆ. ಭಾವದ ವಿಸ್ತಾರ, ಸಾಂದ್ರತೆ, ಗಾಂಭೀರ್ಯಗಳು ಪರಮೋಚ್ಚಹೃದಯ ಸ್ಪರ್ಶಿತ್ವಕ್ಕೆ ಕಾರಣವಾದಾಗ ಒಂದು ಕೃತಿ ರಸವತ್ತೆನ್ನಿಸುತ್ತದೆ. ರಸಾಸ್ವಾದದಲ್ಲಿ ರಸಿಕನು ತನ್ಮಯ ಪರವಶನಾಗಿರುತ್ತಾನೆ. ಅಂಥ ತಲ್ಲೀನತೆಯ ಪರಮಾವಧಿ ಗೇರಿಸದೆ ಅವನನ್ನು ಮಧ್ಯಮ ಹಂತದಲ್ಲಿರಿಸಬಲ್ಲುದಾದ ಕೃತಿಯನ್ನು "ಭಾವ-ವತ್" ಎನ್ನಬಹುದು. ಸಖೀಗೀತವು "ರಸವತ್"; ಮಿಕ್ಕ ಚಿಕ್ಕಕವನಗಳು "ಭಾವವತ್". ರತಿ, ಹಾಸ, ಕ್ರೋಧ, ಉತ್ಸಾಹ, ವಿಸ್ಮಯ, ಶೋಕ, ಭಯ, ಜುಗುಪ್ಸೆ, ಶಮಗಳು ಸ್ಥಾಯಿಭಾವಗಳೆಂದು ಪ್ರಸಿದ್ಧ.

ರತಿಗೀತಗಳೇ ಪ್ರೇಮಗೀತಗಳು. ವಾತ್ಸಲ್ಯ, ಭಕ್ತಿ, ಪ್ರಣಯಗಳು ರತಿಯ ರೂಪಾಂತರಗಳು. ರತಿ, ಉತ್ಸಾಹಗಳೂ ಹಾಸವೂ ಅತ್ಯಂತ ಹೆಚ್ಚು ಜನರಿಗೆ ಪ್ರಿಯ. ಶೋಕವು ಜನಪ್ರಿಯತೆಯಲ್ಲಿ ನಾಲ್ಕನೆಯದು. ಮಿಕ್ಕವುಗಳೆಲ್ಲ ಐದನೆ ಯವು; ಶಮವು ನವರಸಗಳಲ್ಲಿ ಅತ್ಯಲ್ಪಸಂಖ್ಯಾತ ಪ್ರೌಢರಸಿಕರಿಗೆ ಪ್ರಿಯ. ಆದುದರಿಂದ ಅದರ ಸ್ಥಾನವು ವಿಶಿಷ್ಟ.

ಗುರು ಬೇಂದ್ರೆಯವರ ರತಿಗೀತಗಳಲ್ಲಿ "Love is God— ಪ್ರೇಮವೇ ದೇವರು" ಎಂಬ ಪ್ರೇಮಾದಿ ದೇವಾಂತ ಅಥವಾ ಪ್ರಣಯಾದಿ ಭಕ್ತ್ಯಂತ ವಿಕಾಸವು ಪ್ರತಿಯೊಂದು ಸಂಗ್ರಹದಲ್ಲೂ ಕಂಡು ಬರುತ್ತದೆ. ಅದಕ್ಕೆ ಕಾಲಿಕ

ಅಥವಾ ಸ್ಥಳಿಕ ಅನುಕ್ರಮಿಕತೆ ಇರುವುದು ಅತ್ಯಂತ ಸ್ಥೂಲಮಾನದಿಂದ. ಪ್ರಗಲ್ಭ ಪ್ರತಿಭೆಗೆ ಭಾವಾಂತರಗಳು ದಶಮಾನಗಳ ಅಳತೆಗೆ ಒಳಪಟ್ಟಂತೆ ಹೊಳೆಯ ಬೇಕೆಂಬ ನಿಯಮವಿಲ್ಲ.

ಉದಾತ್ತನಾಯಕರ ಭಕ್ತಿ, ಶೋಕಗಳು ಪರಾಕಾಷ್ಠೆಯಲ್ಲಿ ಶಮದೊಡನೆ ಅಭಿನ್ನವಾಗಿ ತೋರುತ್ತವೆ; ಅವರ ಉತ್ಸಾಹವೂ ಹಾಗೇ. ಭಕ್ತ ಅಥವಾ ಸಂತ ಇಲ್ಲವೆ ಯೋಗೋನ್ಮುಖ ಮನಸ್ಸು ಅಂಥ ಭಾವಗಳ ಪೋಷಣೆಗೆ ಇತರ ಭಾವಗಳ ಮೆಟ್ಟಿಲುಗಳನ್ನು ಹತ್ತಿ ಹೋಗಬಹುದು. ಭಕ್ತಿಶಕ್ತಿಯು ಬೇಂದ್ರೆಯವರ ಜೀವನ ದೇವತೆ. ಅದು ಅವರ ಜಗನ್ಮಾತೆ, ಅಂಬಿಕೆ, ಶ್ರೀಮಾತೆ. ಶ್ರೀ ಶಂಕರಾಚಾರ್ಯರ ಸ್ತೋತ್ರಕಾವ್ಯಗಳಲ್ಲಿ ಪಾರ್ವತಿ ಅಂಥ ಜಗನ್ಮಾತೆ. ಅರವಿಂದೀಯ ಜಗನ್ಮಾತೆ ಬೇಂದ್ರೆಯವರಿಗೆ ಆರಾಧ್ಯೆ. ಅವರ ಸರ್ವಭಾವಗಳೂ ಉಕ್ತ ಸಮುದ್ರವನ್ನು ಸೇರುವುವು.

ಜಡ, ಪಶು-ಪಕ್ಷಿ-ಕ್ರಿಮಿ ಮತ್ತು ಮಾನವರ ಜಗತ್ತು ಪ್ರೇರಿಸಿದ ಪ್ರೇಮವು ಗುರು, ದೇವ, ಬ್ರಹ್ಮಪ್ರೇಮವಾಗಿ ಪರಿಣಮಿಸುತ್ತ ಹೋಗುವದು ವಿಕಾಸದ ಸಹಜಮಾರ್ಗ. ಜಡವು ಅನ್ನಮಯ, ಪಶ್ವಾದಿಯು ಪ್ರಾಣಪ್ರಧಾನ, ಮಾನವ ಮನಃ ಪ್ರಧಾನ, ದೇವತೆ ವಿಜ್ಞಾನ ಪ್ರಜ್ಞಾಘನ, ಬ್ರಹ್ಮವು ಆನಂದ ಪ್ರಜ್ಞಾಸ್ತ-ರಕ್ಕೆ ಧ್ಯೇಯ. ಅಸಿತ್ಯಾನಂದದಿಂದ ನಿತ್ಯಾನಂದದ ಅನುಭವವನ್ನು ಸಹಜ ಗೊಳಿಸಿಕೊಳ್ಳಲು ಗೀತಾರಾಧನೆಗಿಳಿದ ಸಂತ ಪರಂಪರೆ ಬೇಂದ್ರೆಯವರದು. ಗೀತ ಮಾರ್ಗವಿಲ್ಲಿ ಗೀತಾಮಾರ್ಗ. ಅಸ್ಪಷ್ಟ, ಸ್ಪಷ್ಟ ಮತ್ತು ಆತ್ಮಾಂತರ್ಗಾಮಿ ಎನ್ನಿ-ಸುವ ಪ್ರೇಮವಿಕಾಸವು ಕವಿಜೀವದ ಮುಗ್ಧ, ಮಧ್ಯ, ಪ್ರಗಲ್ಭ ಸ್ಥಿತಿಗಳ ಸೂಚಕ. ಈ ಸಾಂಸ್ಕೃತಿಕ ಮುನ್ನಡೆಗೆ ಬೇಂದ್ರೆಯವರ ಹಲವಾರು ಕವನಗಳು ನಿದರ್ಶನಗಳಾಗಿವೆ :

೧. "ಗಮುಗಮಾ ಗಮಾಡಸತಾವ ಮಲ್ಲಿಗಿ"
("ಗಂಗಾವತರಣ"ದ ೨೯ನೆಯ ಪದ್ಯ)

೨. "ಸಖೀಗೀತ"ದ "ಸಖೀಗೀತ."

೩. "ಬರುವದೇನೆ ನೆಪ್ಪಿಗೆ"
("ಗಂಗಾವತರಣ"ದ ೯ನೆಯ ಪದ್ಯ

೪. "ಹುಬ್ಬಳ್ಳಿಯಾಂವಾ"
("ಸಖೀಗೀತ"ದ ೨೪ನೆಯ ಪದ್ಯ)

೫. " ನಾದಲೀಲೆ " ಯ " ಮನದನ್ನೆ "

ಮುಂತಾದವು ಪ್ರಣಯಗೀತದ ವರ್ಗಕ್ಕೆ ಸೇರುತ್ತವೆ. ಈ ಲೌಕಿಕ ಪ್ರೇಮವು ಅಲೌಕಿಕ ಅಥವಾ ಲೋಕೋತ್ತರವಾಗುತ್ತ ಹೋದುದಕ್ಕೆ ಬಹಳ ನಿದರ್ಶನಗಳು ಸಿಗುತ್ತವೆ :

೧. " ಸಚ್ಚಿದಾನಂದ "
( " ನಾದಲೀಲೆ "ಯ ೩೦ನೆಯ ಪದ್ಯ )

೨. " ಮಾಯಾ ಕಿನ್ನರಿ "
( " ಸಖೀಗೀತ "ದ ೪ನೆಯ ಪದ್ಯ )

೩. " ಮನೆಗೆ ಹೋಗವ್ವಾ "
( " ಸಖೀಗೀತ "ದ ೨೩ನೆಯ ಪದ್ಯ )

೪. " ಅಪ್ರತಿ—ಮಾ "
( " ನಮನ "ದ ೩೭ನೆಯ ಪದ್ಯ )

೫. " ನಮನ "ದ " ನಮನ "

ಮುಂತಾದವು ಮಾನವೀಯ ಉದಾರ ಪ್ರೇಮದ ಕವನಗಳು. ಪ್ರೇಮವು ತತ್ತ್ವವಾಗಿ, " ಅತ್ಯತಿಷ್ಠದ್ದಶಾಂಗುಲಂ " ಎಂಬಂತೆ ಆದಾಗ—

೧. " ಹೃದಯ ಸಮುದ್ರ "ದ " ಹೃದಯ ಸಮುದ್ರ "
೨. " ಮುಕ್ತಕಂಠ "ದ " ಅಮೃತಾನುಭವ "
೩. " ನಾಕುತಂತಿ "ಯ " ಬಯಲ್ "
೪. " ನಾಕುತಂತಿ "ಯ " ಪರಾಕ್ಷ ಶರ ರೂಪಾಕ್ಷ "
೫ " ಗಂಗಾವತರಣ "ದ " ತುಂಬಿ "

ಆಗುತ್ತವೆ. " ಮುಗಿಲ ಮಲ್ಲಿಗೆ " ಯ " ಕನ್ನಡ ಕವನ " ಹೇಳುವಂತೆ—

" ರೂಪಕಾಂತಿಯಲಿ ರೂಪದ ಭ್ರಾಂತಿ,
ಹೆಜ್ಜೆ-ಗೆಜ್ಜೆಗಳ ಸುಳಿವೆಲ್ಲೋ ?
ಓಂ ರಾಗದ ಕವಿಗಾರನೆ ಹೇಳು
ಪ್ರತಿಮೆ ಪ್ರತೀಕವು ಯಾಕಲ್ಲೋ ? "

ಎಂಬ ಸವಾಲು ಕವಿವಾಣಿಯ ರೂಪಕಾತ್ಮಕತೆಯ ಧ್ವನಿಮತ್ತೆಯನ್ನು ಸೂಚಿಸುತ್ತದೆ. ಇಡಿಕವನವೊಂದು ರೂಪಕ, ಪ್ರತಿಮೆ, ಪ್ರತೀಕ. ಅದು ಧ್ವನಿಸುವುದು ಕೆಲವರಿಗೆ ಭಾವ, ಕೆಲವರಿಗೆ ರಸ. ಅವರವರ ವಾಸನಾಬಲದ ಮಟ್ಟವೇ ಉತ್ತಮ ಕವನಕೃತಿಗಳ ಭಾವವತ್ತೆ— ರಸವತ್ತೆಗಳಿಗೆ ನಿರ್ಣಾಯಕ. ಮೇಲೆ ಕೊಟ್ಟ ತ್ರಿಮತಿಪ್ರೇರಿತ ಕವನಗಳಲ್ಲಿ ಏಕಮತಿಗಳಿಗೆ ರಸವತ್ತೆನ್ನಿಸಿದ್ದು ಅನ್ಯ ಮತಿಗಳಿಗೆ ಭಾವವತ್ತು ಎನ್ನಿಸಬಹುದು. ಸಂಪೂರ್ಣಾರ್ಥದ ರಸವತ್ತೆಯು ಕಾಲದೈರ್ಘ್ಯದ ಬಲವುಳ್ಳ ಸುದೀರ್ಘವಾದ ಮಹಾಕಾವ್ಯ, ಮಹಾಕಥೆ ಅಥವಾ ಮಹಾನಾಟಕ. ಓದಿದರೇನೇ ಅನುಭವಕ್ಕೆ ಬರುವುದು.

"ಓಂ ರಾಗದ ಕವಿಗಾರ" ರಲ್ಲಿಂತೂ ಅನುಭಾವ-ಭಕ್ತಿಗಳ ಸಂಯೋಗದಿಂದ ಅಸಾಧಾರಣ ದೈವಾಯತ್ತ ಬುದ್ಧಿಗಳಿಗಾದಷ್ಟು ಕಾವ್ಯರಸಾಸ್ವಾದ ಅವರ ಕೃತಿಗಳಿಂದ ಇತರ ಜಡಾಧೀನ ಬುದ್ಧಿಗಳಿಗಾಗದು. ಜಡವಿಚಾರವು ಜಾಡ್ಯ, ದೈವ ವಿಚಾರವು ದಿವ್ಯ. ಜಡಶ್ರದ್ಧೆ, ದೇವ (ಜೀವ) ಶ್ರದ್ಧೆ (ಚೈತನ್ಯ ಅಥವಾ ಜ್ಞಾನಶ್ರದ್ಧೆ) ಪರಸ್ಪರ ವಿರುದ್ಧ, ಜಡಮತಿಯು ಜೀವನಿರಾಸ ದೃಷ್ಟಿಯದು, ಚೈತನ್ಯಶ್ರದ್ಧೆಯು ಜಡಾಂತರೀಕರಣ ದೃಷ್ಟಿಯದು; ಜೀವವ್ಯಾಪ್ತಿಯು ಜಡವ್ಯಾಪ್ತಿಗಿಂತ ದೊಡ್ಡದು. "ಜೀವೋ ಬ್ರಹ್ಮೈವನಾಪರಃ"; "ಸರ್ವಂ ಖಲ್ವಿದಂ ಬ್ರಹ್ಮ", ರೂಪದ ಭ್ರಾಂತಿ ಜಡನಿಷ್ಠತೆಗೆ, ಆತ್ಮನಿಷ್ಠತೆಗಲ್ಲ. "ಯೋಗಸ್ಥಃ ಕುರುಕರ್ಮಾಣಿ" ಎಂಬಂತೆ ತೃತೀಯಮತಿಪ್ರೇರಿತ ಕವನಗಳ ಅವಲೋಕನ ನಡೆಯಬೇಕು. ಕಾವ್ಯಾವಲೋಕನವಿಲ್ಲಿ ಕಾವ್ಯಯೋಗ.

ಕೃತಿಗಳ ರೂಪಕಗಳನ್ನು ಹೆಕ್ಕಿ ಲೆಕ್ಕ ಮಾಡಿ ಅವುಗಳ ಸ್ವಾರಸ್ಯವನ್ನು ಸವಿಯಲು ಕೂಡ ಬೇಂದ್ರೆಯವರ ಕವನಸಂಗ್ರಹಗಳಲ್ಲಿ ಬಹಳ ಅವಕಾಶವಿದೆ. ಅಂಥಕಾವ್ಯವಾಣಿಗಳಲ್ಲಿವೂ ಇಡಿ ಕೃತಿಯ ಭಾವಧ್ವನನದ ಪ್ರೇರಕ ಸಾಮಗ್ರಿಗಳ ಅಂಗವಾಗಿರುವುದರಿಂದ ಅವುಗಳಲ್ಲಿ ಉಂಟಾಗುವ ತಲ್ಲೀನತೆಯು ತೀರ ಕ್ಷಣಿಕ, ಗೌಣ. ಆದುದರಿಂದ ಪ್ರಧಾನ ಭಾವ-ರಸಗಳ ಆಸ್ವಾದದ ಆಹ್ಲಾದವನ್ನೇ ಅನುಸರಿಸಿ ಹೋಗಲೀಗ ಪ್ರಯತ್ನಿಸಲಾಗುತ್ತಿದೆ.

"ನಾದಲೀಲೆ"ಯ "ಮದ್ಯ" ವು ತೀರ್ಥದ ರೂಪಕ. ದೇವತೀರ್ಥವೇ ಮದ್ಯ. ಅದು ದೇಹಾತ್ಮಭಾವವನ್ನು ಮರೆಸಿ ಸ್ವ + ಅಧ್ಯಯನ ಅಥವಾ ಆತ್ಮಜ್ಞಾನ ಎಂಬುದರತ್ತ ಸಾಧಕನನ್ನು ಕೊಂಡೊಯ್ಯುತೆಂಬುದನ್ನು ಪದ್ಯವು ಹೇಳಿದೆ. ವಿಶ್ವಾಧಾರವಾದ ಸತ್ಯತೆ, ಜ್ಞಾನಿತೆ, ಅನಂತತೆ, (ಸತ್ತಾಭಾವ, ಚಿನ್ಮೂಲ, ಆನಂದ ವ್ಯಾಪ್ತಿ) ಮೂಡಲು ವಿಶ್ವನಾನಾತ್ವ ಘರ್ಷಣದ ಕತ್ತಲು ಅಥವಾ ಅಜ್ಞಾನವು ತೀರ್ಥಪ್ರಾಶನದಿಂದ ಹರಿಯಿತು. ಅನಂತಸತ್ಯ (ಆತ್ಮ, ಬ್ರಹ್ಮ)ದ ಪ್ರತೀಕವಾಗಿದೆ ಕೆಂಪು ಮಿಂಚಿನ ತ್ರಿಶೂಲ. ಆತ್ಮವು ವಿಶ್ವದ ಅಂತರ್ಯಾಮಿ, ಬಹಿರ್ಯಾಮಿ

ಎನ್ನಿಸಿದ ಸರ್ವಸಾರ. ಅದು ಈ ಮದ್ಯದ ರಸ. ಈ ರಸವನ್ನು ಹೀರುವ ಸಾಧಕನ ಭಾವವಿಲ್ಲಿ ಧ್ವನಿತ. ಇದಾವ ಭಾವ ? ಅಧ್ಯಾತ್ಮಭಾವ, ಶಮೋನ್ಮುಖತೆ, ಪ್ರಪತ್ತಿ ವೈಶಿಷ್ಟ್ಯ, ಮಹಾರಾಗರೂಪದ ಮಹಾವೈರಾಗ್ಯ ! ಇಲ್ಲಿಯ ಆತ್ಮವು ದೇಹಸೀಮಿತವಾದರೆ ಇದರ ಬದಲು Narrow Selfishness ಸಂಕುಚಿತ ಸ್ವಾರ್ಥ ಪರತೆಯು ಉದ್ಬೋಧ್ಯಭಾವವಾಗಬೇಕಾಗುತ್ತದೆ. "ನಾಲ್ಪೇಸುಖಮಸ್ತಿ" ಯನ್ನು ನಂಬಿದ ಕವಿಯ ಉದ್ದಿಷ್ಟಾರ್ಥ ಇದಾಗದು. ಅನ್ನಮಯದಿಂದ ಆನಂದಮಯದ ವರೆಗಿನ ಯಾವ ಪ್ರಜ್ಞೆಯೇ ಆಗಲಿ, ಅಲ್ಪವ್ಯಾಪ್ತಿಯಿಂದ ಗೃಹೀತವಾದಾಗ ಬ್ರಾಹ್ಮೀಸ್ಥಿತಿಯನ್ನು ಅನುಭವಕ್ಕೆ ತಂದುಕೊಡಲಾರದು.

ಶ್ರೀ ಜೇಂದ್ರೆಯವರ "ಸಾಂತಿ"ಯು ಸಾಮಾನ್ಯರ "ಅಶಾಂತಿ." ಅಶಾಂತಿಯು ಅಸ್ಥಿತಪ್ರಜ್ಞೆ. "ಸಾಂತಿ"ಯಲ್ಲಿ ಅದರ ಹಾವಳಿಯನ್ನು ಕವಿಗಳು ಬಣ್ಣಿಸಿದ್ದಾರೆ. ಅದರ ಬಗೆಗಿನ ಜುಗುಪ್ಸೆಯೇ ಇಲ್ಲಿ ಪ್ರೇರಿತವಾದ ಭಾವ. ಅಶಾಂತಿಯು ತ್ಯಾಜ್ಯವಾದರೂ "ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ" ಎಂಬ ಮಾತಿನಂತೆ ಅಶಾಂತಿಕಾರಕವಾದ ಪಾಪಕರ್ಮದಲ್ಲಿ ಅನೇಕರು ಪ್ರವರ್ತಿಸುತ್ತಾರೆ. ಅಶಾಂತಿಯು ಅಶುಭ, ಅಮಂಗಲ, ಅಪ್ರಸನ್ನತೆಗೆ ಕಾರಣ. ಕಾವ್ಯಕ್ಕೆ ಪ್ರಸಾದಗುಣ ಹೇಗೋ ಜೀವನಕ್ಕೆ ಆನಂದ (ಶುದ್ಧಬುದ್ಧಿಜನ್ಯ ಸ್ಥಿತಿ) ಹಾಗೆ. ಅಹಿಂಸಾದಿ ಪಂಚಮಹಾಧರ್ಮಗಳಿಗೆ ವಿರುದ್ಧವಾದುದು ಅಶುದ್ಧ, ಪಾಪ, ಅಧರ್ಮ; ಅನ್ಯಾಯ, ಅಕರ್ತವ್ಯ.

"ಸೂರ್ಯಪಾನ"ದ "ಅಮರ ಮರಣ" ದಲ್ಲಿ ಆತ್ಮದ ಅಮರತೆಯನ್ನು ಕೊನೆಯ ಸಾಲು ಎತ್ತಿ ಹೇಳಿದೆ. ಮಹಾತ್ಮರಿಗೆ ದೇಹದ ಸಾವು ಖೇದಕರವೆನ್ನಿಸದು —ಅದರಲ್ಲೂ ಅದು ಮಹಾಕಾರ್ಯಕ್ಕಾಗಿ ದುಡಿಯುತ್ತಿದ್ದಾಗ. "ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ ?"— ಮನಸ್ಸಿನಂತೆ ಮಹಾದೇವ, "ಯದ್ಭಾವಸ್ತದ್ಭವತಿ", "ಯೋ ಯಚ್ಛ್ರದ್ಧಃ ಸ ಏವ ಸಃ"–One becomes what he believes ! ಮಹಾತ್ಮಾ ಗಾಂಧಿಯವರ ಶ್ರದ್ಧೆಯು ಆತ್ಮದಲ್ಲಿದ್ದುದನ್ನು ಕವಿ ಎತ್ತಿ ಹೇಳಿದ್ದರಿಂದ ಅವರ ಮರಣವು ವಿವೇಕಿಗಳಿಗೆ ಅತಿ ದುಃಖಕರವೆನ್ನಿಸದು ಎಂಬ ಅರ್ಥ ಹುಟ್ಟಿ ಶಮೋನ್ಮುಖತೆಯನ್ನು ಕವನವು ಪ್ರೇರಿಸುತ್ತದೆ.

ಶಮವು ಸರ್ವೋತ್ತಮ ಭಾವ. ಅದಕ್ಕೆ ರತಿ, ಹಾಸ, ಕ್ರೋಧ, ಉತ್ಸಾಹ, ಶೋಕ, ವಿಸ್ಮಯ, ಭಯ, ಜುಗುಪ್ಸೆಗಳು ಪ್ರೇರಕ ಹಿನ್ನೆಲೆಗಳಾದಾಗ, ಆಯಾ ಕಾರಣದ ದೆಸೆಯಿಂದ ಅದನ್ನು ಅಷ್ಟವಿಧವೆಂದು ಗುರುತಿಸಬಹುದು. ಭಕ್ತಿಯು ರತ್ಯಂತರ್ಗತ. ವಿಶ್ವಪ್ರೇಮವು ಮಹಾರತಿ, ಮಹಾ ವೈರಾಗ್ಯ, ದಿವ್ಯಪ್ರೇಮ. "ಅಮರ ಮರಣ" ವು ಶೋಕಚ್ಛಾಯೆಯಿಂದ ಉದ್ಬುದ್ಧವಾಗುವುದರಿಂದ ಈ ಭಾವವನ್ನು ಶೋಕೋದ್ದೀಪಿತ ಶಮ (ಶಾಂತಿ) ಎನ್ನಬಹುದು.

"ಮುಗಿಲ ಮಲ್ಲಿಗೆ" ಯ "ಶರಣು," ಜ್ಞಾನಾರ್ಥಿಯಾದ ಭಕ್ತನ ಯಾಚನೆಯನ್ನು ಹೇಳುತ್ತದೆ. ಆತ್ಮವೇ ಜ್ಞಾನ; ಆತ್ಮಸ್ಥಿತಿಯೇ ಬ್ರಾಹ್ಮೀಸ್ಥಿತಿ, ಪರಮಪದ, ಪರಮಶಾಂತಿ. "ಓಂ ಶಾಂತಿಃ ಶಾಂತಿಃ ಶಾಂತಿಃ" ಎಂದು ವೇದ ಮಹಾವಾಕ್ಯಗಳು ಮುಕ್ತಾಯವಾಗುವುದು ಈ ಅರ್ಥದ ದೆಸೆಯಿಂದಲೇ. ಆವರಣವು ಭೇದಗಳ ಹಾಗೂ ಅವುಗಳ ಸಂಘರ್ಷದಿಂದ ಉಂಟಾಗುವ ಅಶಾಂತಿಗೆ ಕಾರಣವಾದ Individualism, Separatism, Personalism, Selfishness, Sensualism ಪರಹಿತವಿಮುಖವಾದ ಸ್ವೇಂದ್ರಿಯ ತರ್ಪಣ ಬುದ್ಧಿ. ಅದು ನಿವಾರಣೆ ಹೊಂದಲು ಮಹಾತ್ಮನಾದ ಗುರುದೇವತೆಗೆ ಶರಣು ಪೊಕ್ಕು ಸಾಧಕ (ಭಕ್ತ) ಬೇಡುತ್ತಾನೆ. ಗುರುವು ಲಘುವಲ್ಲ, ಲಘುವು ಗುರುವಲ್ಲ. ಗುರುಶರಣನ ಭಾವವು ಭಕ್ತಿ ಅಥವಾ ಪ್ರಪತ್ತಿ. ಮಹಾತ್ಮವು ಅಲ್ಪಾತ್ಮವನ್ನು ಉದ್ಧರಿಸಲು ಇದರ ಅಲ್ಪತೆ (ಆವರಣ) ಯನ್ನು ಕ್ರಮೇಣ ಕಡಿಮೆ ಮಾಡಲು ಯತ್ನಿಸುತ್ತ ಹೋಗುತ್ತದೆ— ಎಂಬುದರಲ್ಲಿ ಶ್ರದ್ಧೆ ಇರುವುದರಿಂದ ಮಹಾಜೀವನ, ಮಹಾಮರಣಗಳನ್ನು ಹೊಂದಿದ ಮಹಾತ್ಮನನ್ನು ಗುರುವೆಂದು ಅಲ್ಪಾತ್ಮರು ಅಲ್ಪವಾದರೂ ವಿವೇಕ ಮೂಡಿದಾಗ ಶರಣುಪೊಕ್ಕು ಆವರಣಭಂಗವನ್ನು ಮಾಡಿರೆಂದು ಪ್ರಾರ್ಥಿಸುತ್ತಾರೆ.

"ನವಚೇತನ" ದ "ಒಲವಿನಂಚೆಯ ಬರವು" ಸಾಧಕನ ರಕ್ತ ಮನಸ್ಸು ತನ್ನ ರಾಗವನ್ನು (ರತಿಯನ್ನು) ಹೃದಯಾಕಾಶದಲ್ಲಿಟ್ಟು "ಅತ್ಯತಿಷ್ಠದ್ದ-ಶಾಂಗುಲಂ" ಎಂಬಷ್ಟು ವಿಸ್ತರಿಸಿ "ತಾನೇ ತಾನಾದ" ಸಂಗತಿಯನ್ನು ಹೇಳುತ್ತದೆ. ತಾನೆತಾನಾಗುವುದೆಂದರೆ ಶಾಂತ, ಶಿವ, ಸುಸ್ಥಿರಪ್ರಜ್ಞೆಯಲ್ಲಿ ಲೀನವಾಗುವುದು. ಇದು ರತಿವಿಕಾಸದಿಂದಾದ ಶಮಸಿದ್ಧಿ; ಆದುದರಿಂದ ರತಿ ಪ್ರೇರಿತ ಶಮಭಾವ.

"ನಮನ" ದ "ನಮನ" ದಲ್ಲಿ ಸಕಲವೂ ಗರ್ಭಿತ ಎಂದು ಸಾಕಲ್ಯ ಪ್ರಜ್ಞೆಯನ್ನು ಪ್ರೇರಿಸಲು ಯತ್ನಿಸಲಾಗಿದೆ. ಕೃಷ್ಣ–ರಾಧೆ, ಶಿವ–ಶಕ್ತಿ, ಪುರುಷ–ಪ್ರಕೃತಿ, ಬ್ರಹ್ಮ–ಮಾಯೆಗಳೆಂಬ ದ್ವಂದ್ವವು ಸತ್ಯವೂ [illegible] ಸೃಷ್ಟಿ-ಸ್ಥಿತಿ–ಲೀಲೆಗಳನ್ನು [illegible] ನಡೆಸುವುದೆಂಬ ಪೌರಾಣಿಕ ಕವಿಕಲ್ಪನೆಯ [illegible] (ತನ್ನ ಪರಬ್ರಹ್ಮಣಃ ಭಾವಃ) ಶರಣು [illegible] ಮತ್ತು ತ್ರಿಕರಣ ಪೂರ್ವಕ ಯತ್ನಿಸುವುದು ಶುದ್ಧ ಭಕ್ತಿ. ಸೃಷ್ಟಿ–ಸ್ಥಿತಿ–ಲಯಗಳು ವಿಶ್ವ, ಮಾಯೆ, ಗುಣಗಳ ಇಂದ್ರಿಯಮಾರ್ಗಗತವಾ[illegible]ವು.

"ಆತ್ಮಾನಂ ರಥಿನಂ ವಿದ್ಧಿ
ಶರೀರಂ ರಥಮೇವತು |

ಬುದ್ಧಿಂತು ಸಾರಥಿಂ ವಿದ್ಧಿ
ಮನಃ ಪ್ರಗ್ರಹ ಏವಚ |
ಇಂದ್ರಿಯಾಣಿ ಹಯಾನಾಹುಃ ''

ಎಂಬ ರೂಪಕೋಕ್ತಿಯಂತೆ ದೇಹಾತ್ಮಭಾವದ ಅನ್ನಮಯ ಪ್ರಜ್ಞಾಪ್ರಧಾನನಾದ ಜೀವಾತ್ಮನ ಪ್ರಾರ್ಥನೆಯು ತದಧೀನತೆಯ ಸಂರಕ್ಷಣೆಯನ್ನು ಪಡೆಯುವುದೇ ಆಗಿದೆ. ಅಹಂಕಾರ, ಕರ್ತೃತ್ವ, ಭೋಕ್ತೃತ್ವಗಳನ್ನು ತದ್ರೂಪದ ಉಕ್ತ ದ್ವಂದ್ವಾಭಾಸಗತವಾದ ಪರಮಾತ್ಮಕ್ಕೆ ಸಮರ್ಪಿಸುವುದೇ ಯಜ್ಞ, ಪೂಜೆ, ತ್ಯಾಗ. ಇದಕ್ಕೆ ಹದವಾದ ಮನೋಭಾವವೇ ಪರಮಭಕ್ತಿಯ ನಮ್ರತೆ, ನಮನ ಭಾವ. ಉಕ್ತರೂಪಕೋಕ್ತಿಯಲ್ಲಿ ಆತ್ಮವು ಬದ್ಧಜೀವಾತ್ಮ, ಉಳಿದವು ಅದರ ಅನುಭವದ ಸಾಧನಗಳು; ಸ್ವೇತರ ಪದಾರ್ಥಗಳು ಭೋಗ್ಯಗಳು. ಭೋಗ್ಯಾಸಕ್ತಿಯೇ ಬಂಧ, ಆವರಣ, ಅಜ್ಞಾನ, ಅವಿದ್ಯೆ. ತದಧೀನತೆಯ ಪರಾಕಾಷ್ಠೆಯೇ ತಲ್ಲೀನತೆ, ಏಕೀಭವನ, ಜೀವನ್ಮುಕ್ತಿ. ದೇಹೋಽಹಂಭಾವದಿಂದ ಬ್ರಹ್ಮಾಹಂ ಪ್ರಜ್ಞೆಯತ್ತ ಹರಿಯಲು ತ್ರಿಕರಣ ಶುದ್ಧ ನಮನದ ಪರಾಭಕ್ತಿಯು ಸರ್ವಸಮರ್ಥ ಸಾಧನವೆಂಬ ಜ್ಞಾನದಿಂದ ಕವಿಗಳು ಇಲ್ಲಿ ನ + ಮನ = ನಿರ್ಮನಸ್ಕತೆ, ನಾನಾತ್ವ ಮಗ್ನಮನಸ್ಕತೆಯ ಅಭಾವ ಎಂಬ ಅರ್ಥವನ್ನು ಧ್ವನಿಸಿದ್ದಾರೆ. ನಾನಾ ಭೌತ ಪದಾರ್ಥಗಳಿಗೆ ಸಂಬಂಧಿಸಿದ ಕಲ್ಪನೆಗಳು (ideas) ಇಲ್ಲವಾದಲ್ಲಿ ಮನಸ್ಸು ಇಲ್ಲವಾಗುತ್ತದೆ. ‘‘ಮನೋನಾಶಾತ್ (ವಿಲಯನಾತ್) ಮೋಕ್ಷಃ’’ ಜೀವಾತ್ಮನ ಭೋಗಸಾಧನಗಳಲ್ಲಿ. ಸಂಕಲ್ಪ-ವಿಕಲ್ಪಾತ್ಮಕವಾದ ಮನವು ಅಗ್ರಗಣ್ಯ. ಅಹಂಕಾರ ಮಮಕಾರಗಳಿಗೂ ಅರಿಷಡ್ವರ್ಗಗಳಿಗೂ ಅದು ಸದಾ ಒಳಪಡುತ್ತಿರುತ್ತದೆ. ಆದುದರಿಂದ ಶುದ್ಧಬುದ್ಧಿಯನ್ನು ( ಮನಸಸ್ತು ಪರಾ ಬುದ್ಧಿಃ ) ತಲುಪಿ ಆ ಮೂಲಕ ಸಚ್ಚಿದಾನಂದ ಬ್ರಹ್ಮ ಸ್ಥಿತಿಯಲ್ಲಿ ಲೀನವಾಗಲು( ನಾಶವಾಗಲಿಲ್ಲ, ಒಂದಾಗಲು, ಬೆರೆತು ಏಕೀಭವಿಸಿಹೋಗಲು )ಭಕ್ತ, ಸಾಧಕ, ಯೋಗಿ, ಅನುಭಾವಿ, ಜ್ಞಾನಿ ಪ್ರಾರ್ಥಿಸುವ ಭಾವವು ಮಹಾಭಕ್ತಿ. ಮನಕ್ಕೆ ಮಾನ (ಅಳತೆ)ವಿದೆ, ಆದ್ದರಿಂದ ಅನುಮಾನ(ಊಹೆ)ಇದೆ, ಉಪಮಾನ(ಹೋಲಿಸಿ ಕಲ್ಪಿಸಿಕೊಳ್ಳುವ ಭಾವ ಚಿತ್ರ) ಇದೆ. ಅಳತೆಯಲ್ಲಿ (ಪರಿಮಿತತೆಯಲ್ಲಿ), ಊಹೆ (ನಾನಾ ಭೌತಿಕ ಮರ್ನ ಕಲ್ಪನೆಗಳಲ್ಲಿ )ಯಲ್ಲಿ ಮತ್ತು ಭೌತಿಕ ನಾಮ-ರೂಪ ವೈವಿಧ್ಯಗಳ ಹೋಲಿಕೆ ವಿರೋಧಗಳ ಜಾಲದಲ್ಲಿ ಸಿಲುಕಿದ ಮನಕ್ಕೆ ಶಾಂತಿ ಸಿಗದು, ಭ್ರಾಂತಿ ಮುಗಿಯದು. ಭ್ರಾಂತಿ ಮುಗಿಯುವುದಕ್ಕಾಗಿ ಕೈ ಮುಗಿಯುವುದು, ಮೈ ಮುಗಿಯುವುದು, ಮನ ಮುಗಿಯುವುದು( = ಬಾಗುವುದು, ಆಧೀನವಾಗುವುದು, ಲೀನವಾಗುವುದು, ಕೊನೆಗೊಳ್ಳುವುದು )ನಮನ ಅಥವಾ ಮಹಾಯೋಗ ಭಕ್ತಿ. ಶ್ರೋತವ್ಯ, ಮಾತವ್ಯಗಳು ಮುಗಿದ ಬಳಿಕ ಬರುವ ನಿದಿಧ್ಯಾಸವೇ ಈ ಭಕ್ತಿ.




ನಿದಿಧ್ಯಾಸವು Profound and repeated meditation or contemplation upon the absolute Truth (Supreme Soul or pure consciousness of oneness of the self). ನಮನವು ಆದಿ, ತಲ್ಲೀನತೆಯು (ಏಕಾಗ್ರತೆಯು) ಅಂತ್ಯ. ಏಕೀಭವನ, ಪೂರ್ಣೀಭವನ, ಶಿವೈಕ್ಯ ನಮನದ ಗುರಿ. ಆದುದರಿಂದ ನಮನದಲ್ಲಿ ಎಲ್ಲ ಬಂತು. ನಮನ ಭಾವವು ಯಜ್ಞ, ದಾನ, ತಪ, ಉಪಾಸನೆ, ಪೂಜೆ, ಧ್ಯಾನ, ಧರ್ಮಕರ್ಮಾಚರಣೆಗಳೆಲ್ಲವುಗಳ ಅಡಿಗಲ್ಲು. ಅದು ಸಾಧಕನ ಸಾಧನಗಳೆಲ್ಲವುಗಳ ಜೀವನಾಡಿ ಎಂಬುದನ್ನು ಕವಿಗಳಿಲ್ಲಿ ಸ್ಪಷ್ಟಪಡಿಸಿದ್ದು ನಮನದ ಮಹತ್ವವನ್ನು ವಿವರಿಸಿದೆ. ನಮನವೇ "ಧೀಮಹಿ" ಎಂಬಲ್ಲಿಯವರೆಗೆ ಹೋಯಿತು! ಶಿವೈಕ್ಯ (ಬ್ರಹ್ಮೈಕ್ಯ) ಸರ್ವಸಿದ್ಧಿಗಳ ಅಗ್ರೇಸರ ಶಿಖರ!

"ನಾಕುತಂತಿ"ಯ "ಅಣು-ಮಹತ್" (Epsilon and Infinity) "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬುದನ್ನು ನೆನೆದು ಜೀವಾತ್ಮ ಪರಮಾತ್ಮರನ್ನು ರಾಧಾಕೃಷ್ಣರನ್ನಾಗಿ ಕಲ್ಪಿಸಿ ಅವರ ಪ್ರೇಮ ಅಥವಾ ಮಧುರಭಾವವನ್ನು "ರಂಜಕ ವಿರಕ್ತಿ" ಎಂದು ಕರೆಯಲಾಗಿದೆ. ರಂಜಕ ವಿರಕ್ತಿಯು ಲೋಕಾನುಗ್ರಹಕಾರಕವಾದ ನಿವೃತ್ತಧರ್ಮ, ಲೋಕಸಂಗ್ರಹ (ಸಂರಕ್ಷಣ) ಮಾಡುವ ನಿಷ್ಕಾಮಕರ್ಮ, ಅನಾಸಕ್ತಿಯೋಗ, ದುಷ್ಟಶಿಕ್ಷಣ-ಶಿಷ್ಟಪಾಲನ ಕರ್ಮಗಳಿಗೆ ಸಾಧನ. ಆತ್ಮ-ಪರಮಾತ್ಮರ ಐಕ್ಯವು ನಿಷ್ಕ್ರಿಯೆಯಲ್ಲ, ಪ್ರಜ್ಞಾಸ್ಥೈರ್ಯದಿಂದ ವರ್ತಿಸುವ ಪರ (ಸತ್ಪಾತ್ರ) ಉಪಕಾರಿಯ ಜೀವನ. ಶಿಕ್ಷೆ-ರಕ್ಷೆಗಳೆರಡೂ ಕರುಣೆಯಿಂದ (ಪ್ರತ್ಯೇಕತಾ ಭಾವವುಳ್ಳ ಜೀವಿಗಳಿಗೆ, ಮಾಡುವ ಪರೋಪಕಾರ, ಅಘೋಗ್ಯ ಪುಣ್ಯಾರ್ಜನೆ, ಸುಕೃತ ತೃಪ್ತಿ ಹೇತು, ಸಮಾಧಾನ, ಸಮಾಧಿ. ಅದೇ ಶ್ರೀ ಶಂಕರಾಚಾರ್ಯರ ಮಾತಿನಲ್ಲಿ "ಪುಣ್ಯಾಪುಣ್ಯವಿವರ್ಜಿತ ಪಂಥ" ದೈವ ಭಕ್ತಿ (ರಂಜಕವಿರಕ್ತಿ) ಅದರ ಆದ್ಯಸೋಪಾನ. ಜೀವಾತ್ಮನು (ಸಾಧಕನು) ಅಣುತ್ವದ ನಮ್ರತೆಯಿಂದ ಪರಮಾತ್ಮನ ಮಹಾತ್ಮ್ಯದಲ್ಲಿ ಲೀನನಾಗಲು ಪ್ರಯತ್ನಿಸುವುದು ಆತ್ಮಾರ್ಪಣ ಭಕ್ತಿ. ಮಹತ್ತಮ ಪ್ರಮಾಣವೇ ಬೃಹತ್ತಮ, ಬ್ರಹ್ಮ (The Infinite) ಅಣುಪ್ರಮಾಣವು (ಪರಿಮಾಣವು) ಅತ್ಯಲ್ಪ (The smallest) ಜೀವರಸವು (Physical Consciousness) ದೇಹಾತ್ಮಭಾವ; ಭಾವರಸವು (The Supreme Consciousness) ಬ್ರಹ್ಮಭಾವ. "ತೇನ ವಿನಾ ತೃಣಮಪಿ ನ ಚಲತಿ" ಎಂಬುದರಿಂದ ಜೀವ ಪ್ರಗತಿ (Ascent of the Devotee) ಭಕ್ತನ ದೇವೋನ್ಮುಖತೆ; ಬ್ರಹ್ಮಾವತಾರವು (Descent of the Divine) ದೈವಕೃಪೆ ಭಕ್ತೋದ್ಧಾರಕ್ಕೆ. ಆತ್ಮ ಸಮರ್ಪಣೆಯು ಸ್ವೀಕಾರಕ್ಕೆ ಸಿದ್ಧವಾಗುವುದು! ರಾಧೆಯು ಸಾಧಕ ಜೀವ, ಕೃಷ್ಣನು ಕೃಪಾಕರನಾದ ಈಶ್ವರ, ಈಶ.

ಸನ್ಮಾನ್ಯ ಬೇಂದ್ರೆಯವರ "ಅಂಬಿಕಾತನಯದತ್ತ" ನೇ ಜೀವ (ಸಾಧಕ) ಪ್ರಗತಿಗೆ ಸಂಕೇತವಾಗಿದೆ. ಅವರ ಕವಿಕುಲಗುರುತ್ವವಿಂದು ಅದರಿಂದ ಸಾರ್ಥಕವಾಗಿದೆ. ಅವರ ಪದ್ಯಗಳ ಹೃದ್ಯತೆ, ಅಲ್ಪತ್ವದಿಂದ ಮುಕ್ತರಾಗಬಯಸುವ ಪ್ರಾಮಾಣಿಕರ ವರ್ಗಕ್ಕೆ ಮಾತ್ರ ಸಂಪೂರ್ಣವಾಗಿ ವೇದ್ಯ. ಆಧ್ಯಾತ್ಮಿಕ ಬುದ್ಧಿಯ ಕಲ್ಪನೆಗಳ ರೂಪಕಮಾಲೆಗಳಿಂದ ಧ್ವನಿಸುವ ಮಹಾಭಕ್ತಿ ಅಥವಾ ಮಹಾಶಮ ಭಾವವು ಅವರ ಭಾವಪ್ರಪಂಚದಲ್ಲಿ ಅಗ್ರಗಣ್ಯವಾಗಿರುವುದರಿಂದ ಮಿಕ್ಕ ಭಾವಗಳ ವ್ಯಕ್ತೀಕರಣಕ್ಕಿಳಿದ ಪದ್ಯಗಳನಿಲ್ಲಿ ಉದಾಹರಿಸಲಿಲ್ಲ.

ನಿಜವಾದ ದೇವೋನ್ಮುಖತೆಯ ಮೇಲೆ ನಿಂತ ಪ್ರಾಮಾಣಿಕತೆ, ದಕ್ಷತೆಗಳು ಸ್ಥಿರ ಎಂಬುದು ಜಗತ್ತಿನ ಇತಿಹಾಸಕ್ಕೆ ಗೊತ್ತಿದೆ ಆದುದರಿಂದ ದೇವ ನಿರಾಕಾರದ ವಿಜ್ಞಾನಭಾಸವು ಭ್ರಷ್ಟಾಚಾರಜನಕವಾಗುವುದು ಜನಮಹಾರಾಶಿಯಲ್ಲಿ ಅತ್ಯಂತ ಸಹಜ. ನಿರ್ದೈವ ಪ್ರಜಾಪ್ರಭುತ್ವವು ದುರ್ದೈವಕ್ಕೀಡಾಗದೆ ಎಂದೂ ಉಳಿಯದೆಂಬುದು "ಬೇಂದ್ರಾಯಣ" ದ ಸಾರ. ಕಪಟ ದೇವೋನ್ಮುಖತೆಯನ್ನು ತನ್ನಲ್ಲಿ ಅಥವಾ ಪರನಲ್ಲಿ ಬೆಳೆಯಗೊಡುವ ಮತದಾರ ಸಂಖ್ಯಾಬಲದಲ್ಲಿ ಹೆಚ್ಚಿದರೂ ಪರಿಣಾಮ ಅದೇ! ಲೌಕಿಕ ಸ್ವಾತಂತ್ರ್ಯವು ಸರ್ವಭೋಗ್ಯವಾಗಿ ಉಳಿಯಬೇಕಾದರೂ ಅಲೌಕಿಕ ಸ್ವಾತಂತ್ರ್ಯವಾದ ಮುಕ್ತಿಯು ಆರಾಧಕರ ಗುರುತ್ವದಲ್ಲಿ ಕರ್ಮಾಚರಣೆ ಮಾಡುವುದು ಅತ್ಯುತ್ತಮೋಪಾಯ. "ಅಂತೇವಾಸ" ದಿಂದ ಕಪಟ-ನಿಜತ್ವಗಳು ಒಯಲಾಗುವುವು. ಇದು ಭಾರತ ಮಾರ್ಗ, ಪ್ರಕಾಶ ಮಾರ್ಗ, ದೇವಯಾನ (The Divine Path) ದಿವ್ಯಾಯನ.

ಅಂಬಿಕಾ-ತನಯ-ದತ್ತರು ಅತ್ರಿ; ಮೂವರಲ್ಲ-- ಒಬ್ಬರು; ಅವರು ಏಕಮೇವಾದ್ವಿತೀಯವಾದ, ತ್ರಿಗುಣಾತೀತದ ಕೃಪಾಸಾರವನ್ನು ತಾವು ಉಂಡು ರಸಿಕರಿಗೆ ಉಣಿಸಲು ಗೀತ ಗೀತೆಯನ್ನು ಹಾಡಿದ್ದಾರೆ. ಅವುಗಳ ಭಾವರಸಗಳ ಸ್ವರೂಪವನ್ನಿಲ್ಲಿ ದೈವ ಭಕ್ತಿಯಿಂದ ಯಥಾಶಕ್ತಿ ನಿರೂಪಿಸಲಾಗಿದೆ. ನಿರ್ದೈವ ರಸಿಕತೆ ಈ ಲೇಖಕನದಲ್ಲ.

§ § § §

೬

# “ಕನ್ನಡ ಮೇಘದೂತ”ದ ‘ಬೀರಿಕೆ’

## ( ಒಂದು ರಸಪರಿಚಯ )

ಗೌರೀಶ ಕಾಯ್ಕಿಣಿ

ತತ್ತ್ವವನ್ನು ಕಾವ್ಯವಾಗಿಸುವ ರೂಪಣಶಕ್ತಿಯು ಅಂಬಿಕಾತನಯದತ್ತರ ಪ್ರತಿಭೆಯ ಒಂದು ವಿಲಕ್ಷಣ ಲಕ್ಷಣ. ಕಾಮವು ಪ್ರೇಮವಾಗುವ ದಿವ್ಯವಿಪಾಕವನ್ನು ಕಾಲಿದಾಸನ ವೈದರ್ಭಿಯ ವಿಲಾಸದಿಂದ, ತಮ್ಮ, “ ಸೂಜಿಗೂ ಹದಸು, ಎಳೆ ಸೂಲಿಗೂ ಮಿದುವಾದ ನುಡಿಯ ಜಾಣುಬಗೆಯ ಅನನ್ಯ ಪರತಂತ್ರವಾದ ವೈಖರಿಯಲ್ಲಿ ಇಳಿಸಿದ ಪರಿಯೂ, ಅದರ ಸೊಬಗೂ ಹೊಸಗನ್ನಡಕ್ಕೆ ಅಭೂತ-ಪೂರ್ವ”ವೆಂದು ಅತ್ಯುಕ್ತಿಯ ಅಂಜಿಕೆ ಬಿಟ್ಟು ಅನ್ನಬಹುದು.

ಮೂಲದ ‘ಮಂದಾಕ್ರಾಂತ’ವನ್ನು ಬಿಟ್ಟು ತಮ್ಮದೇ ಆದ ‘ಮೇಘ ಛಂದಸ್ಸಿ’ನಲ್ಲಿ ಬೇಂದ್ರೆಯವರು ‘ಮೇಘದೂತ’ದ ರಸವತಿಯಾದ ಸರಸತಿಯನ್ನು “ಕನ್ನಡ-ದೊಳಿಂದು ಕನ್ನಡಿಸಿದಂತೆ ಮೂಡಿಸಿ” ಅಪೋಜ್ಯೋತಿಯನ್ನು ರಸೋಮೃತವಾಗಿ ಪುನರ್ನವೀಕರಿಸಿದ್ದಾರೆ.

“ಮೇಘದೂತ”ವನ್ನು ಪಲವರು ಹಲವಾರು ಬಗೆ ಅನುವಾದಿಸಿದ್ದುಂಟು. ಆದರೆ “ ಹೋಗು, ಸುಕವಿ ರಸದಾಸಿಯಾಗಿ ದುಡಿ ” ಎಂದು ಬೇಂದ್ರೆಯವರು ತಮ್ಮ ನುಡಿಗೆ ಅಪ್ಪಣೆಯಿತ್ತರು— ಮೂಲಕೃತಿಯನ್ನು ಮುಡಿಗೆ ಇಟ್ಟುಕೊಂಡು. ಆದರೆ ಇದು ಕೇವಲ ವಿನಯೋಕ್ತಿ. “ಅಂದತ್ತ”ವಾಣಿ ಯಾರಿಗೂ ದಾಸಿಯಾಗಿ ದುಡಿಯಲು ಪಡೆದು ಬಂದುದಲ್ಲ. ಅವಳು ಕಾಲಿದಾಸನ ವಾಣಿಗೆ ಸಖಿಯಾಗಿ ಕನ್ನಡ ರಸಸರಸ್ವತಿಯ ಸೇವೆಗೆ ನಲುಮೆಯಿಂದ ನಿಂತಿದ್ದಾಳೆ—ತನ್ನ ಎಲ್ಲ ಸಿರಿ-ವಂತಿಕೆಯ ಸಡಗರ ಮತ್ತು ಬೆಡಗಿನಿಂದ.

ಏಕೆ ? ಬೇಂದ್ರೆ ತಮ್ಮ ‘ ಕಾವ್ಯೋದ್ಯೋಗ ’ ದ ಪ್ರಬಂಧದಲ್ಲಿಯೇ ತಮ್ಮ ಕಾವ್ಯದ ಪರಿಚಯವನ್ನು ಹೀಗೆ ಮಾಡಿಕೊಟ್ಟಿದ್ದಾರೆ— “ರಸೋಽಹಮಸ್ಮಿ ತೆಯ ಸಾಧನೆ ಅಂಬಿಕಾತನಯದತ್ತನ ಕಾವ್ಯ ಸೋಽಹಂ ದಾಸೋಽಹಂಗಳ ಮಧ್ಯ ರಸೋಽಹಂ ಮಾರ್ಗ ಇದು.”

ಕನ್ನಡ ಮೇಘದೂತವನ್ನೂ, ಅದರ ಅಪೂರ್ವಸತ್ತ್ವದ ಪೀಠಿಕೆಯನ್ನೂ ಬರೆದ ಈ ಕವಿಯು ವಾಗಿಂದ್ರಜಾಲವು 'ಸಖೀಗೀತ'ದಲ್ಲಿಯೇ ಪ್ರೇಮತತ್ತ್ವದ ಜನ್ಮ-ಕರ್ಮಗಳ ದಿವ್ಯತೆಯನ್ನು ಆತ್ಮಕತೆಯಾಗಿ ಬರೆದು ಪಾಕಸಿದ್ಧಿಯನ್ನು ಪಡೆದಿತ್ತು. ತಮ್ಮ ಈ ಶಕ್ತಿ-ಶೈಲಿಗಳ ಕುರಿತು ಕವಿಯು ಆಗ ಆಡಿಕೊಂಡ ಈ ಮಾತು ಈ ಕವನ ಕೃತಿಯಲ್ಲಿ ಸಾರ್ಥಕ ಮಾತ್ರವಲ್ಲ ಕೃತಕೃತ್ಯವೂ ಆಗಿದೆ.

ಶಿವನ ಕುದುರೆಯನೇರಿ ಶ್ರಾವಣದ ಹಸರಾಣಿ
ಹೂಗಣ್ಣು ತೆರೆದಾಡಿ ಕುಣಿಯುವ್ಹೊಲು
ನನ್ನ ಚಿತ್ರಕಶಕ್ತಿ ಉತ್ಪ್ರೇಕ್ಷೆಯನೇರಿ
ಬಣ್ಣಬಣ್ಣದ ಬಣ್ಣನೆಗೆ ಒಲಿದಿತು
ಯಾವುದಕೆ ಯಾವುದು ಸರಿದೊರೆಯೆನ್ನುತ
ತನ್ನ ಗೆರೆ ಬಣ್ಣಗಳನ್ನೊರೆ ಹಚ್ಚಿತು (ಸ. ಗೀ.)

ಬೇಂದ್ರೆಯವರದು ಮನದಲ್ಲಿ ಮಹಾಲೋಕ ರಚಿಸುವ ಊಹೆ; ಕಾಲಿದಾಸ-ನದೋ, ಮಾತಿನಲ್ಲೇ ಮಹಾಲೋಕ ಸೃಜಿಸುವ ಪ್ರತಿಭೆ.

ಕೊಟ್ಟದ್ದೆ ರೂಪವು ಇಟ್ಟದ್ದೇ ನಾಮವು
ಕಟ್ಟದ್ದೆ ಹುರುಳೆಂಬ ಮದದೊಳಿರೆ
ಬ್ರಹ್ಮಪಟ್ಟವನೇರಿ ರೂಪಕಶಕ್ತಿಯು
ಸೃಷ್ಟಿಯನಳೆದಿತು ದೃಷ್ಟಿಯೊಳೆ (ಸ. ಗೀ.)

ಈ ಶಕ್ತಿಯು 'ಪ್ರತಿಭೆಯ ಗರ್ಭದ ವಿಶ್ವಕರ್ಮನ ಕರೆಸಿ' ವಾಗಿಂದ್ರಜಾಲದ ಮಾಲೆ ಮಾಲೆಯ ಬೀಸಿ 'ಸಪ್ತ ಸ್ವರ್ಗದ ಶಿಖರದ ಮೇಲೆ ಗಾಳಿಗೋಪುರ' ಕಟ್ಟುವದು.

ಕಾಲಿದಾಸನೇನು, ಕವಿ ಬೇಂದ್ರೆಯೇನು, ಉಭಯರೂ ಪ್ರಣಯದ ವಾಣಿಯ ವೀಣಾಪ್ರವೀಣರು. ಅವನ ಮೇಘದೂತಕ್ಕೆ ಇವರಲ್ಲದೆ ಇನ್ನಾರು ಪೀಠಿಕೆ ಬರೆಯ-ಬೇಕು? ನವಿಲಗರಿಯ ಬೀಸಣಿಕೆಗೆ ಚಿನ್ನದ ಕಟ್ಟಿನ ಹಸ್ತಿದಂತದ ಹಿಡಿಕೆಯಂತಿದೆ ಈ ಪೀಠಿಕೆಯ ೨೪ ಪದ್ಯಗಳು.

ನನಗಿಂತ ಸಮರ್ಥ ರಸವಿಮರ್ಶಕರು 'ಸಖೀಗೀತ' ಮತ್ತು 'ಕನ್ನಡ ಮೇಘದೂತ'ಗಳ ಒಳದನಿಗೆ ಕಿವಿಗೊಟ್ಟು ಅವುಗಳ ತೌಲನಿಕ ಪರಿಶೀಲನೆ ಮಾಡಿ ಕೊಡಬೇಕು. 'ಸಖೀಗೀತ'ದಲ್ಲಿ ಬೇಂದ್ರೆಯವರ ಪ್ರೇಮತತ್ತ್ವದರ್ಶನ ಆನುಷಂಗಿಕ ವಾಗಿ ಸಖ್ಯದ ಕಟುಮಧುರ ಆಖ್ಯಾನದ ವ್ಯಾಖ್ಯಾನದೊಂದಿಗೆ ರೇಶಿಮೆಯ ಜಾಡಿ-

ನಲ್ಲಿ ಚಿನ್ನದ ಎಳೆಯಂತೆ ಹೆಣೆದುಕೊಂಡಿದೆ. ಆದರೆ ಈ 'ಮೇಘದೂತ'ದಲ್ಲಿ ಅದು ಗೇರುಹಣ್ಣಿನ ಬೀಜದಂತೆ ಮೊದಲಿಗೇ ಹೀರಿಕೆಯ ರೂಪದಲ್ಲಿ ನೇರವಾಗಿ ಅಂಟಿ-ಕೊಂಡಿದೆ!

ಮೇಘದೂತದ ಕಲ್ಪನೆ ಕಾಲಿದಾಸನಿಗೆ, ಆತ ಬನವಾಸಿಗೆ ಗುಪ್ತರ ದೂತ-ನಾಗಿ ಬಂದಾಗಲೇ ಹೊಳೆದಿದ್ದರೆ ಅದು ದಕ್ಷಿಣದಲ್ಲಿಯೇ ಹುಟ್ಟಿತೆಂದು ಹೇಳ-ಬಹುದೇ?— ಎಂದು ಕವಿಯ ಪ್ರಶ್ನೆ. ಅದು ನಿಜವಿದ್ದರೆ ಕವಿಯ ಈ ಕೃತಿ ಆ ಕಲ್ಪನೆಯ ಕನ್ನಡ ಆಕೃತಿ. ಕಾಲಿದಾಸ ಕನ್ನಡಿಗನೇ ಆಗಿದ್ದರೆ ಮೇಘದೂತವನ್ನು ಕನ್ನಡದಲ್ಲಿ ಹೇಗೆ ಬರೆಯಬಹುದಿತ್ತೆಂಬುದಕ್ಕೆ ಈ ಕಾವ್ಯ ಸಮುಜ್ವಲ ಸಾಕ್ಷಿ!

ಮಾನವೀಯತೆಗೆ, ಮಾನವೀ ಹೃದಯದ ತುಮುಲ ಭಾವ ಪ್ರೇರಣೆಗಳ ಊರ್ಮಿ ಉನ್ಮೇಷಗಳಿಗೆ ಪೂರ್ವ ಪಶ್ಚಿಮವೆಂದು ಭೌಗೋಲಿಕ ಪರಿಚ್ಛೇದವಿರ-ಲಾರದು. ಅವುಗಳ ವ್ಯಂಜನೆಯ ರಂಗ-ರೂಪ-ರೀತಿಗಳು ಸಂಪ್ರದಾಯ-ಸಂಸ್ಕಾರಗಳ ಫಲವಾಗಿ ಬೇರೆ ಬೇರೆ ಆಗುವದು ಅನಿವಾರ್ಯ. 'ಸಖೀಗೀತ'ದ ಮೊದಲ ಮಾತಿನಲ್ಲಿ ಕವಿಯೂ ಈ ಪ್ರೇಮತತ್ತ್ವದ ಒಂದು ಮುಖವನ್ನು ಹೀಗೆ ನಿರೂಪಿ-ಸಿದ್ದಿದೆ.

“ಮಾನವನ ಅವಿವೇಕ ಸುಳಿದಾಡಿದಲ್ಲೆಲ್ಲ ಪ್ರೇಮದ ಕೊಲೆಯು ಅಯಾಚಿತವಾಗಿ ನಡೆಯುವದು. ಪಾಶ್ಚಿಮಾತ್ಯರ ಪ್ರಣಯಲೀಲೆಯು ಕೊನೆಗೆ ಬರುವ ಮದುವೆಯಲ್ಲಿ ವಿಯೋಗದ ಲಕ್ಷಣವು. ವಿರಹದ ಚಿತ್ರವು, ಪ್ರೇಮದ ಸಮಾಧಿಯು ಕಟ್ಟಿ-ಹೋಗಿದ್ದುಂಟು. ನಮ್ಮಲ್ಲಿ ವಿವಾಹಪೂರ್ವ ಪ್ರಣಯದ ಸಂಚಾರೀಭಾವಗಳಿಗೆ ಎಡೆಯಿಲ್ಲ. ಮದುವೆಯ ಸ್ಥಾಯಿಯಲ್ಲಿ ಅನುದ್ದೀಪಕ ಏಕಾಂತ ಗುಹೆಗಳಲ್ಲಿ ರತಿಯು ರಾಗಾಪೇಕ್ಷೆಯಿಂದ ನವೆಯಬೇಕು. ಪಾಶ್ಚಿಮಾತ್ಯರಲ್ಲಿ ಕುರುಡು ಕಾಮನಿಗೆ ಸ್ವೈರಸಂಚಾರವಿದ್ದರೂ ರತಿಗೆ ಮಾತ್ರ ಋತು ಋತುವಿಗೂ ಮರಣಭಯ ತಪ್ಪಿಲ್ಲ. ನಮ್ಮಲ್ಲಿಯೋ ಕಾಮನು ಅನಾದಿಕಾಲದಿಂದ ಅನಂಗನಾಗಿರುವದರಿಂದ ರತಿಯ ವಿಲಾಪಾಶ್ರುಗಳಿಂದಲೇ ಪ್ರೇಮವಲ್ಲರಿಯು ಕಮರಬೇಕು, ಇಲ್ಲವೆ ದೈವಕೃಪೆಯಿಂದ ಚಿಗುರಬೇಕು. ಅಥವಾ ಪತಿಯೊಲವಿಗೆ ಪಣತೊಟ್ಟ ಸತಿಯ ಪ್ರಣಯಸಾಹಸವೆಲ್ಲ ತಪದ ವೈರಾಗ್ಯ-ವಿಲಾಪವಾಗಿ ಬೂದಿಯೊಳಗಿಂದಲೇ, ಅಡಗಿದ ಬೆಂಕಿಯಂತೆ, ಕೊನೆಗೆ ಏಳಬೇಕು. ಪಾಶ್ಚಿಮಾತ್ಯರ ಸರಸವು ವಿರಸದ ಪ್ರಸ್ತಾವನೆ. ನಮ್ಮ ರಸವೇ ನೀರಸ.”

ಈ ಅವತರಣಿಕೆಯನ್ನು ನಾನು ದೀರ್ಘವಾಗಿಯೇ ಕೊಟ್ಟಿದ್ದೇನೆ. ಪದ್ಮ-ಗಂಧಿಯಾದ ಗದ್ಯದಲ್ಲಿ ಕವಿಯು ಮಾಡಿದ ಪ್ರೇಮತತ್ತ್ವದ ಭಾಷ್ಯದಲ್ಲಿ ಕಾಮ ಮತ್ತು ರತಿಯರನ್ನೂ ಪಾಶ್ಚಾತ್ಯರು ಹಿಂಗಡಿಸಿ ವಿಯೋಗದಲ್ಲಿಯೇ ಇಟ್ಟಂತೆ ಇದೆ.

ಅಲ್ಲಿ ಕಾಮ, ಜೀವಂತ, ಸ್ವೈರಸಂಚಾರಿ. ಆದರೆ ರತಿಯು ಋತು-ಋತುವಿಗೂ ಸಾಯುವ ಭಯ. ಆದರೆ ನಮ್ಮಲ್ಲಿ ? ಕಾಮನಿಗೆ ದಹನ. ರತಿ ಚಿರಂಜೀವಿ.

ಈ ಪ್ರೇಮತತ್ತ್ವದರ್ಶನದ ಇನ್ನೊಂದು ಮುಖ ಈ ಪೀಠಿಕೆ. "ಮಾನವನ ಅವಿವೇಕ ಸುಳಿದಾಡಿದಲ್ಲಿಯೇ ಯಕ್ಷನ ಪ್ರೇಮದ ತಾತ್ಕಾಲಿಕ ಕೊಲೆ ಅಯಾಚಿತ-ವಾಗಿಯೇ ಒದಗಿ ಬಂದಿತು. ಆ ಮಟ್ಟಿಗೆ ಯಕ್ಷನ ಪ್ರಣಯ ಹಿಂದೀಯರ ವೈವಾ-ಹಿಕ ಪರಿಪಾಕದ್ದಾದರೂ ಪಾಶ್ಚಾತ್ಯ ಪ್ರಣಯದ ಕೊನೆಗೆ ಬರುವ ವಿಯೋಗಲೀಲೆ ವಿರಹಚಿತ್ರ ಇದಕ್ಕೆ ನಡುವೆಯೇ ಬಂದಿತು. (ಸಮಾಧಿ ಕಟ್ಟುವದೊಂದು ತಪ್ಪಿತು ರಾಜರಾಜ ಕುಬೇರನ ಉಃಶಾಪದಿಂದ!)

ಮೇಘದೂತವೇ ನಿದರ್ಶನವಾದ ಈ ಪ್ರೇಮತತ್ತ್ವದ ದರ್ಶನವೇನು ? ಈ 'ಪೀಠಿಕೆ'ಯ ಸಂದೇಶವೇನು ?

* * * * *

ವಿರಹಾವಸ್ಥೆಯಲ್ಲಿ ತಾಳಿ ಬಾಳುವ ಕಾಮವೇ ಧರ್ಮ-ಅವಿರೋಧಕಾಮವೆನಿಸಿ ಜೀವೋನ್ನತಿಯ ಹಾದಿಯಾಗುವದು. ಯಕ್ಷನಲ್ಲಿಯಂತೆ ವಿರಹದಿಂದ ವಿಕೃತಿಯುಂಟಾಗದೆ ಧೃತಿಗೆ ಅನುಕೂಲಭಾವಗಳ ಉದಯ. ಲಲಿತಭಾವದಲ್ಲಿಯೇ ಒಂದು ಉದಾ-ತ್ತತೆ. ಆ ಮೂಲಕ ವಿರಹದಿಂದ ಕಾಮಿಯು ಕವಿಯಾಗುವನು. ಅವನ ಕಣ್ಣು ಚೆಲುವಿಗೆ ಕಣ್ಣಾಗುವದು. ಅವನ ಪ್ರಪಂಚದಲ್ಲಿ ಪಾಪ ದೌರ್ಜನ್ಯಗಳಿಗೆ ನೆಲೆಯೇ ಇರುವಂತಿಲ್ಲ ಅಥವಾ ಅದರ ಬಗೆಗೆ ಅವನಿಗೆ ಉಪೇಕ್ಷೆ. ದುರ್ದೈವದ ಸುತ್ತಲಿನ ಕೋಪ-ಕಾರ್ಪಣ್ಯಗಳ ಬಗೆಗೆ ಅವನಿಗೆ ವಿಸ್ಮರವಿಲ್ಲ. ಎಲ್ಲರ ಬಗೆಗೂ ಅವನಲ್ಲಿ ಕನಿಕರ ತುಂಬಿದ ಮಾಧುರ್ಯ. ಅವನ ಕಣ್ಣಿಗೆ ಕಾಣುವದೆಲ್ಲ ಚೆಲುವು. ಅಲ್ಲಲ್ಲಿ ಇಣುಕುವ ಬಿರುಸೂ ಮಿದುವಿಗೆ ಹಿನ್ನೆಲೆ. ಇಂಥ ವಿರಹ ಸಮ್ಮತ ಪ್ರಣಯದಿಂದ ಹುಟ್ಟಿದ ಕಾವು ಭಕ್ತಿಯ ಸಂಕೇತವಾಗುವದು. ಶೃಂಗಾರದ ಆಲಂಬನವು ಅಲೌಕಿಕ ವಾಗಿ ಭಕ್ತಿರಸ ಹೊಮ್ಮುವಂತೆ ಆಗುವದು.

ಕಾಳಿದಾಸನ ಈ ಆಧ್ಯಾತ್ಮಿಕ ದೃಷ್ಟಿಯಿಂದಲೇ ಕವಿಜೇಂದ್ರೆಯವರ ಕ್ರಾಂತ-ದರ್ಶನವು ಈ 'ಪೀಠಿಕೆ'ಯಲ್ಲಿ ಪ್ರೇಮದ ಅಂದರೆ ಕಾಮದ ದಿವ್ಯೀಕರಣ (Subli-mination)ದ ದರ್ಶನವನ್ನು 'ಇಂದ್ರ ಮಾಯೆಯಲಿ ಭಾವ ಛಾಯೆಯಲಿ' ನೂರು ಕಡೆಗೆ ಚೆಲ್ಲಿಯೂ ಧ್ವನಿಸಿಬಿಡಬಿಂಬವಾಗಿ ನಮ್ಮ ಮನೋಮುಕುರದಲ್ಲಿ ಮೂಡುವಂತೆ ಮಾಡಿರುತ್ತದೆ – ಅದು ಪೂರ್ವಗ್ರಹಿಕೆ ಪಾಪಶಂಕೆಗಳಿಂದ ಮಲಿನ-ವಾಗಿರದಿದ್ದರೆ!

ಮುಂಜೆ ಕನ್ನಡಿಸಿದ ಪೂರ್ವೋತ್ತರ ಮೇಘಗಳ ಛಂದಸ್ಸೇ ಈ ಪೀಠಿಕೆಯ ವೃತ್ತ. ಈ ವೃತ್ತವನ್ನು ಬೇಂದ್ರೆ ಯಾವ "ಪ್ರತಿಭೆಯ ಗರ್ಭದ ವಿಶ್ವಕರ್ಮ"ನೆ ನಿರ್ಮಿಸಿದ್ದೋ, ಈ ಮೊದಲು ಹಳೆ ಹೊಸ ಕನ್ನಡದ ಕವಿಗಳು ಬಳಸಿದ್ದೊ(-ಎಂಬುದರ ಬಗೆಗೆ ಚರ್ಚೆ ಇಲ್ಲಿ ಅಪ್ರಸ್ತುತ, ಅಪ್ರಯೋಜಕ. ಈ ವೃತ್ತಕ್ಕೆ ಸಂಸ್ಕೃತ ಮೂಲವಿಲ್ಲವೆಂದು ನಾನು ಅರಿತುಕೊಂಡಿದ್ದೇನೆ. ('ಅಶ್ವಧಾಟಿ' ಎಂಬ ಒಂದು ವೃತ್ತ ಇದೇ ಧಾಟಿಯದು ಸಂಸ್ಕೃತದಲ್ಲಿ ಇದೆಯಂತೆ. ಆದರೆ ಆಪಟೆ ನಿಘಂಟುವಿನಲ್ಲಿ ಅದೇನೂ ನನಗೆ ಕಾಣಸಿಗಲಿಲ್ಲ).

ಆದರೆ ಈ ಮೇಘದೂತ ಹುಟ್ಟಿದ ನಂತರ ಈ ವೃತ್ತಕ್ಕೆ ' ಮೇಘಛಂದಸ್ಸು ' ಎಂಬ ಹೆಸರು ಬರದು. ಅನೇಕ ಕವಿಗಳು ಇದನ್ನು ಹೆಚ್ಚು-ಕಡಿಮೆ ಯಶಸ್ಸಿನಿಂದ ಪ್ರಯೋಗಿಸಿದ್ದಾರೆ ಶ್ರೀ ಸು. ರಂ. ಯಕ್ಕುಂಡಿಯವರ 'ಮಹಾಶ್ವೇತಾ' ಕಾವ್ಯ, ಶ್ರೀ ಪಂಢರಿನಾಥಾಚಾರ್ಯ ಗಲಗಲಿಯವರ 'ಗಂಗಾಲಹರಿ' ಇದಕ್ಕೆ ಸುಂದರ ಉದಾಹರಣೆ. ಆದರೆ ಈ ಕವಿಗಳು ಈ ವೃತ್ತಬಂಧದಲ್ಲಿ ಯಶಸ್ಸು ಪಡೆದಿದ್ದರೂ 'ಬೇಂದ್ರೆ ಸ್ಪರ್ಶ'ದ ಪಾಕಸಿದ್ಧಿಯ ಶ್ರೇಯಸ್ಸು ಗಳಿಸಿಲ್ಲ. ಅದಕ್ಕಾಗಿ ಬೆರಗಾಗ-ಬೇಕಾಗಿಲ್ಲ. ಬೇಸರವಾಗುವದೂ ಬೇಡ. ಏಕೆಂದರೆ ಕಮಠನಂತೆ "ಪುಟ್ಟಿದ-ನೋರ್ವನೆ ಬೇಂದ್ರೆ ಕಾವ್ಯದ ಸಾರವನಾಂತ ಕಾರಣಂ"

ಕಾಮದ, ಉನ್ನಯನದ, ದಿವ್ಯೀಕರಣದ ಸೋಪಾನ ಮೂರು-ಕಾಮಿ, ಕವಿ, ಭಕ್ತ. ಮೂಲದಲ್ಲಿಯೇ ಕಾಮದ ಅವತಾರವನ್ನು ಕವಿಯು ಮೂರು ಹಂತದಲ್ಲಿ ಚಿತ್ರಿಸಿದ್ದಾರೆ. ವಿಶ್ವದ ಮೂಲದ ಅನಾದಿಕ್ರಮದ ಕಾಮ, ಅನಂತರ ಜೀವಲೋಕದ ಕಾಮ, ಮತ್ತು ಭೂಮಿಯ ಕಾಮ (ನಿಜವಾಗಿ ಈ ಭೂ-ಭೌತಿಕ ಕಾಮದ ಹಂತವು ಅನಾದಿ ಹಾಗೂ ಜೀವಲೋಕದ ಹಂತಗಳ ನಡುವೆ ಬರಬೇಕಿತ್ತು).

ತಮ್ಮ ಈ ದರ್ಶನಕ್ಕೆ ಸೂಚ್ಯವಾಗಿ ಋಗ್ವೇದದ ಜಗತ್ತ್ರಸಿದ್ಧ 'ನಾಸದೀಯ ಸೂಕ್ತ'ದ ಒಂದು ನುಡಿಯನ್ನೂ, ಪುರೂರವಾ-ಊರ್ವಶಿ ಸಂವಾದದ ಒಂದು ಮಾತನ್ನೂ ಕವಿಯು ಆರಂಭದಲ್ಲಿಯೇ ಉದಾಹರಿಸಿದ್ದಾರೆ. ನಾಸದೀಯ ಸೂಕ್ತದ ನುಡಿಯು ಪೀಠಿಕೆಗೆ ಪೀಠವಾದರೆ ಪುರೂರವನ ಮಾತು ಯಕ್ಷನ ಸಂದೇಶಕ್ಕೆ ಜೀವ-ಶ್ರುತಿ. ಆದರೆ ಈ ಶ್ರುತಿಗೂ, ಆ ಸಂದೇಶಕ್ಕೂ ಒಂದು ಸೂಕ್ಷ್ಮ ವ್ಯತ್ಯಾಸವಿದೆ. ಮೇಘದೂತದಲ್ಲಿ ಯಕ್ಷನು ಯಕ್ಷಿಯಿಂದ ದೂರ ನೂಕಲ್ಪಟ್ಟಿದ್ದಾನೆ. ಆದರೆ ಋಗ್ವೇದದ ಸಂದರ್ಭದಲ್ಲಿ ಊರ್ವಶಿಯೇ ಪುರೂರವನಿಂದ ಅಗಲಿದ್ದಾಳೆ. ಆದ್ದ-ರಿಂದ ಕಳವಳದಿಂದ ಪೂರೂರವ ಮೊರೆಯಿಡುತ್ತಾನೆ. "ನಿವರ್ತಸ್ವ ತಪ್ಯತೆ ಮೇ ಹೃದಯಂ" (ತಿರುಗಿ ಬಾ ನನ್ನ ಹೃದಯ ಉರಿಯುತ್ತದೆ; ತಪಿಸುತ್ತದೆ). ಯಕ್ಷನೂ ತಪಸ್ಸನ್ನು ಮಾಡುತ್ತಿರುತ್ತಾನೆ. ಇಲ್ಲಿ ವಿರಹದಲ್ಲಿ ಪರಿಭವಿಸುವ ಹೃತ್ತಾಪದೊಂದಿಗೆ

ಪತನದಿಂದ ಉದ್ಧರಿಸುವ ತಪನವೂ ಗಮನೀಯ ಅಂಶವಾಗಿದೆ. ಆ ತಪಸ್ಸಿನಿಂದಲೇ ಕಾವ್ಯದ-ಭಕ್ತಿಯ-ಮಹೋನ್ನತಿಯ ತೇಜಸ್ಸಿನತ್ತ ಕಾಮಿಯ ಉನ್ನಯನ.

ಇನ್ನು ನಾಸದೀಯ ಸೂಕ್ತದ ನುಡಿ (ಋ ೧೦, ೧೨೯, ೪) ಏನನ್ನುತ್ತದೆ?

* * * * *

ಕಾಮವೇ ವಿಶ್ವತತ್ತ್ವದ ಆದಿಯಲ್ಲಿ, ಅಗ್ರದಲ್ಲಿ ಇತ್ತು. ಅದು ಮನಸ್ಸಿನ ರೇತಸ್ಸು ಅಥವಾ ವೀರ್ಯಬೀಜ. (ಜೀವನದ ಸಕಲ ಆಗು-ಹೋಗುಗಳು ಇಚ್ಛಾ ಬೀಜದ ಫಲಗಳು.) ಅದರಿಂದಲೇ 'ಅಸತ್'ದಲ್ಲಿ 'ಸತ್'ದ ಸಂಬಂಧ (ಎರಕ) ವನ್ನು ಕವಿಗಳು (ಜ್ಞಾನಿಗಳು) ತಮ್ಮ ಹೃದಯದಲ್ಲಿ ವಿಚಾರಮಾಡಿ ನಿಶ್ಚಿತವಾಗಿ ಮನಗಂಡರು. ಈ ಕೊನೆಯ ಮಾತು ಅತ್ಯಂತ ಮಹತ್ವದ್ದು; ಅದರದೆ ಭಾಷ್ಯ-ವೆಂಬಂತಿದೆ ಕವಿಯ 'ಪೀಠಿಕಾ' ಕವನ.

ಸೃಷ್ಟಿಯ ಆದಿಯಿಂದ ಹಿಡಿದು ಸಮಾಜ ರಂಗದಲ್ಲಿ ವ್ಯಕ್ತಿ ವ್ಯಕ್ತಿಯ ವ್ಯಂಜ-ನೆಯ ವರೆಗೂ ಕಾಮ – ರತಿಗಳ, ದ್ವಂದ್ವ – ದ್ವೈತಗಳ ಐಕ್ಯ-ಪ್ರಕ್ರಿಯೆಯನ್ನು ಕವಿಯು ಹೃದಯಂಗಮವಾಗಿ ಚಿತ್ರಿಸಿದ್ದಾರೆ. "ಭಿನ್ನ ದೇಹದಲಿ ಏಕಜೀವ ಕಾಣು ವದು ಕರಗಿ ಮಾಗಿ" ಈ ಜೀವೈಕ್ಯದ ಕರಗುವಿಕೆ, ಮಾಗುವಿಕೆಯ ಪವಾಡದಲ್ಲಿ—

"ಇಹುದು ಎಂದರದು ಅಹುದು ಇದಿರು : ಇದು ಅಲ್ಲವೆಂದರಿಲ್ಲ
ದೇವಮಾಯೆ ಆದರಾಟ ಮಾಟಗಳ ಬಲ್ಲನೊಬ್ಬ ಬಲ್ಲ"

ಎಂಬುದನ್ನೇ ಕವಿವರ್ಯರು ತಮ್ಮ ಬಲ್ಲುಲಿಯ ಬೆಡಗಿನ ಸೊಲ್ಲುಗಳಲ್ಲಿ ಫುಲ್ಲವಿಸಿ ತೋರಿಸಿದ್ದಾರೆ.

ಕಾಮನ ಹುಟ್ಟಿನ ಗುಟ್ಟು, ಕವಿಯು ಒಂದು ಆಖ್ಯಾಯಿಕೆ(Myth) ಕಟ್ಟಿ ಹೇಳಿದ್ದೆ ಒಂದು ಲಾಕ್ಷಣಿಕ ವೈಲಕ್ಷಣ್ಯ ರೂಪಿನ ಹುಟ್ಟಿನ ಕುರಿತು ಬ್ರಹ್ಮ-ಸಮಾಧಿಯ Myth ಕಟ್ಟಿದ ಈ ಪ್ರತಿಭೆಯದೆ ಇದು ಇನ್ನೊಂದು ಉನ್ಮೇಷವಾಗಿರ-ಬೇಕು. ಇದಕ್ಕೆ ವೈದಿಕ ಮೂಲವಿಷ್ಟೇ! "ಸ ಅಕಾಮಯುತ ಬಹುಸ್ಯಾಂ ಪ್ರಜಾಯೆ-ಇತಿ" ಬ್ರಹ್ಮ ಕಾಮಿಸಿದ. ತಾನು ಬಹುವಾಗಬೇಕು. "ಏಕಾಕಿ ನ ರಮತೆ" ('ಹಿಗ್ಗು ಹಾಕಿತು ಕ್ಯಾರೆ! ಇರಲಾರೆನೇಕಾಕಿ'). ಆದರೆ ಆಗ ಸ್ವಯಂಭೂಬ್ರಹ್ಮನೊಬ್ಬನೆ 'ಬಾಬಾರೆ ನನ್ನಾಕೆ' ಎಂದರೆ ಆ ಕರೆಗೆ ಓಗೊಡು-ವವರು ಯಾರು? ಆಗ ಆತ ತನ್ನ ಮಾನಸಪುತ್ರಿಯಾಗಿ 'ಶತರೂಪೆ'ಯನ್ನು ನಿರ್ಮಿಸಿದ. ಅವಳಲ್ಲಿಯೇ ಆದಿಮನು (Adam) ಆ ಬ್ರಹ್ಮನಿಂದ ಹುಟ್ಟಿದ್ದು. ಆದಿಮಾನವನೊಂದಿಗೆ ಕಾಮನು ಹುಟ್ಟಿಬಂದನು. ಈ ಮನುವಿನ ತಾಯಿ ಶತ-

ರೂಪೆಯಲ್ಲಿ ಬ್ರಹ್ಮಕಾಮವು ಮಧುರೂಪ ತಾಳಿ ಬಂತೆಂದು ಅಂಬಿಕಾತನಯರ ಅಂಬೋಣ. ಅಂದರೆ ಮನುಷಿನ ಕುಲಕ್ಕೆ 'ಕಾಮ' ಸಹಜ, "ಅನೇನ ಪ್ರಸವಿಷ್ಯ ಧ್ವಂ"—ಎಂದು ಪ್ರಜಾಪತಿಯು ಯಜ್ಞದಂತೆ ಈ ಕಾಮನ ಕುರಿತೂ ಮಾನವನಿಗೆ ಆಜ್ಞೆಯಿತ್ತಂತಿದೆ.

'ಮಧು' ಶಬ್ದ ಬಹುಲಾರ್ಥ ಬೋಧಿ— ಬೇಂದ್ರೆಯವರ ಭಾಷೆಯಂತೆಯೇ. ನೀರು, ಜೇನು, ಮದ್ಯ, ವಸಂತ, ವಿಷ್ಣುವಧಿಸಿದ ದೈತ್ಯ ಅಲ್ಲದೆ ಒಂದು ಛಂದಸ್ಸು ಕೂಡ— ಇದೆಲ್ಲ ಭಾವಭಾಯೆ ಈ ಕಾಮವೆಂಬ ದೇವಮಾಯೆಯನ್ನು ಒಳಪಟ್ಟಿದೆ. ಹೀಗೆ ದೇವಕಾಮವೇ ಕಾಮದೇವನಾಗಿ ಬಂದದ್ದು ಕುಮಾರ ಸಂಭವಕ್ಕಾಗಿ. ಮಾರಾವತಾರವೇ ಕುಮಾರಾವತಾರ ಒಂದು ಅಂಕಾವತಾರ.

ಇಲ್ಲಿ ಪ್ರೇಮದೇವತೆಯ ಉತ್ಪತ್ತಿಯ ಗ್ರೀಕ ಪುರಾಣವನ್ನು ಜ್ಞಾಪಿಸಿಕೊಳ್ಳ-ಬಹುದು. ಅಫ್ರೊಡಾಯಿಟ (ಶುಕ್ರ) ಹುಟ್ಟಿದ ದಿನ ಹಬ್ಬ ನಡೆಯಿತು. ಈ ಹಬ್ಬದಲ್ಲಿ ಸಮೃದ್ಧಿದೇವನು ಅಮೃತ ಕುಡಿದು ಅಮಲೇರಿ ಝಿಯಸ್ (ಇಂದ್ರ)ನ ನಂದನದಲ್ಲಿಯೇ ಬಿದ್ದುಕೊಂಡನು. ಆಗ ದಾರಿದ್ರ್ಯ (ಜ್ಯೇಷ್ಠಾಲಕ್ಷ್ಮಿ!) ಅವನ ಮೈಮರೆವಿನ ದುರ್ಲಾಭ ಪಡೆದು ಅವನ ಮಗ್ಗುಲಲ್ಲಿ ಮಲಗಿ ಗರ್ಭಪಡೆ-ದಳು. ಆ ಶಿಶುವೇ ಕಾಮ ಅಥವಾ ಪ್ರೇಮ. ಆತ ದಾರಿದ್ರ್ಯ–ಸಮೃದ್ಧಿ, ಅಜ್ಞಾನ–ಜ್ಞಾನ, ಮರ್ತ್ಯ–ಅಮರತ್ವ ಇವುಗಳ ಮಧ್ಯದ ದೇವತೆ. ಅವನೂ ಅನಂಗ, ಚಂಚಲ, ಸ್ವಚ್ಛಂದ–ಕಂಡತ್ತ ಬಾಣ ಬಿಡುವ ರೆಕ್ಕೆಯುಳ್ಳ ಬಿಲ್ಲುಗಾರ-ಬಾಲಕ!

ಇತ್ತ ಕಾಮನಿಂದ ದೇವತೆಗಳು ರತಿಯನ್ನು ಅಗಲಿಸಿದರು. ಕಾಮ, ಶಿವನ ನೇತ್ರಕ್ಕೆ ಆಹುತಿಯಾದ. ಶಿವನು ವಿರಾಗಿ ಅವನಲ್ಲಿ ರತಿಭಾವವೇ ಇಲ್ಲ. ರತಿ-ವಿರಹದ ಬೇಗೆಯಲ್ಲಿಯೇ ಕಾಮ ಸುಟ್ಟುಹೋದನೆಂದು ಕವಿಯ ಉತ್ಪ್ರೇಕ್ಷೆ. ರತಿಯೋ ಸತಿಯ ಮೈಗೂಡಿ ಅಂಗನೆಯಲ್ಲಿ ಅನಂಗವಾಗಿ ಶಿವನೊಂದಿಗೆ ಕೂಡಿ ಸಾಂಗಳಾದಳು. ಕಾಮ ತಾತ್ಕಾಲಿಕ, ಪ್ರಾಸಂಗಿಕ, ನೈಮಿತ್ತಿಕ. ರತಿ–ರಕ್ತಿ–ಆಸಕ್ತಿ ಹೆಚ್ಚು ಸ್ಥಾಯೀ. ("ಪ್ರೌಢರತಿಯ ಕೈ ಕೂಸು ಆಗಿ ಬೆಳೆದಿಹುದು ಕಾಮ ಶಿಶುವು"—ಎಂದಾಗ ಕವಿ ಕಾಮನನ್ನು Cupid ಪ್ರತಿಮೆಯಾಗಿ ಕಂಡಂತಿದೆ?) ಋತು–ಋತುವಿನ ಪ್ರೇರಣೆಗೆ ಕೂಡುವದಷ್ಟೇ ಪಶುಧರ್ಮ. ಋತುಗೊಂದು ರತಿ, ರತಿಗೊಬ್ಬ ರಮಣ! ಆದರೆ ಕಾಮ–ಸ್ಮರ, ಪ್ರೌಢ, ಪ್ರಬುದ್ಧ ಪ್ರಜ್ಞೆಯ ಶಿಶು. ಆಗ ಆತನೇ ಅನಿರುದ್ಧ, ಪ್ರದ್ಯುಮ್ನ.

"ತನ್ನ ಕಿಚ್ಚಿನೊಳೆ ಬೆಂಕಿ ಸುಟ್ಟು ಬೆಳಕಾಗಿ ಮಿಂಚಬಹುದು." ಸ್ವಾಭಾ-ವಿಕ, ಪ್ರಾಕೃತಿಕ ಸಂಗತಿಗಳನ್ನೇ ತನ್ನ ಭಣಿತ ಭಂಗಿಮೆಯಿಂದ ಪ್ರತೀಕಾತ್ಮಕ–

ವಾಗಿ ಮಾರ್ಪಡಿಸುವದೇ ಬೇಂದ್ರೆ ಜಾಲ. ಇಲ್ಲಿ ಕಾಮದ ದಿವ್ಯೀಕರಣ (Sublimation)ಕ್ಕೆ ಬೆಂಕಿ ತನ್ನ ತಾನೆ ಸುಟ್ಟುಕೊಂಡು ಬೆಳಕಾಗಿ ಮಾರ್ಪಡುವ ಉದಾಹರಣೆ !

ಈ ಪ್ರೇಮ, ತಪೋನಿಧಿ. ಅಂತೆಯೇ ಭವ್ಯ ಉದಾತ್ತ 'ಸತ್ಯಕ್ಕಾಗಿ ನೀರಡಿಸಿಕೊಂಡ ಸೌಂದರ್ಯದಂತೆ ದಿವ್ಯ." ಸತ್ಯ ಮತ್ತು ಸೌಂದರ್ಯಗಳು ಒಂದೇ–ಎಂದನು ಕೀಟ್ಸ್. ಆದರೆ ಅವು ಒಂದಾಗಬೇಕು. ಸೌಂದರ್ಯವು ಸತ್ಯದ ನೆಲೆಗಾಗಿ ಲವಲವಿಸಬೇಕು ಎನ್ನುತ್ತಾರೆ ಕನ್ನಡದ ಈ ಯೇಟ್ಸ್. ಈ ಕವಿಯ ಸೌಂದರ್ಯ ಮೀಮಾಂಸೆಯನ್ನು ಸಖೀಗೀತದ ಈ ಪದ್ಯಗಳನ್ನು ಓದಿ ಇನ್ನೂ ವಿಶದವಾಗಿ ಕಾಣಬಹುದು.

ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ
ಕಣ್ಣಿಗು ಕಣ್ಣಾಗಿ ಒಳಗಿಹುದು.
ಇದಿರಿಗೆ ಚೆಲುವಾಗಿ ಇದುವೆ ತಾನೆನುವಾಗ
ಒಲವಾಗಿ ಒಳಗಿಂದ ಹೊಮ್ಮುತಿದೆ. (ಸ. ಗೀ.)

* * * * *

'ಹೆಣ್ಣು ಗಂಡಿಗೆ ಚೆಲುವು–ಗಂಡು ಹೆಣ್ಣಿಗೆ ಒಲವು'— ಈ ಸಮೀಕರಣದಲ್ಲಿ ಸತ್ಯ (ಗಂಡು) ಸೌಂದರ್ಯ (ಹೆಣ್ಣು) ಇವುಗಳ ಏಕದ ಸೇರಡಿಕೆಯೇ ಪ್ರೇಮ. ಪುರುಷ ಪ್ರಕೃತಿಗಳನ್ನು ಕುಣಿಸುವ ಪ್ರಾಣಸೂತ್ರವಿದು – ಬರೆ ಕಾಮಸೂತ್ರವಲ್ಲ. 'ಪ್ರಿಯೇಷು ಸೌಭಾಗ್ಯ ಫಲಾಹಿ ಚಾರುತಾ'– ತನ್ನ ಕಣ್ಣೆದುರು ಮನೋಭವನು ಶಿವನ ಕಣ್ಣುಂಚಿಗೆ ದಹನವಾದದ್ದು ಕಂಡು ತನ್ನ ರೂಪವನ್ನು ನಿಂದಿಸಿಕೊಳ್ಳುತ್ತ ಸತಿಯು ಅಂದು ನೊಂದುಕೊಳ್ಳಲಿಲ್ಲವೆ ? ಪ್ರಕೃತಿ-ಪುರುಷ, ಬ್ರಹ್ಮ–ಮಾಯೆ, ಅನ್ನ–ಪ್ರಾಣ, ಇವುಗಳ ಮಿಥುನವೇ ಎರಡು ಮೈ ಒಂದಾಗುವದು—"ಭಿನ್ನ ದೇಹದಲಿ ಏಕಜೀವ ಕಾಣುವದು ಕರಗಿ ಮಾಗಿ."

ಪ್ಲೇಟೋನ " ಸಿಂಪೋಜಿಯುಂ " ಪರಿಸಂವಾದದಲ್ಲಿ ಗಂಡು ಹೆಣ್ಣಿನ ಉತ್ಪತ್ತಿಯ ಆಖ್ಯಾಯಿಕೆ. ಎರಿಸ್ಟೊಫೆನಿಸ್ ಹೇಳುತ್ತಾನೆ—

ಆದಿಯಲ್ಲಿ ಮೂರು ಲಿಂಗಗಳಿದ್ದವು—ಪುಂಸ, ಸ್ತ್ರೀ ಮತ್ತು ಪುಂಸ್ತ್ರೀಲಿಂಗ. ಈ ಪುಂಸ್ತ್ರೀಲಿಂಗಗಳೇ ಹರ್ಮೊಫ್ರೊಡಾಯಿಟರು. ಅವರು ಪ್ರಬಲರಾಗಿ ದೇವತೆಗಳ ಮೇಲೆಯೇ ದಾಳಿ ಹೂಡಿದರು. ಆಗ ಈ ಪ್ರಾಣಿಗಳ ನಾಶ ಮಾಡದೆ ನಶಿ ಇಳಿಸುವದು ಹೇಗೆ ? ಎಂಬ ಪ್ರಶ್ನೆ ಬಿತ್ತು ದೇವತೆಗಳ ಪರಿಷತ್ತಿಗೆ. (ನಾಶ ಮಾಡಿ ಬಿಟ್ಟರೆ ಮುಂದೆ ದೇವತೆಗಳಿಗೆ ಹವಿರ್ಭಾಗ ತೆರುವವರು ಯಾರು ?) ಆಗ

ರೋಯಸ್ (ಇಂದ್ರ) ಈ ಪುಂಸ್ತ್ರೀಲಿಂಗಿಗಳನ್ನು ಸರಿಯಾಗಿ ಮಧ್ಯದಲ್ಲಿ ಸೀಳುವ ಹಂಚಿಕೆಯನ್ನು ಮಾಡಿದನು. ಇದರಿಂದ ಅವರ ಬಲ ಅರ್ಧಕ್ಕೆ ಇಳಿಯಿತು; ಮತ್ತು ಸಂಖ್ಯೆ ಇಮ್ಮಡಿ ಆಯಿತು! ಮುಂದೆ ಇಂದ್ರದೇವನು ಅವರ ಗುಹ್ಯೇಂದ್ರಿಯ ಗಳನ್ನು ಮುಂಬದಿಗೆ ತಂದು ಇರಿಸಿದನು. ಅಂದಿನಿಂದ ಅವು ಒಂದನ್ನೊಂದು ಸೇರಲು, ಕೂಡಲು ಲವಲವಿಸುವಂತೆ ಆಯಿತು. ಅಂದರೆ ಗಂಡು ಹೆಣ್ಣು ಅರ್ಧ-ದೇಹ, ಇಬ್ಬರೂ ಕೂಡಿದಾಗಲೇ ಇಡಿಯ ಮನುಷ್ಯ. ಅಂತೆಯೇ ಹೆಣ್ಣು ಗಂಡಿನ ಅರ್ಧಾಂಗಿ. (ಅರ್ಧನಾರೀ ನಟೇಶ್ವರ, ಈ ಹರ್ಮೋಫ್ರೊಡಾಯಿಟ್, ಚೇತನದ ಪ್ರತೀಕ.) ನ್ಯೂಟನ್ನನ ಮೂರನೆಯ ನಿಯಮದಂತೆ ಗಂಡು ಮತ್ತು ಹೆಣ್ಣು "Equal and Opposite."

ಎರಿಸ್ಟೋಫೆನಿಸ್ ಹೇಳುತ್ತಾನೆ— "So you see how ancient is the mutual love implanted in mankind bringing together the parts of the original body and trying to make one out of two and to heal the natural structure of man.........Each man seeks his other tally."

ಆದ್ದರಿಂದಲೇ ಭಿನ್ನ ದೇಹದಲಿ ಏಕಜೀವ ಕಾಣುವ ಎರಕವೇ ಪ್ರೇಮ. ಈ ಮನದ ಕಾವು ಕಾಮವಾಗಿ ಮನದಾಚೆಗೂ ಏನೋ ಅರಿತು ತನ್ನ ಲವಲವಿಕೆ ಚಾಚಿದಾಗ ರತಿಯು ನಿಷ್ಕಾಮವಾಗಿ ರಸಪಾಕ ಪಡೆಯುತ್ತದೆ. ಆಗ ಅದರ ಆಲಂಬನ ವಿಭಾವ ಪಾರಲೌಕಿಕವಾಗಿ ಭಗವಂತನಲ್ಲಿ ಭಕ್ತಿಯಾಗಿ ಮಾಗುತ್ತದೆ. ಇದುವೆ ಮಧುರ ಭಕ್ತಿ. ದೇವರಲ್ಲಿ ಸತಿಪತಿ ಭಾವ – ಆತ್ಮ ಸತಿ, ಪರಮಾತ್ಮ ಪತಿ.

* * * * *

ಬ್ರಹ್ಮದಿಂದ ಮಾಯೆ ಅಗಲಿಸಿದರೆ ಆ ಮಾಯೆಯೇ ಸೀತು ತಿರುಗಿ ಬ್ರಹ್ಮನನ್ನು ಸೇರಲಿಕ್ಕೆ "ಅಸತೋ ಮಾ ಸತ್‌ಗಮಯ" ಅಂದಾಗ ಅಸತ್ತನ್ನು ಬಿಟ್ಟು ಎಂದಲ್ಲ, ಅದರೊಳಗಿಂದಲೇ ಎಂದರ್ಥ. "ಅವಿದ್ಯಾಯಾ ಮೃತ್ಯುಂ ತೀರ್ತ್ವಾ ವಿದ್ಯಾಯಾ ಅಮೃತಮಶ್ನುತೆ." ಇದಕ್ಕೆ ರವೀಂದ್ರರ ಚಿತ್ರಾಂಗದೆ ಅಂದದ್ದು "Illusion is the First appearance of truth" ಅದನ್ನೇ ನಾಸದೀಯ ಸೂಕ್ತದ ನುಡಿಯು ಕಲಿಯುಗದಲ್ಲಿಯೇ ವಿಜೃಂಭಿಸಿತು. "ಸತೋ ಬಂಧುಂ ಅಸತಿ ನಿರವಿಂದನ್." ಇಲ್ಲಿ 'ಅಸತ್' ಅಂದರೆ ಅಸತ್ಯ ಸುಳ್ಳು ಅಲ್ಲ. ಸತ್ ಆಗದಿರುವ ಅವಸ್ಥೆ. Yet to be ಅಥವಾ Nonbeing. Being ಮತ್ತು Nonbeing ಇವುಗಳ ನಡುವಿನ ಸೇತು Becoming. ಪ್ರೇಮವು ಈ ಆಗುವಿಕೆಯ ಮಾಗುವಿಕೆ. ವಿಕಾಸದ, ಪರಿಪಾಕದ ಶಕ್ತಿ.

ಬೀಜ ಒಡೆದು, ಚಿಗುರು–ಸಸಿ–ಮರ–ಹೂವು–ಹಣ್ಣು ಆಗುವದೇಕೆ? ತಿರುಗಿ ತನ್ನ ಬೀಜವನ್ನೇ ಪಡೆಯಲು. "ಬೀಜ ಒಡೆಯೆ ಆ ಬೀಜ ಪಡೆಯೆ ಬರುವಂತೆ ಬೀಜ ಹೂತು." ಈ ಏಕ ಜೀವೈಕ್ಯ ಪರಿಪಾಕವೆ ಜೀವಲೋಕದ ಕಾಮದ ಕ್ರಮವು.

"ಯಾರೊ ಮೋಹದಲಿ, ಯಾರೊ ಊಹೆಯಲಿ
ಯಾರೊ ಯೋಗಿಯಾಗಿ
ಸವಿಯನುಣ್ಣುವರು ಬಾಳನೆಲೆಯ ಬಗೆ—
ಬಗೆಯ ಜಾವದಲ್ಲಿ
ಕಾಮಿ ನೋವಿನಲಿ ಕವಿಯು ಭಾವದಲಿ
ಭಕ್ತ ಜೀವದಲ್ಲಿ"

ಎಷ್ಟು ಸರಳ ಆದರೆ ಅದೆಷ್ಟು ಸಿಬಿಡವಾಗಿ ಬಂದಿದೆ ಈ ಮಾತು! "ಆತ್ಮನಃ ತು ಕಾಮಾಯ ಏವ ಸರ್ವಃ ಪ್ರಿಯಃ ಭವತಿ" ಈ ಆತ್ಮಕಾಮದ ಮೋಹದ ಜಾವದಲ್ಲಿ ನೋವಿಸಿಂದ ಮಿಡುಕುವಾತ ಕಾಮಿ; ಕಲ್ಪನಾ ಲೋಕದಲ್ಲಿ "ಕಲ್ಪವೃಕ್ಷ-ವೃಂದಾವನಂಗಳಲ್ಲಿ ಹೇಗೋ ಹೊಕ್ಕು ಬಂದ ಊಹೆಯಲ್ಲ. ಆ ಮೂಲಕ ಸವಿದ ಭಾವದ ಜಾವದಲ್ಲಿ ಆತ ಕವಿ ಅದೇ ಭಾವಸ್ತರದ ಆಚೆ ಯೋಗಸಾಧನೆಯಲ್ಲಿ ಭಗ-ವತ್ಪ್ರಜ್ಞೆಯ ಶಿವಸ್ತರದಲ್ಲಿ ಆತ ಭಕ್ತ. ಎರಿಸ್ಟೋಫೆನಿಸ ಅನ್ನುವಂತೆ "Every one becomes a poet when love touches even one who before that had no music in his soul. (ಆದ್ದರಿಂದಲೇ ಶೇಕ್ಸ-ಪಿಯರನು ಪ್ರೇಮಿಯನ್ನೂ, ಕವಿಯನ್ನೂ ಒಂದೇ ದಾವಣಿಯಲ್ಲಿ ಕಟ್ಟಿದ್ದು— ಹುಚ್ಚನೊಂದಿಗೆ.)

ಗೀತೆಯಲ್ಲಿ ಕಾಮದ ಅಧೋಮುಖಗತಿಯನ್ನು ಬಣ್ಣಿಸಲಾಗಿದೆ. ಕಾಮ-ಕ್ರೋಧ ಸಂಮೋಹ–ಸ್ಮೃತಿ–ವಿಭ್ರಮ–ಬುದ್ಧಿನಾಶ ಮತ್ತು ವಿನಾಶ. ಆದರೆ ಪೀಠಿಕೆಯಲ್ಲಿ ಕವಿವರ್ಯರು ತೆರೆದು ತೋರಿಸಿದ್ದು ಅದರ ಊರ್ಧ್ವಮುಖ ಪ್ರಗತಿ–ಕಾಮತೃಪ್ತಿ – ಸ್ನೇಹಸುಪ್ತಿ – ಭಾವದೀಪ್ತಿ – ಅದರಿಂದ ಕವಿಯ ಛಂದೋವಿಲಾಸದ ಮಾಯೆ ಮುಂದೆ ಜೀವದ ತಾದಾತ್ಮ್ಯ. ಹೀಗೆ ಈ ಉದಾತ್ತೀಕರಣದ ಕ್ರಮ.

"ಕಾಮಿ ಬಗ್ಗುವನು ದೇಹಿ ಎಂದು
ಮೋಹದಲಿ ಕಾಲಿಗಡಸಿ
ಕವಿಯು ಒಗ್ಗುವನು ತನ್ನನಂಗ
ಭಾವಕ್ಕೆ ಮಾತು ತೊಡಿಸಿ
ಭಕ್ತ ಹಿಗ್ಗುವನು ತನ್ನ ಜೀವ
ಹಸಮಾಡಿ ದೇವನಾಗಿ

ಒಬ್ಬನೊಲಿಸುತಿಹ ಒಂದೆ ನೂಲಿನಲಿ
ಎಲ್ಲ ಕಾವನಾಗಿ ” (ಮೇ. ದೂ.)

( ಇಲ್ಲಿ ‘ದೇಹಿ’ ಮತ್ತು ‘ಕಾವ’ಗಳ ಶ್ಲೇಷ ಮನೋಜ್ಞವಾಗಿದೆ.) ಇಂಥ ಶ್ಲೇಷೆ ಬೇಂದ್ರೆಯವರ ಸುಶ್ಲಿಷ್ಟ ಶೈಲಿಯ ಅಕ್ಲಿಷ್ಟ ಕಾಂತಿ.)

ಈ ಜೀವಲೋಕದ ಕಾಮಕ್ಕೆ ಹಿನ್ನೆಲೆ ದ್ಯಾವಾ ಪೃಥಿವಿಯ ಕಾಮ. ಬೇಂದ್ರೆಯವರು ನೆಲವನ್ನು ಬರೆ ಮಣ್ಣೆಂದು ಕಂಡವರಲ್ಲ. ವಾತಾವರಣವೆಂದರೆ ಪೃಥ್ವಿಯ ನಿಶ್ವಸಿತವೆಂದು ನಂಬಿದವರು. ಅವರಿಗೆ ಜಡವೆಲ್ಲ ಚೇತನದ ಚೆಲುವಿನಿಂದ ಅನು-ಪ್ರಾಣಿತ. ಪ್ರಕೃತಿಯನ್ನು ಪ್ರತ್ಯೇಕ ಸಜೀವ ಸತ್ತೆ ಇರುವ ಹೆಣ್ಣಿನ ರೂಪದಲ್ಲಿ ‘ಜಿಗಿಗಂಗಳ ಚೆಲುವೆ’ ‘ಮೊದಲಗಿತ್ತಿ’ಯಾಗಿ ಕಂಡು ಹಾಡಿದ ಕವಿ ಅಂಬಿಕಾ-ತನಯದತ್ತರು. ಕವಿಕುಲಗುರುವಂತೆಯೇ ಪ್ರಾಕೃತಿಕ ಚಿತ್ರಣದಲ್ಲಿ ತನ್ನ ಭಾವ-ನೆಯ ಸೌಂದರ್ಯ ಬೆರೆಸಿ ಅದನ್ನು ಐಂದ್ರಿಯಕ ಚಿತ್ರಣವಾಗಿ ಮಾರ್ಪಡಿಸುವ ಪ್ರತಿಭೆ ಅವರದು.

ಬಾನೊಡೆಯನಿಂದ ಮಣ್ಣು, ಹೆಣ್ಣು ಅಗಲಿಹಳು. ಅನಾದಿಯಿಂದಲೂ ಈ ವಿರಹದ ಬವಣೆಯಲ್ಲಿ ತಿರುಗೇ ತಿರುಗುವಳು ಹೊತ್ತನ್ನು ಸುತ್ತಿ. ( “ ತಿಂಗಳ-ನನ್ನೆತ್ತ್ಯಾಳs ಹೊತ್ತಿನ ಬೆನ್ಹತ್ತ್ಯಾಳs !” ) ಆದರೆ ನಭಕ್ಕೆ ಏನಿದೆ ನೆಲದೊಳು ಆಶೆ? ನೆಲಕ್ಕೆ ಮಾತ್ರ ಅದರ ಮುಷ್ಕ ಪಿಪಾಸೆ ! ನಭ ಪುರುಷ, ನೆಲ ಪ್ರಕೃತಿ. ಇದು ಸನಾತನ ದ್ವಂದ್ವ. ಮಳೆ ಮೋಡವೆಂದರೇನು. “ I am the daughter of earth and water ” ಎಂದಿದೆ ಶೆಲ್ಲಿ ಕವಿಯ ಮೋಡ. ಆದರೆ ಬೇಂದ್ರೆಯವರ ಉತ್ಪ್ರೇಕ್ಷೆ ಇನ್ನೂ ಸೂಕ್ಷ್ಮ. ‘ನೆಲವೆಣ್ಣು ತನ್ನ ಬಾನೊಡೆಯನ ಚಿರವಿರ-ಹದ ವ್ಯಥೆಯಲ್ಲಿ ಕಾದು ಕಾದು ಅವಳ ಕಣ್ಣೀರು ಕಡಲಾಗಿ, ಉಗಿಯಾಗಿ, ಉಕ್ಕಿ ಮೋಡವಾಗಿ ಮೇಲೆ ಹೋಗಿ ‘ದೇಹಿ’ ಎಂದು ಬಾನೊಡೆಯನ ಕಾಲಿಗಡಿಸಿ ತಿರುಗಿ ಉದುರಿದಾಗ ಅವಳ ಎದೆ ಹಚ್ಚಗೆ ನವಿರುತ್ತದೆ!’ ಎಂಥ ನವಿರೇಳಿಸುವ ಊಹೆಯು ಈಹೆ !

* * * * *

ಪ್ರಕೃತಿಯ ಸೃಷ್ಟಿಯ ಕುರಿತು ಈ ನಿತ್ಯ ಆಶ್ಚರ್ಯ ಆನಂದದ ದೃಷ್ಟಿ ಒಂದು Pantheistic ಪ್ರಾಕೃತ (Pagan) ಭಾವವಿಭ್ರಮ ಬೇಂದ್ರೆಯವರ ಅತ್ಯು-ನ್ನತ ಆಧ್ಯಾತ್ಮಿಕ ಬುದ್ಧಿ ವಿಲಾಸದಲ್ಲಿಯೂ ಕಣ್ಣಿಗೂ ಕಣ್ಣಾಗಿ ಮಾತಿನಲ್ಲಿ ಇರುವಂಥ ಮೌನದ ಧ್ವನಿಯಂತೆ ಪರಿಸ್ಪಂದಿಸುತ್ತಿರುತ್ತದೆ. ಮಾಧುರ್ಯ-ಚಾತುರ್ಯ, ಋಜುತ್ವ-ಮೃದುತ್ವ, ತತ್ತ್ವ-ರಸ, ಚಮತ್ಕಾರ-ಸಾಕ್ಷಾತ್ಕಾರ ಇವೆಲ್ಲವುಗಳ

ಸಮನ್ವಯವಾದ ಅವರ ಕಾವ್ಯವು Romantic ಹೇಗೋ ಹಾಗೆಯೇ Metaphysical ಕೂಡ ಅಹುದು.

ಕವಿ, ಮೋಡವನ್ನು ಇನ್ನೂ ಎರಡು ಬಗೆಯಾಗಿ ಉತ್ಪ್ರೇಕ್ಷಿಸಿದ್ದಾರೆ—'ಯಕ್ಷನ ಮೇಘ' ಮತ್ತು 'ಕವಿಯ ಮೇಘ'.

> "ಮೈಯ ಉರಿಗೆ ಬಗೆ ಉಗಿಯು ಹೊತ್ತಿ
> ನಿಟ್ಟುಸಿರಿನೊಡನೆ ಏರಿ
> ಕಣ್ಣುಮಂಜು ಕಂಬನಿಯು ತುಂಬಿ
> ಮುನ್ನೆನಹು ಮಿಂಚು ಸೇರಿ ||
> ಗುಡುಗೆ ಗುಡುಗುತಿರೆ ವೈರಿ ವಿಧಿಯು
> ಕಾಟಕ್ಕೆ ಎದೆಯು ತಾನು
> ವಿರಹಿ ಹೃದಯದುದ್ಗಾರಸಾರವೇ
> ಮೇಘವಲ್ಲದೇನು || "

ಅಲ್ಲವೆನ್ನುವರಾದರೂ ಯಾರು? ಹೇಗೆ? ಮೈಯ ಉರಿ ಬಗೆಯ ಉಗಿ. ಅದಕ್ಕೆ ಚಲನೆ ನಿಟ್ಟುಸಿರಿನದು. ಕಂಬನಿಯ ಮಂಜು, ಹೊಳೆಹೊಳೆವ ಹಿಂದಿನ ನೆನಹುಗಳ ಮಿಂಚು ಇವೆಲ್ಲ ಸೇರಿ ಎದೆಯಲ್ಲಿ ಗುಡುಗುತ್ತಿರುವ ಮೇಘವಿದು. ಸತ್ಯವನ್ನೇ ಸೌಂದರ್ಯವನ್ನಾಗಿ ಅರಳಿಸುವ ಮಾತುಗಾರಿಕೆ ಇದು!

ಇನ್ನು ಕವಿಯ ಮೇಘ ಎಂತಹದು?

> "ಮಾತು ಜ್ಯೋತಿ, ಆ ಹರಳು ಧೂಮ,
> ರಸ ಸಲಿಲ, ಭಾವ ಗಾಳಿ
> ಕವಿಯೊಳಾಗಿ ಕಟ್ಟಿತ್ತು ಕಾವ್ಯ ನವ-
> ಮೇಘರೂಪ ತಾಳಿ ||
> ಸ್ಥಾಯಿ ಅಲ್ಲಿ ಸಂಚಾರದಲ್ಲಿ ರಸ-
> ಪಾಕವಾಗಿ ಬಂತು............ "

("ಘನರಸ ಆನಂದ; ಆನಂದ ದ್ರವ ರಸ"— ಸ. ಗೀ.)

ಇದು ಬರೆ ಮಾತುಗಳ ಪವಣಿಕೆ ಅಲ್ಲ. ಇಲ್ಲಿ ಪದಪದವೂ ಪದಕದ ಪದವಿಯನ್ನು ಪಡೆದಿದೆ. "ನಿನ್ನ ಮಾತಿನೊಳಿಹುದು ಒಡಪಿನಂದ!" ಎಂದಿದ್ದ ಕವಿ ಬೆಳಗಿನಿಂದ; ಆಗ ಕನ್ನಡಾಂಬೆ ಅಂದಿದ್ದಳು—"ನನ್ನ ಹತ್ತಿರದೊಂದೆ ಉಳಿದಿಹುದು ಕಂದ!" ಅದನ್ನೇ ಅಕ್ಷಯ್ಯ ನಿಧಿಯಾಗಿ ಕರುಳಲ್ಲಿ ಕಟ್ಟಿಟ್ಟುಕೊಂಡು ಬಾಳ ಬಂದಿದ್ದಾರೆ ಬೇಂದ್ರೆ.

ಕವಿಯ ಮಾತು ಜ್ಯೋತಿಯಂತೆ. ಅದರ ಹುರುಳು ಲಹರಿ ಲಹರಿ ಕೆಂಪು-ಬಳ್ಳಿಯಾಗಿ ಹಬ್ಬುವ ಧೂಪಧೂಮದಂತೆ, ರಸವೇ ಇಲ್ಲಿ ನೀರು. ಭಾವ ಗಾಳಿಯಂತೆ ಹಗುರು, ನವಿರು. ಸುಳಿದಾಡುವ ವೃತ್ತಿ ಔಚಿತ್ಯ ಇಂಥ ಪಙ್ಕ್ತಿಗಳ ಪ್ರಾಣ-ಸುಟ್ಟು ಕಾಮ ಪ್ರದ್ಯುಮ್ನನಾದಂತೆ.

ಮುಂದೆ ಕಾಲಿದಾಸನ ಕುರಿತು ನಾಲ್ಕು ನುಡಿಗಳು ಬರುತ್ತವೆ. ಮೋಡ-ದೊಂದು ಸೇವಮಾಡಿ ಕವಿಕುಲಗುರುವು ಯಕ್ಷ–ಮಾಯೆಯಿಂದ ತಾನು ಉಂಡ ಒಲುಮೆ, ಪಟ್ಟ ಸೊಗಸು ಎಲ್ಲ ಹಾಡಿಕೊಂಡಿದ್ದಾನೆ.

"—ಅಕ್ಷಿ ಪಕ್ಷಿ ಕಣ್ಗಂಡ ಪಾತ್ರದಿಂದ"
"ಪ್ರೇಮದಾಟವನು ಕವಿಯು ಆಡಿಸಿದ
ಕಾಮಸೂತ್ರದಿಂದ"

ಕಾಲಿದಾಸನ ರಸದಲ್ಲಿ ರತಿಯೆ ಬಿಂದು ಮುಕ್ತಿಸತಿಯಾಗಿಹಳಂತೆ.

"ಎಲ್ಲ ಕಡೆಗೆ ಚೈತನ್ಯಲೀಲೆ ಕಂಡವನೆ ನೀನೆ ಕವಿಯು"

ಕಾಲಿದಾಸನಿಗೆ ಕೊಟ್ಟ ಈ ಪ್ರಶಸ್ತಿ ಅಷ್ಟೇ ಪ್ರಶಸ್ತವಾಗಿ ಈ ಕವಿಗೂ ಒಪ್ಪುವಂತಿದೆ.

ಬೆಟ್ಟಕ್ಕೆ ಒಲಿದ ಮನದ ಹರಹು, ಎತ್ತರ, ಬೆಟ್ಟದಂತೆಯೇ. ಹೊಳೆಗೆ ಒಲಿದ ಮನ ಹೊಳೆಯ ಹಾಗೆ ಭಾವ ಹೊಳೆಸುತಿಹುದು, ಕಾಲಿದಾಸನ ಅಭಿರುಚಿಯು ಸೌಂದರ್ಯದಂತೆ ಶುಚಿಯು ಎಂದಿದ್ದಾರೆ ಕವಿ. ಇಲ್ಲಿ ಸಹಜವಾಗಿ ಸೌಂದರ್ಯದ ಒಂದು ಜೀವಲಕ್ಷಣವನ್ನು ಅವರು ಹೇಳಿಹೋದಂತೆ. ಶುಚಿತ್ವ, ರುಚಿ–ರುಚಿರತೆಗಳ ಜೀವಾಳ. ಸೌಂದರ್ಯವೆಂದರೆ ಎಲ್ಲ ಶುದ್ಧ, ಶುಚಿ–ಬೆಂಕಿಯಂತೆ ತೀರ್ಥೋ-ದಕದಂತೆ ಅದಕ್ಕೆ ಇನ್ನೊಂದರಿಂದ ಶುದ್ಧತೆ ಬರಬೇಕಾಗಿಲ್ಲ.

ಮಂದಾಕ್ರಾಂತವು ವಿರಹಿಛಂದಸ್ಸೆಂದು ಮುಂದಿನ ಎರಡು ನುಡಿಗಳಲ್ಲಿ ಬಣ್ಣಿಸಲಾಗಿದೆ. ವೃತ್ತದ ಔಚಿತ್ಯದಿಂದ ಕಾವ್ಯಕ್ಕೆ ಕಳೆಯೇರುವ ಸಂದರ್ಭಕ್ಕೆ 'ಮೇಘದೂತ'ದ ಮಂದಾಕ್ರಾಂತವೇ ಉತ್ತಮ ನಿದರ್ಶನ. ಈ ಕಾವ್ಯದಿಂದಲೇ ಈ ವೃತ್ತ ಸಂಸ್ಕೃತ ಸಾಹಿತ್ಯದಲ್ಲಿ ನೆಲೆಗೊಂಡು ನಿಂತಿತು. ಆದರೆ ಕವಿಯು ಈ ವೃತ್ತವನ್ನು ಬಿಟ್ಟು ಈ ಕಾವ್ಯದ ಕಳೆಯನ್ನೂ, ಕಲೆಯನ್ನೂ ಲೇಶಮಾತ್ರವೂ ಕೆಡದಂತೆ ತನ್ನದೆ ಆದ ( ೩|೫, ೩|೫, ೩|೫ + ೨ ಮಾತ್ರಾಗಣಗಳ ) ಹೊಸ 'ರಗಳೆ'ಯನ್ನು ರಚಿಸಿ ಸುಶ್ಲಿಷ್ಟ ಬಂಧದಲ್ಲಿ ಮತ್ತೆ ಹೊಸ ಕುಂದಣದಲ್ಲಿ ಹಳೆಯ ರತ್ನವನ್ನು ಕಟ್ಟಿ ಕಾಣಿಸಿದ್ದಾರೆ.

* * * * *

ಇದಕ್ಕೆ ಕಾರಣ ಇಲ್ಲಿಯ ವೃತ್ತಿ. ವೃತ್ತ ಬೇರೆ ಆದರೂ 'ರೀತಿ' ಕಾಲಿ-ದಾಸನದೇ – ವೈದರ್ಭೀ.

ಬಂಧ ಪಾರುಷ್ಯರಹಿತಾ
ಶಬ್ದ ಕಾಠಿಣ್ಯವರ್ಜಿತಾ
ನಾತಿ ದೀರ್ಘ ಸಮಾಸಾ ಚ-
ವೈದರ್ಭೀರೀತಿರಿಷ್ಯತೆ|

ಇದನ್ನೇ ಇನ್ನೊಬ್ಬ ಲಾಕ್ಷಣಿಕನು ಹೀಗೆ ಬಣ್ಣಿಸಿದ್ದಾನೆ—

ಮಾಧುರ್ಯ ವ್ಯಂಜಕೈವರ್ಣೈಃ
ರಚನಾ ಲಲಿತಾತ್ಮಕಾ
ಅವೃತ್ತಿರಲ್ಪವೃತ್ತಿರ್ವಾ
ವೈದರ್ಭಿ ರೀತಿರಿಷ್ಯತೆ |

ಇದೇ ಲಲಿತ, ಮಧುರ ರೀತಿಯೇ ಕವಿ ಬೇಂದ್ರೆಯವರ ವೈಖರಿಯಾಗಿದೆ. ಪಾದಪೂರಣಕ್ಕೋ ನಾದಭಾರಣಕ್ಕೋ ಶಬ್ದಸಂಭಾರವನ್ನು ತುಂಬಿ ತುರುಕಿ ತೂರಾಡುವ ಸ್ತೂಪಶಿಲ್ಪವಲ್ಲ ಕನ್ನಡ ಮೇಘದೂತ. "ನನ್ನ ಹರಣ"ದಂಥ ಉತ್ಕೃಷ್ಟ ಕವನದಲ್ಲಿಯೂ ಅರ್ಥ ನಿರ್ಭರವಿದ್ದೂ—

ಹಾಸ್ಯಕಿರಣ
ತದನುಸರಣ
ತದಿತರಪಥ ಕಾಣೆನಾ |

ಈ ನುಡಿಯಂಥ ಸಮಸ್ತ ಪದಪುಂಜವು ಕಾಣಿಸಿಕೊಳ್ಳದಿಲ್ಲ. ಆದರೆ ಮೇಘ-ದೂತದಲ್ಲಿಯಾಗಲೀ ಅದರ ಈ ಪ್ರಸನ್ನ ಪೀಠಿಕೆಯಲ್ಲಾಗಲೀ 'ಕೋಮಲ ಕಾಂತ ಪದಾವಲಿ'ಗಳ ಮಾಧುರ್ಯಕ್ಕೆ ಮಾರ್ಮಿಕ ಅರ್ಥಸಾಂದ್ರತೆಯ ಚಾತುರ್ಯ ಮತ್ತು ಪದಮೈತ್ರಿಯ ಔಚಿತ್ಯ ಮೂರೂ ಸಮರಸವಾಗಿ ಸಂಗಮಗೊಂಡಿವೆ.

"ಶೃಂಗಾರ ತೀರ್ಥದಲಿ ಮಿಂದ ಚಿತ್ತ
ವೈದರ್ಭಿ ರೀತಿಯಾಗಿ" ಅಂತೆಯೇ—
"ಬಂತು ಗಾಂಧರ್ವ ಪ್ರೀತಿ ಗಾಂಧರ್ವ ಗೀತಿಯಾಗಿ"

ಕವಿಯು ಈ ಗಾಂಧರ್ವ ಪ್ರೀತಿಯ ಅಧ್ಯಾತ್ಮವನ್ನೂ ಹೋಗಹೋಗುತ್ತ ಸೂಚಿಸಿದ್ದಾರೆ.

ಎಷ್ಟೋ ಭವಚಕ್ರ ತಿರುಗಿದರೂ ಜೀವ ತನ್ನ ಆತ್ಮತತ್ತ್ವ ಮರೆಯ-ಲಾರದು. ‘ಮರ್ತ್ಯಕಿಳಿದರೂ ಯಕ್ಷ ಮುಳುಗುವನೆ?’ ಇಲ್ಲ. ಅವನದು ಒಳಗೆ ದಿವ್ಯ ಸತ್ವ. ಅಲ್ಲದೆ ಅವನ ಯಕ್ಷಿ ಅಂತರಾತ್ಮನಂತೆ ಅವನ ಸುಖದ ಚಿಂತೆ ವಹಿಸಿ ಉನ್ನತಳಾಗಿ ನಿಂತಿದ್ದಾಳೆ. ಅಂದ ಮೇಲೆ ‘ದೇವಜಾತಿ ಕೆಳಗಿಳಿದರೇನು? ಅದು ಬಾನ ಹತ್ತಿರಿಹುದು!’

“In true love it is the soul that embraces the body” ಆತ್ಮವು ಜೀವಿಯನ್ನು ಉದ್ಧರಿಸಬೇಕು, ತನ್ನ ಭಾವಾಲಿಂಗನದಲ್ಲಿ ಎತ್ತಿ ಎದೆಗೊತ್ತಿ.

ಊಹೆಯ ಭವ್ಯತೆಯಲ್ಲಿ ಮಾತಿನ ದಿವ್ಯತೆ ಮಿಂಚಿದಾಗಲೇ ನಿಜವಾದ ನವ್ಯತೆ ಕಾವ್ಯದಲ್ಲಿ ಮೂಡಿ ಬರುತ್ತದೆ.

“ಮೈಯ ಮಲೆಯ ತಲೆಯಲ್ಲಿ ಎಲ್ಲಿ
ಆಸರಂತ ದೇವಲೀಲೆ
ಬೈತಲಂತೆ ಮಿಂಚಾಡೆ ನಡುವೆ
ಹೆಳಲಾಗೆ ಮೇಘಮಾಲೆ
ವಿಂಧ್ಯ ಶಿಖರದಲೆ ಯಕ್ಷಚಿತ್ತ
ಆಲಕೆಯನ್ನು ಚಿತ್ರಿಸಿಹುದು

—ಎಂಬ ‘ಅಂದತ್ತ’ ಚಿತ್ರಣ ಅಂದತ್ತ ಚಂದ ಚೆಲ್ವರಿಯುವ ಶಕ್ತಿಗೆ ದ್ಯೋತಕ. ಅದಕ್ಕೂ ಮಾರ್ಮಿಕವಾದ ಈ ಪದ್ಯ ಕವಿವರ್ಯರ ನಮ್ರವಿನಯದಂತೆ ಚತುರೋಕ್ತಿಯ ಲಾಸ್ಯಕ್ಕೂ ಒಂದು ನರ್ಮನಿದರ್ಶನ.

ತಮ್ಮ ಕೃತಿ ಭಾಷಾಂತರವಲ್ಲ, ಭಾವಗ್ರಹಣವೆನ್ನುತ್ತ ಅದರ ಲೋಪದೋಷಗಳನ್ನು ಕವಿಯು ಈ ರೀತಿ ಸುಕುಮಾರವಾಗಿ ಸಮರ್ಥಿಸಿಕೊಳ್ಳುತ್ತಾರೆ—

“ಕವಿಯ ಕಮಲಕೃತಿಯಲ್ಲಿ ಉಂಡೆ
ನಾನೊಬ್ಬ ಭವ್ಯಭೃಂಗ
ಪಕಳೆಮಾತು ಉದಿರಾಡಬಹುದು
ತುಂಬೀತು ಸ್ವಾಂತರಂಗ ||
ತೋಳುಗೀಳು ಸಡಲೀತು ಪ್ರಿಯರ
ಸುಸ್ನಿಗ್ಧ ಬಂಧದಲ್ಲು

ಪ್ರಾಣ ತುಂಬುವಾ ಅಧರಪಾನ
ಇಳಿದೀತೆ ಉದರದಲ್ಲು ? || ”

ನಲ್ಲ-ನಲ್ಲೆಯರ ಅಪ್ಪುಗೆಯ ಸಂಭ್ರಮದಲ್ಲಿ ತೋಳುಗೀಳು ಸಡಿಲಿಸಬಹುದು. ಆದರೆ ಅದರ ಸ್ನಿಗ್ಧತೆ, ಮುಗ್ಧತೆಗೆ ಎಲ್ಲಿ ಲೋಪ ? ಮುಖ್ಯ, ಪ್ರಾಣತುಂಬುವ ಅಧರಪಾನ ಒಡಲಿಗೆ ಇಳಿಯಬೇಕು. ಓದಿ ಸವಿದ ರಸಿಕರಿಂದ ಇಂಥ ಕೃತಿ ಹುಟ್ಟಿ ಬರಬೇಕು. ಅಥವಾ ಇದರ ಸಂಸ್ಕಾರ ಸಾರ್ಥಕವಾಗಬೇಕು. (ದಾಂಪತ್ಯಪ್ರೇಮ ಸಂತಾನದಲ್ಲಿ ಪ್ರತಿಫಲಿಸುವಂತೆ ಎಂಬುದೇ ಈ ಪ್ರತಿಮೆಯ ಅಪ್ರತಿಮಧ್ವನಿ !) ಈ ಕವಿತೆ ಮತ್ತು ರಸಿಕ ಇಬ್ಬರು ತೆಕ್ಕೆಬಿದ್ದಾಗ ಇವಳ ಸವಿ ಅವನ ಎದೆಯೊಳಕ್ಕೆ ಇಳಿಯದೇ ಹೋದೀತೆ ? “ ಕೇಷಾಂ ನೈಷಾ ಕಥಯ, ಕವಿತಾ ಕಾಮಿನೀ ಕೌತುಕಾಯ. ”

§ § § §

೭

# ಸಾಹಿತ್ಯವಿಮರ್ಶಕ ಬೇಂದ್ರೆ

ಕೆ. ಕೃಷ್ಣಮೂರ್ತಿ

"ಋಚೋ ಅಕ್ಷರೇ ಪರಮೇ ವ್ಯೋಮನ್
ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ "—ಋಗ್ವೇದ I. ೧೬೪. ೩೯

"ಪ್ರಾಪ್ತರೂಪವಿಭಾಗಾಯಾ ಯೋ ವಾಚಃ ಪರಮೋ ರಸಃ |
ಯತ್ತತ್ ಪುಣ್ಯತಮಂ ಜ್ಯೋತಿಸ್ತಸ್ಯ ಮಾರ್ಗೋಽಯಮಾಂಜಸಃ ||"
—ವಾಕ್ಯಪದೀಯ, ಶ್ಲೋಕ ೧೨.

"ಸರಸ್ವತ್ಯಾಸ್ತತ್ತ್ವಂ ಕವಿಸಹೃದಯಾಖ್ಯಂ ವಿಜಯತೇ"
—ಅಭಿನವಗುಪ್ತ.

ವರಕವಿಬೇಂದ್ರೆ ಅವರ ಕಾವ್ಯಸಿದ್ಧಿಯೇ ಅವರ ಸಾಹಿತ್ಯವಿಮರ್ಶೆಯ ಸಮೃದ್ಧಿಯನ್ನು ಮರೆಯಾಗಿಸಲು ಕಾರಣವಾಗಿದೆಯೋ ಎಂದು ಒಮ್ಮೊಮ್ಮೆ ಅನಿಸುತ್ತದೆ. ಆದರೆ ಕನ್ನಡದಲ್ಲಿ ಸಾಹಿತ್ಯ ವಿಮರ್ಶೆಯ ಕ್ಷೇತ್ರ ಇನ್ನೂ ಅಪ್ರಬುದ್ಧ ಇಲ್ಲವೆ ಶೈಶವದ ಅವಸ್ಥೆಯಲ್ಲಿದ್ದಾಗ ಅದಕ್ಕೂ ಶಾಶ್ವತಸಾಹಿತ್ಯದ ಉನ್ನತ ಸ್ಥಾನ ದೊರಕುವಂತಹ ಪ್ರಬುದ್ಧರಚನೆಗಳನ್ನು ನಿರ್ಮಿಸಿದ, ಮಾಸ್ತಿ, ಬಿ. ಎಂ. ಶ್ರೀ ಮುಂತಾದ ಆದ್ಯರ ಪಂಕ್ತಿಯಲ್ಲಿ ಬೇಂದ್ರೆಯವರಿಗೆ ಕಾಲಚಕ್ರ ಉರುಳಿದಂತೆಲ್ಲ ಅಗ್ರಸ್ಥಾನವೇ ಭಾವೀ ಸಾಹಿತ್ಯೇತಿಹಾಸಕಾರರಿಂದ ನಿರ್ದಿಷ್ಟ ವಾದರೆ ಯಾರೂ ಅಚ್ಚರಿಪಡಬೇಕಾಗಿಲ್ಲ. ಬೇಂದ್ರೆ ಅವರ ವಿಮರ್ಶೆಯಲ್ಲಿರುವ ಕೆಲವೊಂದು ಅಭೂತಪೂರ್ವ ವೈಶಿಷ್ಟ್ಯಗಳನ್ನು ಯಥಾಶಕ್ತಿ ನಿರ್ದೇಶಿಸುವು ದಷ್ಟೇ ಈ ಲೇಖನದ ಗುರಿ; ಅವರ ವಿಮರ್ಶೆಯನ್ನು ವಿಮರ್ಶಿಸುವುದಲ್ಲ.

ಬೇಂದ್ರೆ, ವಿಮರ್ಶಕರಾಗಿ ತಳೆದ ನಿಲುವು, ಮೆಚ್ಚಿದ ಚೆಲುವು, ಇತ್ತ ಶಾಸ್ತ್ರ ಪಾಂಡಿತ್ಯ, ಅತ್ತ ಕಾವ್ಯಾನುಭವ ಎರಡನ್ನೂ ಸಾರವತ್ತಾಗಿ ಸಾಕ್ಷಾತ್ಕರಿಸಿ ಕೊಂಡಿರುವುದರ ಪ್ರತೀಕವಾಗಿವೆ; ಅಷ್ಟೇ ಅಲ್ಲ; ಅವರ ರಸತ್ರಿವೇಣಿಯಲ್ಲಿ

ಇಂಗ್ಲಿಷ್, ಸಂಸ್ಕೃತ, ಕನ್ನಡ ಕಾವ್ಯಧಾರೆಗಳೆಲ್ಲ ಸಂಗಮಿಸಿವೆ. ಆದರೂ ಅವರು ನಿಂತ ನೆಲೆ, ಕಟ್ಟುವ ಜೆಲೆ, ಪುಟಸುವ ರಸದ ಸೆಲೆ—ಎಲ್ಲವೂ ಹದಿನಾರಾಣೆ ಭಾರತೀಯವಾಗಿರುವುದೇ ಅವರ ಅದ್ವಿತೀಯ ಸಾರಸ್ವತಸಿದ್ಧಿ. ವೇದ ಋಷಿಗಳ ಋತಂಭರ ಪ್ರಜ್ಞೆ ಅವರ ಮನೋಮುಕುರದಲ್ಲಿ ಸಹಜವಾಗಿ ಮಾರ್ಪೊಳೆಯುತ್ತದೆ. ಭರ್ತೃಹರಿಯ ಶಬ್ದಬ್ರಹ್ಮ ಸಿದ್ಧಾಂತ ಅವರಿಗೆ ಕರತಲಾಮಲಕವೆನಿಸುತ್ತದೆ. ಭಗವದ್ಗೀತೆ, ಜ್ಞಾನೇಶ್ವರಿ, ಭಾಗವತ, ಮುಂತಾದ ಪುಣ್ಯಕೃತಿಗಳಲ್ಲಿ ಸೂಕ್ತಿರತ್ನಗಳ ಪುನಃ ಪುನರನುಸಂಧಾನದಿಂದ ಆಧ್ಯಾತ್ಮಿಕ ರಹಸ್ಯ ಎಲ್ಲ ನಿರ್ಮಿತಿಗೂ ಮೂಲದಲ್ಲಿರುವ ಮನೋಭಾವ ಮೂಡುತ್ತದೆ; ಅನುಭಾವವೇ ಅನುಭವದ ಒರೆಗಲ್ಲಾಗಿ ಮಾರ್ಪಟ್ಟ ಕಾರಣ ಮಿಕ್ಕ ಲೇಖಕರಲ್ಲಿ ಮಾಲೆಮಾಲೆಯಾಗಿ ಮುಂಬರಿವ ಸಂದೇಹ ಸಂದೋಹಗಳಿಗೆ ಬೇಂದ್ರೆ ಅವರ ಮನೋಭಿತ್ತಿಯಲ್ಲಿ ಸ್ಥಾನವಿಲ್ಲ. ಅದಕ್ಕೆ ಪೋಷಕವಾಗಿಯೇ ಟಾಗೋರ್, ಶ್ರೀ ಅರವಿಂದರು, A. E, ಯೇಟ್ಸ್, ಮಾರಿಸ್ ಮೇಟರ್‌ಲಿಂಕ್. ಮುಂತಾದ ಆಧುನಿಕ ಮೇಧಾವಿ ಕವಿ-ದಾರ್ಶನಿಕರ ವಿಚಾರಸರಣಿ ಒಂದು ಸುಂದರ ಆವರಣವನ್ನು ತಾನೇತಾನಾಗಿ ಕಲ್ಪಿಸಿಕೊಳ್ಳುತ್ತದೆ. ಬೇಂದ್ರೆ ಅವರ ವೈಯಕ್ತಿಕತೆಯ ಖಚಿತ ಮುದ್ರೆಯನ್ನು ತಳೆದು ಬೇಂದ್ರೆ-ದರ್ಶನವೆನ್ನುವಂತೆ ಆಕಾರಪಡೆಯುತ್ತದೆ. ಹೀಗೆ ಪ್ರಾಚ್ಯ-ಪಾಶ್ಚಾತ್ಯಗಳ, ಭೂತ-ವರ್ತಮಾನಗಳ, ಪರಿಮಿತಿಗಳನ್ನೆಲ್ಲ ಮೀರಿ ನಿಂತು ಸಾರ್ವದೇಶಿಕವೂ ಸಾರ್ವಕಾಲಿಕವೂ ಸಾರ್ವಭೌಮಿಕವೂ ಆದ ಸಾಹಿತ್ಯ ತತ್ತ್ವವನ್ನು ಸೋದಾಹರಣವಾಗಿ ಸಪರಿಕರವಾಗಿ ವಿವರಿಸುವ ಕಾರ್ಯವನ್ನು ಬೇಂದ್ರೆ ಅವರು ಪ್ರಸಿದ್ಧವಾಗಿರುವ 'ಸಾಹಿತ್ಯ ಸಂಶೋಧನ', 'ಸಾಹಿತ್ಯವಿಮರ್ಶೆ' 'ಕಾವ್ಯೋ-ದ್ಯೋಗ' ಮುಂತಾದ ಲೇಖನ ಸಂಗ್ರಹಗಳಿಂದ ಮಾತ್ರವಲ್ಲ; ಕನ್ನಡನಾಡಿನ ಮೂಲೆಮೂಲೆಗೂ ಅವರು ಹೋಗಿ ಮಾಡಿರುವ ಭಾಷಣಗಳಿಂದಲೂ ನಾಲ್ಕೈದು ದಶಕಗಳ ಕಾಲ ನಿರ್ವಹಿಸುತ್ತ ಬಂದಿದ್ದಾರೆ. ಮೈಸೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳು ಇವರ ಕೆಲವು ಭಾಷಣಗಳನ್ನು ಮುದ್ರಿಸಿದ್ದರೂ ಅಮುದ್ರಿತವಾಗಿ, ನಷ್ಟವಾದುದೆಷ್ಟೆಂಬ ಲೆಕ್ಕ ಸಿಕ್ಕುವಂತಿಲ್ಲ.

ಸಾಹಿತ್ಯಗದ್ಯದ ಪರಿಪಕ್ವ ಪ್ರಕಾರ ಹೇಗಿರಬಹುದೆನ್ನಲು ಬೇಂದ್ರೆ ಅವರ ವಿಮರ್ಶನಸೂಕ್ತಿಗಳನ್ನು ಇಂದಿಗಷ್ಟೇ ಅಲ್ಲ; ಮುಂದಿನವರಿಗೂ ಮಾದರಿಯೆನ್ನುವಂತಿವೆ. 'ರಸ', 'ಪ್ರತಿಭೆ', 'ಸೌಂದರ್ಯ', 'ಕವಿ', 'ಕಾವ್ಯ', 'ಧ್ವನಿ', 'ಅಲಂಕಾರ', 'ವಿಮರ್ಶೆ.' 'ರಸಿಕ', 'ಸಹೃದಯ', 'ಶೈಲಿ,' 'ಸರಸ್ವತಿ,' – ಇವೇ ಮೊದಲಾಗಿ ಸಾಹಿತ್ಯತತ್ತ್ವವಿವೇಚಕರು ಬಳಸುವ ಮೂಲಶಬ್ದಗಳನ್ನು ನಾವು ಬಲ್ಲವರಂತೆ ಗೃಹೀತ ಹಿಡಿದು ನಮಗೆ ತೋರಿದಂತೆ ಬಳಸುತ್ತ, ಅಜ್ಞಾನವನ್ನು ಪ್ರದರ್ಶಿಸುವುದೇ ಹೆಚ್ಚು. ಇವುಗಳನ್ನೇ ಬಹಳ ಪರಿಶ್ರಮದಿಂದ ಶಾಸ್ತ್ರೀಯವಾಗಿ ಗುರುಮುಖೇನ ಅಭ್ಯಾಸಮಾಡಿರುವ ಪಂಡಿತರು

ಶಾಸ್ತ್ರವಾಕ್ಯಾರ್ಥಕ್ಕೆ ಬೇಕಾದ ಪ್ರಾಗಲ್ಭ್ಯವನ್ನು ಗಳಿಸಿದರೂ ಇಂದು ಸಮಕಾಲೀನ ಸಾಹಿತ್ಯಕ್ಕೆ, ನೇರವಾಗಿ ಉಪಯುಕ್ತವಾದ ಸಾರಾಂಶವನ್ನು ಅನ್ವಯಿಸಿ ಹೇಳಲು ಬಾರದಂತಿರುವುದನ್ನೂ ನೋಡುತ್ತೇವೆ. ಇದು ನಮ್ಮ ಪ್ರಾಚೀನ ಲಕ್ಷಣಶಾಸ್ತ್ರದ ವಿಷಯವಾಯಿತು. ಪಾಶ್ಚಾತ್ಯ ಸಾಹಿತ್ಯಗಳನ್ನೇ ಪ್ರಧಾನವಾಗಿ ಅಭ್ಯಾಸಮಾಡಿರುವ ಪ್ರಾಧ್ಯಾಪಕ ಶಿರೋಮಣಿಗಳು ಕೂಡ ನಮ್ಮ ಪರಂಪರೆಯ ಅಜ್ಞಾನದಿಂದಾಗಿ ನಮ್ಮ ಪೂರ್ವಸಾಹಿತ್ಯವನ್ನು ಬೆಲೆಕಟ್ಟುವಾಗ ಪಾಶ್ಚಾತ್ಯ ತತ್ತ್ವಗಳನ್ನು ಮಕ್ಷೀ-ಕಾ-ಮಕ್ಷೀ ಅನ್ವಯಿಸಿ ಮೂಲಕವಿಯ ವಿವಕ್ಷೆಯನ್ನೇ ವಿಪರ್ಯಸ್ತಗೊಳಿಸುವುದನ್ನೂ ನಮ್ಮ ವಿಮರ್ಶೆಯ ಕ್ಷೇತ್ರದಲ್ಲಿ ಕಂಡಿದ್ದೇವೆ. ಬೇಂದ್ರೆ ಅವರು ವಿಮರ್ಶೆ ಬರೆದು ಮೂರು ನಾಲ್ಕು ದಶಕಗಳುರುಳಿದರೂ ಇನ್ನೂ ನಮಗೆ ನಮ್ಮದೇ ಆದ ಸ್ವಂತ ಪ್ರಜ್ಞೆ, ಸ್ವತಂತ್ರ ದೃಷ್ಟಿಗಳು ವಿಕಸಿತವಾದಂತೆ ತೋರುವುದಿಲ್ಲ. ವಿಶ್ವ ಸಾಹಿತ್ಯಗ್ರಾಸಿಯಾದ ಸಮಗ್ರ ಕಾವ್ಯತತ್ತ್ವ, ಕಾಲಮಾನದ ಪರಿಧಿಯಲ್ಲಿ ಅದು ವಿಶಿಷ್ಟ ದೇಶ್ಯ ಕೃತಿಗಳಿಗೆ ಅನ್ವಯಿಸುವ ರೀತಿ, ಪ್ರಾಚ್ಯ ಪಾಶ್ಚಾತ್ಯ ಕಾವ್ಯ ಪ್ರಕ್ರಿಯೆಗಳಲ್ಲಿರುವ ಸಾರಾಸಾರವಿವೇಕ, ಎಲ್ಲಕ್ಕೂ ಸಜೀವವಾಗುವಂತೆ ರಸ ಚೈತನ್ಯದ ಸಂಚಾರ, ಗೋಚರಿಸುವ ವಿಧಾನ-ಇವನ್ನು ಬೇಂದ್ರೆ ಅವರ ಒಂದೊಂದು ಲೇಖನವಲ್ಲ, ಒಂದೊಂದು ವಾಕ್ಯ ಒಂದೊಂದು ಪದಪ್ರಯೋಗವೆಂದರೂ ಸಲ್ಲುತ್ತದೆ —ಮನಗಾಣಿಸಿಕೊಡುವಂತೆ ಹತ್ತಾರು ಬೃಹದ್ಗ್ರಂಥಗಳೂ ಮನಗಾಣಿಸಲಾರವು. ಅಂತೆಯೇ ಅವರ ವಿವೇಚನೆ ಪುನಃ ಪುನರನುಸಂಧಾನಕ್ಕೆ ಯೋಗ್ಯವಾಗಿದೆ.

ತೋರಿಕೆಗೆ ಬೇಂದ್ರೆ ಅವರು ಕಲ್ಪನಾಕಾಶದಲ್ಲಿ ವಿಹರಿಸುವ ವಿಹಂಗಮವೆನಿಸಿದರೂ, ವಸ್ತುತಃ ಅವರು ಬಹುಶ್ರುತ ಪಂಡಿತರು; ಬಹುಮುಖ ಶಾಸ್ತ್ರದ ಸೂಕ್ಷ್ಮಾತಿಸೂಕ್ಷ್ಮ, ಗಹನಾತಿಗಹನ ವಿಚಾರಗಳನ್ನು ಕೂಡ ತುದಿಬೆರಳಿನಲ್ಲಿ ಇಟ್ಟುಕೊಂಡಿರತಕ್ಕವರು. ಅವರ ಅಪಾರ ವ್ಯುತ್ಪತ್ತಿಯಲ್ಲಿ ಹಿಂದಿನ ಜ್ಞಾನರಾಶಿಯಲ್ಲದೆ ಇಂದಿನ ವಿಜ್ಞಾನರಾಶಿಯೂ ಅಡಕವಾಗಿದೆ. ನಡೆದಾಡುವ ವಿಶ್ವಕೋಶದಂತೆ ಅವರನ್ನು ಮಾಡಿರುವ ಅದ್ಭುತ ಸ್ಮರಣಶಕ್ತಿಯೂ ಕೂಡಿದೆ. ಪುಸ್ತಕಕೀಟಗಳೂ ಸಂಬಳದ ಪ್ರಾಧ್ಯಾಪಕರಾಗಿ ಜೀವನದ ಸಂಪರ್ಕವೇ ಇಲ್ಲದೆ ಇರುವುದುಂಟು; ಆದರೆ ಒಳಗಿನ ಒತ್ತಡದಿಂದ ಪ್ರತಿಕ್ಷಣವೂ ಜ್ಞಾನಾರ್ಜನೆ, ಜ್ಞಾನಶೋಧನೆಯಲ್ಲಿರುವ ಬೇಂದ್ರೆ ಅವರು ಸಮಕಾಲೀನ ಜೀವನದಲ್ಲಿ ವಹಿಸಿರುವ ಆಸಕ್ತಿ, ಉಳಿಸಿಕೊಂಡಿರುವ ಸಂಪರ್ಕ, ಅವರನ್ನು ಋಷಿಸದೃಶರೆನ್ನಿಸಿದೆ. ನಿಶಿತಬುದ್ಧಿ; ಹರಿತವಾದ ಮೊನೆಮಾತು; ಸಾರಗರ್ಭಿತವಾದ ಪದಪ್ರಯೋಗ, ಉಚಿತವಾದ ಉದಾಹರಣಕೌಶಲ, ಕಿರಿದರಲ್ಲಿ ಪಿರಿದರ್ಥವನ್ನಡಗಿಸುವ ಕಲೆ, ಆಡುಮಾತಿನ ಕಸುವನ್ನು ಬಿಡದಂತೆ ಶಕ್ತಿಪೂರ್ಣವಾದ ಭಾಷೆಯನ್ನು ಬಳಸುವ ಓಜೋಗುಣ, ಪಾರದರ್ಶಕವಾದ ಸ್ವಯಂಪ್ರತಿಭೆಯ ಉಜ್ಜ್ವಲ ಸೂರ್ಯಪ್ರಭೆ— ಇವುಗಳಲ್ಲಿ ಒಂದೊಂದೂ ಬೇಂದ್ರೆಯವರ ವಿಮರ್ಶೆಯನ್ನು ಅಪೂರ್ವ, ಅದ್ವಿತೀಯವೆನಿಸಿಸಲು

ಸಾಕಾಗಿವೆ. ಹದವಾಗಿ ಪಾಕಗೊಂಡ ಇವುಗಳ ಸಮ್ಮಿಶ್ರಣವನ್ನು ನಾವು ಮತ್ತೆಲ್ಲಿ ಕಂಡೇವು ?

ಬೇಂದ್ರೆಯವರ ಗದ್ಯವೆಲ್ಲ ಸರಸ್ವತಿಯ ಸೂತ್ರ; ಮಾತೆಲ್ಲ ಭಾಷ್ಯ; ಕಾವ್ಯವೆಲ್ಲ ಟೀಕೆ; ಜೀವನವೆಲ್ಲ ಟಿಪ್ಪಣಿ. ಹಳೆಯದರಲ್ಲಿ, ಹೊಸದರಲ್ಲಿ, ಎಲ್ಲದರಲ್ಲೂ ಆಳದಲ್ಲಡಗಿರುವ ಗುಣಾಂಶವನ್ನು ಅವರ ಗರುಡದೃಷ್ಟಿ ಎಂದೂ ಕಾಣದೆ ಬಿಡುವುದಿಲ್ಲ. ಇಂದಿಗೆ ನಿರುಪಯುಕ್ತವಾದ ಹಿಂದಿನ ರೀತಿ ನೀತಿಗಳನ್ನು ಕೂಡ ನಿರ್ದಾಕ್ಷಿಣ್ಯವಾಗಿ ಎತ್ತಿ ಕಾಣಿಸದೆ ಇರುವುದಿಲ್ಲ. ಆದರೆ ಇಂದಿನ ವಿಮರ್ಶಕಂಮನ್ಯ ಮಹಾವಿದ್ವಾಂಸರ ಮಹಾಭ್ರಮೆಗಳನ್ನು ಕೂಡ ನೀರ್ಗುಳ್ಳೆಗಳಂತೆ ಒಡೆಯುವಾಗಲೂ ಬೇಂದ್ರೆ ಅವರು ಮಿಕ್ಕವರಂತೆ ನರಸಿಂಹಾವತಾರ ತಾಳುವದಿಲ್ಲ; ಪ್ರಹ್ಲಾದಮೂರ್ತಿಯಾಗಿಯೇ ಇರುತ್ತಾರೆ. ರನ್ನನ ದುರ್ಯೋಧನನಾಗಲಿ ನಾಗಚಂದ್ರನ ರಾವಣನಾಗಲಿ ‹‹ ಮಹಾನುಭಾವ ›› ರಾದ ದುರಂತನಾಯಕರೆನ್ನುವ ಪಾಶ್ಚಾತ್ಯತತ್ತ್ವ-ನಿಷ್ಣಾತ ವಿಮರ್ಶಕರಿಗೆ ‘ ಮಹಾನುಭಾವ ’ ಶಬ್ದದ ಅರ್ಥವನ್ನು ಶಾಲಾಮಾಸ್ತರರಂತೆ ನಗುನಗುತ್ತಾ ಕಲಿಸಿಕೊಡುತ್ತಾರೆ. ಗದಾಯುದ್ಧದ ರಸ ‘ ವೀರ ’ ವೆನ್ನುವ ಪಂಡಿತರಿಗೆ ‘ ವೀರ ’ದ ಅರ್ಥವೇನು, ‘ ರೌದ್ರ ’ದ ಅರ್ಥವೇನು ಎಂದು ಪಾಠ ಹೇಳಿಕೊಡುತ್ತಾರೆ. ಇಂತಹ ಪಾಠ ಕಲಿಸುವ ಲೇಖನ ಇನ್ನೂ ಅಗತ್ಯವಾಗಿರುವುದು ನಮ್ಮ ಪಾಂಡಿತ್ಯದ ಮಾನದಂಡವಾಗಿದೆ.

ಕೇವಲ ಅಂತರ್ದರ್ಶನದ ಸ್ಫೂರ್ತಿಯಿಂದ ಅವರು ಮಾಡಿರುವ ಸಂಶೋಧನೆಗಳು, ಅದಕ್ಕಾಗಿ ಅವರು ಕಲೆಹಾಕಿಕೊಟ್ಟಿರುವ ಅಂತರಬಾಹ್ಯಪ್ರಮಾಣಗಳು, ಮುಂದಿನ ಕನ್ನಡಸಾಹಿತ್ಯಸಂಶೋಧಕರಿಗೆ ಒಡ್ಡಿದ ಸವಾಲುಗಳಾಗಿವೆ. ನಮ್ಮ ಸಂಶೋಧಕ ವರಿಷ್ಠರು ಎಷ್ಟೆಷ್ಟು ನೂತನ ಬೃಹದ್ಯೋಜನೆಗಳನ್ನು ಕೈಗೊಂಡರೂ ಬೇಂದ್ರೆ ಅವರು ಹೇಳಿದ ಮಾತನ್ನು ಸ್ವೀಕರಿಸುವುದಕ್ಕೂ ಹೋಗದೆ, ಅದನ್ನು ನಿರಾಕರಿಸಲೂ ಆಗದೆ, ಆ ಸಮಸ್ಯೆಯೇ ಇಲ್ಲವೆನ್ನುವಂತೆ ಸಾಗುತ್ತಿರುವುದು ಸಂಶೋಧನೆಯ ಆರೋಗ್ಯದ ಕುರುಹಲ್ಲ. ‘ ಕಾವ್ಯಾಲಂಕಾರ ’ವನ್ನು ಸಂಸ್ಕೃತದಲ್ಲಿ ಬರೆದ ‘ ರುದ್ರಟ ’ನು ಬೆಳಗಾಂವಿಯ ಬಳಿಯ ಶಾಸನವೊಂದರಲ್ಲಿ ‘ ಸಾಮಾಸಿಕ ’ ಕುಲದರನೆನ್ನಲಾದ ರುದ್ರಭಟ್ಟನೇ ಆಗಿರಬಹುದೆ ? ಪೊನ್ನನ ‘ ಭುವನೈಕ ರಾಮಾಭ್ಯುದಯ ಕನ್ನರನ ಚೋಳವಿಜಯವನ್ನು ಪ್ರತಿನಿಧಿಸುವ ಲೌಕಿಕ ಕಾವ್ಯವಾಗಿರಬಹುದೆ ?, ಶ್ರೀವಿಜಯನು ಸಮಂತಭದ್ರನೇ ಇರಬಹುದೇ ? ಇವೇ ಮೊದಲಾದ ಸಮಸ್ಯೆಗಳನ್ನು ಕುರಿತು ಸಂಶೋಧಕ ಬೇಂದ್ರೆ ಅವರು ‘ ಊಹೆ ’ ಗಳನ್ನು ಮುಂದೆ ಮಾಡಿದ್ದಾರೆ. ಆದರೆ ಆ ಊಹೆಗಳಿಗೆ ಪೋಷಕವಾಗಿ ಎಷ್ಟೋ ವಿಷಯಸಾಮಗ್ರಿಯನ್ನು ಮುಂದಿಟ್ಟಿದ್ದಾರೆ. ಸಂಶೋಧನೆ ಬೆಳೆಯಬೇಕಾದರೆ

ವಿದ್ವಾಂಸರು ಈ ವಿಷಯಗಳನ್ನು ಮತ್ತಷ್ಟು ಆಳವಾಗಿ ಅಭ್ಯಾಸಮಾಡಿ ಹೊಸ ಬೆಳಕು ಬೀರುವಂತಹ ಹೊಸ ಸಾಮಗ್ರಿಯನ್ನು ಪತ್ತೆಮಾಡಬೇಕಾಗುತ್ತದೆ. ಮೇಲ್ನೋಟಕ್ಕೆ ಇವು ಕ್ಷುದ್ರ ಸಮಸ್ಯೆಗಳೆನಿಸಿದರೂ, ಅವುಗಳ ಹಿಂದೆ ನಮ್ಮ ಇಡಿಯ ಸಾಹಿತ್ಯವಾಹಿನಿಯ ದಿಗ್ದರ್ಶನಕ್ಕೆ ಬೇಕಾದ ಮೂಲಭೂತ ವಿಚಾರಗಳಿವೆ.

ಬೇಂದ್ರೆ ಅವರ ಮೊತ್ತಮೊದಲ ವಿಮರ್ಶೆಗಳಿಂದ ಇತ್ತೀಚಿನ ವಿಮರ್ಶನ ಸೂತ್ರಗಳ ವರೆಗೆ ಅನುಸ್ಯೂತವಾಗಿ ಬಂದಿರುವ ಒಂದು ಅಂಶವೆಂದರೆ ಅವರ ಆಧ್ಯಾತ್ಮಿಕ ಅನುಭವದ ವರ್ಚಸ್ಸು ಹಾಗು ಓಜಸ್ಸು. ಚತುರ್ವೇದಗಳು, ಷಡ್ದರ್ಶನಗಳು, ವೇದಾಂಗಗಳು, ಎಲ್ಲಕ್ಕೂ ಸಮನ್ವಯವನ್ನು ಕಲ್ಪಿಸಬಲ್ಲ ಮೂಲ ತತ್ತ್ವದ ಅನುಸಂಧಾನ ಅವರದು. ಅದನ್ನು ಅವರು ಸಾಂಖ್ಯಮಾರ್ಗದಿಂದ ಸಾಧಿಸುವಂತೆ ಯೋಗಮಾರ್ಗದಿಂದಲೂ ವಿವರಿಸಬಲ್ಲರು. ಚಾತುರ್ಯ, ಚಾರಿತ್ರ್ಯ, ಚಾರುತ್ವಗಳ ಮೂಲವೆಲ್ಲ ಅವರಿಗೆ ತುರೀಯವಾದ ಆನಂದದಲ್ಲಿ ಗೋಚರವಾಗುತ್ತದೆ. ಹಿಂದಿನವರು ಕಾವ್ಯತತ್ತ್ವಗಳನ್ನು ಕೇವಲ ಪರಿಸೀಮಿತವಾದ ವಲಯದಲ್ಲಿ, ಪರಂಪರಾಗತವಾದ ಶೃಂಗಾರಾದಿ ರಸಗಳ ಕ್ಷೇತ್ರದಲ್ಲಿ, ಗುಣಾಲಂಕಾರಗಳ ಚಮತ್ಕಾರದಲ್ಲಿ ಅನ್ವಯಿಸುತ್ತಿದ್ದರೆ, ಸಾಧು-ಸಂತ-ಶರಣರ ಯುಗದಲ್ಲಿ ಧರ್ಮ, ಭಕ್ತಿ, ಜ್ಞಾನ ಮುಂತಾದ ಪಾರಮಾರ್ಥಿಕ ಜಿಲೆಗಳ ಪ್ರಾತಿಭ ಆವಿಷ್ಕಾರಕ್ಕೂ ಕಾವ್ಯತತ್ತ್ವಗಳು ಅನ್ವಯಿಸಲಾರಂಭಿಸಿದುವು. ಆಧುನಿಕ ಯುಗದಲ್ಲಿ ದೀನದಲಿತಾದಿ ಸಕಲಮಾನವರ, ನಿತ್ಯ ಜೀವನದ ಸತ್ಯಪ್ರತಿಕೃತಿಗೂ ಅವು ಅನ್ವಯಿಸಬೇಕಾಗಿದೆ ಯೆಂಬುದನ್ನು ಬೇಂದ್ರೆಯವರಂತೆ ಸ್ಪಷ್ಟವಾಗಿ ಸಾರಿದವರು ಮತ್ತೊಬ್ಬರಿಲ್ಲ. ಜಾನ-ಪದ ಸಾಹಿತ್ಯದಲ್ಲಿರುವ ಸೊಬಗನ್ನು ಮೊತ್ತಮೊದಲು ಜಗತ್ತಿಗೆ ಸಾರಿದವರೇ ಅವರು. ನವ್ಯಕಾವ್ಯದಲ್ಲಿಯೂ ಕೆಲವೊಂದು ಪ್ರಯೋಗಗಳು ಅವರ ಪ್ರಶಂಸೆಗೆ ಪಾತ್ರವಾಗಿವೆ. ಆದರೆ ಕಾವ್ಯವನ್ನು ಯೋಗವೆಂದು, ಮೇಲ್ಮಟ್ಟಕ್ಕೆ ಒಯ್ಯುವ 'ಉದ್-ಯೋಗ'ವೆಂದು, ಸಹೃದಯನ ಸರಸವಿಮರ್ಶೆ ಕವಿಯ ನಿರ್ಮಿತಿಯಷ್ಟೇ ಪುರಸ್ಕಾರಾರ್ಹವಾದ 'ತಂತ್ರ'ವೆಂದು, ರಸಶುದ್ಧಿಯೇ ಕಾವ್ಯಾಮೃತದ ಸಿದ್ಧಿಯೆಂದು, ಬೇಂದ್ರೆ ಅವರ ದೃಢ ನಿಶ್ಚಯ; ಅಚಲ ಶ್ರದ್ಧೆ. ಹಿಂದೆ ಧರ್ಮಗ್ರಂಥಗಳು ಮಾಡುತ್ತಿದ್ದ ಲೋಕಸಂಗ್ರಹಕಾರ್ಯ ಇಂದು ಸಾಹಿತ್ಯಗ್ರಂಥಗಳಿಂದಲೇ ಆಗಬೇಕಾಗಿದೆಯೆಂದು ಅವರ ತೀರ್ಮಾನ. ಇದನ್ನು ಒಪ್ಪದಿದ್ದರೆ ಕಾವ್ಯಕ್ಕೆ ಭವಿತವ್ಯವೇ ಇಲ್ಲವಾದೀತು. ಒಪ್ಪಿದರೆ, ಕವಿಗಳೂ ರಸಿಕರೂ ಅಲ್ಪದಿಂದ ತೃಪ್ತರಾಗದೆ, ಭೂಮವನ್ನರಗಿಸಿಕೊಳ್ಳುವ ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕಾದೀತು! ಬೇಂದ್ರೆಅವರು ನೂರಾರು ಉದಯೋನ್ಮುಖ ಸಾಹಿತಿಗಳಿಗೆ ತೋರಿದ ಪ್ರೋತ್ಸಾಹ ಅವರ ವಿಶ್ವಾಸದ ಒಂದು ಕುರುಹು. ಹೊಸಪೀಳಿಗೆಯ ಸಾಹಿತಿಗಳು ಅವರಿಗೆ

ತೋರಿಸುವ ಭಾವನೆ ಹೇಗಿರಬೇಕೆಂದು ಬಯಸುವುದೇಕೆ? ಅವರ ಗದ್ಯರಚನೆಯನ್ನು ಮುಕ್ತಮನಸ್ಸಿನಿಂದ ಓದಿದರೆ ಸಾಕು. ಬೈಯಲು ಬಂದವರೂ ತಲೆಬಾಗುವಂತಾಗುತ್ತದೆ. ಮುಗಿತಾಯಕ್ಕೆ ಅವರದೇ ಒಂದು ಮಾತು :—

"ಸಾಗರ ಮಂಥನದ ಕಾಲದಲ್ಲಿ ಪ್ರಳಯವಿಲ್ಲದೆ ಸೃಷ್ಟಿಯುಂಟೆ? ಪ್ರಳಯಕ್ಕೆ ರುದ್ರರೂ ಬೇಕು. ಸೃಷ್ಟಿಗೆ ಬ್ರಹ್ಮರೂ ಬೇಕು."

§ § § §

೮

# ಬೇಂದ್ರೆ ಛಂದ

ಡಿ. ಎಸ್. ಕರ್ಕಿ

'ಅಂಬಿಕಾತನಯದತ್ತ' ಎಂಬುದು ತುಂಬ ಬಂಧುರವಾದ ಹೆಸರು. ಬೇಂದ್ರೆ ಎಂಬುದು ಸರಳವಾದ ಹೆಸರು. 'ಅಂಬಿಕಾತನಯದತ್ತ' ವೆಂಬುದು ಕವಿಗೆ ಪ್ರಿಯವಾಗಿರಲು ಸಾಕು. ಆದರೆ ಬೇಂದ್ರೆ ಎಂಬುದು ಲೋಕಪ್ರಿಯ ವಾದುದು. ಇಲ್ಲಿ ಅಂಬಿಕಾತನಯದತ್ತರ ಛಂದಸ್ಸನ್ನು ಬೇಂದ್ರೆ ಛಂದ ಎಂಬ ಹೆಸರಿನಲ್ಲಿ ಪರಿಶೀಲನೆಗೆ ಎತ್ತಿಕೊಳ್ಳಲಾಗಿದೆ. ನಮಗೆ ನಮ್ಮ ಬೇಂದ್ರೆ ಛಂದವೇ ಚೆಂದ.

ಆಧುನಿಕ ಭಾವಗೀತ ಪ್ರಪಂಚದಲ್ಲಿ 'ಬೇಂದ್ರೆ' ದೊಡ್ಡ ಹೆಸರು. ನಾಡಿನ ಉದ್ದ-ಅಗಲಕ್ಕೂ ಅದು ಆಡಿದೆ. ಜನಮನಕ್ಕೆ ಮುಟ್ಟಿದೆ. ಅದರ ಛಂದದ ಅಂದವೇ ಹಾಗೆ. ಬೇಂದ್ರೆ ಹಾಡುಗಳ ದನಿಯ ಎಳೆ, ಹಾಗೆ ಹೊರಟು ಹೀಗೆ ಸುಳಿಯುತ್ತದೆ. ಅವರ ಗೀತವೊಂದರಲ್ಲಿ ಬಂದ ಮಾತನ್ನೇ ಇಲ್ಲಿ ಅಳವಡಿಸಿ ಹೇಳುವದಾದರೆ ಅವರ ಛಂದದ ಅಂದ "ನೇಯ್ಗೆಯೊಳಗs ನೂಲು ಹೋದ್ಹಂಗs." ಬೇಂದ್ರೆ ಛಂದದ ಗತಿ-ಗತ್ತುಗಳಲ್ಲಿ ಒಂದು ಗಾರುಡಿ ಇದ್ದಂತೆ ಯಾರಿಗಾದರೂ ಭಾಸವಾಗುತ್ತದೆ.

> " ಬಂದನು ಬಂದನು ತಿರುಳನು ತಂದನು
> ಜನಪದ ಛಂದದಲಿ
> ಹಾಡನು ನೆಯ್ದನು ಗಾರುಡಿ ಗೆಯ್ದನು
> ಬಗೆ ಬಗೆ ಬಂಧದಲಿ "

ಎಂದು ಅವರ ಹಾಡಿನ ಬಗೆಗೆ ಮೂಡಿದ ಮಾತು ಸಮುಚಿತವಾಗಿದೆ. ಬೇಂದ್ರೆ ಅವರ ಮಾತಿನಲ್ಲಿರುವ ಎಳೆತ, ಸೆಳೆತ ಅವರ ಗೀತದ ರೀತಿಗಳಲ್ಲೂ ಸುಳಿದುಬಂದಿದೆ. ಅವರ ಗೀತ ವೈಶಿಷ್ಟ್ಯಕ್ಕೆ ಜನಪದದ (ಗೀತ)-ರೀತಿಯಲ್ಲಿ ಅವರು

ಶ್ರುತಿಗೊಳಿಸಿದ ಛಂಧೋಗತಿಗಳು ಅದೆಷ್ಟೋ ಮಟ್ಟಿಗೆ ಕಾರಣವಾಗಿವೆ ಎನ್ನ-ಬಹುದು.

ಛಂದಸ್ಸಿನ ಸಂಬಂಧದಲ್ಲಿ ಅವರು ನೀಡಿದ ಕಾಣಿಕೆ ವೈವಿಧ್ಯಮಯವಾದುದು. ಜಾನಪದ ಛಂದಸ್ಸಿನ ರಂಗದಲ್ಲಂತೂ ಅವರ ಹಾಡುಗಳು ಆಡಿದ ಪಾತ್ರ ಇನ್ನೂ ರಂಗುರಂಗಾದುದು. ಆಧುನಿಕ ಭಾವಗೀತ ಯುಗ ಆರಂಭವಾದುದು ಈ ಶತ-ಮಾನದ ೨ನೆಯ ದಶಕದ ಮಧ್ಯದ ಸುಮಾರಿನಲ್ಲಿ. ಬೇಂದ್ರೆಯವರ ಗೀತರಚನೆಯೂ ಕೂಡ ಸುಮಾರು ಅದೇ ಕಾಲದಲ್ಲಿ ಆರಂಭವಾಯಿತೆನ್ನಬಹುದು. "ಹಕ್ಕಿ ಹಾರು-ತಿದೆ ನೋಡಿದಿರಾ" ಎಂಬ ಒಂದೆರಡು ಸಣ್ಣ ಪುಟ್ಟ ಮೊದಲ ಸಂಕಲನಗಳನ್ನು ಇಲ್ಲಿ ನೆನೆಯಬಹುದು. ಅವರ ಗಣ್ಯವಾದ ಮೊದಲ ಗೀತಸಂಗ್ರಹವೆಂದರೆ ಗರಿ. ಗರಿಯ ಮೊದಲನೆಯ ಆವೃತ್ತಿ ಪ್ರಕಟವಾದುದು ೧೯೩೨ ರಲ್ಲಿ. ಅದರಲ್ಲಿ ಸಹೃದಯರನ್ನು ಉದ್ದೇಶಿಸಿ ಅವರು ಮೊದಲುಮಾತನ್ನು ಬರೆಯುತ್ತ 'ಈ ಕಾವ್ಯಮಾಲೆಯೊಳಗಿನ ಕವನಗಳು ೧೯೧೮ ರಿಂದ ೧೯೩೨ ರ ವರೆಗೆ, ಬರೆದವುಗಳು. ಇವುಗಳಲ್ಲಿ ಎಷ್ಟೋ ಈ ಮೊದಲೇ ಮಾಸಪತ್ರಿಕೆಗಳಲ್ಲಿ ಬೆಳಕು ಕಂಡಿರುವವು' ಎಂದು ಹೇಳಿದುದನ್ನು ಇಲ್ಲಿ ಮನಗಾಣಿಸಬಹುದು.

ಮೊದಲಿನಿಂದಲೂ ಅವರು ಮಾತ್ರಾ ಛಂದೋಬಂಧಗಳ ಜೊತೆ ಜೊತೆಗೆ ಜಾನಪದ ಗತಿ-ಗತ್ತುಗಳನ್ನು ತಮ್ಮ ಹಾಡುಗಳಲ್ಲಿ ಸೊಗಸಾಗಿ, ಸುಸೂತ್ರವಾಗಿ ಪ್ರಯೋಗಿಸುತ್ತ ಬಂದಿದ್ದಾರೆ— ಎಂಬುದಕ್ಕೆ 'ಗರಿ'ಯಲ್ಲಿ ಸೇರಿದ ಈ ಬಗೆಯ ಕೆಲವು ಹಾಡುಗಳು ಸಾಕ್ಷಿಯಾಗಿವೆ. 'ನಗೀ-ನವಿಲು' 'ರಾಗರತಿ' 'ಚೆಲುವ' 'ಪಾತರಗಿತ್ತಿಪಕ್ಕ', 'ನನ್ನ ಕಿನ್ನರಿ', 'ಬಿಸಿಲುಗುದುರೆ', 'ನನ್ನ ಕೈಯ ಹಿಡಿದಾಕೆ', 'ಚಳಿಯಾಕೆ', 'ಕುಣಿಯೋಣು ಬಾರ'— ಇವು ಜಾನಪದ ವೈವಿಧ್ಯಕ್ಕೆ ಒಳ್ಳೆಯ ಉದಾಹರಣೆಗಳು. ಇದು ಕೇವಲ 'ಗರಿ'ಯ ಮಾತಾಯಿತು. 'ಗರಿ'ಯ ತರುವಾಯ ಬಂದ ಅವರ ಸಂಕಲನಗಳಲ್ಲಿ ಕೂಡ ಜಾನಪದಛಂದ ಮುಂದುವರಿದು ಬಂದಿದೆ.

ಇಷ್ಟೊಂದು ವಿಧವಾಗಿ ಹಾಗೂ ಇಷ್ಟೊಂದು ಪ್ರಮಾಣದಲ್ಲಿ ಜಾನಪದಲಯಗಳನ್ನು ಬಳಸಿದ ಆಧುನಿಕ ಕವಿ ಇನ್ನೊಬ್ಬರಿಲ್ಲವೆಂದೇ ಹೇಳಬಹುದು. 'ಜಾನಪದ ಛಂದವೆಂದರೆ ಬೇಂದ್ರೆ; ಬೇಂದ್ರೆ ಎಂದರೆ ಜಾನಪದಛಂದ' ಎನ್ನುವಷ್ಟರ ಮಟ್ಟಿಗೆ ಈ ನಂಟು ಬೆಳೆದು ಬಂದಿದೆ. ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವ-ರಾರು ಕಾಮಾಕ್ಷಿಯೇ ?" ಎಂದು ಅವರು ತಮ್ಮ 'ಸಖೀಗೀತ'ದಲ್ಲಿ ಹೇಳಿದ ಮಾತು ಬೇಂದ್ರೆಯವರಿಗೂ ಜಾನಪದಛಂದಕ್ಕೂ ಇರುವ ನಂಟಿಗೆ ಕೂಡ ಅನ್ವಯಿಸುತ್ತದೆ. 'ಗರಿ'ಯನ್ನಷ್ಟೇ ಗಮನಕ್ಕೆ ತೆಗೆದುಕೊಂಡರೂ,

"ಮೂಡಲ ಮನೆಯಾ ಮುತ್ತಿನ ನೀರಿನ ಎರಕ್ವವ ಹೊಯ್ದಾ"

"ಮುಗಿಲ ಮಾರಿಗೆ ರಾಗರತಿಯ ನಂಜ ಏರಿತ್ತ
ಆಗ ಸಂಜೆಯಾಗಿತ್ತ"

"ಹಳ್ಳದ ದಂಡ್ಯಾಗ ಮೊದಲೀಗಿ ಕಂಡಾಗ
ಏನೊಂದು ನಗಿಯಿತ್ತ"

"ಕುಣಿಯೋಣು ಬಾರs ಕುಣಿಯೋಣು ಬಾ"

"ಪಾತರಗಿತ್ತೀ ಪಕ್ಕಾ ನೋಡಿದೇನs ಅಕ್ಕಾ"

ಇವೇ ಮೊದಲಾದ ಹಾಡುಗಳು ಗರಿಗರಿಯಾಗಿ, ಈ ನಾಡಿನ ನಾಡಿಗಳಲ್ಲಿ ಹೊಸ ರಾಗ- ರುಚಿಗಳನ್ನು ನೀಡಿದವು. 'ಗರಿ'ಯ ಮೊದಲನೆಯ ಕವಿತೆಯಾದ 'ಬೆಳಗಿ'ನಲ್ಲಿಯೇ,

ಮೂಡಲ ಮನೆಯಾ ಮುತ್ತಿನ ನೀರಿನ
ಎರಕ್ವವ ಹೊಯ್ದಾ
ನುಣ್ಣನ್ನೆರಕ್ವವ ಹೊಯ್ದಾ

ಎಂಬ ಮೊದಲ ಚರಣಗಳಲ್ಲಿ ಕೌತುಕಭಾವವನ್ನು ಅರಳಿಸುವ ಭಾವಕ್ಕೆ ಸಹಜ ವಾಗಿ ಹೊಂದಿಕೊಂಡ ರಾಗದ ಸುಳಿಯನ್ನು ಕಾಣಬಹುದು. ಪದ್ಯಪದ್ಯದಲ್ಲಿ ಹೃದ್ಯವಾದ ಪಲ್ಲವಿ ಚೆಲ್ಲವರಿದು ಕಿವಿಗೆ ಸವಿಸೂಸುವ ಗುಣವನ್ನು ಇದರಲ್ಲಿ ಗುರು- ತಿಸಬಹುದು. ಇದೇ ಸಂಕಲನದ—

'ನಾರೀ ನಿನ್ನ ಮಾರಿಮ್ಯಾಗ
ನಗೀನವಿಲು ಆಡತಿತ್ತ
ಆಡತಿತ್ತ ಓಡತಿತ್ತ
ಮುಗಿಲ ಕಡೆಗೆ ನೋಡತಿತ್ತ'

ಎಂಬ ಹಾಡು ಇನ್ನೊಂದು ಶ್ರುತಿಯಲ್ಲಿ ನುಡಿದಿದೆ. ಇದು ನಾಲ್ಕು ನಾಲ್ಕು ಅಂಶ ಗಣಗಳ ನಾಲ್ಕು ನಾಲ್ಕು ಚರಣಗಳ ಸರಳ ಲಯದಲ್ಲಿ ಸುರುಳಿಯಂತೆ ಬಿತ್ತುತ್ತ ಬರುವ ಹಾಡು. ಉತ್ಸಾಹಲಯವು ಇಲ್ಲಿ ಜಾನಪದದ ಶ್ರುತಿಯಾಗಿ ನುಡಿದಿದೆ.

'ಮುಗಿಲ ಮಾರಿಗೆ ರಾಗರತಿಯ ನಂಜ ಏರಿತ್ತs
—ಆಗ ಸಂಜೆಯಾಗಿತ್ತ'

ಎಂದು ಆರಂಭವಾಗುವ ಅವರ 'ರಾಗರತಿ' ಎಂಬ ಕವನ ಮಂದಾನಿಲ ಪ್ರಭೇದದ

ಛಂದೋಲಯವನ್ನು ಒಳಗೊಂಡಿದೆ. ಈ ಗೀತ ತುಂಬ ಗೇಯವಾಗಿದೆ. ಇದರ ಪ್ರಾಸ ವಿನ್ಯಾಸದಿಂದಾಗಿ ಇದಕ್ಕೆ ಹೆಚ್ಚಿನ ಸ್ವಾರಸ್ಯ ಉಂಟಾಗಿದೆ. ಈ ಗೀತದ ಲಯದಲ್ಲಿ ಉಪಮೆಗಳನ್ನು, ರೂಪಕಗಳನ್ನು ಚೆನ್ನಾಗಿ ನೆಯ್ದಿದ್ದಾರೆ. ನಿಜವಾಗಿ ಇದೊಂದು ಮಾದರಿಯ ಜಾನಪದ ಗೀತ.

'ಯಾರವ್ವಾ ಇವ ಚೆಲುವಾ
ತನ್ನಷ್ಟಕ್ಕs ತಾನs ನೋಡಿ ನಲಿವಾ !'

ಕನ್ನಡದ ಜೀವ ನಾಡಿಯ ಚೆಲುವನ್ನೇ ಎತ್ತಿ ತೋರುವಂತಿದೆ. ಪಲ್ಲವಿಯಂತೂ ಇಲ್ಲಿ ಸಲ್ಲೀಲೆ ಗೈದಿದೆ.

'ಪಾತರಗಿತ್ತೀ ಪಕ್ಕಾ—
ನೋಡೀದೇನs ಅಕ್ಕಾ'

ಎಂಬ ಅಂಶಗಣದ ಕಿರಿ ಚರಣಗಳಲ್ಲಿ ಪಾತರಗಿತ್ತಿಯ ಚಲನ–ವಲನಗಳನ್ನೆಲ್ಲ, ಅಂದ ಚೆಂದಗಳನ್ನೆಲ್ಲ, ಆಟಪಾಠಗಳನ್ನೆಲ್ಲ, ಚೆಲುವಾಗಿ, ಗೆಲುವಾಗಿ ಸುಳುಹುಗಾಣಿಸಿದೆ. ಯಾರೋ ಎಳೆಯುತ್ತಿರುವ ಒಂದು ಸೂತ್ರಕ್ಕೆ ಪಾತರಗಿತ್ತಿಗಳು ಪಾತ್ರ ಆಡುತ್ತಿವೆ-ಯೇನೋ ಎಂಬ ಒಂದು ಭಾವವನ್ನು ಉಂಟು ಮಾಡುತ್ತದೆ. ಈ ಹಾಡಿನ ಗತಿ ಹಾಗೂ ಶ್ರುತಿ ಮಕ್ಕಳನ್ನು ಮೊದಲು ಮಾಡಿಕೊಂಡು ಮುತ್ತಜ್ಜನವರೆಗೆ ಎಲ್ಲರ ಮನವನ್ನು ಸೂರೆಗೊಳ್ಳುವ ನುಡಿಯ ಚದುರು, ಲಯದ ಬೆಡಗು, ಬಗೆಯ ಒಲವು ಮೇಳಗೂಡಿ ಆಡಿವೆ ಈ ಕವಿತೆಯಲ್ಲಿ.

'ಬಿಸಿಲುಗುದುರೆ' ಹಾಗೂ 'ನನ್ನ ಕೈಯ ಹಿಡಿದಾಕೆ' ಎಂಬ ಕವಿತೆಗಳಲ್ಲಿ ಅವರು ಬಳಸಿದ ಮಟ್ಟು ನಿಯತ ಗತಿಯ ನಾಲ್ಕಾಲ್ಕು ಚರಣಗಳ ಮಟ್ಟು. ಇದರ ರಾಗ, ಪರಾಗ. ಇದು ಬೇಂದ್ರೆಯವರಿಗೆ ತುಂಬ ಪ್ರಿಯವಾದ ರಾಗ ಲಹರಿ. ಅವರ ಕವಿತೆಗಳಲ್ಲಿ ಪ್ರೀತಿ ಹೆಚ್ಚಾಗಿ ಅಭಿವ್ಯಕ್ತಿ ಪಡೆದುದು ಈ ವಿಶಿಷ್ಟವಾದ ಮಟ್ಟದಲ್ಲಿಯೇ ಎಂದು ಹೇಳಬಹುದು. ಒಂದು ಪದ್ಯವನ್ನು ಅವಲೋಕಿಸಿ ಇದರ ನೆಲೆ–ಕಲೆಗಳನ್ನು ಅರಿಯಬಹುದು.

ಕಣಕಣ್ಣ ನೆನಸೇನ ಮನಸಿಲೆ ಬಣಿಸೇನ
ಕಂಡೀತೆಂತೆಣಿಸೇನ
ಬಿಸಿಲುಗುದುರೀ ಏರಿ ನಿನ ನಗೆಯ ಸವ್ವಾರಿ
ಹೊರಟಿತ್ತು ಕನಸೇನ? (ಬಿಸಿಲುಗುದುರೆ)

ಇದು ಕಿರಿಸೀಸಪನ್ನು ಹೋಲುವ ಅಂಶಗಣದ ಹುಟ್ಟು. 'ನನ್ನ ಕೈಯ ಹಿಡಿದಾಕೆ' ಎಂಬ ಪದ್ಯವೂ ಇದೇ ಲಯದ ಲಹರಿಯಾಗಿದೆ. ಈ ಗೀತದಲ್ಲಿ ಪ್ರೀತಿ, ಜೀವನ ದರ್ಶನ ತತ್ತ್ವದತ್ತ ಒಲಿದಿದೆ ಎಂದು ಹೇಳಿದರೆ ಸಾಕು.

ಇನ್ನು 'ಕುಣಿಯೋಣು ಬಾರ' ಗೀತವಂತೂ ಸುಪ್ರಖ್ಯಾತವಾದ ಗೀತ. ಅದರಲ್ಲಿ ಗೀತ ಛಂದೋಲಹರಿ :

ಹೊಂಗ್ಯಾದಿಗಿ ಹೊಡಿ
ಮಿಡಿನಾಗರ ಹೆಡಿ
ಹಾಂಗೊಮ್ಮೆ ತೂಗಾಡಿ ಕುಣಿಯೋಣು ಬಾ....

ಎಂದು ಲೀಲೆಗೈದಿದೆ. ಈ ಲಯದ ಲಾಸ್ಯಕ್ಕೆ ತಲೆದೂಗದಿರುವುದು ಹೇಗೆ ? ಇಲ್ಲಿ ಹಾಗೂ 'ನನ್ನ ಕಿನ್ನರಿ' ಎಂಬ ಹಾಡಿನಲ್ಲಿ ಕವಿ, ಘನವಾದ ಅನುಭವವನ್ನು ಜನರ ದಿನಬಳಕೆಯ ದನಿಯಲ್ಲಿ ಎಳೆದು ಸುಳಹುಗಾಣಿಸಿದ್ದಾರೆ.

ಬೇಂದ್ರೆಯವರು ಎಳೆವಯದಲ್ಲಿದ್ದಾಗ ನಮ್ಮ ನಾಡಿನ ವಾತಾವರಣದಲ್ಲಿ ತೇಲುತ್ತಿದ್ದ ಹಾಡುಗಳು ಅವರ ಮನದ ಮೇಲೆ ವಿಶೇಷವಾದ ಪರಿಣಾಮವನ್ನು ಉಂಟು ಮಾಡಿರಲು ಸಾಕು. ತರುಣ ಬೇಂದ್ರೆ ಆ ಹಾಡುಗಳ ಗತಿ – ಗತ್ತುಗಳಿಗೆ ಕಿವಿ ತೆರೆದು, ತಮ್ಮ ನರ–ನಾಡಿಗಳಲ್ಲಿ ಬರಮಾಡಿಕೊಂಡಿರಬೇಕು. ಮೊದಲೇ ಕವಿ, ಜೊತೆಗೆ ನಾದದ ಬಗೆಗೆ ನಾದ ಅವರಿಗೆ. ಜಾನಪದದ ಸೆಳೆತ ಕೂಡಿದರೆ ಕೇಳಬೇಕೆ ? ಬೇಂದ್ರೆ ಚಿತ್ತದಲ್ಲಿ ಹಳೆಯ ಗತ್ತುಗಳೊಡನೆ ಹೊಸ ಛಂದೋಗತಿಗಳು ಹೊಮ್ಮಿಬಂದುವು. ಸರಿ, ಕನ್ನಡನಾಡಿನಲ್ಲಿ ಬೇಂದ್ರೆ ಗೀತಾವತಾರವಾಯಿತು. ಹೊಸ ರಾಗ–ರುಚಿಗಳನ್ನು ಸೂಸಿತು.

ನಾದಲೀಲೆ, ಮೂರ್ತಿ ಮತ್ತು ಕಾಮಕಸ್ತೂರಿ, ಗಂಗಾವತರಣ, ಹಾಡು-ಪಾಡು ಹೀಗೆ ಒಂದರಹಿಂದೊಂದು ಬೇಂದ್ರೆ ಕವನಸಂಕಲನಗಳು ಬೆಳಕು ಕಂಡು ತಮ್ಮ ತಮ್ಮ ಗತಿ–ಗಮಕಗಳಿಂದ ಜನ–ಮನವನ್ನು ಕುಣಿಸಿದವು, ತಣಿಸಿದವು. 'ಮಾಯಾ ಕಿನ್ನರಿ' ಎಂಬ ಸಖೀಗೀತದಲ್ಲಿಯ ಒಂದು ಗೀತ, ಬೇಂದ್ರೆ ಪದಗಳ ಹದ ಹವಣಗಳ ಪರಿಣಾಮವನ್ನೇ ಛಾಯೆಗಾಣಿಸುವಂತಿದೆ.

'ಜಮ್ ಜುಮು ರುಮುಜುಮು ಗುಂಗುಣು ದುಮುದುಮು
ನಾದದ ನದಿಯೊಂದು ನಡೆಧಾಂಗ'

ಆಯ್ತು ಅದರ ಪರಿಣಾಮ.

'ಹೂತಹುಣಿಸಿ' ಎಂದು ಹೂತ ಹುಣಸಿಯ ಮರದ ಬಗೆಗೆ ಬೇಂದ್ರೆ ಆಡಿದ ಸ್ವರ, ಸ್ವಚ್ಛಂದಸುಂದರ ! ಈ ಹಾಡಿನಲ್ಲಿ ಬೇಂದ್ರೆ, ಕಲ್ಪನೆಯ ಪೇರಿ–

ಯನ್ನೇ ಹೊಡೆದಿದ್ದಾರೆ. ಹುಣಿಸೀ ಮರದ ಹೂವಿನ ರಾಗ-ರಸ-ರುಚಿ ಎಲ್ಲ ಸೂಸಿ ಬಂದಿವೆ ಈ ಗೀತದಲ್ಲಿ. ಜಾನಪದ ಛಂದದಲ್ಲಿ ಸಾಮಾನ್ಯವಾದುದರಲ್ಲಿ ಅಸಾಮಾನ್ಯ ವಾದ ಅನುಭವವನ್ನು ಪಡಿಮೂಡಿಸಿವೆ.

'ಸಖೀಗೀತ' ಒಂದು ದೃಷ್ಟಿಯಿಂದ **'ಕಥನಗೀತ'**ದಂತಿದೆ. ಅದು ಆತ್ಮ-ಕಥನ ಗೀತವಾಗಿದೆ. ಅದರ ವಸ್ತು ಮತ್ತು ರೀತಿ ಒಂದು ದೃಷ್ಟಿಯಿಂದ ಅಪೂರ್ವ ವಾದುದು. ಈ ಕಥನ ಗೀತಕ್ಕಾಗಿ ಕವಿ ಪಿರಿಯಕ್ಕರ ಛಂದಸ್ಸನ್ನು ಪ್ರಜ್ಞಾಪೂರ್ವಕ ವಾಗಿ ಪ್ರಯೋಗಿಸಿದ್ದಾರೆ. ಅದರ ಪರಿಣಾಮ ಹೃದಯಂಗಮವಾಗಿದೆ. 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ?' ಎಂಬ ಪಲ್ಲವಿ ಈ ಗೀತದ ಸುತ್ತುಸುತ್ತಿನಲ್ಲಿ ಸುಳಿದು ಬಂದು ಗೀತದ ರಮ್ಯತೆಯನ್ನೂ ಹೆಚ್ಚಿಸಿದೆ. ಬೇಂದ್ರೆಯವರು ಹೇಳಿದಂತೆ 'ಸಖೀಗೀತ'ದ ಅಕ್ಕರ ಛಂದವು ಸಾಂಗತ್ಯ ಸಂಸ್ಕಾರ | ಹೊಂದಿಲ್ಲಿ ಬಂದಿದೆ ಹೊಸ ಹೊಸದು ಅಕ್ಕರೆಯದಾಯಿತು ಅಕ್ಕರಿಗರಿಗೆಲ್ಲ | ಅಕ್ಕು ಮಿಕ್ಕೆನುವಂತೆ ಕೊನೆವರೆಗು.

ಬೇಂದ್ರೆ, ಜಾನಪದದಲ್ಲಿ ತಮ್ಮದೇ ಆದ ಛಂದದ ಮೋಡಿಯನ್ನು ಮಾಡಿದಂತೆ ನಾಲ್ಕಾರು ವಿಶಿಷ್ಟವಾದ ಮಾತ್ರಾಲಯವಿನ್ಯಾಸಗಳನ್ನು ನಿರ್ಮಿಸಿ ಲೋಕಪ್ರಿಯ-ಗೊಳಿಸಿದ್ದಾರೆ. ಅವು ಬೇಂದ್ರೆ ಗತಿಗತ್ತುಗಳೆಂದು ಹೆಸರಾಂತಿವೆ.

ಕನ್ನಡ ಮೇಘದೂತಕ್ಕಾಗಿ ಬೇಂದ್ರೆ ಬಳಸಿದ ಛಂದೋಲಹರಿ ಕನ್ನಡದಲ್ಲಿ ಅವರ ಹೆಸರನ್ನೇ ತಳೆದು ನಿಂತಿದೆ. ಅದು ಬೇಂದ್ರೆ ಛಂದದಲ್ಲಿ ಛಂದವೆನ್ನಬಹುದು. ಅಷ್ಟೊಂದು ಸಂಬಂಧ ಬೇಂದ್ರೆಯವರಿಗೂ, ಛಂದೋಲಹರಿಗೂ. ಆ ಲಯ, ಕಿವಿಗೆ ಬಿದ್ದಾಗ ಕನ್ನಡ ಮೇಘದೂತದ ಸ್ಮರಣೆ ಮನಕ್ಕೆ ತಾನಾಗಿಯೇ ತೂರಿಬರುತ್ತದೆ. ಮಂದಾನಿಲಲಯದ (೩|೫, ೩|೫, ೩|೫) ಪ್ರಭೇದ ಈ ಛಂದದಲ್ಲಿ ಒಂದು ಹೊಸ ಗಮಕದ ಗತ್ತನ್ನು ಎತ್ತಿ ತೋರುವಂತಿದೆ. ನಾಲ್ಕು ದೀರ್ಘ ಚರಣಗಳ ನಾದ-ನಿನಾದದ ಈ ಮಟ್ಟು ಪದ್ಯವಾಗಿ ಪ್ರವಹಿಸುತ್ತಿದೆ. ಅದಕ್ಕೆ ಒಂದಿಷ್ಟು ಲಾವಣಿಯ ಲಾವಣ್ಯವೂ ಉಂಟು. ಕಥನ ಗೀತಕ್ಕಂತೂ ತುಂಬ ಸರಿ ಹೋಗುವ ಛಂದೋ-ಗತಿಯಿದು. ಬೇಂದ್ರೆಯವರು ತಮ್ಮ ಗಾರುಡಿಯನ್ನೇ ಪ್ರಯೋಗಿಸುವಂತೆ ಇದನ್ನು ಅಲ್ಲಲ್ಲಿ ಬಳಸಿದ್ದಾರೆ. ಅವರ ಕನ್ನಡ ಮೇಘದೂತದಲ್ಲಂತೂ ಅದು ರಸಸಿದ್ಧಿಯನ್ನು ಕಂಡಿದೆ. ಆದುದರಿಂದಲೇ ಅದು 'ಬೇಂದ್ರೆ-ಧಾಟಿ' ಎಂದು ಹೆಸರು ಪಡೆದುದುಂಟು. ಈ ಕೆಳಗಣ ಪದ್ಯವನ್ನು ಸರಾಗವಾಗಿ ರಾಗಿಸಿ ಗುಂಗು ಹಿಡಿಸುವ ಅದರ ನಾದದ ನಡೆಯನ್ನೂ ಅರಿಯಬಹುದು.

"ಮಾತು ಜ್ಯೋತಿ, ಆ ಹರಳು-ಧೂಮ, ರಸ ಸಲಿಲ, ಭಾವ ಗಾಳಿ
ಕವಿಯೊಳಾಗಿ ಕಟ್ಟಿತ್ತು ಕಾವ್ಯ ನವಮೇಘರೂಪತಾಳಿ

ಸ್ಥಾಯಿ ಅಲ್ಲಿ ಸಂಚಾರದಲ್ಲಿ ರಸಪಾಕವಾಗಿ ಬಂತು
ಮೆರೆವ ಹಾಗೆ ಆ ಸುಟ್ಟ ಕಾಮ ಪ್ರದ್ಯುಮ್ನನಾಗಿ ನಿಂತು"

ಕಾಳಿದಾಸನ ಮೂಲ ಕಾವ್ಯ, ಸಂಸ್ಕೃತಕ್ಕೆ ಸರಿ ಹೋಗುವ ಮಂದಾಕ್ರಾಂತ ಮಟ್ಟ-ದಲ್ಲಿದ್ದರೆ ಮೇಘದೂತದ ಈ ಕನ್ನಡ ಅನುವಾದ ಕನ್ನಡಕ್ಕೆ ಹೊಂದಿಕೆಯಾಗುವ ಮಂದಾನಿಲ ಛಂದದ ಸೊಗಸಾದ ಪ್ರಭೇದವಾಗಿ ಇಲ್ಲಿ ಸುಳಿದು ಬಂದಿದೆ. ಮೇಘ-ದೂತದಲ್ಲಿ ಪದ್ಯದಿಂದ ಪದ್ಯಕ್ಕೆ ಈ ಹೃದ್ಯವಾದ ನಾದ ಪ್ರವಹಿಸಿದೆ. ಕವಿಕುಲಗುರು ಕಾಳಿದಾಸನ ಮೂಲ ಪ್ರತಿಭೆಯನ್ನು ಬೆಳಗಿ ತೋರಲು ಈ ಗತಿ ತುಂಬ ಅನುಕೂಲ ವಾಗಿ ಪರಿಣಮಿಸಿದೆ.

ಲಹರಿ-ಲಹರಿಯಾಗಿ ಬಳಸಿದ ನಾಲ್ಕಾರು ಲಾವಣಿಯ ಮಟ್ಟುಗಳು ಲಾವ-ಣ್ಯದ ಲಹರಿಯಾಗಿಯೇ ತೆರೆಗೊಂಡದ್ದುಂಟು. ಅವುಗಳಲ್ಲಿ ಒಂದನ್ನು ಪರಿಶೀಲಿಸ-ಬಹುದು. ಹುಮ್ಮಸದೊಡನೆ ಸರಸವನ್ನೆತ್ತಿ ತೋರುವ ಲಯವಿದು ಕೆಳಗಣದು:

ಹುಡುಕ್ಯಾನ ಹಿಗ್ಗಿನಾ ದಾರಿ,
ಹುಡುಗ ಸುಖದುಃಖ ಸಾಗರಾ ಸೇರಿ
ಮದವೀಯ ಹಡಗವನ್ನೇರಿ
ಹುಡುಕ್ಯಾನ ಹಿಗ್ಗಿನಾ ದಾರಿ

ಈ ಲಾವಣಿಯ ಚಾಕವನ್ನು ಕೆಳಗಣ ಪದ್ಯದಿಂದ ಅರಿಯಬಹುದು.

"ಛೀಮಾರಿ ಪುರಾಣದ ಕಥೀ ಏನು ಸತಿಪತಿಗೆ ನುಗ್ಗಿದಾಗತಿ
'ಸುಟ್ಟು ಬೂದಿ ಕಾಮು' ಅಂತ ಕೇಳಿ
ಅಳತ ಅದ ಗಾಳಿ
ಸುಗ್ಗಿಯೆದೆ ಸೀಳಿ
ನಾ ನಿನಗ ಕಾಮನ ಮೂರ್ತಿ ನೀನು ನನ ಪೂರ್ತಿ ರತಿಯೇ ಸತಿ
ಛೀಮಾರಿ ಪುರಾಣದ ಕಥಿ"

—ಸಂಸಾರ-ಕಾಮಕಸ್ತೂರಿ

ನವುರಾದ ಭಾವಗಳನ್ನು ನಯವಾಗಿ ದನಿಯೆಳೆದು ಸುಳುಹುಗಾಣಿಸುವ ಜಾನ-ಪದ ಮಟ್ಟುಗಳಲ್ಲಿ ಬೇಂದ್ರೆಯವರಿಗೆ ಬಲು ಪ್ರೀತಿ. ಇದರ ರಾಗ-ಲಹರಿಗೆ 'ಬಡವರ ಮಗಳು' ಎಂಬ ಹಾಡು ಒಂದು ಒಳ್ಳೆಯ ಉದಾಹರಣೆ. ನಾಲ್ಕು ಕಿರಿ ಕಿರಿ ಚರಣಗಳ ಚೆಲುವಾದ ದಳಗಳನ್ನು ಅರಳಿರುವ ಹೂವಿನಂತೆ ಜಾನಪದ ಲಯದ ಅಂದ. ಅದರ ರೂಪ ಹೀಗೆ—

ಬಿಸಿಲು ಹಬ್ಬಿ ಗಾಳಿಯು ಹರಡಿ
ಮುಗುಳು ನಗೀ ಅರಳಿಸಲೊಲ್ಲಿ
ಎವಿಯಿಕ್ಕದೆ ದಿಟ್ಟಿಸಿದರೂ
ಉಗುರದಿಟ್ಟಿ ಇಟ್ಟ ನಡೆದಿ (ಕಾಮುಕಸ್ತೂರಿ)

ದನಿಯೆಳೆದು ಅದರ ಬೆಡಗು-ಬಿನ್ನಾಣಗಳನ್ನು ಅರಿಯಬಹುದು. ಬೆಡಗು ಬಿನ್ನಾಣಗಳೇ ವಸ್ತುವಾಗಿರುವ ಈ ಹಾಡಿಗೆ ಈ ಲಯ ತುಂಬ ಹೊಂದಿಕೆಯಾಗಿದೆ ಎಂಬುದನ್ನು ಅದರ ಭಾವವನ್ನು ಜೀವಕ್ಕೆ ಬರಮಾಡಿಕೊಂಡು ಅರಿಯಬಹುದು.

ಸುರುಚಿರವಾದ ತ್ರಿಮಾತ್ರಕಗಳನ್ನು ಉತ್ಸಾಹಕ್ಕೆ ಹತ್ತಿರವಾಗುವಂತೆ ಸುಲಲಿತವಾಗಿ ಅಂತ್ಯಪ್ರಾಸ ವಿನ್ಯಾಸದ ಮೂರು ಚರಣಗಳಲ್ಲಿ ನೆಯ್ದ ಛಂದೋ-ರಚನೆ, ಬೇಂದ್ರೆಯವರು ಲೋಕಪ್ರಿಯಗೊಳಿಸಿದ ಇನ್ನೊಂದು ಪದ್ಯ ವಿಧಾನ. 'ಭಾವಗೀತ' ಎಂಬ ಅವರ ಕವಿತೆಯಲ್ಲಿ ಈ ಲಹರಿ ಕಂಪಿನ ಬಳ್ಳಿಯಾಗಿ ಮೈದೋರಿದೆ. 'ಭಾವಗೀತ'ದ ನೆಲೆಕಲೆಯನ್ನು ರಹಸ್ಯಸ್ವಾರಸ್ಯಗಳನ್ನು ಚೆನ್ನಾಗಿ ಶ್ರುತಿಗೊಳಿಸಿದ ಈ ಗೀತದ ಮೊದಲನೆಯ ಪದ್ಯವನ್ನು ಉದ್ಧರಿಸಿದರೆ ಅದರ ಸ್ವರೂಪ ಹೊಳೆದೀತು.

"ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ
ಮಸೆದ ಗಾಳಿ ಪಕ್ಕ ಪಡೆಯುತ್ತಿತ್ತು ಸಹಜ ಪ್ರಾಸಾ
ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸಾ"

ಇದೇ ಗೀತದ ಇನ್ನೊಂದು ಪದ್ಯ, ಭಾವಗೀತದ ಸೂತ್ರದೊಡನೆ ಛಂದೋರಚನೆಯನ್ನು ಸೂತ್ರಿಸಿದಂತಿದೆ ಹೀಗೆ :

ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ
ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ
ಉಸಿರಿನಿಂದೆ ಊದುಕುವಂತೆ ತನ್ನ ಬಾಳ ಮೇಲಾ

ಅಂಬಿಕಾತನಯದತ್ತರು ವೈದಿಕ ಛಂದಸ್ಸನ್ನು ಭಾವೋದ್ದೀಪಕವಾಗುವಂತೆ ಬಳಸಿದ್ದಾರೆ. 'ಸೂರ್ಯಪಾನ' ಎಂಬ ಅವರ ಸಂಕಲನದಲ್ಲಿ ಸಮಾವೇಶವಾದ 'ಸಪ್ತಕಲಾ' ಕವಿತೆ ಇದಕ್ಕೆ ಒಂದು ಒಳ್ಳೆಯ ಉದಾಹರಣೆ.

ಸ್ಪಂದಽ ಬಂಧಾ ಸ್ವಚ್ಛಂದಾ
ಸ್ವೈರಾಽ, ನಿರ್ವೈರಾಽ ಸಹಜಽ ಆಂದಾಽ
ಆಡಲೂ ಬರದಾಽ ಸುಮ್ಮನಿರದಾಽ

ಕಾದುಃ ಕಾದುಃ ನಾದಾಃ
ಭೇದಾಃ ಅಭೇದಾಃ ಮೀರಿ
ಭಾವಃ ನೋವಃ ತಾಳದೇ
ತನ್ನಃತಾ ನುಂಗೀ
ಎದೆಯೊಳಗಿಂಗೀ
ಸ್ವಾತಂತ್ರ್ಯಃ ಪಡೆಯುವದಣ್ಣಃ

ಹೀಗೆ ಉದ್ದಕ್ಕೆ ಸಾಗುವ ಗೀತ ವೈದಿಕಛಂದಸ್ಸಿನ ಜೀಕು ಲಯದ ಸೊಗಸನ್ನು ಒಳ ಗೊಂಡಿದೆ. ಕವಿಯ ವಿವಿಧ ಛಂದದ ಪ್ರಯೋಗದ ಪ್ರಜ್ಞೆಗೆ ಇಂಥ ಗೀತಗಳು ನಿದರ್ಶನವಾಗಿವೆ. ವೈದಿಕ ಛಂದಸ್ಸಿನ ಜೀಕು-ಜೋಲಿಗಳನ್ನು, ಜೋಕೆ-ತೂಕ ಗಳನ್ನು ಅರಿತವರು ಈ ಗೀತವನ್ನು ಮೂಲ ಲಯ ಪ್ರತೀತಿ ಉಂಟಾಗುವಂತೆ ಸ್ವರ ಗೈಯ್ಯಬಹುದು.

ದ್ರಾವಿಡ ಭಾಷೆಗಳಲ್ಲಿ ವಿಶೇಷತಃ ತೆಲುಗಿನಲ್ಲಿ ಬಳಕೆಯಾಗುತ್ತಿದ್ದ ಸೀಸಪದ್ಯ ವನ್ನು ಬೇಂದ್ರೆಯವರು ಹೊಸಗನ್ನಡದಲ್ಲಿ ಬಳಸಿದುದುಂಟು. ಸೀಸಪದ್ಯದ ಬಳಕೆ ಹೊಸಗನ್ನಡದಲ್ಲಿ ತೀರ ಕಡಿಮೆ. ಇದರಿಂದಾಗಿಯೂ ಬೇಂದ್ರೆಯವರ ಸೀಸಪದ್ಯ ಗಳು ಹೊಸಗನ್ನಡಕ್ಕೆ ಅವರು ನೀಡಿದ ಕಾಣಿಕೆ ಎಂದು ಹೇಳಬಹುದು. ಗುಣದಲ್ಲಿ ಹಾಗೂ ಗಾತ್ರದಲ್ಲಿ ಅವರ ಸೀಸಪದ್ಯಗಳಿಗೆ ವಿಶೇಷವಾದ ಬೆಲೆ ಉಂಟು. ಅವರ 'ಉಯ್ಯಾಲೆ' ಕವನ ಸಂಗ್ರಹದಲ್ಲಿ ಒಂದು ಭಾಗ 'ಸೀಸ' ಪದ್ಯಕ್ಕೆ ಮೀಸಲಾದ ಸಂಗತಿಯನ್ನೂ ಇಲ್ಲಿ ಲಕ್ಷಿಸಬೇಕು. ಈ ಸಂಬಂಧದಲ್ಲಿ 'ಉಯ್ಯಾಲೆ'ಯ ಪೀಠಿಕೆ ಯಲ್ಲಿ ಕವಿಯೇ ಹೇಳಿದ ಮಾತುಗಳು ಗಮನಾರ್ಹವಾಗಿವೆ. "ನಾನು ಬರೆದ ಸೀಸ ಪದ್ಯಗಳು ಲಕ್ಷಣಬದ್ಧವಾದ, ಸಂಪ್ರದಾಯದ ಸೀಸಪದ್ಯಗಳಲ್ಲ; ಮೂಲ ಸೀಸಪದ್ಯವು ದ್ರಾವಿಡ ಮಾರ್ಗದ ಗಣವೃತ್ತವಾಗಿದೆ. ನನ್ನದೊ 'ಶುದ್ಧ' ಮಾತ್ರಾವೃತ್ತ: ಮಾತ್ರಾಗಣಬದ್ಧವಾಗಿದೆ. ಕೊನೆಯ ನಾಲ್ಕು ಕಿರಿ ಸಾಲುಗಳು ಮಾತ್ರೆಗಳಲ್ಲಿ ಹೆಚ್ಚು ಕಡಿಮೆಯಾಗುವವು. ಒಂದು ವಿಧದ ಪ್ರಾಸ ರಚನೆಯೂ ಇದೆ. ಈ ಕವನ ರೂಪವನ್ನು ಕೂಡ ನಾನು 'Sonnet'ನ್ನೇ ಕಣ್ಣೆದಿರನಲ್ಲಿಟ್ಟುಕೊಂಡು ರಚಿ- ಸಿದ್ದೇನೆ. ಅಷ್ಟಪಟ್ಪದಿಯೇ ಆಗಲಿ, ಸನ್ನೀ ಸೀಸಪದ್ಯವೇ ಆಗಲಿ, ನನ್ನ ಬಗೆ ಯನ್ನು ಹೊನ್ನಿಸುವಲ್ಲಿ ರೂಪಿಸುವ ಪ್ರಯತ್ನವು. ಕಲ್ಪನೆಯ ಶಿಲ್ಪನೆಯ ಅಂದವನ್ನು ಕಂಡರಿಸುವ ರೂವಾರಿ ಬಗೆಯ ಸಾಹಸವು."

ಬೇಂದ್ರೆಯವರ ಸೀಸಪದ್ಯಗಳು ಅವರ ಕೈಯಲ್ಲಿ ವಿವಿಧ ರೂಪಗಳನ್ನು ತಾಳಿ ಮೆರೆದಿವೆ. [illegible] ಸಿದ್ಧಿಯಾಗಿ ತೋರಿಬಂದಿವೆ. 'ಉಯ್ಯಾಲೆ' [illegible] ಉದಾಹರಣೆಗೆ ಅವರ

ಜನದ ಕಾಣಿಕೆ. ಅವರ ಸೀಸಪದ್ಯ ೧೨ ಸಾಲುಗಳ ಶಿಲ್ಪ. ಅದರಲ್ಲಿ ೨ ಭಾಗಗಳು ಕಾಣುತ್ತವೆ. ಮೊದಲನೆಯ ಭಾಗದಲ್ಲಿ ಸುಲಲಿತವಾದ ಎಂಟು ಲಲಿತ ಲಯದ ಚರಣಗಳು ಅಳವಟ್ಟಿರುತ್ತವೆ. ಎರಡನೆಯ ಭಾಗ ಇದೇ ಲಯದ ನಾಲ್ಕು ಕಿರಿ-ಚರಣಗಳ ಒಂದು ಕಟ್ಟು. ಮೊದಲನೆಯ ಭಾಗವು ಒಂದು ಭಾವದ ಅಥವಾ ವಸ್ತು-ವಿನ ಅಥವಾ ಸನ್ನಿವೇಶದ ವಿವರಗಳನ್ನು ಒಳಗೊಂಡಿದ್ದರೆ, ಎರಡನೆಯ ಅಥವಾ ಕೊನೆಯ ಭಾಗದಲ್ಲಿ ಆ ವಿವರಗಳು ಸೂಚಿಸುವ ರಹಸ್ಯ ಅಥವಾ ಸ್ವಾರಸ್ಯ ಪರಿ-ಣಾಮಕಾರಕವಾಗಿ ಪಡಿಮೂಡಿಸುತ್ತದೆ. ಬೇಂದ್ರೆಯವರು ಮಾಡಿದ ಈ ಪ್ರಯೋಗ ದಲ್ಲಿ ಕಾಣುವ ಪರಿಣತಿಯನ್ನು ಅವರ ಸೀಸಪದ್ಯಗಳನ್ನು ಓದಿಯೇ ಅರಿಯಬೇಕು. ಛಂದಕ್ಕೆ ಬಿಗಿ ಬಂದಷ್ಟು ಶೈಲಿ ಬಂಧುರವಾಗಿದೆ. ಮಾತು ಮಾಣಿಕ್ಯವಾಗಿ ಪರಿಣಮಿಸಿದೆ.

ಮೊದಲನೆಯ ಭಾಗದ ಎಂಟು ಚರಣಗಳ ಲಯದ ನಡೆಯನ್ನು ಪ್ರಾರಂಭದ ಎರಡು ಚರಣಗಳಿಂದ ಅರಿಯಬಹುದು. ಉದಾಹರಣೆಗಾಗಿ 'ರಸಿಕ' ಎಂಬ ಸೀಸ ಪದ್ಯದ ಮೊದಲ ಚರಣಗಳು.

"ನನ್ನೆದೆಯೂ–ನಿನ್ನೆದೆಯು; ನಡುವೆ ಕ್ಷಾರೋದಧಿಯು!
ಕಾಡಿನಲಿ ಅತ್ತಂತೆ ಎಲ್ಲ ಹಾಡು !"

ಕೊನೆಯ ನಾಲ್ಕು ಕಿರಿಚರಣಗಳ ರೀತಿಯನ್ನು ಕೆಳಗಣ ಚರಣಗಳು ಕನ್ನಡಿ-ಸುತ್ತವೆ.

ಹೆಣೆದು ಹೂ–ಹೊರೆ–ಹಾರ ಹಾರಗಳನು
ಕಳಹುವೊಲು ಗಾಳಿಯಲಿ ಹಾಡುಗಳನು;
ತಳುಹಿ ಎದೆಮಾತುಗಳ ತಣಿವೆನೆಂದು
ರಸಿಕ ! ನಿನ್ನೆದೆ–ಕೊರಳಿಗಿಂಪ ತಂದು ?

ಬೇಂದ್ರೆಯವರ 'ಉಯ್ಯಾಲೆ' ಅಷ್ಟಷಟ್ಪದಿಗಳ ಒಂದು ಕಟ್ಟನ್ನು ಒಳಗೊಂಡಿದೆ. ಅಷ್ಟಷಟ್ಪದಿಯ ರೂಪ ಮತ್ತು ಶಿಲ್ಪ ಇಂಗ್ಲೀಷಿನಿಂದ ಹೊಸಗನ್ನಡಕ್ಕೆ ಬಂದು-ದೇನೋ ನಿಜ. ಆದರೆ ಅವರ ಛಂದೋಗತಿಯಲ್ಲಿ ಕನ್ನಡದ ಶ್ರುತಿ ಇದೆ ಎಂಬುದು ಅಷ್ಟೇ ನಿಜವಾದ ಸಂಗತಿ. ಹೊಸಗನ್ನಡದಲ್ಲಿ ಹಲವಾರು ಕವಿಗಳು ಅಷ್ಟಷಟ್ಪದಿ ಯನ್ನು ಪ್ರಯೋಗಿಸಿದ್ದುಂಟು. ಆದರೆ ಬೇಂದ್ರೆಯವರು ಇದರಲ್ಲಿಯೇ ಒಂದಿಷ್ಟು ತನ್ಮತನವನ್ನು ತೋರದೇ ಇಲ್ಲ. ಚರಣದ ಅಂತ್ಯದಲ್ಲಿ ಶಬ್ದವನ್ನು ಛಂದೋಗತಿ ಕೆಡದಂತೆ ಮತ್ತು ಅರ್ಥದ ಸೂಚನೆಯಾಗುವಂತೆ ಒಡೆದು ಮುಂದಿನ ಚರಣದಲ್ಲಿ ಶ್ರುತಿಗೂಡಿಸಿಕೊಳ್ಳುವ ಕಲೆಯನ್ನು ಬೇಂದ್ರೆಯವರ ಕೆಲವೊಂದು ಅಷ್ಟಷಟ್ಪದಿ

ಗಳಲ್ಲಿ ಕಾಣುತ್ತೇವೆ. 'ಉಯ್ಯಾಲೆ'ಯಲ್ಲಿಯ ಮೊದಲ 'ಅಷ್ಟಷಟ್ಪದಿ'ಯಲ್ಲಿಯೇ ಈ ಬಗೆಗೆ ಉದಾಹರಣೆ ಸಿಗುತ್ತದೆ. ೯ ನೆಯ ಹಾಗೂ ೧೦ ನೆಯ ಚರಣಗಳನ್ನೂ ನೋಡಬಹುದು.

> ಮಿಣಿಯಲ್ಲಿ ಮಣಿವ ಕೊಲ್ಲಟಗಿತ್ತಿ ತನ್ನ ಜೋ-
> ಕೆಯ ತೂಕದಲ್ಲಿ ತೂಗಾಡುವಳು, ಮೈಯ ಹವ-
> ಣಿಕೆ ಮಿಗಿಲು........

'ಅಷ್ಟಷಟ್ಪದಿ' ಎಂಬ ಈ ಕವಿತೆಯಲ್ಲಿ ಅಷ್ಟಷಟ್ಪದಿಯ ತಂತ್ರವನ್ನೇ ಮಂತ್ರವಾಗಿಸಿದ್ದಾರೆ ಬೇಂದ್ರೆ.

> "ಅಷ್ಟಷಟ್ಪದಿಯಲ್ಲಿ ಉಯ್ಯಾಲೆಯಾಡುತಿದೆ
> ಕೌತುಕದ ಬಗೆ, ಹಾಗೆ ಇದು, ಹೀಗೆ ಇದು, ಎನುತ
> ...............ನಿದ್ದೆ ಎಚ್ಚರಗಳಲಿ ಒಂದೆ ಬಾ-
> ಳಿನ ಬಿಂಬ ತೇಂಕಾಡುವದು. ಉಸಿರ ಬೀಳೇಳಿ-
> ನಲಿ ಡೊಂಕೆ ಪ್ರಾಣಗತಿ ? ಬಗೆಯ ಇಬ್ಬಗೆಯಲ್ಲಿ
> ಹುರುಳ ತಿರುಳೊಂದು. ಕಣ್ಣೆರಡು. ಕಾಣಿಕೆ ಎರಡೆ ?"

ತಮ್ಮ ಪ್ರಥಮ ಗಣ್ಯ ಸಂಕಲನವಾದ 'ಗರಿ'ಯಲ್ಲಿ ಸಾಂಪ್ರದಾಯಿಕವಾಗಿ ಬಂದ ವಾರ್ಧಕ, ಕುಸುಮ ಮೊದಲಾದ ಒಂದೆರಡು ಷಟ್ಪದಿಗಳಲ್ಲಿ ಕವಿತೆಗಳನ್ನು ರಚಿಸಿದುದುಂಟು. 'ಗರಿ'ಯ ತರುವಾಯದ ಸಂಕಲನಗಳಲ್ಲಿ ಅವರು ಈ ಸಾಂಪ್ರದಾಯಿಕ ಷಟ್ಪದಿಗಳನ್ನು ಕಾಲಗತಕ್ಕನುಸರಿಸಿ ಕೈಬಿಟ್ಟರು. 'ಗರಿ' ಸಂಕಲನದಲ್ಲಿಯ 'ನನ್ನ ಹಾಡು' ಎಂಬ ಕವಿತೆ ಹೊಸ ಬಗೆಯ ಷಟ್ಪದಿಯನ್ನು ಒಳಗೊಂಡಿದೆ. ಅದನ್ನು ತಲಷಟ್ಪದಿಯೆಂದು ಈಗ ಕರೆಯುವುದುಂಟು. ಅದರ ಸ್ವರೂಪವನ್ನು ಕೆಳಗಣ ಪದ್ಯದಿಂದ ಅರಿಯಬಹುದು.

| | |
|---|---|
| ನನ್ನ : ಹರಣ | ೩ : ೩ |
| ನಿನಗೆ : ಶರಣ | ೩ : ೩ |
| ಸಕಲ : ಕಾರ್ಯ : ಕಾರಣಾ | ೩ : ೩ : ೩: ಗುರು |
| ನಿನ್ನ : ಮನನ | ೩ : ೩ |
| ದಿಂದ, ತನನ: | ೩ : ೩ |
| ವೆನುತಿದೆ : ತನು : ಪಾವನಾ | ೩ : ೩ : ೩ : ಗುರು |

ಷಟ್ಪದಿಯ ಸಾಮಾನ್ಯ ಯೋಜನೆಗೆ ಇದು ಹೊಂದಿಕೊಳ್ಳುತ್ತದೆ ಎಂಬುದನ್ನು

ಪರೀಕ್ಷಿಸಿ ನೋಡಬಹುದು. ಇಲ್ಲಿ ಅಂತ್ಯಪ್ರಾಸವಿನ್ಯಾಸ ಗಮನಾರ್ಹವಾಗಿದೆ. ಈ ಲಯವೇನೂ ಹೊಸತಲ್ಲ, ರೂಪ ಹೊಸತು. ಹೀಗೆ ಹಳೆಯ ಲಯಗಳಲ್ಲಿ ಹೊಸ ಬಂಧಗಳನ್ನೂ ಬೇಂದ್ರೆ ಹೆಣೆದಿದ್ದಾರೆ.

## "ಗದ್ಯ-ಲಯ"

ಮಾತಿನ ರೀತಿಯ ಕವಿತೆ, ಬೇಂದ್ರೆಯವರ ಕರುಳಿನ ವಚನಗಳಲ್ಲಿ ಗದ್ಯ ಲಯ ಹೃದ್ಯವಾಗಿ ಆಡಿದೆ. ಇಲ್ಲಿ ಬರುವ ಪ್ರಾಸವಿನ್ಯಾಸದಿಂದಾಗಿ ನಿಯಮಿತ ವಾದ ಛಂದೋಗತಿಯ ಅಭಾವದ ಅರಿವೇ ಆಗುವದಿಲ್ಲ. ಕರುಳಿನ ವಚನಗಳು ಛಂದೋಬದ್ಧವಾದ ವಚನಗಳೇನೋ ಎಂಬ ಒಂದು ಅನಿಸಿಕೆ ಉಂಟಾಗುತ್ತದೆ. ಬೇಂದ್ರೆಯವರ ಮೋಡಿಗಳಲ್ಲಿ ಇದೂ ಒಂದು. ಇದರ ಸ್ವರೂಪ ದರ್ಶನ ಕೆಳಗಣ 'ಕರುಳಿನ ವಚನ'ದಿಂದ ಆಗದಿರದು.

ಸುಖದ ಸೆರೆಯಾಗಿ ಬಂತು
ದುಃಖದ ಮರೆಯಾಗಿ ಬಂತು
    ನನ್ನ ಮಗುವಿನ ಮಮತೆ
ಹಿಗ್ಗಿನ ತೊರೆಯಾಗಿ ಬಂತು
ನಗೆಯ ತೆರೆಯಾಗಿ ಬಂತು
    ನನ್ನ ಮಗುವಿನ ಮಮತೆ

('ಬಂತು'-'ಗರಿ'ಯಲ್ಲಿರುವ ಕವನ)

ಛಂದ ಪ್ರಪಂಚಕ್ಕೆ ಬೇಂದ್ರೆಯವರ ಕೊಡುಗೆ ಇಂತಿಷ್ಟೇ ಎಂದು ಹೇಳುವುದು ಹೇಗೆ ಸಾಧ್ಯ. ಸಾಂಪ್ರದಾಯಿಕವಾದ ಷಟ್ಪದಿಗಳಿಂದ ಆರಂಭವಾದ ಅವರ ನಾದ-ಲೀಲೆ ಹೊಸ ಹೊಸ ದೆಸೆಗಳಲ್ಲಿ ವಿವಿಧ ವಿನ್ಯಾಸಗಳನ್ನು ತೋರಿದೆ. ಗೀತ ರಸಾನು-ರಾಗಿಗಳ ಮನವನ್ನು ಸೂರೆಗೊಂಡಿದೆ. ಉತ್ಸಾಹ, ಅಧಿಕೋತ್ಸಾಹ, ಮಂದಾನಿಲ-ಪ್ರಭೇಧ, ಲಲಿತ— ಹೀಗೆ ಕನ್ನಡದ ಎಲ್ಲ ಲಯಗಳನ್ನೂ ಅದು ಒಳಗೊಂಡಿದೆ. ತನ್ನದೇ ಆದ ಚೆಲುವು-ಒಲವುಗಳನ್ನೂ ತೆರೆಗೊಳಿಸಿದೆ. ಜಾನಪದದಲ್ಲಂತೂ ಬೇಂದ್ರೆಯವರ ಗಳಿಕೆ ಬೇಂದ್ರೆಯವರದೇ. ತ್ರಿಪದಿ, ಸಾಂಗತ್ಯ, ಪಿರಿಯಕ್ಕರ ಎಲ್ಲವೂ ತಮ್ಮ ಸವಿ ಸೂಸಿವೆ. ಇವಲ್ಲದೇ ದ್ವಿಪದಿ, ಚೌಪದಿಗಳು ಪ್ರಾತಿನಿಧ್ಯವನ್ನೂ ಪಡೆದಿವೆ. ಮೇಲಾಗಿ ಸೀಸಪದ್ಯ, ಅಷ್ಟಷಟ್ಪದಿಗಳನ್ನು ಈ ಕವಿ ವೈಶಿಷ್ಟ್ಯ-ಪೂರ್ಣವಾಗಿ ಹಾಗೂ ವೈವಿಧ್ಯಪೂರ್ಣವಾಗಿ ಬಳಸಿದ್ದಾರೆ. ಅಲ್ಲದೇ ಗದ್ಯ ಲಯದ ಹೃದ್ಯತೆಗೂ ಇಲ್ಲಿ ಇಂಬು ದೊರೆತಿದೆ. ಲಾವಣಿಯ ಗತಿಗಳಲ್ಲಿಯೂ ಕೆಲವೊಂದು ಹೊಸ ಗತ್ತುಗಳನ್ನು ಹದುಳವಾಗಿ ರೂಪಿಸಿದ್ದಾರೆ. ಮಾತ್ರಾಛಂಧದಲ್ಲಿಯೂ

ಬೇಂದ್ರೆಯವರು ಹಲವಾರು ವಿಶಿಷ್ಟ ಛಂದೋಬಂಧಗಳನ್ನು ನೆಯ್ದು ಜನಪ್ರಿಯ ಗೊಳಿಸಿದ್ದಾರೆ. ಸ್ವಚ್ಛಂದವೂ ಅವರ ಗೀತಗಳಲ್ಲಿ ಸ್ಪಂಧಿಸಿದೆ.

ನೂರು ಮರ! ನೂರು ಸ್ವರ
ಒಂದೊಂದು ಅತಿ ಮಧುರ
ಬಂಧವಿರದ ಬಂಧುರ
ಸ್ವಚ್ಛಂದ ಸುಂದರ

ಎಂದು ಅವರು ತಮ್ಮ ಒಂದು ಗೀತದಲ್ಲಿ ಹೇಳಿದ ಮಾತು ಅವರ ಛಂದೋಗತಿ-ಗಳಿಗೂ ತುಂಬ ಸಮರ್ಪಕವಾಗಿ ಅನ್ವಯಿಸುತ್ತದೆ.

§ § § §

೬

# ಕನ್ನಡ ಮೇಘದೂತದ ಪೀಠಿಕೆಯಲ್ಲಿ ಕಾಮ–ಪ್ರೇಮಗಳ ನವಮುಖ

ಆರ್. ಜಿ. ಕುಲಕರ್ಣಿ

ಶ್ರೀ ಅಂಬಿಕಾತನಯದತ್ತರು ಕಾಳಿದಾಸನ ಮೇಘದೂತವನ್ನು ಕನ್ನಡಿಸಿದಾಗ ಮೂಲ ಕವಿಯ ಕಾವ್ಯಮಾತ್ರ ಕನ್ನಡದಲ್ಲಿ ಮೂಡಲಿಲ್ಲ, ಜೊತೆಗೆ ಕಾಮ–ಪ್ರೇಮಗಳ ನವಮುಖವೇ ಸ್ವತಂತ್ರ ಕಾವ್ಯರೂಪತಾಳಿ ಪ್ರಕಟವಾಯಿತು. ಈ ಕನ್ನಡ ಮೇಘದೂತದ ಪೀಠಿಕೆಯಲ್ಲಿ ಈ ದರ್ಶನ–ವಿಮರ್ಶನ ಒಡಮೂಡಿದೆ.

ಕಾಳಿದಾಸನ 'ಮೇಘದೂತ'ವು ಕೇವಲ ವಿರಹಿಯ ಭಾವಲಹರಿ ಮಾತ್ರವಲ್ಲ; ಅದೊಂದು ಸಾಂಕೇತಿಕವಾದ ದರ್ಶನಗರ್ಭಿತ ಕಾವ್ಯವಿದೆ. ಆ ದರ್ಶನದ ವಿವರವ್ಯಾಖ್ಯಾನವು ಕೇವಲ ಅನುವಾದದಿಂದ ಸಿಕ್ಕಲಿಕ್ಕಿಲ್ಲವೆಂದು ಪೀಠಿಕಾರೂಪದಲ್ಲಿ ಕೆಲವು ರಸಪೂರ್ಣಕವನಗಳ ಮೂಲಕ ಆ ವ್ಯಾಖ್ಯಾನವನ್ನು ಶ್ರೀಅಂಬಿಕಾತನಯ-ದತ್ತರು ನಿರೂಪಿಸಿದ್ದಾರೆ–ಎನ್ನಿಸುತ್ತದೆ.

### ಶ್ರೀ ಬೇಂದ್ರೆಯವರು ಕಾಳಿದಾಸನನ್ನು ಕಾಣುವ ದೃಷ್ಟಿ :

"ವಿರಹಾವಸ್ಥೆಯಲ್ಲಿ ತಾಳಿಬಾಳುವ ಕಾಮವೇ ಧರ್ಮ ಅವಿರುದ್ಧ ಕಾಮವೆನಿಸಿ ಜೀವೋನ್ನತಿಯ ಹಾದಿಯಾಗುವದು. .... .... .... ಮೇಘದೂತದಲ್ಲಿಯ ವಿರಹಕಾವ್ಯ ಬೇರೆ ಬಗೆಯದಾಗಿದೆ. ವಿರಹದಿಂದ ಯಕ್ಷನಲ್ಲಿ ವಿಕಾರದಲ್ಲಿಯೂ ವಿಕೃತಿಗೊಳ್ಳದ ಧೃತಿಗೆ ಅನುಕೂಲವಾದ ಭಾವಗಳ ಉದಯವಾಗಿದೆ. ಯಕ್ಷನ ಲಲಿತದಲ್ಲಿಯೇ ಒಂದು ಪ್ರಶಾಂತಿ ಇದೆ; ಒಂದು ಉದಾತ್ತತೆ ಇದೆ. .... .... .... ಎಲ್ಲ ಪುರುಷ ಹೃದಯಗಳೂ ಯಕ್ಷನಾಗಿ, ಮೇಘವು ರಸಪೂರ್ಣ ಹೃದಯವಾಗಿ, ಯಕ್ಷಿ, ಪ್ರೀತಿಯ ಅಧಿದೇವಿಯಾಗಿ, ಗುಡ್ಡ, ಹೊಳೆ, ಜನ, ಜನಪದ, ಪಶು, ಪಕ್ಷಿಗಳಿಂದ ತುಂಬಿದ ಪ್ರಕೃತಿ ಚೆಲುವಿನ ಓಣಿಯಾಗುವದು. ಧರ್ಮಾ–ವಿರುದ್ಧವಾದ ಕಾಮದಲ್ಲಿ ಹುಟ್ಟಿದ ಕಾವ್ಯ, ಭಕ್ತಿಯ ಸಂಕೇತವಾಗುವದು." [1]

---

1. ಪ್ರಸ್ತಾವನೆ, ಪುಟ ೪–೫

ತಮ್ಮ ಕನ್ನಡ ಮೇಘದೂತದ ಪ್ರಸ್ತಾವನೆಯಲ್ಲಿ ಶ್ರೀ ಬೇಂದ್ರೆಯವರು ಹೇಳಿದ ಈ ಮಾತುಗಳು, ಅವರು ಕಾಳಿದಾಸನ ಕಾವ್ಯಗಳನ್ನು ಕಾಣುವ ದೃಷ್ಟಿಗೆ ಸಾಕ್ಷಿಯಾಗಿವೆ : ಕಾಳಿದಾಸನು ಭಾರತದ ರಾಷ್ಟ್ರೀಯ-ದಾರ್ಶನಿಕ ಕವಿಯೆಂದು ಅವರು ಗ್ರಹಿಸಿದ್ದಾರೆ. ವೇದೋಪನಿಷತ್ತುಗಳ ಆಧ್ಯಾತ್ಮಿಕ ದರ್ಶನವು ಕಾಳಿದಾಸನಲ್ಲಿ ಸಾಂಕೇತಿಕ ಕಾವ್ಯ-ನಾಟಕಗಳಾಗಿ ಮೈವೆತ್ತಿವೆ ಎಂದು ಕಂಡುಕೊಂಡಿದ್ದಾರೆ. ಈ ದೃಷ್ಟಿಯಿಂದಲೇ ಮೇಘದೂತದಲ್ಲಿ ಕಂಡುಬರುವ ಕಾಮ-ಪ್ರೇಮಗಳಿಗೂ ಒಂದು ಸನಾತನವಾದ ದಾರ್ಶನಿಕ ಪರಂಪರೆ ಇದೆ ಎಂದು ಭಾವಿಸಿ ಅದು ತಮಗೆ ಕಂಡಂತೆ ಹೇಗಿರಬಹುದೆಂಬುದನ್ನು ಕನ್ನಡ ಮೇಘದೂತದ ಪೀಠಿಕೆಯಲ್ಲಿಯ ಪದ್ಯಗಳ ಮೂಲಕ ನಿರೂಪಿಸಿದ್ದಾರೆ.

“ಪುರೂರವ ಊರ್ವಶಿಯರ ವೇದೋಕ್ತ ವಿರಹಸೂಕ್ತದಲ್ಲಿ ಈ ಆಧ್ಯಾತ್ಮಿಕ ಸಂಕೇತವು ತುಂಬಿಕೊಂಡಿದೆ. ಯಮ-ಯಮಿಯರ ಸಂವಾದದಲ್ಲಿಯೂ ಅಗಸ್ತ್ಯ-ಲೋಪಾಮುದ್ರೆಯರ ಸಂವಾದದಲ್ಲಿಯೂ ಮಿಂಚುವ ಕಾಮದ ವಾಮಮಾರ್ಗವೂ ಆತ್ಮಿಕ ಸಂಕೇತ ಪರಿಪೂರ್ಣವಾಗಿದೆ. ಕ್ರೌಂಚಮಿಥುನದ ವಿರಹದಿಂದ ಪ್ರೇರಿತವಾದ ವಾಲ್ಮೀಕಿಯ ಅಪಾರ ಕರುಣಸ್ಫೂರ್ತಿ, ಸೀತಾರಾಮರ ಅವ್ಯಂಗ ಪ್ರಣಯವನ್ನು ವರ್ಣಿಸಲು ಸಮರ್ಥವಾಯಿತೆಂದು ಬೇರೆ ಹೇಳಬೇಕೆ ? ಉಪನಿಷತ್ತುಗಳಲ್ಲಿಯೂ ಮಹಾಭಾರತದಲ್ಲಿಯೂ ಯಕ್ಷ ಗೂಢವ್ಯಕ್ತಿಯಾಗಿಯೇ ಬಂದಿದೆ. ಕಾಲಿದಾಸನ ಯಕ್ಷನು ಕಾಲಿದಾಸನೇ ಇರಬಹುದು; ಅಥವಾ ಎಲ್ಲ ಶುದ್ಧ ಹೃದಯಗಳ ರಾಗೋನ್ನತ ಅಭೀಪ್ಸೆಯೇ ಇರಬಹುದು.” [1] ಈ ಎಲ್ಲ ಮಾತುಗಳಿಂದ ಸ್ಪಷ್ಟವಾಗುವ ಅಂಶ ಇದು :

ಕಾಮ ಪ್ರೇಮಗಳ ದೈವಿಕತೆಯ ದರ್ಶನದಿಂದ ಕಾಳಿದಾಸನ ಕಾವ್ಯಗಳಿಗೆ, ನಾಟಕಗಳಿಗೆ ಒಂದು ಘನತೆ ಹಾಗೂ ಸನಾತನ ಸತ್ವ ಪ್ರಾಪ್ತವಾಗಿದೆ. ಭಾರತೀಯರ ಜೀವನದರ್ಶನಕಾರರ ಸಾಲಿನಲ್ಲಿ ಆತನಿಗೂ ಬಹುಮಹತ್ವದ ಅಂದರೆ ವ್ಯಾಸ ವಾಲ್ಮೀಕಿಗಳ ಜೊತೆಯ ಸ್ಥಾನ ಸಿಕ್ಕಿದೆ.

ಆದ್ದರಿಂದ ಕಾಲಿದಾಸನ ಕೃತಿಗಳನ್ನು ಅರ್ಥಮಾಡಿಕೊಳ್ಳಲು ಕಾಮಪ್ರೇಮಗಳ ದೈವಿಕತೆ, ಸನಾತನ ಸತ್ವಪೂರ್ಣತೆಗಳನ್ನು ಅರ್ಥಮಾಡಿಕೊಳ್ಳುವುದು ಅಗತ್ಯವಾಗಿದೆ. ಶ್ರೀ ಅಂಬಿಕಾತನಯದತ್ತರು ತಮ್ಮ ಕನ್ನಡ ಮೇಘದೂತದ ಪೀಠಿಕೆಯ ಮೂಲಕ ಈ ಅಗತ್ಯವನ್ನು ಪೂರೈಸಿದ್ದಾರೆ.

**ಅನಾದಿಕಾಮ :**

ಕಾಮವು ಬೆಳೆದವರ ದಿನಬಳಕೆಯ ಮಾತಾಗಿರಬಹುದು. ಆದರೆ ದಿನಬಳಕೆಯಿಂದ ಅದರ ಮೂಲಸ್ವರೂಪ ಹಾಗೂ ಜೀವವಿಕಾಸದಲ್ಲಿ ಅದರ ದೈವಿಕತೆ

---

1. ಪ್ರಸ್ತಾವನೆ, ಪುಟ ೫.

ಅರ್ಥವಾಗಲಾರದು. ನಿಜವಾಗಿ ಈ ಸಂದರ್ಭದಲ್ಲಿ ಪಾವಿತ್ರ್ಯ ಅಪಾವಿತ್ರ್ಯ ಎಂಬ ಪದ್ಯವೂ ಸಾಪೇಕ್ಷವಾಗಿಬಿಡುತ್ತದೆ. ಇತ್ತೀಚೆಗೆ ಆಧುನಿಕಮನೋವಿಜ್ಞಾನಿ ಫ್ರೂಡನ ಸಿದ್ಧಾಂತವನ್ನು ಮುಂದೆ ಮಾಡಿ ಕಾಮವನ್ನು ಲೈಂಗಿಕತೆಗೆ ತಳಕು ಹಾಕಿ ಮಾತೃಪ್ರೇಮದ "ನಿಷ್ಕಾಮತೆ"ಯನ್ನೂ ಕಲಂಕಿಸುವ ಪ್ರಜ್ಞಾವಾದ ವಿಜ್ಞಾನದ ಹೆಸರಿನಲ್ಲಿ ತಲೆ ಎತ್ತಿದೆ; ನವ್ಯದಲ್ಲಿ ತಲೆಹಾಕಿದೆ. ಅಲ್ಪವಾದ ಅನುಭವವನ್ನು ಮಹತ್ತಾದ ಭಾವದೊಡನೆ ತಳಕು ಹಾಕಿ ಮಹತ್ತನ್ನೂ ಅಲ್ಪತೆಗಿಳಿಸುವ ಜೀವನದೃಷ್ಟಿ ಇದು. ಇದರಿಂದ ಜೀವವು ವಿಕಾಸವಾಗುವ ಬದಲಾಗಿ ವಿಕೃತವಾಗುತ್ತದೆ.

ಕಾಮವು ಕಾಮುಕತೆಯಲ್ಲ. ಮೂಲತಃ ಕಾಮವು ಬ್ರಹ್ಮನ ಸೃಷ್ಟಿಸಂಕಲ್ಪ— ಇಚ್ಛಾಶಕ್ತಿ. ಈ ಬ್ರಹ್ಮಕಾಮದ ಸಾಫಲ್ಯಲೀಲೆಯೇ ಈ ವಿಶ್ವಲೀಲೆಯಾಗಿದೆ. ಶ್ರೀ ಬೇಂದ್ರೆಯವರು ಈ ಭಾವವನ್ನು ಅದ್ಭುತವಾಗಿ ವ್ಯಕ್ತಪಡಿಸಿದ್ದಾರೆ :

> " ಬ್ರಹ್ಮ-ಹೃದಯದಲಿ ಜನಿಸಿದಿಚ್ಛೆ ಕೊನೆಗಾಣಲೆಂದು ಬಾಳಿ
> ಕಂಡ ಕಡೆಗು ಶತರೂಪೆಯಲ್ಲಿ ಮಧು-ರೂಪ-ರೂಪತಾಳಿ ||
> ಜಗದ ತಂದೆ-ತಾಯಿಯರ ಕಂದ ಅವತರಿಸೆ ಜೀವನಾಗಿ
> ಬಂತು ಪೂರ್ವದಲಿ, ದೇವ-ಕಾಮವೇ ಕಾಮ-ದೇವನಾಗಿ " ||

ಏಕವಾಗಿದ್ದ ಬ್ರಹ್ಮವು ಅನೇಕವಾಗಲು ಸಂಕಲ್ಪಿಸಿದ್ದೇ ಸೃಷ್ಟಿಗೆ ಕಾರಣವಾಯಿತು. ಈ ಸಂದರ್ಭದಲ್ಲಿ ಶ್ರೀ ಬೇಂದ್ರೆಯವರು— "ಇಚ್ಛೆ ಕೊನೆಗಾಣಲೆಂದು" ಎಂಬ ಪದಪ್ರಯೋಗ ಮಾಡಿದ್ದಾರೆ. ಇದಕ್ಕೆ ಕಾಮ ಕೊನೆಗಾಣಲಿ–ಮುಕ್ತಾಯಕಾಣಲಿ ಎಂದೂ ಅರ್ಥಮಾಡಬಹುದು; ಜೊತೆಗೆ "ಗೊನೆಕಾಣಲಿ" ಸಫಲವಾಗಲಿ ಎಂದೂ ಅರ್ಥಮಾಡಬಹುದು. ಆಗ 'ತಾಯಿ-ತಂದೆಯರ ಕಾಮದ ಸಾಫಲ್ಯ ಪುತ್ರಪ್ರಾಪ್ತಿಯಲ್ಲಿ' ಎಂಬ ಧ್ವನಿ ಬರುತ್ತದೆ. ಕಾಳಿದಾಸನು ರಘುವಂಶದಲ್ಲಿ ಸೂರ್ಯವಂಶದ ರಾಜರು ಸಂತಾನಾಪೇಕ್ಷೆಯಿಂದ ಮಾತ್ರ ಕಾಮೋಪಭೋಗಿಗಳಾಗಿರುತ್ತಿದ್ದರೆಂದು ಹೇಳುವ ಮಾತನ್ನು ಇಲ್ಲಿ ನೆನೆಯಬಹುದು.

ಬ್ರಹ್ಮಕಾಮವೇ ನಾನಾ ಮಧುರ ರೂಪಗಳಲ್ಲಿ ಅಭಿವ್ಯಕ್ತವಾಯಿತು ಎಂಬುದನ್ನು ಶ್ರೀ ಬೇಂದ್ರೆಯವರು :

"ಕಂಡ ಕಡೆಗು ಶತರೂಪೆಯಲ್ಲಿ ಮಧು-ರೂಪ-ರೂಪತಾಳಿ" ಎಂದು ಹೇಳುವಾಗ "ಶತರೂಪೆ" ಎಂಬ ಶಬ್ದವನ್ನು ಶ್ಲೇಷಾರ್ಥದಲ್ಲಿ ಧ್ವನಿಪೂರ್ಣವಾಗಿ ಬಳಸಿದ್ದಾರೆ. ಮನುವಿನ ಹೆಂಡತಿಯಲ್ಲಿ ವಧುವೆ ಮಧುವಾಗಿ ಸೃಷ್ಟಿ-ಪರಂಪರೆ ಮುಂದುವರಿದ ಕತೆ ಇಲ್ಲಿ ಸೂಚ್ಯವಾಗಿದೆ.

ಜಗತ್ತಿನ ತಂದೆ ತಾಯಿಯರ ಕಂದನೇ ಜೀವವೆಂದು ಹೇಳಿ ದೇವ 'ಕಾಮವೇ ಕಾಮದೇವನಾಗಿ' ಉದಯನಾದ ಎಂದು ಶ್ರೀ ಬೇಂದ್ರೆಯವರು ಒಂದು ನವೀನ 'ಪುರಾಣ ಸೃಷ್ಟಿ' ಯನ್ನೇ ಮಾಡಿದ್ದಾರೆ. ಇದೇ ಕವಿಗಳು 'ಹೂ' ವಿನ ಉದಯಕ್ಕೂ ಒಂದು ಹೊಸ ಪುರಾಣ ಕತೆಯನ್ನೇ ಸೃಷ್ಟಿಸಿರುವವನ್ನು ಇಲ್ಲಿ ನೆನೆಯಬಹುದು.

**ಧ್ವನಿಪರಂಪರೆ :**

ಶ್ರೀ ಬೇಂದ್ರೆಯವರು ಹೀಗೆ ನವೀನಪುರಾಣಕತೆಗಳನ್ನು ಸೃಷ್ಟಿಸುತ್ತ, ಇದ್ದ ಪದಗಳಲ್ಲಿಯೇ ಅಡಗಿದ ಧ್ವನಿಶಕ್ತಿಯನ್ನು ಸಮರ್ಥವಾಗಿ ಬಳಸುತ್ತ ತಮ್ಮ ತಾತ್ವಿಕ ಪದ್ಯಗಳನ್ನು ರಸಪೂರ್ಣ ಕಾವ್ಯ ಮಾಡಿದ್ದಾರಲ್ಲದೆ ನಮ್ಮ ಪೌರಾಣಿಕ ಕಾವ್ಯಗಳ ಸಾಂಕೇತಿಕ ಮೌಲ್ಯದ ವಿಷಯದಲ್ಲಿ ಎಚ್ಚರ ನೀಡಿದ್ದಾರೆ.

ಶಿವನನ್ನು ಸಮಾಧಿಯಿಂದ ಎಚ್ಚರಿಸಿ ಸರ್ವಮಂಗಳೆಯಾದ ಪಾರ್ವತಿಯೊಡನೆ ಕಲ್ಯಾಣಸಾಧಿಸಲು ದೇವತೆಗಳು ಪ್ರಯತ್ನಪಟ್ಟ ಕತೆ ಕುಮಾರಸಂಭವದಲ್ಲಿ ಪ್ರಖ್ಯಾತವಾಗಿದೆ. ಎಚ್ಚತ್ತ ಶಿವನ ನೇತ್ರಾಗ್ನಿಗೆ ಕಾಮನು ಆಹುತಿಯಾದ ಕತೆಯೂ ಅಷ್ಟೇ ಪ್ರಖ್ಯಾತವಾಗಿದೆ.

ಆದರೆ ಶ್ರೀ ಬೇಂದ್ರೆಯವರು "ರತಿಯ ವಿರಹದಲಿ ಬೆಂದ ಕಾಮ" ಎಂದು ಹೇಳುತ್ತಾರೆ. ಸರ್ವಮಂಗಳೆಯ ಸರ್ವಸ್ವವೇ ಆದ ಮಾಂಗಲ್ಯಕ್ಕಾಗಿ ರತಿಯು ಅಳಬೇಕೆ- ಎಂದು ಪ್ರಶ್ನೆ ಮಾಡುತ್ತಾರೆ.

ಶಿವ-ಶಕ್ತಿ; ಸಜ್ಜನಿಕೆ-ಸಾಮರ್ಥ್ಯ—ಇವುಗಳ ಅಖಂಡ ಸಮ್ಮಿಲನಕ್ಕೆ, ಆ ಸಮ್ಮಿಲನದ ಸಾಫಲ್ಯಕ್ಕೆ (ಸಂತತಿಗೆ) ಕಾಮಭಾವ, ರತಿಭಾವಗಳ ವಿರಹ ಅಗತ್ಯವೇನೋ ಎಂದು ಕವಿ ಸೂಚಿಸಿದ್ದಾರೆ. ಆದರೆ ಈ ಅಗಲಿಕೆ ದುಃಖದಾಯಕವೆಂದು ಕವಿಗಳು ತಮ್ಮ ಕನಿಕರಭಾವವನ್ನು ವ್ಯಕ್ತಪಡಿಸಿದ್ದಾರೆ.

ಕಾಮವನ್ನು ಸುಟ್ಟ ಶಿವನೂ ಶಕ್ತಿಯನ್ನು ಮದುವೆಯಾಗಿ ಕುಮಾರಪಿತನಾದ; ರತಿಯೊಡನೆ ಸಾಂಗನಾದ ಕಾಮನನ್ನು ಶಿವನು ಸುಟ್ಟರೂ ನಾಶಮಾಡಲಿಲ್ಲ; ಅನಂಗನಾಗಿ ಬಾಳುವಂತೆ ಅನುಗ್ರಹಿಸಿದ. ಕಾಮರತಿಯರ ಅಗಲಿಕೆಯಲ್ಲಿ ಲೋಕಕಲ್ಯಾಣದ ಸಾಧನೆಯಿದೆ, ಮಧುರ ಕಾವ್ಯದ ಉದಯವಿದೆ. ಈ ಸಂದರ್ಭದಲ್ಲಿ ಹಿಂದೆ ಉದಹರಿಸಿದ ಒಂದು ವಾಕ್ಯವನ್ನು ಪರಿಶೀಲಿಸಬಹುದು.

"ವಿರಹಾವಸ್ಥೆಯಲ್ಲಿ ತಾಳಿಬಾಳುವ ಕಾಮವೇ ಧರ್ಮಾವಿರುದ್ಧ ಕಾಮವೆನಿಸಿ ಜೀವೋನ್ನತಿಯ ಹಾದಿಯಾಗುವದು .... .... ವಿರಹದಿಂದ ಯಕ್ಷನಲ್ಲಿ

ವಿಕಾರದಲ್ಲಿಯೂ ವಿಕೃತಿಗೊಳ್ಳದ ಧೃತಿಗೆ ಅನುಕೂಲವಾದ ಭಾವಗಳ ಉದಯ ವಾಗಿದೆ. "

ಹೀಗೆ ಕಾಮ-ರತಿಯರ ಅಗಲಿಕೆಗೆ ಜೀವ ವಿಕಾಸದಲ್ಲಿ ವಿಶಿಷ್ಟ ಸ್ಥಾನವಿದೆ. ಆದರೆ ಈ ಅಗಲಿಕೆ ದೈಹಿಕ ಮಾತ್ರವಾಗಿದೆ. "ವಿರಹಪೂತರತಿ ಜೀವ ಮೂಲ ಸತಿ ಚಿತ್ತರಂಗದಲ್ಲಿ" "ಆ ಅನಂಗ" ನೊಡನೆ ಒಂದಾಗುತ್ತಾಳೆ.

ಕಾಮಭಾವ, ರತಿಭಾವ ದೈಹಿಕವಾಗಿದ್ದಾಗ ಪಶುಮಟ್ಟದಲ್ಲಿರುತ್ತದೆ. ಅಲ್ಲಿ ಚಿತ್ತದ ಉದ್ದೀಪನವೇ ಇರುವದಿಲ್ಲ. ಪ್ರಿಯರ ವಿರಹದಲ್ಲಿಯೇ ಚಿತ್ತವೂ ಸ್ಮೃತಿಚಿತ್ರಗಳಿಂದ ಅನುಭವವನ್ನು ಉದ್ದೀಪಿಸಿ ನವಭಾವಗಳ ಕಲ್ಪನಾನುಭವ ಪಡೆಯಲು ಸಮರ್ಥವಾಗುತ್ತದೆ. ಕಾಮವು ಪ್ರೇಮವಾಗಿ, ವಾತ್ಸಲ್ಯವಾಗಿ ಅರಳುವ ದಾರಿ ಇದೇ ಆಗಿರಬೇಕು.

"ಪ್ರೌಢರತಿಯ ಕೈಕೂಸು ಆಗಿ ಬೆಳೆದಿಹುದು ಕಾಮ-ಶಿಶುವು" ಎಂದು ಶ್ರೀ ಬೇಂದ್ರೆಯವರು ಹೇಳಿದ ಮಾತಿನಲ್ಲಿ ಈ ಭಾವ ಸೂಚಿತವಾಗಿದೆ.

ಪುರಾಣಕತೆಯ ಪ್ರಕಾರ ಶಿವನಿಂದ ಬೂದಿಯಾದ ಕಾಮನೇ ಪ್ರದ್ಯುಮ್ನನಾಗಿ ಹುಟ್ಟಿ ಪುನಃ ರತಿಯೊಡನೆ ಒಂದಾಗುತ್ತಾನೆ. ಪ್ರದ್ಯುಮ್ನನು ಶ್ರೀಕೃಷ್ಣನ ಪುತ್ರ. ಈ ಶಿಶುವನ್ನು ಮೀನ ನುಂಗಿರುತ್ತದೆ.

ಆ ಮೀನವು ರತಿಯ ಕೈಯಲ್ಲಿ ಸಿಕ್ಕು ರತಿಗೆ ಮಗು ದೊರಕಿ ತನ್ನ ಪೂರ್ವ ಜನ್ಮದ ಪತ್ನಿಯ ವಾತ್ಸಲ್ಯದ ಮೂರ್ತಿಯಾಗಿ ಪ್ರದ್ಯುಮ್ನ ಬೆಳೆಯುತ್ತಾನೆ. ಈ ಎಲ್ಲ ಕತೆಯ ಅಂತರಾರ್ಥವೆಂದರೆ— ಕಾಮವು ವಿರಹಾಗ್ನಿಯಲ್ಲಿ ಬೆಂದು ಸುಪ್ರೇಮ ವಾಗಿ ಅರಳುವದು.

"ತನ್ನ ಕಿಚ್ಚಿನೊಳೆ ಬೆಂಕಿ ಸುಟ್ಟು ಬೆಳಕಾಗಿ ಮಿಂಚಬಹುದು
ಮೂಲ ಕಾಮದಲಿ ವಿರಹ ಬೆಳೆದು ಸುಪ್ರೇಮವರಳಲಹುದು"

ಎಂಬ ನುಡಿಗಳಲ್ಲಿ ಈ ಭಾವನೆ ಅಭಿವ್ಯಕ್ತಿಪಡೆದಿದೆ. ಇಲ್ಲಿ 'ಪ್ರದ್ಯುಮ್ನ' ಎಂಬ ಹೆಸರನ್ನು ಕವಿ ಬಳಸದಿದ್ದರೂ "ಬೆಂಕಿ ಸುಟ್ಟು ಬೆಳಕಾಗಿ ಮಿಂಚಬಹುದು" ಎಂಬ ಮಾತಿನಲ್ಲಿ ಅದು ಧ್ವನಿತವಾಗಿದೆ. ಜೊತೆಗೆ ಕಾಮವು ಬೆಂಕಿಯಂತೆ; ಪ್ರೇಮವು ಬೆಳಕಿನಂತೆ ಎಂಬ ಸೂಚನೆಯೂ ಸ್ಪಷ್ಟವಾಗಿದೆ. 'ಪ್ರೌಢರತಿ' ಎಂಬ ಪದ ಪ್ರಯೋಗದಲ್ಲಿಯೂ ಪ್ರದ್ಯುಮ್ನನ ಕತೆ ಸೂಚಿತವಾಗಿದೆ.

ಶ್ರೀ ಬೇಂದ್ರೆಯವರು ಕಾಮವಿಕಾಸದ ಪೌರಾಣಿಕ ಸಂಕೇತವನ್ನು "ಮಧು ವಾತಾ ಋತಾಯತೆ" ಎಂಬ ಪದ್ಯದಲ್ಲಿಯೂ ಬಳಸಿದ್ದಾರೆ. ಈ ಸಂಕೇತದ ವಿವರ ಹೀಗಿದೆ :

ಕಾಮ — ರತಿ, ಪ್ರದ್ಯುಮ್ನ — ಕೃತಿ
ಅನಿರುದ್ಧ — ಶಾಂತಿ; ಸಂಕರ್ಷಣ — ಜಯಾ
ವಾಸುದೇವ — ಮಾಯಾ
—ಎಂಬುದಾಗಿ

ಕಾಮಭಾವ, ರತಿಭಾವಗಳ ವಿಕಾಸ ಸ್ವರೂಪಗಳನ್ನು ಪುರಾಣಗಳಲ್ಲಿ ಚಿತ್ರಿಸ ಸಲಾಗಿದೆ.

ರತಿಭಾವವು! ವಾತ್ಸಲ್ಯ, ಶಾಂತಿಭಾವಗಳಾಗಿ ವಿಶ್ವವಿಜಯಿಯಾದ ಸಂಕಲ್ಪಶಕ್ತಿಯಾಗಿ ಕೊನೆಗೆ ವಾಸುದೇವನಾಮಕ ಪರಮಾತ್ಮನಲ್ಲಿ ಮಾಯಾ ಶಕ್ತಿಯಾಗಿ ಪರಿಣಮಿಸುತ್ತದೆ. 'ಮಾಯಾ' ಎಂದರೆ ಸೃಷ್ಟಿಶಕ್ತಿ ಎಂದೂ ಅರ್ಥವಿದೆ.

ಆದರೆ ಈ ಮಾಯೆ ಕೇವಲ ಭ್ರಾಂತಿಗೊಳಿಸುವ ಸುಳ್ಳು ಅಲ್ಲ; ಅದು ಸತ್ಯಕಾಗಿ ನೀರಡಿಸಿ ನಿಂತ ಸೌಂದರ್ಯವಾಗಿದೆ. ಶಾಂತಿಯಿಂದ ಮಾಯೆಯ ವರೆಗಿನ ಲೀಲಾ ವಿಕಾಸವನ್ನು, ಅನಿರುದ್ಧನಿಂದ ವಾಸುದೇವನವರೆಗಿನ ಪೌರುಷ ಪ್ರಕಟಣೆಯನ್ನು "ಮಧುಮಾಸಾಯತಾಯತೇ" ಎಂಬ ಪದ್ಯದ ನಾಲ್ಕು ಚರಣಗಳು ಬಹುಮನೋವೇಧಕವಾಗಿ ಚಿತ್ರಿಸುತ್ತವೆ :

"**ಅನಿರುದ್ಧ ಶಾಂತಿ** ತಳಹದಿಯು ಅದುವೆ ಸಾಕ್ಷಿತ್ವ ಪ್ರಾಣಲಿಂಗ."
**ಪ್ರದ್ಯುಮ್ನಕೃತಿ**ಯು ಮೂಡೀತು ಮುಂದೆ ನಿಃಸ್ಸಂಗ ಶರಣರಂಗ.
**ಸಂಕರ್ಷಣಾಖ್ಯ ಜಯ**ದೇವತರುವ ಮಹಲಿಂಗ ಭಾಗಭೋಗಿ.
**ಶ್ರೀವಾಸುದೇವ ಮಾಯಾ**ವಿ ಬರಲು ಲೀಲಾವತಾರಿಯಾಗಿ.

ಈ ಪದ್ಯದಲ್ಲಿ ಅನಿರುದ್ಧ, ಪ್ರದ್ಯುಮ್ನ ಮೊದಲಾದ ವೈಷ್ಣವಪರಿಭಾಷೆಯೊಂದಿಗೆ ಪ್ರಾಣಲಿಂಗ, ಮಹಲಿಂಗ-ಇತ್ಯಾದಿ ವೀರಶೈವ ಷಟ್‌ಸ್ಥಲಪರಿಭಾಷೆಯನ್ನು ಶ್ರೀ ಬೇಂದ್ರೆಯವರು ಬಳಸಿರುವದನ್ನು ಗಮನಿಸಬೇಕು :

ಪ್ರಾಮಾಣಿಕವಾದ ಆತ್ಮಾನುಸಂಧಾನದ ಅನುಭವದ ಪರಿಭಾಷೆಯೆಲ್ಲ ಸಮನ್ವಯಶೀಲವಾಗಿದೆ ಎಂಬುದನ್ನು ಶ್ರೀ ಬೇಂದ್ರೆಯವರು ತಮ್ಮ ಕಾವ್ಯಸೃಷ್ಟಿಯಲ್ಲೆಲ್ಲ ಧ್ವನಿಪರಂಪರೆಯ ಮೂಲಕ ಸಾಧಿಸುತ್ತಾರೆ.

**ಮಾಯಾಸೇತು :**

ಈ ಎಲ್ಲ ಧ್ವನಿಪರಂಪರೆಯ ಮೂಲಕ ಧ್ವನಿತವಾಗುವ ಪುರುಷಪ್ರಕೃತಿ ಸಂಬಂಧದ ವಿಕಾಸಶೀಲತೆಯನ್ನು ನಾವು ಗುರುತಿಸಿದರೆ ಮನೋವಿಜ್ಞಾನದ ಹೆಸರಿನಲ್ಲಿ ನವ್ಯಕಾವ್ಯದ ತುಂಬ ಲೈಂಗಿಕತೆಯನ್ನು ತುಂಬುವ ಹಾಗೆ ತುಂಬುವದೇ ಮನೋವಿಜ್ಞಾನವೆಂಬ ಭ್ರಾಂತಿ ದೂರವಾಗಲು ಸಹಾಯಕವಾಗುತ್ತದೆ.

ಅನ್ನ-ಪ್ರಾಣಗಳ ಮಿಥುನದಂತೆ ಮೈ ಎರಡು ಕಲೆತು ಬೆರೆತು, ಮನದ ಕಾವಿನಲ್ಲಿ ಕಾಮವನ್ನು ಮೂಡಿಸುತ್ತವೆ. ಆದರೆ ಅಲ್ಲಿಗೇ ನಿಲ್ಲದೆ ಮನದಾಚೆಗೆ ಏನೋ ಇರುವದನ್ನು ಅರಿತು ಚಿತ್ತದಲ್ಲಿ ನಿಷ್ಕಾಮ ರತಿಭಾವವಾಗಿ ರಸಪಾಕ ಪಡೆದು ಅಖಂಡ ಧಾರೆಯಾಗಿ ಅದೇ ಭಗವಂತನಲ್ಲಿ ಚಿರಭಕ್ತಿಯಾಗುತ್ತದೆ. ಅದೇರೀತಿಯಾಗಿ 'ಮಾಯೆ' ಎನ್ನುವದೂ ಬ್ರಹ್ಮದಿಂದ ಜೀವವನ್ನು ಅಗಲಿಸಿದರೂ ಆ ಬ್ರಹ್ಮಪ್ರಾಪ್ತಿಗೆ ಅದೇ ಸೇತುವೆಯಾಗಿದೆ. ಆದ್ದರಿಂದ ಅದೂ ತಿರಸ್ಕರಣೀಯವಲ್ಲ.

ನಿಜವಾಗಿ ಮಾಯೆಯ ಆಟ ನಾವೆಲ್ಲ ತಿಳಿಯಲು ಎಷ್ಟರವರು ? ಭಕ್ತಿಯಿಂದ ಭಗವಂತನನ್ನು ಅರಸುವದೊಂದೇ ನಮ್ಮ ಸಾಧನೆ. ಅನುಗ್ರಹವು ಆತನ ಕರುಣೆಯ ಫಲ.

ಈ ದೃಷ್ಟಿಯನ್ನು ಅರ್ಥ ಮಾಡಿಕೊಂಡರೆ — ಪಡೆದುಕೊಂಡರೆ ಜೀವನದಲ್ಲಿ ಒಂದು ಔಚಿತ್ಯಪ್ರಜ್ಞೆ ಪ್ರಾಪ್ತವಾಗುತ್ತದೆ. ಅವರವರ ಬದುಕಿನ ನೆಲೆ ಅವರವರ ಅನುಭವದ ಸ್ವರೂಪ ನಿರ್ಧರಿಸುತ್ತದೆ. ಮುಖ್ಯವಾಗಿ ನಾವು ನಮ್ಮ ನಮ್ಮ ನೆಲೆಯನ್ನು ಕಂಡು ಆ ನೆಲೆಗೆ ತಕ್ಕ ಎಚ್ಚರ ಪಡೆಯಬೇಕು.

ಮುಖ್ಯ ತತ್ವವೆಂದರೆ ಭಿನ್ನವಾಗಿ-ಎರಡಾಗಿ ಕಾಣುವಲ್ಲಿ ಒಂದರ ಅನುಭವ ಬರುತ್ತದೆ.—

ಕೆಲವರು ಮೋಹದಲ್ಲಿ, ಕೆಲವರು ಊಹೆಯಲ್ಲಿ ಇನ್ನು ಕೆಲವರು ಯೋಗಾನುಭವದಲ್ಲಿ ಸವಿಯನ್ನುಣ್ಣುತ್ತಾರೆ. ಕಾಮಿಯು ನೋವಿನಲ್ಲಿ, ಕವಿಯು ಭಾವದಲ್ಲಿ,ಭಕ್ತ ಜೀವದಲ್ಲಿ ಈ ಸವಿಯನ್ನು ಪಡೆಯುತ್ತಾರೆ.

ಕಾಮಿಯು ಕಾಮತೃಪ್ತಿಯಿಂದ, ಸ್ನೇಹದ ಮೈಮರೆತದಿಂದ ಮೈಗೆ ಭೋಗ ನೀಡುತ್ತಾನೆ. ಕವಿಯು ಭಾವೋದ್ದೀಪನದಿಂದ ಛಂದೋಲಯಗಳ ಮಾಯಾ ಲೀಲೆಯಿಂದ ಮಾತು ಕುಣಿಸಿ ರಂಜಿಸುತ್ತಾನೆ. ಭಕ್ತನಾದವನಿಗೋ— ಭಗವಂತನೊಡನೆ ತನ್ನ ಜೀವ ತಾದಾತ್ಮ್ಯ ಸಾಧಿಸದೆ ತೃಪ್ತಿಯಾಗುವದಿಲ್ಲ.

"ಕಾಮಿ ಬಗ್ಗುವನು ದೇಹಿ ಎಂದು ಮೋಹದಲಿ ಕಾಲಿಗಡಿಸಿ" ಎಂದು ಶ್ರೀ ಬೇಂದ್ರೆಯವರು ಹೇಳುವಾಗ ಕಾಮದ ಪ್ರಾಥಮಿಕ ನೆಲೆಯಲ್ಲಿಯ ದೈನ್ಯಾವಸ್ಥೆಯನ್ನು ಧ್ವನಿಸಿದ್ದಾರೆ. "ದೇಹಿ" ಎಂದರೆ "ಕೊಡು" ಎಂಬ ಅರ್ಥ, ಸರ್ವಸಾಮಾನ್ಯ; ಆದರೆ ಕಾಮಿಯ ಬೇಡಿಕೆ ದೇಹಕ್ಕೆ ಮಾತ್ರ ಸಂಬಂಧಿಸಿದ್ದು ಎಂಬ ಸೂಚನೆಯೂ ಇಲ್ಲಿರುವದನ್ನು ಗಮನಿಸಬಹುದು. ಕಾಮಿಯ ದೈನ್ಯಭಾವ "ಮೋಹದಲಿ ಕಾಲಿಗಡಿಸಿ" ಎಂಬ ಪದಗಳಿಂದ ಸ್ಫುಟವಾಗಿದೆ. ಕವಿಯಲ್ಲಿ 'ದೇಹಿ' ಭಾವಕ್ಕೆಡೆಯಿಲ್ಲ. ಆತನು ತನ್ನ ಅನಂಗವಾದ ಭಾವಕ್ಕೆ ಮಾತು ತೊಡಿಸಿ "ಬಗ್ಗುತ್ತಾನೆ." ಆದರೆ ಭಕ್ತನು ತನ್ನ ಜೀವ ಹಸನು ಮಾಡಿ ದೇವನಾಗಿ ಹಿಗ್ಗುತ್ತಾನೆ :

"ಒಬ್ಬನೊಲಿಸುತಿಹ ಒಂದೆ ನೂಲಿನಲಿ ಎಲ್ಲ ಕಾಮನಾಗಿ" ಇಲ್ಲಿ ಪುನಃ "ಕಾಮ—ಕಾಮು" ಶಬ್ದಗಳ ಲೀಲಾಜಾಲವನ್ನು ಕಾಣುತ್ತೇವೆ. ಒಬ್ಬ ಪುರುಷನೇ ಕಾಮನಾಗಿ ಸಮಸ್ತ ಜೀವಿಗಳನ್ನೂ ಒಲಿಸುತ್ತಿದ್ದಾನೆ. ಅದಕ್ಕೇ ಕಾಮಸೂತ್ರ ಎಂದು ಕರೆದರೆ ತಪ್ಪೇನೂ ಆಗುವದಿಲ್ಲ. ಶ್ರೀ ಬೇಂದ್ರೆಯವರೇ ಈ ಭಾವವನ್ನು, ಕಾಳಿದಾಸನನ್ನು ಬಣ್ಣಿಸುವಾಗ ಸ್ಪಷ್ಟಪಡಿಸಿದ್ದಾರೆ :

"ಇರಲಿ ಬೆಟ್ಟ ನದಿ, ಇರಲಿ ಶಿವನ ಸತಿ, ಇರಲಿ ಕಾಡುನಾಡು
ಇರಲಿ ಕಾಮ-ರತಿ, ಅಜನು-ಇಂದುಮತಿ, ಬರಲಿ ಸಾವು ಕೇಡು ||
ಯಕ್ಷ-ಯಕ್ಷಿ ಇರಲಕ್ಷಿ-ಪಕ್ಷಿ ಕಣ್ಣಂಡ ಪಾತ್ರದಿಂದ
ಪ್ರೇಮದಾಟವನು ಕವಿಯು ಆಡಿಸಿದ ಕಾಮಸೂತ್ರದಿಂದ ||

**ಚೈತನ್ಯಲೀಲೆ :**

ಮುಖ್ಯವಾಗಿ ಶ್ರೀ ಬೇಂದ್ರೆಯವರು ಹೇಳುವಂತೆ ಕಾಳಿದಾಸನಿಗೆ ವಿಶ್ವವೇ ಒಂದು ಚೈತನ್ಯಲೀಲೆಯಾಗಿ ಕಂಡಿದೆ. ಕಾಮವು ನಿಜವಾಗಿ ಅಚೇತನದಲ್ಲಿಯೂ ಚೇತನವನ್ನೇ ಕಾಣುತ್ತದೆ. ಉನ್ನತವಾದ ಕಾವ್ಯರ್ಷಿಯ ದೃಷ್ಟಿಯಿಂದಲೂ ಸರ್ವತ್ರ ಚೈತನ್ಯಲೀಲೆಯೇ ನಡೆದಿದೆ ಎಂದು ಗೊತ್ತಾಗುತ್ತದೆ.

ಈ ದೃಷ್ಟಿಯಿಂದ ಭೂಮಿತಾಯಿ ಆಕಾಶದೊಡೆಯನಿಂದ ಅನಾದಿಕಾಲದಿಂದಲೂ ಅಗಲಿ ವಿರಹಬವಣೆಯಿಂದ ತಿರುಗೇತಿರುಗುತ್ತಿದ್ದಾಳೆ. "ಹೊತ್ತು ಸುತ್ತಿನಿಂದ ಕಣ್ಣನೀರು ಕಡಲಾಗಿ ಕಾದ ಉಗಿಯಾಗಿ ಮೋಡವಾಗಿ" ಬಾನಿನಿಂದ ಎದೆಗೆ ಉದುರಿದಾಗ ಆ ಭೂಮಿತಾಯಿಯ ಹೃದಯ ಹಚ್ಚನಾಗಿ ಆಕೆ ನವಿರುವಳಂತೆ. ಇಂಥದೊಂದು ಚೈತನ್ಯ ಲೀಲೆಗೆ ಸಾಂಕೇತಿಕ ಅಭಿವ್ಯಕ್ತಿಕೊಡುವದಕ್ಕಾಗಿ ಕಾಳಿದಾಸನು ಯಕ್ಷ-ಯಕ್ಷಿಯರ ವಿರಹಾನುಭವವನ್ನು ಕಾವ್ಯವಸ್ತುವನ್ನಾಗಿ ಬಳಸಿಕೊಳ್ಳುತ್ತಾನೆ.

ಯಕ್ಷ-ಯಕ್ಷಿಯರಲ್ಲಿ ಅನ್ನ, ಪ್ರಾಣ, ಮನಗಳೆಂಬ ಮೂರು ಮೈಗಳ ಒಲವು ಮುಪ್ಪುರಿಗೊಂಡು ಅದೇ ಕಿಚ್ಚಾಗಿ, ಆ ಕಾದ ಕಾಮವೇ "ತಂತನದ ನಲುಮೆಯಂತೆ" ಪ್ರೇಮವಾಗಿ ಉಕ್ಕುತ್ತದೆ— ಎಂದು ಶ್ರೀ ಬೇಂದ್ರೆಯವರು ಮೇಘದೂತ ಕಾವ್ಯದ ಸಾರವನ್ನು ಸಂಗ್ರಹಿಸಿದ್ದಾರೆ. ಅವರೇ ಹೇಳುವಂತೆ ಆ ಯಕ್ಷಿಗೆ ಯಕ್ಷನೇ ಮೈ ಉಸಿರು, ಆ ಯಕ್ಷಿಯೇ ಉಸಿರ ಮೈ. ಅವರಿಬ್ಬರೂ "ಕನಸು ಮನಸಿನಲ್ಲಿ ಕಾಂತರಾಗೆ ಏಕಾಂತ ಬೇರೆ ಬೇಕೆ" ?

ಏಕಾಂತರಹಿತವಾದ ಈ ಕಾಂತಾ ಸಮ್ಮಿತಿಯ ಲೀಲೆ ಪರಮಶುದ್ಧವಾದುದು. ಯಕ್ಷನಂತಹನು ಶಪಿತನಾದರೇನು ಆತನಿರುವದು ವಿಂಧ್ಯಶಿಖರದಲ್ಲಿ; ಆತನ

ಚಿತ್ತ ಅಲಕೆಯನ್ನೇ ಚಿತ್ರಿಸುತ್ತಿದೆ. ವಿರಹದಗ್ಧ ಕಾಮವು ಯಕ್ಷನನ್ನು ಉದಾತ್ತತೆಯತ್ತಲೇ ಎತ್ತಿಹಿಡಿದಿದೆ.

"ದೇವಜಾತಿ ಕೆಳಗಿಳಿದರೇನು ಅದು ಬಾನ ಹತ್ತಿರಿಹುದು" ಈ ಚರಣವನ್ನೊಳಗೊಂಡ ಪದ್ಯವು ಅನೇಕ ಸೂಕ್ಷ್ಮ ಧ್ವನಿಗಳಿಂದ ಕೂಡಿದೆ. ಅದೆಲ್ಲದರ ಸಾರ— ಕಾಳಿದಾಸನ ಕೈಯಲ್ಲಿ ಕಾಮವು ಒಂದು ವಿಶಿಷ್ಟ ಉದಾತ್ತತೆಯಿಂದ ಕೆಳಗಿಳಿದಿಲ್ಲವೆಂಬುದೇ ಮುಖ್ಯ ಮಾತಾಗಿದೆ.

ಯಕ್ಷನಿಗೆ ವಿರಹವೇದನೆ ವಿಸ್ಮೃತಿ ತರಲಿಲ್ಲ; ವಿಕೃತಿ ತರಲಿಲ್ಲ. ಆತನ ಆಕ್ಷಿಗಳು ಪಕ್ಷಿಯಾಗಿ ಗಾಳಿಯಲ್ಲಿ ಹಾರುತ್ತವೆ— ತನ್ನ ಒಲವಿನ ಮೂರ್ತಿಯನ್ನು ಕಾಣುವದಕ್ಕಾಗಿ ಶೃಂಗಾರತೀರ್ಥದಲ್ಲಿ ಮಿಂದ ಚಿತ್ತವು ವೈದರ್ಭಿರೀತಿಯಲ್ಲಿ ತನ್ನ ಗಾಂಧರ್ವಪ್ರೀತಿಯನ್ನು ಗಾಂಧರ್ವಗೀತದಲ್ಲಿ ಹಾಡಿಕೊಳ್ಳುತ್ತದೆ.

ಜೀವವು ಎಷ್ಟು ಭವಚಕ್ರಸುತ್ತಿದರೇನು ? ಆತ್ಮತತ್ತ್ವವನ್ನು ಮರೆಯಲು ಸಾಧ್ಯವೇ ? ಹಾಗೆಯೇ ಯಕ್ಷನು ಶಾಪಗ್ರಸ್ತನಾಗಿ ಮರ್ತ್ಯದಲ್ಲಿಳಿದರೂ ಮುಳುಗಿ ಹೋಗಲಾರನು. ಆತನೊಳಗೆ ದಿವ್ಯಸತ್ವ ಅಡಗಿದೆ. ಆತನ ಪತ್ನಿಯನ್ನು ಶ್ರೀ ಬೇಂದ್ರೆಯವರು ಅಂತರಾತ್ಮನಂತೆ ತಪಿಸುತ್ತಿರುವ ಸಾಕ್ಷಿಗೆ ಹೋಲಿಸಿದ್ದಾರೆ. ಆಕೆಯ ನೆಲೆ ಅಲಕೆ ! ಅದು ಕೈಲಾಸದೆಡೆಗಿರುವದೆಂಬ ಮಾತು ಎಷ್ಟೊಂದು ಧ್ವನಿ ಪೂರ್ಣವಾಗಿದೆ!

ಕಾಮ, ಸಾಂಗವಾದಾಗ ಮೈಮರೆವಿಗೆ ಕಾರಣವಾದರೂ ಅನಂಗವಾದಾಗ ಮನಃ ಪರಿಪಾಕಕ್ಕೆ ಕಾರಣವಾಗುತ್ತದೆ. ಹಾಗಾಗುವ ಕಾಮವೇ ಧರ್ಮಕ್ಕೆ ಅವಿರುದ್ಧವಾದುದು. ಅದೇ ವಿಶ್ವಪ್ರೇಮವಾಗಿ ಅರಳುತ್ತದೆ. ಕೊನೆಗೆ ವಿಶ್ವೇಶನಲ್ಲಿಯ ಭಕ್ತಿಯಾಗಿ, ಮುಕ್ತಿ ಕಾರಣವಾಗುತ್ತದೆ. ವ್ಯಕ್ತಿಗತವಾದ ಕಾಮ ವಿಶ್ವಪುರುಷನಲ್ಲಿಯ ಭಕ್ತಿಯಾಗಿ ಬದ್ಧವ್ಯಕ್ತಿಯನ್ನು ಬಟ್ಟಬಯಲಿನಂತೆ ಮುಕ್ತಚೇತನವನ್ನಾಗಿಸುತ್ತದೆ. ಏಕೆಂದರೆ ಅದು ಮೂಲತಃ ಬ್ರಹ್ಮಕಾಮ; ಚೈತನ್ಯಲೀಲೆಗಾಗಿ ಉದ್ಭವಿಸಿದ್ದು, ಬ್ರಹ್ಮತಾದಾತ್ಮ್ಯದಲ್ಲಿಯೇ ಕೊನೆ-ಗೊನೆಕಾಣುತ್ತದೆ.

ಈ ದೃಷ್ಟಿ ಕಾಲಿದಾಸನಲ್ಲಿತ್ತೆಂದು ಕಂಡ ಶ್ರೀ ಅಂಬಿಕಾತನಯದತ್ತರು ಆ ಮಹಾಕವಿಗೆ ತಲೆಬಾಗಿದ್ದಾರೆ. ಇಂಥದೊಂದು ಜೀವನದೃಷ್ಟಿ ಇರಬಹುದೆಂದು ನಮಗೆ ತೋರಿಸಿದ ಶ್ರೀ ಅಂಬಿಕಾತನಯದತ್ತರಿಗೂ ನಾವು ಅವರ ಮಾತಿನಲ್ಲಿಯೇ ವಂದನೆ ಸಲ್ಲಿಸುತ್ತೇವೆ :

"ಜಗವೆ ಜೀವ ತನುವೆಂದು ಮಣಿದೆ ನೀನೇನು ನಿನ್ನ ಮತಿಯು<br>
ರತಿಯು ನಿನ್ನ ರಸದಲ್ಲಿ ನಾಂದು ಆಗಿಹಳು ಮುಕ್ತಿ ಸತಿಯು ||<br>
ಭಕ್ತ ನೀನು ಅನುರಕ್ತ ಓಪ್ಮದಲಿ ಉಳಿದ ಕಣ್ಣು ಭವಿಯು<br>
ಎಲ್ಲ ಕಡೆಗು ಚೈತನ್ಯ ಲೀಲೆ ಕಂಡವನೆ ನೀನೆ ಕವಿಯು ||

§ § § §

# ೧೦ ಬೇಂದ್ರೆಯವರ ಕಾವ್ಯದಲ್ಲಿ ದೈವೋಪಾಸನೆ

ಸಾ. ಶಿ. ಮರುಳಯ್ಯ

## ೧. ಪೂರ್ವಾರ್ಧ :

ದೈವಕಲ್ಪನೆ ಕಣ್ತೆರೆದದ್ದು ವೇದಗಳಲ್ಲಿ; ಅದರ ಅಸ್ತಿತ್ವವನ್ನು ಕುರಿತ ಚರ್ಚೆ ಆರಂಭವಾದದ್ದು ಉಪನಿಷತ್ತುಗಳಲ್ಲಿ, ಆ ದೈವ, ಜಾತೀಯ ಪಕ್ಷಪಾತಿಯಾದದ್ದು ಇತಿಹಾಸ ಕಾಲದಲ್ಲಿ, ತಾನೇ ದೊಡ್ಡವನು ಎಂದು ಒಂದೊಂದು ಪಾರ್ಟಿ ಕಟ್ಟಿ ಅದಕ್ಕೆ ತಾನೇ ನಾಯಕನಾಗಿ ಮೆರೆದದ್ದು ಪುರಾಣಗಳಲ್ಲಿ. ಆದರೆ ಇಂದಿನವರ ದೈವ ಕಲ್ಪನೆಯೇ ಬೇರೆ. ಅದರಿಂದಾಗಿ, ದೈವಾವತಾರದ ಅಥವಾ ಆವಿರ್ಭಾವದ ಬಗೆಗೆ ಕಿಂಚಿತ್ ವಿವೇಚನೆ ನಡೆಸುವ ಅಗತ್ಯವಿದೆ.

"ವೇದಋಷಿಗಳು ದರ್ಶಿಸಿದ್ದು, ಜ್ಯೋತಿಯನ್ನು, ಪೂಜಿಸಿದ್ದು ಪ್ರಕೃತಿಯನ್ನು" [1]. "ಸೂಕ್ಷ್ಮವಾಗಿ ವೀಕ್ಷಿಸಿದರೆ ವೇದಮುನಿಗಳು ಪ್ರಾರ್ಥಿಸಿದ ಸಮಸ್ತ ದೇವತೆಗಳೂ ಒಂದೊಂದು ಅಂಶದ ಪ್ರತಿನಿಧಿಗಳಾದಂತೆ ಒಂದೊಂದಕ್ಕೆ ಸಂಕೇತವಾಗಿ ನಿಲ್ಲುತ್ತಾರೆ. ಪೃಥ್ವಿ ಆಶ್ರಯಕ್ಕೆ ಸಂಕೇತವೆನಿಸಿದರೆ, ಆಪಃ ಬಾಳಿಗೆ ಸಂಕೇತ, ಅದೇ ರೀತಿ ವಾಯು ಆಧಾರ, ಸೋಮ ಜೀವರಸ, ಇಂದ್ರ ಅಜ್ಞಾನ ಅಥವಾ ವೃತ್ರ ಮೊದಲಾದ ದೈತ್ಯಶಕ್ತಿಗಳ ನಾಶಕವಾದ ಜ್ಞಾನವಸ್ತು, ಬೃಹಸ್ಪತಿ ಬುದ್ಧಿ ಅಥವಾ ಪ್ರಚೋದಕ ಶಕ್ತಿ, ರುದ್ರ, ಶಿವ, ಆದಿತ್ಯ, ಜ್ಯೋತಿ, ಅಪಾಂನಪಾತ್ ಸೃಷ್ಟಿಶಕ್ತಿ, ವರುಣ — ಭೋಗ, ಉಷಸ್ — ಸೌಂದರ್ಯ, ಮಿತ್ರ — ಮೈತ್ರಿ, ಪೂಷನ್ — ಪೋಷಣೆ ಹೀಗೆ ಬಾಳಿನ ಒಂದೊಂದು ಅಂಶಕ್ಕೆ ಒಂದೊಂದು ದೈವೀ-ಶಕ್ತಿ ಸಾಂಕೇತಿಕವಾಗಿ ನಿಂತಿದೆ." [2] ಯಾಸ್ಕರ ಅಭಿಮತದಂತೆ ಋಗ್ವೇದದಲ್ಲಿ

---

1. ಸಾ. ಶಿ. ಮರುಳಯ್ಯ, ವೇದಋಷಿದರ್ಶನ—ಸವಿನೆನಪು ಪು. ೬೨೩
2. ಅದೇ ಪು. ೬೨೭

ಸ್ತುತಿಗೆ ಪಾತ್ರರಾದವರು-ಪೃಥ್ವೀಸ್ಥಾನ, ಅಂತರಿಕ್ಷಸ್ಥಾನ ಮತ್ತು ದ್ಯುಸ್ಥಾನ ಎಂಬ ಮೂವರೇ [1] ಎಂದರೂ, ಆ ಸ್ಥಾನದೇವತೆಗಳೂ ಸಹ ಸಂಕೇತಗಳೇ. ಅಗ್ನಿ, ಪೃಥ್ವೀ, ಸೋಮ, ನದೀ, ಬೃಹಸ್ಪತಿ ಮೊದಲಾದ ಪೃಥ್ವೀಸ್ಥಾನ ದೇವತೆಗಳು ಪ್ರಕೃತಿಶಕ್ತಿಯ ಪ್ರತೀಕಗಳು; ಇಂದ್ರ, ವಾಯು, ಅಪಾಂನಪಾತ್, ರುದ್ರ, ಮರುತ್, ಆಪಃ ಇತ್ಯಾದಿಗಳು 'ಸತ್ವ'ಕ್ಕೆ ಸಂಕೇತಗಳು; ದ್ಯಾಃ, ವರುಣ, ಮಿತ್ರ, ಸೂರ್ಯ, ಸವಿತೃ, ಪೂಷನ್, ಅಶ್ವಿನ್, ಉಷಸ್, ರಾತ್ರಿ, ಆದಿತ್ಯಾಃ, ವಿಷ್ಣು ಮೊದಲಾದವರು 'ತೇಜಸ್ಸಿ'ನ ಪ್ರತಿನಿಧಿಗಳು. ಹೀಗೆ ಶಕ್ತಿ, ಸತ್ವ, ತೇಜಸ್ಸುಗಳು ಅಮೂರ್ತರೂಪಗಳೇ ಹೊರತು ಮೂರ್ತರೂಪದವಲ್ಲ, ಆದುದ-ರಿಂದಲೇ ವೇದಋಷಿಗಳು ಪ್ರಕೃತಿಯ ನೆಪದಲ್ಲಿ ನಿರಾಕಾರ ಶಕ್ತಿಯನ್ನು ಕುರಿತು ಸ್ತೋತ್ರ ಮಾಡಿದರು. ಒಟ್ಟಿನಲ್ಲಿ, ಪ್ರಕೃತಿಯ ಔಪಾಸನೆಯಿಂದಲೇ ದೇವತಾ ಕಲ್ಪನೆ ಆರಂಭವಾಗಿದೆ ಎಂದು ಹೇಳಬಹುದು.

ವೇದಕಾಲದ ನಿರಾಕಾರದೈವ, ಸಾಕಾರ ಸ್ವರೂಪಿಯೆನಿಸಿದ್ದು ಉಪನಿಷತ್ಕಾಲ ದಲ್ಲಿ. ಪರಮಾತ್ಮನೆಂಬುವನು ಪುರುಷಾಕಾರ ತಳೆದು, ಸಗುಣಾತ್ಮಕನೆನಿಸಿದ್ದು ಉಪನಿಷತ್ ಋಷಿಗಳ ಭಾವನಾಲೋಕದಲ್ಲಿ. "ಏಕನೇವಾದ್ವಿತೀಯನಾದ ರುದ್ರನು ಸ್ವಶಕ್ತಿಯಿಂದ ಈ ಜಗತ್ತನ್ನಾಳುವನು, ಎಲ್ಲರಿಗೂ ಅವನೇ ಆಧಾರ, ಸಮಸ್ತ ವಿಶ್ವವನ್ನೂ ಸೃಜಿಸಿ, ಅದನ್ನು ಪ್ರಲಯದಲ್ಲಿ ಅಳಿಸುವವನೂ ಅವನೇ, ದಶದಿಕ್ಕುಗಳಲ್ಲಿ ಎತ್ತ ನೋಡಿದಡತ್ತ ಅವನ ಕಣ್, ಅವನ ಮುಖ, ಅವನ ಕೈ-ಕಾಲುಗಳು ಹರಡಿವೆ. ಪಕ್ಷಿಗಳನ್ನು ಸೃಷ್ಟಿಸಿ, ಅವುಗಳಿಗೆ ರೆಕ್ಕೆಗಳನ್ನು ಕಟ್ಟಿ ಆಕಾಶದಲ್ಲಿ ಹಾರಿಸಿದವನೂ ಅವನೇ; ಈ ಭೂ-ಸ್ವರ್ಗಗಳ ನಿರ್ಮಾಪಕನೂ ಅವನೇ." [2] ಅಂತೆಯೇ ಅವನು "ಈ ವಿಶ್ವವ್ಯಾಪಿಯಾಗಿರುವುದಲ್ಲದೆ, ವಿಶ್ವದ ಮೇಲೆ ದಶಾಂಗುಲ ಹೆಚ್ಚಾಗಿ ಉಳಿದಿದ್ದಾನೆ." [3] —ಈ ಬಗೆಯ ಬಣ್ಣನೆಗಳಿಂದ ದೇವನೆಂಬುವನು ಸಗುಣ ಸಾಕಾರನಾದದ್ದು ತಿಳಿಯುತ್ತದೆ. "ಒಟ್ಟಾರೆ ವೇದ-ಕಾಲದ ಕಡೆಗೆ ನೋಡಿ ತರುವಾಯ ಉಪನಿಷತ್ತುಗಳ ಕಡೆಗೆ ನೋಡಿದರೆ ನಮ್ಮ ವೈದಿಕ ಋಷಿಗಳ ಮನಸ್ಸು ಪ್ರಾರ್ಥನೆಯಿಂದ ತತ್ವವಿಚಾರದ ಕಡೆಗೂ, ಸೂಕ್ತಿ-ಗಳಿಂದ ಅಂತಜ್ಞಾನದ ಕಡೆಗೂ ಏಕದೇವತಾಪ್ರಧಾನ,ಅನೇಕ ದೇವತಾವಾದದಿಂದ ಅನುಭವಸಿದ್ಧ ಏಕದೇವತಾವಾದದ ಕಡೆಗೂ ವಿಕಾಸಹೊಂದುತ್ತಿರುವುದು

---

1. ಋ. ಸಂ. X-158-1
2. ಶ್ವೇ. ಅ. 3. ಮಂ. 2-3
3. ಅದೇ ಅ. 3. ಮಂ. 14

ಕಂಡುಬರುವುದು. ” [1]

ಪುರಾಣಕಾಲದ ದೈವಕ್ಕಾಗಲೀ ಆಕಾರ ವಿಕಾರಗಳೆಲ್ಲ ಮೂಡಿ, ಅದರಲ್ಲಿ ನೀನು ಕೀಳು, ನಾನು ಮೇಲು ಎಂಬ ಭಾವನೆಯೂ ಬೆಳೆದಿದೆ. ಅನೇಕ ವೇಳೆ ಒಂದು ಮತ್ತೊಂದರೊಡನೆ ಸ್ಪರ್ಧೆಗೆ ಇಲ್ಲವೇ ಜಗಳಕ್ಕೆ ನಿಂತಿರುವುದೂ ಉಂಟು. ಹದಿನೆಂಟು ಪುರಾಣಗಳೂ, ಹದಿನೆಂಟು ಉಪಪುರಾಣಗಳೂ ಮಾಡಿದ್ದು ಇಷ್ಟೆ- ಶಿವ ದೊಡ್ಡವನು ಇಲ್ಲವೇ ವಿಷ್ಣು ದೊಡ್ಡವನು ಎಂಬ ಸ್ಪರ್ಧೆ ಹುಟ್ಟಿಸಿದ್ದು, ಅಥವಾ ಹೆಚ್ಚಿಸಿದ್ದು. ಅನಂತರ ಅವತಾರಗಳ ಕಲ್ಪನೆ ಬಹಳವಾಗಿ ಬೆಳೆದು ಮಾನಸಿಗೂ ದೈವತ್ವವನ್ನು ಆರೋಪಿಸಿ, ಪೂಜಿಸುವ ಪದ್ಧತಿ ಬೆಳೆದುಬಂದಿತು. ಹೀಗಾಗಿ ಪ್ರಾಚೀನ ಯುಗಗಳಲ್ಲಿನ ಮೂವತ್ತುಮೂರು ಕೋಟಿ ದೇವತೆಗಳಾದುವು. ಅಣುರೇಣು ತೃಣಕಾಷ್ಠ- ಗಳಲ್ಲೂ ಪರಮಾತ್ಮನು ಅಡಗಿರುವನೆಂದು ನಂಬಿ, ಸಕಲವೂ ಪರಮಾತ್ಮನ ಸ್ವರೂ- ಪವೇ, ಪೂಜಾರ್ಹವೇ ಎಂಬ ಭಾವನೆ ಬೆಳೆಯಿತು. ಆದರೆ ಆಧುನಿಕ ಕವಿಗಳು ಕಂಡ ದೈವವೇ ಬೇರೆ. “ಜ್ಯೋತಿಯಿರ್ಪೆಡೆಯಲ್ಲಿ ಭಗವದ್ ವಿಭೂತಿಯಂ ದರ್ಶಿಸುತೆ ” [2] ಸಾಗಿದ್ದಾರೆ. ಅದರಿಂದಾಗಿ ಕವಿತಿಲಕ ಬೇಂದ್ರೆಯವರ ಕಾವ್ಯಮಂದಿರದಲ್ಲಿ ಬಹುಮುಖೀ ದೈವದ ದರ್ಶನ ನಮಗಾಗುತ್ತದೆ.

ಬೇಂದ್ರೆಯವರ ಆರಾಧನಾ ದೇವತೆಗೆ ಅನಂತಮುಖಗಳು. ಇದು ಸಹಜ; ಸಾಧುವೂ ಹೌದು. ಏಕೆಂದರೆ ಇಂದು ನಮ್ಮ ದೇಶದ ಯಾವ ಮೂಲೆಯ ಕವಿಯೇ ಆಗಿರಲಿ, ಅವನು ಹುಟ್ಟಿದಂಥ ಯಾವ ಜಾತಿಯವನೇ ಆಗಿರಲಿ, ಭಾವನೆಯಲ್ಲಂತೂ ಅವನು ಭಾರತೀಯ. ಹಲವು ಪ್ರಾಚೀನ ಕವಿಗಳಂತೆ ಅವನು ಯಾವುದೋ ಒಂದು ಧರ್ಮದ ಸ್ವರ್ಣಸಂಕೋಲೆಯಲ್ಲಿ ಬಂಧಿತನಾಗಿಲ್ಲ; ಯಾವುದೋ ಒಂದು ಕೋಮಿನ ಕಟ್ಟುಪಾಡಿನಲ್ಲಿ ಸಿಕ್ಕು ಅವನ ಶಕ್ತಿ ಸ್ಥಗಿತವಾಗಿಲ್ಲ. “ಜಿನ, ಹರಿ, ಅಲ್ಲಾ, ಶಿವನೇ ಎಲ್ಲಾ ಒಬ್ಬನಲ್ಲವೇ ಎರಡಿಲ್ಲಾ!” [3] ಎಂಬ ವಿಶ್ವವಿಶಾಲ ಭಾವನೆ ಅವನದು. ತನ್ನ ಆತ್ಮ ಅರ್ಪಣ ಕೃತಿಗಳಿಂದ ದೀಪ್ತವಾಗಿದ್ದರೂ ಇಂದಿನ ಕವಿ ವಿಶ್ವಸಾಮರಸ್ಯದ ಕಡೆಗೆ ತನ್ನ ದೃಷ್ಟಿ ಹರಿಸಿರುವುದು ಶ್ಲಾಘನೀಯವಾದದ್ದು. ಕವಿ ಬೇಂದ್ರೆಯವರ ಕಾವ್ಯವಲಯದಲ್ಲಿ ಈ ಭಾವನೆ ಹೇಗೆ ಬೆಳೆದು ವಿಕಾಸಹೊಂದಿದೆ ಎಂಬುದನ್ನು ಈಗ ಗುರುತಿಸೋಣ.

*　　*　　*　　*　　*

1. ರಂ. ರಾ. ದಿವಾಕರ, ದ. ರಾ. ಬೇಂದ್ರೆ, ಶಂ. ಬಾ. ಜೋಶಿ ಇವರ ಉಪನಿಷತ್ ರಹಸ್ಯ (Prof. R. D. ರಾನಡೇಯವರ A Constructive Survey of Upanishadic Philosophy-ದ ಭಾಷಾಂತರ 1928) ಪು 3.
2. ಶ್ರೀ ಕುವೆಂಪು, ಶ್ರೀರಾಮಾಯಣದರ್ಶನಂ - ಕವಿಶೈಲ ದರ್ಶನ-೧೪೯-೧೫೦ನೆಯ ಸಾಲುಗಳು.
3. ಅಂಬಿಕಾತನಯದತ್ತ, ಅರಳು-ಮರಳು-ಪು. ೧೧೨

## ೨. ಉತ್ತರಾರ್ಧ :

ಅನ್ಯಶಕ್ತಿ ಸಾಹಿತ್ಯಗಳು ಬೇಂದ್ರೆಯುವರ ಮೇಲೆ ಪ್ರಭಾವ ಬೀರಿದಷ್ಟು ಪ್ರಮಾಣದಲ್ಲಿ ಬೇರಾವ ಕನ್ನಡ ಕವಿಯ ಮೇಲೂ ಬೀರಿಲ್ಲ.[1] ಆದರೆ ಬೇಂದ್ರೆ ಬೇಂದ್ರೆಯೇ! ಅವರು ಯಾವ ಶಕ್ತಿಗೂ ಬಲಿಯಾಗಿಲ್ಲ, ಯಾವ ಸಾಹಿತ್ಯಕ್ಕೂ ಶರಣಾಗಿಲ್ಲ, ವೇದ, ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಭಾಗವತಗಳು, ವಚನ ವಾಙ್ಮಯ, ದಾಸ ವಾಙ್ಮಯಗಳು, ಜೈನ ಬೌದ್ಧಾದಿ ಧರ್ಮಗಳು, ಅಗಸ್ತ್ಯರಿಂದ ಅರವಿಂದರ ವರೆಗೆ, ಜಗನ್ಮಾತೆಯಿಂದ ಶ್ರೀಮಾತೆಯ ವರೆಗೆ, ಸಗುಣ ನಿರ್ಗುಣ ದೇವತೆಗಳೂ, ಸಾಕಾರ ನಿರಾಕಾರ ಬ್ರಹ್ಮರುಗಳೂ, ಎಲ್ಲರೂ ದಾಳಿ ನಡೆಸಿದ್ದಾರೆ ಬೇಂದ್ರೆಯುವರ ಮನಃಸಾಮ್ರಾಜ್ಯದ ಮೇಲೆ. ಆದರೆ ಪ್ರಭಾವ ಎಷ್ಟೇ ಪ್ರಬಲವಾಗಿದ್ದರೂ ಬೇಂದ್ರೆತನ ಮಾತ್ರ ಎಲ್ಲೂ ಬತ್ತಿಲ್ಲ, ಬಾಡಿಲ್ಲ. ಎಲ್ಲ ದರ್ಶನಗಳನ್ನೂ, ಜ್ಯೋತಿಯನ್ನೂ ಅರಗಿಸಿ, ಅಡಗಿಸಿ ತನ್ನದನ್ನಾಗಿ ಮಾಡಿಕೊಳ್ಳುವ ಶಕ್ತಿ ಅದಕ್ಕಿದೆ. ಹಸುವು ಹಸಿರುಹುಲ್ಲು, ಕಾಳು, ಕಡ್ಡಿ ಏನೆಲ್ಲ ತಿಂದರೂ, ತಿಂದದ್ದನ್ನು ಪಚನಗೊಳಿಸಿಕೊಂಡು ಹಾಲನ್ನಾಗಿಸುವ ಶಕ್ತಿಯನ್ನು ತಾನೇ ಪಡೆದಿರುವಂತೆ ಸ್ವೀಕರಿಸಿದ್ದನ್ನೆಲ್ಲ ತನ್ನದನ್ನಾಗಿಸಿಕೊಂಡು ಸಾಹಿತ್ಯ ಸುಧೆಯಲ್ಲಿ ನಾದದ ನವನೀತ ತೆಗೆವ ಗಾರುಡಿವಿದ್ಯೆ ಅಂಬಿಕಾತನಯರಿಗಿದೆ. ಆದುದರಿಂದಲೇ ಅವರು ಕಂಡು ಆರಾಧಿಸಿದ ದೈವದ ಸ್ಥೂಲರೂಪವನ್ನು ಒಂದೆರಡು ಮಾತುಗಳಲ್ಲಿ ಹಿಡಿದಿಡಬಹುದು.

### ಸಗುಣ ದೇವೋಪಾಸನೆ :

ಬೇಂದ್ರೆಯುವರ ದೃಷ್ಟಿಯಲ್ಲಿ 'ಭಾಽವಾಽ ಇದ್ದಾಂಗ ದೇವಾ'[2] ಆದರೂ ಆರ್ಷೇಯ ಮಾರ್ಗ ಅಳಿದಿಲ್ಲ ಅವರಲ್ಲಿ. ನಮ್ಮ ಪ್ರಾಚೀನ ದಾರ್ಶನಿಕರು ಕಂಡು

1. ಸೂರ್ಯಪಾನದಲ್ಲಿ—ಗಾಂಧೀಜಿ, ಅಲ್ಲಮಾದಿ ಶಿವಶರಣರು, ನಿಜಗುಣ ಶಿವಯೋಗಿ, ಹರಿದಾಸರು, ವೇದ, ಉಪನಿಷತ್ತು—ಇವುಗಳ ಪ್ರಭಾವವನ್ನು ಕಂಡರೆ, ಹೃದಯ ಸಮುದ್ರ ಮತ್ತು ಚೈತ್ಯಾಲಯಗಳಲ್ಲಿ ಅರವಿಂದ ಹಾಗೂ ಶ್ರೀಮಾತೆಯರ ಪೂರ್ಣ ಪ್ರಭಾವವಿದೆ; ಮುಕ್ತಕಂಠಕ್ಕೆ ಶ್ರೀ ರಮಣಮಹರ್ಷಿಗಳು ಸ್ಫೂರ್ತಿ; ಸಖೀಗೀತದಲ್ಲಿ ರವೀಂದ್ರರು; ಉಯ್ಯಾಲೆಯಲ್ಲಿ ರತ್ನಾಕರ, ಕವಿಶಿಷ್ಯ, ವಾಲ್ಮೀಕಿ, ಬುದ್ಧ, ವಿದ್ಯಾರಣ್ಯ ಮೊದಲಾದವರು; ಗಂಗಾವತರಣದಲ್ಲಿ ಪಂಪ, ಸಿದ್ಧರಾಮರುಗಳೂ; ಮುಗಿಲ ಮಲ್ಲಿಗೆಯಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು, ವಿವೇಕಾನಂದರು; ಇತ್ತೀಚಿನ ಕವನಗಳಲ್ಲಿ ಬೆಂಗಳೂರಿನ ಪಾಂಡುರಂಗ (White Field)ದಲ್ಲಿ ಬೆಳಕು ಬೀರುತ್ತಿರುವ ಪುಟ್ಟಪರ್ತಿಯ ಸ್ವಾಮಿ ಶ್ರೀ ಸಾಯಿಬಾಬಾರವರು — ಇವರೆಲ್ಲರ ಪ್ರಭಾವ ಆಗಿದೆಯೆಂದು ಸ್ಥೂಲವಾಗಿ ಹೇಳಬಹುದು.

2. ಮುಗಿಲ ಮಲ್ಲಿಗೆ—ಸಣ್ಣ ಸೋಮವಾರ, ಪು. ೨೬

ಕಂಡರಿಸಿದ ಹಲವು ದೈವಗಳನ್ನು ಕುರಿತು ಧ್ಯಾನ ಮಾಡಿದ್ದಾರೆ. ಮೊದಲನೆಯದಾಗಿ—

ಬಯಲಾಗಿ ಒಳಗೆ, ಬಾನಾಗಿ ಹೊರಗೆ, ಇಹುದೊಂದೆ
ಜ್ಯೋತಿಯಣ್ಣ;
ಗಾಳಿಯಲಿ ಸುತ್ತಿ ಬೆಳಕಾಗಿ ಮುತ್ತಿ ತೆರೆಯುವದು
ಏಳು ಬಣ್ಣ.
ಮೇಲಿಂದ ಬಂದು ಕೆಳಗಿಳಿದುಕೊಂಡು ಮೆಟ್ಟಲವ
ನೆಲಿಸುತಿಹುದು;
ಬೆನ್ನಾಗಿ ಹಿಂದೆ, ಮೈಯಾಗಿ ಮುಂದೆ ಅಂಗಾಂಗ
ಒಲಿಸುತಿಹುದು. [1]

—ಎಂಬ ಈ ಆತ್ಮಪ್ರಜ್ಞೆಯ ಹಿಂದೆಯೇ, ಅನಾದಿಕಾಲದಿಂದಲೂ ಅನವರತವೂ ಪ್ರವಹಿಸುತ್ತಿರುವ ನಿಸರ್ಗಾಂತರ್ಗತವಾದ ಸಿಗೂಢ ಶಕ್ತಿಯನ್ನು—

ನಿನ್ನ ನೆನವೇ ನನಗೆ ಪ್ರತಿ ಪ್ರತಿಭೆಯಾಗಿರಲು
ನಿನ್ನ ಮೂರ್ತಿಯು ಕಾವ್ಯವಸ್ತು ಮಾಡಿ,
ಇನ್ನು ಮುನ್ನಿನ ಜನ್ಮ ಹಾಡಿ ಉದ್ಧರಿಸುವೆನು
ನಿನ್ನ ತೊಡೆಯುರಲೆನಗೆ ಪವಡಿಸಲು ಆಡಿ. [2]

ಎಂದು ಪ್ರಾರ್ಥಿಸಿದ್ದಾರೆ. ಅನಂತರದಲ್ಲಿ ಗಣಪತಿಯೇ ಮೊದಲಾದ ದೇವತೆಗಳನ್ನು ಉಪಾಸಿಸಿದ್ದಾರೆ.

ಸಾಧಕನಲ್ಲಿ ಶೋಧಕ ದೃಷ್ಟಿಯನ್ನು ಬೆಳಗಿಸಿ ಬೆಳೆಯುವ ನಾದಮೂಲ ಸ್ವರೂಪನೆಂದು [3] ಗಣಪನನ್ನು ಬಣ್ಣಿಸಿ,

ಹ್ರೀಂಕಾರದುಗಮ, ಶ್ರೀಕಾರಶಿಖರ, ಓಂಕಾರ ಶಂಖನಾದಾ
ಅಲ್ಲಿಲ್ಲವಾದ ತತ್ ಸ್ವಗತವಾದ ನಿಃಶಬ್ದ ರಸಾಸ್ವಾದಾ
ಅದು ಇಲ್ಲೆ, ಅಲ್ಲೆ, ಜಗದೆಲ್ಲೆಯಲ್ಲೆ ಮೋದಕದ ಶುದ್ಧಬೋಧಾ
"ಗಣಪ ನಿಮ್ಮ ಗಂಡಸ್ಥಳಕೆ ಕೋಟಿ ಸಪ್ತ ನಮಸ್ಕಾರ"

1. ಅರಳು-ಮರಳು-ಹೃದಯಸಮುದ್ರ-ಆತ್ಮಪ್ರಜ್ಞೆ ಪು. ೧೭೯.
2. ಗರಿ, ಶಕ್ತಿ — ಪು. ೨೪.
3. ಉತ್ತರಾಯಣ, ಗಣಪತಿರಾಯ, ಪು. ೪೫.

ಮಾತೃಹೃದಯ ನೆನೆನೆನೆಯೆ ನನೆಯುವಾ ದಿವ್ಯ
ಚಮತ್ಕಾರ. [1]

—ಎಂದು ಅನನ್ಯಭಕ್ತಿಯಿಂದ ನಮಸ್ಕರಿಸಿದ್ದಾರೆ.

ಅಂಚೆ ಏರಿ ನೀರಿನಾಕೆ
ಗಾಳಿಯಲ್ಲಿ ಸುಳಿದಳೋ
ಬೆಳಕಿನಲ್ಲಿ ಬೆಳೆದಳು. [2]

ಇವಳೇ ವೇದವಾದಗಳಾದಿಯಿಂದಲೂ ನಡೆದು ಬಂದ ರಸವತಿ ಶಾರದೆ. ಆಕೆಯನ್ನು,

ಜಯದೇವಿ ಜಯದೇವಿ ಜಯ ಶ್ರೀ ಶಾರದೆಯೇ
ನಾಲಗೆ ರಂಗವ ಮಾಡಿದೆ, ಮನೆ ಮಾಡಿದೆ ಎದೆಯೇ
|| ಜಯದೇವಿ ||

.................................................................

ವೀಣಾಪಾಣಿಯೆ, ವಾಣಿಯೆ, ಓ ಬ್ರಹ್ಮನ ರಾಣೀ
ಮರೆವನು ಹೊಡೆದೋಡಿಸಿ ಕೊಡು ಹೊಸ ಅರಿವನು ಜಾಣೀ
ನೀಹಾರಕ ವಸನೇ, ಶತ, ಶತ ತಾರಕ ವೇಣೀ
ನವಕಲ್ಪದ, ನವಕಲ್ಪನೆ, ನವನಾಕ ಶ್ರೇಣಿ || ಜಯದೇವಿ || [3]

—ಎಂದು ಭಜಿಸಿದ್ದಾರೆ.

'ಹೇ ರಖುಮಾಕಾಂತಾ' [4]

ಎಂಬ ಗೀತೆಯಲ್ಲಿ, ಪುರಂದರ ವಿಠ್ಠಲನು ಚಂದ್ರಭಾಗೆ ಮತ್ತು ಭೀಮಾ ನದಿಗಳ ಸಂಗಮದಲ್ಲಿ ಭಕ್ತಿ ಸೀಮೆಯನ್ನು ಕಟ್ಟಿದರೆ ಸಾಲದು ಭಾರತೀಯರ ಭೇದ-ಭಾವಗಳನ್ನು ದೂರಮಾಡಿ, ಕರ್ನಾಟಕ-ಮಹಾರಾಷ್ಟ್ರಗಳಲ್ಲಿ ಭಾವೈಕ್ಯತೆಯನ್ನು ಮೂಡಿಸು ಎಂದು ಬೇಡಿದ್ದಾರೆ.

1. ಮುಗಿಲ ಮಲ್ಲಿಗೆ, ಗಣಪಸ್ತುತಿ, ಪು-೩.

2. ಗಂಗಾವತರಣ, ಸರಸ್ವತೀಸೂಕ್ತ, ಪು. ೬೪

3. ಉತ್ತರಾಯಣ, ಶಾರದೆಯೇ, ಪು. ೫೨

4. ಅದೇ, ಪು. ೪೬

ಸದಾ ಆಸೆಯ ಅಂತಃಪುರದಲ್ಲೇ ಅಡಗಿದ್ದು, ಎಲ್ಲ ಚೆಲುವಿಗೂ, ಎಲ್ಲ ನಲವಿಗೂ ತೌರಾದ ತಾಯಿ ಮಹಾಲಕ್ಷ್ಮಿಯನ್ನು ಕುರಿತ ಪ್ರಾರ್ಥನೆ[1] ತುಂಬಾ ಚೆನ್ನಾಗಿದೆ—

ಕಮಲವನ ಸಂಚಾರಿಣಿಯೆ ಮಹಾಲಕ್ಷ್ಮಿ ಬೇಕೇ ಆಸನ
ಅರುಣಚರಣೇ ಮಾಡು ನನ್ನೀ ಹೃದಯವನೆ ಸಿಂಹಾಸನ.
ವಿಶ್ವಸುಂದರಿ ನಿಖಿಲಜಗದಾನಂದಕರಿ ಹೇ ಯೋಗಿನೀ
ವಿರಸ ಹೃದಯತ್ಯಾಗಿ ನೀರಸ ಭಕ್ತಿ ಬಂಧನ ಭೋಗಿನೀ.
ಪಾಪದೂರೇ ಮಾಡು ನನ್ನನು ನಿನ್ನನುಗ್ರಹದಾಗರಾ
ಮಧುರ ಕೌಶಲ ಮಾಯೆಯಲಿ ಮಾಡೆನ್ನ ಪ್ರೇಮದ ಸಾಗರಾ. [2]

ಇದೇ ರೀತಿ 'ಒಳಗನುದ್ದೀಪಿಸುತ ಒಳಗೆ ಕುಳಿತ' ಶ್ರೀಲಲಿತೆಯನ್ನೂ,[3] ಅಗ್ನಿಯನ್ನೂ[4] ಕುರಿತ ಭಕ್ತಿಗೀತೆಗಳಿವೆ. ಬೇಂದ್ರೆಯವರ ಭಕ್ತಿಯ ನರುಗಂಪು ಬೀರಬಲ್ಲ ಮತ್ತೊಂದು ಅಷ್ಟಕ ನೃಸಿಂಹ ಸ್ತೋತ್ರ.[5] ಅದರಲ್ಲಿ ಕವಿಯ ಸರ್ವ ಸಮರ್ಪಣ ಭಾವ ಬೆರೆತಿದೆ—

ನಾನು ಕಾಲುಮಣೆಯು ತಮ್ಮ ಮಹಾಪಾದ ಪೀಠಿಕೆ
ತಮ್ಮಡಿಗಳು ಮುಟ್ಟಿದೊಡನೆ ಅರಳಿ ಕಮಲವಾದೆನು
ಆ ಕಮಲದಲ್ಲಿ ತಾವು ಕಮಲೆಯೊಡನೆ ವಾಸಿಸಿ
ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿಮಾಮ್ ||

ಅಣುರೇಣುವು ತಮ್ಮದಿಹುದು,'ನಾನು' ಎಂಬುದಾಟವು
ತಾವೆ ಜೀವನಾವೆಯಲ್ಲಿ ಕ್ರೀಡೆಯಾಡುತಿರುವಿರಿ
ತಾವು ನಮ್ಮ ರೇವು ನಾವು ಎತ್ತ ಹೋಗಿಬಂದರು
ನಾರಾಯಣ ನಾರಾಯಣ ಶ್ರೀನೃಸಿಂಹ ಪಾಹಿಮಾಮ್ ||

ಶ್ರೀ ಗುರುಪ್ರಸಾದೋಽಸ್ತು । ಶ್ರೀ ಮಾತೃಪ್ರಸಾದೋಽಸ್ತು ।

---

1. ಮುಗಿಲಮಲ್ಲಿಗೆ, ಮಹಾಲಕ್ಷ್ಮಿ, ಪು. ೭
2. ಅರಳು-ಮರಳು, ಮಹಾಲಕ್ಷ್ಮಿ, ಪು. ೩೨೩ (ಚೈತ್ಯಾಲಯ)
3. ಗಂಗಾವತರಣ, ಲಲಿತೆ, ಪು. ೯೮
4. ಅದೇ, ಅಗ್ನಿಸೂಕ್ತ, ಪು. ೯೭
5. ಅರಳು-ಮರಳು-ಸೂರ್ಯಪಾನ, ಪು. ೯೩-೯೪

ಭದ್ರಂ ಶುಭಂ ಮಂಗಳಂ.

ಇಂಥದೇ ಮತ್ತೊಂದು ಭವ್ಯ ಭಾವಗೀತೆ—

ಅವತರಿಸು ಬಾ ನಾರಾಯಣಾ
ಎತ್ತಿ ನನ್ನ ಮೇಲಕೆ ಚಿದ್ಘನಾ
ಈ ಜೀವವಾಗಲಿ ಪಾವನಾ ‖ [1]

ಕವಿವರ ಬೇಂದ್ರೆಯವರ ಸಗುಣ ದೈವೋಪಾಸನೆಯ ಮಾರ್ಗಗಳು ನೂರಾರು. ಮೇಲೆ ಪೂಜಿಸಿದ ದೇವತೆಗಳೇ ಅಲ್ಲದೆ ಮಹಾಪುರುಷರಲ್ಲೂ ಆ ದೇವನನ್ನು ಗುರುತಿಸಿದ್ದಾರೆ. [2] ಆದರೆ,

ಒಂದೆ ಸತ್ವಕೆ ಹಲವು ಹೆಸರು ಬಲ್ಲವರ ಬಾಯಿಯಿಂದ
ಒಬ್ಬ ದೇವ ಹಲವಾರು ನಾಮ ಎಂದೊಬ್ಬ ಶರಣನೆಂದ. [3]

ಈ ಭಾವನೆ ಅವರಲ್ಲಿ ಸ್ಪಷ್ಟವಿದೆ. ಅನೇಕತೆಯಲ್ಲಿ ಏಕತೆಯನ್ನು ಕಂಡ ಕಾಣ್ಕೆ ಅವರದಾಗಿದೆ.

**ತಾಯಿ ದೇವರು :**

ಬೇಂದ್ರೆಯವರನ್ನು ಪಡೆದ ತಾಯಂದಿರು ಐವರು. ವಿಶ್ವಮಾತೆ, ಭೂಮಿತಾಯಿ, ಭಾರತಮಾತೆ, ಕನ್ನಡದ ತಾಯಿ, ಹಾಗೂ ಹೆತ್ತತಾಯಿ ಅಂಬಿಕೆ. ಈ ಐದು-ಐದೆಯರ ಪಂಚಪ್ರಾಣಗಳಾಗಿ ದತ್ತಾತ್ರೇಯನೆಂಬ ಜೀವದೇಹನಿದ್ದಾನಂತೆ! [4] ಅವನನ್ನು ರೂಪಿಸಿದ ರೂವಾರಿ ಶಕ್ತಿಗಳು ಕ್ರಮವಾಗಿ—

'ಮೈಯು ನೀನು, ನೀ ಮಿಡುಕ, ನನ್ನ ಒಳುಬಗೆಯ ತಿಳಲು ನೀನು.' [5]

ಆದ ವಿಶ್ವಮಾತೆ, 'ಮೊದಲಗಿತ್ತಿಯಂತೆ ಮೆರೆಯುತಿಹ' [6] ಭೂಮಿತಾಯಿ, 'ತಾಯಿ ಸಿಂಹವಾಹಿನೀ, ಗಜಾಂತಲಕ್ಷ್ಮಿದಾಯಿನೀ, ಅತುಲೆ ಸರ್ವಸಾಹಿನೀ, ವಿಶ್ವ-

---

1. ಅರಳು-ಮರಳು, ಹೃದಯ ಸಮುದ್ರ, ಅವತರಿಸು ಬಾ, ಪು. ೧೭೧
2. ಬೇಂದ್ರೆಯವರ ಇಪ್ಪತ್ತೆರಡು ಕವನ ಸಂಗ್ರಹಗಳಲ್ಲೂ ಕಾಣಬಹುದು.
3. ಅರಳುಮರಳು-ಸೂರ್ಯಪಾನ-ಚೆನ್ನಕೇಶವನ ಸಾಕ್ಷಿಯಲ್ಲಿ, ಪು. ೫೬
4. ಗಂಗಾವತರಣ, ನಾನು, ಪು. ೧೨
5. ಅರಳುಮರಳು-ಹೃದಯ ಸಮುದ್ರ-ಮೈಯು ನೀನು, ಪು. ೧೪೭
6. ನಾದಲೀಲೆ, ಮೊದಲಗಿತ್ತಿ, ಪು. ೪೧

ಮೋಹಿನೀ' [1] ಆದ ಭಾರತಾಂಬೆ, ಈ ಭಾರತಾಂಬೆಯು 'ಪೂರ್ವಪಶ್ಚಿಮ ಘಟ್ಟದಲ್ಲಿ ಪಟ್ಟಿರುವಂಥ ನಾಡನ್ನೆ ಸೂಗುತಿಹಳೋ'; [2] ಆ ನಾಡು ಕನ್ನಡ ನಾಡು, ಆ ನಾಡಾಕೆ 'ಅಂಬಿಕಾತನಯದತ್ತನ ತೊದಲು ಮಾತೆ!' [3] ಇವಳ ಬಗೆಗೆ ಕವಿಗೆ ಅಭಿಮಾನ ಬಹಳ. 'ನೀವಾರಲಾ, ನೀವಾರಲಾ' [4] ಎಂದು ನಮ್ಮನ್ನು ಪ್ರಶ್ನಿಸುತ್ತಾ,

ನೀವು ತುಳಿವೀ ತೊಡೆಗಳೋ
ನಿಮ್ಮೆಡೆಗಳೊ!
ನೀವು ಆಡುವ ಬಾಯಿಯೋ
ಅದೆ ತಾಯಿಯೋ!

ನೀವು ಅಪ್ಪುವ ತೋಳೊಳೇ
ನೀವು ಬದುಕುವ ಬಾಳೊಳೇ

ತಾಯಿ–ಎದೆ ತುಂಬಿರುವದಣ್ಣಾ
ಬರಿದೆ ಮರುಗುವಿರೇತಕೆ
ಬನ್ನಿ ತಾಯಿಯ ಜೀತಕೆ
ಮೆಟ್ಟಿ ನಡೆದುದೆ ಕನ್ನಡ
ಮುಟ್ಟಿ ನುಡಿದುದೆ ಕನ್ನಡ
ಮಾಡಿರಯ್ಯಾ ಮಾಟವಾ
ಹೂಡಿರೋ ಹೊಸ ಆಟವಾ [5]

—ಎಂದು ಕನ್ನಡಿಗರಿಗೆ ಕರೆಕೊಟ್ಟು,

ರಸವು ಇದ್ದುದೆ ಹೃದಯವೋ!
ಇಳೆಯ ದೈವವು ಸದಯವೋ! [6]

ಎಂಬ ಅರಿವು ಉಂಟುಮಾಡಿದ್ದಾರೆ.

---

1. ಅರಳು ಮರಳು–ಸೂರ್ಯಪಾನ–ನವಯುಗಾರಂಭ, ಪು. ೨೪
2. ನಾದಲೀಲೆ, ಕನ್ನಡದ ಕಂದವ್ವನ ಲಾಲಿ, ಪು. ೮೬
3. ಅದೇ, ಪು. ೮೩
4. ಗಂಗಾವತರಣ, ನೀವಾರಲಾ, ಪು. ೪೪
5. ಅದೇ,
6. ಅದೇ, ಪು. ೪೫

ಈ ಪಂಚದೇವತೆಯರ ಜೊತೆಯಲ್ಲಿ 'ಗಂಗೆ ನೀನು ಗೌರಿ ನೀನು' ಎನ್ನಿಸಿ-ಕೊಂಡ 'ಧಾರವಾಡದ ತಾಯಿಯೂ' [1] ಸೇರಿದ್ದಾಳೆ. ಬೇಂದ್ರೆಯವರ ಮಾತೃ-ಪೂಜೆಯ ಮಾಲಿಕೆಯಲ್ಲಿ ಅರವಿಂದರ ಶ್ರೀಮಾತೆಯವರೂ ಇದ್ದಾರೆ.

## ಪ್ರಕೃತಿ ಪೂಜೆ :

ಬಯಲು ಕವಿ ಬೇಂದ್ರೆಯವರ ಪೂಜೆಗೆ ಪ್ರಕೃತಿದೇವತೆಯೂ ಪಾತ್ರಳಾಗಿ-ದ್ದಾಳೆ. ಆದರೆ ಅವಳಿಗೆ ಸಿಕ್ಕಿರುವ ಅವಕಾಶ ಬಹಳ ಕಡಿಮೆ. 'ಮೂಡಲ ಮನೆಯಾ ಮುತ್ತಿನ ನೀರಿನ ಎರಕ್ಷವ ಹೊಯ್ದಾ' [2] ಬಯಲಿನ ಬೆಳಕು, 'ಹಾಲು-ಗಡಲಿನ ಸೀಮಿ'ಯಾದ 'ಬೆಳುದಿಂಗಳು' [3] ಅವರನ್ನು ಆಕರ್ಷಿಸಿವೆ. 'ಕವಿ ಜೀವದ ಬ್ಯಾಸರ ಹರಿಸಾಕ, ಹಾಡ ನುಡಿಸಾಕ ಹೆಚ್ಚಿಗೇನು ಬೇಕ ? ಒಂದು ಹೂತ ಹುಣಸೀಮರ ಸಾಕ' [4] ಎಂದನ್ನಿಸಿದರೂ, ನಿಸರ್ಗಶಕ್ತಿಯಾದ ನೀರು ಬೇಂದ್ರೆ-ಯವರನ್ನು ಬಹುವಾಗಿ ಕೆಣಕಿದೆ, ಅವರ ಪೂಜೆಗೆ ಪಾತ್ರವಾಗಿದೆ. 'ಹತ್ತು ಅವತಾರಕ್ಕು ಹಿರಿದೆಂಬೆ ಹಡೆದವ್ವ ನಿನ್ನ ಗಂಗಾವತಾರ' [5] ಎಂದು ಮೆಚ್ಚಿ, ಅವ-ಳನ್ನು ಕುರಿತು ಒಂದು ಅಷ್ಟಕವನ್ನು ಕಟ್ಟಿದ್ದಾರೆ. 'ಚಣಚಣಕು ತಣಿವಿಲ್ಲ' [6] ದೆ ಗಂಗೆ ಸಹಸ್ರ ತರಂಗೆಯಾಗಿ ಪ್ರವಹಿಸಿದ್ದಾಳೆ ಅಂಬಿಕಾತನಯದತ್ತರ ಹೃದಯ-ಪಾತ್ರದಲ್ಲಿ.

> ಕೂಸ ಅಳುವನು ಕೇಳಿ, ತೀರಿಹೋಗಿಹ ತಾಯಿ ಬಂದಳೆಂಬಂತೆ ಭರದಿ
> ಸ್ವರ್ಗವಾಸವ ತೊರೆದು ಬಂದೆ ನೀ ಭವಬಂಧನಿರ್ಭೀತಳೆಂಬ ತೆರದಿ
>
> ಶ್ರೀಮುಕ್ತಿದಾತೆ ನೀ, ಶಿವಶಿರೋಮಣಿಭೂತೆ, ಯಾವ ಕಡೆಗಿದ್ದರೇನು ?
> ಹುಟ್ಟಿದ್ದೆಹರಿದಿದ್ದೆ, ಕಡಲ ಕಡೆ ಮುಟ್ಟಿದೆ—ಅದೆ ಮುಕ್ತಿ ಕ್ಷೇತ್ರ ತಾನು! [7]

---

1. ಸಖೀಗೀತ, ಧಾರವಾಡದ ತಾಯಿ, ಪು. ೧೦೩
2. ಗರಿ, ಬೆಳಗು, ಪು. ೧-೩
3. ನಾದಲೀಲೆ, ಬೆಳುದಿಂಗಳ ನೋಡs, ಪು. ೭೩
4. ಸಖೀಗೀತ, ಹೂತ್ಶದ ಹುಣಸಿ, ಪು. ೮೪
5. ಗಂಗಾವತರಣ, ಗಂಗಾಷ್ಟಕ, ಪು. ೨
6. ಅರಳುಮರಳು-ಹೃದಯುಸಮುದ್ರ-ನೀರು, ಪು. ೧೮೨
7. ಗಂಗಾವತರಣ, ಗಂಗಾಷ್ಟಕ, ಪು. ೨

ಶುಭ್ರ ಶೀಲೆ, ಶುಚಿರ್ಭೂತೆಯಾದ ಈ ಭಾಗೀರಥಿ ನಿಜಕ್ಕೂ ಮಾನವಕುಲಕ್ಕೆ ಮಹಾಮಾತೆಯಾಗಿದ್ದಾಳೆ.[1] ಸಹಜ ಶುಚಿ, ರುಚಿ, ಗುಣವಂತೆಯಾದ ಈ 'ನೀರೆ' ಯನ್ನು ಬಂಗಾಳದ ಭೀಕರ ಬರಗಾಲದ ಕೊಳೆಯನ್ನು ತೊಳೆಯಲಿಕ್ಕಾಗಿ ಆಹ್ವಾನಿಸಿದ್ದಾರೆ—

ನಿನಗೆ ಪೊಡಮಡುವೆ
ನಿನ್ನ ನುಡುತೊಡುವೆ
ಏಕೆ ಎಡೆತಡೆವೆ
ಸುರಿದು ಬಾ
ಸ್ವರ್ಗ ತೊರೆದು ಬಾ
ಬಯಲ ಜರೆದು ಬಾ
ನೆಲದಿ ಹರಿದು ಬಾ
ಬಾರೆ ಬಾ ತಾಯಿ ಇಳಿದು ಬಾ
ಇಳಿದು ಬಾ ತಾಯಿ
ಇಳಿದು ಬಾ[2]

ಈ ದೇವಗಂಗೆಯ ಅವತಾರ ಅನವರತವೂ ಆಗುತ್ತಿರಲಿ ಎಂದು ಕವಿ ಆಶಿಸಿ ಆರಾಧಿಸಿದ್ದಾರೆ.

**ಅನ್ನ ಬ್ರಹ್ಮ :**

ದುಡಿಮೆಯಲ್ಲಿ ದೇವರನ್ನು ತಾವು ಮೊದಲು ಕಂಡು ಅನಂತರ ಜಗತ್ತಿಗೆ ಕಾಣಿಸಿಕೊಟ್ಟವರು ಕರ್ನಾಟಕದ ಶಿವಶರಣರು. ಅವರು ಅರ್ಥವಿಲ್ಲದ ಆದರ್ಶಕ್ಕೆ ಎಂದಿಗೂ ಬೆಲೆ ಕೊಡಲಿಲ್ಲ. ದೈವದ ಕಲ್ಪನೆಯಲ್ಲಿ, ದರ್ಶನದಲ್ಲಿ, ವಚನ ರಚನೆಯಲ್ಲಿ, ಛಂದಸ್ಸಿನ ಸ್ವಾಚ್ಛಂದ್ಯದಲ್ಲಿ, ಭಾಷೆಯನ್ನು ದುಡಿಸಿಕೊಳ್ಳುವಿಕೆಯಲ್ಲಿ, ನಡೆಯಲ್ಲಿ, ಸಂಕೇತ–ಸೂಚನೆಗಳಲ್ಲಿ, ಧ್ವನಿಯಲ್ಲಿ, ಬಹುವಿಧದಲ್ಲಿ ಆಧುನಿಕ ಕನ್ನಡ ರೋಮ್ಯಾಂಟಿಕ್ ಹಾಗೂ ನವ್ಯ ಕವಿಗಳಿಗೆ ಕ್ರಿ. ಶ. ೧೨ನೆಯ ಶತಮಾನದಲ್ಲಿ ಆಗಿ ಹೋದ ಶರಣ–ಶರಣೆಯರು ಮಾರ್ಗದರ್ಶಕರಾಗಿದ್ದಾರೆ. ಅಂತೆಯೇ ಒಂದೆಡೆ ಕಾಯಕಕ್ಕೂ, ಮತ್ತೊಂದೆಡೆ ಮಾನವೀಯತೆಗೂ ಮಹತ್ವದ ಸ್ಥಾನ ಕೊಟ್ಟಿದ್ದಾರೆ. ಇದನ್ನೇ ಹಲವು ವಿಧಗಳಲ್ಲಿ ಪ್ರತಿಪಾದಿಸಿದ್ದಾರೆ ನಮ್ಮ ಆಧುನಿಕ ಕವಿಗಳು. ಬೇಂದ್ರೆಯವರಲ್ಲೂ ಈ ದರ್ಶನದ್ಯುತಿ ಇಲ್ಲದಿಲ್ಲ. ಅಷ್ಟೇಕೆ ಮಾನವೀಯತೆಗೆ ಮಿಗಿಲಾದ ಮಹಾದೇವನೇ ಇಲ್ಲ ಅವರ ಭಾವನೆಯಲ್ಲಿ.

---

1. ನಾದಲೀಲೆ, ನೀರೆ, ಪು. ೪೯
2. ಗಂಗಾವತರಣ, ಗಂಗಾವತರಣ, ಪು. ೪–೮

ಬೇಂದ್ರೆಯವರ ದೃಷ್ಟಿಯಲ್ಲಿ ದಯೆಗೆ ಮಿಗಿಲಾದ ದೈವವಿಲ್ಲ; ಸೇವೆಗೆ ಮಿಗಿ-ಲಾದ ಪೂಜೆಯಿಲ್ಲ. ಮಾನವೀಯತೆಗೆ ತಿಲಾಂಜಲಿಯಿತ್ತು ರಾಕ್ಷಸಿ ಭಾವನೆಯನ್ನು ಬೆಳಸಿಕೊಂಡು ಮೆರೆದಾಡುವ ದೈತ್ಯನನ್ನು ಕಂಡು ಬೇಂದ್ರೆ, ಕೆರಳಿದ ಸನ್ನಿವೇಶ ಗಳೂ ಉಂಟು. ನಾವೇ ಸೃಷ್ಟಿಸಿಕೊಂಡು ಪೂಜಿಸುತ್ತಿರುವ ಕಲ್ಪನೆಯ ದೇವತೆ ಗಳಿಗಿಂತ ದರಿದ್ರನಾರಾಯಣನ ಸೇವೆ ಅವರ ಪಾಲಿಗೆ ಮಹತ್ವದ ಪೂಜೆ ಎನಿಸಿದೆ. ಅದಕ್ಕಾಗಿ, 'ಕಲ್ಲಿಗೆ ಏಕೋ ಮಲ್ಲಿಗೆ ಪೂಜೆ, ಸಂಧಿಸುವವನೆ ದೇವರು' [1] ಎಂದಿದ್ದಾರೆ.

ಅನ್ನದೈವದ ಮುಂದೆ ಅನ್ಯದೈವಗಳೇ ಕಾಣಿಸಲೊಲ್ಲವು ಬೇಂದ್ರೆಯವರ ಕಣ್ಣಿಗೆ. 'ಬಂತೆಲ್ಲ ನೆಲದ ಬಸಿರಿಂದ, ಮನೆಯ ನೆಲದಿಂದ, ಅನ್ನಮಣ್ಣಿಂದ ಮೈಯು ಅದರಿಂದೋಂ ಸಚ್ಚಿದಾನಂದ' [2] — ಅಂದರೆ ಸತ್, ಚಿತ್, ಆನಂದ ಗಳು ಅರಳುವುದೂ ಮಣ್ಣಿನಲ್ಲೇ, ಮಣ್ಣಿನಿಂದಾದ ಅನ್ನದಲ್ಲೇ. ಆದರೆ ಈ—

ಅನ್ನಬ್ರಹ್ಮದ
    ದೇಗುಲದಲ್ಲಿ
ಬೆಳಗೂ ಬೈಗೂ
    ಛಿಟಿ ಛಿಟಿ ಬೆಂಕಿ
ಡೊಂಬರ ಪೂಜೆಯು
    ಕಾಗೆಯ ಮಂತ್ರ,
ಗಾಳಿಯು ಎಡೆಯು,
    ಬೊಬ್ಬೆಯ ಗಂಟೆ—
ಅನ್ನಬ್ರಹ್ಮದ ದೇಗುಲದಲ್ಲಿ ! [3]

ಇಂಥ ಪ್ರಚಂಡ ಹಾಹಾಕಾರಕ್ಕೆ ಕಾರಣರಾದ ಸ್ವಾರ್ಥಿಗಳನ್ನು ಕಂಡು ಕೆಂಡ-ವಾಗಿದ್ದಾರೆ. ಕಡೆಗೆ ತಡೆಯಲಾರದೆ—

ದೇವರದೊಂದು
    ಗೋರಿಯ ಕಟ್ಟಿ,
ಧರ್ಮದ ಧೂಪಕೆ
    ಬೆಂಕಿಯನಿಕ್ಕಿ,

1. ಮುಗಿಲಮಲ್ಲಿಗೆ, ಪಡುವಲ ಕಡಲೆಡೆ ರವಿ ಮೂಡಿದನು, ಪು. ೭೦
2. ನಾದಲೀಲೆ, ಸಚ್ಚಿದಾನಂದ, ಪು. ೪೬
3. ಗರಿ, ತುತ್ತಿನ ಚೀಲ, ಪು. ೫೮

ಗಣ ಗಣ ಬಾರಿಸಿ
ಪ್ರಾಣದ ಗಂಟೆಯು,
ಸಾವಿನ ನೋವಿಗೆ
ಕಲಮುಲವೆದ್ದು
ನೆಲವನ್ನೆಲ್ಲಾ
ತುತ್ತುವೆನೆಂದು
ಗದರುತ್ತಿಹುದು–
ಗರ್ಜಿಸುತಿಹುದು–
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಒಳದನಿಯೊಂದು ! [1]

ಎಂದು ಕ್ರಾಂತಿಯ ಕಿಡಿ ಸಿಡಿಸಿದ್ದಾರೆ.

ವಿಷ್ಣುವಿನ ಹತ್ತು ಅವತಾರಗಳು ಆಗಿಹೋದುವು; ಆದರೆ ಅನ್ನಾವತಾರ ಮಾತ್ರ ಇನ್ನೂ ಆಗಿಲ್ಲ ಎಂಬುದೇ ಬೇಂದ್ರೆಯವರ ಕೊರಗು. [2] ಅನ್ನಬ್ರಹ್ಮನೇ ಅವರ ಪೂಜೆಗೆ ಪಾತ್ರನಾದ ನೈಜದೇವತೆ. "ನೀರದೇವ, ತೀರದೇವ, ಕಾಡೋ-ದೇವ, ಬೇಡೋದೇವ, ದುಡುಕುದೇವ, ಮಿಡುಕುದೇವ, ಯುದ್ಧದೇವ, ಬುದ್ಧ-ದೇವ ಎಲ್ಲರೂ ಬಂದರು, ಕಲ್ಕಿಯೂ ಬಂದ; ಆದರೆ 'ಅನ್ನದೇವರು ಮಾತ್ರ ಇನ್ನೂ ಬರಲಿಲ್ಲೋ ಇನ್ನೂ ಬರಲಿಲ್ಲಾ.' [3] ಒಂದು ವೇಳೆ ಬರುವುದಾದರೆ ಯಾವ ದೇವನೇ ಆಗಲಿ, ಅವನು ಅನ್ನಾವತಾರಿಯಾಗಿಯೇ ಬರಬೇಕು ಎಂಬುದು ಕವಿ ಆಜ್ಞೆ ! ಏಕೆಂದರೆ 'ಹತ್ತವತಾರದ ಹೇಡಿತನಕ್ಕೆ ಮನ ಗೊಣಗುಟ್ಟುವದು. ಗಾಳಿಗೆ ಗಾಳಿಯು ಬಯಲಿಗೆ ಬಯಲು ತಲೆ ರಣಗುಟ್ಟುವದು.' [4]

ಅನ್ನದೇವನ ಅವತಾರಕ್ಕೆ ಮುನ್ನ ಇಂದು ವಿಜ್ಞಾನ ಸೂರ್ಯನು ಉದಯಿಸ ಬೇಕಾಗಿದೆ. ಅದಕ್ಕಾಗಿ, 'ಸದಯನಾಗಿ ಹೇ ಗುರುವೆ ಆರ್ಯನೇ ಉದಯವಾಗು ವಿಜ್ಞಾನ ಸೂರ್ಯನೇ' [5] ಎಂದು ಪ್ರಾರ್ಥಿಸಿದ್ದಾರೆ. ಅನ್ನದಾನ ಮಹಾದಾನ-ವೆಂದು ಸಾರಿ,

---

1. ಗರಿ, ತುತ್ತಿನ ಚೀಲ, ಪು. ೬೧
2. ನಾದಲೀಲೆ, ಅನ್ನಾವತಾರ, ಪು. ೩೪–೩೫
3. ಅದೇ,
4. ಅದೇ, ಮನುವಿನ ಮಕ್ಕಳು, ಪು. ೩೦
5. ಉಯ್ಯಾಲೆ, ವಿಜ್ಞಾನ ಸೂರ್ಯ, ಪು. ೬೮

ಮತ್ತೆ ನೆಲದ ಎದೆಯ ಮೇಲೆ ತೆನೆಯ ಧ್ವಜವು ನಿಲ್ಲಲಿ.
ಸಾವಿಗಿಂತ ಬಾಳು ಮೇಲು ಎಂಬ ಮಾತು ಗೆಲ್ಲಲಿ.
ವಿಷದ ಒಡಲಿನಿಂದೆ ರಸದ ಊಟೆ ಚಿಮ್ಮಿ ಚೆಲ್ಲಲಿ.
ಪ್ರೇಮವೆ ಹಣ್ಣಾಗಿ ಬರಲಿ ಕವಿಯು ಬಲ್ಲ ಸೊಲ್ಲಲಿ.

ಹೊನ್ನ ನೆಕ್ಕಿ ಬಾಳ್ವರಿಲ್ಲ, ಅನ್ನ ಸೂರೆಮಾಡಿರಿ.
ಅಣ್ಣಗಳಿರಾ ಅನ್ನದಲ್ಲಿ ಮಣ್ಣ ಕಲಿಸಬೇಡಿರಿ. [1]

ಎಂದು ಬೇಡಿದ್ದಾರೆ. ಕವಿಯ ಬೇಡಿಕೆ ಕರ್ಣಗಳಿಗೆ ಮಾತ್ರವಲ್ಲ, ಸರ್ವರ ಹೃದ-ಯಕ್ಕೂ ಮುಟ್ಟಬೇಕು. ಆಗಲೇ ನರ-ನಾರಾಯಣನಾಗುವುದು; ಭೂಮಿ-ಸ್ವರ್ಗ-ವೆನಿಸುವುದು.

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛತ್ವಂ ಮನು ತೇಜೋಂಶ ಸಂಭವಂ ॥ [2]

ಎಂಬ ಜಗನ್ನಾಟಕ ಸೂತ್ರಧಾರಿಯಾದ ಪರಮಾತ್ಮನ ಅಮರ ಸಂದೇಶದಂತೆ ಮಹಾ ಕವಿ ಬೇಂದ್ರೆ, ಮಾನವ ಹೃದಯಾಂತರಾಳದ 'ವಿಭೂತಿ'[3]ಯನ್ನು ದರ್ಶಿಸಿ ಪೂಜಿ-ಸಿದ್ದಾರೆ.

§ § § §

1. ಗಂಗಾವತರಣ, ಅನ್ನಯಜ್ಞ, ಪು. ೫೮
2. ಗೀತೆ
3. ಸಾ. ಶಿ. ಮರುಳಯ್ಯ, ವಿಭೂತಿಪುರುಷರು, ಪೀಠಿಕೆ, ಪು. ೧

೧೧

# ಬೇಂದ್ರೆಯವರ ಮತ್ತು ಮಧುರಚೆನ್ನರ ಸಖ್ಯಯೋಗ

**ಗುರುಲಿಂಗ ಕಾಪಸೆ**

ಮಧುರಚೆನ್ನರು ಹೊಸಗನ್ನಡ ಸಾಹಿತ್ಯದ ಹಿರಿಯ ತಲೆಮಾರಿನ ಮಹತ್ವದ ಕವಿಗಳಲ್ಲೊಬ್ಬರು. ಅಧ್ಯಾತ್ಮವು ಅವರ ಎಲ್ಲ ಕೃತಿಗಳಲ್ಲಿ ಹಾಸು-ಹೊಕ್ಕಾಗಿದ್ದು, ಅದುವೇ ಅವರ ಕಾವ್ಯದ ವೈಶಿಷ್ಟ್ಯವಾಗಿದೆ. ಆತ್ಮಸಂಶೋಧನೆಗಾಗಿ ಇಡೀ ಜೀವನವನ್ನು ತೆಯ್ದ ಅವರು, 'ಪೂರ್ವರಂಗ' 'ಕಾಳರಾತ್ರಿ' 'ಬೆಳಗು' ಮತ್ತು 'ಆತ್ಮಸಂಶೋಧನೆ' ಗಳಲ್ಲಿ ತಮ್ಮ ಸಾಧನೆಯ ಕಥೆಯನ್ನೇ ನಿರೂಪಿಸಿದ್ದಾರೆ. ಅವರ ಏಕಮೇವ ಕವನ ಸಂಕಲನ 'ನನ್ನ ನಲ್ಲ' ವು ಕನ್ನಡದ ನವೋದಯ ಕಾಲದಲ್ಲಿ ಅನುಭಾವಕಾವ್ಯಪರಂಪರೆಗೆ ಸೀಡಿದ ಮಹತ್ವದ ಕೊಡುಗೆಯಾಗಿದೆ.

ಅಧ್ಯಾತ್ಮವೇ ಮಧುರಚೆನ್ನರಿಗೆ ನಿಚಿತ ಪ್ರಯೋಜನವಾಗಿದ್ದು, ಉಳಿದ ಸಂಬಂಧಗಳನ್ನು ಅದಕ್ಕನುಕೂಲವಾಗುವಂತೆ ಅವರು ಬೆಳಸಿಕೊಂಡರು; ಬಳಸಿಕೊಂಡರು. ಜಾನಪದಸಾಹಿತ್ಯದ ಸಾರೋದ್ಧಾರ ಕಾರ್ಯದಲ್ಲಿ ಮೊದಲಿಗರಾಗಿ, ಮಹತ್ವದ ಶಾಸನಗಳ ಸಂಶೋಧಕರಾಗಿ, ಅರವಿಂದಗ್ರಂಥಮಾಲೆಯ ಸಂಪಾದಕರಾಗಿ ಅವರು ನಿರ್ವಹಿಸಿದ ಭಗವದರ್ಪಿತ ಕಾಯಕವನ್ನು ಕನ್ನಡಿಗರೆಂದೂ ಮರೆಯುವಂತಿಲ್ಲ.

ಪ್ರತಿಭೆ, ಪಾಂಡಿತ್ಯ, ಸಾಧನೆಗಳಿಂದ ಮುಪ್ಪುರಿಗೊಂಡ ಅವರ ಜೀವನದಲ್ಲಿ, ಎದ್ದುಕಾಣುವ ಇನ್ನೊಂದು ಮಹತ್ವದ ಅಂಶವೆಂದರೆ ಸ್ನೇಹಪರತೆ. ಅವರು ಹಲಸಂಗಿಯ ಗೆಳೆಯರ ಬಳಗವನ್ನು ಕಟ್ಟಿ, ಬೆಳಸಿ ತನ್ಮೂಲಕ ಸಾಹಿತ್ಯ-ಸಂಸ್ಕೃತಿಗಳ ಸೇವೆಮಾಡಿ, ಅದರ ಕೀರ್ತಿಯನ್ನು ನಾಡಿನ ತುಂಬ ಬೆಳಗಿಸಿದರು. ಧಾರವಾಡದ ಗೆಳೆಯರ ಗುಂಪಿನೊಂದಿಗೆ ಅನ್ಯೋನ್ಯವಾಗಿ ಹೊಂದಿಕೊಂಡು ಅದರ ಶ್ರೇಯೋಭಿವೃದ್ಧಿಯಲ್ಲಿಯೂ ಪಾಲುಗೊಂಡರು.

ಆತ್ಮಸಂಶೋಧನೆಯ ಸಾಹಸವು ಮಧುರಚೆನ್ನರ ಆಗಮಿಕ ಜೀವನದ ಒಂದು ಮುಖವಾದರೆ, ಆತ್ಮೀಯಗೆಳೆಯರೊಂದಿಗಿನ ಸಹವಾಸವು ಅವರ ಲೌಕಿಕ ಜೀವನದ

ಇನ್ನೊಂದು ಮುಖವಾಗಿದೆ. ಅವೆರಡು ದ್ವಿಮುಖವಾಗಿರದೆ ಒಮ್ಮುಖ, ಸಮ್ಮುಖ ವಾಗಿದ್ದು ಅವರ ಊರ್ಧ್ವಮುಖ ಸಾಧನೆಗೆ ಸಹಕಾರಿಯಾಗಿವೆ. ಅವರಿಗೆ ಅಧ್ಯಾತ್ಮ ಸಾಧನೆಯು ಯೋಗವಾಗಿದ್ದಂತೆ ಗೆಳೆತನವೂ ಒಂದು ಯೋಗವಾಗಿತ್ತು. "ಅವರದು ಮಿತ್ರಜೀವ, ಸಹವಾಸವು ಅವರಿಗೊಂದು ಯೋಗ"[1] ಎಂದಿದ್ದಾರೆ ಬೇಂದ್ರೆ ಯವರು. ಇನ್ನೊಂದು ಸಂದರ್ಭದಲ್ಲಿ ಮಧುರಚೆನ್ನರ ಬಗ್ಗೆ ಬರೆಯುತ್ತ ಬೇಂದ್ರೆ ಯವರು "ತನ್ನ ಆತ್ಮೀಯರೆಲ್ಲರನ್ನು ಬಾಗಿಲ ತೆರೆದಿಟ್ಟು ತನ್ನ ಅಂತಃಕರಣದಲ್ಲಿ ಬರಮಾಡಿಕೊಳ್ಳುವಂತೆ, ತಾನೂ ಅವರ ಅಂತರಂಗದ ಆಪ್ತನಂತೆ ಒಳಸೇರು ತ್ತಿದ್ದನು."[2] ಎಂದು ಅವರ ಸ್ನೇಹಜೀವನದ ಪರಿಚಯ ಮಾಡಿಕೊಟ್ಟಿದ್ದಾರೆ. ಸ್ವಭಾವಸಿದ್ಧವಾದ ಅವರ ಸಖಿತ್ವಕ್ಕೆ ಅವರು "ಮಧುರಚೆನ್ನ" ಎಂದು ಹೆಸರಿಸಿ ಕೊಂಡಿದ್ದುದನ್ನು ಇಲ್ಲಿ ಎತ್ತಿ ಹೇಳಬಹುದು. ಅದು ಅವರ ಮೈತ್ರಿಯೋಗದ ಸಿದ್ಧಿಯ ಸಂಕೇತ.

ನನಗೆ ನೀನತಿ ಮಧುರ, ನಿನಗೆ ನಾ ಬಲು ಚೆನ್ನ
ಹೀಗಂತಲೇ ನಾವು 'ಮಧುರಚೆನ್ನ'[3]

ಇಲ್ಲಿಯ 'ಮಧುರ' ಮತ್ತು 'ಚೆನ್ನ' ಪದಗಳು ಶ್ಲೇಷಾರ್ಥವುಳ್ಳವುಗಳು. ಕಾವ್ಯಾರ್ಥದ ಜೊತೆಗೆ ಅವು ವಾಸ್ತವಾಂಶವನ್ನು ತಿಳಿಸಿಕೊಡುತ್ತವೆ. ಮಧುರ (ಮಾದಣ್ಣ : ಚೆನ್ನಮಲ್ಲಪ್ಪನವರ ಪ್ರಿಯ ಸ್ನೇಹಿತನ ಹೆಸರು) + ಚೆನ್ನ (ಕವಿಯ ಸ್ವಂತ ಹೆಸರಿನ ಪೂರ್ವಾರ್ಧ) = ಮಧುರಚೆನ್ನ. ಹೀಗೆ ಸಮರಸಗೊಂಡ ಅವರ ಮೈತ್ರಿಯ ಸಾಧನೆಯನ್ನು 'ಮಧುರಗೀತ'ವು[4] ಮನೋಜ್ಞವಾಗಿ ಚಿತ್ರಿಸುತ್ತದೆ.

ಹೀಗಿರುವ ಮಧುರಚೆನ್ನರು ಬೇಂದ್ರೆಯವರೊಡನೆ ಬೆರೆತು ಬಾಳಿದುದು ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಒಂದು ಉಲ್ಲೇಖನೀಯ ಅಂಶವಾಗಿದೆ. ಅವರಿಬ್ಬರ ಕೃತಿಗಳಲ್ಲಿ ಅವರ ಒಡನಾಟದ ವಿಷಯ ಅಲ್ಲಲ್ಲಿ ಪ್ರಕಟವಾಗಿದೆ. ಕೆಲವು ಕವಿತೆಗಳಿಗೆ ಅದುವೇ ವಸ್ತುವಾಗಿದೆ. ಅವುಗಳನ್ನು ಓದಿದಾಗ ಅವರೀರ್ವರ ಗಾಢ ವಾದ ಸ್ನೇಹಸಂಬಂಧ, ಆಧ್ಯಾತ್ಮಿಕ ಸಾಧನೆಗಳ ಪರಿಚಯ ನಮಗಾಗುವದು. "'ಮಧುರಚೆನ್ನ' ಎಂಬ ನಾಮದಿಂದ ಕೀರ್ತಿಶೇಷರಾದ ಕವಿ ಹಲಸಂಗಿಯ ಚೆನ್ನಮಲ್ಲಪ್ಪ ಗಲಗಲಿ ಅವರ ಕೃತಿಗಳೊಡನೆ ಬಂದಷ್ಟು ಸಂಬಂಧ ಮತ್ತಾರ

1. 'ಆತ್ಮಸಂಶೋಧನೆ' (ಮುನ್ನುಡಿ), ಮಧುರಚೆನ್ನ, ಪುಟ : ೩.
2. 'ಬೆಳಕಿನ ಹೆಜ್ಜೆ' (ಹಲಸಂಗಿ ಅರವಿಂದ ಮಂಡಲದ ಬೆಳ್ಳಿಹಬ್ಬದ ನೆನಹಿನ ಹೊತ್ತಿಗೆ) ಪುಟ ೧೮೯.
3. 'ನನ್ನನಲ್ಲ' (ದ್ವಿತೀಯ ಮುದ್ರಣ-೧೯೫೫) ಮಧುರಚೆನ್ನ, ಪುಟ ೭೦.
4. ಈ ಕವಿತೆಯ ವಿಮರ್ಶಾತ್ಮಕ ವಿವರಣೆಗೆ ಚೆನ್ನವೀರ ಕಣವಿಯವರ 'ಸಾಹಿತ್ಯ ಚಿಂತನ' (ಪ್ರಥಮ ಮುದ್ರಣ) ಪುಟ ೧೧೪ ನೋಡಬಹುದು.

ಕೃತಿಗಳೊಡನೆಯೂ ಬರಲಿಲ್ಲ. ಅವರ ಕಾವ್ಯ, ಆತ್ಮಚರಿತ್ರೆ, ಸಂಶೋಧನ, ತತ್ತ್ವಜಿಜ್ಞಾಸೆ ಈ ಎಲ್ಲದರೊಡನೆಯೂ ನನ್ನ ಮಾತು ಹೆಣೆದುಕೊಂಡವು. ಚೆನ್ನ ಮಲ್ಲಪ್ಪನವರು ನನ್ನನ್ನು ತಮ್ಮ ಅಂತರಂಗದ "ಅಣ್ಣಯ್ಯ"ನನ್ನಾಗಿ ಮಾಡಿ ಕೊಂಡರು. ಅವರನ್ನು ಕುರಿತು ನಾನೂ, ನನ್ನನ್ನು ಕುರಿತು ಅವರೂ ಬರೆದ ಕವನಗಳು ಸಾಹಿತಿಗಳ ಜೀವನದ ಹಿನ್ನೆಲೆ ಕಟ್ಟುವ ಇತಿಹಾಸದಲ್ಲಿ ರಹಸ್ಯಮಯವಾದ ರಂಜಕ ಸಾಮಗ್ರಿ ಆಗುವದೆಂದು ನಾನು ತಿಳಿದಿದ್ದೇನೆ"[1] ಎಂದು ಬೇಂದ್ರೆಯವರು ತಮ್ಮ ಆತ್ಮಕಥನವನ್ನು ನಿರೂಪಿಸುತ್ತ ನುಡಿದಿದ್ದಾರೆ. ಮಧುರಚೆನ್ನ ಮತ್ತು ಬೇಂದ್ರೆ ಯವರು ಪರಸ್ಪರರನ್ನು ಕುರಿತು ಬರೆದುದನ್ನು ಗಮನಿಸಿ ತನ್ಮೂಲಕ ಅವರ ಸಖ್ಯ ಯೋಗದ ಪರಿಚಯ ಮಾಡಿಕೊಡಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ.

ವರಕವಿ ಬೇಂದ್ರೆಯವರು ಕನ್ನಡ ನವೋದಯ ಕಾವ್ಯಗಿರಿಯ ಉತ್ತುಂಗ ಶಿಖರವಾಗಿದ್ದರೂ ನಿತ್ಯದ ಬಾಳಿನಲ್ಲಿ ಸ್ನೇಹಜೀವಿಗಳು. "ಅವರು ಸ್ನೇಹಕ್ಕೆ ಕೊಡುವ ಬೆಲೆ ಉಳಿದ ಯಾವುದಕ್ಕೂ ಕೊಡುವುದಿಲ್ಲ"[2] ಎಂಬ ಅಭಿಪ್ರಾಯ ವನ್ನಿಲ್ಲಿ ಗಮನಿಸಬೇಕು. "ಅವರಿಗೆ ಸ್ನೇಹವೇ ಗಾಳಿ, ಬೆಳಕು, ನೀರು, ಸಕಲ ಸಂವರ್ಧನೆಯೆ ಸಾಧನಶಕ್ತಿಯಾಗಿದೆ—ವಾತ್ಸಲ್ಯದಂತೆ"[3] ಎಂಬ ಅವರ ಸ್ನೇಹ ಮಯ ಜೀವನವನ್ನು ಪರಿಚಯಿಸುವ ಇನ್ನೊಂದು ಉಕ್ತಿಯನ್ನು ಇಲ್ಲಿ ಲಕ್ಷಿಸಬೇಕು. ಧಾರವಾಡದ ಗೆಳೆಯರೋಲಗ ಕಟ್ಟಿದ ಬೇಂದ್ರೆಯವರು ನಾಡಿನ ಉದ್ದಗಲಕ್ಕೂ ತಮ್ಮ ಗೆಳೆತನದ ಬಳ್ಳಿಯನ್ನು ಹಬ್ಬಿಸಿದ್ದಾರೆ. ಅವರ ಆತ್ಮಕಥನವಾದ 'ಕಾವ್ಯೋ ದ್ಯೋಗ'ದಲ್ಲಿ ಹಲವಾರು ಊರು-ನಗರಗಳ ಸ್ನೇಹಿತರ ಹೆಸರನ್ನು ಅವರು ನೆನೆ ದಿದ್ದಾರೆ. "ಎಳೆಯರ ಗುಂಪನ್ನು ಗೆಳೆಯರ ಗುಂಪನ್ನು (ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ)ದೈವ ಪೌರುಷದ ಹೆಣಿಗೆಯಾಗಿ ಹೆಣೆದುಕೊಂಡೆ...."[4] ಎಂದು ನುಡಿದು, ಮುಂದುವರಿದು ಕಾಲನ ದವಡೆಯಲ್ಲಿ ಕಳೆದುಕೊಂಡ, ಕಳೆದು ಕೊಳ್ಳದ ಮಿತ್ರಸಮುದಾಯದ ಹೆಸರನ್ನು ಸೂಚಿಸಿ "'ನೆಯ್ಗೆಯಲ್ಲಿ ನೂಲು' ಇನ್ನೂ ಹೆಚ್ಚಾಗುತ್ತಿದೆ— ವೆಚ್ಚವಾಗುತ್ತಿದೆ"[5] ಎಂದಿದ್ದಾರೆ. ಬೇಂದ್ರೆಯವರ ಗೆಳೆತನದ ಬಾಳಬಟ್ಟೆ ಒಂದು ಅಕ್ಷಯಾಂಬರ. ಅದು ಅವರ ಜೀವನದುದ್ದಕ್ಕೂ ಬೆಳೆಯುತ್ತ ಹೋಗುವಂತಹದು. ಗೋಕಾಕರಾದಿಯಾಗಿ ಹಿಂಗಮಿರೆಯವರ ವರೆಗೆ

---

1. 'ನಡೆದುಬಂದ ದಾರಿ' ಸಂಪುಟ ೪-೧೯೬೧ : ಚತುರ್ಮುಖ (ಆತ್ಮಕಥನ) : ದ. ರಾ. ಬೇಂದ್ರೆ, ಪುಟ ೨೫೨೪.
2. 'ಬಾ ಹತ್ತರ' ೧೯೬೯ (ಹಿನ್ನುಡಿ : ಸಂ.ವಾ.ದ.) ದ. ರಾ. ಬೇಂದ್ರೆ, ಪುಟ ೧೯೧.
3. 'ಬಾ ಹತ್ತರ' ೧೯೬೯ (ಹಿನ್ನುಡಿ : ಸಂ.ವಾ.ದ ) : ದ.ರಾ. ಬೇಂದ್ರೆ, ಪುಟ ೧೯೪.
4. 'ಕಾವ್ಯೋದ್ಯೋಗ' (ಮನ್ವಂತರ ಸಂಪುಟ ೧-೧೯೬೨) ದ.ರಾ. ಬೇಂದ್ರೆ, ಪುಟ ೬೫.
5. 'ಕಾವ್ಯೋದ್ಯೋಗ' (ಮನ್ವಂತರ ಸಂಪುಟ ೧-೧೯೬೨) ದ.ರಾ. ಬೇಂದ್ರೆ, ಪುಟ ೯೫.

ಬೆಳೆದ ಕನ್ನಡದ ಕವಿ ಸಮುದಾಯಕ್ಕೆ ಅವರು ಗುರುಸ್ಥಾನದಲ್ಲಿದ್ದರೂ ಅವರೆಲ್ಲರನ್ನು ಗೆಳೆತನದ ಒಲುಮೆಯಿಂದ ಕಾಣುವ ಮನೋಭಾವ ಅವರದು ಅಂತೆಯೇ ಅವರ ಸ್ನೇಹದ ಅಖಂಡ ಸ್ಮರಣೆಯಲ್ಲಿ ಕರುಳಿನ ಕರೆ ಕೇಳಿಬರುತ್ತಲೇ ಇದೆ. :

ಯಾವ ದೈವದ ಕರೆಗೊ ಓಗೊಟ್ಟು ಬರುತಲಿದೆ
—(ಕರುವು ತುರುವಿಗೆ ಮರಳಿ ಅಂಬೆಗರೆದು
ಕರೆವಂತೆ ತೊರೆವಂತೆ ತಾಯ ಕೆಚ್ಚಲು ಹಾಲು)—
ಕರಳು-ತಳಕಿನ ಹಾಡು ಚೆಲ್ಲವರಿದು [1]

ವಿಸ್ತಾರವಾಗಿ ಬೆಳೆದ ಅವರ ಕರುಳಬಳ್ಳಿಯಲ್ಲಿಯ ಹಲವಾರು ಗೆಳೆಯರನ್ನು ಕುರಿತು ಬರೆದ ಕವಿತೆಗಳು ಅವರ ಕವನಸಂಕಲನಗಳಲ್ಲಿ ಅಲ್ಲಿಗಲ್ಲಿಗೆ ಚೆಲ್ಲುವರಿದಿರುವದನ್ನು ನಾವು ಕಾಣುತ್ತೇವೆ. ಅವರ ಗೆಳೆತನದ ಶುಚಿ-ರುಚಿ, ಅಂತಃಕರಣದ ಮಿಡಿತ, ಹೃದಯದ ಸಂವೇದನೆ ಹಾಗೂ ಅವರ ಮಹತ್ಸಾಧನೆ ಇವು ಅಂಥ ಕವಿತೆಗಳಲ್ಲಿ ಅಭಿವ್ಯಕ್ತಗೊಂಡಿವೆ.

ಬೇಂದ್ರೆಯವರ ಗೆಳೆತನದ ನೆಯ್ಗೆಯಲ್ಲಿ ಕಂಡುಬರುವ ಹಲವಾರು ಎಳೆಗಳಲ್ಲಿ ಮಧುರಚೆನ್ನರದು ಬಹು ಬೆಲೆಯುಳ್ಳ ರೇಶಿಮೆಯ ಎಳೆಯೆನ್ನಬಹುದು.

'ಮಧುರಗೀತ'ವ ಹಾಡಿ, 'ನನ್ನ ನಲ್ಲ'ನ ಒಲಿಸಿ
ಹಲಸಂಗಿ ನಾಡಿನಲಿ ನೆಲಿಸಿ ನಿಂತ
ನನ್ನ 'ಚೆನ್ನ'ನಿಗೆಣೆಯು ಗೆಣೆಯರಾರಾರಿಹರು
ಅವನೆ ಅವನಿಗು ಹೆಚ್ಚು ಅವನಿಗಿಂತ [2]

ಎಂಬ ಬೇಂದ್ರೆಯವರ ಈ ಅನನ್ವಯ ವರ್ಣನೆ ಮಧುರಚೆನ್ನರ ಗೆಳೆತನದ ಮೇಲ್ಮೆಯನ್ನು ಎತ್ತಿ ತೋರಿಸುತ್ತದೆ.

ಮಧುರಚೆನ್ನ ಮತ್ತು ಬೇಂದ್ರೆಯವರ ಈ ಅಪರೂಪ ಸ್ನೇಹಸಂಬಂಧ ಕೂಡಿಬಂದಿದ್ದು ಒಂದು ಯೋಗಾಯೋಗವೆಂದೇ ಹೇಳಬೇಕು. ಸುಮಾರು ಹದಿನೆಂಟು ವರ್ಷದ ಪ್ರಾಯದವರಿದ್ದಾಗ ಮಧುರಚೆನ್ನರು ಬೇಂದ್ರೆಯವರ ಗುರುತ್ವಾಕರ್ಷಣ ಕಕ್ಷೆಯೊಳಗೆ ಬಂದರು. ಆಗ ಬೇಂದ್ರೆಯವರಿಗೆ ಇಪ್ಪತ್ತೈದರ ಪ್ರಾಯ. ಆಗಲೆ ಅವರು ಕಾವ್ಯಲೋಕದಲ್ಲಿ ನವ ಚೈತನ್ಯವನ್ನುಂಟು ಮಾಡಿ ಗೆಳೆಯರಿಂದ 'ನವ ಕರ್ನಾಟಕದ ನವಕವಿ' ಎನ್ನಿಸಿಕೊಂಡು ಮಾನಸ ಕಾಯಕ ನಿರತರಾಗಿ 'ವಾಗ್-

---

1. 'ಜೀವಲಹರಿ' (ಪ್ರಥಮ ಮುದ್ರಣ-೧೯೫೭) ಅಂಬಿಕಾತನಯದತ್ತ, ಪುಟ ೭೪.
2. 'ಜೀವಲಹರಿ' (ಪ್ರಥಮ ಮುದ್ರಣ-೧೯೫೭) ಅಂಬಿಕಾತನಯದತ್ತ, ಪುಟ ೭೨.

ಯಜ್ಞ'ದಲ್ಲಿ ತೊಡಗಿದ್ದರು. ಮಧುರಚೆನ್ನರು ಜ್ಞಾನಜಿಜ್ಞಾಸುಗಳಾಗಿ ಆತ್ಮ ಸಂಶೋಧನೆಯನ್ನು ಪ್ರಾರಂಭಿಸಿದ್ದರು; ದೇವನ ಅಸ್ತಿತ್ವವನ್ನು ಕಂಡರಿಸಲು ಕನವರಿಸುತ್ತಿದ್ದರು. ಅವರಿಬ್ಬರ ಪರಿಚಯುವಾಗುವ ಕಾಲದಲ್ಲಿ ಅವರ ಒಲವು-ನಿಲುವುಗಳು ಹೀಗಿದ್ದವು. "ಅವರಿಬ್ಬರು ಪರಸ್ಪರರನ್ನು ಮೊದಲಿಗೆ ಕಂಡಾಗ ವ್ಯಕ್ತಿಯನ್ನಷ್ಟೇ ಕಾಣಲಿಲ್ಲ. ಪರಸ್ಪರ ಕಣ್ಣು ಮುಂದೆ ಮೊಳಕೆ ಮಾತ್ರ ನಿಂತಿದ್ದರೂ ಅದರಲ್ಲಿ ಅವರಿಗೆ ಬೆಳೆಯ ಸಿರಿಯೇ ಕಂಗೊಳಿಸಿತು."[1] ಎಂದು ಉಭಯ ಸ್ನೇಹಿತರ ನಿಕಟವರ್ತಿಗಳಾದ ಸಿಂಪಿ ಲಿಂಗಣ್ಣನವರು ಹೇಳಿದ್ದಾರೆ. ಅವರ ಅಂತರ್ದೃಷ್ಟಿ ಪರಸ್ಪರರ ಆತ್ಮಸಂಬಂಧವನ್ನೂ ಗುರುತಿಸಿರಬೇಕು. ಅಂತೆಯೇ ಅವರ ಒಲವು-ನಿಲುವುಗಳು ಪರಸ್ಪರ ಪೂರಕ, ಪೋಷಕವಾಗಿ ಒಮ್ಮೆಲೆ ಗೆಳೆತನದ ಸಂಬಂಧವನ್ನು ಗಾಢವಾಗಿಸಿವೆ. ಬೇಂದ್ರೆಯವರ ನೇತಿ ನೇತಿಯ ಹೋಲ್ಪ ಅರುಪಿನ ಆಳ, ಹರಿಗಡಿದ ಹೊನಲನ್ನು ಹರಿಯ ಹಚ್ಚುವ ಹದವುಳ್ಳ ತರ್ಕ ಇವು ಮಧುರ-ಚೆನ್ನರ ಭಾವುಕ ಹೃದಯಕ್ಕೆ ಬೆಳಕನ್ನೀಯುತ್ತ, ಮಧುರಚೆನ್ನರ ಭಕ್ತಿ, ನಿಷ್ಠೆಗಳು ಬುದ್ಧಿಜೀವಿಗಳಾದ ಬೇಂದ್ರೆಯವರಿಗೆ ಆಧ್ಯಾತ್ಮಿಕ ತಾತ್ತ್ವಿಕದಲ್ಲಿ ಒಲವನ್ನು ಕೊಡುತ್ತ, ಅವರಿಬ್ಬರ ಸ್ನೇಹವು ಸಂವರ್ಧಿಸಿ ಸಖ್ಯಯೋಗವಾಗಿ ಪರಿಣಮಿಸಿದೆ. ಈ ಯೋಗದಿಂದ ಅವರು ಜನ್ಮಜನ್ಮಾಂತರದ ಬಾಂಧವ್ಯದ ಸಿದ್ಧಿಯನ್ನು ಪಡೆದು ಕೊಂಡಿದ್ದಾರೆ.

ಗೆಳೆತನದ ಪ್ರಥಮ ಪ್ರಾಯದಲ್ಲಿಯೇ ತಮ್ಮ 'ಎಂದೂ ಅಗಲದ ಗೆಳೆತನ' ವನ್ನು ಗುರುತಿಸಿದ ಬೇಂದ್ರೆಯವರು :

ಇಂದಿನೀ ಗೆಳೆತನವು ಹಿಂದಿನಿಂದಲೆ ಬಂತು
ಮುಂದೆ ಜನ್ಮಾಂತರದಿ ಸಾಗಿ ಸಾಗಿ
ಹೊಂದಿರುವ ಪಕಳೆಗಳ ಹಿಂದೆ ಕೇಸರದಿಂದ—
—ನೇಕ ಬೀಜದ ಏಕಫಲವು ಆಗಿ[2]

ಹೀಗೆ ಭೂತ-ವರ್ತಮಾನ-ಭವಿಷತ್ತುಗಳಲ್ಲಿ ಅನುಸ್ಯೂತವಾಗಿ ಬೆಳೆದು ಬಂದ ಅವರ ಗೆಳೆತನವು ಏಕಫಲವಾಗಿರುವುದನ್ನು ಬಣ್ಣಿಸಿದ್ದಾರೆ. ಮಧುರಚೆನ್ನರು ಅಗಲಿ ಬಹು ದೂರ (ಮುಗಿಲ ತುದಿಗೆ) ಇದ್ದರೂ ಸದಾ ಬೇಂದ್ರೆಯವರ ಬದಿಗಿರುವಂಥ ಗೆಳೆಯರು. ಅಗಲಿಕೆಂಬುದು ಅವರಿಗೆ ಕಣ್ಣುಮುಚ್ಚಾಲೆಯಾಟ.

ಮಧುರಚೆನ್ನರು ಸುಮಾರು ಅದೇ ಹೊತ್ತಿಗೆ ಬರೆದ ಒಂದು ಕವಿತೆಯಲ್ಲಿ :

---

1. 'ನನ್ನ ನಲ್ಲ' (ದ್ವಿತೀಯ ಮುದ್ರಣ-೧೯೫೫-ಕವಿ ಪರಿಚಯ) ಮಧುರಚೆನ್ನ, ಪುಟ ೪
2. 'ಸಂಚಯ' (ಪ್ರಥಮ ಮುದ್ರಣ - ೧೯೫೪) [illegible], ಪುಟ ೫೩.

……..ಬೆನ್ನು ಬೆನ್ನಲಿ ಬೆಸೆದ
ಏಕ ತೇಜದ ಎರಡು ಹಿರಿಕಿರಿಯ ಪಿಂಡಗಳ
ಬೆಳಗಿಸುವ ಜಗಜ್ಜ್ಯೋತಿ ಅರವಿಂದ ಯೋಗಿಗಳ
ಹೃದಯಸ್ಥ ಭಾನು [1]

ಎಂದು ಬೆನ್ನು ಬೆನ್ನಲಿ ಬೆಸೆದ ಹಿರಿಕಿರಿಯ [2] ಹೃತ್ಪಿಂಡಗಳ ಉದ್ಭವವನ್ನು ತಿಳಿಸಿಕೊಟ್ಟಿದ್ದಾರೆ. ಅವರಿಬ್ಬರದು ಏಕಫಲ, ಏಕತೇಜ. ಅವರಿಬ್ಬರ ಹೃದಯಸ್ಥ ಭಾನು ಶ್ರೀ ಅರವಿಂದಯೋಗಿಗಳು. ಮಾತೃಶಕ್ತಿ ಶ್ರೀಮಾತೆಯವರು. ಆಶ್ಚರ್ಯದ ಸಂಗತಿಯೆಂದರೆ ಅವರಿಬ್ಬರಿಗೆ ಜನ್ಮವಿತ್ತ ತಾಯಂದಿರ ಹೆಸರೂ ಒಂದೇ ಆಗಿದೆ. (ಬೇಂದ್ರೆಯವರ ತಾಯಿ : ಅಂಬೂತಾಯಿ, ಮಧುರಚೆನ್ನರ ತಾಯಿ : ಅಂಬವ್ವ) ಈ ರೀತಿ ಹೆಸರಿನ ಸಾದೃಶವಿರುವದು ಆಕಸ್ಮಿಕವೆಂದು ಹೇಳಲಿಕ್ಕಾಗದು. ಅದು ಅವರ ಆಂತರಿಕ ಭ್ರಾತೃಸಂಬಂಧದ ದೈವೀಸಂಕೇತವಿದ್ದರೂ ಇರಬಹುದು.

ಒಬ್ಬ ತಾಯಿಯ ಮಕ್ಕಳಂತಿದ್ದ ಈ ಸಹೋದರರ ಬೆನ್ನಿನಾಸರಿಗಿದ್ದ ವಿಶಾಲ ಅಧ್ಯಾತ್ಮವೃಕ್ಷ ಒಂದೇ. ಆದರೆ ದೃಷ್ಟಿಗಳು ಬೇರೆ ಬೇರೆ.

ನನ್ನ ನಿನ್ನ ಬೆನ್ನ ಬಳಿ ವಿಶಾಲವೃಕ್ಷ ಬೆಳೆದಿದೆ.
ಮುಗಿಲತುಂಬಿ ಉಳಿದಿದೆ
ಗಾಳಿಯಂತೆ ಸುಳಿದಿದೆ.
ನನ್ನ ನಿನ್ನ ನೋಟ ಮಾತ್ರ ಎರಡು ದಿಕ್ಕಿಗೆಳೆದಿದೆ
ಬೇರೆ ಹಾದಿ ತುಳಿದಿದೆ [3]

ಎಂದು ಬೇಂದ್ರೆಯವರು ತಮಗೂ ಮಧುರಚೆನ್ನರಿಗೂ ಇರುವ ಒಳಜೀವನದ ಸಂಬಂಧವನ್ನು ತಿಳಿಸುತ್ತ ತಮ್ಮ ನೋಟ ಎರಡು ದಿಕ್ಕಿಗೆಳೆದಿರುವದನ್ನು ಹೇಳಿದ್ದಾರೆ. ಈ ಕವಿತೆಯ ಸಂದರ್ಭ ಸೂಚನೆಯಲ್ಲಿ “ ನಮ್ಮಿಬ್ಬರ ಜೀವನಕ್ಕೂ ಮಹಾಪ್ರೇರಣೆಯಾಗಿ ನಿಂತ ಶಕ್ತಿ ಒಂದೇ, ಆದರೂ ನಮ್ಮ ದೃಷ್ಟಿ ಎರಡು ದಿಕ್ಕಿನಲ್ಲಿ ಹರಿಯುತ್ತವೆ ” [4] ಎಂದು ಸ್ಪಷ್ಟಗೊಳಿಸಿದ್ದಾರೆ. ಆ ದಿಕ್ಕುಗಳು ಯಾವವೆಂಬುದನ್ನು ಗುರುತಿಸುತ್ತ ಸಿಂಪಿ ಲಿಂಗಣ್ಣನವರು “ ಒಂದು ಮುಖ ಪೂರ್ವಕ್ಕೆ, ಇನ್ನೊಂದು

---

1. ‘ ನನ್ನ ನಲ್ಲ ’ (ದ್ವಿತೀಯ ಮುದ್ರಣ – ೧೯೫೬) ಮಧುರಚೆನ್ನ, ಪುಟ ೮೫.
2. ಬೇಂದ್ರೆಯವರ ಜನನ- ೩೧-೧-೧೮೯೬, ಮಧುರಚೆನ್ನರ ಜನನ- ೩೧-೭-೧೯೦೩. ಬೇಂದ್ರೆಯವರು ಹಿರಿಯರು, ಚೆನ್ನಮಲ್ಲಪ್ಪನವರು ಕಿರಿಯರು.
3. ‘ ನಾದಲೀಲೆ ’ (ನಾಲ್ಕನೆಯ ಮುದ್ರಣ-೧೯೫೫) ಅಂಬಿಕಾತನಯದತ್ತ, ಪುಟ ೧೮.
4. ‘ ನಾದಲೀಲೆ ’ (ನಾಲ್ಕನೆಯ ಮುದ್ರಣ-೧೯೫೫) ಅಂಬಿಕಾತನಯದತ್ತ, ಪುಟ ೮೯.

ಮುಖ ಪಶ್ಚಿಮಕ್ಕೆ; ಹಳ್ಳಿಯ ಶಾಲೆಯಲ್ಲಿ ಶಿಕ್ಷಣ ಮುಗಿಸಿದ ಮಧುರಚೆನ್ನರ ಮುಖ ಪಶ್ಚಿಮಕ್ಕೆ, ವಿಚಾರಸರಣಿ ಪಾಶ್ಚಾತ್ಯರದು, ಪದವೀಧರರಾದ ಜೇಂದ್ರೆಯವರ ಮುಖ ಪೂರ್ವಕ್ಕೆ, ವಿಚಾರಸರಣಿ ಪೌರ್ವಾತ್ಯರದು "[1] ಎಂದು ಹೇಳಿ, ಅದೇ ಪರಿಚಯ ಲೇಖನದಲ್ಲಿ ಮುಂದೆ ಬಂದು, "ಒಬ್ಬರು ಜ್ಞಾನಮಾರ್ಗದಲ್ಲಿ ನಡೆದರೆ, ಇನ್ನೊಬ್ಬರು ಭಕ್ತಿಮಾರ್ಗದಲ್ಲಿ ಸಾಗಿದ್ದಾರೆ. ಜ್ಞಾನಜ್ಯೋತಿಯಿಂದ ಭಕ್ತಿ ಒಬ್ಬರಲ್ಲಿ ಬೆಳಗಿದರೆ, ಭಕ್ತಿಯ ಹಣತೆಯಿಂದ ಜ್ಞಾನದೀಪವು ಇನ್ನೊಬ್ಬರಲ್ಲಿ ಮಿನುಗಿದೆ. "[2] ಎಂದೂ ನುಡಿದಿದ್ದಾರೆ. ಸಿಂಪಿಯವರ ಮೇಲಿನ ಹೇಳಿಕೆಯಿಂದ ಮಧುರಚೆನ್ನರು ಪಾಶ್ಚಾತ್ಯ ವಿಚಾರಸರಣಿಗೆ ಮಾರುಹೋದವರೆಂದೂ ಜೇಂದ್ರೆಯವರು ಪೌರ್ವಾತ್ಯ ಧೋರಣೆಗೇನೇ ಅಂಟಿಕೊಂಡವರೆಂದೂ ಅರ್ಥ ಹೊರಡುತ್ತದೆ. ಆದರೆ ಅವರಿಬ್ಬರ ಎಲ್ಲ ಕೃತಿಗಳನ್ನು ಅಭ್ಯಸಿಸಿದಾಗ ಅವರು ಪೌರ್ವಾತ್ಯ ತತ್ತ್ವಜ್ಞಾನದ ಜೊತೆಗೆ ಪಾಶ್ಚಾತ್ಯ ತತ್ತ್ವಜ್ಞಾನವನ್ನು ತೆರೆದ ಮನಸ್ಸಿನಿಂದ ಅಭ್ಯಸಿಸಿದ್ದುದು ತಿಳಿದುಬರುತ್ತದೆ. ಮಧುರಚೆನ್ನರು ಜ್ಞಾನಜಿಜ್ಞಾಸುಗಳಾಗಿ ಭಾರತೀಯ ವೇದೋಪನಿಷತ್ತು ಮೊದಲುಗೊಂಡು ಅರವಿಂದರ ಯೋಗದರ್ಶನದವರೆಗೆ ನಮ್ಮ ಅಧ್ಯಾತ್ಮ ಸಾಹಿತ್ಯದ ವ್ಯಾಸಂಗ ಮಾಡಿದ್ದಾರೆ. ಹಾಗೆಯೇ ಚಿಕಿತ್ಸಕ ಹಾಗೂ ಶೋಧಕ ಬುದ್ಧಿಯವರಾದ ಅವರು ಪಾಶ್ಚಾತ್ಯ ಮಾಹಾತ್ಮಾಏಸು ಮೊದಲಾಗಿ ದಾರ್ಶನಿಕ ಕವಿ ಎ. ಈ. ವರೆಗೆ ಅಧ್ಯಯನ ಮಾಡಿದ್ದಾರೆ. ಈ ಅಧ್ಯಯನವನ್ನೇ ಗಮನಿಸಿ ಮಧುರಚೆನ್ನರ ವಿಚಾರಸರಣಿ ಪಾಶ್ಚಾತ್ಯರದೆಂದು ಸಿಂಪಿಯವರು ಭಾವಿಸಿದಂತಿದೆ. ನಿಜವಾಗಿ ನೋಡಿದರೆ ಮಧುರಚೆನ್ನರ 'ಆತ್ಮಸಂಶೋಧನೆ' ನಡೆದಿದ್ದುದು ಪೌರ್ವಾತ್ಯ ದಾರಿಯಲ್ಲಿಯೇ ಹೊರತು ಪಾಶ್ಚಾತ್ಯ ಸರಣಿಯಲ್ಲಲ್ಲ. ಮಧುರಚೆನ್ನರು ತಮ್ಮ ಸಾಧನೆಯ ಬೆಳವಣಿಗೆಯನ್ನು ವಿವರಿಸುತ್ತ "'ಪೂರ್ವರಂಗ,' 'ಕಾಳರಾತ್ರಿ,' 'ಬೆಳಗು' ಎಂಬ ಪುಸ್ತಕಗಳಲ್ಲಿ ನಾನು ಶಿವಶರಣರ ಷಟ್‌ಸ್ಥಲಗಳಲ್ಲಿ ಆರಂಭವಾದವುಗಳಾದ ಭಕ್ತ, ಮಹೇಶ, ಪ್ರಸಾದಿ ಎಂಬ ಮೂರು ಸ್ಥಲಗಳವರೆಗೆ ಬಂದು ಮುಟ್ಟಿರುವೆನೆಂದು ಹೇಳಿದ್ದು, ಅವುಗಳ ಮುಂದಿನ ಪ್ರಾಣಲಿಂಗಿ (ಆತ್ಮಜ್ಯೋತಿ) ಸ್ಥಲಕ್ಕೆ ಹೇಗೆ ಬಂದು ಮುಟ್ಟೇನು ? ಎಂದು ಜೀವವು ಆತ್ಮನ ಪೂರ್ಣಾನುಭವಕ್ಕಾಗಿ ಕಾತರಿಸತೊಡಗಿತು. "[3] ಎಂದಿದ್ದಾರೆ. ಅಷ್ಟಲ್ಲದೆ ಸರ್ವಸಮರ್ಪಣದಿಂದ ಶ್ರೀ ಅರವಿಂದಯೋಗಿಗಳ ಮಹಾಸಾಗರದಂತಿರುವ ಪೂರ್ಣಯೋಗದಲ್ಲಿ ಸಮರಸಹೊಂದಲು ತಾವು ಹವಣಿಸುತ್ತಿದ್ದುದನ್ನು ಅವರು

---

1. 'ನನ್ನ ನಲ್ಲ' (ದ್ವಿತೀಯ ಮುದ್ರಣ-೧೯೫೫ ಕವಿ ಪರಿಚಯ) ಮಧುರಚೆನ್ನ, ಪುಟ ೪.
2. 'ನನ್ನ ನಲ್ಲ' (ದ್ವಿತೀಯ ಮುದ್ರಣ-೧೯೫೫ ಕವಿ ಪರಿಚಯ) ಮಧುರಚೆನ್ನ, ಪುಟ ೬.
3. 'ಆತ್ಮಸಂಶೋಧನೆ' ಮಧುರಚೆನ್ನ, ಪುಟ ೪೪.

ಹೆಜ್ಜೆ ಹೆಜ್ಜೆಗೂ ಹೇಳಿದ್ದಾರೆ. ಇದರಿಂದ ಮಧುರಚೆನ್ನರ ಧೋರಣೆ ಯಾವುದೆಂಬು ದನ್ನು ಕಂಡುಕೊಳ್ಳಬಹುದು.

ಬೇಂದ್ರೆಯವರ ಸಾಧನೆಯ ವಿಷಯವಾಗಿಯೂ ಈ ಸಂದರ್ಭದಲ್ಲಿ ಒಂದಿಷ್ಟು ತಿಳಿದುಕೊಳ್ಳುವದು ಉಚಿತವೆನಿಸುತ್ತದೆ. ಅವರ ಆತ್ಮಕಥನವಾದ 'ಕಾವ್ಯೋದ್ಯೋಗ' ದಲ್ಲಿ ಅವರ ಚತುರ್ಮುಖತೆಯ ದರ್ಶನವಿದೆ. ಅಲ್ಲಿಯೇ ಸಾಧನೆಯ ಸುಳುವು-ಹೊಳವುಗಳಿವೆ. "ವಿಷಯಗಳಾಚೆ ಇಂದ್ರಿಯಗಳಿವೆ. ಇಂದ್ರಿಯಗಳಾಚೆ ಮನಃ, ಮನದಾಚೆ ಬುದ್ಧಿ, ಬುದ್ಧಿಯಾಚೆಗೆ ಸಃ ರಸಃ, ರಸೋ ವೈ ಸಃ! ರಸೋಽಸ್ಮಿತೆಯ ಸಾಧನೆ "ಅಂಬಿಕಾತನಯದತ್ತನ ಕಾವ್ಯ, ಸೋಽಹಂ ದಾಸೋಽಹಂಗಳ ಮಧ್ಯೆ ರಸೋಽಹಂ ಮಾರ್ಗ ಇದು"[1] ಇನ್ನೂ ಮುಂದುವರಿದು "ಆಪೋ ಜ್ಯೋತಿಯ ರಸಾಮೃತಕ್ಕಾಗಿ ಸಾಹಿತ್ಯಸಾಧನೆ ಮಾಡುವುದು ಮಾನವ ಪ್ರಗತಿಯಲ್ಲಿ ಕ್ರಮ ಪ್ರಾಪ್ತವಾದುದು, ಕವಿಯ ಉದ್ಭವವಾದ ಬೇಂದ್ರೇನಿಗೂ ಈ ಸಾಧನೆ ತಪ್ಪಿದ್ದಲ್ಲ"[2] ಎಂದು ತಮ್ಮ ಸಾಧನೆಯ ಮಾರ್ಗವನ್ನು ಅದರ ಅನಿವಾರ್ಯತೆ ಯನ್ನು ಬೇಂದ್ರೆಯವರು ತಿಳಿಸಿದ್ದಾರೆ.

ಮಧುರಚೆನ್ನ ಮತ್ತು ಬೇಂದ್ರೆಯವರ ಉಕ್ತಿಗಳನ್ನೇ ಗಮನಿಸಿದಾಗ ಅವ ರಿಬ್ಬರ ಸಾಧನೆ ನಡೆದಿದ್ದುದು ಪೌರ್ವಾತ್ಯ ಸರಣಿಯಲ್ಲಿಯೇ ಎಂಬುದು ಖಚಿತ ವಾಗುತ್ತದೆ. ಹಾಗಾದರೆ ಬೇಂದ್ರೆಯವರು ಹೇಳಿದಂತೆ ಅವರು ತುಳಿದ ಬೇರೆ ಹಾದಿ ಗಳಾವವು? ಎಂಬ ಪ್ರಶ್ನೆ ಹಾಗೆಯೇ ಉಳಿದು ಬಿಡುತ್ತದೆ. ಸಿಂಪಿಯವರ ಇನ್ನೊಂದು ಹೇಳಿಕೆಯಲ್ಲಿ ಸೂಚಿತವಾದಂತೆ ಮಧುರಚೆನ್ನರು ಭಕ್ತಿಮಾರ್ಗ ದಲ್ಲಿಯೂ ಬೇಂದ್ರೆಯವರು ಜ್ಞಾನಮಾರ್ಗದಲ್ಲಿಯೂ ನಡೆದುಬಂದಂತೆ ತೋರು ತ್ತದೆ. ಅವರಿಬ್ಬರಲ್ಲಿ ಜೀವನಚರಿತ್ರಾತ್ಮಕ ಕೃತಿಗಳಿಂದಲೂ ಒಬ್ಬರಲ್ಲಿ ಭಕ್ತಿ, ಇನ್ನೊಬ್ಬರಲ್ಲಿ ಜ್ಞಾನ ವಿಶೇಷವಾಗಿರುವದನ್ನೂ ಕಾಣಬಹುದು.

ಈ ಇಬ್ಬರು ಕವಿ-ಸಾಧಕರು ಅವರವರ ಮಾರ್ಗ ಸುಲಭವಾಗಲು, ಸಾಧ ನೆಯು ನಿರ್ವಿಘ್ನವಾಗಿ ಸಾಗಲು, ಎಲ್ಲಕ್ಕೂ ಮಿಗಿಲಾಗಿ ಮನವು ಉನ್ಮನವಾಗಲು ಪರಸ್ಪರರನ್ನು ಹಾಡಿ ಹರಿಸಿದ್ದಾರೆ. ಮಧುರಚೆನ್ನರ 'ಮಂಗಲಸಪ್ತಕ' ಬೇಂದ್ರೆ ಯವರ 'ಹರಕೆ' ಇವು ಅಂಥ ಗೀತ ಮೌಕ್ತಿಕಗಳು. ಇಲ್ಲಿ ಅವರ ಹೃದಯದ ಪ್ರದೀಪ್ತ ಹಂಬಲವಿರುವದರ ಜೊತೆಗೆ ನಮ್ಮ ಅನುಭಾವ ಪರಂಪರೆಯ ಸಾರಭೂತ ಸಿದ್ಧಾಂತವಿರುವದನ್ನು ನಾವು ಕಾಣುವೆವು. ಕನ್ನಡ ಭಾವಗೀತ ಪ್ರಪಂಚದಲ್ಲಿಯೇ ಅಪರೂಪ ಕವಿತೆಗಳಿವು.

---

1. 'ಕಾವ್ಯೋದ್ಯೋಗ' (ಮನ್ವಂತರ ಸಂಪುಟ ೧–೧೯೬೩) ದ ರಾ. ಬೇಂದ್ರೆ, ಪುಟ ೨೬.
2. ಅದೇ (ಮನ್ವಂತರ ಸಂಪುಟ ೧–೧೯೬೩) ದ. ರಾ. ಬೇಂದ್ರೆ, ಪುಟ ೩೮.

ಕಣ್ಣಲ್ಲಿ ಕಿಸುಕಿಚ್ಚು ಕಟ್ಟಿ ಹಾಕಿದ ನಮ್ಮ
ಕಾಲರುದ್ರನೆ ಇತ್ತ ಕಣ್ಣನಿಟ್ಟು,
ಅಣ್ಣ ದತ್ತನ ಬಗೆಯ ಬೇಗೆಯನು ತಣ್ಣಿಸೈ
ಬಾಲ ಭಕ್ತನ ಮೊರೆಗೆ ಕಿವಿಯಗೊಟ್ಟು. [1]

ಹೀಗೆ ಪ್ರಾರಂಭವಾಗುವ ಮಧುರಚೆನ್ನರ 'ಮಂಗಲ ಸಪ್ತಕಂ' ಭಕ್ತನ ಆರ್ತಹೃದಯದ ಪ್ರಾರ್ಥನಾಗೀತವಾಗಿದೆ. ಈ ಕಾಲರುದ್ರನ ನಂತರ ನಿತ್ಯ ನಿರ್ಮಲರೂಪ ಮಾರಹರನಲ್ಲಿ ಮಿತ್ರದತ್ತನ ಮನದ ಮೈಲಿಗೆ ಮಾಣಿಸಲು, ಶುದ್ಧಿಯನು ವರ್ಧಿಸಿದ ವರ್ಧಮಾನ ಪ್ರಭುವಿನಲ್ಲಿ ಮುದ್ದುದತ್ತನ ಬಗೆಯ ಬನದಲ್ಲಿ ಬೇಟೆಯಾಡಲು ಪ್ರಾರ್ಥಿಸಿದ್ದಾರೆ. ಹಾದಿಯಿಲ್ಲದೆ ಹರಿವ ಮರುಳುಮನವನ್ನು ಬುದ್ಧಿಬಲದಿಂದ ಬದ್ಧಗೊಳಿಸಿದ ಬುದ್ಧದೇವನಲ್ಲಿಯೂ ಮೊರೆಯಿಟ್ಟಿದ್ದಾರೆ. ಅಣ್ಣದತ್ತನ ಮನದ ಮುಸುಕು ಸರಿಸಲು ಭೂತನಾಥನಲ್ಲಿ ಓತು ಬೇಡಿಕೊಂಡಿದ್ದಾರೆ. ದುರಿತಹಾರಿಣಿಯಾದ ನಿರ್ಜರ ತರಂಗಿಣಿಗೆ ಅಣ್ಣದತ್ತಾತ್ರಯನ ಮನವನ್ನು ಮಡಿಗೊಳಿಸಲು ಅಲ್ಪರಿದಿದ್ದಾರೆ. ಕೊನೆಗೆ ಗುಹೇಶ್ವರನ ಗುಹೆಯ ಗುಹ್ಯವಚನ ನುಡಿವ ಅಲ್ಲಮಪ್ರಭುದೇವನಲ್ಲಿ ಅಣ್ಣದತ್ತನ ಬಗೆಯ ಬಿಲದ ಬರ್ದಿಲದಲ್ಲಿ ಗುಹ್ಯಜ್ಯೋತಿ ಬೆಳಗಿಸಲು ಹೃತ್ಪೂರ್ವಕವಾಗಿ ಹಾರೈಸಿದ್ದಾರೆ.

ಬೇಂದ್ರೆಯವರ 'ಹರಕೆ' ಇಪ್ಪತ್ತು ಸಂವತ್ಸರಗಳನ್ನು ಮುಗಿಸಿದ ಮಧುರಚೆನ್ನರ ಹುಟ್ಟುಹಬ್ಬಕ್ಕೆಂದು (೧೯೩೩) ಬರೆದ ಇಪ್ಪತ್ತು ನುಡಿಗಳುಳ್ಳ ಶುಭ-ಮಂಗಲಗೀತ.

ಎರೆಯುವೆನು ಬಾ ನಿನ್ನ, ನಮ್ಮ ಪಟ್ಟದ ಮರಿಯೆ
ಸಕಲ ತೀರ್ಥದ ಕ್ಷೀರ ನೀರ ತಂದು
ಬೆರಗಾಗಿ ಬೆರೆತು ಆ ಶಿವನಲ್ಲಿ, ದೇವನಲಿ
"ಪಡದಪ್ಪನಾಗು" ಎಂದು. [2]

ಸಕಲ ತೀರ್ಥದ ಕ್ಷೀರ ನೀರಿಗಿರುವ ತಾತ್ತ್ವಿಕಹಿನ್ನೆಲೆ ಮತ್ತು ದಿವ್ಯಪರಿಣಾಮಗಳನ್ನು ಅನುಲಕ್ಷಿಸಿ 'ಪಡದಪ್ಪ' [3] ನಾಗಲು ಬೇಂದ್ರೆಯವರು ಹರಸಿದ್ದಾರೆ. ಈ

---

1. 'ನನ್ನನಲ್ಲ' (ದ್ವಿತೀಯ ಮುದ್ರಣ-೧೯೫೫) ಮಧುರಚೆನ್ನ, ಪುಟ ೮೭.
2. 'ಸೂರ್ಯಪಾನ' (ಪ್ರಥಮ ಮುದ್ರಣ-೧೯೫೬) ಅಂಬಿಕಾತನಯದತ್ತ, ಪುಟ ೮೭.
3. ಮಠಾಧಿಪತಿಗಳು ತಮ್ಮ ನಂತರ ಪಟ್ಟದ ಅಧಿಕಾರಿಯಾಗಲು ಶಿಷ್ಯರನ್ನು (ಮರಿಗಳನ್ನು) ಗೊತ್ತುಮಾಡಿರುತ್ತಾರೆ. ಮುಂದೆ ಪಟ್ಟದಅಪ್ಪ ಆಗುವ ಇವರನ್ನು 'ಪಡದಪ್ಪ' ಎಂದು ಕರೆಯುವ ವಾಡಿಕೆಯಿದೆ. ಆತ್ಮಸಾಕ್ಷಾತ್ಕಾರ ಪಡೆದವರನ್ನು "ಪಡದಪ್ಪ" ಎನ್ನುವುದೂ ಉಂಟು.

ಕ್ಷೀರ ನೀರಿನಲ್ಲಿ ನಿಃಸಂಗಳಾದ ಗುಪ್ತಗಂಗೆ ಶಾಲ್ಮಲೆಯ ನೀರು, ಹರಿಹರರ ಕಾಲ್ತೊಳೆವ ದಕ್ಷಿಣದ ಗಂಗೆ ತುಂಗಭಂದ್ರೆಯ ಪುಣ್ಯಜಲ, ನಮ್ಮ ತಾಯಿಯ ಸೆರಗಿನಂಚಾಗಿದ್ದ ಭವ್ಯಗೋದೆಯ ದಿವ್ಯಜಲ, ನಮ್ಮ ತಾಯಿಯ ದಿವ್ಯ ಶ್ರೀರಂಗ ಪಾದವ ತೊಳೆವ ಕಾವೇರಿಯ ನೀರು, ವಿಠಲನ ಅಡಿಯನ್ನು ಬಿಟ್ಟು ಮುಟ್ಟುವ ನದಿಯ ನೀರು, ಘಟ್ಟ ಮಲೆಗಳ ಬಿಟ್ಟು ತಾರಕರ ಬಿಸುದಿಟ್ಟು ಹರಿವ ನದಿಗಳ ಮಡಿಯ ನೀರು ಹಾಗೂ ಕರಿನಾಡ ಕನ್ಯೆ ಕೃಷ್ಣೆಯ ಕೂಡಲದ ನೀರು ಇದ್ದು, ಆ ಎಲ್ಲ ಪುಣ್ಯ ಜಲದಿಂದ ನಿಃಶಂಕನಾಗಲು, ಸಮರಸಿಯಾಗಲು, ಸೆರಗು ಬೆರಗಿಲ್ಲದ ಕಲಿಯಾಗಲು, ಶ್ರಿಪಾದರೇಣುವಾಗಲು, ಭಕ್ತಿಯ ಮೆಟ್ಟಲು, ಕೊನೆಗೆ ಅರಿವಾಗಿ-ತಾನೆ ತಾನಾಗಿ-ಪಡದಪ್ಪನಾಗಲು ಹರಸಿದ್ದಾರೆ. ಅಷ್ಟಲ್ಲದೆ ಘನ್ನ ತೀರ್ಥಂಕರರ ಪೂಜ್ಯಪಾದಗಳ ತೀರ್ಥತಂದು, ಕಲ್ಯಾಣದಧ್ಯಕ್ಷ ಪ್ರಭುಅಲ್ಲಮನ ಗುರುಪಾದ ತೀರ್ಥತಂದು, ಉಡುಪಿಯೊಡೆಯನ ಅಡಿಯನುಡುಪು ಮಾಡುವ ಆನಂದತೀರ್ಥ-ತಂದು ದೇವಿಯೊಲಿದ ಮಾಧವನ ವಿದ್ಯಾತೀರ್ಥ ತಂದು; ಕನ್ನಡದ ಕವಿತಿಲಕರ ಕಾವ್ಯಗಂಗಾಪ್ರಹಾಹದಲ್ಲಿ ಮಿಂದೇಳಲು, ಶಿವಶರಣನಾಗಲು, ಪುರುಷೋತ್ತಮನ ದಾಸನಾಗಲು, ಸರ್ವಸನ್ಯಾಸಿಯಾಗಲು ಎರೆದಿದ್ದಾರೆ.

> ಈ ನಾಡು ಅವನ ಹೊಲ ! ಇದರವೊಕ್ಕಲಿಗನವ
> ನಾ ನೀನು ರಂಟೆ ಕುಂಟೆ. [1]

ಎಂದು ಭಗವಂತನ ಉಪಕರಣ ಮಾತ್ರವಾದ ತಮ್ಮ ಇರುವಿಕೆಯನ್ನು ಮನದಟ್ಟು ಮಾಡಿಕೊಂಡು, ಜಗದ ಪಟ್ಟವನೇರಿ ಕುಳಿತು ಕರುನಾಡಿನಲ್ಲಿ ಕಾಲನಿಟ್ಟ ಜಗದ್ಗುರುವಿನ (ಶ್ರೀ ಅರವಿಂದರ) ಅಡಿಯ ಹುಡಿಯಾಗಲು ಆತ್ಮನಿವೇದನೆ ಮಾಡಿಕೊಂಡಿದ್ದಾರೆ.

> ' ಸೋಲು ' ಹುಂಬರ ಗುಲ್ಲು, ' ಗೆಲುವು ' ಕಾಣ್ಬರ ಸೊಲ್ಲು
> ಸೋಲುವವ ತಾನೆಂದು ಶರಣನಲ್ಲ. [2]

ಎಂದು ಶರಣತನದ ಸೋಲರಿಯದ ಎದೆಗಾರಿಕೆಯನ್ನೂ ತಿಳಿಸಿಕೊಟ್ಟಿದ್ದಾರೆ, ಅದರೊಂದಿಗೆ ತಮ್ಮ ಕರ್ತವ್ಯವೇನೆಂಬುದನ್ನು ಹೇಳಿಬಿಟ್ಟಿದ್ದಾರೆ.

> ಉಸುರು ಉಸುರಿಗೆ ಅವನ ಹೆಸರ ಸಾರುತ್ತಿರುವ
> ಗಾಳಿಯಂದದಿ ನಾವು ಚರಿಸಬೇಕು.

---

1. ' ಸೂರ್ಯಪಾನ ' (ಪ್ರಥಮ ಮುದ್ರಣ-೧೯೫೬) ಅಂಬಿಕಾತನಯದತ್ತ, ಪುಟ ೯೦
2. ' ಸೂರ್ಯಪಾನ ' (ಪ್ರಥಮ ಮುದ್ರಣ-೧೯೫೬) ಅಂಬಿಕಾತನಯದತ್ತ, ಪುಟ ೯೦

> ಹೆಸರು ಹೆಸರಿಗೆ ಅವನ ಕುಸುರು ತೋರುವ ಹಾಗೆ
> ಬೆಳಕನ್ನು ಸುರಿಸಬೇಕು. [1]

ಬೇಂದ್ರೆಯವರ ಈ 'ಹರಕೆ' ಮಧುರಚೆನ್ನರ ಜೀವನದಲ್ಲಿ ಫಲಿಸಿತು. ಅವರು ಉಸುರು ಉಸುರಿಗೆ ಅವನ ಹೆಸರು ಸಾರಿ, ಬೆಳಕನ್ನು ಸುರಿಸಿ ಬೆಳಗಿನೊಳಗಣ ಬೆಳಗಾದರು. [2]

ಸರಿಯಾಗಿ ಅರ್ಧ ಶತಮಾನ ಬಾಳಿದ ಮಧುರಚೆನ್ನರಿಗೆ ಸುಮಾರು ಮೂರು ದಶಕಗಳಿಗಿಂತಲೂ ಹೆಚ್ಚು ಕಾಲ ಬೇಂದ್ರೆಯವರ ಒಡನಾಟ ಬಂದಿದೆ. ಗೆಳೆಯರಾಗಿ ಕೂಡಿದ ಅವರು ಅಣ್ಣ-ತಮ್ಮಂದಿರಾಗಿ ನಡೆದುಕೊಂಡಿದ್ದಾರೆ. ಪರಸ್ಪರರು ಬೇರೆ ಬೇರೆ ಊರುಗಳಲ್ಲಿರುತ್ತಿದ್ದರೂ ಮೇಲಿಂದ ಮೇಲೆ ಬೆರೆಯುತ್ತ ಬಂದಿದ್ದಾರೆ. ಅದು ಅವರ ಬಾಂಧವ್ಯದ ಸಹಜ ಜೀವನಕ್ರಮವೂ ಆಗಿದೆ. "ಅಣ್ಣ ಬೇಂದ್ರೆಯವರ ಭೆಟ್ಟಿಗೆ ನನ್ನ ಪ್ರತಿ ವರ್ಷದ ಪದ್ಧತಿಯಂತೆ ಹೋಗಿದ್ದೆ. ಸುಮಾರು ಪ್ರತಿವರುಷವೂ ಅವರ ಸಹವಾಸದಲ್ಲಿರುವುದು ಆಗಿನ ನನ್ನ ಕ್ರಮ." [3] ಎಂದು ಮಧುರಚೆನ್ನರು ಹೇಳಿಕೊಂಡಿದ್ದರೆ "ನಾನು ಪೂನಾದಲ್ಲಿದ್ದರೆ ಅಲ್ಲಿ ಬಂದ, ಸೊಲ್ಲಾಪುರಕ್ಕೆ ಬಂದ, ಧಾರವಾಡಕ್ಕೆ ಬಂದೇಬಂದ" [4] ಎಂದು ಬೇಂದ್ರೆಯವರು ಸ್ಮರಿಸಿಕೊಂಡಿದ್ದಾರೆ. ಅದರ ಜೊತೆಗೆ ಕೌಟುಂಬಿಕ ಬಾಂಧವ್ಯದ ಹೊಕ್ಕುಬಳಕೆಯನ್ನೂ ಬೇಂದ್ರೆಯವರು ಉಲ್ಲೇಖಿಸಿದ್ದಾರೆ. "ನಾನು ಸೊಲ್ಲಾಪುರದಲ್ಲಿ ೧೯೪೪-೧೯೫೬ ವರೆಗೆ ಇದ್ದೆ. ಹನ್ನೆರಡು ಸಲವಾದರೂ ನಾನು ಹಲಸಂಗಿಗೆ ಹೋದೆ. ಚೆನ್ನಮಲ್ಲಪ್ಪ ಅವನ ಬಳಗದವರು, ಮಕ್ಕಳು, ಸೊಸೆಯಂದಿರು, ಅವರ ಮನೆಯ ಜನ, ಮೊಮ್ಮಕ್ಕಳು –ಸೊಲ್ಲಾಪುರಕ್ಕೆ ಇಪ್ಪತ್ತು ಸಲ ತಂಗಿ ನಿಂತು, ಬಂದರು ಹೋದರು. ಈ ನೆಯ್ಗೆ ನೆಯ್ದದ್ದು ದೈವಯೋಗ" [5] ಎಂದು ಹೇಳಿ, ಈಗಲೂ ಆ ಸಂಬಂಧ ಹಾಗೆಯೇ ಮುಂದುವರೆದಿದ್ದುದನ್ನು ತಿಳಿಸಿದ್ದಾರೆ.

ಅವರ ಆ ದೈವಯೋಗ ನೆಯ್ದ ನೆಯ್ಗೆ ಬಾಳಬಟ್ಟೆಯ ಪರಮಾಗಮವಾಗಿದೆ. ಮಧುರಚೆನ್ನ ಮತ್ತು ಬೇಂದ್ರೆಯವರ ಸಹವಾಸದಲ್ಲಿ ಭಗವದುಪಾಸನೆಯ ನೆಲೆ

---

1. 'ಸೂರ್ಯಪಾನ' (ಪ್ರಥಮ ಮುದ್ರಣ-೧೯೫೫) ಅಂಬಿಕಾತನಯದತ್ತ, ಪುಟ ೯೦
2. ಮಧುರಚೆನ್ನರು ದೇಹವಿಟ್ಟುದು-೧೫ ನೆಯ ಆಗಷ್ಟ ೧೯೫೩
3. 'ಆತ್ಮಸಂಶೋಧನೆ' : ಮಧುರಚೆನ್ನ ........ ಪುಟ ೪
4. 'ಬೆಳಕಿನ ಹೆಜ್ಜೆ' (ಹಲಸಂಗಿ ಅರವಿಂದ ಮಂಡಲದ ಬೆಳ್ಳಿ ಹಬ್ಬದ ನೆನಹಿನ ಹೊತ್ತಿಗೆ........) ಪುಟ ೧೯೦
5. 'ಬೆಳಕಿನ ಹೆಜ್ಜೆ' (ಹಲಸಂಗಿ ಅರವಿಂದಮಂಡಲದ ಬೆಳ್ಳಿಹಬ್ಬದ ನೆನಹಿನ ಹೊತ್ತಿಗೆ ೧೯೬೮) ಪುಟ ೨೮೯

ಯಿದ್ದು ಆವರ ಓದು ಪಾರಾಯಣವಾಗಿದೆ. ಅವರ ಸಂಗದ ವ್ಯಾಸಂಗ ಅನುಭಾವದ ಆಕಲನಕ್ಕೆ ದಾರಿ ಮಾಡಿಕೊಟ್ಟದೆ. ಇದಕ್ಕೊಂದು ನಿದರ್ಶನವನ್ನು ಕೊಡಬಹುದು.

ಆಯ್‌ರಿಶ್ ಕವಿ ಎ. ಈ. (ಜಾರ್ಜ ರಸೆಲ್) ಗೆಳೆಯರ ಗುಂಪಿನ ಒಬ್ಬ ಗುರು. ಆತನ ಕೃತಿಗಳ ವ್ಯಾಸಂಗವನ್ನು ಗೆಳೆಯರೆಲ್ಲ ಮಾಡಿದ್ದಾರೆ. ಎ. ಈ. ಅವರ 'ದರ್ಶನದೀಪಿಕೆ' (Candle of Vision) ಮೊದಲು ಪಡೆದವರು ಬೇಂದ್ರೆಯವರು. ಅನಂತರ ಗುಂಪಿನ ಗೆಳೆಯರಲ್ಲನೇಕರು ಅದನ್ನು ಓದಿ, ಅದರ ತಿರುಳನ್ನು ತಿಳಿಯಲು ಯತ್ನಿಸಿದರು. ಮಧುರಚೆನ್ನರು ಅದನ್ನು ಹೇಗೆ ಅಭ್ಯಸಿಸಿದರೆಂಬುದನ್ನು ಬೇಂದ್ರೆಯವರ ಮಾತಿನಲ್ಲಿಯೇ ನೋಡಬೇಕು. "ಅದನ್ನು ಅರಿದು ಕುಡಿದವ ಮಧುರಚೆನ್ನ. ೨೦-೨-೩೦; ೩೦-೭-೩೦ ಕ್ಕೆ ಎರಡು ಪಾರಾಯಣ ಮುಗಿಸಿ; ಮತ್ತೆ ೧೬-೪-೩೫, ೧೩-೧೧-೩೫ ಕ್ಕೆ ಎರಡು ಪಾರಾಯಣ ಮುಗಿಸಿದ ಉಲ್ಲೇಖ ಅವನ ಹಸ್ತಾಕ್ಷರದಲ್ಲಿಯೇ ಈ ನನ್ನ ಪ್ರತಿಯಲ್ಲಿದೆ. 'ಕಾಣದ ಕಂಚಿನ ಗೌರಿಯನ್ನು | ಕಾಣುವ ಕಣ್ ನಮಗಿಲ್ಲೇನು ?!'— ಮಧುರಚೆನ್ನ (ಚೆನ್ನಮಲ್ಲಪ್ಪ ಗಲಗಲಿ, ಹಲಸಂಗಿ), ಎ. ಈ. ಅವರ ಜನ್ಮ ತಾರೀಖನ್ನೂ ಆ ಕಾಲದ ಗ್ರಹಗಳನ್ನೂ ಸಂಗ್ರಹಿಸಿ Candle of Visionದ ಹಿಂಬದಿಗೆ ಬರೆದಿದ್ದಾರೆ"[1] ಹೀಗೆ ಅವರ ಕೂಲಂಕಷ ವ್ಯಾಸಂಗದ ರೀತಿಯಾಗಿತ್ತು. Candle of Visionದ ಪಾರಾಯಣದ ಫಲಶ್ರುತಿಯನ್ನು ಹೇಳುತ್ತ ಮಧುರಚೆನ್ನರು "ಎ. ಈ ಅವರ ದರ್ಶನ ದೀಪಿಕೆ ಅಥವಾ ಕ್ಯಾಂಡಲ್ ಆಫ್ ವಿಜನ್ ಎಂಬ ಪುಸ್ತಕ ಓದುವದರಿಂದ ಅಂತರ್ಮಾನಸ ಸಾಮ್ರಾಜ್ಯದ ಅಸ್ತಿತ್ವವು ಬುದ್ಧಿಗ್ರಾಹ್ಯವಾಯಿತು"[2] ಎಂದಿದ್ದಾರೆ.

ಹೀಗೆ ಅವರು ವ್ಯಾಸಂಗದಿಂದ ತಮ್ಮ ಅಂತರಂಗದ ವಿಕಾಸವನ್ನು ಕಂಡುಕೊಂಡರು. ಅದರ ಜೊತೆಗೆ ತಮ್ಮ ಆತ್ಮೀಯತೆಯ ಶ್ರದ್ಧೆಯನ್ನು ಅವರು ಸೂರೆಗೊಳಿಸಿದ್ದುಂಟು. ಶ್ರೀ ಗೋಕಾಕರು ಎ. ಈ. ಅವರ "ಕಲೆಕ್ಟೆಡ್ ಪೋಯಮ್ಸ್" ಪ್ರತಿಯಲ್ಲಿ ತಮ್ಮ ಅಭ್ಯಾಸದಿಂದ ಕಂಡುಕೊಂಡ :

A. E. the Seer
D. R. ,, ,,

ಎಂಬ ಶ್ರದ್ಧೆಯ ಸಮೀಕರಣ ಸೂತ್ರವನ್ನು ಬರೆದಿಟ್ಟದ್ದಾರೆ. ಈ ಸಂದರ್ಭದಲ್ಲಿ ನಡೆದ ಇನ್ನೊಂದು ಸ್ನೇಹದ ಸೊಗಸಾದ ವಿಷಯವನ್ನು ಬೇಂದ್ರೆಯವರು ಪ್ರಕಟ

---

1. 'ಕಾವ್ಯೋದ್ಯೋಗ' [ ಮನ್ವಂತರ ಸಂಪುಟ ೧–೧೯೬೨ ] ದ. ರಾ. ಬೇಂದ್ರೆ, ಪುಟ ೬೬.
2. 'ಪೂರ್ವರಂಗ' ––ಮಧುರಚೆನ್ನ, ಪುಟ ೭೫.

ಗೊಳಿಸಿದ್ದಾರೆ. ಗೋಕಾಕರಿಗೆ ಆ ಕೃತಿಯನ್ನು ಕಾಣಿಕೆ ಕೊಡುತ್ತ Ma Said to Da (Ma = ಮಾಸ್ತರ = ಬೇಂದ್ರೆಯವರು, Da = ದಾದಾ = ಗೋಕಾಕರು) ಎಂದು ಹೇಳುತ್ತಿರುವದನ್ನು ಬರೆದಿಟ್ಟುಕೊಂಡ ಮಧುರಚೆನ್ನರು Che is a branch by himself (Che = ಚೆನ್ನಮಲ್ಲಪ್ಪ = ಮಧುರಚೆನ್ನ) ಎಂದು ಮುಂದಿನ ಕೊಂಡಿ ಜೋಡಿಸಿದ್ದಾರೆ. ಹೀಗೆ ಅವರ ಸಖ್ಯದ ಆಖ್ಯಾನವಿದೆ.

ಮಧುರ ಚೆನ್ನರ ಆಧ್ಯಾತ್ಮಿಕ ಆತ್ಮಚರಿತ್ರೆಯ ಕೊನೆಯ ಭಾಗ 'ಆತ್ಮ ಸಂಶೋಧನೆ' ಅವರ ಪ್ರಥಮ ಪುಣ್ಯತಿಥಿಯಂದು (೧೫-೮-೧೯೫೪) ಪ್ರಕಟ ವಾಯಿತು. ಅದರ ಮುನ್ನುಡಿಯ ಮುಕ್ತಾಯದಲ್ಲಿ ಬಹಳ ದಿನಗಳ ಹಿಂದೆಯೇ (ಭಾ. ಶು. ೮, ರಕ್ತಾಕ್ಷಿ- ೧೯೪೬ ಪುಣೆ) ಬರೆದ ಬೇಂದ್ರೆಯವರ ಗೀತವೊಂದಿದೆ:

> ಮಾತಾಡೋ ಮಾತಾಡೊ ಲಿಂಗವೇ ನೀ।
> ಮಾತಾಡಲೊಲ್ಲೇಕೊ ಲಿಂಗವೆ
> ಮಾತಿನ ತಾಯಾದ ಮೌನದ ಬಸುರಲಿ
> ಹೂತೆಯಾ ಹೇ ಚೆನ್ನಲಿಂಗವೇ ॥ [1]

ಹೀಗೆ ಪ್ರಾರಂಭವಾಗುವ ಈ ಗೀತದಲ್ಲಿ ಪರೆಯ ಮರೆಯಲ್ಲಿರುವ ಲಿಂಗವು ಪರಿ ಯುಚ್ಚಿಬರುವ ದಿನಕ್ಕಾಗಿ ನಿರೀಕ್ಷಿಸುವ, ಆಳ ತಿಳಿಯದ ಬಾಳಿನಲ್ಲಿ ಆಳುವ ಆ ದೇವಿಯ ಕುರುಹವನ್ನು ಕಂಡರಿಸುವ ಅನುಭಾವದ ಒಪ್ಪವಿದೆ. ಬೆಡಗಿನ ವಚನ ದಂತಿರುವ ಈ ಕವಿತೆ ರಚನೆಯಾದದ್ದು ಮೌನಲೀನ ಮಧುರಚೆನ್ನರನ್ನು ಮಾತಾ ಡಿಸಲೆಂದು. [2] ಈ ಸಂದರ್ಭವನ್ನು ನೆನೆದರೆ ಅವರದು ಎಂಥ ಸ್ನೇಹ ! ಎಂಥ ಸ್ನೇಹ ವಿರಹ !! ಎಂದು ನಾವು ಬೆರಗು ಪಡುವೆವು.

ಮಧುರಚೆನ್ನರು ದೈಹಿಕವಾಗಿ ಇಂದಿಲ್ಲವಾದರೂ ಅವರ ಆತ್ಮತೇಜಸ್ಸು ಅವರ ಸಾಹಿತ್ಯಕೃತಿಗಳ ಮೂಲಕ ಅಮರವಾಗಿ ಇದೆ. ಬೇಂದ್ರೆಯವರ ಮಟ್ಟಿ ಗಂತೂ ಅವರು ಮೊದಲಿದ್ದಂತೆಯೇ ಇದ್ದಾರೆ. "ನನ್ನ ಮಟ್ಟಿಗೆ ಆ ಜೀವ ಇದೆ.

---

1. 'ಆತ್ಮಸಂಶೋಧನೆ' (ಮುನ್ನುಡಿ) ಮಧುರಚೆನ್ನ, ಪುಟ ೫ ಮತ್ತು 'ಸೂರ್ಯಪಾನ' (ಪ್ರಥಮ ಮುದ್ರಣ-೧೯೫೬) ಅಂಬಿಕಾತನಯದತ್ತ, ಪುಟ ೮೧.
2. ಹಲಸಂಗಿಯ ಅರವಿಂದ ಮಂಡಳದ, ೧೯೬೪ರಲ್ಲಿ ನಡೆದ ವಾರ್ಷಿಕೋತ್ಸವಕ್ಕೆ ಆಗಮಿ ಸಿದ ಪೂಜ್ಯ ಬೇಂದ್ರೆಯವರು....ಮಧುರಚೆನ್ನರ ಚಿರಂಜೀವ ಯೋಗೀಶನು ಈ ಗೀತ ವನ್ನು ಹಾಡಿದಾಗ....ಅದರ ಸಂದರ್ಭ ನೆನೆದುಕೊಂಡು "ನಾನು ಪುಣೆಯಲ್ಲಿದ್ದೆ. ಚೆನ್ನಮಲ್ಲಪ್ಪನಿಂದ ಬಹಳ ದಿನಗಳಿಂದ ಕಾಗದ ಬರಲಿಲ್ಲ ಏಕೆ ಈ ಮೌನ? ಎಂದು ಚಿಂತಿಸಿ ಈ ಕವಿತೆ ಬರೆದೆ" ಎಂದು ಹೇಳಿದ್ದುದು ನನಗೆ ನೆನಪಿದೆ.

ನನ್ನ ಜೀವನದಲ್ಲಿ ಎಡಬಲಕ್ಕೂ, ಹಿಂದೆ ಮುಂದೆಯೂ, ಮೇಲು ಕೆಳಗೂ ನಿಂತು ಕೊಂಡು 'ಅಣ್ಣಾ' ಎಂದು ಸಂಬೋಧಿಸಿ, ಅಂದು ಎಚ್ಚರಿಸಿದಂತೆ ಇಂದೂ ಎಚ್ಚರಿಸುತ್ತಲಿದೆ. [1] ಎಂಬ ಬೇಂದ್ರೆಯವರ ಕರುಳಿನ ನುಡಿಯಲ್ಲಿ ಅವರ ಬಾಂಧವ್ಯದ ಅಮರ ಬೆಸುಗೆಯನ್ನು ಕಾಣಬಹುದು.

ಹೀಗಿರುವ ಮಧುರಚೆನ್ನ, ಬೇಂದ್ರೆಯವರು ತಮ್ಮ ಗೆಳೆತನದ ಅನುಭವವನ್ನೂ ಆಯಾ ಸಂದರ್ಭದಲ್ಲಿ ರಸಪಾಕಗೊಳಿಸಿ ಕವಿತೆಗಳಲ್ಲಿ ಎರಕಹೊಯ್ದಿಟ್ಟುದುದು ನಮ್ಮ ಭಾಗ್ಯವೆಂದೇ ಹೇಳಬೇಕು. ಈ ಕವಿತೆಗಳ ರಸಾನುಸಂಧಾನದಿಂದ ಸಾಮಾನ್ಯ ಸ್ನೇಹ ಜೀವಿಗಳಿಗೆ ಗೆಳೆತನದ ಶುಚಿ-ರುಚಿಯ ಪರಿಜ್ಞಾನವಾಗುವುದು. ಸಾಧಕ ಸ್ನೇಹಿತರಿಗೆ ಅವರ ಸಾಧನಪಥದಲ್ಲಿ ಹೊಸ ಬೆಳಕು ತೋರುವುದು.

§ § § §

1. : ಆತ್ಮಸಂಶೋಧನೆ (ಮುನ್ನುಡಿ) ಮಧುರಚೆನ್ನ, ಪುಟ ೪.

# ೧೨ ಬೇಂದ್ರೆಯವರ ಕವಿತೆಯಲ್ಲಿ ಜಾನಪದಮೋಡಿ

**ಗುಂಡ್ಮಿ, ಚಂದ್ರಶೇಖರ ಐತಾಳ**

೧

ಶ್ರೀ ದ. ರಾ. ಬೇಂದ್ರೆಯವರು ಮಹಾಕವಿ ಹೌದೋ, ಅಲ್ಲವೋ ಎಂಬ ಬಗೆಗೆ ವಿದ್ವಾಂಸರಲ್ಲಿ, ವಿಮರ್ಶಕರಲ್ಲಿ ಒಮ್ಮತವಿಲ್ಲ. ಆದರೆ ಅವರು ಮಹಾಕಾವ್ಯವನ್ನು ಬರೆಯದ, ಭಾವಗೀತದ ಮಹಾಕವಿ ಎಂಬುದರಲ್ಲಿ ಬಹುಶಃ ಎರಡು ನುಡಿಯಿಲ್ಲ. ಮಹಾಕಾವ್ಯವನ್ನು ಬರೆದೇ ಒಬ್ಬ ಮಹಾಕವಿಯೆನಿಸಬೇಕೆಂದಿಲ್ಲ. ಬಂಗಾಳಿ ಭಾಷೆಗೆ ರವೀಂದ್ರನಾಥ ಠಾಕೂರರು ಹೇಗೋ, ಕನ್ನಡ ಭಾಷೆಗೆ ಬೇಂದ್ರೆಯವರು ಹಾಗೆ. ಪಟ್ಟಪಾಡೆಲ್ಲವನ್ನೂ ಹುಟ್ಟುಹಾಡಾಗಿಸುತ್ತ ಹಾಡಿದ ಹುಟ್ಟುಕವಿ ಅವರು. ಮೂಡಲ ಮನೆಯಿಂದ ಮುತ್ತಿನ ನೀರಿನ ಎರಕ ಹೊಯ್ದ ಹಾಗೆ, ಗಿಡಗಂಟೆಯ ಕೊರಳೊಳಗಿಂದ ಹಕ್ಕಿಗಳ ಹಾಡು ಮೂಡಿದಂತೆ, ತಂಗಾಳಿಯ ಕೈಯೊಳಗಿರಿಸಿ ಎಸಳಿನ ಚವರಿ ಬೀಸಿದಂತೆ ಬೇಂದ್ರೆಯವರ ಕಾವ್ಯಸೃಷ್ಟಿ. ಒಡಲ ನೂಲಿನಿಂದ ಜೇಡ ತನ್ನ ಜಾಲವನ್ನು ನೆಯ್ದ ಹಾಗೆ ಇವರ ಕವಿತೆ; ಹಿರಿಹೊಳೆಯ ಗಂಗವ್ವ ಸಾಗಿ ಹರಿದ ಹಾಗೆ ಇವರ ಹಾಡು ಅಂತರಂಗದಿಂದ ಸ್ಫುರಿಸಿ ಅಂತರಂಗಕ್ಕೆ ಮುಟ್ಟುವಂಥದು. 'ಮೌನಕೂ ಮಾತುಂಟೆ, ಉಂಟು ಉಂಟು' ಎಂದು ನಂಬಿ ಕಾವ್ಯದಲ್ಲಿ ವಾಚ್ಯಕ್ಕಿಂತ ವ್ಯಂಗ್ಯ, ಧ್ವನಿ, ರಸ, ಮೌನಗಳ ಮಾಹಾತ್ಮ್ಯವನ್ನು ಅರಿತು ನುಡಿದವರು. ಜನವಾಣಿಯ ನಾಡಿಯನ್ನು ಹಿಡಿದು ಜನಾರ್ದನನ ವಾಣಿಯನ್ನು ತಮ್ಮ ಕಾವ್ಯಗಳಲ್ಲಿ ಮೊಳಗಿಸಿದವರು. ನಾಡಿನ ಉದ್ದಗಲಗಳಲ್ಲಿ ತಮ್ಮ ಪ್ರತಿಭೆಯ ಹಾಸು-ಹೊಕ್ಕುಗಳನ್ನು ಮಿಂಚಿ, ಲಾಳಿಯಾಡಿಸಿ ಸಹೃದಯಾಂಬರವನ್ನು ಹೊದಿಸಿದವರು. ಕನ್ನಡ ಜನಪದ ಸಾಹಿತ್ಯದ ದನಿಬನಿಗಳನ್ನು ಅರಗಿಸಿಕೊಂಡು ಅದರ ಶಕ್ತಿಯನ್ನು ಮತ್ತೆ ಕನ್ನಡದ ಕೃತಿಗಳಲ್ಲಿ ಒಡಮೂಡಿಸಿದವರು.

೨

ಈ ಪ್ರಬಂಧದಲ್ಲಿ ಬೇಂದ್ರೆಯವರ ಕವಿತೆಯಲ್ಲಿ ಜಾನಪದಮೋಡಿ ಹೇಗೆ ಅಚ್ಚೊತ್ತಿ ವ್ಯಕ್ತವಾಗುತ್ತಿದೆ ಎಂಬುದನ್ನು ಪ್ರತಿಪಾದಿಸುವುದು ಮುಖ್ಯ ಉದ್ದೇಶ-

ವಾಗಿದೆ. 'ಜಾನಪದಮೋಡಿ' ಎಂಬ ಮಾತಿಗೆ 'ಜಾನಪದಶೈಲಿ', 'ಜಾನಪದ ರೀತಿ', 'ಜಾನಪದಕ್ರಮ' ಎಂದಿಷ್ಟೇ ಅರ್ಥವನ್ನು ನಾಸಿಟ್ಟುಕೊಂಡಿದ್ದೇನೆ. ಗಾರುಡಿಗನ ಕೈಯಲ್ಲಿ ಗರುಡಮಣಿಯೋ, ಗರುಡರೇಖೆಯೋ ಇರುವ ಹಾಗೆ ಬೇಂದ್ರೆಯವರ ಪ್ರತಿಭಾ ಹಸ್ತದಲ್ಲಿ ಸಹೃದಯರ ಹೃದಯದ ಕಲುಷಿತಗಳನ್ನು ಹೋಗ-ಲಾಡಿಸಿ ಸಾಂತ್ವನಗೊಳಿಸುವ ಯಾವುದೋ ಒಂದು ಗಾರುಡಿಗತನದ ಗರುಡರೇಖೆ ಇದೆ; ಅದು ಅನನ್ಯ ಸಾಧಾರಣವಾದ ಅವರ ಕವಿತೆಯ ಗುಣ. ಅವರು ತಮ್ಮ ಕವಿತೆಯನ್ನು ಓದುವ ಗತ್ತು ಕೂಡ ಅನ್ಯರಿಗೆ ದಕ್ಕಿಲ್ಲ. ಬರೆಯುವುದರಲ್ಲೂ, ಓದುವುದರಲ್ಲೂ ಅವರನ್ನು ಅನುಕರಿಸಿ ಪೇಚಾಟಕ್ಕೆ ಸಿಕ್ಕಿದವರುಂಟು. ಮಹಾಕವಿಗಳ ಜುಟ್ಟು ಇತರರಿಗೆ ದಕ್ಕುವುದಿಲ್ಲ; ಅದೇ ಅವರ ಮಹಾಕವಿ ಪಟ್ಟಕ್ಕೆ ಸಾಕ್ಷಿ. ಕುಮಾರವ್ಯಾಸನನ್ನು ಎಷ್ಟು ಜನ ಭಾಮಿನಿಷಟ್ಪದಿಕಾರರು ಅನುಕರಿಸಿಲ್ಲ; ಅವರಿಗೆ ಭಾಮಿನಿಷಟ್ಪದಿಯ ಲಕ್ಷಣ ಕರಗತವಾಯಿತೇ ಹೊರತು ಅವರೆಲ್ಲ ಕುಮಾರವ್ಯಾಸ-ರಾಗಲಿಲ್ಲ.

ಬೇಂದ್ರೆಯವರ ಈ ಅಪೂರ್ವ ಶಕ್ತಿಯ ಅಂಕುರವನ್ನು ಮೊತ್ತಮೊದಲು ಗುರುತಿಸಿ, ಅದು ಮಹಾವೃಕ್ಷವಾಗಿ ಬೆಳೆಯುವಂತೆ ಗಾಳಿ, ಬೆಳಕು, ನೀರನ್ನಿತ್ತು ಪ್ರೋತ್ಸಾಹಿಸಿದವರು ಮಾಸ್ತಿಯವರು; ಜನತೆ ಅವರ ಕವನವನ್ನು ಮೆಚ್ಚಿತು. ಕುಮಾರವ್ಯಾಸನ ಅನಂತರ ಜನಮೆಚ್ಚಿದ ಕವಿ ಎಂದರೆ ಆ ಪರಿಮಾಣದಲ್ಲಿ ಬೇಂದ್ರೆಯವರೇ. ಇದಕ್ಕೆ ಬೇರೆಯವರನ್ನು ಮೆಚ್ಚಲಿಲ್ಲ ಎಂದು ಯಾರೂ ಅರ್ಥಮಾಡ-ಬಾರದು. ಬೇಂದ್ರೆ, ಕವಿತೆ ಓದಿದರೆಂದರೆ, ಓದುವರೆಂದರೆ, ಭಾಷಣ ಮಾಡುವ-ರೆಂದರೆ ಪಂಡಿತ ಪಾಮರರೆಲ್ಲರ ಕೊರಳು ಉದ್ದವಾಗುವುದು; ಅವರು ಹೇಳುವ ಕವಿತೆಯೋ, ಮಾತೋ ಅರ್ಥವಾಗಲಿ, ಆಗದಿರಲಿ ಮತ್ತೆ ಮತ್ತೆ ಕೇಳೋಣವೆನ್ನಿ-ಸುತ್ತದೆ. ಇದಕ್ಕೆ ಮುಖ್ಯ ಕಾರಣ ಅವರಿಗೂ, ಜನತೆಗೂ ಇರುವ ಈ ರಸಸೇತು ಸರಳವಾಗಿರುವುದು :

"ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ! ನಿನಗೆ!
ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ!"[1]

ಬೇಂದ್ರೆಯವರ ಮೊದಲನೆಯ ಕವನಸಂಕಲನವಾದ 'ಗರಿ'ಯ ಮೊದಲ-ನೆಯ ಕವನವೇ ಜಾನಪದ ಮೋಡಿಯದು. ಆ ಸಂಕಲನಕ್ಕೆ ಬರೆದ 'ಸಹೃದಯ-

1. ನಾದಲೀಲೆ

ರಿಗೆ' ಎಂಬ ಮುನ್ನುಡಿಯಲ್ಲಿ ಬೇಂದ್ರೆಯವರೇ ಹೀಗೆ ಹೇಳಿದ್ದಾರೆ: "ಇಲ್ಲಿ ತುಂಗಭದ್ರೆಯು ಉತ್ತರಾಪಥದ 'ದೇಶಿ'ಯ ಮಾರ್ಗವನ್ನು ಹುಡುಕುವ ಹಾಗೆಯೆ ಹುಟ್ಟಿಸುವ ಕುರುಹಿದೆ. ಹುಡುಕುವದಕ್ಕೆ ಹಾಯ್ದಾಡುವದರಿಂದಲೇ ಹಾದಿ ತಾನೆ ಹುಟ್ಟುವದು? ಪಂಡಿತ-ಪಾಮರ, ಬಡವ-ಬಲ್ಲಿದ, ನಾಗರಿಕ-ನಾಡಾಡಿ ಎಂಬ ಭೇದಗಳನ್ನೆಲ್ಲಗಳೆದು ಕನ್ನಡ ಜೀವಾಳವು ಕನ್ನಡಿಗರಿಗಾಗಿ ಕನ್ನಡಿಸಲ್ಪಡಬೇಕಾಗಿದೆ."[1] ಆದಕ್ಕಾಗಿ ಸಹೃದಯರ ಚಿದಂಬರದಲ್ಲಿ ಈ ಕವಿ, ಪಕ್ಷಿಯ ಗರಿಯನ್ನು ತೂರಿದ್ದೇನೆ ಎಂದು ಭಾವಿಸಿದ್ದಾರೆ.

ಬೇಂದ್ರೆಯವರ ಈ ಶಕ್ತಿಯನ್ನು ಗುರುತಿಸಿ ಮಾಸ್ತಿಯವರು ಅವರ ಎರಡನೆಯ ಕವನಸಂಕಲನ 'ನಾದಲೀಲೆ'ಗೆ ಮುನ್ನುಡಿ ಬರೆಯುತ್ತ ಈ ಕವಿಯ ಮಹತ್ವವನ್ನು ಎತ್ತಿ ಹೇಳಿದರು: "....ಮೊದಲು ಹೇಳಬೇಕಾದ ಮಾತು ಬೇಂದ್ರೆಯವರು ನಿಜವಾಗಿ ಕವಿ ಎನ್ನುವುದು. ಎಂದರೆ ಒಬ್ಬನ ಕೃತಿಯನ್ನು ಕಾವ್ಯವೆಂದು ಮಾಡುವ ಗುಣಗಳಲ್ಲಿ ಮುಖ್ಯಗುಣ ಅಥವಾ ಜೀವಗುಣ ಯಾವುದೋ ಅದು ಇವರ ಕೃತಿಯಲ್ಲಿದೆ ಎನ್ನುವುದು.... ಆಡುವ ಮಾತನ್ನೆಲ್ಲ ಕಾವ್ಯಮಾಡುವ ಮನೋಧರ್ಮ ಶ್ರೀ ಬೇಂದ್ರೆಯವರಲ್ಲಿದೆ....ನಾನು ಬೇಂದ್ರೆಯವರ ಕೃತಿ ಒಂದಕ್ಕೆ ಮನಸೋತದ್ದು ಈಗ್ಗೆ (೧೯೩೮) ಬಹುವರ್ಷದ ಹಿಂದಿನ ಮಾತು.... ಆ ಪದ್ಯ 'ಮೂಡಲ ಮನೆಯಾ ಮುತ್ತಿನ ನೀರಿನ ಎರಕಾವ ಹೊಯ್ದಾ' ಎಂದು ಆರಂಭವಾಗಿ ಒಂದು ಉದಯವನ್ನು ವರ್ಣಿಸಿತ್ತು. ಅದರಲ್ಲಿ ಕಂಡ ಊಹೆ ವಿಲಕ್ಷಣವಾಗಿತ್ತು. ಎಷ್ಟೋ ಕವಿಗಳು ಈ ಮೊದಲೇ ಮಾಡಿರುವ ವರ್ಣನೆಯಲ್ಲಿ ಈ ಕವಿ ಒಂದು ಹೊಸ ಚೆಲುವನ್ನು ತಂದಿದ್ದರು.... ಉದಯದಲ್ಲಿ ಹಕ್ಕಿಗಳು ಹಾಡುವುದನ್ನು 'ಗಿಡಗಂಟೆಯ ಕೊರಳಿನಿಂದ ಸ್ವರ ಹೊರಟಿದೆ' ಎಂದು ಇವರು ವರ್ಣಿಸಿದ್ದರು. ಹಾಡುವ ಹಕ್ಕಿ ಗಿಡಗಂಟೆಯ ಕೊರಳು. ಉದಯದಲ್ಲಿ ಗಿಡ ಪಡುವ ಆನಂದವನ್ನು ಹಕ್ಕಿಯ ಹಾಡು ಹೊರಸೂಸುತ್ತದೆ. ಇಂಥ ಮಾತಿನಲ್ಲಿ ಮಿಗಿಲಾದ ಚಾತುರ್ಯ ಮಾತ್ರ ಇಲ್ಲ. ಪ್ರಕೃತಿಯನ್ನು ಕುರಿತ ವಿಲಕ್ಷಣ ಭಾವನೆಯಿದೆ....ಈ ಭಾವನೆಯೇ ಬೇಂದ್ರೆಯವರ ಎಲ್ಲ ಕವಿತೆಯ ಬಲದ ಬೇರು."[2]

"ಬೆಳಗಾವಿಯ ಸಾಹಿತ್ಯಸಮ್ಮೇಲನದಲ್ಲಿ ಬೇಂದ್ರೆಯವರು 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ತಮ್ಮ ಕವನವನ್ನು ಓದಿದರು. ಅದನ್ನು ಕೇಳಿದ ಜನ ಎಂಥ ಆನಂದವನ್ನು ಅನುಭವಿಸಿದರೆಂದು ಈಗ ಹೇಳುವುದು ಸಾಧ್ಯವಿಲ್ಲ. ಆ ಕವಿತೆಯ ಎಲ್ಲ ಅರ್ಥವನ್ನೂ ಅರಿಯುವುದಕ್ಕೆ ಆ ಒಂದು ಓದು ಸಾಕಲ್ಲವೇ ಅಲ್ಲ; ಆದರೆ ಆ

---

1. ಗರಿ: "ಸಹೃದಯರಿಗೆ" ೧೯೩೧; ೫ನೆಯ ಆವೃತ್ತಿ: ೧೯೬೬, ಪು ೫
2. ನಾದಲೀಲೆ: "ಮುನ್ನುಡಿ" ೧೯೩೮; ೬ನೆಯ ಆವೃತ್ತಿ: ೧೯೬೪, ಪು. ೭-೮

ಒಂದು ಓದಿನಿಂದ ಕಂಡಷ್ಟು ಕಾವ್ಯಗುಣದಿಂದಲೇ ಸಾವಿರ ಜನರ ಸಭೆ ಚಕಿತ-ವಾಯಿತು. ಕಾವ್ಯಪ್ರಪಂಚದಲ್ಲಿ ಬಳಕೆಯುಳ್ಳವರು ಈ ಕವಿಯ ಶಕ್ತಿ ಇವನದೇ ಆದ ಒಂದು ಹೊಸ ಶಕ್ತಿ ಎಂದು ಮನಗಂಡರು." [1]

"....ಗಿಡದ ಆನಂದ, ತನ್ನ ಆನಂದ, ಗಿಡದಲ್ಲಿ ಕುಳಿತ ಹಕ್ಕಿಯ ಆನಂದ, ಬೀಸುವ ಗಾಳಿಯ ಆನಂದ ಇವು ಬೇರೆ ಬೇರೆ ಎಂದು ತಿಳಿದವನು ಅದನ್ನು ಬಿಡಿಸಿ ಬಿಡಿಸಿ ಹೇಳುತ್ತಾನೆ. ಇವುಗಳೆಲ್ಲ ಒಂದು ಆನಂದ, ನಾಲ್ಕು ಕಡೆ ಕಂಡಿರತಕ್ಕದ್ದು ಎಂದು ಬುದ್ಧಿಯಿಂದ ತಿಳಿಯುವವನು ಇದೊಂದು ವಿಚಾರ ಎಂಬಂತೆ ಹೇಳುತ್ತಾನೆ. ಇದಕ್ಕೂ ಮುಂದಿನ ಒಮ್ಮೆಯನ್ನು ಅರಿತವನು ಬೇಂದ್ರೆಯವರು ಹೇಳಿರುವಂತೆ 'ಗಿಡಗಂಟೆಯ ಕೊರಳು' ಆನಂದದಿಂದ ಹಾಡಿತು ಎನ್ನುತ್ತಾನೆ. ಬಾಳೆಲ್ಲ ಒಂದು ಎನ್ನುವುದು ತಿಳಿವಿಗೆ ಮಾತ್ರ ಕಂಡಾಗ ಅಲ್ಲ, ಅನುಭವದಿಂದ ಕಂಡಾಗ ಮಾತ್ರ ಈ ಮಾತು ಪ್ರಯತ್ನವಿಲ್ಲದೆ ಬರುತ್ತದೆ. ಇದು ಬರುವ ರೀತಿಯಲ್ಲಿ ಕವಿಗೆ ತನ್ನ ಮಾತು ಎಂಥ ಸಿದ್ಧಿಯ ಮಾತು ಎಂದು ತಿಳಿದಿದೆಯೋ ಇಲ್ಲವೋ ಎನ್ನುವಂಥ ಸಹಜತೆ ಇರುತ್ತದೆ.... ಇವರು ಜನದ ಬಾಳುವೆಯಲ್ಲಿ ಪ್ರೇಮ ಹರಿಯುವ ರೀತಿಯನ್ನು ಕಣ್ಣು ತೆರೆದು, ಮನಸ್ಸು ತೆರೆದು ನೋಡಿದ್ದಾರೆ. ಅದರಿಂದ ಇವರ ವಿವರಣದಲ್ಲಿ ಮಾತು ಮಾತು ನಿಜವನ್ನು ಹೇಳುತ್ತದೆ, ಮನಸ್ಸನ್ನು ಮುಟ್ಟುತ್ತದೆ, ಹೃದಯದಲ್ಲಿ ರಸದ ಊಟೆಯನ್ನು ಉಕ್ಕಿಸುತ್ತದೆ....ಇಲ್ಲಿಯ ತೀವ್ರ ಅನುಭವ, ವಿಪುಲಭಾವ ಕವಿತೆಯಲ್ಲಿ ಸಾಗರದ ಅಲೆಯ ಮಾಲೆಯಂತೆ ಮೇಲೆ ಮೇಲೆ ಉರುಬಿ ಬರುತ್ತದೆ.... ಒಂದು ಸಾಮ್ಯ ಅಥವಾ ರೂಪಕವನ್ನು....ಬಳ್ಳಿ ಬಳ್ಳಿಯಾಗಿ ಬೆಳೆಸಿ, ರಂಗವಲ್ಲಿಯ ಒಂದು ಚಿತ್ರದಂತೆ ಹರಹುತ್ತದೆ....ಅಂತರಾತ್ಮದ ಅತಿ ನಿಕಟ ಅನುಭವವು ಹೆಪ್ಪು-ಗಟ್ಟಿ ಕಣ್ಣಿಗೆ ಕಾಣುತ್ತದೆ.... ಕವಿತೆ ಉತ್ತಮವಾಗಬೇಕಾದರೆ ಅದು ಬಾಳ ಆಳದಿಂದ ಬರಬೇಕು. ಹಾಗೆ ಬಂದ ಕವಿತೆ ಈ ರೀತಿಯಲ್ಲಿ ಕವಿಯ ಟಂಕೆಯಿಂದ ತಾನೇ ಒಂದು ಜಾತಿಯದಾಗಿ ಕಾಣುತ್ತದೆ. ಬೇಂದ್ರೆಯವರ ಕೃತಿಯಲ್ಲಿ ಅವರ ಟಂಕೆ ಸ್ಪಷ್ಟವಾಗಿ ಬಿದ್ದಿರುತ್ತದೆ." [2]

"ನಾನು ಸಂಕೋಚವಿಲ್ಲದೆ ಬೇಂದ್ರೆಯವರ ವಿಷಯವಾಗಿ ಇದನ್ನು ಹೇಳುತ್ತೇನೆ. ಅವರ ಕಾವ್ಯ Promising ಮಾತ್ರವಲ್ಲ; ಅದರಲ್ಲಿ Fulfilment ಎನ್ನುವುದು ಕಂಡಿದೆ.... ಅದು ಆಕಾರದಲ್ಲಿ 'ಪ್ರಾಮಿಸ್', ನಿಜವಾಗಿ ಸಿದ್ಧಿ." [3]

ಮಾಸ್ತಿಯವರ ಗೋಕಾಕರ ಈ ಮಾತನ್ನು ಇಲ್ಲಿ ಇಷ್ಟು ಸುದೀರ್ಘವಾಗಿ

1. ನಾದಲೀಲೆ : ಪು. ೮
2. ಅದೇ : ಪು. ೧೦-೧೧
3. ಅದೇ : ಪು. [illegible]

ಉದ್ಧರಿಸುವ ಉದ್ದೇಶ ಈ ಮಾತು ಇಂದಿಗೂ ಸತ್ಯವಾಗಿದೆ ಎಂಬುದಾಗಿದೆ. ಆ ಕಾಲದಲ್ಲಿಯೇ ಬೇಂದ್ರೆಯವರು ಶಿವಮೊಗ್ಗೆಯಲ್ಲಿ ಸಾಹಿತ್ಯಸಮ್ಮೇಳನದ ಅಧ್ಯಕ್ಷರಾದರು ಎಂದರೆ ಕವಿತೆಯಲ್ಲಿ ಆಗಲೇ ಅವರ ಸಿದ್ಧಿ ಸಾಮಾನ್ಯವಾಗಿರಲಿಲ್ಲ.

೩

'ಹಕ್ಕಿಗೆ ಗರಿ ಇದ್ದಂತೆ ಕವಿಗೆ ಕವನ. ಬಲ್ಲವರು ಅದರೊಡನೆ ಆಡಬಹುದು' ಎಂದಿದ್ದಾರೆ ಬೇಂದ್ರೆಯವರು. 'ಬೆಳಗು' ಕವನದಲ್ಲಿ ಪ್ರಕೃತಿಯ ಚೆಲುವನ್ನು ಹಂತ ಹಂತವಾಗಿ ಆಸ್ವಾದಿಸಿ ಕವಿ ಕೊನೆಗೆ ಶಾಂತಿರಸದ ತುತ್ತತುದಿಯನ್ನು ಮುಟ್ಟಿ 'ಶಾಂತಿರಸವೇ ಪ್ರೀತಿಯಿಂದ ಮೈದೋರಿತಣ್ಣಾ, ಇದು ಬರಿ ಬೆಳಗಲ್ಲೋ ಅಣ್ಣಾ' ಎಂದು ತಾವೂ ಅನುಭವಿಸಿ ಆ ಅನುಭವವನ್ನು ಸಹೃದಯರಿಗೂ ಮಾಡಿಕೊಡುತ್ತಾರೆ. 'ರಸಿಕಾ ಪೇಳೊ !' ಎಂಬ ಕವನ ಜಾನಪದವೋಡಿಯಲ್ಲಿ ಮೂಡಿಬಂದುದು. ಒಂದೇ ವಸ್ತುವಿನಲ್ಲಿರುವ ಸಮ–ವಿಷಮಗಳನ್ನು ಇಲ್ಲಿ ಹಳ್ಳಿಗರು ಗಾದೆಯನ್ನು ಹೇಳುವ ಹಾಗೆ, ಒಗಟನ್ನು ಕೇಳುವ ಹಾಗೆ ಕವಿ ಕೇಳಿದ್ದಾರೆ. ಕಬ್ಬಿನ ಗಣೆ ಡೊಂಕು ಅದರ ಹಾಲು ಡೊಂಕಲ್ಲ, ಹುಬ್ಬಿನಗೆರೆ – ಕಣ್ಣನೋಟ, ಬಿಲ್ಲ ಕಂಬಿ–ಬಿಟ್ಟ ಬಾಣ, ಹಲ್ಲಸಾಲು – ಬಿದ್ದ ಕಿರಣ, ಚೆಂಬಾಳೆಮೈ – ತಿರುಳು, ಬಿಂಬಾಧರ–ಚುಂಬನ, ಬಿದಿಗೆಚಂದ್ರಮ – ಬೆಳದಿಂಗಳು, ವಿಧಿಯಿತ್ತ ಕುಲ – ನನ್ನ ಪ್ರೀತಿ ಎಂದು ಒಂದು ಡೊಂಕು ಇನ್ನೊಂದು ಡೊಂಕೇ ಎಂದು ಕೇಳುವ ಸಾಮ್ಯದಲ್ಲಿಯೂ ಹಲವು ಹಳ್ಳಿಯವು. ಮಗು ನಕ್ಕಾಗ ಬೆಳ್ಳಗೆ ಕಾಣುವ ಹಲ್ಲನ್ನು "ಹವಳ–ತುಟಿಗಳೆಡೆಯೊಳೊಂದು ಪಾರಿಜಾತ ಹೂತಿದೆ"[1] ಎನ್ನುತ್ತಾರೆ. ಕಾಲ ಎಂಬ ಹಕ್ಕಿ ಹಾರುವುದನ್ನು ಕಂಡ ಕವಿ ಅದರ ರೆಕ್ಕೆಗಳನ್ನು ಓದುಗರ ಮನಸ್ಸಿಗೆ ನಾಟಿಸುತ್ತಾರೆ; ಹಗಲು ಇರುಳುಗಳೆಂಬ ರೆಕ್ಕೆಗಳನ್ನು ಬೀಸಿ ಅದು ಹಾರುತ್ತಿದೆಯಂತೆ :

> ಕರಿನರೆ ಬಣ್ಣದ ಪುಚ್ಚಗಳುಂಟು
> ಬಿಳಿ–ಹೊಳೆ ಬಣ್ಣದ ಗರಿ–ಗರಿಯುಂಟು
> ಕೆನ್ನನ ಹೊನ್ನನ ಬಣ್ಣ–ಬಣ್ಣಗಳ
> ರೆಕ್ಕೆಗಳೆರಡೂ ಪಕ್ಕದಲುಂಟು
> ಹಕ್ಕಿ ಹಾರುತಿದೆ ನೋಡಿದಿರಾ ?"[2]

'ನಗೀನವಿಲು' ಅಂಥ ಇನ್ನೊಂದು ಹಾಡು. ಇದನ್ನು 'ಜೀವನದೊಳಗಿನ ಜೀವಂತ ವಿರಹದ ಒಂದು ಪ್ರೇಮಗೀತ. ವಿರಹಿ ಕೋಕಿಲ; ಉಲ್ಲಾಸಿ ನವಿಲು' ಎಂದು ಕವಿ

---

1. ಗರಿ : "ನನ್ನ ಕಂದ" ಪುಟ ೫೪
2. ಅದೇ : "ಹಕ್ಕಿ ಹಾರುತಿದೆ ನೋಡಿದಿರಾ?" ಪುಟ. ೫೬

ಪರಿಚಯಿಸಿದ್ದಾರೆ. ನಾರಿಯು 'ಪಾರೀವ್ಯಾಗ' ನಗೀನವಿಲು ಆಡಿದರೆ 'ನೆಲಾ-ಜಲಾ' ಬೆಳಗುತ್ತಿತ್ತಂತೆ; ಮನದ ಮಾಮರದ ಕೊನೆಯಲ್ಲಿ ಕೋಕಿಲೊಂದು ಕುಳಿತು ಹಾಡುವುದನ್ನು ಬಿಟ್ಟು 'ಬರೇ ನಿನ್ನ ನೋಡತಿತ್ತ.' ಅಲ್ಲದೆ,

"ತೋಡತಿತ್ತ ಬೇಡತಿತ್ತ_s
ದೊರಕದಕ್ಕ ಬಾಡತಿತ್ತ." [1]

'ರಾಗರತಿ' ಎಂಬ ಕವನ ಸಂಪೂರ್ಣವಾಗಿ ಹೊಸಹೊಸ ಹೋಲಿಕೆ-ರೂಪಕಗಳಿಂದ ಸಂಜೆಯ 'ರಾಗರತಿ'ಯನ್ನು ಬಣ್ಣಿಸಿದ ಹಾಡು. ಸಂಜೆಯಾದುದನ್ನು ಇಷ್ಟು ಆತ್ಮೀಯವಾಗಿ ಬಣ್ಣಿಸಿದ ಹಾಡು ಕನ್ನಡದಲ್ಲಿ ವಿರಳ. ಮುಗಿಲ ಮೋರೆಗೆ ರಾಗರತಿಯ ನಂಜೇರಿ ಸಂಜೆಯಾಯಿತಂತೆ. ನಂಜೇರುವುದು ನಿಧಾನ, ಸಂಜೆಯ ಗತಿಯೂ ನಿಧಾನ. ನೆಲದ ಅಂಚಿಗೆ ಮಂಜಿನ ಮುಸುಕು ಹ್ಯಾಂಗೋ ಬಿದ್ದಿತ್ತಂತೆ, ಗಾಳಿಗೆ ಮೇಲಕ್ಕೆ ಎದ್ದಿತ್ತಂತೆ. ಬಿದಿಗೆ ಚಂದ್ರನ ಚೊಗಚಿ-ನಗಿ-ಹೂ ಮೆಲ್ಲಗೆ ಅರಳಿತ್ತಂತೆ; ಇರುಳ ಹೆರಳಿನ ಅರಳುಮಲ್ಲಿಗೆಯ ಹಾಗೆ ಚಿಕ್ಕೆ ಅತ್ತಿತ್ತ ಚೆದುರಿವೆ-ಯಂತೆ. ನೀರಿಗೆ ಹೋದ ಹೆಣ್ಣಿನ ಸೆರಗನ್ನು ಮಳ್ಳ ಗಾಳಿ-ಸುಳಿ ಕಳ್ಳ ಕೈಯಿಂದ ಹಿಡಿದಿತ್ತಂತೆ; ಮತ್ತೆ ಸೆರಗಿನಿಂದ ಬಿಡುತ್ತಿತ್ತಂತೆ. ಇಲ್ಲಿಯ ಪರಿಸರಣ ಸಂಪೂರ್ಣವಾಗಿ ಹಳ್ಳಿಯದು. ಇಂಥ ಸನ್ನಿವೇಶವನ್ನು ಹಳ್ಳಿಯಲ್ಲಿ ಮಾತ್ರ ಕಾಣುವುದು ಸಾಧ್ಯ.

'ಮೈಸೂರು' ಎಂಬ ಕವನದಲ್ಲಿ ಕವಿ ಈ ನಾಡಿನ ಚಿನ್ನದ ಗಣಿಯನ್ನೂ, ವಿದ್ಯುತ್ತಿನ ಬೆಳಕನ್ನೂ, ಶ್ರೀಗಂಧದ ವನವನ್ನೂ ಹೇಗೆ ಒಂದು ಸಾಲಿನಲ್ಲಿ ಹಿಡಿದು ಅದಕ್ಕೆ ಜೀವ ತುಂಬಿದ್ದಾರೆ ನೋಡಿ :

"ಮೈ ಚಿನ್ನ ನಗೆ ಮಿಂಚು ಬಾವನ್ನದುಸಿರು" [2]

'ಬೆಕ್ಕು ಹಾರುತಿದೆ ನೋಡಿದಿರಾ ?' ಎಂಬ ಕವನದಲ್ಲಿ ಅದರ ಬಣ್ಣವನ್ನೂ ರೂಪವನ್ನೂ ಹಳ್ಳಿಯವರಿಗೆ ಪರಿಚಿತವಾದ ಎರಡು ವಸ್ತುಗಳಿಂದ ಹೇಳಿದ್ದಾರೆ :

"ಕಾಡಿಗೆಗಿಂತಲು ಕಪ್ಪೋ ಬಣ್ಣಾ
ಕತ್ತಲಕೇ ಕಾಲೊಡೆದವೋ ಅಣ್ಣಾ" [3]

ವಿದ್ಯುದ್ದೀಪವಿಲ್ಲದ ಹಳ್ಳಿಯವರಿಗೆ ಕತ್ತಲೆ ಬೆಳಗುವುದು ಅಪೂರ್ವ ತಾನೇ.

---

. ಗರಿ : "ನಗೀನವಿಲು"; ಪುಟ ೬೩

2. ಅದೇ : "ಮೈಸೂರು"; ಪುಟ ೮೦

3. ಅದೇ : "ಬೆಕ್ಕು ಹಾರುತಿದೆ ನೋಡಿದಿರಾ ?" ಪುಟ ೪೨

'ಚೆಲುವ' ಎಂಬ ಕವನವನ್ನು ಕವಿ, ಕೃಷ್ಣನಂಥ ಮುದ್ದಾದ ತರಳನನ್ನು ಕಂಡು ಗೋಪಿಯ ವಾತ್ಸಲ್ಯದಿಂದ ಒರೆಪರಂತೆ. ಇಲ್ಲಿಯ ಭಾವ, ಭಾಷೆ, ಅಭಿವ್ಯಕ್ತಿ ಎಲ್ಲ ಹಳ್ಳಿಯ ರೀತಿಯದು :

"ಯಾರವ್ವಾ ಇವ ಚೆಲುವಾ
ತನ್ನಷ್ಟಕ್ಕs
ತಾನs ನೋಡಿ ನಲಿವಾ !

ನಗಿಯೊಂದು ಬಗಿಯಾಟಾ
ಕಣ್ಣು ಹಿಗ್ಗಿನ ತೋಟಾ
ಚವತೀ ಚಂದ್ರಮನ್ಹೊಲುವಾ:
ಚವತೀ ಚಂದ್ರಮ ಕೆಳಗ
ಹಣಿಕಿ ಹಾಕೀದ್ಹಾಂಗ
ಹೋಲುವಾ ಹಣೆಯೊಲವಾ
ನೋಡವ್ವಾ
ಯಾರವ್ವಾ ಇವ ಚೆಲುವಾ

ನೆಂಬಿಕೊಂಡಿರಲಾಕ
ತುಪ್ಪಳ ತಲೆದಿಂಬೊ
ಎಂಬೋ ತೋಳ್ಮಿದು ಬಲವಾ
ಕಂಡವರ ಕಣ್ಣನ್ನ
ಸೋತಾಗ ಸೆರೆಹಿಡಿದು
ಇಡುವಂಥ ಎದೆ ಹರವಾ" [1]

'ಪಾತರಗಿತ್ತಿ ಪಕ್ಕ' ಎಂಬುದು ಚಿಟ್ಟೆಯ ಬಾಳಿನ ವಿಸ್ಮಯವನ್ನು, ಚೆಲುವನ್ನು ಬಣ್ಣಿಸುವ ಕವನ. ಎಷ್ಟು ಜನ ಹೂವಿಂದ ಹೂವಿಗೆ ಹಾರುವ ಈ ಚಿಟ್ಟೆಯನ್ನು ನೋಡಿಲ್ಲ; ಆದರೆ ಅದರ ಚೆಲುವನ್ನೆಲ್ಲ ಬೇಂದ್ರೆಯವರಂತೆ ಬರೆದಿಟ್ಟವರಾರು ? ಅದರ ರೂಪವೋ, ಈ ಮಾತುಗಳಲ್ಲಿ ಮೈದಾಳಿರುವುದನ್ನು ನೋಡಿ:

"ಹೊನ್ನ ಚಿಕ್ಕಿ ಚಿಕ್ಕಿ
ಇಟ್ಟು ಬೆಳ್ಳೀ ಅಕ್ಕಿ,

1. ಗರಿ : "ಚೆಲುವ", ಪುಟ ೮೮–೮೯

ಸುತ್ತೂ ಕುಂಕುಮದೆಳಿ
ಎಳೆದು ಕಾಡಿಗೆ ಸುಳಿ
...................
ರೇಶಿಮೆಪಕ್ಕ ನಯ
ಮುಟ್ಟಲಾರೆ ಭಯ!" [1]

ಇನ್ನು ಅದರ ಬಾಳಿನ ವೈಭವವನ್ನು ಬಣ್ಣಿಸಿದ ರೀತಿಯನ್ನು ನೋಡಿ. ಆ ಜೀವ-ದಂತೆಯೇ ಪುಟ್ಟ ಪುಟ್ಟ ಎರಡೆರಡು ಸಾಲಿನಲ್ಲಿ ಅದರ ಒಂದು ಗತಿ, ಒಂದು ನೋಟ ಮೂಡಿರುವುದು ಅತ್ಯಂತ ಔಚಿತ್ಯಪೂರ್ಣವಾಗಿದೆ.

"ಹೂವಿಗೆ ಹೋಗಿ ತಾವ
ಗಲ್ಲಾ ತಿವಿತಾವ.
ಬನ ಬನದಾಗ ಆಡಿ
ಪಕ್ಕಾ ಹುಡಿ ಹುಡಿ;
ಹುಲ್ಲುಗಾವಲದಾಗ
ಹಳ್ಳೀ ಹುಡುಗೀ ಹಾಂಗ-
..........................
ಕಿರೇ ಸೂರೇ ಪಾನ-
ದಲ್ಲಿ ಧೂಳಿಸ್ನಾನ." [2]

ಇನ್ನು ಮುಂದೆ ಅದರ ಬಾಳಿನ ಕೊನೆಗಳಿಗೆಯ ಚಿತ್ರ ಚಿತ್ತದಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ಕೊನೆಯ ಸಾಲಿನಲ್ಲಂತು ಬೇಂದ್ರೆಯವರ ಕವನಗಳ ಕಲೆಗಾರಿಕೆಯಲ್ಲಿ ಅತ್ಯಂತ ಉನ್ನತಮಟ್ಟ ಕಾಣಿಸುತ್ತದೆ. ಅದರ ಬಾಳು ಮುಗಿಯಿತು, ಅದಕ್ಕೆ ಸಾವು ಬಂತು ಎನ್ನಲಿಕ್ಕಿಲ್ಲ. ಇಷ್ಟೆಲ್ಲ ಸಂಭ್ರಮದ ಬಾಳನ್ನು ಕಂಡ ಆ ಜೀವಿಗೆ ಈ ಇಹದ ತೋಟ ಮುಗಿಯಿತು; ನಂದನದ ತೋಟಕ್ಕೆ ಓಟಕಿತ್ತಿತಂತೆ!

"ಮದಗುಣಿಕಿಯ ಮದ್ದು
ಹುರುಪಿಗಿಷ್ಟು ಮೆದ್ದು,
.......................

1. ಗರಿ: "ಪಾತರಗಿತ್ತಿ ಪಕ್ಕ", ಪುಟ ೯೫

2. ಅದೇ: ಪುಟ ೯೬

ಸೀಗಿ ಬಳ್ಳಿ ತಾಗಿ
ಪಕ್ಕಾ ಬೆಳ್ಳಗಾಗಿ,

.......................

ಮಾಲಿಂಗನ ಬಳ್ಳಿ
ತೂಗು ಮಂಚದಲ್ಲಿ,

ತೂಗಿ ತೂಗಿ ತೂಗಿ
ದಣಿಧಾಂಗ ಆಗಿ,

.......................

ಇಷ್ಟು ಎಲ್ಲಾ ಮಾಡಿ
ಸಪ್ಪಳಿಲ್ಲದಾಡಿ,

.......................

ಇನ್ನು ಎಲ್ಲಿಗೋಟ ?
ನಂದನದ ತೋಟ! ” [1]

ಬೇಂದ್ರೆ ಬಾಳಿದ್ದೆಲ್ಲ ಕಿನ್ನರಿ ಎಂದು ನಂಬಿದವರು: ಅದರಲ್ಲಿ 'ಕಾಣದ್ದರ ಹಾಡೊಂದು ಹಾಡ್ತೇನ' ಎಂದರು.

“ನೋಡ್ ನೋಡ್ತಽ ದಿವಸಾ ಆಡಾಡ್ತಽ ಆಯುಷ್ಯ
ನಡದಽದ ನಡದಽದ ನಡದಽದ

ಕಾಣದ ಕಡಲ್ಹಾದಿ ಹಿಡದಽದ
ಮುಳಗಾಂವ ಬೆಂಡಿಗೆ ತೆಕಿಮುಕ್ಕ ಬಿದ್ಧಾಂಗ

ನನ್ನಽ ಕಿನ್ನರಿ ನಿನ್ನ ಹಿಡದೇನ
ನಿನ್ನ ಜೀವದ ತಂತಿ ಮಿಡದೇನ

................ ...................

ನೊಂದೇನಽ ನೊಂದೇನಽ ನೊಂದೇನಽ
ಬದುಕುವದಿನ್ನೆಂದು ಅಂದೇನ.” [2]

ತಾರುಣ್ಯ ಬಿಸಿಲುಗುದುರೆ. ಪ್ರಿಯ ಅದನ್ನು ಅರಿತು ಹೀಗೆ ಹಾಡಿಕೊಳ್ಳುತ್ತಾನೆ. ಬಾಳಿನ ಕೊನೆಯ ವರೆಗೆ ನಗೆಯನ್ನು ಕಾಣುವವರು ಎಷ್ಟು ಮಂದಿ?

---

1. ಗರಿ : ಪುಟ ೯೭
2. ಗರಿ : “ನನ್ನ ಕಿನ್ನರಿ”, ಪುಟ ೧೦೦

"ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತs
..............................
ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ
ಹೋಗೇತಿ ಎತ್ತೆತ್ತs
..............................
ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯು ಒಲಿವ್ಯಾಗ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಪಾಹ್ಹಂಗ
ಬಂತಂತ ಮುಪ್ಪು ಬ್ಯಾಗ!" [1]

ನಿರಾಶೆಗೆ ಸಿಕ್ಕಿ ಬಾಳಬಳ್ಳಿ ಬೀಳುವಾಗ ಕೈಹಿಡಿದವಳು ಊರೆಯಾಗುತ್ತಾಳೆ. ಇಲ್ಲದಿದ್ದರೆ ಹುಚ್ಚು ಹಳ್ಳದ ಕಳ್ಳ ಹುದುಲಿನಲ್ಲಿ ಸಿಕ್ಕಿಕೊಂಡೇನು ಎನ್ನುತ್ತಾರೆ ಕವಿ.

"ನನ್ನ ಕೈಯ ಹಿಡಿದಾಕೆ ಅಳುಸುಂಗಿ ನಗು ಒಮ್ಮೆ
ನಾನೂನು ನಕ್ಕೇನs
ಇಲದಿರಕ ನಿನ ಅಳುವ ಹುಚ್ಚು ಹಳ್ಳದ ಕಳ್ಳ-
ಹುದುಲಾಗ ಸಿಕ್ಕೇನs" [2]

'ಚಳಿಯಾಕೆ'ಯನ್ನು [3] ಕವಿ ನಮಗೆ ತೋರಿಸುತ್ತಾರೆ. ಅವಳು 'ಹೊನ್ನ ಸೇವಂತಿಗೆಯ, ಹೆರಳು ಬಂಗಾರದ, ಬೆಳ್ಳಿ ಸೇವಂತಿಗೆಯ ಬಳಿಯಾಕೆ'ಯಂತೆ! 'ಹೊಳೆ ಹೊಂಡದುಸಿರನ್ನೆ, ನಯವಾಗಿ ನೆಯ್ದಂಥ, ಮಂಜಿನ ಮೇಲ್ಸೆರಗು ಮೈ-ತುಂಬ' ಹಾಕಿಕೊಂಡವಳಂತೆ. 'ಅಡಿಗೊಮ್ಮೆ ನಡುನಡುಗಿ, ಇರುಳ ಬೆಳುದಿಂಗಳಕೆ, ಬಿಳಿಮೋಡ ನಗುವಂತೆ ನಗುವಾಕೆ'ಯಂತೆ! ಕೊನೆಯಲ್ಲಿ ಕವಿ ಹೇಳಿದ್ದಾರೆ, 'ಅಪ್ಪಿದ ಅಪ್ಪಿಗೆ ಬಿಡದಾಕೆ' ಎಂದು!

'ಕುಣಿಯೋಣು ಬಾರs' ಎಂಬ ಕವನದಲ್ಲಿ ಕವಿ, ಬಾಳೇ ಒಂದು ಕುಣಿತ ಎಂದು ಕಂಡಿದ್ದಾರೆ. ಕಾಗೆಯೊಂದು ಅಗುಳನ್ನು ಕಂಡು ಏಕಾಕಿಯಾಗಿರದೆ

---

1. ಗರಿ : "ಬಿಸಿಲುಗುದುರೆ" ಪುಟ ೧೦೧
2. ಅದೇ : "ನನ್ನ ಕೈಯ ಹಿಡಿದಾಕೆ!" ಪುಟ ೧೦೩
3. ಗರಿ : ಪುಟ ೧೦೬-೧೦೭
4. ಅದೇ : ಪುಟ ೧೧೯-೧೨೬

ತನ್ನಾಕೆಯನ್ನು ಕರೆದು ಕ್ಯಾಕಿ ಹೊಡೆದು ಕುಣಿಯಿತಂತೆ. ಅಲ್ಲಿಂದ ಬಾಳಿನಲ್ಲಿ ನಲ್ಲ – ನಲ್ಲೆಯರ ಕುಣಿತವನ್ನು ಕಂಡು ಕವಿ ತನ್ನಾಕೆಯನ್ನು 'ಹೊಂಗ್ಯಾದಿಗಿ ಹೊಡಿ, ಪಿಡಿನಾಗರ ಹೆಡಿ, ಹಾಂಗೊಮ್ಮೆ ತೂಗಾಡಿ, ಕುಣಿಯೋಣು ಬಾ' ಎಂದು ಕರೆಯುತ್ತಾರೆ. 'ನಗಲಿರುಳ ತಾಳಕ್ಕ, ಮುಗಿಯದ ಕಾಳಕ್ಕ, ಜನುಮಗಳ ಮ್ಯಾಳಕ್ಕ, ಕುಣಿ' ಎನ್ನುತ್ತಾರೆ. ತಮ್ಮ ಈ ಸುಖ ಹದಿನಾಲ್ಕು ಲೋಕಕ್ಕೆ ಚಿಮ್ಮಲಿ ಎಂದು ಹಾರೈಸುತ್ತಾರೆ.

ಬೇಂದ್ರೆಯವರು ಕನ್ನಡದ ಮಣ್ಣಿನ ಮಾತಿಗೆ ಬಾಯಿಯಾದರು. ಕುಮಾರ-ವ್ಯಾಸ, ರತ್ನಾಕರವರ್ಣಿ, ಸರ್ವಜ್ಞರಲ್ಲಿ ಒಡಮೂಡಿದ ಕನ್ನಡದ ದೇಸಿ ಬೇಂದ್ರೆಯವರ ಭಾವಗೀತಗಳಲ್ಲಿ ಇನ್ನೊಂದು ರೂಪದಲ್ಲಿ ಮೈದೋರಿತು. ನಮ್ಮ ಜನಪದ ಸಾಹಿತ್ಯದ ಚೆಲುವೆಲ್ಲ ಅದರ ಗುಣಗೀತಗಳಿಂದ, ನುಡಿಯ ಆತ್ಮೀಯತೆಯಿಂದ ಮತ್ತೊಮ್ಮೆ ಬೇಂದ್ರೆಯವರ ಕವಿತೆಗಳಲ್ಲಿ ಕಂಡುಬಂತು. ಇದರಿಂದ ಬೇಂದ್ರೆಯವರ ಶ್ರೇಷ್ಠ ಭಾವಗೀತಗಳೆಲ್ಲ ಜಾನಪದ ಮೋಡಿಯಲ್ಲಿವೆ. ಅದು ಬೇಂದ್ರೆಯವರ ತಮ್ಮ-ತನ, ಸ್ವಯಾರ್ಜಿತ ಆಸ್ತಿ, ಸ್ವೋಪಜ್ಞತೆ. ಅನೇಕ ಕವಿಗಳು ಅವರಿಂದೀಚೆ ಆ ಮೋಡಿಯನ್ನು ಅನುಸರಿಸಿ, ಅನುಕರಿಸಿ ಬರೆದರು; ಅವರಿಗೆ ಆ ಸಿದ್ಧಿ ದೊರೆಯ-ಲಿಲ್ಲ; ಹಿಂದೆ ಸಾಹಿತ್ಯದ ಇತಿಹಾಸದಲ್ಲಿ ದೊಡ್ಡ ಕವಿಗಳನ್ನು ಅನುಕರಿಸಿದವರ ಗತಿಯೇ ಇವರಿಗೂ ಉಂಟಾಯಿತು.

ಕನ್ನಡ ಛಂದಸ್ಸಿನ ತಾಯಿಬೇರಾದ ತ್ರಿಪದಿಯಲ್ಲಿ ಬೇಂದ್ರೆಯವರು ಅನೇಕ ಗೀತಗಳನ್ನು ರಚಿಸಿದ್ದಾರೆ. [1]

ಕೂಸು ಕುಂಚಿಗಿ ತಿಂತ್ಯು ಹಾಸೀಗಿ ನೆಲ ತಿಂತು
ಅಜ್ಜಯ್ನ ಗಡ್ಡ ಇಲಿ ತಿಂತ್ಯು–ಅಡಗೂಳು
ಆಜ್ಜೀಯ ತಿಂತ್ಯು ಕಜ್ಜಾಯ ||

* * *

ಕಂಚು ಕನ್ನಡಿ ತಿಂತ್ಯು ಹಂಚು ಮಾಳಿಗಿ ತಿಂತ್ಯು
ಬೇಂಚು ತಿಂದೀತು ಮೇಷ್ಟ್ರನ್ನ–ಊರೀನ
ಪಂಚರನೆ ತಿಂತ್ಯು ಲಂಚವು ||

* * *

1. ಯಕ್ಷ-ಯಕ್ಷಿ: "ಸೂಸಲ ನಗೆಯು ಸೂಕ್ತಿಗಳು" ಪುಟ ೭೩

ಸೇಂದಿ ಸುಂಕವ ತಿಂತ್ಯ ಬ್ರ್ಯಾಂಡಿ ಬುದ್ಧಿಯ ತಿಂತ್ಯ
ಸಂದಿ ತಿಂದಿತ್ತು ಸೂಳೆಯ-ಬಾಜಾರಿ
ಗಾಂಧಿ ಟೊಪ್ಪೀಗಿ ತಲಿ ತಿಂತ್ಯ ||

ಬೇಂದ್ರೆಯವರು ‘ಕಣ್ಣರಳು’ ಎಂಬ ಕವನದಲ್ಲಿ ಕಲ್ಲಿನಲ್ಲಿಯೂ ಕಣ್ಣರಳು-ವುದನ್ನು ಕಂಡ ಮರುಳುಸಿದ್ಧನ ಅರುಳು ಪಡೆದವರು. ಇದೊಂದು ಬೀಸುಕಲ್ಲಿನ ಪದ ಎಂದು ಅವರೇ ಹೇಳಿದ್ದಾರೆ: [1]

ಮಣ್ಣರಳಿ ಹೂವಾಗಿ| ನೂಲ ಬಟ್ಟೆಯಾಗಿ
ಮೈಮೈಗೆ ಥಾರದಾಥಾರಾ, ಗುಡಿಗುಡಿಗೆ
ಹೂಬತ್ತಿ ಹೊತ್ತಿ, ಮಣ್ಣರಳಿ ||

* * *

ನೀರರಳಿ ತಾವರಿ| ಮಿನ ಮಿನ ಮೀನಕ್ಕ
ಬೆಳಕುಂಡು ಬಾಳಿರೆನತಾವ, ಹಗಲಿರುಳು
ಬೆಳಕನುಣಸ್ಯಾವ, ನೀರರಳಿ ||

* * *

ಬೀಸಿದರ ಕಾಳರಳಿ| ಕಾಸಿದರ ಅನ್ನರಳಿ
ನುರಿಸಿ ನುರಿಸಿದರ ಕವಳರಳಿ, ಎದಿಯುರಳಿ
ಹಾಲು ತೊರೆದಾವ, ಮಗುವರಳಿ ||

ಈ ಪ್ರತಿಭೆಗೆ ದಕ್ಕದ ರೀತಿಯಿಲ್ಲ. ಒಂದು ಸಾಲಿಸಿಂದ ಹಿಡಿದು ಅನಿರ್ಬಂಧಿತ ಛಂದಸ್ಸಿನ ವರೆಗೆ ಇವರ ಪ್ರತಿಭೆ ಗರಿಗೆದರಿದೆ. ‘ಸಖೀಗೀತ’ದಲ್ಲಿ ಕವಿ ತನ್ನ ಜೀವನ ಕಥೆಯ ಹಂದರದ ಮೇಲೆ ಸಾಮಾನ್ಯ ಸಂಸಾರದ ಸುಖದುಃಖದ ಹಂಬನ್ನು ಹಬ್ಬಿ-ಬಿಟ್ಟಿದ್ದಾರೆ.

“ಅಕ್ಕರ ಛಂದವು ಸಾಂಗತ್ಯ-ಸಂಸ್ಕಾರ
ಹೊಂದಿಲ್ಲಿ ಬಂದಿದೆ ಹೊಸಹೊಸದು” [2]

ಪ್ರಾಚೀನ ದೇಸಿ ಛಂದಸ್ಸಿಗೆ ಕಸಿಕಟ್ಟಿ ಈ ಸುಂದರ ಲಯವನ್ನು ಸೃಷ್ಟಿಸಿದುದು ಪ್ರತಿಭಾಪೂರ್ಣವಾದುದು. ಇದು ಕನ್ನಡ ಕಾವ್ಯಕ್ಕೆ ಬೇಂದ್ರೆಯವರದೇ ಕೊಡುಗೆ

---

ಕೃತಂತಿ “ಕಣ್ಣರಳು” ಪುಟ ೬೭

ಸ ೀಗೀತ : ಪುಟ ೪೬

ಯವಾಗಿದೆ. ಇದರಲ್ಲಿ ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುತ ಹೊಸವಾಗಿ, ರಸ-ವಾಗಿ ಹರಿಯುತ್ತಿದೆ. ಕವಿ 'ಸಪ್ಪೆ ಬಾಳುವೆಗಿಂತ ಉಪ್ಪು ನೀರೂ ಲೇಸು, ಬಿಚ್ಚು ಸ್ಮೃತಿಗಳ ಹಾಯಿ' ಎಂದು ಸಖಿಯನ್ನು ಕರೆಯುತ್ತಾರೆ. ತಾವಿಬ್ಬರೂ ಒಂದಾದ ಸುಮುಹೂರ್ತದಲ್ಲಿ ನಾಂದಳಿರ ತೋರಣ ಹೂಮಿಡಿ ಗುಡಿಗಟ್ಟಿ ಮಧುಮಾಸ ದಿಬ್ಬಣಕ್ಕೆ ಹೊರಟುದನ್ನು ನೆನೆದುಕೊಳ್ಳುತ್ತಾರೆ. ಅಂತಃಪಟದಾಚೆ ವಿಧಿ ತಂದ ವಧು ನಿಂತಿದ್ದಾಗ ಮುತ್ತಿಗೂ ಮಿಗಿಲಾಗಿ ಹೂವಿಗೂ ಹಿರಿದಾಗಿ ಜೆವರ್ಧ್ವನಿ ಬಾಸಿಂಗ ತುಳುಕುತ್ತಿತ್ತಂತೆ. ಹೀಗೆ ಸಖಿ ತನ್ನೊಡನೆ ಒಲಿದಾಡಿದುದನ್ನು ಕವಿ ನೆನೆಯು-ತ್ತಾರೆ. ಬಾಳಿನ ಬೆಂಕಿಯಲ್ಲಿ ಮೈ-ಮನಗಳು ಬೆಂದು ತಾಳಿಕೆ ಬರುವಂಥ ಉಕ್ಕಾಗಿ ಬರುತ್ತಿರಲು ಮುಕ್ಕಾದ ಮೊನೆ ಮಸೆಯುತ್ತಿದೆಯಂತೆ. ಬಾಳಿನ ಬಾಳೆಯು ಗೊನೆ ಗೊಂಡು ಸವಿಹಣ್ಣು ಬಿಟ್ಟರೆ ಬದುಕಿನ ಮರವೆಲ್ಲ ಚೆಲುವಲ್ಲವೇ ಎಂದು ಸುಖದಲ್ಲಿ ಹಿಗ್ಗುತ್ತಾರೆ. ಸುಖ ಹೀಗೆ ಬರುವುದಂತೆ:

"ಹೊಂಗೆಯು ಹೂವಿನ ರಂಗವಲ್ಲಿಯ ಬಿಡಿಸಿ
ನೆರಳನು ನೀಡುತ ನಿಲ್ಲುವುದು
ಮುತ್ತುಗ, ಬೂರಲ, ದೀಪಮಾಲೆಯ ಕಂಬ
ಗಗನದ ಬಯಲೊಳಗೆತ್ತುವುದು."[1]

ಆಗ ಬಾನು ಬರಿ ಹಾಲನ್ನೇ ಕರೆದಂತೆ ಕಾಣಿಸುತ್ತದೆ, ಕವಿಗೆ.

"ಕೃತ್ತಿಕೆಯ ಮಣಿಹಾರ ಕೊರಳಿಂದ ಬಿಡಿಸಲು
ಬಿಳಿಮುಗಿಲ ಜಿಡಗನ್ನೆ ಇರುಳುಟ್ಟಿತ್ತು
ಮೃಗಶಿರದ ಮಂಚಕೆ ಚಂದಿರ ಬರುವಾಗ
ಚಂದ್ರಿಕೆಯ ವಾತ್ಸಲ್ಯ ತೊರೆಬಿಟ್ಟಿತ್ತು."[2]

"ಮುಖದ ಮುದ್ದಿಗಷ್ಟು ಮಂದಸ್ಮಿತ ಸಾಕು
ಸಾಕು ಗಾಳಿಯ ಸುಳಿಯು ಬೆಂದವಗೆ
ಇಲ್ಲದಿರೀ ಬಾಳು ಸಾಕುಸಾಕೆನಿಸೀತು-
ಸಾಕು ಈ ಹಕ್ಕಿ: ಬಿಡು ಬೇಕಾದರೆ."[3]

ಬಾಳುವೆ ಮಾಡುವುದು ಹೊಸತರಲ್ಲಿ ಕಷ್ಟ. 'ಹೊಸಪಟ್ಟಣವ ಹೊಕ್ಕು

1. ಸಖೀಗೀತ : ಪುಟ ೧೬
2. ಅದೇ : ಪುಟ ೨೨
3. ಸಖೀಗೀತ : ಪುಟ ೨೯

ಹಾದಿ ತಪ್ಪಿಸಿಕೊಂಡ ಎಬಡ ಹಳ್ಳಿಗ'ನಂತಾಗುತ್ತದಂತೆ. ಕಷ್ಟಗಳು ಬಾಳಿನಲ್ಲಿ ಬರತೊಡಗಿದವೆಂದರೆ 'ಹರಿವ ನೀರಿನ ಮೇಲೆ ಹರಗೋಲ ಮನೆಕಟ್ಟಿ' ಪಯಣ ಹೊರಟಂತೆ. 'ಕುದಿ ಎಸರು ಬರದಿರೆ, ಚಳಿ ಬಿಸಿಲು ಉಣದಿರೆ' ಹೇಗೆ ಪರಿಪಾಕ ಬಂದೀತು ಎಂದು ಕವಿ ಸಮಾಧಾನ ತಾಳುತ್ತಾರೆ. ಒಮ್ಮೊಮ್ಮೆ ಜೋಡಿ ಇಲ್ಲದ ಎತ್ತು ಗಾಡಿ ಎಳೆಯುವಂತೆ ತತ್ತರಿಸಿದುದುಂಟು; ತ್ರಾಸು-ತಕ್ಕಡಿ-ಮುಳ್ಳು ಏಕಾಗ್ರವಿರುವಂತೆ ಧಾರಣೆಯಲ್ಲಿ ಕೆಲವು ದಿನ ಕಳೆದುದುಂಟು! ಮಕ್ಕಳ ಮುಖ-ದಲ್ಲಿ ಬಾಳಿನ ಕತ್ತಲೆಯನ್ನು ಮರೆತುದುಂಟು :

"ಈ ಮನದ ಮುಪ್ಪಿಗೆ ಇರುವಿಕೆಯ ತಪ್ಪಿಗೆ
ಮದ್ದೊಂದು ಅವುಗಳ ಮುದ್ದುಂಡೆವು
ಕತ್ತಲೆಯ ಮನೆಯಿಂದ ಬೆಳಕಂಡಿಯೊಳಗಿಂದ
ಗಗನದ ನೀಲಿಮೆಯನು ಕಂಡೆವು." [1]

'ಕೊನೆಗೊಮ್ಮೆ ಬರುವಂಥ ಕಾಳರಾತ್ರಿಯು ಬಂದು ಹಗಲಿಗೆ ಇರುಳನ್ನು ಹೊದೆಯಿಸಿ'ತಂತೆ.

"ಮಿಡಿತೆಯ ಉಪಟಳ ಹೊಲದುದ್ದ ಬರುವಂತೆ
ಬಂದಿತು ದುಃಖವು ದಂಡಿನೊಲು
ತೆನೆಗಳ ಚೆಂಡಾಡಿ, ಕಾಳುಗಳ ಚೆಲ್ಲಾಡಿ
ಕಣವನೆ ರಣಮಾಡಿ ನಗೆಯಾಡಿತು." [2]

ಪ್ರೇಮವೆಂಬುದು ಕವಿಗೆ ಜೇಡದ ಬಲೆಯಾಗಿ ಕಾಣಿಸುತ್ತದೆ :

"ಜೇಡದ ಬಲೆಯಾಗಿ ತೋರುತಿಹುದೀ ಪ್ರೇಮ
ಗಾಳಿಯ ನೂಲೆತ್ತಿದದರೆಳೆಯು
ಪ್ರೇಮಪ್ರಸಾರದ ಸ್ನೇಹದ ಸಾರದ
ಅಂಟನಂಟಿಸುವದು, ನುಡಿನೋಟವು

ಯಾರಿಗೂ ತೋರದ ಏತಕೂ ಬಾರದ
ಜಾಲ ಜಗದಗಲ ಬೀಸಿಹುದು

---

1. ಸಖೀಗೀತ : ಪುಟ ೩೩
2. ಅದೇ : ಪುಟ ೩೫

ಮರುಳಾದ ನೋಣವನ್ನು ಸೋಣೆಯೆ ಸಂಭ್ರಮವೆಷ್ಟು !
ಏಕಿಹುದೊ ನೂರಾರು ಕೈ ತೆರೆದು ! [1]

ಬೇಸಿಗೆಯ ಕಾಲದಲ್ಲಿ ಬಾಳದಬೇರಿನಂತೆ ಬಾಳನ್ನು ತಂಪು ತಣ್ಣಿಸುತಿರಲಿ ಎಂದು ಕವಿ ಹಾರೈಸುತ್ತಾರೆ. ಚಿತ್ತದ ಸೂತ್ರಕ್ಕೆ ಬುದ್ಧಿಯ ಹುರಿ ಹಾಕಿ ಹಮ್ಮಿನ ಮುರಿ ಹಾಕಿ ಮನಸ್ಸು ಈ ಗೀತ-ದಾರವನ್ನು ಹೆಣೆದಿರಲು ಏಕಾಂತದ ಜಿನುಗು ಕವಿಯನ್ನು ಲೋಕಾಂತಕ್ಕೆಳೆಯಿತು; ಕವಿಗೆ ಜನವು ಜನಾರ್ದನನೆಂಬ ಅರಿವಾಯಿತು. ಹೀಗೆ ಹುರಿಯಾಗಿ, ಎಳೆಯಾಗಿ, ನೂರರ ನೂಲಾಗಿ ಧಾರೆಗೆಡದೆ ಹರಿಯದೆ ಮುಗಿದ ಈ ಹಾಡು ಜನವನ್ನು ಕುಣಿಯ ಹಚ್ಚಿತು, ಕಲ್ಲಾದ ಮನಗಳನ್ನು ಕರಗಿಸಿತು, ಎಂದು ಕವಿ ತೃಪ್ತಿ ಪಡೆಯುತ್ತಾರೆ.

ಮತ್ತೆ ಸಖೀಗೀತದ ಅಕ್ಕರ-ಸಾಂಗತ್ಯ ಮಾಯಾಕಿನ್ನರಿಯಲ್ಲಿ ಅದ್ಭುತವಾಗಿ ಪ್ರತಿಧ್ವನಿಸಿದೆ. ಮರುಳುಸಿದ್ಧನನ್ನು ಮರುಳು ಮಾಡಲಿಕ್ಕೆ ಹೋಗಿ ಆ ಜಂಗಮಯ್ಯನಿಗೇ ತಾನು ಮರುಳಾಗಿ ಮಾಯಾನಾರಿ ಕಿನ್ನರಿಯಾಗಿ ನುಡಿದಳು. ಇಲ್ಲಿ ಒಂದರಮೇಲೊಂದು ತೆರೆತೆರೆಯಾಗಿ [illegible]ುವ ಹೋಲಿಕೆಗಳ ಮಾಲೆ, ಈ ಕವಿಗೆ ಮಾತಿನ ದಾರಿದ್ರ್ಯವಿಲ್ಲೆಂದು ಹೇಳುವುವು :

ಕಂಕಣ ಕಾಲುಂಗುರಕ ಮೆಲ್ಲುಸಿರ-ಛಂದಕ
ಕುಣಿತಾನ ನಡೆಧಾಂಗ ಕಾಲ್ವಾಗ
ಕರಗಿ ಬಾ, ಅರಗಿ ಬಾ, ಎರಗಿ ಬಾ, ಸಣ್ಣಾಗಿ
ಸಕ್ಕರಿ ಬೆರೆಧಾಂಗ ಹಾಲ್ವಾಗ
ನಂಬಿಸಿ ರಂಬಿಸಿ ಚುಂಬಿಸಿ ಎದೆಗೊಂಬಿ
ಬಿಂಬೀಸಿ ಎದೆಯೊಳಗ ಅಂಧಾಂವ್ಗ
ಝಣಣ ಮಿಡಿದಾವ ತಂತಿ; ಗೆಜ್ಜಿ ಪೈಜಣ ಕಟ್ಟಿ
ಮಾಯೆಯೆ ಮೈಯೊಳಗ ಬಂಧಾಂವ್ಗ
ಅಗಲಿದ ಇನಿಯನ ಫಕ್ಕನೆ ನೋಡುತ
ಬಸಿರ ಹೂ ಕುಲುಕುಲು ನಕ್ಕಾಂಗ
ನಲ್ಲಮುಟ್ಟಿದ ಗಲ್ಲ, ನಲ್ಲೆಯ ಮೈಯೆಲ್ಲ
ಹಿಗ್ಗಿನ ಮುಳ್ಳಿಗೆ ಸಿಕ್ಕಾಂಗ
ಜುಮ್ ಜುಮು ಝುಮುಜುಮು ಗುಂಗುಣು ದುಮುದುಮು
ನಾದದ ನದಿಯೊಂದು ನಡೆಧಾಂಗ

---

1. ಸಖೀಗೀತ : ಪುಟ ೩೯

ಗಲ್ಲ ಗಲ್ಲಕೆ ಹಚ್ಚಿ ನಲ್ಲನಲ್ಲೆಯರಿರುಳು
ಗುಜುಗುಜು ಗುಲುಗುಲು ನುಡಿಧಾಂಗ

ಹೆಣ್ಣಂಡು ಜೇನ್ನೊಣ ಮುದ್ದಾಡಿ ಕಚ್ಚಾಡಿ
ಹೂಜೇನ ಹನಿಹನಿ ಕುಡಿಧಾಂಗ
ಮಂಕಾಗಿ ಮೂಕಾದ ಮನದ ಮಿಡುಕಾಟದ
ಮೊಗ್ಗಿಗೆ ಬಾಯಿಲ್ಲಿ ಒಡಿಧಾಂಗ
ಸಂಜೀಯ ಮುಗಿಲಾಗ ರೊಜ಼್ ಬಿಲ್ಲಪಟವೊಂದು
ಗಾಳಿ–ಸುಳಿಗೆ ಶ್ರುತಿ ಹಿಡಿಧಾಂಗ
ಗಗನ ಸಂಚಾರದ ನಾರದನ ವೀಣೆಯ
ಹಾಡೀನ ತೆರಿತೆರಿ ಬಡಿಧಾಂಗ

ಆತನೀತನವಂತ ಯಾತನದ ಯಾತನೆಯ
ಯಾತ ಕಿರುಗುಟ್ಟೋದು ನಿಂಧಾಂಗ
ನಾನೀನ ನುಡಿನುಂಗಿ ತಾನೀನ ತಾನೆ ತಾ
ತಾನಾಗಿ ತನನ್ನನ ಬಂಧಾಂಗ
ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು
ಹತ್ತಾಗಿ ಜತ್ತಾಗಿ ಸುಳಿಧಾಂಗ
ದಣಿದ ಜೀವದ ಮ್ಯಾಲೆ ಜೇನಿನ ಸುರಿಮಳಿ
ಜೇಂಗುಟ್ಟಿ ಹನಿಹನಿ ಇಳಿಧಾಂಗ

ಪ್ರಕೃತಿ ಪುರುಷಗೆ ಸೋತು ಪ್ರಾಣದ್ಧಂಜಿಯೆ ನೂತು
ಅನುಭವದ ಕಿವಿಮಾತು ಆಧಾಂಗ
ಹಾಸಾದ ಹಾಡಿಗೆ ಹೊಕ್ಕಾತು ಕಿನ್ನರಿ
ನೆಯ್ಗಿಯೊಳಗೆ ನೂಲು ಹೋಧಾಂಗ
ಜೀವದ ರಸ ಹಿಂಡಿ ತುಂತೂರು ಮಳೆಯಾಗಿ
ತಂತಿಯ ತುಂಬೆಲ್ಲ ಸಿಡಿಧಾಂಗ
ಮರುಳಸಿದ್ಧನ ಕೈಯ–ಕಿನ್ನರಿಯಾಗಿ ಸಿಕ್ಕ
ಮಾಯೆಯೆ ಮೈಗೆ ಮೈ ನುಡಿಧಾಂಗ [1]

---

1. ಸಖೀಗೀತ : ಪುಟ ೫೧–೫೨



ಬೇಂದ್ರೆಯವರ ಕವನಗಳಲ್ಲಿ ಜಾನಪದ ಮೋಡಿ ತಲೆದೋರುವ ಇನ್ನೊಂದು ಬಗೆ–ಅವರ ಅನನ್ಯ ಸಾಧಾರಣವಾದ ನಾದಲೀಲೆ. ಬೇರೆ ಅನೇಕ ಕವಿಗಳು ಪ್ರಾಸಕ್ಕಾಗಿ, ನಾದಕ್ಕಾಗಿ ಒದ್ದಾಡಿದರೆ ಬೇಂದ್ರೆಯವರಿಗೆ ಅದು ಸಹಜ. ಅವರ ಭಾವಗೀತಗಳ ಪ್ರಧಾನ ಲಕ್ಷಣಗಳಲ್ಲೊಂದು 'ಮಾತು ಮಾತು ಮಥಿಸಿ ಬಂದ ನಾದದ ನವನೀತ', 'ನಾದದ ನುಡಿಯೊಂದು ನಡೆದ್ಹಾಂಗ'. ಈ ಮೂರು ಸಾಲುಗಳನ್ನು ನೋಡಿ :

ಅಂತರಂಗದಾ ಮೃದಂಗ ಅಂತು ತೋಂ ತಾನಾನಾ |
ಚಿತ್ತ ತಾಳ ಬಾರಿಸುತ್ತಲಿತ್ತು ಝುಂ ಝಣಾಣಾ |
ನೆನವು ತಂತಿ ಮೀಟುತಿತ್ತು ತಂತನನನ ತಾನಾ || [1]

ಇಲ್ಲಿ ಮಾತಿಗೂ, ಭಾವಕ್ಕೂ ಇರುವ ಸಾಮರಸ್ಯ ನೋಡಿ. ಅಂತರಂಗದ ಮೃದಂಗ ತೋಂತನಾನಾ ಅಂದುದೇ ಹಾಡಾಯಿತು. 'ಮೃದಂಗ' ಶಬ್ದವನ್ನು ಉಚ್ಚರಿಸುವಾಗ ಆಗುವ ಮೃದಂಗನಾದವನ್ನು ಕವಿಯ ಕಿವಿ ಎಷ್ಟು ಚೆನ್ನಾಗಿ ಪರಿಭಾವಿಸಿದೆ ! ಚಿತ್ತ ತಾಳ ಬಾರಿಸುತ್ತಲಿತ್ತು—ಇಲ್ಲಿ ತಾಳದ ಪೆಟ್ಟು ತ್ತ, ತ್ತ, ತ್ತ ಎಂದು ಹೇಗೆ ಬೀಳುತ್ತದೆ ! 'ನೆನವು ತಂತಿ' ಎನ್ನುವಾಗಲೇ ಯಾವುದೋ ಶ್ರುತಿ ಹಾಕಿದಂತೆ ಭಾಸವಾಗುತ್ತದೆ. ಈ ಗುಣವನ್ನು 'ಗಂಗಾವತರಣ' ಕವನದಲ್ಲಿ ಇನ್ನಷ್ಟು ಅದ್ಭುತವಾಗಿ ಕಾಣಬಹುದು. ಭಗೀರಥನ ತಪಸ್ಸಿನಿಂದ ಭುವಿಗಿಳಿದ ಗಂಗೆಯ ವೈಭವವನ್ನು ಕವಿಯ ಮಾತಿನಲ್ಲೇ ಕೇಳಬೇಕು. ಅಧೋ ಅಧೋ ಧಾವಮಾನ ಧವಲಗಂಗೆಯ ಶಬ್ದ, ಗತಿ, ಸಂಚಾರ, ಸುಳಿ, ತೆರೆ ಎಲ್ಲ ಅಲ್ಲಿ ಅನುಭವಗಮ್ಯ :

ಸುರಸ್ವಪ್ನವಿದ್ದ ಪ್ರತಿಬಿಂಬ ಬಿದ್ದ
ಉದ್ಬುದ್ಧ ಶುದ್ಧ ನೀರೇ
ಎಚ್ಚತ್ತು ಎದ್ದ ಆಕಾಶದುದ್ದ
ಧರೆಗಿಳಿಯಲಿದ್ದ ಧೀರೇ
ಸಿರಿವಾರಿಜಾತ ವರಪಾರಿಜಾತ
ತಾರಾ–ಕುಸುಮದಿಂದೆ
ವೃಂದಾರವಂದ್ಯೆ ಮಂದಾರಗಂಧೆ
ನೀನೇ ತಾಯಿ ತಂದೆ
ರಸಪೂರಜನ್ಯೆ ನೀನಲ್ಲ ಅನ್ಯೆ
ಸಚ್ಚಿದಾನಂದಕನ್ಯೆ

1. ಗಂಗಾವತರಣ ; 'ಕಣ್ಣಕಾಣಿಕೆ' ಪುಟ ೧೦೨.

ಬಂದಾರೆ ಬಾರೆ, ಒಂದಾರೆ ಸಾರೆ
ಕಣ್‌ಧಾರೆ ತಡೆವರೇನೇ ?
ಅವತಾರವೆಂದೆ ಎಂದಾರೆ ತಾಯಿ,
ಈ ಅಧಃಪಾತವನ್ನೇ
ಹರಕೆ ಸಂದಂತೆ
ಮಮತೆ ಮಿಂದಂತೆ
ತುಂಬಿ ಬಂದಂತೆ
ದುಮ್ ದುಮ್ ಎಂದಂತೆ
ದುಡುಕಿ ಬಾ
ನಿನ್ನ ಕಂದನ್ನ ಹುಡುಕಿ ಬಾ [1]

ಬೇಂದ್ರೆಯವರ ನಾದ, ಪ್ರಾಸಗಳು ಎಷ್ಟು ಸಹಜವಾಗಿ ಬರುತ್ತವೆ ಎಂದರೆ ಅವುಗಳನ್ನು ಓದುತ್ತಿದ್ದರೆ ಈ ಕವನಗಳನ್ನು ಬೇಂದ್ರೆಯವರು ಕಟ್ಟಲಿಲ್ಲ; ಅವು ಬೇಂದ್ರೆಯವರನ್ನು ಕಟ್ಟಿದುವು ಎನ್ನಿಸುತ್ತದೆ. ಹಳ್ಳಿಯ ಸಾಹಿತ್ಯದಲ್ಲಿ ಪ್ರಾಸದ ಮಹತ್ತ್ವ ಹೆಚ್ಚು. ಒಂದು ಗಾದೆಯನ್ನು ಹೇಳುವಾಗಲೋ, ಒಂದು ಒಗಟನ್ನು ನುಡಿಯುವಾಗಲೋ, ಒಂದು ಲಾವಣಿಯನ್ನೋ, ಹಾಡನ್ನೋ, ತ್ರಿಪದಿಯನ್ನೋ ಅನ್ನುವಾಗಲೋ ಅಲ್ಲಿ ನಾವು ಪ್ರಾಸವೈಭವವನ್ನು ಕಾಣುತ್ತೇವೆ. ಬೇಂದ್ರೆಯವರು ಜನಪದ ಸಾಹಿತ್ಯದ ಈ ಮೋಡಿಗೆ ಮಾರುಹೋದರು. ಪ್ರಾಸದಲ್ಲಿ ಕವಿ ಏನು ಅದ್ಭುತವನ್ನು ಸಾಧಿಸಬಹುದು ಎಂಬುದಕ್ಕೆ ಬೇಂದ್ರೆಯವರ 'ಕಥೆಯಾದಳು ಹುಡುಗಿ' ಎಂಬ ಶ್ರೇಷ್ಠ ಕವನ ಅತ್ಯಂತ ಸುಂದರ ನಿದರ್ಶನವಾಗಿದೆ :

ಹಸಿಯಿದ್ದಳು ಬಿಸಿಯಾದಳು
ಸಸಿಯಿದ್ದಾ ಹುಡುಗಿ
ಹುಸಿಯರಿಯದ ಹುಡುಗಿ
ಕಣ್ಣಿದಿರಲ್ಲೇ ಬೆಳೆದಳು
ಹೊಸ ದೇಸಿಯ ಬೆಡಗಿ

ಸೊಸೆಯಿದ್ದಳು ಚಿಗುರಿಟ್ಟಳು
ಉಗುರ್ಗೆಂಪಿನ ಹುಡುಗಿ
ಉಸಿರ್ಗಂಪಿನ ಹುಡುಗಿ
ಆಡುತ ನೋಡುತ ಬಿಟ್ಟಳು
ಊರೆಲ್ಲವನುಡುಗಿ

1. ಗಂಗಾವತರಣ : ಪುಟ ೬-೭.

ಚಿಗುರಿದ್ದಳು ಚಿಗರೆಯಮರಿ
ಹೂಬಿಟ್ಟಳು ಹುಡುಗಿ
ಮೊಗ್ಗಿದ್ದಾ ಹುಡುಗಿ
ಕಣ್ಕುಣಿತಕೆ ನಗೆ ಭಣಿತಕೆ
ಮನೆ ಹೋಯಿತು ನಡುಗಿ

ಹಾ ಹಾ ಎನ್ನುತ ಬೆಳೆದಳು
ಕೂಸೆನಿಸಿದ ಹುಡುಗಿ
ವಧುವಾದಳು ಹುಡುಗಿ
ಒಗರಳಿದಿತು ಹುಳಿಯಿಳಿದಿತು
ಬೆಡಗುಳಿದಿತು ಅಡಗಿ

ಆ ಪಾಕವೊ ಆ ಪಾಡೋ
ತಾಯಾದಳು ಹುಡುಗಿ
ಹಾಯಾದಳು ಹುಡುಗಿ
ಪಡೆದಷ್ಟೂ ಹಿಗ್ಗವಳಿಗೆ
ಮಮತೆಯ ಕಂಪಿಡುಗಿ

ಪಾಡಾದಳು ಹಣ್ಣಾದಳು
ಮಣ್ಣಾದಳು ಹುಡುಗಿ
ನೆನಪಾದಳು ಹುಡುಗಿ
ವ್ಯಥೆಯಾದಳು ಕಥೆಯಾದಳು
ಎದೆಯಲ್ಲಿಯೆ ಮಡಗಿ [1]

ಇಲ್ಲಿ ಹುಡುಗಿ ಎಂಬ ಮಾತಿಗೆ ಬಂದ ಬೆಡಗಿ, ಉಡುಗಿ, ನಡುಗಿ, ಅಡಗಿ, ಇಡುಗಿ, ಮಡಗಿ ಎಂಬ ಮಾತುಗಳೂ, ಸಸಿ, ಬಿಸಿ, ಸೊಸೆ, ಉಗುರ್ಗೆಂಪಿನ, ಉಸಿರ್ಗಂಪಿನ, ತಾಯಾದಳು, ಹಾಯಾದಳು, ಹಣ್ಣಾದಳು, ಮಣ್ಣಾದಳು, ವ್ಯಥೆಯಾದಳು, ಕಥೆಯಾದಳು ಎಂಬ ಒಳಪ್ರಾಸಗಳೂ ಹುಡುಗಿಯ ಕತೆಯ ಬೆಳವಣಿಗೆಯಲ್ಲಿ ಅತ್ಯಂತ ಅರ್ಥಪೂರ್ಣವಾಗಿವೆ.

೫

ಬೇಂದ್ರೆಯವರು ಕನ್ನಡ ಕಾವ್ಯಕ್ಕೆ ಕೊಟ್ಟ ಇನ್ನೊಂದು ಬೆಲೆಬಾಳುವ ಜಾನಪದ ರೀತಿ ಅವರು ಕಾಳಿದಾಸನ ಮೇಘಸಂದೇಶ ಕಾವ್ಯವನ್ನು ಕನ್ನಡಕ್ಕೆ

1. ಅರಳು-ಮರಳು : ಪುಟ, ೪೬೪–೪೬೫.

'ಭಾವಗ್ರಹಣ' ಮಾಡಿಕೊಟ್ಟುದರಲ್ಲಿ ಕಾಣುತ್ತದೆ. ಸಂಸ್ಕೃತದ ಮಂದಾಕ್ರಾಂತಾ ವೃತ್ತಕ್ಕೆ ಸಂವಾದಿಯಾಗಿ ಬೇಂದ್ರೆಯವರು ಕನ್ನಡದ ಮೇಘಛಂದಸ್ಸನ್ನು ಸೃಷ್ಟಿಸಿದರು. ಬೇಂದ್ರೆಯವರೇ ಈ ಛಂದಸ್ಸನ್ನು ಮುಂದೆ ತಮ್ಮ ಅನೇಕ ಭಾವ-ಗೀತಗಳಲ್ಲಿ ಬಳಸಿದರು. ಇತರ ಕವಿಗಳು ಇದನ್ನು ಅನುಕರಿಸಿದುದಕ್ಕೆ ಲೆಕ್ಕವಿಲ್ಲ. ಈ ಕನ್ನಡದ ಮಂದಾಕ್ರಾಂತ ಕನ್ನಡಕ್ಕೆ ಬೇಂದ್ರೆಯವರ ಕೊಡಗೆ; ಇದು ಜನಪದ ರೀತಿಯ ವಿರಹಚಿತ್ರಣಕ್ಕೆ ಅತ್ಯಂತ ಔಚಿತ್ಯಪೂರ್ಣ ನಡಗೆಯಾಗಿದೆ, ಮೂಲದಲ್ಲೂ ಕಥೆಯು ಹಂದರವೆಲ್ಲ ಯಕ್ಷನ ವಿರಹದಲ್ಲಿದೆ; ಕಾಶ್ಮೀರದಿಂದ ಅಲಕಾಪುರದ ವರೆಗಿನ ಭಾರತೀಯ ಹಳ್ಳಿಯ ನಿಸರ್ಗದ ಚಲಚ್ಚಿತ್ರ ನಮ್ಮ ಕಣ್ಮುಂದೆ ಸರಿಯುತ್ತದೆ :

ಜಲದ ಭಾರದಲಿ ಜಲದ ಬಾಸಿನಲಿ ಮಂದಮಂದವಾಗಿ
ಗಾಳಿಯಿಂದ ಆಕ್ರಾಂತವಾಗಿ ಗುಡುಗುಡುಗಿ ದೂಡಿ ನೂಗಿ ||
ನದಿಗಾಗಿ ನಡೆದು ಬೆಟ್ಟಕ್ಕೆ ತಡೆದು ನಗರಿಯಲಿ ನೋದವಡೆದು
ಸಾಗುತಿಹುದು ಮಂದಾಕ್ರಾಂತ – ರಸವಿರಹಿ ಛಂದ ಹಿಡಿದು ||

× × × × ×

ತೂತು ಬಿದಿರು ಕೊಳಲಾಗಿ ಊದುತಿರೆ, ಗಾಳಿ ತೂರಿ ನೂಗಿ
ಶಿವನ ತ್ರಿಪುರ ಜಯಗೀತ ಹಾಡೆ ಕಿನ್ನರರು ದನಿಯ ತೂಗಿ ||
ನಿನ್ನ ಗುಡುಗು ಮದ್ದಳೆ ಮೃದಂಗದೊಲು ತುಂಬೆ ದರಿಯ ಜಾಡು
ಕೂಡಿದಂತೆ ಸರಿ, ಶಿವನ ನಾಟ್ಯ ಸಂಗೀತದೀಡು ಜೋಡು ||

× × × × ×

ಮರದ ನಡುವೆ ಬಿಳಿಹಾಸುಗಲ್ಲು ಬಂಗಾರಕೋಲು ನಡುಕೆ
ಎಳೆಬಿದಿರ ಬಣ್ಣ ಬೆಲೆಹರಳಿನಿಂದ ನೆಲೆಗಟ್ಟು ಅದರ ಬುಡಕೆ ||
ಆ ಕೋಲಿನಲ್ಲಿ ಕುಣಿಸುವಳು ನವಿಲ ನನ್ನಾಕೆ ಸಂಜೆಯಲ್ಲಿ
ಕೈತಟ್ಟಿ ಮಾಟ ಬಳೆತಾಕಲಾಟ ಥಕಥೈಯ ಥಾಟನಲ್ಲಿ ||

\+ \+ \+ \+ \+

ಕಳೆದವೆಷ್ಟು ಇನ್ನುಳಿದವೆಷ್ಟು ದಿನವೆಂದು ಲೆಕ್ಕವಿಟ್ಟು
ಹೊಸ್ತಿಲಕ್ಕೆ ಹೂವಿಟ್ಟು ನೋಡುವಳೊ ನಾನು ಹೋದ ತೊಟ್ಟು ||
ಇಲ್ಲ ಎದೆಯ ಮುಟ್ಟಳಿದ ಮೊದಲ ಸಂಗಗಳ ಸವಿವಳೇನೋ
ನಲ್ಲರಗಲೆ ನಲ್ಲೆಯರಿಗೆಲ್ಲ ಇವು ಆಟ ಇಷ್ಟೆ ತಾನೋ ? || [1]

---

1. ಕನ್ನಡ ಮೇಘದೂತ.

ಇಲ್ಲೆಲ್ಲ ನಮ್ಮ ದೇಶದ ಜಾನಪದ ಜೀವನ, ಈ ಕನ್ನಡ ಮಂದಾಕ್ರಾಂತದ ಜತೆಗೆ ಕೈ ಕೈ ಹಿಡಿದು ಸವಾರಿಗೆ ಹೊರಟಿರುವುದನ್ನು ಕಾಣಬಹುದು. ಈ ಭಾಷಾಂತರ ಮೂಲಕ್ಕೆ ಸರಿಯಾಗಿಲ್ಲ ಎಂಬ ವಿಮರ್ಶೆಯಿದೆ. ಹಾಗೆ ಮಾಡುವುದು ಕವಿಯ ಉದ್ದೇಶವಲ್ಲ. ಹಾಗೆ ಮಾಡಿದ್ದರೆ ಹತ್ತರ ಜತೆಯಲ್ಲಿ ಹನ್ನೊಂದನೆಯದಾಗುತ್ತಿತ್ತು; ಮೊದಲನೆಯದಾಗುತ್ತಿರಲಿಲ್ಲ. ಆ ಮಹಾಕವಿ ಸೃಷ್ಟಿ ಈ ಮಹಾ ಕವಿಯಲ್ಲಿ ಮರುಹುಟ್ಟನ್ನು ಪಡೆದಿದೆ.

ಮುಂದೆ ಗಂಗಾಷ್ಟಕ, ಸ್ವಾತಂತ್ರ್ಯದ ವರ್ಧಂತಿ, ಪ್ರಾರ್ಥನೆ, ಜೋಗಿ, ಶ್ರೀರಾಮಕೃಷ್ಣೋದಯ, ಮಹಾಲಕ್ಷ್ಮಿ, ಗಣಪಸ್ತುತಿ, ಪಂಚಬಾಣ, ಅಮರ ಮರಣ, ಅಲ, ಗೋವತ್ಸಲೀಲೆ, ಓ ಚಾರ್ವಾಕ, ಚೆನ್ನಕೇಶವನ ಸಾಕ್ಷಿಯಲ್ಲಿ, ಜೀವನನಾಟ್ಯ, ಧ್ರುವಮಾರ್ಗ, ಹೃದಯಸಮುದ್ರ, ನಾನಲಿಯುತ್ತಿದ್ದೆ, ಶ್ರೀಗುರು ಕರುಣ-ಚರಣ, ಮಹಾಪ್ರಸ್ಥಾನ, ತಾಯಿಗೆ ಪ್ರಾರ್ಥನೆ, ಇಂದ್ರಜಾಲ, ಆತ್ಮ ಪ್ರಜ್ಞೆ, ಶ್ರೀ ವಿಶ್ವನಲ್ಲಿ ಯಜಮಾನನಾಗಿ, ಮೈಯು ನೀನು, ಗಿರಿಶಿಖರ, ಅಮೃತಾನುಭವ, ಬೆಳಗುಜಾವ, ಆನಂದಲಹರಿಯಿಂದ, ಪೂರ್ಣಮಾಡು, ಅಗ್ನಿರಾಜ, ಬಂಧವಿಮೋಚನೆ, ಸುವರ್ಣದೀಪ, ಅನಂತಸಾಹಸ, ವಿಶ್ವಾವತಾರ, ಅತಿಥಿ, ಮೈ, ಮುಕ್ತಿ, ಬೆಳಕು, ಅದ್ವೈತ, ಮಾನವ - ಬೌದ್ಧಿಕ ಪ್ರಾಣಿ, ಸಮಾಪತ್ತಿ, ಕಿಂಚಿತ್ ಶೇಷ, ಪ್ರಾಣಾಂಗನೆ, ದಿವ್ಯಸ್ಮೃತಿ, ಉತ್ಕ್ರಾಂತಿ, ನಿರ್ವಸ್ತುಭಾವ, ಪ್ರಾಣದೇವತೆಗಳ ಪರಮಸ್ವರ್ಗ, ಸಾವಿತ್ರಿ ಮಹಾಕಾವ್ಯದ ಅನುವಾದ—ಖಂಡಗಳಲ್ಲಿ, ಒಂದೆ ಬಂದೆ, ಓಮನ, ಛಾಯಾ, ಭಾವದೀಪ, ಹುಲಿ ಮತ್ತು ಹುಲ್ಲೆ, ನಮನ — ಮೊದಲಾದ, ಒಂದು ಸಂಕಲನವಾಗುವಷ್ಟು ಕವನಗಳಲ್ಲೆಲ್ಲ ಈ 'ಕನ್ನಡ ಮಂದಾಕ್ರಾಂತ' ಸಾಗಿದೆ.

ಈ ಜಾತಿಯ ಕವನಗಳಲ್ಲೆಲ್ಲ 'ಜೋಗಿ' ಸರ್ವೋತ್ಕೃಷ್ಟ ನಿದರ್ಶನವಾಗಿದೆ. "ಜೋಗಿಯ ಗೀತ ಧಾರವಾಡದ ಸುತ್ತಲಿನ ನಿಸರ್ಗದ ಮಾಯೆಯಿಂದಲೂ ಒಳಜೀವದೊಳಗಿನ ಕಾಳರಾತ್ರಿಯ ಭಯಾನಕ ಸಂಶಯಾಕುಲಿತ ಭಾವನೆಯಿಂದಲೂ ಉದಿತವಾಗಿದೆ"[1] ಎಂದು ಕವಿ ಭಾವಸಂದರ್ಭ ಸೂಚಿಸಿದ್ದಾರೆ. ಈ ಕವನ ಬೇಂದ್ರೆಯವರ ಕಾವ್ಯದ ಎಲ್ಲ ಒಳ್ಳೆಯ ಗುಣಗಳನ್ನೂ ಮೈಗೂಡಿಸಿಕೊಂಡ ಅವರ ಶ್ರೇಷ್ಠ ಕವನಗಳಲ್ಲಿ ಒಂದೆನಿಸಿದೆ. ಬೇಂದ್ರೆಯವರೇ ಈ ಕವನಕ್ಕೆ ಒಮ್ಮೊಮ್ಮೆ ಒಂದೊಂದು ಅರ್ಥ ಹೇಳುವುದುಂಟು. ನನಗೆ ಈ ಕವನ ಹೀಗೆ ಅರ್ಥವಾಗಿದೆ :

ಈ ಕವನವನ್ನು ಓದುವಾಗ ಉಪನಿಷತ್ತಿನಲ್ಲಿ ಬರುವ ಈ ಮಾತು ನೆನಪಿಗೆ ಬರುತ್ತದೆ :

---

1. ಗಂಗಾವತರಣ : ಪುಟ, ೧೧೫.

ದ್ವಾ ಸುಪರ್ಣಾ ಸಯುಜಾ ಸಖಾಯಾ
ಸಮಾನಂ ವೃಕ್ಷಂ ಪರಿಷಸ್ವಜಾತೇ |
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ—
ನ್ನಶ್ನನ್ನನ್ಯೋ ಅಭಿಚಾಕಶೀತಿ || [1]

ಸದಾ ಜೊತೆಯಲ್ಲಿರುವ ಸಮಾನವಾದ ಹೆಸರುಳ್ಳ ಜೀವಾತ್ಮ, ಪರಮಾತ್ಮ ಎಂಬ ಎರಡು ಪಕ್ಷಿಗಳು ಶರೀರವೆಂಬ ವೃಕ್ಷವನ್ನು ಆಶ್ರಯಿಸಿಕೊಂಡಿವೆ. ಅವುಗಳಲ್ಲಿ ಜೀವಾತ್ಮಪಕ್ಷಿ ತನ್ನ ಕರ್ಮದಿಂದ ಉಂಟಾದ ಸುಖದುಃಖರೂಪವಾದ ಕರ್ಮಫಲ ವೆಂಬ ಹಣ್ಣನ್ನು ತಿನ್ನುತ್ತಿದೆ. ಇನ್ನೊಂದು ಪರಮಾತ್ಮಪಕ್ಷಿ ತಿನ್ನದೆ ನೋಡು ತ್ತಿದೆ. ಇದನ್ನು ಬೇಂದ್ರೆಯವರು 'ಜೋಗಿ' ಕವನದಲ್ಲಿ ಜಾನಪದ ನಿಸರ್ಗದ ಪರಿ ಸರಣ ಕಟ್ಟಿ ಹೇಳಿದ್ದಾರೆ ಎನ್ನಿಸುತ್ತದೆ. ಬೇಂದ್ರೆಯವರ ಅನುಭಾವ ಭಾವ, ಜಾನಪದ ಪರಿಸರ ನಿರ್ಮಾಣ, ಮಂದ ಮಂದವಾಗಿ ಸಾಗುವ ಮಂದಾಕ್ರಾಂತ, ನಾದಲೀಲೆಗಳ ಪುನರ್ಜನ್ಮ ಈ ಭಾವಗೀತದಲ್ಲಾಗಿದೆ. ಬೇಂದ್ರೆಯವರು ಭಾವಗೀತದಲ್ಲಿಮಾಡಿದ ಶ್ರೀಮಂತ ವ್ಯವಸಾಯದ ಅಮೃತಫಲವಿದು.

ಪರಮಾತ್ಮ, ಲೋಕದಲ್ಲಿ ಜೀವಾತ್ಮನನ್ನು ಬಗೆಬಗೆಯ ಪ್ರಲೋಭನೆಗಳ ಜಾಲದಲ್ಲಿ ಬೀಳುವಂತೆ ಮಾಡುತ್ತಾನೆ. ಮತ್ತೆ ಅವುಗಳನ್ನೆಲ್ಲ ಕಡಿದುಕೊಂಡು ತನ್ನೆಡೆಗೆ ಬಾ ಎಂದು ಕರೆಯುವನು. ಇಲ್ಲಿಯ ಹಳ್ಳಕೊಳ್ಳ, ತುಡುಗುದನ ತೊಂಡು ಮೇಯುವುದು, ಜೋಡುಗೂಗಿ, ಮಸಣವಾಟಿ, ನೀರಪಾಚಿ, ಕಪ್ಪು ನೀರು, ಗುಡ್ಡ, ಹೊಲ, ತೊಗಲಬಾವಲಿ, ಪಾರಿವಾಳ, ಜೇವು, ಅಮೃತಬಳ್ಳಿ, ಹಾಲ ಸುರಿಯುವ ಆಲ, ಅರಳಿ, ಅತ್ತಿಗಿಡ, ಜೇನು, ಮಾವು, ಕೋಗಿಲೆ — ಇವೆಲ್ಲ ಜೀವಾತ್ಮವನ್ನು ಆಕರ್ಷಿಸುವ ಶುಭ–ಅಶುಭಕರ ವಸ್ತುಪ್ರತಿಮೆಗಳು. ಪುರುಷ ಜೀವಾತ್ಮನನ್ನು ತನ್ನ ಕಡೆ ಸೆಳೆದುಕೊಳ್ಳಲು ಇಟ್ಟ ಸಾಧನ ಪ್ರಕೃತಿ. ಈ ಪ್ರಕೃತಿಯ ಪರಿಸರಣದಲ್ಲಿ ಜೀವಾತ್ಮದ ಸಂಚಾರ, ಸಂಸಾರ, ವಿಹಾರ. ಅಲ್ಲಿ ಒಳ್ಳೆಯದಿದೆ; ಕೆಟ್ಟದ್ದಿದೆ; ಅದರ ಹಣ್ಣನ್ನು ಮೆಲ್ಲುವುದೊಂದೇ ಅದರ ಕರ್ಮ ಫಲ. ಅದನ್ನು ಸುಮ್ಮನೆ ನೋಡುತ್ತ ಕುಳಿತಿದೆ ಪರಮಾತ್ಮಪಕ್ಷಿ. ಕೊನೆಯಲ್ಲಿ ಮರುಕಗೊಂಡು ಒಂದೇ ಸವನೆ ಕೋಗಿಲೆಯಾಗಿ ಕರೆಯುತ್ತದೆ.

ಊರ ತುದಿಯ ಆ ಮೂರುಬಟ್ಟೆ ಮುಗಿದಲ್ಲಿ ಕೊಳ್ಳವೆಲ್ಲಿ
ಹಳ್ಳ ಅಡಗಿ ಹರಿದಲ್ಲಿ, ತುಡುಗು–ದನ ತೊಂಡು ಮೇಯುವಲ್ಲಿ
ದಿಕ್ಕು ತಪ್ಪತಾರ ತಪ್ಪಿಹೊಕ್ಕರs ಕಕ್ಕಾವಿಕ್ಕಿಯಾಗಿ
ಇರುಳು ಅಂತನs ಹಗಲs ಗೂಕತಾವ ಅಲ್ಲಿ ಜೋಡಗೂಗಿ. [2]

---

1. ಮುಂಡಕೋಪನಿಷತ್, ೩–೧.
2. ಗಂಗಾವತರಣ, ಪುಟ ೫೫.

‘ಜೋಗಿ’ ಆರಂಭವಾಗುವ ರೀತಿಯಿದು. ನಮ್ಮನ್ನು ಎಲ್ಲಿಂದಲೋ ಎಲ್ಲಿಗೋ ಕರೆದುಕೊಂಡು ಹೋಗುತ್ತದೆ. ಇಲ್ಲಿಯ ಹಳ್ಳ-ಕೊಳ್ಳ ದಿಕ್ಕುತಪ್ಪಿಸುತ್ತವೆ; ಇಲ್ಲಿ ತುಡುಗು ದನಗಳು ತೊಂಡು ಮೇಯುವುದೇ ಹೆಚ್ಚು. ಇಲ್ಲಿ ಹಗಲೂ ಇರುಳಿನಂತಿದೆ. ಗೂಬೆಗಳು ಜತೆ ಜತೆಯಾಗಿ ಕೂಗುತ್ತವೆ. ಜೀವಾತ್ಮದ ಸುತ್ತಿರುವ ಪ್ರಲೋಭನೆಗಳ ಭಯಂಕರ ಪರಿಸರ. ಅದಕ್ಕೆ ಮುಂದೆ ಹೋಗಬೇಕೆಂಬ ತವಕ; ಆದರೆ ದಾರಿ, ಹೋದಷ್ಟೇ, ಸಿಕ್ಕಿದಷ್ಟೇ, ಇನ್ನಷ್ಟು ತೊಡಕಿನದು :

ಅದನ ದಾಟಿ ಆ ಮಸಣವಾಟಿ, ಎಡಕಾಗಿ ಅದರ ಆಚಿ
ಕಾಮ ತನ್ನ ಹಚ್ಚಂಗಿ ಹಾಸಿಧಾಂಗೆಲ್ಲಿ ನೀರಪಾಚಿ
ಹೊಚ್ಚಿ ಹೊಂಡವನ ಮುಚ್ಚಿಗ್ಯಾಡತಾವೊ ಕಂಡ ಕಣ್ಣುಗಳಿಗೆ
ಪಾಚಿ ಸರಿಸಿದಾಗ ಕಪ್ಪು ನೀರು ಕರಿತಾವ ಒಳಗ ಬಳಿಗೆ ! [1]

ಬಿಡುಗಡೆಗೆಂದು ಮುಂದೆ ಹೋದರೆ ಅಲ್ಲಿ ಕಾದಿರುವುದು ಭೂತ ಪ್ರೇತ ಪಿಶಾಚಗಳ ಆವಾಸಸ್ಥಾನ. ಮುಂದೇನು ಎಡರು ಎಂಬುದನ್ನು ಮುಚ್ಚಿ ಸೆಳೆಯುತ್ತಿದೆ ಹಸಿರು ಹಾಸಿ ಪಾಚಿ. ಕಪ್ಪುನೀರು ತಿಳಿಯಲಾರದ ಯಾವುದೋ ಆಳಕ್ಕೆ ಎಳೆಯುತ್ತದೆ. ಮುಂದೆ ಒಡುದೂರ ಯಾವುದೋ ಸುಖವಿದೆ ಎಂದು ಮತ್ತೆ ಪಯಣ.

ಅಲ್ಲಿ ತೊಗಲುಬಾವಲೀ ಜೋತಾವ ಥರತಿ ಹಗಲಿನೊಳಗ
ಹಿಂಡುಪಾರಿವಾಳ ಹೊಕ್ಕ ಹೊರಡತಾವ ಮತ್ತ ಒಳಗ ಹೊರಗ
ಅಲ್ಲಿ ಹಬ್ಬಿ ಹರದ್ಯಾಡ ಜೇಪಿಗೇ ಸುತ್ತ ಅಮೃತಬಳ್ಳಿ
ಹಾಲ ಸುರುಸತಾವ ಆಲ ಅಲ್ಲಿ ಅಲ್ಲಾಡತಾವ ಅಳ್ಳಿ. [2]

ಇದು ಸುಖದುಃಖ ಮಿಶ್ರವಾದ ಸಂಸಾರ. ಇಲ್ಲಿ ಭಯವುಂಟು; ಅಭಯದ ಅರಿವು ಮೂಡಿಸುವ ಸಾಧುಜೀವಿಗಳೂ ಇವೆ. ಇಲ್ಲಿ ಕಹಿಯುಂಟು; ಸಿಹಿಯೂ ಉಂಟು. ಹಾಲೂ ಉಂಟು, ಹಾಲಾಹಲವೂ ಉಂಟು. ಅತ್ತಿಗಿಡ ಉಂಟು, ಅದರ ಮೇಲೆ ಹಣ್ಣುಂಟು. ಕೆಂಪಗೆ ಆಕರ್ಷಕವಾಗಿದೆ ಬೇರೆ; ಆದರೆ ತಿನ್ನಲಾಗಲಿಲ್ಲ. ಜೇನು ತೊಟ್ಟಿಕ್ಕುತ್ತಿದೆ. ಅಲ್ಲಿ ಮುಗುಲಿಯಲ್ಲಿ ಹೂವಿದೆ; ಅದರ ಅಡಿಯಲ್ಲೇ ಹುತ್ತವೂ ಇದೆ; ಅದರಲ್ಲಿ ಏಳು ಹೆಡೆಯ ಹಾವು ಇದೆ

---

1. ಗಂಗಾವತರಣ ಪುಟ, ೨೫
2. ಅದೇ ಪುಟ, ೭೫

ಆ ಮಾವಿನೊಳಗ ಈ ಸುಗ್ಗಿಯೊಳಗ ಬಂದsದ ಕೋಗಿಲೊಂದು
ತನ್ನ ಜೋಡಿ ಕರೆದ್ಹಾಂಗ ಕರಿತsದ ನನ್ನ ಬಾsಕ ಅಂದು
ಕೂಗೇ ಕೂಗತದ ಕೂಗೇ ಗೂಗತsದ ಗಿರಣಿ ಕರೆಯೊಹಾಂಗ
ತೆರಪು ಇಲ್ಲ ಒಂದಳತಿ ಕೂಗತsದ ಬ್ಯಾಸರಿಲ್ಲಧಾಂಗ. [1]

ತಿಳಿಯದ್ಯಾವದೋ ಕಂಪು ಎಳೀತsದ ತುಂಬಿ ಹುಚ್ಚು ಆಗಿ
ಎಚ್ಚರಿಲ್ಲದs ಎತ್ತೊ ತಿರಗತಾವ ದಿಕ್ಕು ತೋರಪಾಗಿ
ಬಂತು ಸುಗ್ಗಿ ಬಂದsದ ಸುಗ್ಗಿ ಬರತsದ ಸುಗ್ಗಿ ಎಂದು
ಕೂಹೂ ಅನ್ನತದ ಕುಹೂ ಅನ್ನತದ ಕುಹೂಕ್ಕುಹೂ ಅಂದು. [2]

ಪರಮಾತ್ಮಪಕ್ಷಿ ಆ ಮಾಮರದ ಕೊಂಬೆಯಲ್ಲಿ ಕುಳಿತು ಒಂದೇ ಸಮನೆ ಈ ಜೀವಾತ್ಮಪಕ್ಷಿಯನ್ನು ಕರೆಯುತ್ತಿದೆ. ಸಂಸಾರದ ಕಟ್ಟನ್ನು ಹರಿದು, ಭವದ ಹಣ್ಣನ್ನು ತಿನ್ನುವುದನ್ನು ಬಿಟ್ಟು, ಸುಖದುಃಖದ ಭೋಗಗಳನ್ನು ತೊರೆದು, ಉದ್ಧಾರವಾಗು ಎಂದು ಸಂತತವಾಗಿ ಹೇಳುತ್ತಿದೆ. ದುಃಖ ಹೋಗಿ ಸುಖ ಬರುತ್ತಿದೆ. ಸಾಯುಜ್ಯ ಹತ್ತಿರವುಂಟು. ಆದರೆ, ಅದೇನು, ಅದಾರು ಎಂಬುದನ್ನು ಜೀವಾತ್ಮ ಅರಿಯದಲ್ಲ.

ತಾರಪಂಚಮದಾಗ ಕೋಗಿಲಾ ಕೂಗತsದೊ ಜೋಗಿ
ಯಾವ ಬಣ್ಣ ಅದಕಾವ ಕಣ್ಣು ನಾ ನೋಡಲೇನು ಹೋಗಿ
ತೋಟವೆಲ್ಲ ಹೂವಾಗಿ ನಿಂತು ತೊಂಗೆಲ್ಲ ಗೊಂಚಲಾಗಿ
ಪಾಡು ಆಗತಾವ, ಹಣ್ಣು ಆಗತಾವ ಅದರ ಲಯಕೆ ತೂಗಿ. [3]

ಒಮ್ಮೆ ಆ ಜ್ಞಾನವಾದರೆ ಮತ್ತೆ ಅಜ್ಞಾನವುಂಟೆ ?

ಯಾವ ಸ್ವರಾ ಇದು ಯಾವ ಕೋಗಿಲಾ ಯಾವ ಮರವೋ ಏನೋ
ಯಾಕ ಹೀಂಗ ಅಸರಂತ ಕೂಗತದ ಏನು ಇದಕೆ ಬ್ಯಾನ್ಯೊ
ಸುಕ್ಕು ಗುಡ್ಡ ನುಗ್ಗಾಗಿ ಹೋದನ್ಯೇ ಓಗೊಟ್ಟು ಇದಕs
ಬಿಸಿಲು ಕುಣಿದು ಬಿಸತsದ ಈಗ ಬಂದsದ ಮುಳಿಯ ಹದಕs. [4]

---

1. ಗಂಗಾವತರಣ, ಪುಟ ೮೬
2. ಅದೇ ,, ,,
3. ಅದೇ ,, ,,
4. ಅದೇ ,, ೮೭

ಬೇಂದ್ರೆಯವರ ಕರುಳಿನ ವಚನಗಳಲ್ಲಿ 'ಅರ್ಪಣ-ತರ್ಪಣ' ಎಂಬ ವಚನದಲ್ಲಿ ಮೂಡಿದ ದೃಷ್ಟಾಂತಗಳು ಹಳ್ಳಿಯ ಬಾಳಿಗೆ ಹತ್ತಿರವಾದುವು. ಕಳೆದುಕೊಂಡ ಮಗುವನ್ನು ನೆನೆದು ಇಲ್ಲಿ ಹರಿದ ವಾತ್ಸಲ್ಯಭಾವ ಮೊಗ್ಗೆ, ಕಳಿಲೆ, ಕಸುಗಾಯಿ, ನೀರ್ಗುಳ್ಳಿ, ಮದಗುಣಿಕೆ—ಎಂಬ ದೃಷ್ಟಾಂತಗಳಲ್ಲಿ ಒಡಮೂಡಿದೆ :

ಪುಷ್ಪವಿದ್ದಂತೆ ಮೊಗ್ಗೆಯನರ್ಪಿಸಿಕೊಂಡ ಶಿವನು !
ಪಕ್ವವಾದ ಫಳವಿದ್ದಂತೆ ಕಸುಗಾಯಿ ಕೊಯ್ದನು ಶಿವನು !
ಕೊಳಲಾಗಬಹುದಿತ್ತು, ಕಳಿಲದ್ದಾಗಲೇ ಕಡಿದ ಕಾಳ !
ದೇವ ! ಮಗುವೆಂದು ತಿಳಿದಿದ್ದೆ ಆದಾಯಿತು ನೀರ್ಗುಳ್ಳಿ !
ಮನೆಯವನೆಂದು ತಿಳಿದಿದ್ದೆ ಅವನಾದ ಅತಿಥಿ !
ಕಣ್ತುಂಬ ಕಾಣಲಿಲ್ಲ; ಬಾಯ್ತುಂಬ ಮುದ್ದಿಡಲಿಲ್ಲ;
ಮನೆಯ ಮಮತೆಯ ಮೂರ್ತಿಯಾದೀತೆಂದಿದ್ದೆ-
ಆದರೆ — ಎಂಜಲು ಮಾಡಿದ್ದಿಲ್ಲ ! ಆಯ್ತು — ಮಸಣದ-
ಮಹಾದೇವನ ಮುಡಿಯೊಳಗಿನ ಹೊಸಲ ಮದಗುಣಿಕೆ. [1]

ಲೋಕವೆಲ್ಲ ಈ ಕರೆಗೆ ಓಗೊಟ್ಟು ಸಾಕಾಗಿದ್ದರೂ ಅದು ಎಂದಿನಿಂದಲೋ ಇಂದು ಮುಂದೂ ಎಂದೆಂದೂ ಕರೆಯುತ್ತಿರುತ್ತದೆ. ಒಮ್ಮೆ ಓಗೊಟ್ಟುದು ಮತ್ತೆ ಮಾತಾಡಬೇಕಿಲ್ಲ. ಈ ಕರೆ ಬರಿಯ ಕರೆಕರೆಯಲ್ಲ. ಸಮಸ್ತ ಜೀವಾತ್ಮಕೋಟಿಯ ಎದೆಯ ಹಂಬಲ ಈ ಯೋಗಕ್ಕೆ ಬಾಯ್ಬಿಡುತ್ತದೆ. ಬೇಂದ್ರೆಯವರ 'ಜೋಗಿ' ಸಹೃದಯನನ್ನು ಈ ಅನುಭಾವದ ಯೋಗಕ್ಕೆ ಏರಿಸುತ್ತದೆ. ಬೇಂದ್ರೆಯವರ ಭಾವಗೀತವಲ್ಲಾದ ಮಹಾಕಾವ್ಯವಿದು.

'ಕರಡಿ ಕುಣಿತ'ದಲ್ಲಿ ಕರಡಿಯನ್ನು ಕುಣಿಸಿ ಹೊಟ್ಟೆ ಹೊರೆದುಕೊಳ್ಳುವವನ ಚಿತ್ರ ಕಣ್ಮುಂದೆ ನಿಲ್ಲುತ್ತದೆ. 'ಶ್ರಾವಣ'ದಲ್ಲಿ ಆ ಮಾಸದ ಬಣ್ಣನೆ ದೇಸಿ ರೀತಿಯಲ್ಲಿ ಸುಂದರವಾಗಿ ಮೂಡಿದೆ. ಕಡಲಿಗೆ ಶ್ರಾವಣ ಬಂದುದು 'ಕುಣಿದ್ಹಾಂಗ ರಾವಣ' ಎಂದಾಗ ಯಕ್ಷಗಾನದ, ಹಳ್ಳಿಯ ನಾಟಕದ ರಾವಣನ ನೆನಪು ಬರುತ್ತದೆ.

ಬೆಟ್ಟ ತೊಟ್ಟಾವ ಕುತನಿಯ ಅಂಗಿ |
ಹಸಿರು ನೋಡ ತಂಗಿ |
ಹೊರಟಾವೆಲ್ಲೋ ಜಂಗಿ |
ಜಾತ್ರಿಗೇನೋ | ನೆರದ್ಹಾದ ಇಲ್ಲೆ ತಾನೋ || [2]

1. ಉಯ್ಯಾಲೆ : ಅರ್ಪಣ-ತರ್ಪಣ : ಪುಟ ೮೭.
2. ಬಾ ಹತ್ತರ : ಪುಟ, ೧೪೭.

ಎಂಬಲ್ಲಿ ಬೆಟ್ಟ ಹಸಿರು ಅಂಗಿ ತೊಟ್ಟು ಜಾತ್ರೆಗೆ ಹೊರಟಂತಿದೆ ಎಂಬ ಮಾತು ಅದರ ಹಬ್ಬ ಉತ್ಸವವನ್ನೆಲ್ಲ ಹೇಳುತ್ತದೆ. 'ಹುಬ್ಬಳ್ಳಿಯಾಂವ' ಅವನು ಹಳ್ಳಿ ಯುವನೇ. ಹಳ್ಳಿಯ ಈ ಚದುರ ರಸಿಕ ನಿಜವಾದ ಪ್ರಣಯಸಾಧಕ. ಅವನನ್ನು ವರ್ಣಿಸಿದ ರೀತಿಯಲ್ಲಿ ಅವನ ಬಗೆಗೆ ಈ ಪ್ರೇಯಸಿಯ ಬಗೆ ಮಾರು ಹೋಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದಿದ್ದಲ್ಲಿ ಈ ಮಾತುಗಳನ್ನು ಹೇಳುತ್ತಿರಲಿಲ್ಲ ಅವಳು; ಅವನನ್ನು ನೆನೆದುಕೊಳ್ಳುತ್ತಿರಲಿಲ್ಲ :

ಇರು ಅಂದರ ಬರತೇನಂತ ಎದ್ದು ಹೊರಡಾಂವಾ
ಮಾರೀ ತೆಳಗ ಹಾಕಿತೆಂದರೆ ಇದ್ದು ಬಿಡಾಂವಾ
.... .... .... .... ....
ಚೌಡಿಯಲ್ಲ ನೀ ಚೂಡಾಮಣಿಯಂತ ರಮ್ಸಿಸ ಬಂದಾವಾ
ಬೆರಳಿಗುಂಗರಾ ಮೂಗಿನಾಗ ಮೂಗಬಟ್ಟಿಟ್ಟಾಂವಾ
ಕಣ್ಣಿನಾಗಿನ ಗೊಂಬೀ ಹಾಂಗ ವಿದ್ಯಾಗ ನಟ್ಟಾಂವಾ
.... .... .... .... ....
ಹುಟ್ಟಾ ಯಾಂವಾ ನಗೀಕ್ಯಾದಿಗಿ ಮುಡಿಸಿಕೊಂಡಾಂವಾ
ಕಂಡ ಹೆಣ್ಣಿಲೇ ಪ್ರೀತೀ ವೀಳ್ಯೇ ಮಡಿಚಿಕೊಂಡಾವಾ. [1]

'ಗಮುಗಮಾಡಸತಾವ ಮಲ್ಲಿಗಿ' ಎಂಬ ಕವನ ಜನಪದ ವಸ್ತುರೀತಿಯಿಂದ ಆತ್ಮೀಯವಾಗುತ್ತದೆ. ಚಿಕ್ಕೆಗಳಿವೆ, ಚಂದ್ರ ಮೂಡಿದ್ದಾನೆ; ಮಲ್ಲಿಗೆ ಅರಳಿ ಗಮುಗಮು ಸುಗಂಧವನ್ನು ಚೆಲ್ಲುತ್ತಿವೆ. ಇಂಥ ಸುಮುಹೂರ್ತದಲ್ಲಿ ನೀವು ಎಲ್ಲಿಗೆ ಹೊರಟಿರುವುದು ಎಂದು ತಡೆಯುವ ಪ್ರಿಯೆಯ ಚಿತ್ರ ಚೆಂದವಾದುದು. ಇಲ್ಲಿ ವರ್ಣಿತ ಪರಿಸರಣ ಹಳ್ಳಿಯ ರೀತಿಯದು :

ಗಮುಗಮಾಡಸತಾವ ಮಲ್ಲಿಗಿ ।
ನೀವು ಹೊರಟದ್ದೀಗ ಎಲ್ಲಿಗೆ ?
.... .... .... ....
ಚಿಕ್ಕಿ ತೋರಸ್ತಾವ ಚಾಚಿ ಬೆರಳ
ಚಂದ್ರಾಮ ಕನ್ನಡೀ ಹರಳ !
.... .... .... ....
ನೆರಳಲ್ಲಾಡತಾವ ಮರದ ಬುಡಕ
ಕೆರಿ ತೆರಿ ನೂಗತಾವ ದಡಕ
ಹೀಂಗ ಬಿಟ್ಟು ಇಲ್ಲಿ ನನ್ನ ನಡಕ
ನೀವು ಹೊರಟದ್ದೀಗ ಎಲ್ಲಿಗೆ ? [2]

---

1. ಸಖೀಗೀತ : ಪುಟ, ೯೨.
2. ಗಂಗಾವತರಣ ; ಪುಟ, ೬೪.

'ಯಾರಿಗೂ ಹೇಳೋಣು ಬ್ಯಾಡಾ' ಎಂಬ ಕವಿತೆಯಲ್ಲಿ ಯಾವುದನ್ನು ಹೇಳಬಾರದೋ ಅದನ್ನೇ ಹೇಳಿ ಅದನ್ನು ಯಾರಿಗೂ ಹೇಳುವುದು ಬೇಡ ಎಂಬ ಒಪ್ಪಂದ ಮಾಡಿಕೊಳ್ಳುವ ಹಳ್ಳಿಯ ಜನರ ಮುಗ್ಧ ಪ್ರಣಯರೀತಿಗೆ ಸಾಕ್ಷಿ ಯಾಗಿದೆ.

ಹಾರಗುದರೀ ಬೆನ್ನ ಏರಿ
ಸ್ವಾರರಾಗಿ ಕೂತು ಹಾಂಗs
ದೂರ ದೂರಾ ಹೋಗೋಣಂತs
ಯಾರಿಗೂ ಹೇಳೋಣು ಬ್ಯಾಡಾ.

ಹಣ್ಣು ಹೂವು ತುಂಬಿದಂಥ
ನಿನ್ನ ತೋಟ ಸೇರಿ ಒಂದs
ತಿನ್ನೋಣಂತs ಅದರ ಹೆಸರು
ಯಾರಿಗೂ ಹೇಳೋಣು ಬ್ಯಾಡಾ.

.... .... .... ....

ಮಲ್ಲಿಗೀ ಮಂಟsಪದಾಗ
ಗಲ್ಲ ಗಲ್ಲ ಹಚ್ಚಿ ಕೂತು
ಮೆಲ್ಲದನಿಲೆ ಹಾಡೋಣಂತs
ಯಾರಿಗೂ ಹೇಳೋಣು ಬ್ಯಾಡಾ. [1]

'ಕಲ್ಲಾಗಿದ್ದೆನೇನೋ' ಎಂಬ ಕವನದಲ್ಲಿ ಕವಿ, ಯಾವುದೋ ಜನ್ಮದಲ್ಲಿ ಯಾವುದೋ ಹಳ್ಳದ ದಂಡೆಯಲ್ಲಿ ಕಲ್ಲಾಗಿದ್ದೆನೇನೊ ಎಂದು ಎಣಿಸಿಕೊಂಡು ಸುಂದರವಾದ ಕವನವನ್ನು ಬರೆದಿದ್ದಾರೆ. ಅಲ್ಲಿ ನಡೆಯುತ್ತಿದ್ದ ಆ ಜಾನಪದ ಘಟನೆಗಳನ್ನು ಶಬ್ದದ ಚೌಕಟ್ಟಿನಲ್ಲಿ ಹೇಗೆ ಅಡಗಿಸಿದ್ದಾರೆ ನೋಡಿ. ಕವಿ, ಜಂಗಮದಲ್ಲಿ ಮಾತ್ರವಲ್ಲ, ಸ್ಥಾವರದ ಪರಕಾಯಪ್ರವೇಶವನ್ನೂ ಮಾಡಬಲ್ಲ ನೆಂಬುದನ್ನು ಪರಿಭಾವಿಸಿರಿ:

ಯಾವದೋ ಹಳ್ಳದ ದಂಡಿ, ಅದಕ್ಕs ಹೊಂದಿ
ಮುಘಾಗಿ ಬಿದ್ದಿತ್ತು ಕಲ್ಲುಬಂಡಿ.
ತಿಕ್ಕತಿತ್ತು ಹಳ್ಳ, ತೊಳೀತಿತ್ತು ಹೊಸಾ ನೀರು ವರ್ಷಾ ವರ್ಷಾ.
.... .... .... .... ....
ಕಾಲ ತಿಕ್ಕೊಂಬೋ ಹೆಣ್ಣುಮಕ್ಕಳ

1. ನಾದಲೀಲೆ: ಪುಟ ೨೦.

ನಾಚಿಗಿಲ್ಲದ ಅಂಗಾಲು
ಒದ್ದೂ, ಮುದ್ದಿಟ್ಟೂ, ಮಾಡಿತ್ತು
ತನ್ನ ದುಃಖದ ಸ್ಪರ್ಶ.

ಅವರ ಮಾರಿ ಮೂಡುತ್ತಿತ್ತು
ನನ್ನ ನುಣುಪು ಮೈ ಸುದ್ದ ಕನ್ನಡ್ಯಾದಾಗ
ಎದೀ ಆಗೀಗ ಕಾಣತಿತ್ತು.

....    ....    ....    ....    ....

ಹಸುಗೂಸು ಕಳಕೊಂಡು
ಕಸವೀಸಿಪಟಗೊಂಡು
ತೊರೀಹಾಲು ಹರೀತಿತ್ತು ಹಳ್ಳದ ನೀರಾಗ.

ಬಂಜೇರಿಗೆ ಕೂಡ ಒಮ್ಮೆಮ್ಮೆ
ಬಸಿರಾಸಿ ಆಗತ್ತಿತ್ತು
ಹಳ್ಳದ ಒರತೀ ನೀರ್ಕುಡಿದು ಮುಕ್ಕಳಿಸಿದಾಗ.
ಅವರು ಆದ್ದ ಸೀರು ನನ್ನ ಮ್ಯಾಲೆ ಉಗಿದು ಉಗುಳಿದಾಗ
ಬೆವರ ಬಿಡತಿತ್ತು ನನ್ನ ಕಲ್ಲಿನ್ಯಾಗ. [1]

'ಬೀದಿನಾಯಿ ರಾಧಿ' ಎಂಬ ಕವನದಲ್ಲಿ ಹಳ್ಳಿಯ ವೇಶ್ಯೆಯೊಬ್ಬಳ ಬಾಳು ಹೇಗೆ ಹಾಳಾಗುವುದು ಎಂಬುದನ್ನು ಬೀದಿನಾಯಿಯ ನೆಪದಿಂದ ಹೇಳಿದ್ದಾರೆ. ಇದು ಅದರ ಕೊನೆಯ ಚರಣದಲ್ಲಿ ವ್ಯಕ್ತವಾಗಿದೆ.

ಬೀದಿ ನಾಯಿ ರಾಧಿಯು
ಮೊನ್ನೆ ಹೇಗೊ ಸತ್ತಳು
ದುರುಳನೊಬ್ಬ ಏಕೊ ನಕ್ಕ
ಹೊಲಸೂಳೆಯು ಅತ್ತಳು. [2]

'ಶುಭ ನುಡಿಯೆ ಶಕುನದ ಹಕ್ಕಿ' [3] ಎಂಬ ಕವನದಲ್ಲಿ ಹಕ್ಕಿ ಶಕುನ ಹೇಳುವವರ ತಂತ್ರವನ್ನು ಬಳಸಿ ಹಳ್ಳಿಯ ಶಕುನಗಳನ್ನು ಹೇಳಿದ್ದಾರೆ. ಒಂಟಿ ಸೀನು, ಚಿಕ್ಕೆ ಉಳುಕು, ಕನವರಿಕೆ, ಗೂಗೆಯ ಕೂಗು, ಹಲ್ಲಿಯ ಲೊಟಗುಡುವಿಕೆ, ಹಾಲಕ್ಕಿಯ ಉಲಿ — ಹೀಗೆ ಇವು ಕವನದಲ್ಲಿ ಬಂದು ಈ ಅನಿಷ್ಟಗಳಿಗೆ

1. ಬಾ ಹತ್ತರ: ಪುಟ. ೪೧
2. ಅರಳು ಮರಳು ,, ೬೪
3. ನಾದಲೀಲೆ: ಪುಟ, ೩.

ಯಾವುದೋ ಶುಭವನ್ನು ಹೇಳಲು ಹೊರಟಂತೆ ಕಾಣಿಸುತ್ತದೆ. ದಾರಿತಪ್ಪಿ ಬಂದ ಮಲೆನಾಡಿನ ಗಿಣಿಯನ್ನು 'ಮಲ್ಲಾಡದ ಗಿಣಿಯೆ' ಎಂಬ ಕವನದಲ್ಲಿ ಕವಿ ಮಾತಾಡಿಸಿದ್ದಾರೆ :

ಮುಗಿಲ ಹೂವಿನ ಜೇನ| ನೆನಸಿ
ಹಗಲ ಕಳಿಯಬೇಕ ಇಲ್ಲಿ| ಏ ಗಿಣಿಯೇ ಗಿಣಿಯೇ

\+ + + + +

ಹಸರು ನೆಲದ ಹರಕೇ| ಹೊತ್ತ
ಕುಶಲದ ಕುವರಿ ನೀನು| ಏ ಗಿಣಿಯೇ ಗಿಣಿಯೇ. [1]

'ಟೊಂಕದ ಮೇಲೆ ಕೈ ಇಟುಗೊಂಡು' ಬಿಂಕದಾಕೆ ಬೇಂದ್ರೆಯವರ ಜಾನಪದ ಮೋಡಿಯ ಈ ಕವಿತೆಯಲ್ಲಲ್ಲದೆ ಬೇರೆಲ್ಲಿ ಸಿಗಬೇಕು ?

ಟೊಂಕದ ಮೇಲೆ ಕೈ ಇಟಗೊಂಡು
ಬಿಂಕದಾಕಿ ಯಾರ ಈಕಿ
ಒಂಕೀತೋಳ ತೋರಸತಾಳ
ಸುಂಕದ ಕಟ್ಟ್ಯವಗ.

ಯಣ್ಣಾ, ಮಾವಾ ಅಂತ ರಮಿಸಿ
ಬಣ್ಣದ ಮಾತ ಆಡಿಕೋತ
ಕಣ್ಣಾಗ ಮಣ್ಣ ತೂರುವಾಕಿ
ಸಣ್ಣನ್ನ ನಡದಾಕಿ.

ಕಮ್ಮಗ ನಾಲಿಗಿ ಚಾಚತಾಳ
ಸುಮ್ಮ ಸುಮ್ಮಗ ನಾಚತಾಳ
ದಮ್ಮಡಿ ಕೂಡ ಕೊಡದ ಹಾಂಗs
ಬಿಮ್ಮಗ ಹೊಂಟಾಕಿ. [2]

ಹಳ್ಳಿಯ ಚೆಲುವೆಯರು ತಮ್ಮ ಸಹಜ ಹಾವಭಾವ ವಿಲಾಸ ವಿಭ್ರಮಗಳಿಂದಲೇ ಭ್ರಮೆ ಹಿಡಿಸಿ ವ್ಯವಹಾರ ಮಾಡುವುದನ್ನು ಮೇಲೆ ಹೇಳಿದ ಕವಿತೆಗಿಂತ ಚೆನ್ನಾಗಿ ಮೂಡಿಸುವುದು ಅಶಕ್ಯ ಎಂದು ಕಾಣಿಸುತ್ತದೆ.

---

1. ನಾದಲೀಲೆ : ಪುಟ, ೧೦-೧೧
2. ಅರಳು-ಮರಳು : ಪುಟ, ೨೫೨

‘ವಾರಿನೋಟ’ ಎಂಬ ಕವನ ಹೋಳಿಯ ಮೇಲೆ ಏನಾಯಿತೆಂಬುದನ್ನು ಬಣ್ಣಿಸುತ್ತದೆ.

ವಾರಿನೋಟ ಹಾರತಿತ್ತೋ ಹೋಳಿಮ್ಯಾಗ
ಹೊಸಾ ಹರೆ ಈಸತಿತ್ತೋ ಹೋಳಿಯಾಗ ‖ ಪಲ್ಲ ‖
.... .... .... .... ....
ಸೆರಗು ಒಂದು ಅಲೆದಾಡುತಿತ್ತೋ ಹೊಳಿಮ್ಯಾಗ
ಬೆರಗು ಒಂದು ನಲಿದಾಡುತಿತ್ತೋ ಹೊಳಿಯಾಗ.
\+ \+ \+ \+ \+
ತುಂಬಿಯೊಂದು ಹಾಡತಿತ್ತೋ ಹೊಳಿಮ್ಯಾಗ
ತಾವರ್‍ಯೊಂದು ಬಾಯ್ಬಿಡತಿತ್ತೋ ಹೊಳಿಯಾಗ. [1]

‘ಅವನು-ಅವಳು’ ಎಂಬ ಕವನದಲ್ಲಿ ಹೆಣ್ಣು-ಗಂಡಿನ ಆಕರ್ಷಣೆಯ ರಹಸ್ಯವನ್ನು ಎಷ್ಟು ಸರಳವಾಗಿ ಹೇಳಿದ್ದಾರೆ ನೋಡಿ :

’ ನು : ನಿನಗೆ ಬೇಕಾದುದೇನೇ ?
’ ಳು : ( ಬರಿಸನ್ನೆ ) ನೀನೇ ! [2]

‘ಸಂಸಾರ’ ಎಂಬ ಕವನದಲ್ಲಿ ಚಿಕ್ಕೆಗಳು ಆಕಾಶದಲ್ಲಿ ನೆರೆಯುವುದು ರಾತ್ರಿ ಕಣ್ಣು ಮಿಟುಕಿಸಿದುದರಿಂದ ಎಂದು ಸುಲಭವಾಗಿ ಹೇಳಿಬಿಡುತ್ತಾರೆ, ಬೇಂದ್ರೆ :

ಮೈಯು ಮುಸಮುಟ್ಟಿ
ಜೇನಹುಟ್ಟಿ ಕಟ್ಟಿ
• ಅಮೃತಂತ ಬಾಯಿ ಚಪ್ಪರಸತಾವ ಕೇಳಿ ಕಣ್ಣು ಮಿಟಕತದ ರಾತ್ರಿ
ನೆರಿತ್ವದ ಚಿಕ್ಕಿಗಳ ಜಾತ್ರಿ ! [3]

೬

ಬೇಂದ್ರೆಯವರ ಬಣ್ಣನೆಯ ರೀತಿಯೂ ಬಹಳ ಸರಳ. ಹಳ್ಳಿಯವರ ಮಾತಿನಲ್ಲೇ ಬದನೆಕಾಯಿಯಿಂದ ಬ್ರಹ್ಮಾಂಡದ ವರೆಗೆ ಹೇಳಿಯಾರು, ಹೂತ ಹುಣಸಿಮರದಿಂದ ಹುತಾತ್ಮನ ವರೆಗೆ ಕಂಡಾರು ! ‘ಸೇದಬೇಡಿ – ಸೇದಿದರೆ

1. ಮೂರ್ತಿ ಮತ್ತು ಕಾಮುಕಸ್ತೂರಿ : ಪುಟ, ೩೫
2. ಕಾಮುಕಸ್ತೂರಿ : ,, ೫
3. ,, ,, ೧೮

ಬೇಂದ್ರೇ ಬೀಡಿ' [1] ಎಂದು 'ಗುಡುಗುಡಿಯ ಸೇದಿಸೋದೋ' ಎಂದು ದಾಸರು ಹೇಳುವ ರೀತಿಯದು :

ಹರೆಯೆಂಬೋದು ತೆರೀ ಹಾಂಗ
ಬಂತ ಅಂತ ಹೊರಟಿತು ಬ್ಯಾಗ. [2]

\+ + + + +

ಈ ನಾಡು ಅವನ ಹೊಲ ! ಇದರವ್ರೊಕ್ಕಲಿಗನವ
ನಾ ನೀನು ರಂಟೆ ಕುಂಟೆ. [3]

\+ + + + +

ಸಪ್ತರ್ಷಿಮಂಡಲ ಧ್ರುವನಕ್ಷತ್ರಕ್ಕೆ ಸುತ್ತುತಿರುಗುವುದನ್ನು ಕವಿ ಗಾಣಕ್ಕೆ ಏಳೆತ್ತು ತಿರುಗುತ್ತಿವೆ ಎನ್ನುತ್ತಾರೆ :

ಸಪ್ತ ಋಷಿಗಳೇಳೆತ್ತು ತಿರುಗುತಿವೆ ಹಾಕಿ ಧ್ರುವದ ಗಾಣಾ
ಮೇರು ದಂಡದಾ ಇಕ್ಷುರಸವು ಹಿಂಡುತ್ತಲಿಹುದೊ ಜಾಣಾ. [4]

\+ + + + +

ಹಕ್ಕಿ ನುಡಿಸ್ಯಾವ ಗೆಜ್ಜಿ
ಬೆಳಕು ಹಾಕ್ಯಾವ ಹೆಜ್ಜಿ. [5]

ಬಿತ್ತಿದರು ಕಾಳು ಹನಿ ಹನಿಯಾಗಿ
ಬರ್‍ತಾಳ ತಾಯ್ ತೆನಿತೆನಿಯಾಗಿ. [6]

ಅಂಬಿಕಾತನಯ ಕಟ್ಟಿದ ಕಗ್ಗಾ
ಜಗ್ಗಬ್ಯಾಡ ನೀ ಹಿಗ್ಗಾ ಮುಗ್ಗಾ
ಹುರಿ ಐತಿ ಒಳಗs ಬರಿದಲ್ಲಾ ಹಗ್ಗಾ. [7]

\+ + + + +

ಮಣ್ಣು ಗೋಡೆಗಳ ಮಣ್ಣು ಮನೆಗಳಿಗೆ ಬೇಕು ಮಣ್ಣು ಹಂಚು. [8]

---

1. ಅರಳು–ಮರಳು : ಪುಟ ೫೦
2. ಅದೇ : ,, ೬೬
3. ,, ,, ೮೯
4. ,, ,, ೧೦೨
5. ,, ,, ೨೪೬
6. ,, ,, ೨೪೯
7. ,, ,, ೩೮
8. ,, ,, ೪೨೧

ಬನಬನ ನೋಡು ಈಗ ಹ್ಯಾಂಗ |
ಮದುವಿ ಮಗನ್ಹಾಂಗ |
ತಲಿಗೆ ಬಾಸಿಂಗ |
ಕಟ್ಟಿಕೊಂಡೂ | ನಿಂತಾವ ಹರ್ಷಗೊಂಡು ‖ [1]

ಕಬ್ಬಿಣ ಕಡಲಿಗೆ ವಜ್ರದ ಹಲ್ಲ ಬೇಕು. [2]

\+ + + + +

ತಲೆ ಬಾಗುವವರು ಬಾಳತಾರ
ಹುಲ್ಲು ಬಿದ್ಹಾಂಗ
ನೆಲಾ ಅಪ್ಪಿದವರು ತಾಳತಾರ
ಕರಿಕೆ ಇದ್ಹಾಂಗ. [3]

\+ + + + +

ಪಾಂಡವ್ರು ಕೌರವ್ರು ಎಂದೂ ಇದ್ದಾರ. [4]

\+ + + + +

ಜೇನು ಹುಳಕ್ಕ ತಿಳದಷ್ಟು–ಹೇನಿಗೆ ಏನು ತಿಳೀತ್ತದ ? [5]

\+ + + + +

ಉಜ್ಜೀ ಉಜ್ಜತೇವಿ ಮಬ್ಬಿನ ಮಕ್ಕ
ಇದ್ದs ಇರತ್ತದ ಕತ್ತಲೀ ಕೆಚ್ಚು. [6]

\+ + + + +

ಬೂರಲಾ ಬೂರಲಾ
ಇಂಥ ಮರವು ನೂರಲಾ
ಕಟ್ಟಿದವರು ಯಾರಲಾ ?
ಕುಂಕುಮದಾ ತೇರಲಾ ! [7]

\+ + + + +

---

1. ಬಾ ಹತ್ತರ : ಪುಟ ೧೪೮
2. ಶ್ರೀಮಾತಾ ,, ೬
3. ,, ,, ೧೨
4. ಅದೇ ,, ೭೫
5. ,, ,, ೭೬
6. ಮುಗಿಲಮಲ್ಲಿಗೆ ,, ೩.೫ A
7. ಯಕ್ಷ-ಯಕ್ಷಿ : ,, ೧೫

ನೆಲಕೆಲ್ಲ ಮೋಡ ಟೊಪ್ಪಿಗೆಯ ಹಾಕಿತ್ತು. [1]

\+ + + +

ಹದಾ ಒಳಗs ಇಲ್ದs ತಮ್ಮಾ
ಪದಾ ಹೊರಗs ಬರೂದಿಲ್ಲಾ
ಕದಾ ತೆರ್ರ್ಯೊದಿಲ್ಲಾ ಅಂತಃಕರಣಾ. [2]

\+ + + +

ಬಾನ್ನೀರಿನ ಹನಿ ಹನಿಸಿರೆ
ಬಸಿರಾಯಿತು ಬಯಲು. [3]

\+ + + +

ಸೃಷ್ಟಿಗಿಲ್ಲಾ ಸಟ್ಟಿ ತೆಂಗಿನೊಳಗ ಕೊಬ್ಬರಿಗಿಟಗಿಟ
ಹಾಕಿದರ್ಯಾ್ಯಂಗೋ ? ತೆಗದರ್ಯಾಂಗೋ ? [4]

ಮೇಲೆ ಉದ್ಧರಿಸಿದ ಸೂಕ್ತಿಗಳಲ್ಲೆಲ್ಲ ಬೇಂದ್ರೆಯವರ ಜಾನಪದವೋಡಿ ಭಾವದಲ್ಲೋ, ಹೋಲಿಕೆಯಲ್ಲೋ, ರೂಪಕದಲ್ಲೋ, ಮಾತಿನಲ್ಲೋ ಮೂಡಿರುವು ದನ್ನು ಸಹೃದಯರು ಗಮನಿಸಬಹುದು. ಜಾನಪದವೋಡಿ ಬೇಂದ್ರೆಯವರ ಕಾವ್ಯದ ಜೀವ, ಉಸಿರು, ಬಸಿರು, ಹಸುರು; ಕಾವ್ಯಾಂಬರದ ಹಾಸುಹೊಕ್ಕು; ಎಲ್ಲೆಂದರಲ್ಲಿ ಅದನ್ನು ಕಾಣಬಹುದು.

ಬೇಂದ್ರೆಯವರು 'ಗಾರುಡಿಗ' ಎಂಬ ಕವನವೊಂದನ್ನು ಬರೆದಿದ್ದಾರೆ. ಅದು ಅಷ್ಟಪಟ್ಟದಿಯಾಗಿದೆ. ಅದರ ಕೊನೆಯ ಆರು ಸಾಲಿನಲ್ಲಿ ಬೇಂದ್ರೆಯವರ ಕಾವ್ಯದ ಲಕ್ಷಣವನ್ನೆಲ್ಲ ಹೇಳಿದೆ. ಬೇಂದ್ರೆ ಕವಿಗಾರುಡಿಗ. ಎಂಥ ಸಹೃದಯ ಹಾವೂ ಅವರ ಕಾವ್ಯದ ಗರುಡ ರೇಖೆಗೆ ಮಂತ್ರಮುಗ್ಧವಾದೀತು. ಅವರ ಕಾವ್ಯ-ಹಸ್ತದ ಗರುಡರೇಖೆಯನ್ನು ಅನೇಕರು ಕಂಡಿಲ್ಲವೇನೋ. ಆ ಗರುಡಗೆರೆಯೇ ಅವರ ಕಾವ್ಯದ ಜಾನಪದ ವೋಡಿ.

ಎಲೆ ಹಾವೆ ! ಹೊಟ್ಟೆ ಹೊಸೆಯುವ ಜಂತು ! ನಿನಗೆ ಕಿವಿ
ಯಿಲ್ಲ, ನಾಲಿಗೆಯೆರಡು, ಹಲ್ಲೊಳಿವೆ ವಿಷವು, ನಿ–
ನ್ನನ್ನ ಗಾಳಿಯು, ನೀನು ಪಾತಾಳಕಿಳಿದರೂ

1. ಸಂಚಯ : ಪುಟ ೫೮
2. ಮರ್ಯಾದೆ ,, ೫೨
3. ,, ,, ೫೭
4. ,, ,, ೬೩

ಮತ್ತೆ ಕಾಡುವೆ ರಸಿಕನೆನೆ ಚೆಂದ ತಲೆದೂಗಿ
ನಾಳೆ ಕಾರುವೆ ಗರಳ ! ಬಯಸುತಿರು ಬಯಸುತಿರು....
ಕಂಡಿಲ್ಲವೇನೋ ಅಂಗೈಯ ಗರುಡನ ಗೆರೆಯ ! [1]

'ನುಡಿದು ಜೇಸತ್ತಾಗ ದುಡಿದುಡಿದು ಸತ್ತಾಗ' ಜನಕ್ಕೆ ಹಿಗ್ಗಿನ ಹಾಡನ್ನು ನೀಡಿದರು ಬೇಂದ್ರೆ. ನಿನ್ಹಾಂಗೆ ಆಡುವುದಕ್ಕೆ ನಿನ್ಹಾಂಗೆ ಹಾಡುವುದಕ್ಕೆ ಪಡೆದು ಬಂದಿರಬೇಕು. ನೀನು ಮಕ್ಕಳಾಗಿ ಆಡಿದೆ, ಹಕ್ಕಿಯಾಗಿ ಹಾಡಿದೆ, ಬಳ್ಳಿಯಲ್ಲಿ ಕುಣಿದೆ, ಬೆಳಕಿನಲ್ಲಿ ತಣಿದೆ, ಹೂವಾಗಿ ಅರಳಿದೆ. ಬೆಳೆಯಲ್ಲಿ ಈಸಾಡಿದೆ, ಗಾಳಿಯಲ್ಲಿ ಬೀಸಾಡಿದೆ. ಮಳೆಯಲ್ಲಿ ಕೂಸಾಡಿದೆ. ಬಿಸಿಲಹಣ್ಣು ಉಂಡೆ, ಬೆಳದಿಂಗಳ ಕಂಡೆ, ಚಳಿಮುದ್ದು ಕೊಂಡೆ ನೀನು. ನೀನು ಹಾಡಿ ಹಾಡಿ ಹಣ್ಣಾದೆ, ಜಗತ್ತಿಗೆ ಕಣ್ಣಾದೆ.

ನಿನ್ನಂತೆ ಎದೆ ಹೊಲದ ಒಕ್ಕಲುತನ ಮಾಡಿದ ಕವಿ ಯಾರಿದ್ದಾರೆ. ನಿನ್ನ ತುಂಬೆದೆಗೆ ಈ ಜಗತ್ತಿನ ತಂಬೂರಿ ಆತು 'ಬರತಾವ ತಾನೆ ತಾನಾ, ಹರದಾಡ ತಾವ ಗಾನಾ'! ಅಲ್ಲಿ 'ಮುಳುಗುವುವು ವಾದಗೀದ, ತುಳುಕಾಡಿ ಏಕನಾದ!' ನಿನ್ನಂತೆ ಜನವನ್ನು 'ಬಾ ಹತ್ತರ' ಎಂದವರುಂಟೆ ಕಾವ್ಯಾಸ್ವಾದಕ್ಕೆ. ನಿನ್ನಂತೆ ಕಾವ್ಯವೋದಿ ಕಾಲನನ್ನೂ ಸುಮ್ಮನೆ ತನ್ಮಯವಾಗಿ ಕೇಳುವಂತೆ ಮಾಡಿದವರುಂಟೆ.

ಬೇಂದ್ರೆಯವರ ಶ್ರೇಷ್ಠ ಕವನಗಳೆಲ್ಲ ಹಾಗೆನ್ನಿಸಿಕೊಂಡಿರುವುದಕ್ಕೆ ಅವುಗಳಲ್ಲಿಯ ಉಪಮೆಯೋ, ಪ್ರತಿಮೆಯೋ, ಛಂದಸ್ಸೋ, ಬಣ್ಣನೆಯೋ, ರೀತಿಯೋ, ನಾದವೋ, ಲಯವೋ, ಜೀವನಚಿತ್ರವೋ ಜಾನಪದ ಮೋಡಿಯಲ್ಲಿರುವುದು ಪ್ರಧಾನ ಕಾರಣ. ಈ ಗುಣ ಬೇಂದ್ರೆಯವರ ಕಾವ್ಯಕ್ಕೆ ತನ್ನತನವನ್ನು ತುಂಬಿದೆ; ವೈಯಕ್ತಿಕತೆಯನ್ನು ನೀಡಿದೆ. ಒಂದು ರಾಶಿ ಕನ್ನಡಕವಿತೆಯನ್ನು ಒಂದು ಕಡೆ ಹಾಕಿದರೆ ಬೇಂದ್ರೆಯವರ ಕವಿತೆಗಳನ್ನು ಪ್ರತ್ಯೇಕ ಮಾಡುವುದು ಬಹುಸುಲಭ.

§ § § §

---

1. ಮೂರ್ತಿ ಮತ್ತು ಕಾಮಕಸ್ತೂರಿ, ಪುಟ – ೩೯

೧೩

# ಬೇಂದ್ರೆಯವರ ಕಾವ್ಯದಲ್ಲಿ ಜಾನಪದ ಸತ್ವ

**ಭುಜೇಂದ್ರ ಮಹಿಷವಾಡಿ**

ಕನ್ನಡ ಸಾಹಿತ್ಯದಲ್ಲಿ ಕಾವ್ಯಸೃಷ್ಟಿಗೆ ಕೈಹಾಕಿದ ಪ್ರತಿಯೊಬ್ಬ ಕವಿ ತನ್ನದೇ ಆದ ಒಂದು ವಿಶಿಷ್ಟವಾದ ಭಾಷಾಶೈಲಿಯನ್ನು ನಿರ್ಮಿಸಿಕೊಳ್ಳುವುದು ಅನಿವಾರ್ಯ ವಾಗಿದೆ. 'ಮಾರ್ಗ–ದೇಸಿ'ಗಳ ಸಮನ್ವಯ ಪದ್ಧತಿ ಪಂಪನಿಂದ ನಡೆದು ಬಂದ ಒಂದು ಮಾದರಿಯ ಹಾದಿ. ಆ ಹಾದಿಯಲ್ಲಿ ನಡೆದವರ ಸಂಖ್ಯೆ ಅಧಿಕ. ಗುರಿ ಮುಟ್ಟಿದವರ ಸಂಖ್ಯೆ ಅಲ್ಪ. ಪಂಪನಂತೆ ಸಂಪೂರ್ಣವಾಗಿ ಸಮನ್ವಯಸಿದ್ಧಿ ಯನ್ನು ಪಡೆದವರು ಯಾರೂ ಇಲ್ಲ.

ಹರಿಹರ 'ದೇಸಿ'ಗೆ ಸೋತು 'ರಗಳೆ' ಕವಿ ಎನಿಸಿಕೊಳ್ಳಬೇಕಾಯಿತು. ರುದ್ರಭಟ್ಟ 'ಮಾರ್ಗ'ಕ್ಕೆ ಜೋತುಬಿದ್ದು 'ಕಬ್ಬಿಣದ ಕಡಲೆ' ಸೃಷ್ಟಿಮಾಡ ಬೇಕಾಯಿತು ನೇಮಿಚಂದ್ರ ಶಬ್ದಲಂಪಟನಾದ; ಲಕ್ಷ್ಮೀಶ ನಾದಲಂಪಟನಾದ. ಕುಮಾರ ವ್ಯಾಸ 'ದೇಸಿ'–ಹೆಣ್ಣಿಗೆ ನಾಗರಿಕ ವಸ್ತ್ರಾಲಂಕಾರ ತೊಡಿಸಿ ಅರಮನೆ ಯಲ್ಲಿ ತಂದಿಟ್ಟ; ಆಗಾಗ ಅವಳ ಅನಾಗರಿಕತೆಯ ಘುಂಬತನ ಹೊರಬಿದ್ದಾಗ ನಗೆಗೆ ಎಡೆಯಾಗಿ ಹೌಹಾರಿದ. ರತ್ನಾಕರವರ್ಣಿ ನಾಗರಿಕ ನಾರಿಗೆ ಹಳ್ಳಿಯ ಹುಡು ಗೆಯ ವೇಷ ತೊಡಿಸಿ ಗುಡಿಸಲಿನಲ್ಲಿ ಒಯ್ದಿಟ್ಟ; 'ಒಳ್ಳೆಯವರ ಮಾನ ಹಳ್ಳಿಯಲ್ಲಿ ಕಳೆದುಬಿಟ್ಟು' ಫಜೀತಿಗೆ ಒಳಗಾದ.

ಆಧುನಿಕ ಕವಿಗಳಿಗೆ ಭಾಷಾಶೈಲಿಯ ತೊಡಕು ಇನ್ನೂ ಹೆಚ್ಚಿಗೆ ಗೋಳು ತಂದಿದೆ. ಡಿ. ವಿ. ಜಿ. — ಗೋವಿಂದ ಪೈ ಹಳೇ ಕಿತ್ತಾ ತೀಡಿದರು. ಮಾಸ್ತಿ ಗದ್ಯಪದ್ಯದ ಅಂತರವನ್ನೇ ಅರಿಯದವರಾದರು. ಸಾಲಿ ಪಟ್ಟದಿಯ ಸಾಲಿನಲ್ಲಿಯೆ ಮಲಗಿದರು. ಬಿ. ಎಂ. ಶ್ರೀ. — ಗೋಕಾಕ, ತೀ. ನಂ. ಶ್ರೀ — ಪು. ತಿ. ನ., ರಂ. ಶ್ರೀ. ಮುಗಳಿ — ವೀ. ಸಿ. — ಇವರೆಲ್ಲರೂ ಆಧುನಿಕ ಸುಶಿಕ್ಷಿತರ ಭಾಷೆಗೇ ಕಾವ್ಯದ ಒಪ್ಪ ಹಾಕಲು ಯತ್ನಿಸಿದರು. ಕುವೆಂಪು ಹಳಗನ್ನಡ–ನಡುಗನ್ನಡ ದೊಡನೆ ಹೊಸಗನ್ನಡವನ್ನೂ ಸೇರಿಸಿ ತಮ್ಮದೇ ಆದ 'ಹೊಸ ಮಾರ್ಗ'ದ

ಒಂದು ಕಾಂಕ್ರೀಟು ರಸ್ತೆಯನ್ನೇ ನಿರ್ಮಿಸಿದರು. ಆಂಡಯ್ಯನ ಮಾರ್ಗದಲ್ಲಿ ಮುದ್ದಣ 'ತದ್ಭವ' ಗಾಮಿಯಾದಂತೆ, ಕುಮಾರವ್ಯಾಸನ ಹಾದಿಯಲ್ಲಿ ಕುವೆಂಪು 'ತತ್ಸಮ' ಗಾಮಿಯಾದರು. 'ಹೊಸ ಮಾರ್ಗ'ದಲ್ಲಿ ನಡೆದ ಇವರಾರಿಗೂ 'ದೇಸಿ'ಯ ಗಾಳಿ ಬಡಿಯಲಿಲ್ಲ. ಅದು ಮೊಟ್ಟಮೊದಲು ಬೇಂದ್ರೆಯವರ ಮೈಯಲ್ಲಿ ಹೊಕ್ಕು ಜಗಾ ಹೊತ್ತ ಜೋಗಿಯನ್ನು ಕುಣಿಸುವಂತೆ ಕುಣಿದಾಡಿಸಿತು. ಆ ಗಾಳಿ ಮೆಲ್ಲನೆ ಅವರ 'ತಮ್ಮ' ಮಧುರಚೆನ್ನರನ್ನೂ ಬಡಿದುಕೊಂಡಿತು; ಅವರ ನೆರೆಯ 'ಆನಂದಕಂದ'ರ ಮೈಗೂ ತಾಕಿತು. ಈ ಸುಂಕು ದಕ್ಷಿಣಕ್ಕೂ ಹರಡಿ ಜಿ. ಪಿ. ರಾ. ಮತ್ತು ಕೆ. ಎಸ್. ನ. ಅವರ ಮೈಯನ್ನೂ ಸೇರಿತು.

ಹೊಸ ಕಾವ್ಯದ ರಚನೆಗೆ ಕೈಹಾಕಿದ ಕವಿಗಳೆದುರು ಯೋಗ್ಯವಾದ ಭಾಷೆ ಇರಲಿಲ್ಲ. ಉತ್ತರ ಕರ್ನಾಟಕದ ಕವಿಗಳಿಗೆ ಈ ಸಮಸ್ಯೆ ಇನ್ನೂ ಅಧಿಕವಾಗಿ ಬಾಧಿಸುತ್ತಿತ್ತು. ಆದ್ದರಿಂದ ಅವರೆಲ್ಲರು ಆಡುವ ಮಾತಿಗೇ ಅಂಟಿಕೊಳ್ಳದೆ ಗತ್ಯಂತರವಿರಲಿಲ್ಲ. ಗ್ರಂಥಸ್ಥಭಾಷೆ ನಿರ್ಜೀವವಾಗಿತ್ತು; ಜೀವನದ ಸಂಪರ್ಕ ವಿಲ್ಲದೆ ಉರ್ಲುಹಾಕಿಕೊಂಡ ಹೆಣದಂತೆ ನೇತಾಡುತ್ತಿತ್ತು. ಅದರ ಆಸೆಯನ್ನೇ ಬಿಟ್ಟು ಬಾಯಿಗೆ ಬಂದ ಭಾಷೆಗೇ ಕಾವ್ಯದೀಕ್ಷೆ ಕೊಡುವ ಕ್ರಮ ಕೈಕೊಂಡಾಗ, ಕವಿಗಳ ಮನದ ಮರ ಟಿಸಿಲೊಡೆಯಿತು. ಸುಶಿಕ್ಷಿತರ ಭಾಷೆಯ ಟೊಂಗೆಗೆ ಜೋತು ಬಿದ್ದರು ಕೆಲವರು; ಅಶಿಕ್ಷಿತರ ಗ್ರಾಮ್ಯಭಾಷೆಯ ಟೊಂಗೆಗೆ ಕೈಹಾಕಿದರು ಕೆಲ ವರು. ಸುಶಿಕ್ಷಿತರ ಭಾಷೆ ಅನ್ಯಭಾಷೆಗಳ ಪ್ರಭಾವದಲ್ಲಿ ತನ್ನ ಸಹಜಶಕ್ತಿಯನ್ನು ಕಳೆದುಕೊಂಡಿತ್ತು. ಗ್ರಾಮ್ಯ ಭಾಷೆಯಲ್ಲಿ ಮಾತ್ರ ನಿಜವಾದ ಕನ್ನಡಕೆಚ್ಚಿನ ನಿಕ್ಷೇಪವಿತ್ತು. ಅಂತೆಯೇ ಆಗ ಜಾನಪದ ಭಾಷಾಮಾಧ್ಯಮವನ್ನು ಅನುಸರಿಸಿದ ಕವಿಗಳ ಕಾವ್ಯಗಳು ಕಳೆಯಿಂದ ರಸರಸಿತವಾಗಿ ಮೆರೆಯತೊಡಗಿದವು. ಈ ಗುಟ್ಟನ್ನು ಸಂಶೋಧನೆ ಮಾಡಿದ ಬೇಂದ್ರೆಯವರಿಗೆ ಅಗ್ರ ಮರ್ಯಾದೆ ಸಲ್ಲುತ್ತಿರು ವುದು ಯೋಗ್ಯವೇ ಆಗಿದೆ.

ಪರಿಶುದ್ಧ ಕೌಮಾರ್ಯವನ್ನು ಹೊತ್ತುನಿಂತ ಕನ್ನಡ 'ದೇಸಿ'– ಕನ್ಯೆ ಅನೇಕ ತರುಣರ ಎದೆಯನ್ನು ಕರಗಿಸಿದಳು; ಮೈಗೆ ಝುಮ್ಮು ತರಿಸಿದಳು. ಸಹಜ ಸೌಂದರ್ಯ, ಬಿನ್ನಾಣ-ಬಿಯ್ಯಾರ, ಬಿಗುರು-ವಂಕಮುರಿತಗಳಿಗೆ ಮರು ಳಾದ ತರುಣರು ಒಮ್ಮೆಲೆ ಅವಳ ಮೇಲೆ ಮುಗಿಬಿದ್ದರು. ಓರ್ವ ಕನ್ಯೆ ಅನಂತ ಕನ್ಯೆಯರಾಗಿ ಅವರೆಲ್ಲರ ಕೈಗೂ ಸಿಕ್ಕು ಕಂಕಣ ತೊಡಿಸಿದಳು.

ಮಧುರಚೆನ್ನರು ತಮ್ಮ ಕೈಹಿಡಿದ ಕನ್ಯೆಯನ್ನು ಧರ್ಮಪತ್ನಿಯಾಗಿ ಮಾಡಿ ಕೊಂಡರು. ಬೇಂದ್ರೆಯವರ ಕೈಗೆ ಸಿಕ್ಕವಳು ಕುಣಿತ-ಗೀತಗಳ ಕಲಾಕಾರ್ತಿ ಯಾದಳು. ಆನಂದ ಕಂದರ ಕೈಸೇರಿದವಳು ವಿಧುರನ ಉಪಪತ್ನಿಯಂತೆ ಸೇವೆ ಸಲ್ಲಿಸಿದಳು. ಪಾಟೀಲರಿಗೆ ಇಟ್ಟುಕೊಂಡವಳಾಗಿ, ಕುಂಬಾರರಿಗೆ ಹೊಲೆ ಸೂಳೆಯಾಗಿ ತನ್ನ ಒಡಲನ್ನು ತೆಯ್ದಳು; ಇನ್ನೂ ತೆಯ್ಯುತ್ತಲೂ ಇದ್ದಾಳೆ.

ಉತ್ತರ ಕರ್ನಾಟಕದ ಕವಿಗಳು ಇನ್ನೊಂದು ಚಮತ್ಕಾರದ ಕಾರ್ಯದಲ್ಲಿ ಕೈಹಾಕಿದ್ದಾರೆ. ಒಂದೊಂದು ಕುದುರೆಯ ಮೇಲೆ ಒಂದೊಂದು ಕಾಲಿಟ್ಟು, ಎರಡು ಕುದುರೆಗಳನ್ನೂ ಜೊತೆಗೂಡಿಸಿ ಓಡಿಸುವ 'ಸರ್ಕಸ್' ದಲ್ಲಿ ತೊಡಗಿದ್ದಾರೆ. ಬಿದ್ದು ಕೈಕಾಲು-ಸೊಂಟ-ಪಕ್ಕೆಲುಬುಗಳನ್ನು ಮುರಿದುಕೊಂಡು 'ಪ್ಲಾಸ್ಟರ್' ಹಾಕಿಸಿಕೊಂಡು 'ಸರ್ಕಸ್' ಕಂಪನಿಯನ್ನೇ ಬಿಟ್ಟು ಮೂಲೆಗುಂಪಾದವರು ಬಹಳ ಜನ. ಕೆಲವರು ಮಾತ್ರ ಮುಂದೆ ಓಡಿದ ಇಲ್ಲವೆ ಹಿಂದೆ ಉಳಿದ ಒಂದು ಕುದುರೆಯನ್ನು ಬಿಟ್ಟು, ಒಂದರ ಮೇಲೇ ಗಟ್ಟಿ ಕಾಲಿಟ್ಟು ಜೋಲಿ ಹೊಡೆದು ಕುಸಿದು ಕುಪ್ಪಳಿಸಿ ಡುಬ್ಬಕ್ಕೆ ಅಂಟಿ ಕೂತುಬಿಟ್ಟಿದ್ದಾರೆ. ಆದರೆ ಬೇಂದ್ರೆಯವರು ಮಾತ್ರ ಸರ್ಕಸ್ಸಿನಲ್ಲಿ ಯಶಸ್ಸು ಗಳಿಸಿ ಪ್ರೇಕ್ಷಕರಿಂದ ಚಪ್ಪಾಳೆ ತಟ್ಟಿಸಿಕೊಂಡಿದ್ದಾರೆ.

"ಜೀವನದ ಮೂಲಭೂತ ಪ್ರವೃತ್ತಿಗಳನ್ನು, ಭಾವನೆಗಳನ್ನು ಪ್ರಾಚೀನ ಕಾವ್ಯದ ರೀತಿಯಲ್ಲಿ ಪ್ರಕಟಿಸುವದು ಸಾಧ್ಯವಿರಲಿಲ್ಲ; ಅದಕ್ಕಾಗಿ ಜಾನಪದ ಕಾವ್ಯದ ಸಹಜ ಮಾರ್ಗವನ್ನು ಅವಲಂಬಿಸಬೇಕಾಯಿತು. ಅದರಂತೆಯೇ ಹೊಸ ಸಮಸ್ಯೆಗಳನ್ನು, ಸುಶಿಕ್ಷಿತರ ವಿಚಾರಗಳನ್ನು ಜಾನಪದ ಶೈಲಿಯಲ್ಲಿ ಪ್ರಕಟಿಸುವದೂ ಅಸಾಧ್ಯವಾಗಿತ್ತು. ಇವುಗಳಲ್ಲಿ ಯಾವ ಒಂದನ್ನು ಆಶ್ರಯಿಸಿದ್ದರೂ ಇನ್ನೊಂದಕ್ಕೆ ಎರವಾಗಬಹುದಿತ್ತು." — ಕುರ್ತಕೋಟಿಯವರು ಬೇಂದ್ರೆಯವರ ಕಾವ್ಯದ ಅಭಿವ್ಯಕ್ತಿಯ ಸಮಸ್ಯೆಯನ್ನು ಸರಿಯಾಗಿ ಗುರುತಿಸಿದ್ದಾರೆ. ಬೇಂದ್ರೆಯವರು 'ಸುಶಿಕ್ಷಿತರ ಶೈಲಿ' ಮತ್ತು 'ಜಾನಪದ ಶೈಲಿ'— ಎರಡನ್ನೂ ಬಳಸುವುದು ಅನಿವಾರ್ಯವಾಗಿತ್ತು. ಬಳಸಿ ಯಶಸ್ವಿಯಾದುದು ಗಮನಾರ್ಹ ಸಂಗತಿಯಾಗಿದೆ.

ಇನ್ನೂ ಒಂದು ಚಮತ್ಕಾರದ ಅಂಶವೆಂದರೆ — ಬೇಂದ್ರೆಯವರು ಬಳಸುವ ಜಾನಪದ ಭಾಷೆ ಒಂದೇ ವಿಧವಾದುದಲ್ಲ. ಬ್ರಾಹ್ಮಣೀ-ಗ್ರಾಮ್ಯ, ವ್ಯವಹಾರೀ ಗ್ರಾಮ್ಯ, ರೈತರ-ದಲಿತರ ಗ್ರಾಮ್ಯ—ಹೀಗೆ ಹಲವು ತರದ 'ಗ್ರಾಮ್ಯ' ಭಾಷೆಗಳನ್ನು ಅವರು ಬಳಸುತ್ತಾರೆ.

**೧. ಬ್ರಾಹ್ಮಣೀ ಗ್ರಾಮ್ಯಕ್ಕೆ ಉದಾ:**

(i) ಹೂತsದ ಹುಣಸಿಯಾ ಚಿಗುರು
ಮದರಂಗಿ ಬಣ್ಣದುಗುರು
ರುಚಿಗೆ ಹುಳಿಯೊಗರು
ನೋಡ್ಯೆ ಜೀವಕ್ಕನಿಸಿ ತsi ಹಗುರು |....ಹೂತsದ.[1]

1. ಸಖೀಗೀತ, ಪುಟ ೮೨.

(ii) ಬೆಳುದಿಂಗಳ ನೋಡಽ
ಬೆಳುದಿಂಗಳ ನೋಡು
ದನಕರದ ಕಾಲಿನ ಧೂಳಿ
ಸಂಜೆಯು ಹೂಳಿ
ಮುಗಿಲ ಮುಟ್ಯಽದ
ಮುಗಿಲ ಮುಟ್ಯದ ‖ [1]

**೨. ವ್ಯವಹಾರೀ ಗ್ರಾಮ್ಯಕ್ಕೆ ಉದಾ :**

(i) ಇನ್ನೂ ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾಂವಾ
ವಾರದಾಗ ಮೂರ ಸರತಿ ಬಂದು ಹೋದಾಂವಾ
ಭಾರಿ ಜರದ ವಾರಿ ರುಮ್ಮಾಲಾ ಸುತ್ತಿಕೊಂಡಾವಾ
ತುಂಬ ಮೀಸಿ ತೀಡಿಕೋತ ಹುಬ್ಬ ಹಾರಸಾಂವಾ ‖ [2]

(ii) ತುಂಬಿ ಬಂದಿತ್ತಽ ತಂಗೀ ।
ತುಂಬಿ ಬಂದಿತ್ತು ‖
ಬೆಳಕಿಗಿಂತ ಬೆಳ್ಳಗೆ ಇತ್ತ ।
ಗಾಳಿಗಿಂತ ತೆಳ್ಳಗೆ ಇತ್ತ ‖
ಜಡಿಯಿಂದಿಳಿದ ಗಂಗಿ ಹಾಂಗ ।
ಚಂಗನೆ ನೆಗೆದಿತ್ತ ‖
ತುಂಬಿ ಬಂದಿತ್ತಽ ತಂಗೀ
ತುಂಬಿ ಬಂದಿತ್ತು ‖ [3]

**೩. ರೈತರ ಗ್ರಾಮ್ಯಕ್ಕೆ ಉದಾ :**

(i) ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತಽ । ....
ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ
ಹೋಗೇತಿ ಎತ್ತೆತ್ತಽ ‖ [4]

---

1. ನಾದಲೀಲೆ, ಪುಟ ೭೩.
2. ಸಖೀಗೀತ, ಪುಟ ೯೨.
3. ,, ,, ೫೩.
4. ಗರಿ, ,, ೧೦೧.

( ii ) ಟೊಂಕದ ವ್ಯಾಗ ಕೈ ಇಟಗೊಂಡು
ಬಿಂಕದಾಕಿ ಯಾರೀಕಿ ?
ಒಂಕಿತೋಳ ತೋರಸತಾಳ
ಸುಂಕ್ಕದ ಕಟ್ಯಾಂವಗ ||

ಇಷ್ಟೇ ಅಲ್ಲಾ, ಬೇಂದ್ರೆಯವರು ಉತ್ತರಕರ್ನಾಟಕದ ಯಾವ ಜಾತಿ, ಒಳಜಾತಿಗಳ ಜಾನಪದದ ಪದರು, ಒಳಪದರುಗಳನ್ನೂ ತೆರೆದು ತೋರಿಸದೆ ಬಿಟ್ಟವರಲ್ಲ. ತಮ್ಮ ಕಿವಿಯಮೇಲೆ ಬಿದ್ದ ಎಲ್ಲ ಗ್ರಾಮ್ಯಗಳನ್ನೂ ತಮ್ಮದನ್ನಾಗಿ ಮಾಡಿಕೊಂಡು ಸವಿಯುವಂತೆ ಬಳಸಿದ್ದಾರೆ.

ಬೌದ್ಧಿಕ ಚರ್ಚೆಗೆ ಕನ್ನಡ ಗ್ರಾಮ್ಯ ಭಾಷೆ ಸಾಲದು, ತಾತ್ವಿಕ ಕವಿತೆಗಳಿಗೆ ಜಾನಪದ ಒಗ್ಗದು; ವೈಯಕ್ತಿಕ ಚಿಂತನೆಗೆ ವಾಹಕವಾಗದು — ಮುಂತಾದ ಮಾತುಗಳನ್ನು ಕೆಲವು ವಿದ್ವಾಂಸರು ಆಡಿಕೊಳ್ಳುತ್ತಿರುವುದುಂಟು. ಆದರೆ ಬೇಂದ್ರೆಯವರು ರಾಷ್ಟ್ರೀಯ ಉದ್ಬೋಧನೆಗೆ, ಪ್ರಕೃತಿವರ್ಣನೆಗೆ, ಸಾಮಾಜಿಕ ರೀತಿ-ನೀತಿ, ಕುಂದು-ಕೊರತೆ-ವಿಡಂಬನೆಗಳಿಗೆ, ಆಧ್ಯಾತ್ಮಿಕ ತತ್ವಚಿಂತನೆಗೆ, ಅನುಭಾವ ಗೀತೆ-ಗಳಿಗೆ, ಪ್ರೇಮಗೀತೆಗಳಿಗೆ — ಜಾನಪದ ಭಾಷೆಯನ್ನು ನಿರರ್ಗಳವಾಗಿ ಬಳಸಿಕೊಂಡಿದ್ದಾರೆ. ಜಾನಪದ ಭಾಷೆ ಎಂಥ ಸಮರ್ಥಶಕ್ತಿಯುಳ್ಳುದು ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

'ಆಡುನುಡಿಯ ಸಮರ್ಥ ಪ್ರಯೋಗವೆಂದರೆ ಜನರು ಆಡುವ ರೀತಿಯನ್ನು ಯಥಾವತ್ತಾಗಿ ಅನುಕರಿಸುವ ಶಕ್ತಿ ಮಾತ್ರ ಅಲ್ಲ, ಅನುಭವಕ್ಕೆ ಅವಶ್ಯವಾದಷ್ಟನ್ನು ಸಂಯಮದಿಂದ ಬಳಸುವದು ಮತ್ತು ಅನವಶ್ಯಕವಾದುದನ್ನು ನಿರ್ದಯವಾಗಿ ನಿಯಂತ್ರಿಸುವದು.' — ಎಂದು ಗಿರಡ್ಡಿಯವರು ಹೇಳುವಂತೆ ಜಾನಪದ ಭಾಷೆಯ ಬಳಕೆಯಲ್ಲಿ ಸಂಯಮ-ನಿಯಂತ್ರಣಗಳು ಅವಶ್ಯವೆಂಬುದು ಒಪ್ಪತಕ್ಕ ವಿಷಯವೇ ಸೈ. ಇಲ್ಲದಿದ್ದರೆ 'ಆಡುಮಾತಿನ ಬಳಕೆ ಕೇವಲ ಲಂಪಟತೆಯಾಗುತ್ತದೆ'. ಬೇಂದ್ರೆಯವರ ನಂತರ ಇತ್ತೀಚೆಗೆ ಅನೇಕ ತರುಣರು ನವ್ಯಕಾವ್ಯದಲ್ಲಿ ಈ 'ಲಂಪಟತೆ' ತೋರಿದ್ದುಂಟು. ಪಾಟೀಲರು ಮತ್ತು ಕಂಬಾರರು ಸತ್ವಯುತವಾಗಿ 'ಗ್ರಾಮ್ಯ'ವನ್ನು ಬಳಸುತ್ತಿರುವರು.

ಬೇಂದ್ರೆಯವರು ಬರೆದ ಎಷ್ಟೋ ಜಾನಪದ ಶೈಲಿಯ ಕವನಗಳು ಅಯಶಸ್ವಿಯಾಗಿರುವುದೂ ಉಂಟು. 'ನೀ ಹೀಂಗ ನೋಡಬ್ಯಾಡ ನನ್ನ,' 'ರಾಗರತಿ,' 'ನನ್ನ ಕೈಯ ಹಿಡಿದಾಕೆ,' 'ಹುಬ್ಬಳ್ಳಿಯಾಂವಾ' — ಮುಂತಾದ "ಕವನಗಳಲ್ಲಿ ಭಾವಾವೇಗ ಅತಿಯಾಗಿಯೋ ಕಡಿಮೆಯಾಗಿಯೋ, ಆಗ ಬೇಕಾದ ರಸಸಿದ್ಧಿ ಆಗಿಲ್ಲ" — ಎಂದು ಕುರ್ತಕೋಟಿಯವರು ಹೇಳಿದ್ದಾರೆ. "ಜಾನಪದ ಕಾವ್ಯದ

ಅಚ್ಚು ಅಂಥದಾದ್ದರಿಂದ ಅದರ ಅಂಕಿತಕ್ಕೆ ಒಳಗಾಗಿ ಬೇಂದ್ರೆಯವರ ಕವನಗಳು ಸಹಜವಾಗಿ ಅನುಭವದ ಉತ್ತಮ 'ಕೀರ್ತನೆ'ಗಳಾಗಿ ಬಿಡುತ್ತವೆ. ಮತ್ತು ಕವಿಯ ವೈಯಕ್ತಿಕ ಪ್ರಜ್ಞೆ ಸಮೂಹಪ್ರಜ್ಞೆಯಲ್ಲಿ ಲಯವಾಗಿ ಬಿಡುತ್ತದೆ. .... ನಿಸರ್ಗದ ಕೂಡ ಅವರ ಅವಿಭಕ್ತ ಸಂಬಂಧವನ್ನು ಮೆರೆಸುವ, ಜಾನಪದ ಮಟ್ಟುಗಳಲ್ಲೇ ಇರುವ ಅವರ ಕೆಲವು ಈಚಿನ ಕವನಗಳು ಕೆಲವು ಸಲ ಕಳೆದಿದ್ದರ ಬಗ್ಗೆ ಪಡುವ ಬರಿಯ ಹಂಬಲ ಮಾತ್ರವಾಗಿ ನಮಗೆ ತೋರುತ್ತವೆ."— ಎಂದು ಯು. ಆರ್. ಅನಂತಮೂರ್ತಿಯವರು ಬೇಂದ್ರೆಯವರನ್ನು ಒರೆಗಲ್ಲಿಗೆ ತಿಕ್ಕಿ ನೋಡಿದ್ದಾರೆ. ದೋಷಗಳನ್ನು ಎತ್ತಿ ಹೇಳಿದ್ದಾರೆ.

ಆದರೂ ಆಡು ಮಾತಿನ ಲಯ, ಶಬ್ದಸಂಪತ್ತು, ಪ್ರತಿಮೆಗಳು, ಪಡೆನುಡಿಗಳು, ಧ್ವನಿಶಕ್ತಿಗಳು ಜಾನಪದ ಭಾಷೆಯಿಂದ ಎತ್ತಿಕೊಳ್ಳಲ್ಪಟ್ಟು ಆಧುನಿಕ ಕನ್ನಡಭಾಷೆ ಹೆಚ್ಚು ಶ್ರೀಮಂತಿಕೆಯನ್ನೂ, ಸತ್ವ-ಸಾಮರ್ಥ್ಯಗಳನ್ನೂ ಹೊಂದಲು ಬೇಂದ್ರೆಯವರ ಸಾಹಿತ್ಯಸೇವೆ ಹೊಸಬಗೆಗೆ ಪ್ರೇರಣೆಯನ್ನು ಒದಗಿಸಿತು. ಈ ಒಂದು ಕಾರ್ಯದಿಂದಾದರೂ ಬೇಂದ್ರೆಯವರ ಕವಿಬಾಳು ಧನ್ಯತೆಯನ್ನು ಪಡೆದಿದೆ.

§ § § §

೧೪

# ಬೇಂದ್ರೆ ಅವರ ಜೀವನವೇ ಕಾವ್ಯ; ಕಾವ್ಯವೇ ಜೀವನ

ಎನ್ಕೆ

'ಬೇಂದ್ರೆ ಅವರ ಜೀವನವೇ ಕಾವ್ಯ; ಕಾವ್ಯವೇ ಜೀವನ'—ಎಂದು ಅವರ ಐವತ್ತನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಏರ್ಪಡಿಸಿಲಾದ ಅಭಿನಂದನ ಸಮಾರಭದಲ್ಲಿ ನಾನು ಮಾತನಾಡಿದಾಗ ಕೌಟುಂಬಿಕ ಬೇಂದ್ರೆ ಅವರು ಜೀವನದಲ್ಲಿ ಪಟ್ಟ ಪಾಡನ್ನೆಲ್ಲ ಹಾಡಾಗಿ ಮಾಡಿದ ಕಾವ್ಯದ ಗಾರುಡಿಗತನವನ್ನು ನೆನೆದುಕೊಂಡಿದ್ದೆ.

ಬೇಂದ್ರೆ ಅವರು ಜೀವನದಲ್ಲಿ ಕಹಿಯನ್ನು ನುಂಗಿದ್ದಾರೆ, ಜೀರ್ಣಿಸಿಕೊಂಡಿದ್ದಾರೆ. 'ನಂಜುಂಡ ಶಿವ'ನಂತೆ ತಾವು ಕಹಿಯುಂಡರೂ ಲೋಕಕ್ಕೆ ಶಿವರೂಪಿ ಎನಿಸಿ ಸಿಹಿಯನ್ನು ನೀಡಿದ್ದಾರೆ. 'ಎನ್ನ ಪಾಡೆನಗಿರಲಿ ಅದರ ಹಾಡನ್ನಿಷ್ಟೆ ನೀಡುವೆ ರಸಿಕ ನಿನಗೆ। ಕಲ್ಲುಸಕ್ಕರೆಯಂಥ ನನ್ನೆದೆಯು ಕರಗಿದರೆ ಅದರ ಸಿಹಿಯನ್ನಿಷ್ಟೆ ಹನಿಸು ನನಗೆ' ಎಂದು ರಸಿಕನನ್ನುದ್ದೇಶಿಸಿ ನುಡಿವ ಕವಿವಾಣಿ ಅವರ ಜೀವನದ ಕಾವ್ಯವನ್ನು, ಕಾವ್ಯಜೀವನವನ್ನು ಸಂಕೇತಿಸುವಂತಿದೆ.

ಬೇಡನಿಂದ ವಧಿಸಲ್ಪಟ್ಟ ಗಂಡು ಕ್ರೌಂಚ ಪಕ್ಷಿಯ ಸಾವಿಗೆ ಕಂಬನಿಯಿಟ್ಟು ಗೋಳಾಡುವ ಹೆಣ್ಣು ಪಕ್ಷಿಯ ದುಃಖಕ್ಕೆ ಮರುಗಿ ರಸಋಷಿ ವಾಲ್ಮೀಕಿ ಬೇಡನನ್ನು ಶಪಿಸಿ ಉದ್ಗರಿಸಿದ ಶೋಕವು ಶ್ಲೋಕವಾಯಿತಂತೆ. ಬೇಂದ್ರೆ ಅವರು ಬಾಳಿನಲ್ಲಿ ಬೆಂದರೆ ಅದು ಸುಂದರ ಕಾವ್ಯವಾಗಿ ಹೊರಹೊಮ್ಮಿತು; ಪಟ್ಟಪಾಡು ಹಾಡಾಯಿತು. 'ರಾಮ ರಾಮಾ ಏನಾಯಿತೊ ಆಯಿತಾಯಿತು ಹೋಯಿತು' ಆಯಿತೇನು, ಹೋಯಿತೇನು ? ಎದೆಯುದ್ದ ಬೆಳೆದು ಕೈಗೆ ಬಂದ ಮಗ ರಾಮನನ್ನು ಕಳೆದುಕೊಂಡ ತಂದೆ ಪಟ್ಟಪಾಡು ಹಾಡಾಗಿ ಹೊರಹೊಮ್ಮಿತು.

> 'ಎದೆಯ ಹತ್ತಿರ ಹೆಗಲ ಎತ್ತರ ಬೆಳೆದು ಬೆಂಬಲವಾಗುತ
> ಉಲ್ಕೆ ಉಳುಕಿದ ಹಾಗೆ ಗಳಕನೆ ಕಳಚುವರೆ ಕೆಳಸಾಗುತ'

ಎಂತಹ ವಿಧಿವಿಲಾಸ! ಚಿರಂಜೀವನನ್ನು ಕಳೆದುಕೊಂಡು ತೀರ್ಥರೂಪನು ಕಣ್ಣೀರು ಹಾಕುವಂತಾಗಬೇಕೆ ?

'ಸತ್ತ ದಶರಥ ಇದ್ದ ರಾಮನಿಗೆ ಅತ್ತನು ಅಂದಿಗೆ
ಸತ್ತ ರಾಮಗೆ ಅತ್ತೆ ಅಳುವನು ಇರುವ ದತ್ತನು ಇಂದಿಗೆ
ಜೀವ ಜೀವವು ಅಗಲದಂದದ ಅರಿವು ಬೆಳೆವುದು ಎಂದಿಗೆ
ಅಂದೆ ಸಾಕೆನಿಸೀತು ಶೋಕವು ಹುಟ್ಟಸಾಯುವ ಮಂದಿಗೆ'

ಕೌಟುಂಬಿಕ ಬೇಂದ್ರೆ ಅವರು ತಂದೆಯಾಗಿ ಪಟ್ಟಪಾಡು ಇದು. ದಶರಥನಿಗಿಂತಲೂ ಹತ್ತು ಪಟ್ಟು ಹೆಚ್ಚಿದ ನೋವು ಈ ತಂದೆಯದು.

ಬೇಂದ್ರೆ ಅವರ 'ಸಖೀಗೀತ' ಕೌಟುಂಬಿಕ ಕಥೆಯಾಗಿದೆ. 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ!' ಎಂದು ಪಲ್ಲವಿಸುವ ಈ ದಾಂಪತ್ಯಗಾಥೆ ಗಂಡ ಹೆಂಡಿರ ಕಟು-ಮಧುರವಾದ ಆಖ್ಯಾನವನ್ನು ವ್ಯಾಖ್ಯಾನದೊಡಗೂಡಿ ವಿವರಿಸುತ್ತ.

'ಮಾಂದಳಿರ ತೋರಣ ಹೂಮಿಡಿ ಗುಡಿಗಟ್ಟಿ
ಮಧುಮಾಸ ಹೊರಟಿತ್ತು ನಿಬ್ಬಣಕೆ'

ಆ ಸಮಯದಲ್ಲಿ 'ಅಂತಃಪಟದಾಚೆ ವಿಧಿ ತಂದ ವಧು' ವನ್ನು 'ಸಖೀಗೀತ'ದ ನಾಯಕ ಸಂಧಿಸುತ್ತಾನೆ.

'ಜೀವದ ಭೂಮಿ ನೀ ಮರಿಮಕ್ಕಳನು ಪಡೆದು
ಮನೆತನ ಮುಂದರಿಸಿ ಬಂದಿರುವೆ
ತನುಮನಧನದಲ್ಲಿ ಪಾಲುಗಾರತಿಯಲ್ಲ
ನೀನೇನೊ ಹಿಗ್ಗಲಿಸ ಬಯಸಿರುವೆ.'

ಹೀಗೆ ಹಸೆಯಲ್ಲಿ ಹುಸಿಯಾಟವಾಡಿಸಿ ಹಿರಿಯರು ನಲಿ ನಲಿದಾಡುವಾಗ ದಂಪತಿಗಳು ವೈಸಲಿಗೆ ಬೆಳೆಸಿ ಹರೆಯದ ಹಬ್ಬವನ್ನು ಕನಸು-ಮನಸು ಹೆಣೆದು ಬೆಳೆ-ಬೆಳೆದರು. ಬಡವರ ಶೃಂಗಾರ ಬಯಕೆಗೆ ಮೂಲ ಆದರೂ ಹೇಗೊ ಸಂಸಾರ ನೌಕೆಯನ್ನು ಮುನ್ನಡೆಯಿಸುವಾಗ ಹುಡುಗನ ಜೋಗುಳ ಮುಗಿಲು ಮುಟ್ಟುವಷ್ಟರಲ್ಲಿಯೇ ಕಾರ್ಯವು ಮಿಂಚಿ ತಾಯಿಯುಳಿದುದೇ ದೊಡ್ಡ ಪುಣ್ಯವೆನಿಸಿತ್ತು. ಹೀಗೆ ಚೊಚ್ಚಿಲು ಕಾಟ ತೀರಿತೆನ್ನುವಾಗ ಮರುಜಲ ಬಸಿರಿಯ ಬಯಕೆಯ ಲಗು ಬಗೆ! ಮರುಜಲ ಮಗ ಭೆಟ್ಟಿಗೆ ಬಂದ ಅತಿಥಿಯಂತೆ ಬಂದದಾರಿ ಹಿಡಿದು ಹೋಗಿಬಿಟ್ಟ. ಹೀಗೆ ದಾಂಪತ್ಯದ ನೌಕೆ ನೂಗುತ್ತ ಸಾಗುತ್ತದೆ. ಆತನಿಗೋ ಸಾಹಿತ್ಯವಿತ್ತು, ಕಾವ್ಯವಿತ್ತು, ಗೆಳೆಯರಿದ್ದರು; ಈಕೆಗೋ ಅರಣ್ಯರೋದನ. ಈ ಸಖೀಗೀತ 'ನೂರರ ನೂಲಾಗಿ ಧಾರೆಗೆಡದೆ ಹರಿಯದೆ ಮುಗಿದಿದೆ' ಎಂದು ಭಾವಿಸಿದ್ದ ಕವಿಗೆ ಆತನ ಭಾವನೆ ಭ್ರಮೆ ಎನಿಸುವಂತೆ ಮಾಡಿತ್ತು; ಕೈಹಿಡಿದ ಅರ್ಧಾಂಗಿಯ

ಕಣ್ಮರೆ. ಈಗ ಮಾತ್ರ ' ಅಂಬಿಕಾತನಯನ ಜಂಬದ ಪಾಡು ' ಅಳಿದಿತ್ತು. ಸಖೀ ಗೀತದ ಉತ್ತರ ಭಾಗಕ್ಕಾಗಿ ರಸಿಕವಾಚಕ ರೇಖೆ ಕವಿಯೇ ಕಾಯುತ್ತಿರುವಾಗ ಅದು ಇನ್ನೆಂದಿಗೆ ಕವಿಯ ಕೈಗೆ ಎಟುಕುವದೊ ! ಸಖೀಗೀತವು ದಂಪತಿಗಳ ಕಟುಮಧುರ ಸಖ್ಯದ ಆಖ್ಯಾನ. ಸುಖ ದುಃಖಗಳ ಏರಿಳಿತಗಳ, ಸಾವು ನೋವಿನ, ವಿರಹ–ಮಿಲನದ ಹಲವಾರು ಭಾವನಾತರಂಗಗಳ ಸುಂದರ ಸಂಸಾರಾನುಭವಗಳನ್ನು ಚಿತ್ರಿಸುತ್ತದೆ.

ಕವಿ ಬರೆದಿರುವ ಮತ್ತೊಂದು ಕೌಟುಂಬಿಕ ಶಬ್ದಚಿತ್ರ ಯಾವ ಸಂಸಾರಿಗ ನನ್ನೂ ತಲ್ಲಣಗೊಳಿಸುವಂತಹದು. ಅದರ ಸಂದರ್ಭ ಇಷ್ಟು. ಹೆಂಡತಿ ಹೆರಿಗೆ ಗೆಂದು ತವರಿಗೆ ಹೋಗಿದ್ದಾಳೆ; ಮಗುವಿನ ಮೊಗ ನೋಡಿದ್ದಾಳೆ; ಸಂತಸ ಬಟ್ಟಿದ್ದಾಳೆ. ತಂದೆಯೂ ಮಗುವಿನ ನಗೆ ನೋಡಲಿಯೆಂದು ಆಸೆ. ಆ ಆಸೆಯ ನಿಮಿಷವನ್ನು ನಿರೀಕ್ಷಿಸುತ್ತಿರುವಾಗ ವಿಧಿಯ ಕೈವಾಡ ಇನ್ನೇನೊ ಮಾಡಿಬಿಟ್ಟದೆ. ನಗೆಯಿಂದ ಗೆಲುವಾಗಿರಬೇಕಾಗಿತ್ತು. ಮಗುವನ್ನು ನೆಲಕ್ಕೆ ಹಾಕಿದ್ದಾರೆ; ಯಾವ ಪೀಡೆಯೊ ಏನೋ ! ತಂದೆಗೆ ತಂತಿಯ ಸಮಾಚಾರ ಹೋಗಿದೆ; ಧಾವಿಸಿ ಬಂದಿದ್ದಾರೆ. ಆದರೇನು ? ತನಗೆ ಮಗುವನ್ನು ನೀಡಿದ, ಕೈಹಿಡಿದ ಗಂಡ, ಮಗುವನ್ನು ಬದುಕಿಸಿ ಕೊಟ್ಟಾನೇನೊ ಎಂಬ ಆಶೆಯ ಕಂಗಳಿಂದ ನೋಡುತ್ತಿದ್ದಾಳೆ, ಅದಕ್ಕೆ ಗಂಡನ ಉತ್ತರ ಇದು :

' ನೀ ಹಿಂಗ ನೋಡಬ್ಯಾಡ ನನ್ನ
ನೀ ಹಿಂಗ ನೋಡಿದರ ನನ್ನ,
ತಿರುಗಿ ನಾ ಹ್ಯಾಂಗ ನೋಡಲೆ ನಿನ್ನ ||
ಮಲಗಿರುವ ಕೂಸು ಮಲಗಿರಲಿ ಅಲ್ಲಿ,
ಮುಂದಿನದು ದೇವರ ಚಿತ್ತ |
ನಾ ತಡೀಲಾರೆ ಅದು, ಯಾಕ ನೋಡತೀ
ಮತ್ತ ಮತ್ತ ನೀ ಇತ್ತ '

ದಾಂಪತ್ಯದ ಹೊಸದರಲ್ಲಿ ಇದೇ ಹೆಂಡತಿ ಹ್ಯಾಗೆ ಕಂಗೊಳಿಸಿದ್ದಳು ! ' ಇಬ್ಬನ್ನಿ ತೊಳೆದರೂ ಹಾಲು ಮೆತ್ತಿದ ಕವಳಿ ಕಂಟಿಯ ಹಣ್ಣು ಹಾಂಗಿರುವ ಹೆಣ್ಣೇ ಹೇಳು ನಿನ್ನವೇನು ಈ ಕಣ್ಣು ' ಆಗಿನ ಕಣ್ಣಿನ ಮಿಂಚೇನು ! ಈಗಿನ ಕಣ್ಣಂಚಿನ ನೀರೇನು ! ಕವಿ, ಆಗಿನ ಚಂದ್ರಮುಖ ಈಗ ಹೇಗೆ ಕಾಣುತ್ತದೆ ಎಂಬುದಕ್ಕೆ ಉಪಮೆ ಕೊಡುತ್ತಾನೆ ನೋಡಿ :

ಹುಣ್ಣಿಮೆ ಚಂದಿರನ ಹೆಣ ಬಂತೊ
ಮುಗಿಲಾಗ ತೇಲತ ಹಗಲ '

ಎಂತಹ ಪ್ರಭಾವಿ ಪರಿಣಾಮಕಾರಿ ಉಪಮೆ ಇದು ! ಕಾಳಿದಾಸ ಝುಕ್ಕಿಸಿ ಹೋದ ಈ ಉಪಮೆಯು ಮುಂದೆ. ಈ ನಿಸ್ತೇಜವಾದ ಮುಖ ಚಂದಿರನ ಹೆಣವಲ್ಲದೆ ಇನ್ನೇನು ! ಚಂದಿರನ ಸೊಗಸು ನೋಡಬೇಕು ಹುಣ್ಣಿಮೆಯಂದು. ಹಗಲು ಹೊತ್ತು ಮುಗಿಲಲ್ಲಿ ಚಂದಿರನನ್ನು ನೋಡಿದಾಗ ಕಾಣುವ ಆ ನಿಸ್ತೇಜ ಚಿತ್ರಕ್ಕೆ ಇನ್ನೊಂದು ಉಪಮೆ ಸಿಗಲಾರದು. ಕೊನೆಗೆ ಹೆಂಡತಿಗೆ ಆತ ಹೇಳುತ್ತಾನೆ :

‘ ನಿನ್ನ ಕಣ್ಣಿನಾಗ ಕಾಲೂರಿ ಮಳೆಯು  
ನಡನಡಕ ಹುಚ್ಚು ನಗಿಮಾಸಿ  
ಹನಿ ಒಡೆಯಲಿಕ್ಕೆ ಬಂದಂಥ ಮೋಡ  
ತಡೆದ್ಹಾಂಗ ಗಾಳಿಯು ನೆವಕ  
ಎದೆ ಬಡಿದು ಕೆಡುವು  
ಬಿರುಗಣ್ಣು ಬ್ಯಾಡ  
ತುಟಿಕಚ್ಚಿ ಹಿಡಿಯದಿರ ಬಿಕ್ಕ ’

ಹೆಂಡತಿಗೆ ಕಣ್ಣೀರು ಆವರಿಸಿ ಬಂದಿದೆ. ಆದರೂ ಸಾವರಿಸಿಕೊಂಡು ಕಂಬನಿ ನಿಗ್ರಹಿಸಿದ್ದಾಳೆ. ‘ ಅಯ್ಯೋ ’ ಎಂಬ ಎರಡು ಅಕ್ಷರ ಗಂಡನ ಎರಡು ತುಟಿಗಳಿಂದ ಹೊರಬಿದ್ದರೆ ಸಾಕು ಕವಿದ ಮೋಡಕ್ಕೆ ಗಾಳಿ ತಾಗಿದಂತೆ ಧೋ ಧೋ ಎಂದು ಕಣ್ಣೀರ ಧಾರೆ ಸುರಿಯಬಹುದು. ‘ ಹನಿ ಒಡೆಯಲಿಕ್ಕೆ ಬಂದಂಥ ಮೋಡ ತಡೆದ್ಹಾಂಗ ಗಾಳಿಯು ನೆವಕ ’ ಎಂಬ ಉಪಮೆಯು ಕೂಡ ಎಷ್ಟು ಯುಕ್ತವಾಗಿದೆ ! ಕವಿ ಇಂಥಹ ಕಟು ಅನುಭವವನ್ನು ತನ್ನ ಸಂಸಾರದ ಕುಲಿಮೆಯಲ್ಲಿ ಅನುಭವಿಸಿರದಿದ್ದರೆ ಕಾವ್ಯಕ್ಕೆ ಈ ಉತ್ಕಟತೆ ಬಂದೀತೆ ? ಬಾಳಿನಲ್ಲಿ ಬೆಂದರೆ ಬೇಂದ್ರೆ ಆದಾನು, ಬೇಂದ್ರೆ ಅವರ ಜೀವನವೇ ಕಾವ್ಯ, ಕಾವ್ಯವೇ ಜೀವನ. ಅವರು ಪಟ್ಟ ಪಾಡು ತನ್ನ ಕಹಿಯನ್ನು ಕಳೆದುಕೊಂಡು ಹಿತವಾದ ಹಾಡಾಗಿ ಮೂಡಿ ಬಂದಿದೆ.

ಇದೇ ಬಗೆಯ ಭಾವವನ್ನು ‘ ಹುದುಗಲಾರದ ದುಃಖ ’ ಎಂಬ ಕವನದಲ್ಲಿಯೂ ಕಾಣಬಹುದು. ಇಂತಹದೆ ಒಂದು ಸಂದರ್ಭವನ್ನು ನೆನೆಸಿಕೊಳ್ಳಿ, ಆಗ ಈ ಸಾಲುಗಳನ್ನು ಓದಿ :

‘ ಹುದುಗಲಾರದ ದುಃಖ  
ಹುಗಿದಿರಿಸಿ ನಗೆಯಲ್ಲಿ  
ನಸುನಗುತೆ ಬಂದೆ ಇದಿರು  
ಇನಿಸು ತಿಳಿಯದ ಮೂಢ  
ನೆಂದು ಬಗೆದೆಯೆ ನನ್ನ

ಧರ್ಮದಾ ಹೆಸರಿನಲಿ ಅವರ ಕೈ ಕೂಡಿಸಲು
ಇವರಿಗೆನಿಸಿತು ಹರ್ಷಹುಟ್ಟಿದಷ್ಟು
.... .... .... .... .... ....

ಆದರೇನು ?

ವರ್ಷವೆಂಬುದರೊಳಗೆ ಚೊಚ್ಚಿಲ ಸಂಭ್ರಮದ
ದೈವದಾತವು ಎಂದಿತಿಡಿಯ ಊರು,
ಮಗನು ಬಂದಿರೆ ಇಹಕೆ, ತಂದೆ ಏರಿದ ಪರಕೆ
.... .... .... .... .... ....

ಮುಂದೆ ಆಕೆಯ ಬಾಳು—

ಹತ್ತು ದಿವಸಕೆ ಹಾಳು ಮುತ್ತೈದತನ ಹೋಗಿ
ವೈಧವ್ಯ ಸಂಪತ್ತು ಪಡೆದಳಾಕೆ
ಮನೆಯವರು ವೈದಿಕರು, ಊರು ಧರ್ಮದ ತವರು
ಶಾಸ್ತ್ರವಿರೆ ಬೇರೆ ವಿಚಾರವೇಕೆ ?

ತಲೆಭಾರ ಇಳಿದಿತ್ತು ಅಂಗಾರ ಬೆಳೆದಿತ್ತು
ಮೈಯನ್ನು ಮುಚ್ಚಿತ್ತು ಕೆಂಪು ಸೀರೆ
ಆದರಯ್ಯೋ ಪಾಪ ! ಆಕೆಯಿನ್ನೂ ಮಗುವು
ಸಿಂಗಾರವಿರದೆ ! ಆ ಮಾತೆ ಬೇರೆ.

ಕುರುಡು ಧರ್ಮಕ್ಕೆ ಸ್ಮಾರಕವು ನಿಂತಂತಾಕೆ
ಮೈಮರೆದು ನಿಂತಾಗ್ಗೆ ಗೂಗೆ ಹಾಡಿತ್ತು
ಮುದ್ರೆಯೊತ್ತುವ ಕಣ್ಣು ನೋರೆ ನೋಡಿತ್ತೊಮ್ಮೆ
ಜಾರ ಕೃಷ್ಣನ ಕಥೆಗೆ ಕೋಡು ಮೂಡಿತ್ತು !

— ಇದು ಭಗ್ನ ಕುಟುಂಬದ ವಾಸ್ತವ ಚಿತ್ರಣ. 'ಸಂಸಾರ' ಎಂಬ ಲಾವಣಿ ಧಾಟಿಯ ಕವನದಲ್ಲಿ :

'ಹುಡುಕ್ತಾನ ಹಿಗ್ಗಿನಾ ದಾರಿ, ಹುಡುಗ–
ಸುಖ–ದುಃಖ ಸಾಗರಾ ಸೇರಿ
ಮದುವೀಯ ಹಡಗವನ್ನೇರಿ
ಹುಡುಕ್ತಾನ ಹಿಗ್ಗಿನ ದಾರಿ.'

ಎಂದು ವರ್ಣಿತವಾಗಿರುವ ಸಂಸಾರವನ್ನು ಕಾಮು ಬೂದಿಯಾದ ಎಂಬ ಮಾತನ್ನು ಹುಸಿ ಮಾಡಿ ಪೌರಾಣಿಕ ತನ್ನ ಸತಿಯೆ ರತಿಯೆಂದು ಬಗೆದು ಪುರಾಣದ ಕಥೆಗೆ

ಛೀಮಾರಿ ಹಾಕುತ್ತಾನೆ. ಕಾವ್ಯರಸಿಕ ಕವಿಸಮಯವನ್ನು ನಕ್ಕು ನುಡಿಯುತ್ತಾನೆ. ಪ್ರಣಯಕ್ಕೆ ಸುಗ್ಗಿಯೆ ಯಾಕೆ ಬೇಕು ? ಮಾವು, ಕೋಗಿಲೆ, ವಿರಹ ಇವಿಲ್ಲದೆ ಪ್ರೇಮ ಚೈತ್ರ ಚಿಗುರಲಿಕ್ಕಿಲ್ಲವೆ ? ಚಿಗುರದೆ ಏನು ?

ನಿನ್ನ ತೆಕ್ಕಿಯೊಳಗ ಸಿಕ್ಕೈತಿ ಸುಗ್ಗಿ
ಸ್ವರ್ಗಕ್ಕ ಸಾಕು ತೋಳೆರಡು
ಏನೈತಿ ಸುಗ್ಗಿಯೂ ಹುರುಡ ?

ಇದೇ ರೀತಿ ವೃತಿ ನೀರೆಯ ಸ್ಪರ್ಶ ಹರ್ಷದ ಚೆಲುವೆಯನ್ನು ಬಣ್ಣಿಸಿದರೆ, ‘ ಕೌಟುಂಬಿಕ ’ ತನ್ನಾಕೆಯನ್ನು ಮಕ್ಕಳ ಮಾಣಿಕದ ಕಣಿ ಎಂದು ಬಣ್ಣಿಸುತ್ತಾನೆ. ಕೊನೆಗೆ ‘ ಕನಸಿಗ ’ ಆಕೆಯನ್ನು ತಾನು ಕಂಡ ಬೆಳಕಿನ ಹಣ್ಣು ಎಂದು ತಿಳಿದಾಗ ಮುಕ್ತಾಯದಲ್ಲಿ :

ನೆರಿತ್ವದ ಚಿಕ್ಕಿಗಳ ಜಾತ್ರಿ ಮುಗಿಲಿನಾಗ ದಿನದ ದೇವರ ಯಾತ್ರಿ
ಮನಿಮನಿಗೆ ಜೋಡಿಯ ಬೆಟ್ಟ
ಮೈಯು ಮನಿಮುಟ್ಟ
ಜೇನಹುಟ್ಟ ಕಟ್ಟ
ಅಮೃತಂತ ಬಾಯಿ ಚಪ್ಪರಿಸತಾವ ಕೇಳಿ ಕಣ್ಣು ಮಿಟಕತದ ರಾತ್ರಿ
ನೆರಿತ್ವದ ಚಿಕ್ಕಿಗಳ ಜಾತ್ರಿ.

ಬೇಂದ್ರೆಯವರು ಸಂಸಾರದ ಅಪ್ಪುಪ್ಪೈಲುಗಳನ್ನು ಹೋಳಾಗಿ ನೋಡಿದ್ದಾರೆ. ಸಂಸಾರದಲ್ಲಿ ರಸವು ಇದೆ, ವಿರಸವೂ ಇದೆ; ರಸಿಕನಿಗೆ ಸಂಸಾರವು ಜೇನು ಹುಟ್ಟು. ಕಾಣುವ ಕಣ್ಣಿಲ್ಲದವನಿಗೆ ಜೇನ್ನೊಣಗಳ ಬೀಡು :

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಬಲಿಯಾಗ ಸುಟ್ಟು ಹಪ್ಪಳದ್ಹಾಂಗ
ಸೊರಗೀದಿ ಸೊಪ್ಹಾಂಗ
ಬಂತಂತ ಮುಪ್ಪು ಬ್ಯಾಗ.

ಎಂದು ಮುಪ್ಪು ಆವರಿಸಿದ ಚೆನ್ನಿಗೆ ಹರೆಯದ ಹುಸಿನಗೆಯನ್ನು ನೆನಪು ಮಾಡಿ ಕೊಡುವಲ್ಲಿ, ಬಾಳಿನಲ್ಲಿ ಎಂತಹ ಬಡತನ ಬಂದರೂ ಅದರ ನಂಜು, ಒಗರು, ಕಹಿಗಳನ್ನು ತಮ್ಮ ಪ್ರೇಮರಸಾಯನದಿಂದ ಕಳೆಯಬಹುದೆಂಬ ವೇದಾಂತಿಕ ವಿಶ್ವಾಸ ಅವರಿಗೆ :

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು

ಬಳಸಿಕೊಂಡೆ ಒಲವೇ ನಾನು
ಅದಕು ಇದಕು ಎದಕೂ.

ಒಂದು ಮೂಡ್ (Mood) ನಲ್ಲಿ ' ಬಡವರ ಶೃಂಗಾರ ಬಯಕೆಗೆ ಮೂಲವು ' ಎಂದಿದ್ದರೆ ' ಬಡವರ ಒಲುಮೆ ಅವರ ಬಾಳಿನ ಚಲಾವಣೆಯ ನಾಣ್ಯವಾಗುತ್ತಿತ್ತು.'

ಕುಂದುಕೊರತೆ ತೋರಲಿಲ್ಲ ಬೇಕೆ ಹೆಚ್ಚಿಗೇನು ?
ಹೊಟ್ಟೆಗಿತ್ತ ಜೀವಫಲವು ತುಟಿಗೆ ಹಾಲು ಜೇನು.

ಎಂಬ ಸಂತೃಪ್ತಿಯ ಮಾತಿನಲ್ಲಿ ಆಶಾವಾದ ಮೂಡಿಬರುತ್ತದೆ. ಜೀವನವೆಂದರೆ ಹಾಗೆ. ಒಮ್ಮೆ ಹೂವಿನ ಹಾಸಿಗೆ ಎನಿಸುತ್ತದೆ. ಮತ್ತೊಂದು ಕ್ಷಣ ಮುಳ್ಳಿನ ಮಂಚವೆನಿಸುತ್ತದೆ.

ಕೌಟುಂಬಿಕ ಜೀವನವನ್ನು ವೇದಾಂತಿಕ ಸ್ವರ್ಣರೇಖೆಗಳೊಂದಿಗೆ ಚಿತ್ರಿಸಿದ ಬೇಂದ್ರೆಯವರು ಬಾಳಗರತಿಗೆ ಒಲುಮೆಯ ಬಂದಿಯನ್ನು ತೊಡಿಸಿದ್ದಾರೆ. ' ಧರ್ಮ ವಿರುದ್ಧೋ ಕಾಮೋಸ್ಮಿ ' ಎಂದು ಗೀತೆಯಲ್ಲಿ ಹೇಳಿದಂತೆ ಗೃಹಸ್ಥ-ಗೃಹಿಣಿಯ ಶುದ್ಧ ಪ್ರೇಮವು ಉತ್ ಆಸೀನತೆಯನ್ನು ಪಡೆದು ಯೋಗವಾಗಿ ಮಾರ್ಪಟ್ಟು ದೈವೀ ಪ್ರೇಮದ ಶಿಖರವನ್ನು ಸಿಲುಕುತ್ತದೆ. ನಿಜವಾಗಿಯೂ ಗೃಹಸ್ಥನ ಕೌಟುಂಬಿಕ ಜೀವನವು ಉತ್ತಮ ಜೀವನದ ದೈವೀಸಾಧನದ ಬಗೆಯಾಗಿದೆ. ಇದನ್ನೆ ವರಕವಿ ಬೇಂದ್ರೆಯವರು ಕೌಟುಂಬಿಕ ಜೀವನದ ಪ್ರೇಮಗೀತಗಳ ಸಂದೇಶವಾಗಿ ಕನ್ನಡಿಗರಿಗೆ ನೀಡಿದ್ದಾರೆ. ಅವರ ಕೌಟುಂಬಿಕ ಕಾವ್ಯಪ್ರಪಂಚದ ದರ್ಶನ ಇದು. ಅದು ದೈಹಿಕ ಪ್ರಣಯದ ದಾಂಗುಡಿಯಲ್ಲ. ದೈವೀ ಜೀವನದ ಸಿದ್ಧಿಯ ಗುಡಿ. ಮನುಷ್ಯ ಮಣ್ಣಿನಿಂದ ಮೇಲಕ್ಕೇಳಬೇಕು. ಕಾವ್ಯ ಆತನಿಗೆ ಸಾಧನವಾಗಿ ದ್ಯಾವಾ ಪೃಥ್ವಿಯ ಏಣಿಯಾಗಿ ಪರಿಣಮಿಸಬೇಕು. ಬೇಂದ್ರೆ ಅವರ ಕಾವ್ಯದ ಮೇಲ್ಮೆ ಇದು.

§ § § §

೧೫

# ಶ್ರೀ ಬೇಂದ್ರೆಯವರ ವಿನೋದದೃಷ್ಟಿ

**ಜಿ. ಡಿ. ನಾಡಕರ್ಣಿ**

"ನಗೆಯಲ್ಲಿ ಹೊಗಿ ಬ್ಯಾಡ; ಹೊಗಿ ಹಿಂದ ಧಗಿ ಬ್ಯಾಡ;
ಬಾಳಿಗೆ ಎರಡು ಬಗಿ ಬ್ಯಾಡ; ನನಗೆಣೆಯಾ,
ಬ್ಯಾಸರಿಕೆ ಬ್ಯಾಡೋ ನಗುವಾಗ"

—ಅಂಬಿಕಾತನಯದತ್ತ.

"ಶ್ರೀ ಬೇಂದ್ರೆಯವರು ಕನ್ನಡದ ಕಾವ್ಯಸಮುದಾಯಕ್ಕೆ ಅನೇಕ ಅತ್ಯುತ್ತಮ ಕವಿತೆಗಳನ್ನು ಸೇರಿಸಿದಾರೆ. ಹೀಗೆ ಮಾಡುವುದರಲ್ಲಿ ಇವರು ಪ್ರಪಂಚದ ಕಾವ್ಯಸಂಪತ್ತನ್ನೇ ಬೆಳೆಸಿದಾರೆ." ಎಂದು ಮಾರ್ಮಿಕವಾಗಿ ಶ್ರೀ. ಮಾಸ್ತಿಯವರು ಒಂದೆಡೆಗೆ ನುಡಿದಿದ್ದಾರೆ. ಆಡುವ ಮಾತೇ ಕಾವ್ಯವಾಗಿ ಬಿಡುವ ಸಹಜತೆ ಬೇಂದ್ರೆಯವರ ಕಾವ್ಯದಲ್ಲಿ ಕಂಡುಬರುತ್ತದೆ. ಆಧುನಿಕ ಕನ್ನಡ ಭಾವ-ಗೀತೆಯು ಅವರಲ್ಲಿ ಸಿದ್ಧಿ ಪಡೆದಿದೆ ಎಂದರೆ ಆಶ್ಚರ್ಯವಿಲ್ಲ. ಭೃಂಗದ ಬೆನ್ನೇರಿ ಬಂದಂಥ ಅವರ ಕಲ್ಪನಾವಿಲಾಸ, ನಾದಮಾಧುರ್ಯ, ಭಾಷೆಯ ಸೊಗಸು ಮತ್ತು ಇವೆಲ್ಲವುಗಳ ಹಿಂದೆ ಆಳವಾದ ಅನುಭವ,— ಮೊದಲಾದ ವೈಶಿಷ್ಟ್ಯಗಳಿಂದ ಬೇಂದ್ರೆಯವರ ಕಾವ್ಯ ಜಾಗತಿಕ ಮಟ್ಟದ ಯೋಗ್ಯತೆಯನ್ನು ಪಡೆದುದು ಆಗಿದೆ. ಹೊಸಗನ್ನಡದ ಅರುಣೋದಯ ಕಾಲದಲ್ಲಿ ಸ್ವರವೆತ್ತಿ ಪಾಡಿದ, ಪಾಡುತ್ತಿರುವ ಮೊದಲನೆಯ ಹಕ್ಕಿಯಾದ ಅವರು ಇತರರಿಗೂ ಪ್ರೇರಣೆ-ಸ್ಫೂರ್ತಿಯನ್ನಿತ್ತಿದ್ದಾರೆ. "ಬೆಂದರೆ" ಬೇಂದ್ರೆ ಎಂದು ವಿನೋದದಿಂದ ಹೇಳುವ ಮಾತಿನಲ್ಲಿ ಸತ್ಯವಿದೆ. ಜೀವನದ ಕಷ್ಟದಲ್ಲಿ ನೊಂದು-ಬೆಂದರೂ ಅವರು ಆ ನೋವನ್ನು ತಮಗೇ ಇಟ್ಟು ಕೊಂಡು, ಸವಿಯನ್ನಷ್ಟೇ ಓದುಗರಿಗೆ ನೀಡಿದ್ದಾರೆ. ಅವರೇ ಹೇಳಿದಂತೆ—

"ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ! ನಿನಗೆ

ಕಲ್ಲುಸಕ್ಕರೆಯಂಥ ಸಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ ! "

ಹಾಸ್ಯವನ್ನು ಮೊದಲಿನಿಂದಲೂ ಭಾರತೀಯ ಅಲಂಕಾರಶಾಸ್ತ್ರದಲ್ಲಿ ನವರಸ ಗಳಲ್ಲಿ ಒಂದು ಎಂದು ಮನ್ನಿಸಿದ್ದಾರೆ. ಬೇಂದ್ರೆಯವರಲ್ಲಿ ಸಹಜ ವಿನೋದದೃಷ್ಟಿ ಕಂಡುಬರುತ್ತದೆ. ಅವರ ಮಾತುಮಾತಿನಲ್ಲಿ ಸಹಜ ವಿನೋದ ಚಿಮ್ಮುತ್ತದೆ. ಅವ ರೊಡನೆ ಮಾತನಾಡುವುದೆಂದರೆ ಬೆಳುದಿಂಗಳಿನಲ್ಲಿ ವಿಹರಿಸಿದಂತೆ— ವಿಚಾರಗಳ ಗಾಂಭೀರ್ಯದೊಡನೆ ಹಾಸ್ಯದ ಸೊಗಸು ವಿಪುಲವಾಗಿ ಅನುಭವಕ್ಕೆ ಬರುತ್ತದೆ. ಅವರ ಬರವಣಿಗೆಯಲ್ಲಿಯೂ ಹಾಸ್ಯ ಹಿತಮಿತವಾಗಿ ಕಂಡುಬರುತ್ತದೆ. ಅವರ ಕಾವ್ಯದಲ್ಲಿ, ನಾಟಕಗಳಲ್ಲಿ ಹಾಗೂ ಲಲಿತಪ್ರಬಂಧಗಳಲ್ಲಿ ಹಾಸ್ಯ ಸೂಸಿ ಹರಿದಿದೆ. ಸಂಕ್ಷಿಪ್ತವಾಗಿ ಅದನ್ನು ಈಗ ಅವಲೋಕಿಸೋಣ.

ಬೇಂದ್ರೆಯವರಲ್ಲಿ ವಿನೋದದೃಷ್ಟಿ ಎಷ್ಟು ಸಹಜವೆಂದರೆ ಅವರು ತಾವೇ ಬರೆದ ಕೆಲವು ಕವಿತೆಗಳಿಗೆ ಅಣಕವಾಡುಗಳನ್ನು ರಚಿಸಿದ್ದಾರೆ. ಜಗತ್ತನ್ನು ಕಂಡು ನಗುವಂತೆ, ತನ್ನನ್ನೂ ಕಂಡು ನಗುವುದು ಶ್ರೇಷ್ಠ ನಗೆಗಾರನ ಲಕ್ಷಣವಲ್ಲವೆ ? "ಹಕ್ಕಿ ಹಾರುತಿದೆ ನೋಡಿದಿರಾ ?" ಎಂಬುದು ಅವರ ಉತ್ತಮ ಕವನ ಗಳಲ್ಲೊಂದು. "ಇರುಳಿರುಳಳಿದು ದಿನದಿನ ಬೆಳಗೆ । ಸುತ್ತಮುತ್ತಲೂ ಮೇಲಕೆ ಕೆಳಗೆ " ಹಾರುತ್ತಿರುವ ಕಾಲಪಕ್ಷಿಯ ವರ್ಣನೆಯನ್ನು ಈ ಕವಿತೆಯಲ್ಲಿ ಮಾಡ ಲಾಗಿದೆ. ರಾಜ್ಯ-ಸಾಮ್ರಾಜ್ಯದ ತೆನೆ ಒಕ್ಕಿ, ಸಾರ್ವಭೌಮರಾ ನೆತ್ತಿಯ ಕುಕ್ಕಿ ಹಾರುತಿರುವ ಹಕ್ಕಿ ಅದು. ಯುಗಯುಗಗಳ ಹಣೆಬರೆಹವ ಒರಸಿ, ಮನ್ವಂತರಗಳ ಭಾಗ್ಯವ ತೆರೆಸಿ, ಹೊಸಗಾಲದ ಹಸುಮಕ್ಕಳ ಹರಸಿ ಹಾರುತಿದೆ ಈ ಕಾಲಪಕ್ಷಿ ! "ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ, ತಿಂಗಳಿನೂರಿನ ನೀರನು ಹೀರಿ, ಮಂಗಳ ಲೋಕದ ಅಂಗಳಕೇರಿ ಹಕ್ಕಿ ಹಾರುತಿದೆ ನೋಡಿದಿರಾ ?" ಎಂದು ಕವಿವರ್ಯರು ಆ ಕವಿತೆಯಲ್ಲಿ ಪ್ರಶ್ನಿಸಿದ್ದಾರೆ. ಒಂದು ಭವ್ಯ ಅನುಭವವನ್ನು ರಸಿಕರಿಗೆ ಉಂಟು ಮಾಡುವ ಈ ಕವಿತೆಗೆ ಬೇಂದ್ರೆಯವರೇ "ಚಿಕ್ಕು ಹಾರುತಿದೆ ನೋಡಿದಿರಾ ?" ಎಂಬ ಅಣಕವಾಡನ್ನು ರಚಿಸಿದ್ದಾರೆ. ಕಾಲಪಕ್ಷಿಯ ವಿರಾಟ್ ಸ್ವರೂಪವೆಲ್ಲಿ ? ಕತ್ತಲೆಯಲ್ಲಿ ಮನೆಯಲ್ಲಿ ಹಾರಾಡುತ್ತಿರುವ ಚಿಕ್ಕಿನ ಕ್ಷುಲ್ಲಕ ಸ್ವರೂಪವೆಲ್ಲಿ ? ಅವುಗಳೊಳಗಿನ ಅಜ-ಗಜಾಂತರವೇ ಈ ಅಣಕವಾಡಿನ ವಿನೋದದ ತಳಹದಿ ಯಾಗಿದೆ.

ಈರುಳ್ಳುರುಳಲು ಮಾಡವು ಬೆಳಗೆ
ಅತ್ತಲೆತ್ತಲೂ ಕತ್ತಲೆಯೊಳಗೆ
ಯಾವುದ ! ಯಾವುದ ! ಯಾವುದ ಎಂದು

ಕೇಳುವ ಹೇಳುವ ಹೊತ್ತಿನ ಒಳಗೆ
ಬೆಕ್ಕು ಹಾರುತಿದೆ ನೋಡಿದಿರಾ ?

ಈ ಅಣಕವಾಡು ಮೂಲಕವನದ ಭಾಷೆಗೆ ತೀರ ಸಮೀಪವಾಗಿದ್ದು, ಅದೇ ವೇಳೆಗೆ ವಿರಾಟ್ ಸ್ವರೂಪದ ಕಾಲಪಕ್ಷಿ ಹಾಗೂ ಈ ಹಾರಾಡುವ ಬೆಕ್ಕು ಇವುಗಳಲ್ಲಿಯ ಅಂತರವನ್ನು ಮಾರ್ಮಿಕವಾಗಿ ಚಿತ್ರಿಸುತ್ತದೆ. ಈ ಬೆಕ್ಕು ಹೇಗಿದೆ ? ಬೇಂದ್ರೆಯವರ ಶಬ್ದಗಳಲ್ಲಿಯೇ ಅದನ್ನು ಕೇಳಬೇಕು—

ಕಾಡಿಗೆಗಿಂತಲೂ ಕಪ್ಪೋ ಬಣ್ಣಾ
ಕತ್ತಲೆಗೇ ಕಾಲೊಡೆದವೊ ಅಣ್ಣಾ !

ಇಂಥ " ಸರ್ವಾಂಗಸುಂದರ ಮೂಷಕ ವೈರಿಯು " ಹೇಗೆ ಹಾರಾಡುತ್ತದೆ ?

ರಾಜ್ಯದ ಹೆಗ್ಗಣಗಳ ತಾನೊಕ್ಕಿ
ಜೊಂಡಿಂಗದ ಹುಲುಗಡಣವ ಮುಕ್ಕಿ
ಜಂಭದ ಕೋಳಿಯ ನೆತ್ತಿಯ ಕುಕ್ಕಿ
ಬೆಕ್ಕು ಹಾರುತಿದೆ ನೋಡಿದಿರಾ ?

ಕಾಲಪಕ್ಷಿಯು " ಯುಗ-ಯುಗಗಳ ಹಣೆಬರೆಹವ ಒರಸಿ '' ಹಾರುತ್ತಿದ್ದರೆ, ಈ ಬೆಕ್ಕು " ಹಾಲಿನ ಗಡಿಗೆಯ ತಳವನು ಒರಸಿ " ಹಾರುತ್ತಿದೆ. ಮೂಲ ಕವನದ ಘನತೆಯ ಅಣಕವು ಈ ಅಣಕವಾಡಿನ ಪಂಕ್ತಿಪಂಕ್ತಿಯಲ್ಲಿ ಸಹಜರಮ್ಯವಾಗಿ ಕಂಡು ಬರುತ್ತದೆ. " ಹೊಸಗಾಲದ ಹಸುಮಕ್ಕಳ ಹರಸಿ. " ಕಾಲಪಕ್ಷಿಯು ಹಾರುತ್ತಿದ್ದರೆ, ಈ ಬೆಕ್ಕು " ಬಿಸಿ ಹಾಲಲಿ ತುಸು ಮಜ್ಜಿಗೆ ಬೆರಸಿ " ಹಾರುತ್ತಲಿದೆ ! ಹೀಗೆ ಈ ಇಡಿಯ ಅಣಕವಾಡು ಒಂದು ಪರಿಪೂರ್ಣ ವ್ಯಂಗ್ಯ ಕವನವಾಗಿದೆ. ಬೇಂದ್ರೆಯವರಲ್ಲಿ ಜೀವನವನ್ನು ಗಂಭೀರವಾಗಿ ನೋಡುವ ದಾರ್ಶನಿಕದೃಷ್ಟಿಯೊಡನೆ, ಲಘುವಾಗಿ ನೋಡಿ ನಕ್ಕು-ನಗಿಸುವ ಮನೋವೃತ್ತಿಯೂ ಇದೆ. ತಮ್ಮ ಒಂದು ಗಂಭೀರ ಕವನಕ್ಕೆ ತಾವೇ ಅಣಕವಾಡನ್ನು ಬರೆದದ್ದು ಅವರ ಹುಟ್ಟು ವಿನೋದದೃಷ್ಟಿಗೆ ಉದಾಹರಣೆಯಾಗಿದೆ.

ಇದರಂತೆ " ಒರೆದಾ ತಗಣಿ ಒರೆದಾ " ಎಂಬುದೂ ಒಂದು ನಕ್ಕು-ನಗಿಸುವ ಅಣಕವಾಡಾಗಿದೆ. " ವರದಾ ಕಂಚೀವರದಾ " ಎಂಬ ಕವಿತೆಗೆ ಪ್ರತಿಯಾಗಿ ತಾವೇ ಬರೆದ ಅಣಕವಾಡಾಗಿದೆ ಆ ಕವನ.

" ಅವರ್ಣನೀಯ ಅರ್ವಾಚೀನ ಸೌಂದರ್ಯ " ಎಂಬ ಕವನ ಬೇಂದ್ರೆಯವರ ಒಂದು ಉತ್ತಮ ವಿಡಂಬಕ ಕವಿತೆ. ಪ್ರಾಚೀನ ಕವಿಗಳು ಸ್ತ್ರೀ ಸೌಂದರ್ಯ

ವನ್ನು ಬಿಟ್ಟೂಬಿಡದೆ, ಬೇಸರಿಯದೆ ಬಣ್ಣಿಸಿದರು. ಸ್ತ್ರೀಯ ಕಮಲನಯನ. ಕೇಶರಾಶಿ, ಬಿಂಬಾಧರ, ಕುಂದರದನ, ಕಡಪು, ಪಾದಪದ್ಮ ಮೊದಲಾದುವು ಗಳನ್ನು ಎಷ್ಟು ವರ್ಣಿಸಿದರೂ ಹಿಂದಿನ ಕವಿಗಳು ತೃಪ್ತಿ ಹೊಂದಲಿಲ್ಲ. ಆದರೆ ಆಧುನಿಕ ವನಿತೆಯ ಅರ್ವಾಚೀನ ಸೌಂದರ್ಯವನ್ನು ಏನೆಂದು ಬಣ್ಣಿಸಲಿ ಎಂದು ಪ್ರಶ್ನಿಸಿ ಬೇಂದ್ರೆಯವರು ಈ ಕವನವನ್ನು ಹೀಗೆ ಪ್ರಾರಂಭಿಸುತ್ತಾರೆ—

ಕುರುಡಿರಲಿ ಮೆಳ್ಳಿರಲಿ ಕಪ್ಪು ಕನ್ನಡಕವಿರೆ
ನಯನಗಳನೇನು ಬಣ್ಣಿಸಲಿ ಮಣ್ಣು ?

ಅವಳ ತಲೆಯ ಚೆಲುವನ್ನು ಕವಿಯು ಏನು ತಲೆ ಬಣ್ಣಿಸಬೇಕು ? ಏಕೆಂದರೆ ಅವಳ ತಲೆ ತಿಗಳಿ ಮೇಯುವ ಹೊಲವಾಗಿ ಬಿಟ್ಟದೆ ! ತುಟಿಗಳನ್ನು ಬಣ್ಣಿಸ ಬೇಕೆಂದರೆ ತುಂಬೆಲ್ಲಾ ತಂಬುಲವು. ಇನ್ನು "ಹಲ್ಲುಗಳ ಬಣ್ಣಿಸಲೆ ?" ಎಂದು ಕವಿಯು ಕೇಳಿ ತಾನೇ ಉತ್ತರಿಸುವನು : "ಹಲ್ಲುಗಳು ನಿನ್ನವಹದೆ ?" ಗಲ್ಲಗಳ ಚೆಲುವನ್ನು ವರ್ಣಿಸಬೇಕೆಂದರೆ ಗಲ್ಲಗಳ ತಂಬಾ ಸಾರಣೆ–ಕಾರಣೆ ! ಇನ್ನು ಈ ಚೆಲುವೆಯ ಪಾದಗಳನ್ನು ಬಣ್ಣಿಸಬೇಕೆಂದರೆ ಪಾದಗಳನ್ನು ಮೊಚ್ಚೆಗಳು ಮುಚ್ಚಿ ಬಿಟ್ಟವೆ ! ಆದ್ದರಿಂದ ಪಾದಗಳನ್ನು ರವಿಯಾಗಲಿ, ಕವಿಯಾಗಲಿ ಬಣ್ಣಿಸುವುದ ಸಾಧ್ಯವಿಲ್ಲ. ಈ ಅರ್ವಾಚೀನ ಸುಂದರಿಯು ಮಾಟ ವ್ಯಂಗ್ಯಕಾವ್ಯದ ಹಾಗೆ. ಕೊನೆಗೆ ಕವಿ ಹೇಳುತ್ತಾನೆ—

ನಿನ್ನ ಮೈಯನ್ನೆಲ್ಲ ನೀನೆ ಬಣ್ಣಿಸಿಕೊಂಡೆ,
ಬೇರೆ ಬಣ್ಣನೆ ಬರಿಯ ಬಣ್ಣದಾಟ.

"ಕರಿಮರಿ ನಾಯಿ" ಬೇಂದ್ರೆಯವರ ಇನ್ನೊಂದು ವಿನೋದ ಪೂರ್ಣ ಕವಿತೆ. ಈ ಕವನದಲ್ಲಿ ವಿಡಂಬನೆಯ ಜೊತೆಗೆ ವ್ಯಂಗ್ಯಾರ್ಥವೂ ಸೊಗಸಾಗಿ ಬಂದಿದೆ. ಇಲ್ಲಿಯ ವ್ಯಂಗ್ಯಾರ್ಥವು ಹಿಂಜಿದಷ್ಟು ಸೊಗಸಾಗಿ ಅರಳುತ್ತದೆ.

ಕರಿಮರಿ ನಾಯಿ ಕುಂಯಿಗುಡುತಿತ್ತು
ಭಟ್ಟರ ಬಾಯಿ ಒಟಗುಡುತ್ತಿತ್ತು.

ಒಂದು ಮಳೆಗಾಲದ ದಿನ; ಸರಭರ ಮಳೆ ಸುರಿಯುತ್ತಲಿದೆ; ಕಾಲುವೆ ನೀರು ಹರಿಯುತ್ತಲಿದೆ. ಅಂಥ ಚಳಿಯಲ್ಲಿ ತಬ್ಬಲಿ ಕುನ್ನಿಯು ನೀರಿನಲ್ಲಿ ಈಸುತ್ತಲಿದೆ.

ಬೆಚ್ಚನ ಮನೆಯಾ ಹೊಚ್ಚಲದೊಳಗೆ
ನಿಂತರು ಭಟ್ಟರು ಹಣಕುತ ಹೊರಗೆ.

ಕುನ್ನಿಯು ಮಳಿ-ಗಾಳಿಗೆ ಹೆದರಿ ಮನೆಯ ಮೆಟ್ಟಲನ್ನೇರಿ ಬರಬೇಕೆನ್ನುವಷ್ಟರಲ್ಲಿ ಇತ್ತ ಬಾಗಿಲು ಮುಚ್ಚಿತು !

ಭಪ್ಪರೆ ಭಪ್ಪರೆ ಭಲರೆ ! ಭಟ್ಟರೋ
ಕಾಯ್ದರು ಮನೆಯನು ಏನು ದಿಟ್ಟರೋ !

" ಸರ್ವಂ ಖಲ್ವಿದಂ ಬ್ರಹ್ಮ " ಎಂದು ಒಟಗುಡುತ್ತಿರುವ ಬಾಯಿಂದಲೇ ಭಟ್ಟರು ಆ ತಬ್ಬಲಿ ನಾಯಿಮರಿಯನ್ನು ಶಪಿಸಿ ಬಾಗಿಲು ಹಾಕಿಕೊಂಡರು; ಆ ಕರಿಮರಿ ನಾಯಿ ಒಳಗೆ ಬಂದರೆ ಆಗಬಹುದಾದ ಮೈಲಿಗೆಯನ್ನು ತಪ್ಪಿಸಿ ಮನೆಯ ಮಡಿ ಯನ್ನು ಉಳಿಸಿಕೊಂಡರು !

ಕುನ್ನಿಯು ಒಳಗೇ ಬಂದೇನೆಂದಿತು;
ಭಟ್ಟರು, ಬಂದರೆ ಕೊಂದೇನೆಂದರು.

ನೋಡುವುದಕ್ಕೆ ಈ ಕವಿತೆ ಒಂದು ಅಸಹಾಯ ಕರಿಮರಿನಾಯಿಯನ್ನು ಕುರಿತು ಬರೆದದ್ದಾಗಿದ್ದರೂ ಇದರಲ್ಲಿ ಅರ್ಥ ಅನಂತವಾಗಿದೆ. ಈ ಮರಿನಾಯಿಯು ದೀನರು, ದಲಿತರು, ಬಡವರು, ಅಸ್ಪೃಶ್ಯರು ಮೊದಲಾದವರ ಪ್ರತೀಕ. ಇಂಥ ವರು ಸಮಾಜದಲ್ಲಿ ಒಳಗೆ ಬರಬೇಕೆಂದರೆ ಅವರಿಗೆಲ್ಲಿದೆ ಸ್ಥಾನ ? ಇಂಥವರು ಹೊರಗೇ ಚಳಿಯಲ್ಲಿ ಸಾಯುತ್ತಿರಬೇಕು. ಉಚ್ಚಕುಲದವರು ಎಂದು ಕರೆಯಿಸಿ ಕೊಳ್ಳುವವರು ಒಳಗೆ ಬೆಚ್ಚಗಿರಬೇಕು. ಹೀಗೆ ಸಮಾಜದ ಅನ್ಯಾಯ, ವೈಷಮ್ಯ ಗಳಿಗೆ ಹಿಡಿದ ಸುಂದರವಾದ ಕನ್ನಡಿಯಾಗಿದೆ ಈ ಕವನ. " ಗಿರಡಿ-ಬುರಡೀ ಅವರ ಸಾಮಾಜಿಕ ತತ್ತ್ವಜ್ಞಾನ" ಮತ್ತೊಂದು ಶ್ರೀ ಬೇಂದ್ರೆಯವರ ವ್ಯಂಗ್ಯ ಕವನ. ಇಲ್ಲಿ ಒಬ್ಬ ಡಾಂಭಿಕ, ಪೊಳ್ಳು ದೇಶಭಕ್ತನ ವಾಸ್ತವ ಚಿತ್ರವಿದೆ.

ಕಂತ್ರಾಟ ಬೆರ್ಕಿತನ ಬೇಕು, ಚೇಷ್ಟೆಯೇ ಇಲ್ಲದಗೆ ಎಲ್ಲಿದೆ ಪ್ರತಿಷ್ಠೆ ?
ಒಬ್ಬಿಬ್ಬ ಸಂಪಾದಕರು ಬಗಲಿಗೆ ಇರಲಿ; ಕೊನೆಗೆ ಬಾತ್ಮೀದಾರ,
ಇಲ್ಲವೋ ಬಾಯ್ಬಡಕ ಸಾಯ್ಕಲ್ ಸ್ವಾರ.
ಅನುನಾಯಿಗಳು ಬೇಕು, ಭೂ ನಾಯಿಗಳು ಬೇಕು !

ಈ ದೇ. ಭ. ಮತ್ತೂ ಹೇಗಿರಬೇಕು ? —

ಚುನಾವಣೆಯು ಕುದುರೆ ಶರ್ಯತ್ತು.
ಲಂಚಲಂಚನ್ನುಗಳ ನೀಡುತಿರಬೇಕು
ಕೋಡಗರಿಗು ಕೋಡಂಗಿಗಳಿಗೂ.

ಇಂಥ ನಾಯಕ ಮತ್ತೂ ಏನು ಮಾಡುತ್ತಿರಬೇಕು ? — ಕೇಳಿ :

ಮುಂಗಾಲು ಪುಟಿಗೆಯಲಿ ಮುನ್ನುಗ್ಗುತ್ತಿರಬೇಕು.
ಇಲ್ಲವೇ ದೊಡ್ಡ ಹುಲಿಗಳ ಬಾಲ ಎತ್ತಿ ಹಿಡಿದಿರಬೇಕು.
ಅಂತೂ ಏನು ? ಅಪ್ಪಾಡಿ ಎಂದೆನಿಸಿಕೊಂಡರೂ
ಅಡ್ಡೀ ಏನು ? ಪೇಪರಿನ ದೊಡ್ಡ ಹೆಡ್ಡಿಂಗಿನಲಿ
ಶಾಯಿನ್ ಆಗುತಿರಬೇಕು.

ಹಲವು ಏಕಾಂಕಗಳಲ್ಲಿಯೂ ಶ್ರೀ ಬೇಂದ್ರೆಯವರ ಹಾಸ್ಯ ಸೂಸಿ ಹರಿದಿದೆ. ಶ್ರವ್ಯಕಾವ್ಯದಲ್ಲಿಯಂತೆ ದೃಶ್ಯದಲ್ಲಿಯೂ ಅವರ ವಿನೋದದೃಷ್ಟಿ ಅಭಿವ್ಯಕ್ತವಾಗಿದೆ. ಉದಾಹರಣೆಗೆ " ಜಾತ್ರೆ " ಏಕಾಂಕ ನೋಡೋಣ. ಇದರಲ್ಲಿ ಹುಚ್ಚಾಪುರದ ದೊರೆಯ ವಿಕ್ಷಿಪ್ತ ಸ್ವಭಾವದ ಸುಂದರ ಚಿತ್ರಣವಿದೆ. ನಿಜವಾಗಿ ಊರಿನಲ್ಲಿ ಪ್ಲೇಗಿನ ಹಾವಳಿ ಹೆಚ್ಚಾಗಿ ಜನ ಸಾಯುತ್ತಿದ್ದರೂ, ದೊರೆ ಹೇಳದ ವಿನಾ ಊರಲ್ಲಿ ಪ್ಲೇಗು ಇಲ್ಲ ! ಆದ್ದರಿಂದ ಊರಿನಲ್ಲಿ ಜಾತ್ರೆ ಪ್ರತಿವರ್ಷದಂತೆ ವಿಜೃಂಭಣೆಯಿಂದ ಜರುಗಲೇಬೇಕು ! ಊರಿನಲ್ಲಿ ಪ್ಲೇಗಿನ ಇಲಿಗಳು ಬೀಳುತ್ತಿವೆ ಎಂದು ಡಾಕ್ಟರರು ಹೇಳಿದಾಗ ದೊರೆ ಹೇಳುತ್ತಾನೆ— " ಮುಂಬಯಿಯಿಂದ ಸರಕಾರೀ ಉತ್ತರ ಬರಲಿ. ಸರಕಾರ ಹೇಳಿದ್ದು ಸತ್ಯ. " ಕೆಲಹೊತ್ತಿನ ಮೇಲೆ ಮುಂಬಯಿ ಸರಕಾರದಿಂದ ತಂತಿ ಬರುತ್ತದೆ— " ಇಲಿಗಳು ಪ್ಲೇಗಿನವು ನಿಜ " ಎಂದು. ಆಗ ದೊರೆ ಏನು ಹೇಳುತ್ತಾರೆ ? —" ಹರಿದು ಹಾಕಿರಿ ಆ ಕಾಗದವನ್ನು. ಇಲ್ಲಿಯ ಇಲಿಯದು ದಿಲ್ಲಿಗೇನು ತಿಳಿಯುತ್ತದೆ ? ಊರ ಹೊರಗಿನ ಒಡ್ಡರು ಇರುವರೋ, ಎಲ್ಲರೂ ಸತ್ತರೋ ? ಅವರು ದಿನಾಲು ಇಲಿಗಳನ್ನೇ ತಿನ್ನುವರಲ್ಲವೇ ? ಅದೇ ನಿಜವಾದ ಪರೀಕ್ಷೆ " !

ಹೀಗೆಯೇ ಈ ದೃಶ್ಯದಲ್ಲಿ ದೊರೆ, ಕಾವಭೂರಿ ಮತ್ತು ಡಾಕ್ಟರರ ಸಂಭಾಷಣೆ ಅತ್ಯಂತ ಹಾಸ್ಯಮಯವಾಗಿ ನಡೆಯುತ್ತದೆ. ಇದರಲ್ಲಿ ಹುಚ್ಚಮಹಾರಾಜನೊಬ್ಬನ ನಿರಂಕುಶಪ್ರಭುತ್ವದಿಂದ ದೇಶಕ್ಕೆ ಎಂಥ ಅನ್ಯಾಯವಾಗಬಹುದೆಂಬ ಧ್ವನಿಯೂ ಅಲ್ಲಲ್ಲಿ ಸೂಚ್ಯವಾಗಿ ಬಂದಿದೆ. ಕೊನೆಗೆ ದೊರೆಗೇ ಪ್ಲೇಗುರೋಗ ಅಂಟಿದಮೇಲೆ ಅವನಿಗೆ ಜ್ಞಾನೋದಯವಾಗಿ ದೊರೆ ಹೇಳುತ್ತಾನೆ— " ನಾನು ಹೇಳುತ್ತೇನೆ — ಇದು ಪ್ಲೇಗು ! " ಆಮೇಲೆ ಜನರಿಗೆ ಊರುಬಿಡಲು ದೊರೆಯ ಆಜ್ಞೆಯಾಗುತ್ತದೆ. ಹೀಗೆ " ಜಾತ್ರೆ " ಏಕಾಂಕ ಶ್ರೀ ಬೇಂದ್ರೆಯವರ ಸೊಗಸಾದ ಪ್ರಹಸನಗಳಲ್ಲಿ ಒಂದು.

" ದೆವ್ವನ ಮನೆ " ಶ್ರೀ ಬೇಂದ್ರೆಯವರ ಮತ್ತೊಂದು ನಗೆನಾಟಕ. ಇದರಲ್ಲಿ ವಿನೋದದ ಜೊತೆಗೆ ವಿವೇಕವೂ ಇದೆ. ಶ್ರೀ ಬೇಂದ್ರೆಯವರೇ ಮುನ್ನುಡಿಯಲ್ಲಿ

ಹೇಳಿದಂತೆ — “ ಅರಿತು ಬಾಳಿದರೆ ದೇವರ ಮನೆ; ಮರೆತು ಬಾಳಿದರೆ ದೆವ್ವನ ಮನೆ. ” ಅತ್ತೆ-ಸೊಸೆಯರ ತಿಕ್ಕಾಟದಲ್ಲಿ ಸುಗ್ಗಾದ ಸತ್ಯವಂತರಾಯನ ವಾಸ್ತವ ಚಿತ್ರವು ಇಲ್ಲಿ ಸೊಗಸಾಗಿ ಮೂಡಿಬಂದಿದೆ. ಅತ್ತೆ-ಸೊಸೆಯರ ನಿತ್ಯಜಗಳ ದಿಂದ ಮನೆ “ ದೆವ್ವನ ಮನೆ ” ಆಗಿಹೋಗಿಬಿಟ್ಟದೆ! ಅನೇಕ ವೈದ್ಯ, ಡಾಕ್ಟರ್, ಜ್ಯೋತಿಷಿ, ಮಾಂತ್ರಿಕ, ಹಕೀಮ ಮೊದಲಾದವರು ಬಂದು ಹೋದರೂ ಈ ಮನೆಯ ವಾತಾವರಣವನ್ನು ಬದಲಿಸುವುದು ಅವರಿಂದ ಸಾಧ್ಯವಾಗುವುದಿಲ್ಲ. ಕೊನೆಗೆ ಮನೆಯಲ್ಲಿಯ ಜನ ತಾವೇ ಎಚ್ಚತ್ತು, ಜಗಳವನ್ನು ಬಿಟ್ಟು, ಸಮರಸ ದಿಂದ ಜೀವಿಸಹತ್ತಿದೊಡನೆಯೆ ದೆವ್ವನ ಮನೆ ಪರಿವರ್ತನ ಹೊಂದಿ ದೇವರ ಮನೆ ಆಗುತ್ತದೆ. ಕೇವಲ ಒಂದು ಮನೆ ಮಾತ್ರವಲ್ಲ; ಭಾರತ ಎಂಬ ಈ ಮಹಾ ಮನೆಯೇ ದೇವರ ಮನೆ ಆಗಲಿ ಎಂಬ ಧ್ವನಿಯೂ ಈ ಏಕಾಂಕದಲ್ಲಿ ಮೂಡಿ ಬಂದಿದೆ.

ಅಲ್ಲದೆ “ ಹಳೆಯ ಗೆಣೆಯರು, ” “ ತಿರುಕರ ಪಿಡುಗು ” ಮೊದಲಾದ ಚಿಕ್ಕ ಪ್ರಹಸನಗಳಲ್ಲಿಯೂ ಶ್ರೀ ಬೇಂದ್ರೆಯವರ ವಿನೋದದೃಷ್ಟಿ ವಿವಿಧ ರೀತಿ ಯಲ್ಲಿ ವ್ಯಕ್ತವಾಗಿದೆ.

ಶ್ರೀ ಬೇಂದ್ರೆಯವರೇ ಹೇಳಿದಂತೆ— “ ನಗೆ ಎರಡು ಬಗೆ : ಒಂದು ಕೊಲ್ಲುವದು, ಒಂದು ಕಾಯುವದು. ಮಾನವಹೃದಯಸಾಗರಮಂಥನದಲ್ಲಿ ಉಂಟಾದ ಈ ಎರಡು ಬಗೆಯ ನಗೆಗಳಲ್ಲಿ ಒಂದು ವಿಷ, ಒಂದು ಅಮೃತ. ಅಮೃತಮಯವಾದ ನಗೆಯು “ ನಕ್ಕು ನಗಿಸುವಾ ನಗೆ; ಲೇಸು-ನಗೆ; ರಸ-ನಗೆ. ” ಇಂಥ ರಸ-ನಗೆಯು ಶ್ರೀ ಬೇಂದ್ರೆಯವರ ಸಾಹಿತ್ಯಸೃಷ್ಟಿಯಲ್ಲಿ ನಿರ್ಮಿತ ವಾಗಿದ್ದು ಅದು ಸಮಾಜದ ರೋಗ-ರುಜಿನಗಳನ್ನು ನಿವಾರಿಸಿ, ತುಷ್ಟಿ-ಪುಷ್ಟಿ ಗಳನ್ನು ಉಂಟು ಮಾಡಬಲ್ಲ ಶಕ್ತಿಯುಳ್ಳದ್ದಾಗಿದೆ ಎಂದು ಹೇಳಿದರೆ ಅತಿಶಯೋಕ್ತಿ ಯಲ್ಲ.

§ § § §

೧೬

# ಕನ್ನಡಕ್ಕೆ ಬೇಂದ್ರೆ ವಾಙ್ಮಯದ ಕಾಣಿಕೆ

ರಂ. ಶ್ರೀ. ಮುಗಳಿ

ಸಮಕಾಲೀನ ಕವಿಯನ್ನು ಕುರಿತು ಮೌಲ್ಯಮಾಪನಪೂರ್ಣ ಲೇಖನವನ್ನು ಬರೆಯುವುದು ಕಷ್ಟ ಎಂದು ಹೇಳುವುದುಂಟು. ಯಾಕೆಂದರೆ ಅವನು ಇನ್ನೂ ಬರೆಯುತ್ತಿರುತ್ತಾನೆ. ಎಷ್ಟು ಸಾಗಿದರೂ ಬೆಳೆಯುತ್ತಿರುತ್ತಾನೆ. ಅವನ ವಾಙ್ಮಯ ಸಮಷ್ಟಿಯೆಲ್ಲವೂ ಮೌಲ್ಯಮಾಪನದ ಹಿಡಿತಕ್ಕೆ ಸಿಕ್ಕುವುದು ಸಾಧ್ಯವಿಲ್ಲ. ಎರಡನೆಯದಾಗಿ ಅವನ ವಾಙ್ಮಯ ಸಮೀಕ್ಷೆಯನ್ನು ಯಾರು ಮಾಡಿದ್ದಾರೆ ಎಂಬುದನ್ನು ಜನ ನೋಡಿ ಅರ್ಥಮಾಡುತ್ತದೆ, ಏನನ್ನು ಅವರು ಹೇಳಿದ್ದಾರೆ ಎಂಬುದನ್ನಲ್ಲ. ಇದರಿಂದ ವಿಮರ್ಶೆ ಅಡ್ಡದಾರಿ ಹಿಡಿಯುತ್ತದೆ. ಮೌಲ್ಯಮಾಪನ ಕಷ್ಟ ಎಂದು ಹೇಳುವಾಗ ಈ ಕಟುಅನುಭವ ಕಣ್ಣ ಮುಂದಿರುತ್ತದೆ. ಮೂರನೆಯದಾಗಿ ಆ ಕವಿಯ ಪ್ರತಿಕ್ರಿಯೆಯೇನಾದೀತು ಎಂಬ ಭೀತಿ, ಸಂಕೋಚಗಳು ಸಮೀಕ್ಷೆಗೆ ಸಂಕೋಲೆ ತೊಡಿಸುತ್ತವೆ. ಇಷ್ಟೆಲ್ಲ ಗೊತ್ತಿದ್ದರೂ ನಾನು ಈ ವಿಷಯವನ್ನು ಎತ್ತಿಕೊಂಡಿದ್ದೇನೆ. ಈ ವಿಷಯದ ವ್ಯಾಪ್ತಿಯನ್ನು ನೆನೆದರೆ ಒಂದು ಹೊತ್ತಗೆಯನ್ನು ಬರೆಯಬೇಕಾದೀತು. ನಾನಿಲ್ಲಿ ಲೇಖನ ಮಿತಿ ಮತ್ತು ನನ್ನ ಸಮಯಮಿತಿ ಎರಡನ್ನೂ ಗಮನದಲ್ಲಿಟ್ಟು ಸಂಕ್ಷಿಪ್ತವಾಗಿ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ.

ಬೇಂದ್ರೆ ವಾಙ್ಮಯ ಪ್ರಧಾನವಾಗಿ ಕವನರೂಪದಲ್ಲಿದೆ. ಜೊತೆಗೆ ಪ್ರಬಂಧ, ವಿಮರ್ಶೆ, ಸಣ್ಣಕಥೆ, ನಾಟಕ ಮುಂತಾದ್ದರಲ್ಲಿಯೂ ಹೆಚ್ಚುಕಡಿಮೆ ಪ್ರಮಾಣದಲ್ಲಿದೆ. ಬರೆಯದೆ ಉಳಿದ ಇಲ್ಲವೆ ಬರೆಯಲು ಆಗದ ಸ್ವರೂಪದಲ್ಲಿ ಅದು ಮಾತಿನ ಪ್ರವಾಹವಾಗಿ ಸಾಗಿದೆ. ಈ ಅರ್ಥದಲ್ಲಿ ಬೇಂದ್ರೆ ವಾಙ್ಮಯದ ಎಷ್ಟೋ ಭಾಗವು ಮೂಲ ಅರ್ಥದಲ್ಲಿ ವಾಕ್+ಮಯವಾಗಿ ಉಳಿದಿದೆ.

ಬೇಂದ್ರೆ ವಾಙ್ಮಯದ ಮೂಲಪ್ರೇರಣೆ ಮತ್ತು ಉಗಮಸ್ಥಾನ ಸರ್ವಸ್ಪರ್ಶಿಯಾದ, ಆಳವಾದ ಜೀವನ ರಸಿಕತೆಯಲ್ಲಿದೆ, ಮೂಲಕ್ಕೆ ಕೈಹಾಕಿ ಅನುಭವಿಸಿ

ಕಂಡು ಹಿಡಿಯಬೇಕೆನ್ನುವ ಸರಸ ತಾತ್ವಿಕತೆಯಲ್ಲಿದೆ. ರಸಿಕತೆ ಮತ್ತು ತಾತ್ವಿಕತೆಗಳ ವಿಶಿಷ್ಟಪಾಕವೆಂದರೆ ಬೇಂದ್ರೆ ವ್ಯಕ್ತಿತ್ವ. ಈ ವ್ಯಕ್ತಿತ್ವದಲ್ಲಿ ನಿಶಿತಮತಿಯ ತರ್ಕವಿದೆ, ಅನುಭವದ ಅರ್ಕವಿದೆ; ಸಾಮಾನ್ಯ ಮಾನವನ ಸುಖದುಃಖದ ಅರಿವಿದೆ, ಮಹಾಮಾನವನ ದಿವ್ಯದರ್ಶನದ ಕುರುಹಿದೆ. ಹಳೆಯ ಮತ್ತು ಹೊಸ ಶಾಸ್ತ್ರಗಳ ಕುತೂಹಲವಿದೆ. ಶಬ್ದಗಳ ಹುಟ್ಟುಕತೆಗಳ ಹೊಸ ಪುರಾಣವಿದೆ, ಚಮತ್ಕಾರವಿದೆ. ಬೇಂದ್ರೆ ವ್ಯಕ್ತಿತ್ವದ ಈ ಎಲ್ಲ ಪರಿಗಳ ಒಟ್ಟು ಕೂಟದ ಪಡಿನೆಳಲೆಂದರೆ ಬೇಂದ್ರೆ ವಾಙ್ಮಯ. ಅಂತೇ ಈ ವಾಙ್ಮಯವು ಯಾವಾಗಲೂ ಪೂರ್ತಿಯಾಗಿ ಅರ್ಥವಾಗುವುದೆಂದಾಗಲಿ ಎಲ್ಲರಿಗೆ ಸ್ವಾರಸ್ಯವೆಂದು ತೋರುವುದೆಂದಾಗಲಿ ಹೇಳುವದು ಸಾಧ್ಯವಿಲ್ಲ. ಬೇಂದ್ರೆಯವರೇ ಭಾಷ್ಯಕಾರರಾದಾಗ ಈ ವಾಙ್ಮಯದ, ವಿಶೇಷವಾಗಿ ಪ್ರತೀಕಾತ್ಮಕ ಕಾವ್ಯದ ಒಂದೆರಡು ಪದರುಗಳು ತಿಳಿಯುತ್ತವೆ. ಒಳಒಳಗಿನ ಪದರು ಇನ್ನೂ ಹಾಗೇ ಉಳಿಯುತ್ತದೆ.

ಬೇಂದ್ರೆಕಾವ್ಯವೊಂದನ್ನೇ ಎತ್ತಿಕೊಂಡು ನೋಡಿದರೆ ಹೊಸಗನ್ನಡದ ಪ್ರಾರಂಭಕಾಲದಲ್ಲಿ ಅದು ಭಾವಗೀತೆಯ ಸ್ವಚ್ಛಂದ ಸಂಪತ್ತಿಯನ್ನು ಒದಗಿಸಿತು ಮಾತ್ರವಲ್ಲ, ಕನ್ನಡದ ಪೂರ್ವಪರಂಪರೆಯಿಂದ ಎತ್ತಿ ತಂದು ಸಾಣೆ ಹಿಡಿದು ಹೊಸ ಬೆಳಕಿನ ಹೊಸ ತಿಳಿವಿನ ಕನ್ನಡಿಯಂತಾದ ಶಬ್ದಸಂಪತ್ತಿಯನ್ನು ಒದವಿಸಿತು. ಆಗ ವಿಚಿತ್ರವೆಂದು ತೋರಿದ ಶಬ್ದಗಳು ಈಗ ನಡೆಯುವ ನಾಣ್ಯಗಳಾಗಿವೆ. ಬೇಂದ್ರೆ ವ್ಯಕ್ತಿತ್ವದ ಪ್ರಭಾವಕ್ಕೊಳಗಾಗಿ ಒಂದು ಹೊಸ ಕವಿಗಳ ಗುಂಪು ತಲೆಯೆತ್ತಿತು. ಆದರೆ ಬೇಂದ್ರೆ ಮರುದನಿಗಳಾಗಿ ಅವರು ಮುಂಬರಲಿಲ್ಲ. ಪ್ರತಿಯೊಬ್ಬ ಕವಿ ತನ್ನದೊಂದು ವ್ಯಕ್ತಿತ್ವವನ್ನು ಸಂಪಾದಿಸಿಕೊಳ್ಳಲು ಹವಣಿಸಿದನು.

ಕನ್ನಡ ಸಾಹಿತ್ಯದ ಸಾವಿರಾರು ವರ್ಷಗಳ ಇತಿಹಾಸದಲ್ಲಿ ಬೇಂದ್ರೆಕಾವ್ಯದ ಸ್ಥಾನವೇನು ಎಂಬ ಪ್ರಶ್ನೆಗೆ ಬಹುಶಃ ಸಮರ್ಪಕವಾದ ಉತ್ತರವು ಇನ್ನು ನೂರು ವರ್ಷದ ಮೇಲೆ ದೊರೆಯಬಹುದು. ಅಷ್ಟು ದೂರದಿಂದ ನೋಡಿದಾಗ ಬೇಂದ್ರೆ ವಾಙ್ಮಯದ ಸುತ್ತು ದಂತಕಥೆಗಳಾಗಲಿ ರಾಗದ್ವೇಷಗಳಾಗಲಿ ತೊಡರದಿದ್ದರೆ ತಿಳಿವಳಿಕೆಯುಳ್ಳ ಜನ ಸರಿಯಾಗಿ ಬೆಲೆಕಟ್ಟುವರು. ನನ್ನ ಮಟ್ಟಿಗೆ ಇಂದಿನ ಒಬ್ಬ ವಿಮರ್ಶಕನೆಂಬ ದೃಷ್ಟಿಯಿಂದ ಹೇಳುವುದಾದರೆ ಬೇಂದ್ರೆ ಕಾವ್ಯದಲ್ಲಿ ಹಿಂದೆಂದೂ ಕಾಣದಿದ್ದ ಒಂದು ಸಮನ್ವಿತವಾದ ಜೀವನದರ್ಶನವಿದೆ, ವಿಶ್ವಪ್ರಜ್ಞೆ ಇದೆ, ನಿರ್ಮಿತಿಯ ಸಹಜ ಸಂಪನ್ನತೆಯಿದೆ, ವಿಪುಲಾರ್ಥ ವೈಭವವಿದೆ. ಈ ಕಾವ್ಯದಲ್ಲಿ ಆಗಾಗ ತಾತ್ವಿಕತೆಯ ಅಥವಾ ಅನುಭಾವಿಕತೆಯ ಆವಿಷ್ಕಾರ ಹೆಚ್ಚಾಗಿದೆ. ಅದರಿಂದ ಅದಕ್ಕೆ ಬೆಡಗಿನ ವಚನದ ಸ್ವರೂಪ ಬಂದಿದೆ. ಕೆಲವು ಸಲ ಬೇಂದ್ರೆ ಕಾವ್ಯಶೈಲಿಯಲ್ಲಿ ಕ್ಲಿಷ್ಟತೆ ಕಂಡು ಬರುತ್ತದೆ. ಪ್ರಾಸಮೋಹವು ಮೋಹಿಸಿಯಂತಾಗಿ ಮನ ಸೆಳೆಯುತ್ತದೆ. ಆದರೆ ಒಟ್ಟಿನಲ್ಲಿ ಅದರ ಸವಿ ಅಪ್ರತಿಮವೆಂದೇ ಹೇಳಬೇಕು.

ಭಾವಗೀತೆಯ ವಿಷಯವೈವಿಧ್ಯ ಮತ್ತು ಶೈಲಿ, ಛಂದಸ್ಸುಗಳ ವೈವಿಧ್ಯ ಮತ್ತು ಅವುಗಳಲ್ಲೆಲ್ಲ ಕಂಡು ಬಂದಿರುವ ಪ್ರಗಲ್ಭತೆ–ಇವು ಬೇಂದ್ರೆಕಾವ್ಯದ ವೈಶಿಷ್ಟ್ಯವನ್ನು ಸಾರುತ್ತವೆ. 'ಭಾವಗೀತೆ'ಯನ್ನು ಕುರಿತು ಅವರು ರಚಿಸಿದ ಭಾವಗೀತೆ ಇದಕ್ಕೆ ಉತ್ತಮ ನಿದರ್ಶನವಾಗಿದೆ.

'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ
ಮುಸೆದ ಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸಾ
ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸಾ'

ಈ ಪ್ರಾರಂಭದ ಪಂಕ್ತಿಗಳ ಮೂಲಕ ಕವಿ, ನಮ್ಮನ್ನು ತನ್ನ ಪ್ರಗಲ್ಭ ನಿರ್ಮಿತಿಯ ಲೋಕದಲ್ಲಿ ತೆರೆದೊಯ್ದು ಬಿಡುತ್ತಾನೆ. ಎಲ್ಲವೂ ಅರ್ಥವಾಗದೆ ಏನೋ ಹೊಳೆದಂತಾಗಿ ನಾವು ದಂಗುಬಡಿದು ಸಾಗುತ್ತೇವೆ. ಸೂಕ್ಷ್ಮಕ್ಕಿಂತ ಸೂಕ್ಷ್ಮವಾದ ಕಲ್ಪನೆಗಳು ನಮ್ಮ ಮುಂದೆ ನುಗ್ಗಿ ಬರುತ್ತವೆ. ಜೊತೆಗೆ ಅವುಗಳ ನಾದ ಲಯಗಳೂ ನಮ್ಮನ್ನು ಸೆರೆಹಿಡಿಯುತ್ತವೆ. ಇನ್ನೊಂದು ಓದಿನಲ್ಲಿ ಈ ಕವನದ ಅರ್ಥಪುಷ್ಟಿಯನ್ನೂ ಕಲ್ಪನಾಸೂಕ್ಷ್ಮತೆಯನ್ನೂ ಅರಿತುಕೊಂಡ ಮೇಲೆ ಒಂದು ಅಗಾಧವಾದ ರಸಾನುಭವದ ಸಂತೃಪ್ತಿ ನಮಗೆ ಉಂಟಾಗುತ್ತದೆ. ಬೇಂದ್ರೆ ಕಾವ್ಯದ ಈ ವೈಶಿಷ್ಟ್ಯವು ಕನ್ನಡಕ್ಕೆ ದೊರೆತ ಅಪೂರ್ವವಾದ ಕಾಣಿಕೆಯೆಂದರೆ ತಪ್ಪಲ್ಲ. ಬೇಂದ್ರೆ ಕಾವ್ಯದಲ್ಲಿ ಹೊಸ ಛಂದಸ್ಸಿನ ಅನೇಕ ಪ್ರಯೋಗಗಳಿವೆ, ಹೊಸ ಜೋಡಣೆಗಳೂ ಇವೆ. ಅವುಗಳಲ್ಲಿ ಮುಖ್ಯವಾಗಿ ಜನಪದ ಸಾಹಿತ್ಯದ ತರತರದ ಲಯಗಳ ಮತ್ತು ಧಾಟಿಗಳ ಬಳಕೆ ಮತ್ತು ಹೊಸ ಮೇಳವಿಕೆ ಕನ್ನಡಕ್ಕೆ ದೊರೆತ ಇನ್ನೊಂದು ಕಾಣಿಕೆ. ಜಾನಪದ ದಾಟಿಯಲ್ಲಿ ಸಾಮಾನ್ಯ ಮಾನವನ ಸುಖ ದುಃಖಗಳನ್ನು ಬೇಂದ್ರೆಕಾವ್ಯವು ಸರಸವಾಗಿ ಚಿತ್ರಿಸಿರುವದಲ್ಲದೆ ಕೆಲವದರಲ್ಲಿ ತನ್ನ ಪ್ರತೀಕಸಾಮರ್ಥ್ಯವನ್ನು ಸಹಜಸ್ಫೂರ್ತವಾಗಿ ಪಡೆದಿರುತ್ತದೆ. ಇದಕ್ಕೆ 'ಕುಣಿಯೋಣ ಬಾರ' ಕವನವು ಶ್ರೇಷ್ಠ ಉದಾಹರಣೆಯಾಗಿದೆ. ಮೊದಮೊದಲು ಇದು ಒಂದು ನೃತ್ಯಕ್ಕೆ ಕರೆ ಕೊಡುವ ಜಾನಪದ ಶೃಂಗಾರ ಗೀತವೆಂದು ತೋರಿ, ಓದುತ್ತ ಹೋದ ಹಾಗೆ ಏರುವ ಕ್ರಮದಲ್ಲಿ ತಲ್ಲೀನತೆಯನ್ನೂ ತಾತ್ವಿಕತೆಯನ್ನೂ ಒದವಿಸುತ್ತದೆ. ಕೊನೆಗೆ ಒಂದು ಜೀವನದರ್ಶನವೇ ಮೂರ್ತರೂಪತಾಳಿ ನಿಲ್ಲುತ್ತದೆ.

ಬೇಂದ್ರೆಕಾವ್ಯ ವಿಶಿಷ್ಟವಾದ ಅರ್ಥದಲ್ಲಿ ಭಾವಗೀತಾತ್ಮಕವಾದದ್ದು. ಭಾವ ಗೀತೆಯಲ್ಲಿರುವ ಕೇಂದ್ರಭಾವ, ಅದರ ಸ್ವಯಂಪೂರ್ಣವಾದ ರಸೋತ್ಕಟ ನಿರೂಪಣ ಅದರಲ್ಲಿದ್ದರೂ ಭಾವಗೀತೆಯ ವೈಯಕ್ತಿಕತೆ ಅದರಲ್ಲಿ ಕಡಿಮೆ. ಕವಿ ತನ್ನ

ವೈಯಕ್ತಿಕ ಅನುಭವಗಳನ್ನು ನೇರವಾಗಿ ಭಾವವಿವಶವಾಗಿ ಬಣ್ಣಿಸುವದಕ್ಕಿಂತ ಯಾರೋ ಯಾರಿಗೋ ಹೇಳಿದಂತೆ ಎಂಬ ನಾಟ್ಯಸ್ವರೂಪ ಕೊಟ್ಟು ವೈಯಕ್ತಿಕ ಅನುಭವವನ್ನು ಮರೆಮಾಡಿ ಇಲ್ಲವೆ ಮರೆತುಬಿಟ್ಟು ನಿರೂಪಿಸುತ್ತಾನೆ. ಹೀಗಾಗಿ ವಿಷಯ ಸಾರ್ವತ್ರಿಕವಾಗುತ್ತದೆ. ಕೆಲವು ಕವನಗಳು ಬರೆಯಬೇಕೆಂದು ಸಂಕಲ್ಪಿಸಿ ಬರೆಯದೆ ಉಳಿದ ನಾಟಕಗಳಲ್ಲಿಯ ಗೀತಗಳಾಗಿವೆ. ಬೇಂದ್ರೆಕಾವ್ಯ ಈ ರೀತಿ ತನ್ನ ವೈಶಿಷ್ಟ್ಯ ಪಡೆದಿದೆ ಎಂಬದು ನೆನೆಯತಕ್ಕ ಸಂಗತಿ. ಅದರಲ್ಲಿ ವಿಡಂಬನೆ, ಅಣಕವಾಡು, ನವ್ಯಜಾತಿಯ ಕವನ ಇವಕ್ಕೂ ಇಂಬು ದೊರೆತಿದೆ. ಇವುಗಳಲ್ಲಿಯೂ ಬೇಂದ್ರೆ ತಮ್ಮ ಮೇಲ್ಮೆಯನ್ನು ಮೆರೆದಿದ್ದಾರೆ.

ಬೇಂದ್ರೆಯವರು ಭಾವಗೀತೆಗಳನ್ನು ಹೇರಳವಾಗಿ ರಚಿಸಿದ್ದಾರೆ, ರಚಿಸು ತ್ತಿದ್ದಾರೆ. ಜೊತೆಗೆ ಸುದೀರ್ಘ ಕವನಗಳನ್ನೂ ಬರೆದಿದ್ದಾರೆ. ಅವರ ಕಾವ್ಯ ರಚನೆಯ ಪ್ರಾರಂಭಕಾಲದಲ್ಲಿ ಕೃಷ್ಣಾಕುಮಾರಿ ಎಂಬ ದೀರ್ಘಕವನವನ್ನು ಅವರು ಬರೆದರು. ಆಮೇಲೆ ‹ ಮೂರ್ತಿ, ಪಾಡು, ಕರುಳಿನ ವಚಗಳು, ಸಖೀಗೀತೆ ಈ ದೀರ್ಘಕವನಗಳನ್ನು ಅವರು ಬರೆದಿದ್ದಾರೆ. ‹ ಸಖೀಗೀತೆ › ಅವರ ಆತ್ಮ ಚರಿತ್ರೆಯ ಕೆಲ ಭಾಗವನ್ನು ಒಳಗೊಂಡು ಸಹಜ ಸುಂದರ ಕೃತಿಯಾಗಿ ಹೊರ ಪಟ್ಟಿದೆ. ಇಷ್ಟಾದರೂ ಅವರಿಂದ ಸುದೀರ್ಘ ಮಹಾಕೃತಿಯನ್ನು ಕನ್ನಡ ರಸಿಕ ವೃಂದವು ನಿರೀಕ್ಷಿಸುತ್ತಲಿದೆ.

ಬೇಂದ್ರೆ ವಾಙ್ಮಯದಲ್ಲಿ ವಿಚಾರ, ವಿಮರ್ಶೆ, ಸಂಶೋಧನಪರವಾದ ಹಲ ವಾರು ಪ್ರಬಂಧಗಳಿದ್ದು ಅವುಗಳಲ್ಲಿ ಅವರ ಮೂಲಗಾಮಿಯಾದ ವಿಚಾರಸರಣಿ, ವ್ಯಾಸಂಗಪೂರ್ಣವಾದ ವಿಮರ್ಶೆ, ವೇಧಕವಾದ ಸಂಶೋಧಕಬುದ್ಧಿ ಇವು ಎದ್ದು ಕಾಣುತ್ತವೆ. ಅವರ ನಾಟಕಗಳು ಕೆಲವೇ ಆದರೂ ಅತ್ಯಂತ ಮಾರ್ಮಿಕವಾದ ಸಮಾಜ ಚಿತ್ರಣವನ್ನು ಒಳಗೊಂಡಿವೆ. ಅವರ ವಿನೋದ ಪದ್ಧತಿಯಲ್ಲಿ ಮೌಲಿಕ ವಾದ ಆದರೆ ಸೂಕ್ಷ್ಮವಾದ ವಿಡಂಬನೆಯಿರುತ್ತದೆ. ಈ ಬಗೆಯಲ್ಲಿ ಯಾವ ರೂಪ ದಲ್ಲಿದ್ದರೂ ಬೇಂದ್ರೆವಾಙ್ಮಯವು ಕನ್ನಡ ಸಾಹಿತ್ಯಕ್ಕೆ ಕೊನೆಬಾಳತಕ್ಕ ಕಾಣಿಕೆ ಯಾಗಿದೆ ಎಂದು ಹೆಮ್ಮೆಯಿಂದ ಹೇಳಬಹುದು.

---

* ‹ ವಿಮರ್ಶೆಯ ವ್ರತ › ದಿಂದ.

§ § § §

೧೭

# ಬೇಂದ್ರೆಯವರ ಕವನಗಳಲ್ಲಿ ಮನೋವಿಜ್ಞಾನ

**ಜಿ. ರಮೇಶ ಉಪಾಧ್ಯಾಯ**

ಮನುಷ್ಯ, ನಿರಂತರವಾಗಿ ಜೀವನದ ಪರಿಸ್ಥಿತಿಗಳಿಗನುಸಾರವಾಗಿ ಯೋಚಿಸುತ್ತಿರುತ್ತಾನೆ, ವರ್ತಿಸುತ್ತಿರುತ್ತಾನೆ. ಇಂಥ ಎಲ್ಲ ಬಾಹ್ಯ ಮತ್ತು ಆಂತರಿಕ, ಐಚ್ಛಿಕ ಮತ್ತು ಅನೈಚ್ಛಿಕ ವರ್ತನೆಗಳನ್ನು ವೈಜ್ಞಾನಿಕವಾಗಿ ಸಮೀಕ್ಷಿಸಿ ಸಾಮಾನ್ಯವಾದ ವರ್ತನತತ್ವಗಳನ್ನು ರೂಪಿಸುವುದೇ ಮನೋವಿಜ್ಞಾನದ ಉದ್ದೇಶ. ಸಾಮಾನ್ಯವಾಗಿ ವರ್ತನೆಗಳನ್ನು ಇಂದ್ರಿಯಜನ್ಯ (Conative), ಮಾನಸಿಕ ಅಥವಾ ಭಾವುಕ (affective), ಮತ್ತು ಬೌದ್ಧಿಕ (Cognitive) ಎಂದು ಮೂರು ವಿಧಗಳನ್ನಾಗಿ ವಿಂಗಡಿಸಿದರೂ ವರ್ತನೆಗಳಲ್ಲಿ ಈ ಮೂರೂ ಅಂಶಗಳ ಪ್ರಭಾವ, ಪೂರಕವಾಗಿ ಒಡಮೂಡುತ್ತದೆ.

ಬೇಂದ್ರೆಯವರ ಕವನಗಳಲ್ಲಿ ಮನೋವೈಜ್ಞಾನಿಕ ವಿಚಾರಗಳನ್ನು ಅವಲೋಕಿಸುವುದು ಪ್ರಸ್ತುತ ಲೇಖನದ ಉದ್ದೇಶ. ಬೇಂದ್ರೆಯವರ ಕಾವ್ಯ, ರಾಮಾಯಣ-ಭಾರತಗಳಂತೆ ಸಮಗ್ರ ಬಾಳಿನ ರೂಪಕವೆನಿಸುವ ಕಥನಗೀತೆಯಲ್ಲದ್ದರಿಂದ, ಅವರ ಭಾವಗೀತ, ಬುದ್ಧಿಗೀತಗಳಲ್ಲಿ ಮನೋವೈಜ್ಞಾನಿಕ ವಿಚಾರಗಳು ಅಲ್ಲಲ್ಲಿ ತುಣುಕು ತುಣುಕುಗಳಾಗಿ ಮೂಡಿ ಬಂದಿವೆ. ನಾವಿಲ್ಲಿ ಕವಿಯ ಮನಃಸ್ಥಿತಿಯ ವಿಶ್ಲೇಷಣೆಗಿಂತ ಕೃತಿಯ ವಿಶ್ಲೇಷಣೆಗೇ ಹೆಚ್ಚು ಪ್ರಾಧಾನ್ಯತೆ ಕೊಡಬೇಕಾಗಿದೆಯಾದರೂ ಕವಿಯ ಜೀವನದ ಹಿನ್ನೆಲೆಯನ್ನು ಕಡೆಗಣಿಸುವಂತಿಲ್ಲ. ಏಕೆಂದರೆ ಕಾವ್ಯ, ಜೀವನದ ಅನುಭವಗಳ ಪ್ರತಿಸ್ಪಂದನ.

ಮನುಷ್ಯನ ಚಟುವಟಿಕೆಗಳಿಗೆ ಪ್ರೇರಣೆಯನಿಸುವ (Drives, Motives) ಹಲವಾರು ದೈಹಿಕ ಬಯಕೆಗಳು, ಸಾಮಾಜಿಕ ಅಗತ್ಯಗಳು, ಮಾನಸಿಕ ಪ್ರೇರಣೆಗಳು ಮನೋವೈಜ್ಞಾನಿಕ ಅಧ್ಯಯನದ ಮುಖ್ಯ ವಿಷಯಗಳು. ಹಸಿವು, ನಿದ್ದೆ, ಕಾಮ, ಸಂಘಜೀವನ, ಪ್ರತಿಷ್ಠೆ, ಸಾಂಸಾರಿಕಜೀವನ, ಮುಂತಾದ ಹಲವಾರು ಅಗತ್ಯಗಳು ಮಾನವನ ದೈನಂದಿನ ಕ್ರಿಯಾಶೀಲತೆಗೆ ಕಾರಣ. ಹಸಿವನ್ನೇ

ನಿವಾರಿಸಲಾಗದಾಗ "ಯಾರಿಗೆ ಬೇಕಾಗೈತ್ರೀ ನಿಮ್ ಕವಿತಾ" ಎನಿಸುವುದೂ ಸಹಜ. "ಪ್ರಾಣದೇವನು ನಿತ್ರಾಣನಾಗುತ ಅಂದ— ಅನ್ನದೇವರು ಮಾತ್ರ ಇನ್ನೂ ಬರಲಿಲ್ಲೋ"[1] ಎಂಬಂತೆ ಅನ್ನವಿಲ್ಲದೆ ಪ್ರಾಣವಿಲ್ಲ.

ಕಾಮವು ಜೀವನದ ಒಂದು ಮುಖ್ಯ ಪ್ರಚೋದಕವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಫ್ರಾಯ್ಡನಂಥ ಮನೋವಿಜ್ಞಾನಿ, ಕಾಮಶಕ್ತಿ(Libido) ಯೇ ಜೀವನದ ಮುಖ್ಯ ಪ್ರೇರಣೆಯೆಂದು ಪ್ರತಿಪಾದಿಸಿ ಆ ಆಧಾರದ ಮೇಲೆಯೇ ತನ್ನ ಮನೋವಿಶ್ಲೇಷಣ ತತ್ವ (Pscyhoanalytic theory) ವನ್ನು ನಿರ್ಮಿಸಿದ. ಬೇಂದ್ರೆಯವರು ದೃಷ್ಟಿಸಿದ ಕಾಮ ವಿರಾಟ್ ಸ್ವರೂಪಿ.

ಬ್ರಹ್ಮದಿಂದ ಅಗಲಿಸಿತು ಮಾಯೆ ಆ ಬ್ರಹ್ಮಕದುವೆ ಸೇತು
ಬೀಜವೊಡೆಯೆ, ಆ ಬೀಜ ಪಡೆಯೆ ಬರುವಂತೆ ಬೀಜಹೂತು ||

ಇಹುದು ಎಂದರದು ಅಹುದು ಇದಿರು; ಇದು ಅಲ್ಲವೆಂದರಿಲ್ಲ
ದೇವಮಾಯೆ ಅದರಾಟ ಮಾಟಗಳ ಬಲ್ಲನೊಬ್ಬ ಬಲ್ಲ ||[2]

ಬೀಜದಿಂದ ಮರ, ಮರದಿಂದ ಬೀಜವೆಂಬಂತೆ ಮನುಕುಲದ ವಿಕಾಸಕ್ಕೆ ಕಾಮವೇ ಬೀಜ. ಕಾಮವೆಂಬುದೊಂದು ಮಾನಸಿಕ ಭಾವವೂ ಹೌದು; ಆದ್ದರಿಂದ ಅದು ಇದೆ ಎಂದರೆ ಎದುರಿನಲ್ಲಿಯೇ ಇದೆ. ಇಲ್ಲವೆಂಬ ನಿಗ್ರಹವಿದ್ದರೆ ಇಲ್ಲ; ಹೀಗೆ ಅದೊಂದು ಮಾಯೆ. ಕಾಮ, ಬ್ರಹ್ಮಕ್ಕೆ ಸೇತು ಎಂಬ ಉನ್ನತ ದೃಷ್ಟಿ ಬೇಂದ್ರೆಯವರದು.

ಕಾಮತೃಪ್ತಿಯಲ್ಲಿ ಸಾಮಾನ್ಯನ, ಕವಿಯ ಮತ್ತು ಭಕ್ತನ ದಾರಿ — ಹೀಗೆ ಮೂರು ವಿಧಗಳನ್ನು ಬೇಂದ್ರೆ ಸೂಚಿಸಿದ್ದಾರೆ.[3] ಇಂಥ ಸಾಮಾಜಿಕ, ಕಲಾತ್ಮಕ, ಮತ್ತು ಆತ್ಮಿಕ ಕಾಮಗಳನ್ನು ಬೇರೆ ಬೇರೆಯಾಗಿಯಾದರೂ ಭಾವಿಸಬಹುದು; ಅಥವಾ ಒಬ್ಬನಲ್ಲೇ ಕಾಣಿಸಬಹುದಾದ ಕಾಮದ ಬೇರೆ ಬೇರೆ ಸ್ತರಗಳೆಂದೂ ಭಾವಿಸಬಹುದು.

ಫ್ರಾಯ್ಡ್ ತನ್ನ ಮನೋವಿಶ್ಲೇಷಣ ತತ್ವದಲ್ಲಿ ಜೀವ ಪ್ರವೃತ್ತಿ (Eros/Life instinct) ಮತ್ತು ನಾಶಪ್ರವೃತ್ತಿ (Thenetos / Death instinct) ಎಂಬ ಎರಡು ಮೂಲ ಪ್ರೇರಣೆಗಳನ್ನು ವಿವರಿಸಿದ್ದಾನೆ. ವರ್ತನೆಯಲ್ಲಿನ ರಚನಾತ್ಮಕ ರಸವೃತ್ತಿ ಜೀವ ಪ್ರವೃತ್ತಿಯಿಂದ ಮೂಡಿದರೆ ಘಾತಕಾತ್ಮಕ ವಿರಸವೃತ್ತಿಗಳು ನಾಶ ಪ್ರವೃತ್ತಿಯಿಂದ ಜನಿಸುತ್ತವೆ. ಜೀವನದ ಎಲ್ಲ ವರ್ತನೆ

1 ಅನ್ನಾವತಾರ (ನಾದಲೀಲೆ).
2-3 ಪೀಠಿಕೆ (ಕನ್ನಡ ಮೇಘದೂತ).

ಗಳೂ ಈ ಎರಡು ಪ್ರೇರಣೆಗಳ ಸಮತೋಲೆಯ ಫಲ. ವರ್ತನೆಯ ವ್ಯವಸ್ಥಿತ ಸ್ಥಿತಿ ಸಮರಸವೇ ಆಗಿದೆ. “ರಸವೆ ಜನನ, ವಿರಸ ಮರಣ, ಸಮರಸವೇ ಜೀವನ” [1] ಎನ್ನುತ್ತಾರೆ ಬೇಂದ್ರೆ. “ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜು ಹಿಂದೆ” [2] ಎಂಬಂತೆ ಸುಖ ದುಃಖಗಳ ನಡುವೆ ಬಾಳಿನ ಜೋಕಾಲಿ ಆಡುತ್ತಿರುತ್ತದೆ. ರಾತ್ರಿ ಮಲಗಿದಾಗ “ಒಳಗಿನಾವ ಚಿಂತೆಯ ಎಸರೋ ತಂತಾನೆ ಕನವರಿಸುತಿತ್ತ” [3] ಹೀಗೆ ನಾಶ ಪ್ರವೃತ್ತಿಯ ವಿಕೃತ ಸ್ವರೂಪ ನಿಂತಾಗ, ಮತ್ತೊಂದೆಡೆಗೆ ಬೆಳಗಿನಲ್ಲಿ “ಚಿಲೀ ಪಿಲೀ ಚಿಲಿಪಿಲಿ ಎಂದು ಹಾಲಕ್ಕಿ ಉಲಿಯುತಿತ್ತ” [4] ಎಂದು ಜೀವಪ್ರವೃತ್ತಿ ಪ್ರಕಟವಾಗತೊಡಗುತ್ತದೆ. ಹೀಗೆ ಬಾಳಿನಲ್ಲೊಂದು ಭರವಸೆ ಮೂಡುವ ಬೆಳಗೊಂದೆಡೆ, ಚಿಂತೆಯಾವರಿಸುವ ಬೈಗು ಇನ್ನೊಂದೆಡೆ ಸಹಜ.

ಮಾನವ ಮೂಲತಃ ಸುಖವನ್ನೇ ಬಯಸುತ್ತಾನೆ. ಸವಿಯಾದ ಜೇನನ್ನು “ಮೈಮರೆಯೆ ಕುಡಿದರೂ ಮನದಣಿಯಲಿಲ್ಲ ಕಡೆಗೂ” [5] ಎಂಬಂತೆ ಬಾಳಿನಲ್ಲಿ ಸುಖ ಸಿಕ್ಕಷ್ಟು ಸಾಲುವುದಿಲ್ಲ ನಮಗೆ. ಇಂಥ ಸುಖತತ್ವ (Pleasure Principle) ಬಾಳಿನ ಮೊದಲ ಹಂತದಲ್ಲಿ ಮುಖ್ಯವಾಗಿರುತ್ತದೆ. ಆದರೆ ಮುಂದೆ ಬೆಳೆದಾಗ ಅಂಥ ಸುಖತೃಪ್ತಿಗೆ ಸಾಮಾಜಿಕ ಪರಿಸರದ ಅಡೆತಡೆಗಳ ನಿಯಂತ್ರಣ ಬಂದು ನಿಜದ ಅರಿವು ಮೂಡಿದಾಗ, ಅಂಥ ನಿಜತತ್ತ್ವ (Reality Principle) ವರ್ತನೆಯ ಸ್ವಚ್ಛಂದತೆಗೆ ನಿರ್ಬಂಧವನ್ನೊಡ್ಡುತ್ತದೆ. ಆದರೂ ಸುಖತತ್ವ ಎಲ್ಲ ವರ್ತನೆಯ ಹಿಂದೆಯೂ ಇರುತ್ತದೆ. ಯಾರೂ ತಾವಾಗಿಯೇ ದುಃಖವನ್ನು ಸ್ವಾಗತಿಸುವುದಿಲ್ಲ. “ವರಿಸನಾರೂ ನಿನ್ನ ತಾನೆಯಾಗಿ” [6] ಎಂದು ಚಿಂತೆಗೂ, “ಇದ ಹುಡುಕುವ ಆಳಿ ಬರಲೇ ಇಲ್ಲ” [7] ಎಂದು ನಿರಾಸೆಗೂ ಎನ್ನುತ್ತಾರೆ ಬೇಂದ್ರೆ.

ಮನುಷ್ಯ ಒಂಟಿಯಲ್ಲ. ಆತ ಸಂಘಜೀವಿ. ಬೇಂದ್ರೆಯವರು ಸ್ವತಃ ಲೋಕಸ್ನೇಹಿ. “ಗೆಳೆಯರ ಸಮೂಹದೊಳು ನಗುತ ಕೆಲೆಯುತ ಕಾಲ ಕಳೆದೆನು” [8] ಎನ್ನುವುದರೊಂದಿಗೆ “ಬಾ, ಜೀವಿತದ ಸಾರ್ವಭೌಮನೆ ಮೆಲ್ಲನೆ” [9] ಎಂದು ಗೆಳೆತನವನ್ನು ಸ್ವಾಗತಿಸುತ್ತಾರೆ.

---

1 ನನ್ನ ಹಾಡು (ಗರಿ).

2 ನಾದಲೀಲೆ (ನಾದಲೀಲೆ).

3-4 ಶುಭ ನುಡಿಯೆ ಶಕುನದ ಹಕ್ಕಿ (ನಾದಲೀಲೆ).

5 ಜೇನುಹುಟ್ಟು (ಸಖೀಗೀತ).

6 ಚಿಂತೆ (ಗರಿ).

7 ನಿರಾಶೆ (ಗರಿ).

8-9 ಆನಂದವೇ (ಸಖೀಗೀತ).

ಜೀವನದಲ್ಲಿನ ಚಿರನೂತನತೆ ವ್ಯಕ್ತಿತ್ವ-ತತ್ವಗಳ ಮೂಲಸೂತ್ರ. ಇಂದಿನಂತೆ ನಾಳೆಯಿಲ್ಲ, ಈಗಿನಂತೆ ಮತ್ತಿಲ್ಲ. "ಕ್ಷಣ ಕ್ಷಣವೂ ಹೊಸ ಹೊಸದಿದು" [1] ಎಂಬುದು ಪ್ರಕೃತಿಗೆ ಹೇಗೋ ಮನುಷ್ಯರಿಗೂ ಹಾಗೆಯೇ ಅನ್ವಯಿಸುತ್ತದೆ. "ದಿನದ ಪಂತವು ಬೇರೆ, ಬೇರೆ ಪಾಡು, ದಿನದ ಹಾದಿಯು ಬೇರೆ, ಬೇರೆ ಹಾಡು," [2] ಹೀಗೆ ವ್ಯಕ್ತಿಯ ವರ್ತನೆಗಳು ಚರಾತ್ಮಕವಾಗಿರುತ್ತವೆ. (Dynamic behaviour).

ಸುಖಕ್ಕಾಗಿ ಏನು ಮಾಡಬೇಕು ಎಂಬ ಸಮಸ್ಯೆಗೆ ಸಮಾಧಾನವಾಗಿ ಮಾನಸಿಕ ಆರೋಗ್ಯದ (Mental Health) ಮೂಲಸೂತ್ರಗಳನ್ನೇ ಬೇಂದ್ರೆಯವರು ಬಿಟ್ಟಿ ಇಳಿಸಿದಂತಿದೆ.

> ತಿಣಕದಿರು ಸುಖದ ಸಂಪಾದನೆಗೆ-ಒಂದಿನಿಸು
> ನಗೆ, ಇನಿಸು ದುಃಖವಿಸ್ಮೃತಿ, ಇನಿಸು ಲೋಕಾನು-
> ಭವವು. ರಸಿಕತೆ ಇನಿಸು, ತಾಳ್ಮೆಯಿರೆ ಇನಿಸಾನು;....[3]

ಮನಸ್ಸು ಚಂಚಲ; ಅದಕ್ಕೆ ನಿಶ್ಚಿತವಾದ ವೃತ್ತಿಪಥವಿಲ್ಲ. ಪರಿಸರಕ್ಕೆ ತಕ್ಕಂತೆ ಅದರಲ್ಲಿ ಏರಿಳಿತ ಉಂಟಾಗುತ್ತದೆ. (Change of Mood).

> ತೇಲಾಡುವಾಗ ಮನಸು, ಮೇಲಾಡತಾವ ಕನಸು;
> ತಾಕಾಡುವಾಗ ಇತ್ತ, ತೇಕಾಡತಾವ ಚಿತ್ತ" [4]

ನಾವು ಮರೆಯುತ್ತೇವೆ ನಿಜ. ಆದರೆ ಎಲ್ಲವನ್ನೂ ಮರೆಯುವುದಿಲ್ಲ. ಆನಂದದಾಯಕ ಅನುಭವಗಳು ಮರೆತು ಹೋಗುವುದು ಕಡಿಮೆ, "ಮಗ ಮುಗಿಸಿ ಹೋದ ನಗೆ ಹೂವ ಮರೆತವರುಂಟೆ ?" [5] ದುಃಖಕರವಾದ ಅನುಭವಗಳಲ್ಲಿ ಕೆಲವನ್ನು ಮನಸ್ಸು ತಾನಾಗಿಯೇ ದಮನಗೊಳಿಸುತ್ತದೆ (Repression), ಕೆಲವೊಂದನ್ನು ನಾವೇ ಪ್ರಯತ್ನಪೂರ್ವಕವಾಗಿ ಶಮನಗೊಳಿಸುತ್ತೇವೆ. (Suppression). ಆದರೆ ಅನುಭವವು ತೀವ್ರ ಕಟುವಾಗಿದ್ದರೆ ಆಗ ಸಹಜವಾದ ಮರೆವು ಅಸಾಧ್ಯವಾದಾಗ ಕೃತ್ರಿಮ ಮರೆವು ( amnesia ) ಉಂಟಾಗಿ ಅದೊಂದು ಅಪಸಾಮಾನ್ಯ ಲಕ್ಷಣವೆನಿಸುವುದುಂಟು.

---

1 ಋತುಗಾನ ( ನಾದಲೀಲೆ ).
2 ದಿನದ ಹಾಡು ( ಗರಿ ).
3 ದುರ್ಲಭಯುಕ್ತಿ ( ಉಯ್ಯಾಲೆ ).
4 ತೇಲಾಡುವಾಗ ( ಗಂಗಾವತರಣ ).
5 ಮುಡಿಪಿದ ಹೂ ( ಉಯ್ಯಾಲೆ ).

"ಮಮತಾಜಳನು ಹುಗಿದು ತಾಜಮಹಲನು ಕಟ್ಟಿ ನಿಜ ದುಃಖ ಮರೆಸ ಬಹುದೆ ?" [1] ಎಂಬುದು ನಿಜವಾದರೂ, ಮನಸ್ಸು ದುಗುಡಗಳನ್ನು ಅವಿರತ ವಾಗಿ ಹತ್ತಿಕ್ಕಲು ಪ್ರಯತ್ನಿಸುತ್ತಿರುತ್ತದೆ.

"ಭೂಗರ್ಭದಲ್ಲಿ ಕಲ್ಕುದಿಯುತೆಸರಾಗಿ
ಜಗದ ಜ್ವಾಲಾಮುಖಿಯ ಕಿಚ್ಚಿನುಸಿರಾಗಿ
ಹೊಮ್ಮಲಿದೆ ಚಿಮ್ಮುತಿದೆ" [2]

ಎಂಬಂತೆ ಒಟ್ಟಿಗೆ ಕೂಡಿಟ್ಟ ಭಾವೋದ್ರೇಕ (Suppressed Emotion) ಕೊನೆಗೊಮ್ಮೆ ಸಿಡಿದು ಚಿಮ್ಮುವುದೂ ಇದೆ. ಆದ್ದರಿಂದ ಭಾವಗಳನ್ನು ಪ್ರಕಟ ಪಡಿಸುವುದು (Catharsis), ತೋಡಿಕೊಳ್ಳುವುದು ಮನಸ್ಸಿಗೊಂದು ಸಮಾ ಧಾನವನ್ನು ತರುತ್ತದೆ; ಮಾನಸಿಕ ಒತ್ತಡದ ಸಮತೋಲನವನ್ನು ಕಾಯುತ್ತದೆ.

"ಅತ್ತಾರೆ ಅತ್ತು ಬಿಡು, ಹೊನಲು ಬರಲಿ, ನಕ್ಯಾಕ ಮರಸತೀ ದುಕ್ಕ ?
ಎವೆಬಡಿಸಿ ಕೆಡವು, ಬರಿಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ" [3]

ಮನುಷ್ಯರು ಕೆಲವೊಮ್ಮೆ ತಮಗೆ ಮುಂದೆ ಬರುವ ಕಷ್ಟಗಳನ್ನು ಮನಗಂಡು ಆಗಾಮಿ ಭಯ (Pre-sentiment) ದಿಂದ ನಿರ್ವೀರ್ಯರಾಗುವುದುಂಟು. ನಾಳೆಯೇ ಸಾಯುತ್ತೇನೆಂದು ಕಂಡುಕೊಂಡರೆ ಇಂದು ಆತ ನಿಷ್ಕ್ರಿಯನಾಗುತ್ತಾನೆ. ಅರ್ಜುನ ವಿಶ್ವರೂಪದರ್ಶನದಲ್ಲಿ ಅಭಿಮನ್ಯುವಿನ ಮರಣವನ್ನು ಕಂಡು, ಅದನ್ನು ನೋಡಲಾರದೆ ವಿಶ್ವರೂಪದರ್ಶನ ಸಾಕೆಂದು ಕೃಷ್ಣನಿಗೆ ಬೇಡುತ್ತಾನೆ—

"ಎಚ್ಚರದಾ ಭ್ರಮೆಗಿಂತಲು ಹಿರಿ ಹುಚ್ಚೀ ಕನಸು
.... .... .... .... .... ....
ಸತ್ತಿಲ್ಲವು ಇನ್ನೂ ಈ ನರನಾ ನರಮನಸು" [4]

ಬಾಳಿನ ದುರಿತಕ್ಕೆ ಕರಗಿದ ಮನೋಸ್ಥೈರ್ಯ ಕೆಲವೊಮ್ಮೆ ಬಾಳಿನ ಮೊದಲ ಸುಖಸಮಯವನ್ನು ಮತ್ತೆ ನೆನೆಸುತ್ತದೆ. ಇಂಥ ಹಿಂಜರಿತ ಅಥವಾ ಪ್ರತಿಗಮನ (Regression) ಮನಸ್ಸಿಗೆ ಒಂದು ತೆರನ ಸಮಾಧಾನ ಕೊಡಬಲ್ಲ

---

1 ಹುದುಗಲಾರದ ದುಃಖ (ಗರಿ).
2 ಮೈತಳೆದ ಕರುಣೆ (ಉಯ್ಯಾಲೆ).
3 ನೀ ಹೀಂಗ ನೋಡಬ್ಯಾಡ ನನ್ನ (ನಾದಲೀಲೆ).
4 ವಿಶ್ವರೂಪದರ್ಶನ (ಅರಳು ಮರಳು).

ಮನೋ ರಕ್ಷಣಾ ತಂತ್ರ. (Psychological defence mechanism). "ಬನ್ನಿ ಬನ್ನಿ ಕನಸುಗಳೇ ಮರಳಿ ಮನೆಗೆ ಬನ್ನಿ"[1] ಎಂದು ಬಾಲ್ಯದ ಸವಿ ನೆನಪನ್ನು ಕರೆದ ಬೇಂದ್ರೆಯವರು "ಇಳಿವಯಕೆ ನೆನಸಿದೆ ಎಳೆಯತನ"[2] ಎಂದು ಒಪ್ಪಿಕೊಳ್ಳುತ್ತಾರೆ. "ಹೋದ ಬುಧವಾರಾ ಬರsssಲೊಲ್ಲು"[3] ಎನಿಸುವಂತೆ ಬಾಲ್ಯತಾರುಣ್ಯಗಳು ಮತ್ತೆ ಬಾರವೆನಿಸುತ್ತದೆ ಮುಪ್ಪಿನಲ್ಲಿ. ಆದರೂ ತಾರುಣ್ಯವೊಂದು ಮಾನಸಿಕ ಸ್ಥಿತಿ, ಎಂದೇ ಅದು :

"ನೀ ಹೊರಗ ಬಿದ್ದಿ ಅಂತ ಪುಕಾರ ಆತು
ನೀ ಒಳಗೆ ಇದ್ದಿ ಅಂತ ಪಿಸುಮಾತು"[4]

ವ್ಯಕ್ತಿ ಮಗುವಾಗಿದ್ದಾಗ "ಮತ್ತೇನು ಮಗುದೇನು ಏನು ಮಾಡಿದ್ದೆಲ್ಲ ಚಂದವೇ ತೋರುತಿತ್ತು"[5] ಆದರೆ ವಯಸ್ಸಿಗೆ ಬಂದಂತೆ "ದಳ್ಳುರಿಯ ನಿಟ್ಟುಸಿರು ಬೀಸುವುದು ಒಳಗೆಲ್ಲ, ಉಸಿರಿಲ್ಲ ಒಮ್ಮೆ ನಗಲು"[6] ಆದರೆ ಇಂಥ ಬದಲಾವಣೆಯನ್ನು ಹೊಣೆಗಾರಿಕೆಯಿಂದ ಹದಗೆಡದೆ ಸಹಿಸಿಕೊಳ್ಳುವಲ್ಲಿ "ಮಣ್ಣು ಮುಕ್ಕುವ ಹುಲ್ಲು ಬೀಜದಂತೆಲ್ಲವೂ ಮಳೆಯೊಡನೆ ಮೊಳೆಯಬಹುದು"[7] ಎಂಬ ಆಸೆ ಅಗತ್ಯ ಬದುಕಿನ ಜೇಗೆಗೆ ಸಿಲುಕಿ "ಆದರು ಬರದೋ ಯಮನಿಗೆ ಕರುಣ"[8] ಎಂಬ ನೈರಾಶ್ಯಭಾವ (Depression) ತಾಳುವುದು ಯೋಗ್ಯ ವಲ್ಲ. ಬದುಕಿನ ತೊಂದರೆಗಳ ನಡುವೆಯೂ—

"ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು ಆದಕು ಇದಕು ಎದಕು"[9]

ಎಂಬ ತೃಪ್ತಭಾವ, ಜಾಣ್ಮೆಯು ಬಾಳಿಗೊಂದು ಚೈತನ್ಯವನ್ನೀಯಬಲ್ಲುದು.

'ಕನಸಿನ ಕಥೆ'[10] ಯಲ್ಲಿ ಬೇಂದ್ರೆಯವರು ಕನಸಿನ ಸ್ವರೂಪವನ್ನು ಚಿತ್ರಿಸಿದ್ದು ಫ್ರಾಯ್ಡನ ಕನಸಿನ ನಿರೂಪಣೆಯನ್ನು ಹೋಲುತ್ತದೆ. ಫ್ರಾಯ್ಡ್ ಹೇಳುವಂತೆ ಕನಸಿನ ಗುರಿ ಆಶೆಯ ಪೂರೈಕೆ. ಕನಸಿನ ಒಳವಸ್ತುವಾದ ಆಶೆ, ಭಯ,

---

1 ಬನ್ನಿ ಬನ್ನಿ ಕನಸುಗಳೇ (ನಾದಲೀಲೆ).
2 ಬಾಲ್ಯಕಾಂಡ (ಮತ್ತೆ ಶ್ರಾವಣಾ ಬಂತು).
3–4 ಹೋದ ಬುಧವಾರs ಬರss ಪೊಲ್ಲು (ಮತ್ತ ಶ್ರಾವಣಾ ಬಂತು).
5–6 ಎರಡು ಚಿತ್ರ (ಉಯ್ಯಾಲೆ).
7 ಲಲಿತಾ (ಉಯ್ಯಾಲೆ).
8 ಭೂಮಿತಾಯಿಯ ಚೊಚ್ಚಿಲ ಮಗ (ನಾದಲೀಲೆ).
9 ನಾನು ಬಡವಿ (ನಾದಲೀಲೆ).
10 ಕನಸಿನ ಕಥೆ (ಗಂಗಾವತರಣ).

ತುಮುಲಗಳು, ಹೊರ ವಸ್ತುವಾದ ಕಥೆಯಂತಿರುವ ವಿನ್ಯಾಸವನ್ನು ಹೊಂದಿ ಪ್ರಕಟವಾಗುತ್ತವೆ. ಹೀಗೆ ಒಳವಸ್ತು ಗುಪ್ತವೇಷದಲ್ಲಿ ಹೊರವಿನ್ಯಾಸದಲ್ಲಿ ಪಾತ್ರ ವಹಿಸುತ್ತವೆ, ಆದ್ದರಿಂದಲೇ ಕನಸಿನ ನಿಜವಾದ ಅರ್ಥ ಫಕ್ಕನೆ ತಿಳಿಯದೆ ಅದು ಹುಚ್ಚು ಕನಸೆನಿಸುತ್ತದೆ. ಬೇಂದ್ರೆಯವರು ತಮ್ಮ ಮಕ್ಕಳಾದ ಲಲಿತಾ ಮತ್ತು ಪ್ರೇಮಾರನ್ನು ಕಳೆದುಕೊಂಡು ಕೊನೆಗೆ ಹುಟ್ಟಿದ ಮಂಗಳೆಯನ್ನು ಕುರಿತು ಬರೆದ ಹಾಡಿದು. ಹಿಡಿಯ ಹೋದ ಆಸೆಯ ಹಕ್ಕಿ ಮಂಗಳೆಯ ತೊಡೆಯಲ್ಲಿ ಬಂದು ಆಡುವಾಗ ಅದು ಅಲ್ಲೇ ಆಡುತ್ತಿರಲಿ ಎಂಬ ಕವಿಯ ಹಾರೈಕೆಯೊಂದಿಗೆ ಕನಸಿನ ಕಥೆ ಮುಗಿಯುತ್ತದೆ; ಇದು ಬಾಹ್ಯವಸ್ತು. ಮಗುವಿನ ಮೇಲಿನ ಆಸೆ, ಅದು ಉಳಿಯಬೇಕೆಂಬ ಬಯಕೆ, ಹಿಂದಿನ ಕಟು ಅನುಭವಗಳಿಂದುಂಟಾದ ಅನಿಶ್ಚಿತತೆಯ ಪರಿಣಾಮವಾಗಿ ತಲ್ಲಣಿಸಿದ ಮನಸ್ಸು ಚಿರತ್ವವನ್ನು ಹಾರೈಸುವುದು ಒಳವಸ್ತು. ಹೀಗೆ ಕನಸು ಅವರ ಆಸೆಯ ಪೂರೈಕೆಯನ್ನು ಸೂಚಿಸುತ್ತದೆ.

ಬೇಂದ್ರೆಯವರ 'ವೆಂಕಾ' ಮನೋವಿಜ್ಞಾನಿಗಳು ಹೇಳುವ ಮನೋರೋಗಿಯಂತಿದ್ದಾನೆ. "ಇವನ ತಕ್ಕಡಿಗಿಲ್ಲ ಸರಿದಂಡಿಗೆ, ಇವನು ತಿನ್ನುವುದು ಕನಸಿನ ಮಂಡಿಗೆ"[1] ಹಗಲುಗನಸಿನಲ್ಲಿ ತೇಲುವ ವೆಂಕನ ತಕ್ಕಡಿ ಡೋಲಾಯಮಾನವಾಗಿದೆ, ಅವನ ವ್ಯಕ್ತಿತ್ವ ಅಸಂಘಟಿತವಾಗಿದೆ. ಕಾರಣವೇ ಇಲ್ಲದೆ ಕಷ್ಟಗಳಲ್ಲಿ, ಇಲ್ಲದ ತೊಡಕುಗಳಲ್ಲಿ ಸಿಕ್ಕಿಕೊಳ್ಳುತ್ತಾನೆ ಆತ— "ಇತ್ತು ಜೇಡನ ಬಲೆಯು. ಇರಲಿಲ್ಲ ಜೇಡ, ಆದರೂ ಅದರಲ್ಲಿ ಇವನು ಸಿಕ್ಕ"[2] ಇಂಥ ಭ್ರಮೆಗಳಿಂದ ತುಂಬಿದೆ ಅವನ ಮನಸ್ಸು. "ಬಿದ್ದ ಹಾಸಿಗೆಯಲ್ಲಿ ಎಲ್ಲಯುದ್ಧಾ"[3], — ಮನಸ್ಸಿನ ತಾಕಲಾಟದಿಂದ ಸ್ವಾಸ್ಥ್ಯ ಕಳೆದುಕೊಂಡು ಅವಿಶ್ರಾಂತಿಯಿಂದ ಬಳಲುತ್ತಾನೆ. ಹಾಗೆ ಮಲಗಿದಾಗ "ಕನಸಿನಲಿ ಸತ್ತರೂ ಎಚ್ಚರದೊಳಿದ್ದಾ"[4], ಎದ್ದು ಉದ್ವಿಗ್ನನಾಗುತ್ತಾನೆ. ಈ ರೀತಿ ಅಪಸಾಮಾನ್ಯ ವ್ಯಕ್ತಿತ್ವದ ಚಿತ್ರಣ ನೇರವಾಗಿ ಮೂಡಿ ಬಂದಿದೆ. ಇನ್ನು ಕೆಲವರಿಗೆ ಮಾನಸಿಕ ತುಮುಲದಿಂದ (Conflict) ನಿರ್ಧಾರವನ್ನೇ ಮಾಡಲಾಗುವುದಿಲ್ಲ.

"ಇದ ತಿನಲೊ ಅದ ತಿನಲೊ ಮತ್ತೆ ಮತ್ತೆ
ನಿರ್ಣಯಕೆ ಬರಲಿಲ್ಲ ಕೊನೆಗೆ ಕತ್ತೆ"[5]

ಇಂಥ ವೆಂಕರು, ಕತ್ತೆಗಳು, ಮಾನಸಿಕ ಆಸ್ಪತ್ರೆಯಲ್ಲಿ ಕೆಲವರಿದ್ದಾರೆ; ಹೊರಗಡೆ ಹಲವರಿದ್ದಾರೆ.

---

1-2-3-4 ವೆಂಕಾ (ಉತ್ತರಾಯಣ).
5 ಕತ್ತೆಯ ಸತ್ಸ್ವರೂಪ (ಮರ್ಯಾದೆ).

ಕೃಷ್ಣಾಕುಮಾರಿ [1] ಆತ್ಮಹತ್ಯೆ ಮಾಡಿಕೊಳ್ಳಲು ವಿಷ ಸೇವಿಸುತ್ತಾಳೆ. ಅವಳ ಸಾವಿನ ಹಂತಗಳನ್ನು ಬೇಂದ್ರೆಯವರು ನಾಲ್ಕು ಮನೋಸ್ಥಿತಿಗಳನ್ನಾಗಿ ಪರಿಗಣಿಸಿದ್ದಾರೆ. ಪರಿಸ್ಥಿತಿಯ ದೂಷಣೆಯ ತಮೋ ವಿಕಾರದಿಂದ ತನ್ನ ದೂಷಣೆಯ ರಾಜಸಾಂತಃಕರಣವನ್ನು ಹೊಂದಿ, ಮತ್ತೆ ಸಾವನ್ನು ಆತ್ಮಸಂತೋಷದಿಂದ ಸ್ವಾಗತಿಸುವ ಸಾತ್ವಿಕ ಮನಸ್ಥಿತಿಗೆ ಒಂದು ಅಂತರ್ಮುಖಿಯಾಗಿ ನಿಸ್ತ್ರಿಗುಣಸ್ಥಿತಿಗೆ ಬರುತ್ತಾಳೆ. ಮರಣಾಂತಿಕ ಖಾಯಿಲೆಯಿಂದ ಸಾಯುವವರ ಸಾವಿನ ಹಂತಗಳ ಬಗೆಗೆ ಶ್ರೀಮತಿ ಎಲಿಜಬೆತ್ ರಾಸ್ ಅವರು ಸಂಶೋಧಿಸಿ, ಸಾವನ್ನು ಅಲ್ಲಗಳೆಯುವಿಕೆ, ಕೋಪ, ಒಪ್ಪಂದಗಳ ತಾಮಸಿಕ ಹಂತಗಳಿಂದ ಸಾವನ್ನೆದುರಿಸುವ ಸಿದ್ಧತೆಯುಂಟಾಗಿ, ಕೊನೆಗೆ ಸಾವನ್ನು ಸ್ವಾಗತಿಸುವ ಸಾತ್ವಿಕ ಅಂತರ್ಮುಖತೆಯನ್ನು ಕಂಡುಕೊಂಡಿದ್ದಾರೆ. ಹೀಗೆ, ಬೇಂದ್ರೆಯವರ ವಿಶ್ಲೇಷಣೆಯು ಮನೋವೈಜ್ಞಾನಿಕ ವಿಶ್ಲೇಷಣೆಯಿಂದೇನೂ ದೂರವಿಲ್ಲ.

ಕವಿಯ ಕಣ್ಣಿನ ಹಿಂದಿನ ಭಾವುಕ ಮನಸ್ಸು, ಚಿಂತನಬುದ್ಧಿಯ ಮನಸ್ಥಿತಿ (Mental Set) ಕವಿಯ ಸಂವೇದನೆಯ (Percept) ಸ್ವರೂಪದ ಮೇಲೆ ಪ್ರಭಾವ ಬೀರುತ್ತದೆ. ಆದ್ದರಿಂದಲೇ ರವಿ ಕಾಣದ್ದನ್ನು ಕವಿ ಕಾಣಲು ಸಾಧ್ಯವಾಗುತ್ತದೆ.

ಉದಾಹರಣೆಗೆ ಬೇಂದ್ರೆಯವರಿಗೆ ಚಳಿಯು ಚಳಿಯಾಕೆಯಾಗಿ "ಅಪ್ಪಿದ ಅಪ್ಪಿಗೆ ಬಿಡದಾಕೆ" [2] ಎನಿಸುತ್ತದೆ; ಹೂತ ಹುಣಿಸಿಯ ಮರ ಕಂಡಾಗ ಹಾಡುವ ಕವಿಗೆ ಸ್ಫೂರ್ತಿ ಬಂದು "ಒಂದು ಹೂತ ಹುಣಿಸಿಯ ಮರ ಸಾಕ" [3] ಎನಿಸುತ್ತದೆ; ಮಧುಪಾತ್ರೆಯನ್ನು ತುಟಿಗಿಟ್ಟಾಗ ಮೈವೀಣೆ ಝುಂ ಎನಲು ಉಮರನ ಧಾಟಿಯಲ್ಲಿ "ಒಮ್ಮೆ ಬಾಳಿ ಬದುಕಿತ್ತೊ ಏನೋ ಈ ಮಣ್ಣಪಾತ್ರೆ ಕೂಡ" [4] ಎಂದು ಉದ್ಗರಿಸುತ್ತಾರೆ; ಶ್ರಾವಣದ ಶ್ರುತಿಯನ್ನು ಶ್ರವಣ ಮಾಡುವ ಅತೀಂದ್ರಿಯ ಶಕ್ತಿ ಬೇಂದ್ರೆಯವರದು.

"ಬರುವ ವರೆಗೆ ಒಳಗಡೆಗೆ, ಬೆಲೆಯು ಬರದು ಬಿಡುಗಡೆಗೆ" [5] ಎಂಬಲ್ಲಿ ಮೌಲ್ಯದರ್ಶನದ (Value Perception) ವೈಪರೀತ್ಯವನ್ನು ಗುರುತಿಸಿದ್ದಾರೆ ಬೇಂದ್ರೆ. ನೋಟ ಅವರವರ ಕಣ್ಣಿನಲ್ಲಿದೆಯೆಂಬುದನ್ನರಿತ ಬೇಂದ್ರೆ

---

1 ಕೃಷ್ಣಾಕುಮಾರಿ (ಕೃಷ್ಣಾಕುಮಾರಿ ಮತ್ತು ಹಾಡು ಪಾಡು).
2 ಚಳಿಯಾಕೆ (ಗರಿ).
3 ಹೂತ್ಯದ ಹುಣಸಿ (ಸಖೀಗೀತ).
4 ಓಮರ (ಅರಳು ಮರಳು).
5 ಇದೊ ಪಂಜರ (ನಾದಲೀಲೆ).

ಯವರು “ ಕಣ್ಣಿನಾಗ ಐತಿ ಭಾವ, ಕಣ್ಣಿನಾಗ ಐತಿ ಜೀವ ” [1] ಎಂದು ದರ್ಶನ ವಿಶಿಷ್ಟತೆ ( Individuality in Perception ) ಯನ್ನು ಸೂಚಿಸಿದ್ದಾರೆ.

ಕೋಪ ದುಃಖ ಬೆರೆತ ಅಳು, ಮೆಚ್ಚುಗೆ ಹಾಸ್ಯ ಬೆರೆತ ನಗು ಇಂಥ ಎರಡು ರಸಗಳು ಬೆಸುಗೆಗೊಂಡು ಮೂಡುವ ಅನುಭವಗಳು ಭಾವದ ಬೆಸುಗೆಯನ್ನು (Blended Emotion) ಸೂಚಿಸುತ್ತವೆ.

“ ಕುರುಡು ಧರ್ಮಕ್ಕೆ ಸ್ಮಾರಕವು ನಿಂತಂತಾಕೆ
ವೈಮರೆತು ನಿಂತಾಗ್ಗೆ ಗೂಗೆ ಹಾಡಿತ್ತು ” [2]

ಎಂಬ ಉದ್ಗಾರದಲ್ಲಿ ಕುರುಡುಧರ್ಮದ ಬಗೆಗಿನ ಕೋಪದೊಡನೆ ಪುಟ್ಟ ವಿಧವೆಯ ದುರಂತಕ್ಕೆ ಮಿಡಿದ ಮನದ ಅನುಕಂಪವೂ ಸೇರಿದೆ. “ ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ ಏಸೊಂದು ನಗಿ ಇತ್ತ ” [3] ಎಂಬ ರಸನಿಮಿಷದ ನೆನಪಿನಿಂದ ಜಿಗಿಯುವ ಕುದುರೆಯೊಡನೆ “ ಆ ನಗಿ ಇತ್ತಿತ್ತ ಹೋಗೇತಿ ಎತ್ತೆತ್ತ ? ” [4] ಎಂಬ ಒಡಕನುಡಿ ಬೇಗೆಯು ಬಿಸಿಲು ಸೇರಿ ಬಿಸಿಲುಕುದುರೆಯಾಗಿದೆ.

ಬೇಂದ್ರೆಯವರ ಸಾಂಸಾರಿಕ ಜೀವನ ದೃಷ್ಟಿ ಹೆಚ್ಚು ಮನೋವೈಜ್ಞಾನಿಕವಾಗಿದೆ. ಜೀವನದ ಸಹಜ ಅನುಭವಗಳಿಂದ ಮೂಡಿದ ಸಖೀಗೀತ, ಉಯ್ಯಾಲೆಯ ಕರುಳಿನ ವಚನಗಳಂತಹ ಹಾಡುಗಳು ಸಾಂಸಾರಿಕ ತತ್ತ್ವ ದರ್ಶನಗಳೆಂದರೆ ತಪ್ಪಾಗಲಾರದು.

ಯೌವನದಲ್ಲಿ “ ‘ ಓಡಿಹೋಗೋಣು ಬಾ ’ ಎಂದು ಪ್ರಣಯದೋಲೆಯನೊಂದು ಎದೆವಾತಿನಿಂದೆದೆಗೆ ನಾನಟ್ಟಿದ್ದೆ; ” [5] ಎನ್ನುತ್ತಾರೆ ಬೇಂದ್ರೆ. ಗಾಳಿಗೋಪುರಗಳನ್ನು ಕಟ್ಟುವುದೇನು; “ ಅನ್ನೋ ಜನರು ಏನು ಅಂತಾನ ಇರತಾರ, ಹೊರತಾದೆ ನೀ ಜನಕ ” [6] ಅನ್ನುವ ಧೈರ್ಯವೇನು; ಕಾಮುಕಸ್ತೂರಿಯ ಕಂಪೇನು; ಕುಣಿಯುವ ಮನ, ಹಾಡುವ ಹೃದಯ, “ ಕಿವಿಮಾತ ಸೊಗಸೇನು ಆಡಿದ್ದಾಡುವದೇನು ಹಳಿಸದ ಮುದ್ದಾಟ ಒಸಗುತಿರೆ ಸವಿ ಬಂತು ಮುನಿಸಿಗು, ಕಳೆ ಬಂತು ಕನಸಿಗು ನೋಹದ ಮಾಟವನೆಸಗುತಿರೆ. ” [7] ಎಂಬ ಸಾಂಸಾರಿಕ ಜೀವನದ

---

1 ಹದಾ ಇಲ್ದ ಪದಾ(ಮರ್ಯಾದೆ).
2 ಪುಟ್ಟ ವಿಧವೆ (ಸಖೀಗೀತ).
3–4 ಬಿಸಿಲುಕುದುರೆ (ಗರಿ).
5 ಸಖೀಗೀತ (ಸಖೀಗೀತ).
6 ಕಾಮುಕಸ್ತೂರಿ (ಮೂರ್ತಿ ಮತ್ತು ಕಾಮುಕಸ್ತೂರಿ).
7 ಸಖೀಗೀತ (ಸಖೀಗೀತ).

ಮೊದಲಿನ ಮುಗ್ಧತೆ ಕ್ಷಣಿಕವಾದರೂ ಸುಂದರ. "ಏಳು ಮೆಟ್ಟಿನ ಹುಲಿಯ ಬೀರಬೇಂಟೆಯ ಬಿಡಿಸಿ ಮಗುವ ಮುದ್ದಾಡುವೊಲು ಮಾಡಿದಾಕೆ." [1] ಎಂಬ ಹಾಗೆ ಗಂಡುತನವನ್ನು ಹೆಣ್ತನ ಮಾರ್ದವಗೊಳಿಸುವುದು ಸಹಜವೇ.

ಆದರೆ, ಮುಗಿಯದೆನಿಸಿದ ಹಾಡು ಒಮ್ಮೆಗೇ ಮುಗಿದರೆ, ಕ್ರಮಿಸುವ ದಾರಿಯಲ್ಲಿ ಕಡು ಬಂಡೆ ಬಂದರೆ ಬಾಳಿನ ಬಂಡಿ ಮುಗ್ಗರಿಸುತ್ತದೆ. [2] ಮಕ್ಕಳು ಸಂಸಾರದ ಆನಂದದ ಕುಡಿಗಳು. ಆದರೆ ಮೊದಲ ಮಗು ತೀರಿಕೊಂಡರೆ ಆಗುವ ದುಃಖಕ್ಕೆ ತಲ್ಲಣಿಸದ ತಾಯಿತಂದೆಗಳಾರು? ಆಸೆಗೆ ಕಲ್ಲು ಬಿದ್ದಾಗ ಆತಂಕಗೊಂಡ ಮನಸ್ಸು ಸಮಾಧಾನ ಕಂಡುಕೊಳ್ಳಲು ಅಸಂಗತವೆನಿಸಬಹುದಾದ ರಕ್ಷಣಾತಂತ್ರಗಳನ್ನವಡಿಸಿಕೊಳ್ಳುತ್ತದೆ. ದುಃಖದ ಕೊನೆಯಲ್ಲಿ ಸುಖ ಬರುತ್ತದೆ ಎಂಬ ಆಶಾವಾದವನ್ನು ಪ್ರತಿಪಾದಿಸುವ ಅಜ್ಜಿ ಕಥೆಗಳು ಮನಸ್ಸಿಗೆ ಹಿತವೆನಿಸುತ್ತವೆ. ಮಕ್ಕಳ ಕಥೆಯೆನಿಸುವಂಥದರಲ್ಲೂ ದೊಡ್ಡವರು ಆಸಕ್ತರಾಗುವಷ್ಟು ಮನಸ್ಸು ದುರ್ಬಲವಾಗುತ್ತದೆ.

"ಮಾಜಲಿ ಮೊಗ ಮೊದಲು ಎಡರೆಷ್ಟೇ ಬರುತಿರಲಿ.  
ಮುಗಿತಾಯ ಸಿಹಿಸಕ್ಕರೆಯಾಗುತಿರೆ  
ರಾಜಪುತ್ರಿಗೆ ಕೊನೆಗೆ ಕಟ್ಟಿಟ್ಟ ಹಾಗೆಯೆ  
ರಾಜಪುತ್ರನು ಬರುವ ಹೇ ಸುಖವೇ!" [3]

ಕನಸಿನ ಕಥೆಯಲ್ಲಿ ಕಂಡಂತೆ, ಆಘಾತದ ಅನಂತರ ಮಗುವಾದಾಗ ಅದರ ಮೇಲೆ ಭರವಸೆಯಿಡುವ ಮನಸ್ಸು ಬೇರೆ ಬೇರೆ ಪರಿಯಲ್ಲಿ ಬಲಿಯುತ್ತದೆ. "ನನ್ನ ಹಂಬಲದ ಹಂಬಿಗೆ ಹಂದರ ನೀನು" [4] ಎಂಬ ಹಂಬಲದ ದೈನ್ಯತೆ ಬರುತ್ತದೆ.

"ಮಲಗು ಕಾಣದಿರಲವನ ಸುಡುಗಾಡು ಮೋರೆಯು" [5] ಎಂದು ಗುಮ್ಮನನ್ನು ಬೈದು ಮಗುವನ್ನು ಮಲಗಿಸಿ ಮತ್ತೆ ಮಗು ಮಲಗಿದಾಗ "ಗುಮ್ಮ, ಅಲ್ಲಿಯೂ ಕಂದನಂಜಿಸದಿರೆಲೆ" [6] ಎಂದು ಗುಮ್ಮನಿಗೆ ಬೇಡುವ ಮನಸ್ಸಿನಲ್ಲಿ ಭಯವಿಹ್ವಲತೆಯಿದೆ.

ಏನೇ ಇರಲಿ, ಮಗುವನ್ನು ಬಿಟ್ಟು ಇರಲಾರದಷ್ಟು ಅನುಬಂಧ ತಾಯಿಗೆ ಬೆಳೆಯುತ್ತದೆ. "ಕೆಲಸದಲಿ ಬಿಡುವಿಲ್ಲ, ಕೂಸಿನಲಿ ಮನವೆಲ್ಲ" [7] ಎಂಬುದೂ ಇಂಥ ಆತ್ಮಾನುಬಂಧದ (Identification) ಒಂದು ಸ್ಥಿತಿ.

---

1 ಗೃಹಿಣಿ (ಉಯ್ಯಾಲೆ).  
2–3 ಸಖೀಗೀತ (ಸಖೀಗೀತ).  
4 ಆಶೆ ನಿರಾಶೆ (ಉಯ್ಯಾಲೆ).  
5–6 ಗುಮ್ಮ ( ,, ).  
7 ತಾಯಿ ಕೂಸು (ನಾದಲೀಲೆ).

ಮನುಷ್ಯ ಗಂಡು-ಹೆಣ್ಣಿನ ಅಂಶಗನ್ನೊಳಗೊಂಡ ದ್ವಿಮುಖ (Anima Animus) ವ್ಯಕ್ತಿತ್ವ ಉಳ್ಳವನೆಂಬ ಯೂಂಗನ ದ್ವಿಲಿಂಗ (Bisexual) ತತ್ತ್ವದ ಗೋಚರಚಿತ್ರ ಇಲ್ಲಿದೆ—

> "ಗಂಡುಗಾಡಿಯಲ್ಲಿ ಹೆಣ್ಣವೋಡಿ ಬೆರೆತು
> ಅರ್ಧನಾರಿ-ನಟೇಶ್ವರನ ಅಭಿನವಸೃಷ್ಟಿಯಾದೆಯಲ್ಲ!" [1]

ಮಗುವಿನ ಚಿತ್ತಪ್ರಕೃತಿಯ ಯಥಾರ್ಥ ಚಿತ್ರಣ ಬೇಂದ್ರೆಯವರ 'ಹುಚ್ಚುಖೋಡಿ' ಯಲ್ಲಿದೆ — "ಗಾಳಿ!.... ಮನಸು ಖರಾಯ! ಹೊರಳಿದತ್ತ ಹೊರಳಿತು, ತೆರಳಿದತ್ತ ತೆರಳಿತು, ಹುಚ್ಚುಖೋಡಿ!" [2] "ಬೆವರ ಹನಿಯಲಿ ಹಲವು, ಕಣ್ಣೀರಿನಲಿ ಕೆಲವು, ನೆತ್ತರದಿ ಬರೆದುದಕೆ ಲೆಕ್ಕವಿಲ್ಲ" [3] ಹೀಗೆ ಪ್ರೇಮದ ಹೊತ್ತಿಗೆಗೆ ಹಲವು ಪುಟಗಳು. ಹೇಗೇ ಆಗಲಿ; ಸಂಸಾರದ ಸಂಬಂಧ ನಿರಂತರ ಅನುಬಂಧ.

> "ನನಗೂ ನಿನಗೂ ಅಂಟಿದ ನಂಟಿನ
> ಕೊನೆ ಬಲ್ಲವರಾರು ಕಾಮಾಕ್ಷಿಯೇ" [4]

ಬೇಂದ್ರೆಯವರ ವ್ಯಕ್ತಿತ್ವ ವಿಕಾಸಗೊಂಡು ಇದೀಕ ಆತ್ಮಿಕ ಮಟ್ಟವನ್ನು ಮುಟ್ಟಿರುವುದರ ಗುರುತು, ಅವರ ಅರಳುಮರಳು, ನಾಕುತಂತಿ, ಶ್ರೀಮಾತಾ, ಮುಂತಾದ ಇತ್ತೀಚಿನ ಆಧ್ಯಾತ್ಮಿಕ ಕವನಗಳು.

> "ನಿರ್ಭಯಾ ನಿನ್ನ ನಾಡಿಸ್ಪಂದ ಸ್ವಚ್ಛಂದ ಸ್ವಚ್ಛಂದ
> ಆ ಛಂದದಲಿ ನಾನು ನಡೆವುದೆಂದೋ" [5]

ಎಂದು ಹಿಂದೆಯೇ ಮೂಡಿದ್ದ ಜಿಜ್ಞಾಸೆಯ ದಾರಿಯಲ್ಲಿ ಬೇಂದ್ರೆಯವರೀಗ ಬಲು ದೂರ ಸಾಗಿದ್ದಾರೆ. ಕಾರ್ಲ್ ರೋಜರ್ಸ್ ತನ್ನ ಆತ್ಮತತ್ವದಲ್ಲಿ (Self theory) ಆತ್ಮ ವಿಕಾಸಶಕ್ತಿಯನ್ನು (Growth force) ನಿರ್ಭಂಧಗಳಿಂದ ಮುಕ್ತಗೊಳಿಸಿ ಸ್ವತಂತ್ರ ವಿಕಾಸಕ್ಕೆ ಅನುವು ಮಾಡಿಕೊಡುವುದು ಅಗತ್ಯ ಎನ್ನುತ್ತಾನೆ. ನಿರ್ಭಯರಾದರೆ ನಮ್ಮ ವಿಕಾಸ ನಮ್ಮ ಕೈಯಲ್ಲಿದೆ.

---

1 ಅರ್ಧನಾರಿ-ನಟೇಶ್ವರ (ಉಯ್ಯಾಲೆ).
2 ಹುಚ್ಚುಖೋಡಿ ,,
3 ಒಲವೆಂಬ ಹೊತ್ತಿಗೆ ,,
4 ಸಖೀಗೀತ (ಸಖೀಗೀತ).
5 ನಿರ್ಭಯಾ (ನಾದಲೀಲೆ).

"ನಿನ್ನೊಳಗೆ ಜಿಹ್ವೆ ಚಿಗುರಲಿ; ಹಿಂದೆ ಕಣ್ಣು ಅರಳಲಿ, ಹಿಗ್ಗ ಹಣ್ಣ ಪಡೆಯುವೆ ಮುಂದೆ."[1] ಮನಸ್ಸು ಬುದ್ಧಿಗಳ ಸರಿಯಾದ ಹೊಂದಾಣಿಕೆಯು ಆತ್ಮವಿಕಾಸಕ್ಕೆ ಅನುಕೂಲ. ಹಾಡು ಸುಮ್ಮನೆ ಹುಟ್ಟುವುದಿಲ್ಲ. ಮನೋವಿಕಾಸವಾಗದೆ ಅದು ಪ್ರಕಟಗೊಳ್ಳುವುದಿಲ್ಲ. "ಹದಾ ಒಳಗ್ಯ ಇಲ್ದ ತಮ್ಮಾ, ಪದಾ ಹೊರಗ್ಯ ಬರೂದಿಲ್ಲಾ"[2] ಎನ್ನುತ್ತಾರೆ ಬೇಂದ್ರೆ.

ಈ ರೀತಿಯಾಗಿ ಬೇಂದ್ರೆಯವರ ಪಾಡು ಹಾಡಾಗಿದೆ, ಜೀವನ ಕವನವಾಗಿದೆ. ಬಾಳಿನ ಅನುಭವಗಳನ್ನು ಮನೋವೈಜ್ಞಾನಿಕ ದೃಷ್ಟಿಯಿಂದ ಪರಿಶೀಲಿಸುವ ಮತ್ತು ಬಾಳಿನ ಜಟಿಲತೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಅದರೊಳಗೊಂದು ಅರ್ಥವನ್ನು ಕಾಣಬಲ್ಲ ಕಣ್ಣು ಬೇಂದ್ರೆಯವರದು. ಈ ದೃಷ್ಟಿಯಿಂದ ಕನ್ನಡದ ಹೆಮ್ಮೆಯ ಬೇಂದ್ರೆ, ವರಕವಿ ಅಂಬಿಕಾತನಯದತ್ತ ಮಾತ್ರವಲ್ಲ, ಜೀವನದ ಬಗೆಗೆ ವೈಜ್ಞಾನಿಕ ದೃಷ್ಟಿಯುಳ್ಳ ಮನೋವಿಜ್ಞಾನಿಯೂ ಹೌದು.

§ § § §

---

1 ಅಭಿರುಚಿ (ಉಯ್ಯಾಲೆ).
2 ಹದಾ ಇಲ್ದ ಪದಾ (ಮರ್ಯಾದೆ).

೧೮

# ಬೇಂದ್ರೆಯವರ ಕಾವ್ಯದಲ್ಲಿ ಭಾವಸಂಪತ್ತು

**ಚೆನ್ನವೀರ ಕಣವಿ**

“ ಬಾರೊ ಸಾಧನ ಕೇರಿಗೆ।
    ಮರಳಿ ನಿನ್ನೀ ಊರಿಗೆ ॥
ಮಳೆಯು ಎಳೆಯುವ ತೇರಿಗೆ
    ಹಸಿರು ಏರಿದೆ ಏರಿಗೆ
ಮಲೆಯ ಮೊಗವೇ ಹೊರಳಿದೆ
    ನೆಲಕೆ ಹರೆಯವು ಮರಳಿದೆ;
ಭೂಮಿತಾಯ್ ಒಡಮುರಿದು ಎದ್ದಳೊ
    ಶ್ರಾವಣಕೆ ಸಿರಿ ಬರಲಿದೆ ॥ ”

ಸಾಧನಕೇರಿಯು ಕವಿಯ ಪುನರಾಗಮನವನ್ನು ಬಯಸಿ ಬಯಸಿ ತನ್ನ ಬಯಕೆಯನ್ನು ಪೂರೈಸಿಕೊಂಡಿದೆ. ಕವಿವರ್ಯ ಬೇಂದ್ರೆಯವರು ಸಾಧನಕೇರಿಯಲ್ಲಿಯ ತಮ್ಮ ಮನೆಗೆ ಮರಳಿ ಬಂದಿದ್ದಾರೆ. ಅವರ ಬರುವಿಕೆಯಿಂದ ಆ ಮನೆ ಈಗ ಬಣ್ಣಗೊಂಡಿದೆ. ಮೋಡಗಳ ನೆರಳಾಟ, ಅಡವಿ ಹೂಗಳ ಕೂಟ, ಗುಂಪಾಗಿ ಪಾತರಗಿತ್ತಿ ಕುಣಿಯುವ ತೋಟ— ಇವಕ್ಕೆ ಮತ್ತಿಷ್ಟು ಕಳೆಯೇರಿದೆ. ‘ ಧಾರವಾಡದ ತಾಯೇ, ನನಗಾಧಾರ ನಿನ್ನದಲ್ಲದಿಲ್ಲ ’ ಎಂಬ ಕವಿಯ ನಂಬಿಕೆ ಫಲಿಸಿದೆ.

ಅರುವತ್ತರ ಗಡಿಯನ್ನು ದಾಟುತ್ತಿರುವಂತೆಯೇ ಬೇಂದ್ರೆಯವರು ಸೊಲ್ಲಾಪುರದ ಸಿದ್ಧರಾಮನ ಸನ್ನಿಧಿಯಿಂದ ಅಪ್ಪಣೆ ಪಡೆದುಕೊಂಡು ಒಳನಾಡಿನ ಕರೆಗೆ ಸಿದ್ಧರಾದರು :

“ ಭಾಗ್ಯನಗರದ ಭಾಷೆ, ಪುಣ್ಯನಗರಿಯ ಭಾಷೆ
    ಬೆಂಗಳೂರಿನ ಭಾಷೆ ಬೆಳಗುತಿರಲು,

ಸೊನ್ನಲಿಗೆಯಲಿ ಮೂರು ಸೇರಿ ಮುಪ್ಪುರಿಗೊಂಡು
ಒಪ್ಪೀತೆ ಎಂದಾರೆ ತೊಳಗದಿರಲು ! ”

ಸಿದ್ಧರಾಮನ ಕರುಣೆ ಸಾಕಾರಗೊಂಡಂತೆ ಏಳು ಹೊಳೆಗಳ ನಾಡು ಏಳುತ್ತಿರುವುದನ್ನು ಕವಿ ಅಲ್ಲಿಂದಲೇ ಕಂಡರು. ದಿಕ್ತಟಕೆ ಮುದ್ದಿಟ್ಟು ಬರುವ ಅದರ ಸಂಗೀತವನ್ನು ಜೀವವೇ ಕಿವಿಯಾಗಿ ಕೇಳಿದರು. ಈ ಹನ್ನೆರಡು ವರ್ಷಗಳ ಕಾಲ ಆಗಲಿ, ದೂರವಿದ್ದರೂ ಧಾರವಾಡ ಸೀಮೆಯ ಸಂಬಂಧವು ಹೀಗೆ ಅಖಂಡಿತವಾಗಿ ಉಳಿದು ಬೆಳೆದು ಬಂದಿದೆ.

ಬೇಂದ್ರೆಯವರ ಇದುವರೆಗಿನ ಕಾವ್ಯಕೃಷಿ ಯಾವ ನಾಡಿಗೂ ಹೆಮ್ಮೆಯನ್ನೂ, ಕೀರ್ತಿಯನ್ನೂ ತರುವಂತಹದು : ವೈವಿಧ್ಯದಲ್ಲಿ, ಸತ್ತ್ವದಲ್ಲಿ, ಗುಣದಲ್ಲಿ, ತೇಜಸ್ಸಿನಲ್ಲಿ. ಅವರ ಕಾವ್ಯಕ್ಕೆ ಎಟುಕದ ವಸ್ತುವಿಶೇಷವೇ ಉಳಿಯಲಿಲ್ಲವೆಂದರೂ ನಡೆಯುತ್ತದೆ. ಕನ್ನಡ ಕವಿತೆ ಅವರ ಕೈಯಲ್ಲಿ ಕೀರ್ತಿಶಿಖರಕ್ಕೇರಿ, ನೆರೆಹೊರೆಯ ಪ್ರಾಂತಗಳಲ್ಲೂ ಕೆಲಮಟ್ಟಿಗೆ ವಿಜೃಂಭಿಸುವಂತಾಗಿದೆ. ಈ ನಾಡಿನ ಸಾರಸರ್ವಸ್ವಕ್ಕೆ ಅವರ ಕವಿತೆ ನುಡಿವ ನಾಲಿಗೆಯಾಗಿ, ಇಲ್ಲಿಯ ಜನದ ಬದುಕಿನ ಸಾರೋದಯ ಕವಿಯಾಗಿದ್ದಾರೆ ಅವರು.

ಸಾಮಾನ್ಯವಾಗಿ ಅವರ ಕವಿತೆಗಳು ಕಾವ್ಯಗುಣದಲ್ಲಿ ಒಂದು ಉನ್ನತ ಮಟ್ಟವನ್ನು ಬಿಟ್ಟು ಕೆಳಗಿಳಿಯುವದಿಲ್ಲ. ವಸ್ತು ಎಷ್ಟೇ ಸಾಮಾನ್ಯವೆನಿಸಿದರೂ ಅದು ತನ್ನ ವಿಶೇಷತೆಯನ್ನು ಬಿಟ್ಟುಕೊಡದೆ, ಭಾವಸಂಪತ್ತನ್ನು ಗಳಿಸಿಕೊಂಡೇ ಬರುತ್ತದೆ. ಯಾವ ವಾಗಾಡಂಬರಕ್ಕೂ ಎಡೆಗೊಡದೆ, ಕಿರಿದರಲ್ಲಿ ಭಾವಗರ್ಭಿತವಾಗಿ, ನಾದಮಾಧುರ್ಯದಿಂದ, ಧ್ವನಿಪೂರ್ಣವಾಗಿ ಓದುಗರನ್ನು ಈ ಕಾವ್ಯ ರಸಪರವಶರನ್ನಾಗಿ ಮಾಡುತ್ತದೆ; ಜಾನಪದ ಶೈಲಿ, ಛಂದಸ್ಸುಗಳಿಂದ ಆತ್ಮೀಯತೆ ಪಡೆಯುತ್ತದೆ. ಓದಿ ಓದಿದಂತೆ ವಿಶೇಷಾರ್ಥವನ್ನು ಸ್ಫುರಿಸುತ್ತ ಹೊಸ ಹೊಸ ಕಾಣ್ಕೆಗಳನ್ನು ನೀಡುತ್ತದೆ. ಪದ್ಯದಲ್ಲಿ ಬಳಸುವ ಮಾತು ಹುಸಿಹೋಗದಂತೆ, ಅತಿಯಾಗದಂತೆ, ನವನೀತವನ್ನು ತೆಗೆದಂತೆ ಹೇಳುವದು ಅವರ ವೈಶಿಷ್ಟ್ಯ. ಭೃಂಗದ ಬೆನ್ನೇರಿ ಬಂದ ಕಲ್ಪನಾವಿಲಾಸ ಗಾಳಿಯೊಡನೆ ತೆಳ್ಳಿಯಾಡಿ, ದಿಕ್ತಟಗಳನ್ನೂ ಹಾಯ್ದು, ಚಿಕ್ಕೆಯೊಡನೆ ಕೂಟ ಬೆಳೆಸುತ್ತದೆ. ಬೇಂದ್ರೆಯವರ ಕವಿತೆಗಳಲ್ಲಿ ಮೆಚ್ಚಿದ ಹತ್ತು ಪದ್ಯಗಳನ್ನು ಆರಿಸಿ ತೆಗೆಯುವದೆಂದರೆ ಅಸಾಧ್ಯಕೆಲಸ. ಆ ಅಗಾಧವಾದ ವೈವಿಧ್ಯದಲ್ಲಿ ಯಾವುದನ್ನು ಬಿಡುವುದು ? ಒಂದೊಂದು ಕವಿತೆಯೂ ಒಂದೊಂದು ರೀತಿಯಲ್ಲಿ ನಮ್ಮ ಹೃದಯವನ್ನು ಸೆರೆಹಿಡಿಯುತ್ತದೆ.

ಅನುಭವದ ಆಳದಿಂದ ಮೂರ್ತಗೊಂಡ ಬೇಂದ್ರೆಯವರ ಕವಿತೆ ವಾಚಕನ ಹೃದಯದ ತಳಮುಟ್ಟಿ ಬರುತ್ತದೆ : ಯಾವ ಸದ್ದು ಗದ್ದಲವಿಲ್ಲದೆ ಪ್ರಶಾಂತವಾದ

ಚಂದ್ರೋದಯದ ಬೆಳಕು ಪಸರಿಸುವಂತೆ, ಹಾಲಿನಲ್ಲಿ ಸಕ್ಕರೆ ಕರಗುವಂತೆ. ಸುಖ, ದುಃಖ, ಸಂತೋಷ, ಸೌಂದರ್ಯ, ವಾತ್ಸಲ್ಯ, ಪ್ರೇಮ, ಅಮೃತಾನುಭವ ಯಾವುದರ ಒಂದು ಭಾವವನ್ನು ಅನುಸರಿಸಿದರೂ ಅದು ಜೀವನದ ವಿಶಾಲ ಪರಿಧಿಯನ್ನೇ ನಮ್ಮ ಕಣ್ಣೆದುರು ತೆರೆಯುತ್ತದೆ. ಆ ರಸಪಾಕದಲ್ಲಿ ಎಲ್ಲವೂ ಹಾಲುಗಡಲಿನ ಸೀಮೆಯಾಗಿ ಕಂಗೊಳಿಸುತ್ತದೆ. "ಕಲಿ ಕಪ್ಪು ಎಲ್ಲಿನೂ ಇಲ್ಲ | ಒಂದೆ ಸವನೆಲ್ಲ | ಎಲ್ಲನೂ ನುಣುಪು ಎಲ್ಲನೂ ನುಣುಪ. ||" ಎಂಬ ಅನುಭವ ವಾಚಕನಿಗುಂಟಾಗದಿರದು.

ಸೃಷ್ಟಿಯಲ್ಲಿ ಬಿಡಿ ಬಿಡಿಯಾಗಿ ಕಾಣುವ ಸೌಂದರ್ಯವನ್ನು ಇಡಿಯಾಗಿ ಅನುಭವಿಸಿ ಆನಂದಿಸುವ ಹಿರಿಯ ಪ್ರವೃತ್ತಿ ಇಲ್ಲಿದೆ. ಎಲ್ಲಿಂದೊ ಬಂದ ಒಂದು ಸೌಂದರ್ಯ ಝರಿಯಿಂದ ಎದೆ ಎದೆಯ ಕಾರಂಜಿ ಪುಟಿಯುತ್ತಿದೆ; ಯಾರಿಂದೊ ಚಲಿಸುವ ಪ್ರಾಣದ ಸೂತ್ರವು ಪುರುಷ-ಪ್ರಕೃತಿಗಳನ್ನು ಕುಣಿಸುತ್ತಿದೆಯೆಂಬುದರ ಮರ್ಮವನ್ನು ಬೇಂದ್ರೆಯವರ ಕಾವ್ಯ ಸಾರುತ್ತದೆ :

"ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ
ಕಣ್ಣಿಗು ಕಣ್ಣಾಗಿ ಒಳಗಿಹುದು;
ರೂಪ ಲಾವಣ್ಯಕೆ ಅಳೆಯಲುಬಾರದು
ಅವುಗಳೆ ಇದರೊಂದು ಕಣವಿಹವು."

ಪೂರ್ವಾನುರಾಗದ ಒಂದು ಪರ್ವಕ್ಕೆ ಸಂದಿದ 'ಸಖೀಗೀತ' ಅಮರಗೀತವಾಗಿದ್ದು ಆ ಮಾರ್ಗದ ಕಾವ್ಯಕ್ಕೆ ಅಖಂಡವಾದ ಸ್ಫೂರ್ತಿಯ ಸೆಲೆಯಾಗಿದೆ. ಸಾಲು ಸಾಲಿಗೂ ರಸಲೋಕಕ್ಕೆಳೆದೊಯ್ಯುವ ಅದರ ಮೋಹಕ ಲಾವಣ್ಯ ಅನುಪಮವಾದುದು. ನಾಡಬಳಕೆಯ ನುಡಿಗೆ ಸೋತಿದ್ದ ಕವಿಯ ಮನವನ್ನು ಹಾಡಿನ ಮೋಡಿಗೆ ಒಲಿಸಿದುದರ ಪರಿಯನ್ನು ಇವರಲ್ಲಿ ಸುಖವಾಗಿ ಕಾಣಬಹುದು.

ಹೃದಯದ ತೀವ್ರಾನುಭವವನ್ನು ಅಷ್ಟೇ ಬಂಧುರವಾಗಿ ಅಭಿವ್ಯಕ್ತಗೊಳಿಸುವ ರೀತಿ ಬೇಂದ್ರೆಯವರಲ್ಲಿ ಕಾಣುವಷ್ಟು ಪರಿಣಾಮಕಾರಿಯಾಗಿ ಬೇರೆಡೆಗೆ ಸಿಗುವದು ದುರ್ಲಭ. ಸಾಲುಸಾಲಿಗೂ ಭಾವ ಸಮೃದ್ಧಗೊಳ್ಳುತ್ತ ಹೋಗಿ ಕಾವ್ಯವಸ್ತುವನ್ನು ದಳ ದಳ ದಳ ಅರಳಿಸುತ್ತದೆ. ಕೈಗೆ ಸಿಕ್ಕ ಕೆಲ ಉದಾಹರಣೆಗಳನ್ನಿಲ್ಲಿ ಗಮನಿಸಬಹುದು :

"ಮಣ್ಣೆದೆಯಲಿ ಝುರಿಸುವ ನೀರ ಸೆಲೆಯಂತೆ
ಮಾಂಸದಿ ತೊರೆಯುವ ಹಾಲಿನೊಲು

ಬಿಸಿಲಿದೆಯನು ಬಿರಿದು ಬಯಸಿದ ಸುಳಿಗಾಳಿ
ಬಳಬಳ ಮೈಬಳಸಿ ಸುತ್ತಾಡಿತು. "

('ಸಖೀಗೀತ')

"ಇರುಳು ಮಬ್ಬಿನಾಗ ಹಗಲಿನ ಬೆಳಕು
ಕರ್ಗಗಿದಂತಿತ್ತ
ಗುಂಗುಹಿಡಿಹು ತಂಗಿದಾಗ
ತುಂಬಿನಿಂತಿತ್ತ ಈಗ
ತುಳುಕಿ ಹೋಗಿತ್ತ "

('ತುಂಬಿ ಬಂದಿತ್ತು')

"ಆಡುತಾಡುತ ಬಂದು ಸಿಂಗಾರ ಸೊಳ್ಳೀಹಾಂಗ
ಹಾಡಿಲೆ ಕಿವಿಗಲ್ಲ ಕಡಿದೇನ "

('ಮಾಯಾಕಿನ್ನರಿ')

"ರೇಸಿಮೆ ಪಕ್ಕ ನಯ
ಮುಟ್ಟಲಾರೆ ಭಯ "

('ಪಾತರಗಿತ್ತಿ ಪಕ್ಕ')

"ಹುಣ್ಣಿವೆಯ ರಸವೆ ಹರಿದು
ಕಣ್ಣತುಂಬಿ ಮೈಯು ತುಂಬಿ
ಹಣ್ಣಗೊಳಿಸಿ ಹದಕೆ ತಂದು
ತೆನೆಗೆ ಹಾಲು ತುಂಬಿದಂತೆ
ಕೊಳಲನೂದಿದ "

('ಎರಡನೆಯ ಹಾಡು')

ಇವೇ ಮೊದಲಾದ ಇನ್ನೂ ಅನೇಕ ಪದ್ಯಗಳಲ್ಲಿ ಭಾವಾಭಿನಯದ ಸೊಗ-ಸನ್ನೂ ಎತ್ತಿ ತೋರಿಸಬಹುದು.

ಬೇಂದ್ರೆಯವರ ನಿಸರ್ಗಗೀತಗಳಿಂದಾಗುವ ಆನಂದ ಅವರ್ಣನೀಯ. ಪ್ರಕೃತಿ ಸೌಂದರ್ಯವನ್ನು ಬರಿಯ ಅದರ ಬಣ್ಣನೆಯಲ್ಲಿ ಮುಗಿಸಿಬಿಡದೆ ಪ್ರಕೃತಿ–ಪುರುಷರ ಅನಂತ ಲೀಲೆಗಳಲ್ಲಿ ಅದು ಪರ್ಯವಸಾನಗೊಳ್ಳುತ್ತದೆ. ನಯ, ಸೂಕ್ಷ್ಮತೆಯ ಜೊತೆಗೇ ಅದರ ಭವ್ಯತೆ, ದಿವ್ಯತೆಗಳ ಅರಿವನ್ನೂ ಅಷ್ಟೇ ಸಹಜವಾಗಿ ನಿರೂಪಿಸುವ ಈ ಕವಿ ಎಂಥ ಮಾಯಕಾರ ಎನಿಸಿಬಿಡುತ್ತದೆ :

" ತಿರುತಿರುಗಿಯು ಹೊಸತಾಗಿರಿ
ಎನುತಿದೆ ಋತುಗಾನ
ಈ ಹಾಡಿಗೆ ಶ್ರುತಿ ಹಿಡಿದಿದೆ
ಬ್ರಹ್ಮಾಂಡದ ಮೌನ. "

ಒಂದು ಯಥಾರ್ಥವಾದ ಚಿತ್ರದಲ್ಲಿಯೇ ವ್ಯಾಪಕವಾದ ಕಲ್ಪಕತೆಯನ್ನು ಕುದುರಿಸುವ ಕುಶಲ ಕಲೆ ಈ ನಿಸರ್ಗಗೀತಗಳಲ್ಲಿದೆ:

" ಸಂಜೆಗೆಂಪು ಮೊದಲು ಹಿಂದೆ
ಬೆಳುದಿಂಗಳು ಅದರ ಮುಂದೆ
ಬಿಳುಪಾಗಲು ಅದರ ಮೇರೆ
ವರ್ಣಕ್ರಮ ಕಾಣಲಮಮ
ಇದನು ಬ್ರಹ್ಮ ಬರೆದನೋ. "

(' ಪಾರಿಜಾತ ')

ಬೇಂದ್ರೆಯವರ ಪ್ರತಿಭೆ ಭಾವಸೂಕ್ಷ್ಮತೆಯನ್ನೂ, ರೂಪವಿನ್ಯಾಸವನ್ನೂ ತೋರ್ಪಡಿಸುವಲ್ಲಿ ಹೆಚ್ಚು ವಿಶ್ರಾಂತಿಗೊಳ್ಳುತ್ತದೆ. ಹಸ್ತಿದಂತದಲ್ಲಿ ಕೆತ್ತಿದ ಸುಳುವು-ಹೊಳವುಗಳಂತೆ ಇಲ್ಲಿಯ ವಚೋರಚನವಿನ್ಯಾಸವೂ ' ರೂಪಗಳಿಗೆ, ಚಿತ್ರಗಳಿಗೆ ಉಪಮೆಗಳಿಗೆ ಗಣಿಯಿದು ' ಎಂಬುಸುರುತ್ತದೆ :

" ಬಿದಿಗಿ ಚಂದ್ರನಾ ಜೊಗಚೀ-ನಗಿ-ಹೂ
ಮೆಲ್ಲಗ ಮೂಡಿತ್ತ
ವ್ಯಾಲಕ ಬೆಳ್ಳಿನ ಕೂಡಿತ್ತ.
ಇರುಳ ಹೆರಳಿನಾ ಅರಳಮಲ್ಲಿಗೀ ಜಾಳಿಗಿ ಹಾಂಗಿತ್ತ
ಸೂಸ್ಯಾವ ಚಿಕ್ಕಿ ಅತ್ತಿತ್ತ "

(' ರಾಗರತಿ ')

ಹಳ್ಳಿಯ ಎಲೆವಳ್ಳಿ ತೋಟಗಳಲ್ಲಿ ಬೆಳೆಸಿದ ಜೊಗಚಿ ಗಿಡದ ಹೂವನು ಕಂಡವರಿಗೆ ಇಲ್ಲಿಯ ಮೊದಲ ಸಾಲಿನ ರೂಪಕದ ಸೊಗಸು ಮನದಟ್ಟಾಗುತ್ತದೆ. ಕವಿಯ ಸೃಷ್ಟಿಯ ಸೂಕ್ಷ್ಮನಿರೀಕ್ಷಣೆಯ ಸೊಗಸನ್ನು ಇಂಥ ಹಲವಾರು ಪದ್ಯಗಳಲ್ಲಿ ಕಾಣಬಹುದು :

" ಸಂಜಿಸೂರ್ಯನ ಹೆಗಲ
ಜರದ ಸೆಲ್ಲೇದ ಸೋಗಿ

ನವಿಲಗೊರಳಿನ ಮುಗಿಲ
ಸೆರಗ್ಗೆ ಬೀಸ್ಯಾವ."

('ಚಿತ್ರಿಯು ಮಳೆಯು ಸಂಜೆ')

"ಉಗುರ್ಗೆಂಪು ಹಸಿರು ಬಿಳಿನಿಂಬಿ
ಹುಣಸಿಯಾ ರೆಂಬಿ
ಚಿಗತೀತೇನೊ ಎಂಬಿ
ಕಾಮನ ಬಿಲ್ಲಿನ ಕೊಂಬಿ...."

('ಹೂತಿದ ಹುಣಸಿ')

ಇಲ್ಲಿ ಕಾಮನಬಿಲ್ಲಿನ ಕೊಂಬಿ ಚಿಗಿತಂತಿರುವ ಹುಣಿಸೆಯ ಚಿಗುರನ್ನು ಕಣ್ಣಿಂದ ಕಾಣುವದಷ್ಟೇ ಅಲ್ಲ. ಅದರ ರುಚಿನೋಡಿದ ಅನುಭವವನ್ನೂ ಓದುಗ ಪಡೆಯುತ್ತಾನೆ.

"ಹೂವು ಪಕಳೆ ಪ್ರಾಣ ತುಂಬಿ
ಚಿಟ್ಟೆಯಾಗಿ ಕಾಂಬವೊ!
ಕುಣಿದು ದಣಿದ ಚಿಟ್ಟೆ ಪಕ್ಕ
ಹೂವು ಎನಿಸಿಕೊಂಬವೊ!"

('ಶ್ರಾವಣದ ವೈಭವ')

ಬೇಂದ್ರೆಯವರ ಊಹೆಯಾಗಲಿ, ಕಲ್ಪನೆಯಾಗಲಿ ಬರಿಯ ಉತ್ಪ್ರೇಕ್ಷೆಯಾಗಿ ನಿಲ್ಲದೆ ಹೀಗೆ ಚಿತ್ರಗಳಿಗೆ ಸಜೀವತೆಯನ್ನೂ, ಪಾತ್ರಗಳಿಗೆ ಅಭಿನಯವನ್ನೂ ನೀಡುತ್ತವೆ.

ಬೇಂದ್ರೆಯವರ ಅತ್ಯುಚ್ಚ ಕಲ್ಪಕತೆ ವಿಶ್ವರೂಪಕಗಳನ್ನು (Cosmic images) ಬಳಸಿದಾಗ ಅದರ ಭವ್ಯತೆಯ ಅರಿವೂ ನಮಗಾಗುತ್ತದೆ. ಮಹಾ ಕವಿಯ ಭಾವಪ್ರಕಾಶನದ ಅದ್ಭುತ ಪ್ರತಿಮೆಗಳನ್ನು ಇಂಥಲ್ಲಿ ಕಾಣಬಹುದು :

"ಆಕಾಶ ಅನಿಸತದ ಗುಡಿಯ ಹಾಂಗ
ಪ್ರಕಾಶ ಮಹಾಲಿಂಗ
ನೆಲ ಅಗಲ ಪೀಠದಾಂಗ"

\+ + + + +

"ಗುಡ್ಡ ಗುಡ್ಡ ಸ್ಥಾವರಲಿಂಗ
ಅವಕ ಅಭ್ಯಂಗ

ಎರಿತಾವನ್ನೊ ಹಾಂಗ
ಕೂಡ್ಯಾವ ನೋಡ। ಸುತ್ತೆಲ್ಲ ನೋಡ ನೋಡ "

× × × × ×

" ಹೂವ ಹಡಲಿಗೆಯನು ಹೊತ್ತ
ಭೂಮಿತಾಯಿ ಜೋಗಿತಿ
ಮೈಃತುಂಬಿ ಕುಣಿಯುತಿಹಳ–
ನಂತಕಾಲವೀಗತಿ. "

+ + + + +

" ಮುಗಿಲ ಬಾಯ ಗಾಳಿಕೊಳಲ ಬೆಳಕ ಹಾಡ ಬೀರಿ "

× × × × ×

ನಾಡು, ಸಮಾಜ, ಮಾನವಜೀವನಗಳನ್ನು ಕುರಿತು ಬರೆಯುವಾಗಲೂ ಬೇಂದ್ರೆಯವರ ಕವಿತೆ ಆ ಸಮಸ್ಯೆಗಳ ಮೂಲವನ್ನೇ ಹಿಡಿದು ಅಲ್ಲಾಡಿಸುತ್ತದೆ. ' ಶೊಗಲಚೀಲಗಳಲ್ಲಿ ಬದುಕು ನಡೆ' ದಿರುವ ರೀತಿಯ ಚಿತ್ರಣವನ್ನೂ ಮಾರ್ಮಿಕವಾಗಿ ಅವರು ಕೊಟ್ಟಿದ್ದಾರೆ. ' ಕುರುಡು ಕಾಂಚಾಣ ಕುಣಿಯುತಲಿತ್ತೊ. ಕಾಲಾಗಬಿದ್ದವರ ತುಳಿಯುತಲಿತ್ತೊ,' ಎಂಬಲ್ಲಿಯ ಪ್ರತೀಕಗಳು ಎಷ್ಟೊಂದು ಪರಿಣಾಮಕಾರಿಯಾಗಿವೆಯೆಂಬುದನ್ನು ಪರಿಭಾವಿಸಬಹುದು. ' ಭೂಮಿತಾಯಿಯ ಚೊಚ್ಚಿಲಮಗ ' ಎಂದು ಆತ್ಮೀಯತೆಯನ್ನೂ ಹೊಳೆಸಿ ಆಮೇಲೆ ಅವನ ಅವಸ್ಥೆಗಾಗಿ ಪಡುವ ಕನಿಕರ ಬೇಂದ್ರೆ ಕಾವ್ಯರೀತಿಯ ಒಂದು ಪರಿಯಾಗಿದೆ. ' ಎಲ್ಲಾ ದೇವರು ಬಂದು ತಲ್ಲಣಗೊಂಡರೂ ಅನ್ನದೇವರು ಮಾತ್ರ ಇನ್ನೂ ಬರಲಿಲ್ಲಾ ' ಎಂಬ ಆಕ್ರಂದನ ನಮ್ಮ ಕಿವಿಗಳಲ್ಲಿ ಇನ್ನೂ ಪಡಿನುಡಿಯುತ್ತಿದೆ. ' ಪುಟ್ಟ ವಿಧವೆ 'ಯ ಪಾಡನ್ನು ಪುಟ್ಟಕವಿತೆಯಲ್ಲಿ ಭಟ್ಟಿಯಿಳಿಸಿರುವ ರೀತಿ ಬೇಂದ್ರೆ ಕಾವ್ಯದ ಸಂಯಮಶಕ್ತಿಯನ್ನೂ ಹಾಗೂ ವ್ಯಂಜಕತೆಯನ್ನೂ ಸೂಚಿಸುತ್ತದೆ :

ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದಳೊ
ಹೂಬತ್ತಿ ಹೊಸೆಯಲಿಕೆ ಮೈತಳೆದಳೊ
ಎಂಬಂತೆ ಬಾಳ ಕಳೆದಳು ಬಾಲೆ; ಹೂಮಾಲೆ
ಮುಳ್ಳುಕಂಟಿಯ ಮೇಲೆ ತಾನೆಳೆದಳೋ !

' ಮನುಜನಾದರೆ ಏನು ಮರುಕವಿಲ್ಲದ ಜಗವೆ ನರಕಾ ' ಎಂದು ' ತಿರುಕ ' ಸಮಾಜದಲ್ಲಿ ತಿರುಗುತ್ತಲೇ ಇದ್ದಾನೆ. ಪೊಳ್ಳುಬಿಂಕದ ಮೂಗ ಮೇಲೆ ಮಾಡಿ,

ನೆತ್ತಿಗೇರಿದ ಕಣ್ಣು ಕುರುಡು ದಬ್ಬಾಳಿಕೆಯನ್ನು 'ನರಕ ಯಾತನೆಯ ಮಾನಸ ಪುತ್ರ' ಎಂದು ಕರೆದಿದೆ ಕವಿವಾಣಿ.

"ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು
ನರಬಲಿಯೇ ಬೇಕು !
ಇದುವೇ ಕಾಳಿಯ ಪೂಜೆಯು ಶುದ್ಧ !
ಇದಕ್ಕೆ ಹುಂಬರು ಎಂಬರು ಯುದ್ಧ"

('ನರಬಲಿ')

"ಬಡವರ ಬಗ್ಗರ ತುತ್ತಿನ ಚೀಲದ ಒಳಗಿನ ಒಳಗಿನ ಒಳದನಿ" ಯನ್ನು ಕವಿ ಕಿವಿಗೊಟ್ಟು ಕೇಳಿ ಅದರ ದಾರುಣತೆಯನ್ನು ಎದೆ ಎದೆಗೂ ತಾಗಿಸಿದ್ದಾನೆ. 'ಕನಸಿನೊಳಗೊಂದು ಕಣಸಿ'ನಲ್ಲಿ ಕನ್ನಡ ನಾಡಿನ ಸ್ಥಿತಿಗತಿ 'ಹೆಸರಿದ್ದರೂ ಕೂಡ ಹೇಳ ಹೆಸರಿಲ್ಲ' ಎನ್ನುವ ರೀತಿಯಲ್ಲಿ ಮೈದೋರಿದ್ದರೆ, 'ಮೂವತ್ತು ಮೂರು ಕೋಟಿ'ಯಲ್ಲಿ ವಾಸ್ತವತೆಯೊಡನೆ ವ್ಯಂಗ್ಯವೂ ಬೆರೆತು ಭಾವಾತಿರೇಕತೆಗೆ ಎಡೆಗೊಡದಂತೆ ಮಾಡಿದೆ. 'ಒಂದೇ ಕರ್ನಾಟಕ' ಎಂದು ಹಾಡಿದರೂ, 'ಕನ್ನಡವೂ ಭಾರತವೂ ಜಗವೆಲ್ಲವೂ ಒಂದೇ' ಎಂಬ ಧ್ವನಿಯನ್ನು ಅದು ಕೊಡುತ್ತದೆ. 'ಬದುಕು ಮಾಯೆಯ ಮಾಟ'ವಾದರೂ,

"ಈ ನಾನು ಆ ನೀನು ಒಂದೆ ತಾನಿನ ತಾನು
ತಾಳ ಲಯ ರಾಗಗಳು ಸಹಜ ಬರಲಿ"

ಎಂಬ ಹಿತವಾದದ ಸ್ವತಂತ್ರ ಮನೋಧರ್ಮ ಕವಿಯದು. 'ಬಾಳ ಕರವಾಳ'ವನ್ನು ಹಿಡಿವ ಗಂಡು ಹುಟ್ಟುವಂದು ಸಾವು ಸುಳ್ಳಾಗಿ, ಜೀವ ದೇವನಾಗುತ್ತಾನಂತೆ. ಹೃದಯದಲ್ಲಿ ನಂಬಿಗೆಯ ಕೆಚ್ಚಿದ್ದರೆ ಸಾಕು.

"ನಿನಗೆ ಲೀಲೆ ಸೇರುವಾಗ
ನನಗೆ ಏಕೆ ಬೇಸರ ?
ಕಟ್ಟಿ ಮುರಿದು ಕೆಡಿಸು ಬೆಳಸು
ನೀನೆ ನನಗೆ ಆಸರ."

ಕಷ್ಟ ನಷ್ಟಗಳಿಗೆ ಜಗ್ಗದೇ ಸಂತೋಷಿಯಾಗಿರುವದೇ ಬಾಳುವವರ ಲಕ್ಷಣ. ಅದಕ್ಕಾಗಿ,

“ ಹಗಲಿರಳ ತಾಳಕ್ಕ
ಮುಗಿಯದ ಕಾಳಕ್ಕ
ಜನುಮಗಳ ಮ್ಯಾಳಕ್ಕ ।
ಕುಣಿಯೋಣು ಬಾ ’

ಎಂದು ಕವಿಜೀವ ಕರೆಯುತ್ತದೆ. ಈ ಕವಿತೆಯಲ್ಲಿ ಪ್ರಾಸ ಅತಿಯಾಯಿತೆಂದು ತೋರಬಹುದಾದರೂ ಭಾವ ನುಡಿಯಿಂದ ನುಡಿಗೆ ಬೆಳೆಯುತ್ತ ಹೋಗಿ ‘ ಹದಿ-ನಾಲ್ಕು ಲೋಕಕ್ಕ ಚಿಮ್ಮಲಿ ಈ ಸುಖ ’ ಎನ್ನುವ ಕೊನೆಯ ಸ್ಥಲದಲ್ಲಿ ಐಕ್ಯ ಪಡೆಯುತ್ತದೆ. ಜೀವನದ ಭವಿಷ್ಯವನ್ನು ನಾವು ಅರಿತಿಲ್ಲ; ಅದೊಂದು ಮುಗಿಯದ ಕತ್ತಲೆ. ಹಗಲಿರುಳ ತಾಳ ಹಾಕುತ್ತ, ಜನುಮಗಳ ಮ್ಯಾಳವನ್ನೆ ಕಟ್ಟಿಕೊಂಡು ಅದು ಸಾಗಿದೆ. ಈ ‘ ತಾಳ ’ ‘ ಮ್ಯಾಳ ’ ಕೂಡಿದಾಗ ಸಂಸಾರ. ಅದಕ್ಕಾಗಿ ಸತಿ–ಪತಿಗಳ ಸಂತೋಷದ ಕುಣಿತ. ಈ ಬಗೆಯ ಅರ್ಥವೈಭವವನ್ನು ‘ ಕುಣಿಯೋಣು ಬಾ ’ ಕವಿತೆ ಹೊಂದಿರುವುವರಿಂದ ‘ ತಾಳಕ್ಕ ’, ‘ ಕಾಳಕ್ಕ ’ ‘ ಮ್ಯಾಳಕ್ಕ ’ ಎನ್ನುವ ಪದಗಳು ಬರಿ ಪ್ರಾಸಕ್ಕಾಗಿ ಬಂದವುಗಳಲ್ಲ ಎಂಬುದನ್ನು ಓದುಗರು ಅರಿಯಬೇಕು. ಹಾಗೆ ನೋಡಿದರೆ ಇವರ ಕವಿತೆ ಪ್ರಾಸಕ್ಕಾಗಿ ನಿದ್ದೆಯಲ್ಲೂ ತಡವರಿಸಿಲ್ಲ ಎಂಬುದು ನಿಚ್ಚಳವಾಗಿದೆ. ಎಲ್ಲಿ ನೋಡಿದರೂ ‘ ಭಾವಗೀತೆ ’ಯಲ್ಲಿ ಒಡನುಡಿದಂತೆ ‘ ಮಸೆದ ಗಾಳಿ ಪಕ್ಕ ಪಡೆಯುತ್ತಿತ್ತು ಸಹಜ ಪ್ರಾಸಾ. ’

‘ ಸೂರ್ಯಪಾನ ’ದಿಂದ ಪ್ರಾರಂಭವಾದ ಈಚಿನ ಸಂಗ್ರಹಗಳಲ್ಲಿ ಧ್ವನಿಸುವ ಅನುಭಾವವು ವಾಚ್ಯ–ಅನಿರ್ವಾಚ್ಯಗಳ ನಡುಸೀಮೆಗೆ ಸೇರಿದುದು. ಮಾತಿನ ಬೆಡಗು, ಶ್ಲೇಷೆ, ಶಬ್ದಸಾಹಚರ್ಯ ಈ ಸಂಗ್ರಹಗಳಲ್ಲಿ ಕಣ್ಣಿಗೆ ಬಡಿಯುವಂತೆ ಎದ್ದು ಕಾಣುತ್ತವೆ. ಇವುಗಳ ಗೂಢಗುಂಜನ ಅನೇಕ ಸಲ ಅರ್ಥವಾಗದೇ ಹೋಗುವ ಸಂಭವವಿದ್ದರೂ ಆ ಹಾದಿಯಲ್ಲಿ ಸಂಸ್ಕಾರಗೊಂಡ ಹೃದಯಗಳಿಗೆ ಇವು ಆಪ್ಯಾಯಮಾನವಾಗಿ ಸಂಭವಿಸಬಹುದು. ಹೀಗೆ ಬೆಳೆಸಿದಷ್ಟೂ ಬೆಳೆದು ಬೆಳಗಬಲ್ಲದು ಬೇಂದ್ರೆಯವರ ಕಾವ್ಯದ ಭಾವಸಂಪತ್ತು.

\+ + + + +

ಕಾವ್ಯದಲ್ಲಿ ನಾರಿಕೇಳಪಾಕ, ಕದಳೀಪಾಕ, ದ್ರಾಕ್ಷಾಪಾಕ ಮೊದಲಾದವುಗಳನ್ನು ನಮ್ಮ ಹಿಂದಿನ ಕಾವ್ಯರಸಿಕರು ಗುರುತಿಸಿ ಕೊಟ್ಟಿದ್ದಾರೆ. ಆಧುನಿಕ ಕನ್ನಡ ಕಾವ್ಯದಲ್ಲಿ ವಿಶಿಷ್ಟಗುಣಗಳಿಂದ ಕೂಡಿದ, ಹತ್ತು ಜನರಿಗೆ ಹತ್ತು ಬಗೆಯ ರುಚಿಯನ್ನು ಒದಗಿಸಬಲ್ಲ ‘ ಬೇಂದ್ರೆಪಾಕ ’ ಎಂಬುದನ್ನು ಎತ್ತಿಹೇಳಬಹುದಾಗಿದೆ. ಕನ್ನಡ ಕಾವ್ಯಪರಂಪರೆಯ ಸಾರವನ್ನು ಹೀರಿಕೊಂಡು, ಆಧುನಿಕ ಕಾವ್ಯದ

ಪರಿಕರಗಳನ್ನು ಪರಿಪುಷ್ಟವಾದ ರೀತಿಯಲ್ಲಿ ಬಳಸಿಕೊಂಡು, ಭಾಷೆಯನ್ನೂ, ಭಾವ ವನ್ನೂ, ಅರ್ಥವನ್ನೂ ಎಳ್ಳಷ್ಟೂ ವ್ಯರ್ಥಗೊಳಿಸದೆ ಸಾರ್ಥಕವಾದ ರೀತಿಯಲ್ಲಿ ಧ್ವನಿಗೊಂಡು, ಮುಗಿಲು ಹಸಿಗರೆಯುವಂತೆ ಮಾಡಿದ ಚೋದ್ಯ ಬೇಂದ್ರೆ ಕಾವ್ಯದ್ದಾಗಿದೆ. 'ಮಣ್ಣಿನೆದೆಯಲ್ಲಿ ಝುರಿಸುವ ನೀರ ಸೆಲೆಯಂತೆ, ಮಾಂಸದಲ್ಲಿ ತೊರೆಯುವ ಹಾಲಿನಂತೆ, ಬಿಸಿಲೆದೆಯನ್ನು ಬಿರಿದು ಬರುವ ಸುಳಿಗಾಳಿಯಂತೆ' ಅದು ನಮ್ಮನ್ನು ತಣಿಸುತ್ತಲೇ ಇದೆ

ಅವರ ಕಾವ್ಯದ ಪದಾರ್ಥ ಅವರ ಅನುಭವದ ರೊಟ್ಟಿಯ ಜೊತೆಗೇ ಸವಿಯ ಬೇಕಾದದ್ದು. ನಾವು ನುರಿಸಿದಂತೆ ಅದರ ರುಚಿ ನಮ್ಮ ಪಾಚಕ ಶಕ್ತಿಯನ್ನು ಹೆಚ್ಚಿಸುವ ರೋಚಕತೆಯೂ ಅದಕ್ಕಿದೆ. ಅವಸರದಲ್ಲಿ ಅಬಡಾ ಜಬಡ ತಿಂದು ಓಡಿಹೋಗುವವರಿಗೂ ಅದರ ಸವಿ ಹತ್ತಿ ಮರಳಿ ಮರಳಿ ಆಸ್ವಾದಿಸುವ ಬಯಕೆ ಯನ್ನು ಹುಟ್ಟಿಸುತ್ತದೆ ಅವರ ಕಾವ್ಯ. ಆದರೆ ನಮ್ಮಲ್ಲಿ ಹಸಿವು ಬೇಕು. ನಮ್ಮ ಹಸಿವನ್ನು ಹಿಂಗಿಸಿಕೊಂಡೆವೆಂದರೂ ಬೇಂದ್ರೆಪಾಕ ಬೇರೊಂದು ಹಸಿವನ್ನು ಹುಟ್ಟಿಸುತ್ತದೆ. ಹೀಗೆ ತೃಪ್ತಿಬಡಿಸಿಯೂ ನಿರ್ಮಲವಾದ ಹೊಸ ಹಸಿವನ್ನು ಹುಟ್ಟಿ ಸುವ ಗುಣ, ಶ್ರೇಷ್ಠ ಬಗೆಯ ಕಾವ್ಯಕ್ಕೆ ಮೀಸಲು.

'ನಿನ್ನ ಹಸೀ ಹಸಿವಿಗೇ ಹೇಸಿ ನೀನೆ ಬಂದಾಗ ನನ್ನ ಮರಿಯೇ
ನನ ರುಚೀ ನಿನಗೆ ಶುಚಿ ಅನಿಸಿ ಹಸಿದು ಬಂದಾಗ ನಿನ್ನ ಮರೆಯೆ.'

ಎನ್ನುತ್ತಾಳೆ ಅವರ ಕಾವ್ಯದ ವಾತ್ಸಲ್ಯಮಯಿಯಾದ ತಾಯಿ-ಮಾಯಿ.

ಬೇಂದ್ರೆಯವರ ಚಿತ್ರಕಶಕ್ತಿಯ ಪಾತರಗಿತ್ತಿ ಭೂಲೋಕದ ಎಲ್ಲ ಹೂಗಳ ಬಣ್ಣ-ಬೆಡಗುಗಳನ್ನೂ ಬಲ್ಲುದು. 'ಇಷ್ಟು ಎಲ್ಲಾ ಮಾಡಿ, ಸಪ್ಪಳಿಲ್ಲದಾಡಿ' ಇನ್ನೇನು ಇದರ ಆಟ ಮುಗಿದಿರಬಹುದು ಎಂದುಕೊಂಡರೆ ಅದು ತನ್ನ ಪಕ್ಕದ ಹುಡಿಯನ್ನು ಜಾಡಿಸಿಕೊಂಡು ನಂದನದ ತೋಟದ ಕಡೆಗೆ ಕಣ್ಣು ಹೊರಳಿಸುತ್ತದೆ.

'ಹಕ್ಕಿ ಹಾರುತಿದೆ ನೋಡಿದಿರಾ ?' ನೋಡಿದ್ದೇವೆ. ಆದರೆ ಹಾರುವ ಹಕ್ಕಿಯ ಪುಚ್ಚವನ್ನು ಎಣಿಸಿದವರಾರು ? ನಾವು ಚಂದ್ರಲೋಕಕ್ಕೆ ಆಕಾಶ ನೌಕೆಯನ್ನು ಕಳಿಸುವ ಮೊದಲೇ ಬೇಂದ್ರೆಯವರ ಕಾಲಪಕ್ಷಿ ಮಂಗಳ ಲೋಕದ ಅಂಗಳಕೇರಿ, ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ, ತಿಂಗಳಿನೂರಿನ ನೀರನ್ನು ಹೀರಿದೆ.

ಕಾಡು-ನಾಡು-ಬೀಡುಗಳನ್ನು ತನ್ನ ಲಾವಣ್ಯದಿಂದ ಮುದ್ಧಗೊಳಿಸಿದ ಅವರ ಕಾವ್ಯದ ರೂಪಕ ರಮಾರಮಣ ಶ್ರಾವಣ ಈಗ ಅವರ ಮೈಯನ್ನೇ

ದಂಡಿಗೆ ಮಾಡಿದ್ದಾನೆ : ‘ ಶ್ರಾವಣಾ | ಶ್ರಾವಣಾ | ಮೈದಂಡಿಗಿ ಮಾಡೀ | ಹಾಡಿದೀ ಕವನಾ. ’

ಅವರು ಸಖೀಗೀತ ಮುಗಿಸಿಲ್ಲ; ನಾದಲೀಲೆಯನ್ನೂ ಮುಗಿಸಿಲ್ಲ. ‘ ನಾಕು ತಂತಿ ’ ಎಂದರೂ ಅದರ ಸಹಸ್ರತಂತ್ರೀ ನಿಸ್ವನವನ್ನು ನಾವು ಆಲಿಸಿಲ್ಲ. ‘ ಕುಲುಮೆಯಲ್ಲಿರುವ ಬೇರೆ ಕಂಡ ’ಗಳನ್ನು ನಾವಿನ್ನೂ ಹೊರದೆಗೆದು ನೋಡಿಲ್ಲ.

ಇವರ ತಾತ್ವಿಕ ಕವಿತೆಗಳ ‘ ಕುಹುಕ್ಕುಹೂ ’ ಧ್ವನಿ ಇಂದು ಮಾತ್ರ ಕೇಳಿಸಿದ್ದಲ್ಲ. ನಿಜಗುಣ ಶಿವಯೋಗಿಗಳ ಮುದ್ದು ಕೋಗಿಲೆಯನ್ನು ಅದು ಎಂದೋ ಮಾತನಾಡಿಸಿದೆ. ಊರು ದಾಟ, ಹಳ್ಳಕೊಳ್ಳಗಳಾಚೆ ದೂರ, ಹ್ಯಾಂಗೊ ಮೂಲೆಯಲ್ಲಿ ತಪ್ಪಿ ಬೆಳೆದ ಮಾವಿನ ಮರದಲ್ಲಿ ಕುಳಿತು ‘ ಬಂತು ಸುಗ್ಗಿ, ಬಂದ್ಹಾದ ಸುಗ್ಗಿ, ಬರತ್ಹಾದ ಸುಗ್ಗಿ ’ ಎಂದು ಅದು ತೆರಪು ಇಲ್ಲದೆ ಗಿರಣಿ ಕೂಗಿದಂತೆ ಒಂದಳತಿ ಕೂಗುತ್ತಲೇ ಇತ್ತು. ಅನುಭವದ ಉತ್ಕಟತೆಯ ಆಚೆಗಿರುವ ಈ ಧ್ವನಿಯ ಜಾಡು ಹಿಡಿದು ಕವಿಜೀವ ಸಾಗುತ್ತಲೇ ಇತ್ತು :

> ‘ ಸುತ್ತು ಗುಡ್ಡ ನುಗ್ಗಾಗಿ ಹೋದವೋ ಓಣಿಗೊಟ್ಟು ಇದಕ್ಹ
> ಬಿಸಿಲು ಕುಣಿದು ಬೆವತ್ಹಾದ ಈಗ ಬಂದ್ಹಾದ ಮಳಿಯ ಹದಕ. ’

ಬೇಂದ್ರೆ ಕಾವ್ಯಪಾಕ ಮೈಸೂರುಪಾಕಲ್ಲ. ಅದು ಅಖಂಡ ಕರ್ನಾಟಕದ ತಿರುಳ್ಗನ್ನಡ ಪಾಕ. ಅದರ ತೂಕ ಭಾರತದ ತಕ್ಕಡಿಯಲ್ಲಿದೆ. ವಿಶ್ವಮಾನವ ಅದನ್ನು ತೂಗಿ ಬೆಲೆ ಕಟ್ಟಬೇಕಾಗಿದೆ. ಅದೇನೇ ಇರಲಿ, ಯಾರು ತೂಗಿದರೂ ಅವರನ್ನು ತಲೆದೂಗಿಸುವ ಕಾವ್ಯ ಬೇಂದ್ರೆಯವರದು.

§ § § §

‘ ಸಾಹಿತ್ಯ ಚಿಂತನದಿಂದ ’

೧೯

# ಬೇಂದ್ರೆಯವರ ಕಾವ್ಯದಲ್ಲಿ ಸಮಾಜಪ್ರಜ್ಞೆ

ಕೆ. ರಾಘವೇಂದ್ರರಾವ್

ಬೇಂದ್ರೆಯವರ ಕಾವ್ಯದ ಬಗ್ಗೆ ಮಾತಾಡುವಾಗ ಅಥವಾ ಬರೆಯುವಾಗ ಸಾಧಾರಣವಾಗಿ ವಿಮರ್ಶಕರು ಬೇಂದ್ರೆಯವರ ಸಮಾಜಪ್ರಜ್ಞೆಯ ಬಗ್ಗೆ ತಮ್ಮ ಪ್ರಜ್ಞೆಯನ್ನು ತೋರುವುದು ಬಹಳ ವಿರಳ. ಆದ್ದರಿಂದ ಈ ಪ್ರಬಂಧದಲ್ಲಿ ಬೇಂದ್ರೆಯವರ ಸಮಾಜಪ್ರಜ್ಞೆಯು ಅವರ ಕವಿತೆಯ ಬುನಾದಿಯಲ್ಲಿ ಬೆರೆತುಹೋದ ಒಂದು ಮುಖ್ಯವಾದ ಪದಾರ್ಥವೆಂದು ನಾನು ಪ್ರತಿಪಾದಿಸುತ್ತೇನೆ. ಬೇಂದ್ರೆಯವರು ಕೆಲವು ಕವನಗಳನ್ನು ಸಾಮಾಜಿಕ ವಿಷಯಗಳನ್ನೇ ವಸ್ತುವಾಗಿಟ್ಟುಕೊಂಡು ಬರೆದಿರುವರಲ್ಲದೇ ಅವರು ತಮ್ಮ ಇಡೀ ಕಾವ್ಯಪ್ರಪಂಚವನ್ನು ಸಾಮಾಜಿಕ ಪ್ರಜ್ಞೆಯ ಹಿನ್ನೆಲೆಯಲ್ಲಿ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಸೃಷ್ಟಿ ಮಾಡಿದ್ದಾರೆಂದರೆ ಅತಿಶಯೋಕ್ತಿಯೇನಲ್ಲ.

ಈ ಒಂದು ವಿಶಿಷ್ಟ ದೃಷ್ಟಿಕೋನದಿಂದ ಬೇಂದ್ರೆಯವರ ಪ್ರಪ್ರಥಮ ಕವನ ಸಂಕಲನ, 'ಗರಿ' (೧೯೩೨) ಯನ್ನು ನಾವು ಇಲ್ಲಿ ವಿಶ್ಲೇಷಿಸಬಹುದು. ಈ ಸಂಕಲನದ ಮೊದಲನೆಯ ಆವೃತ್ತಿಯಲ್ಲಿ ಮುನ್ನುಡಿಯನ್ನು ಬರೆಯುತ್ತ ಬೇಂದ್ರೆಯವರು ಈ ರೀತಿ ಹೇಳುತ್ತಾರೆ, "....ನನ್ನ ಕವನಗಳು ಎಂದು ಇದೀಗ ಹೇಳಿದೆನಷ್ಟೇ ಅದೊಂದು ರೂಢಿಯ ಮಾತು. ಇವು ನನ್ನವಲ್ಲ; ಕನ್ನಡದ ಕವನಗಳು ....." ಇವು ಬರಿಯ ಔಪಚಾರಿಕ ಮಾತುಗಳಲ್ಲ. ಈ ಹೇಳಿಕೆಯಲ್ಲಿ ಬೇಂದ್ರೆಯವರು ತಮ್ಮ ವೈಯಕ್ತಿಕ ಕವಿತೆಗೂ ಮತ್ತು ಅದರ ಸಮಾಜನಿರ್ಮಿತವಾದ ಭಾಷೆಗೂ ಇರುವ ಒಂದು ನಿಕಟವಾದ ಸಂಬಂಧವನ್ನು ಸೂಚಿಸುತ್ತಾರೆ.

ಬೇಂದ್ರೆಯವರ ಸಮಾಜಪ್ರಜ್ಞೆ ಮೂರು ವಿಶಿಷ್ಟ ರೂಪಗಳಲ್ಲಿ ಈ ಸಂಕಲನದಲ್ಲಿ ಕಾಣಿಸಿಕೊಳ್ಳುತ್ತದೆ. ಮೊದಲನೆಯದಾಗಿ ಬೇಂದ್ರೆಯವರ ಸಾಮಾಜಿಕ ವಾತಾವರಣದ ಮೌಲ್ಯಗಳನ್ನು ಮತ್ತು ಅದರ ಆದರ್ಶಗಳನ್ನು ಈ ಕವನಗಳಲ್ಲಿ ನಾವು ನೋಡಬಹುದು. ಬೇಂದ್ರೆಯವರು ಸಾಮಾಜಿಕ ನಿರ್ಮಿತವಾದ ಸಾಂಸ್ಕೃತಿಕ

ಬೆಲೆಗಳನ್ನು ಮತ್ತು ಗುರಿಗಳನ್ನು ರೂಪಿಸಲು ಯತ್ನಿಸಿದ್ದಾರೆ. ಒಂದು ಕಡೆ ಅವರು ಕರ್ನಾಟಕ ಸಮಾಜದ ಅಧ್ಯಾತ್ಮ ಸಂಪ್ರದಾಯವನ್ನು ಎತ್ತಿ ಹಿಡಿದರೆ, ಇನ್ನೊಂದು ಕಡೆ ಈ ಸಮಾಜದ ಭಾವಸೂಚಿತ ಸಂಕೇತಗಳನ್ನು ಬಹಳ ಸೂಕ್ಷ್ಮರೀತಿಯಲ್ಲಿ ಉಪಯೋಗಿಸಿದ್ದಾರೆ. ಎರಡನೆಯದಾಗಿ ಬೇಂದ್ರೆಯವರ ಸಮಾಜಪ್ರಜ್ಞೆ ಒಂದು ನೈತಿಕ ರೂಪವನ್ನು ತಾಳಿರುತ್ತದೆ. ಈ ಸಮಾಜದ ನೈತಿಕ ಮೌಲ್ಯಗಳಾದ ಸಹೃದಯತೆ, ಅನುಕಂಪ ಮತ್ತು ವಿಪುಲವಾದ ಸಹನಶೀಲತೆಗಳನ್ನು ನಾವು ಈ ಕವನಗಳಲ್ಲಿ ನೋಡಬಹುದು. ಮೂರನೆಯದಾಗಿ ಬೇಂದ್ರೆಯವರು ಈ ಸಂಕಲನದಲ್ಲಿ ಹಲವಾರು ಯಶಸ್ವಿಯಾದ ಕವನಗಳಲ್ಲಿ ಸಾಮಾಜಿಕ ಜೀವನದ ಮುಖ್ಯ ಅಂಗವಾದ ರಾಜಕೀಯ ವಾತಾವರಣದ ಬಗ್ಗೆ ತೀಕ್ಷ್ಣವಾದ ಆಸಕ್ತಿ ಮತ್ತು ಅರಿವುಗಳನ್ನು ಪ್ರದರ್ಶಿಸುತ್ತಾರೆ.

ಈ ಮೇಲೆ ವಿಶ್ಲೇಷಿಸಿದ ಮೂರು ಮುಖಗಳಿಂದ ಕಾಣಿಸಿಕೊಳ್ಳುವ ಬೇಂದ್ರೆಯವರ ಸಮಾಜಪ್ರಜ್ಞೆಯನ್ನು ನಾವು ಇಲ್ಲಿ ಸ್ವಲ್ಪ ವಿಸ್ತಾರವಾಗಿ ಪರಿಶೀಲಿಸಬಹುದು. ಬೇಂದ್ರೆಯವರ ಕಾವ್ಯದಲ್ಲಿ ಸಾಮಾಜಿಕ ನಿರ್ಮಿತವಾದ ಸಾಂಸ್ಕೃತಿಕ ಮೌಲ್ಯಗಳನ್ನು ಮತ್ತು ಆದರ್ಶಗಳನ್ನು ನಾವು ಕಾಣಬಹುದು. 'ಗರಿ' ಸಂಕಲನದ ಮೊಟ್ಟಮೊದಲನೆಯ ಕವನದಲ್ಲಿಯೇ ಇವುಗಳ ಸಂಕ್ಷಿಪ್ತ ದರ್ಶನ ನಮಗೆ ಆಗುತ್ತದೆ. ಈ ಕವನದಲ್ಲಿ ( ಬೆಳಕು ) ಬೇಂದ್ರೆಯವರು ಒಂದು ನೈಸರ್ಗಿಕ ಪ್ರಸಂಗವನ್ನು ದೈವವಾದಕ್ಕೆ ಹೊಂದಿಸುತ್ತಾರೆ. ಆದರೆ ಇಲ್ಲಿ ಬರುವ ದೈವವಾದ ಬರಿಯ ಆಧ್ಯಾತ್ಮಿಕವಾದವಲ್ಲ. ಅದಕ್ಕೆ ಒಂದು ಭೌತಿಕ ತಳಹದಿಯನ್ನು ಕವಿ ಕೊಟ್ಟಿದ್ದಾರೆ. ಇದನ್ನು ಈ ಕೆಳಗಿನ ಸಾಲುಗಳಲ್ಲಿ ನಾವು ಕಾಣಬಹುದು :

ಕಂಡಿತು ಕಣ್ಣು ಸವಿದಿತು ನಾಲಗೆ<br>
ಪಡೆದೀತೀ ದೇಹಾ<br>
ಸ್ಪರ್ಶಾ–ಪಡೆದೀತೀ ದೇಹಾ.<br>
ಕೇಳಿತು ಕಿವಿಯು ಮೂಸಿತು ಮೂಗು<br>
ತನ್ಮಯವೀಗೇಹಾ<br>
ದೇವರ–ದೀ ಮನಸಿನ ಗೇಹಾ. [1]

ಇಲ್ಲಿ ನಾವು ಭಾರತದ ಮತ್ತು ಅದರ ಒಂದು ಅಂಗವಾದ ಕರ್ನಾಟಕದ ಸಂಸ್ಕೃತಿಯ ಮೌಲ್ಯವನ್ನು ಕಾಣಬಹುದು. ದೈಹಿಕ–ದೈವಿಕ, ಇಹ–ಪರ, ಪ್ರಕೃತಿ–ಪುರುಷ, ಇವುಗಳ ಮೂಲಭೂತ ಸಂಬಂಧದಲ್ಲಿರುವ ನಂಬಿಕೆಯನ್ನು ನೋಡಬಹುದು. ಈ ನಂಬಿಕೆ ಪಾಶ್ಚಿಮಾತ್ಯ, ಅದರಲ್ಲಿಯೂ ಮಾರ್ಕ್ಸೇತರ

1. ಗರಿ. ಪುಟ, ೨.

ಸಂಪ್ರದಾಯದಲ್ಲಿ ನಾವು ಕಾಣುವದಿಲ್ಲ. ಅಲ್ಲಿ ಪ್ರಕೃತಿ ಮತ್ತು ಮಾನವರ ವಿರಸ ಮತ್ತು ಹೋರಾಟವನ್ನೇ ಹೆಚ್ಚಾಗಿ ಕಾಣುತ್ತೇವೆ. ಈ ಕವನದ ಕೊನೆಯಲ್ಲಿ ಬೇಂದ್ರೆಯವರು ಬಳಸುವ "ಅಣ್ಣಾ" ಎಂಬ ಪದವು ನಮ್ಮ ಸಂಸ್ಕೃತಿಯ ಒಂದು ಮೂಲಭಾವವನ್ನು ಪ್ರತಿಬಿಂಬಿಸುತ್ತದೆ.

ಎರಡನೆಯ ಕವನ "ಚಂದ್ರ" ದಲ್ಲಿ ಇದೇ ಸಂಸ್ಕೃತಿಯ ಮತ್ತೊಂದು ಆದರ್ಶವನ್ನು ನಾವು ಕಾಣಬಹುದು. ಇದು, ಈ ಸಂಸ್ಕೃತಿಯು ತ್ಯಾಗಮಾರ್ಗಕ್ಕೆ ಕೊಟ್ಟಿರುವ ಗೌರವದ ಸ್ಥಾನ. ಕವಿ ಹೇಳುವಂತೆ :

"ತನ್ನ ದುಃಖವ ನುಂಗಿ ಪರದುಃಖವನು
ಹಿಂಗಿಸುವ
ಚೆನ್ನಿಗಳು ಭೂದೇವಿ, ........"

ಇದೇ ಮೂಲ್ಯವನ್ನು ಕವಿ "ಹರಕೆ" ಎಂಬ ಚಿಕ್ಕ ಕವನದಲ್ಲಿ ಎತ್ತಿ ಹಿಡಿದಿದ್ದಾರೆ.

ನಮ್ಮ ಸಮಾಜದ ಹೆಣ್ಣು ಗಂಡಿನ ಸಂಬಂಧವನ್ನು ಕಲ್ಪಿಸಿರುವ ಹಲವಾರು ಕವನಗಳನ್ನು ನಾವು ಇಲ್ಲಿ ಕಾಣಬಹುದು. "ಗಂಡಸು — ಹೆಂಗಸಿಗೆ" ಎಂಬ ಕವನದಲ್ಲಿ ಬೇಂದ್ರೆಯವರು ತಮ್ಮದೇ ಆದ ಭಾಷೆಯಲ್ಲಿ ನಮ್ಮ ಸಂಸ್ಕೃತಿ, ತಾಯಿತನಕ್ಕೆ ಕೊಟ್ಟಿರುವ ವಿಶಿಷ್ಟ ಸ್ಥಾನವನ್ನು ಪ್ರತಿಪಾದಿಸುತ್ತಾರೆ. ಇದೇ ತಾಯ್ತನದ ಹಿರಿಮೆಯನ್ನು ಸಾಂಕೇತಿಕವಾಗಿ "ಓ ಹಾಡೇ !" ಎಂಬ ಕವನದ ಕೊನೆಯಲ್ಲಿ ಈ ರೀತಿಯಲ್ಲಿ ಸೂಚಿಸುತ್ತಾರೆ :

ಅಳುವ ಕೂಸನು ಲಾಲಿಯಿಂದು ಮಲಗಿಸುವಂತೆ
ಬಳಲಿದಂತಹ ಬಗೆಯ ಸಂತವಿಸಿದೌ ಶಾಂತೆ !
ಮುನ್ನ ಬಗೆಯುಲಿ ಹಾಡ ನೀ — ನೀನೆ ಹೆತ್ತಿ
ನನ್ನ ನಾಲಗೆ ನಿನ್ನ ಬರಿ ಸೂಲಗಿತ್ತಿ;
ಇಲ್ಲದಿರೆ ಹಾಡುವದು ನನ್ನ ಪಾಡೆ ?
ಓ ಹಾಡೆ ! ಓ ಹಾಡೆ ! ಓ ಹಾಡೇ !

ಮುಂದೆ "ಕನಸಿನೊಳಗೊಂದು ಕಣಸು" ಎಂಬ ಕವನದಲ್ಲಿ ಕವಿ, ಕನ್ನಡ ನಾಡು ಮತ್ತು ಕನ್ನಡ ಜನರ ಸಂಬಂಧವನ್ನು ತಾಯಿ–ಮಕ್ಕಳ ಸಂಬಂಧದ ರೂಪದಲ್ಲಿ ವಿಸ್ತರಿಸುತ್ತಾರೆ.

ಬೇಂದ್ರೆಯವರ ಸಮಾಜಪ್ರಜ್ಞೆಯ ತೀವ್ರ ಪರಮಾವಧಿಯನ್ನು ನಾವು ಅವರ ರಾಜಕೀಯ ಪ್ರಧಾನವಾದ ಕವನಗಳಲ್ಲಿ ಚೆನ್ನಾಗಿ ಕಾಣಬಹುದು.

ಒಂದೆಡೆ ರಾಷ್ಟ್ರೀಯ ಹೋರಾಟ, ಸ್ವಾತಂತ್ರ್ಯಸಂಗ್ರಾಮಗಳನ್ನು ಕವಿ ತನ್ನ ಕಾವ್ಯವಸ್ತುವಾಗಿ ಬಳಸಿದರೆ ಇನ್ನೊಂದೆಡೆ ಕರ್ನಾಟಕತ್ವ ಮತ್ತು ಕರ್ನಾಟಕ ಏಕೀಕರಣ ತತ್ವಗಳನ್ನು ರಾಷ್ಟ್ರೀಯವಾದದ ಅಂಗವಾಗಿ ರೂಪಿಸುವದನ್ನು ನಾವು ಕಾಣಬಹುದು. "ಅಹಾಹಾ ! ಸ್ವಾತಂತ್ರ್ಯದೇವಿ" ಎಂಬ ಕವನದಲ್ಲಿ ಕವಿ, ಸ್ವಾತಂತ್ರ್ಯವನ್ನು ತಾತ್ವಿಕ ದೃಷ್ಟಿಯಿಂದ ನೋಡುತ್ತಾರೆ. ಆದರೆ ಈಗಾಗಲೆ ಬಹಳ ಹೆಸರು ಗಳಿಸಿದ "೩೩೦೦೦೦೦೦೦" ಎಂಬ ಕವನದಲ್ಲಿ ಬೇಂದ್ರೆಯವರು ರಭಸವಾದ ಮೈ "ಜುಂ" ಎನಿಸುವ ರಾಷ್ಟ್ರವಾದದ ವೀರವಾಣಿಯ ಕಹಳೆಯನ್ನು ಊದುತ್ತಾರೆ. ಉದಾಹರಣೆಗಾಗಿ ಈ ಕೆಳಗಿನ ಸಾಲುಗಳನ್ನು ನಾವು ನೋಡಬಹುದು :

ಡಿಂಭಗಳನೊಡೆದು ಬನ್ನಿ ! ಕಂಭಗಳನೊಡೆದು ಬನ್ನೀ !
ಮೈಯಲ್ಲಿ ಮಡಗದಿರಿ ! ಮನದಲ್ಲಿ ಅಡಗದಿರಿ !
ತಾಯಿ ಇದೋ ಬಂದೆವೆನ್ನೀ !
ನಾ ಪಡೆದ
ಮೂವತ್ತುಮೂರು ಕೋಟಿ ! !

'ಸೀಮೋಲ್ಲಂಘನ' ಎಂಬ ಕವನದಲ್ಲಿ ಬೇಂದ್ರೆಯವರು ಸಂಕುಚಿತ ರಾಜಕೀಯವನ್ನು ತಿರಸ್ಕರಿಸಿದರೂ, ಸೀಮೆ ಇದ್ದರೆ ಸೀಮೋಲ್ಲಂಘನ ಮಾಡಬಹುದೆಂಬ ಮಾರ್ಮಿಕವಾದವನ್ನು ಸೂಚಿಸುತ್ತಾರೆ. ಈ ವಾದದಲ್ಲಿ ನಾವು ಕರ್ನಾಟಕತ್ವ, ಭಾರತತ್ವ, ಮಾನವತ್ವಗಳ ಹೊಂದಾಣಿಕೆಯ ರಾಜಕೀಯ ದರ್ಶನವನ್ನು ಕಾಣಬಹುದು.

ಬೇಂದ್ರೆಯವರು ನಮ್ಮ ಸಮಾಜವನ್ನು ಬರಿಯ ಒಂದು ಸುಂದರವಾದ ಸ್ವಪ್ನವಾಗಿ ಕಂಡಿಲ್ಲ. ಅವರು ಅದರ ವಾಸ್ತವಿಕತೆಯ ನೋವನ್ನು, ದುಃಖವನ್ನು ಅನುಭವಿಸಿದ್ದಾರೆ. 'ತುತ್ತಿನ ಚೀಲ' ಎಂಬ ಕವನದಲ್ಲಿ ಅವರು ಆಧ್ಯಾತ್ಮಿಕ ವಾದಕ್ಕೆ ಬಡವರ ಬಗ್ಗರ ಹೊಟ್ಟೆಯ ಸವಾಲನ್ನು ಬಹಳ ಪ್ರಚಂಡ ರೂಪದಲ್ಲಿ ಹಾಕುತ್ತಾರೆ. ನಾವು ಇದನ್ನು ಈ ಕೆಳಗಿನ ಪದಗಳಲ್ಲಿ ನೋಡಬಹುದು :

ದೇವರದೊಂದು
ಗೋರಿಯ ಕಟ್ಟಿ,
ಧರ್ಮದ ಧೂಪಕೆ
ಬೆಂಕಿಯನಿಕ್ಕಿ,

ಗಣಗಣ ಬಾರಿಸಿ
ಪ್ರಾಣದ ಗಂಟೆಯು,
ಸಾವಿನ ನೋವಿಗೆ
ಕಲಮಲವೆದ್ದು
ನೆಲವನ್ನೆಲ್ಲಾ
ತುತ್ತುವೆನೆಂದು-
ಗದರುತ್ತಿಹುದು-
ಗರ್ಜಿಸುತಿಹುದು-
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಒಳದನಿಯೊಂದು !

ಭಾವಪ್ರಧಾನವಾದ ಪ್ರೇಮಗೀತೆಯಾದ ‘ ಬಿಸಿಲುಗುದುರೆ ’ ಎಂಬ ಕವನದಲ್ಲಿ ಕೂಡ ಬಡತನದ ಭೂತ ಕವಿಯನ್ನು ಈ ರೀತಿಯಲ್ಲಿ ಕಾಡುತ್ತದೆ :

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲಿವ್ಯಾಗ
ಸುಟ್ಟ ಹಪ್ಪಳದ್ಹಾಂಗ ಸೊರಗಿದಿ ಸೊಪ್ಪಾಪ್ಹಂಗ
ಬಂತಂತ ಮುಪ್ಪ ಬ್ಯಾಗ !

‘ ನನ್ನ ಕೈ ಹಿಡಿದಾಕೆ ! ’ ಎಂಬ ಪ್ರಣಯಕವನದಲ್ಲಿ ಕೂಡ ಬಡತನದ-ಸಹವಾಸ ಬೇಂದ್ರೆಯವರನ್ನು ಬಿಡುವದಿಲ್ಲ. ಆದರೆ ಬೇಂದ್ರೆಯವರು ಬಡತನವನ್ನು ವೈಯಕ್ತಿಕ ದೃಷ್ಟಿಯಿಂದ ಒಪ್ಪಿಕೊಳ್ಳುತ್ತಾರೆ. ಇದನ್ನು ಅವರು ಜೀವನದ ವಾಸ್ತವಿಕತೆಯ ಒಂದು ಅಂಗವಾಗಿ ರೂಪಿಸುತ್ತಾರೆ. ತಮ್ಮ ವೈಯಕ್ತಿಕ ಒಪ್ಪಿಗೆ ಇದ್ದರೂ, ಬೇಂದ್ರೆಯವರು ಬಡವರ ಬಗ್ಗರ ಪರವಾಗಿ ಸವಾಲನ್ನು ಹಾಕಿರುವದನ್ನು ನಾವು ಮರೆಯಬಾರದು.

‘ ಕೆಲಸವಿಲ್ಲದವರ ಹಾಡು ’ ಕವನದಲ್ಲಿ ಬೇಂದ್ರೆಯವರು ನಿರುದ್ಯೋಗದ ಆಳವಾದ ಮತ್ತು ಮಾರ್ಮಿಕವಾದ ಒಂದು ಚಿತ್ರವನ್ನು ಕೊಟ್ಟಿದ್ದಾರೆ. ಅದರ ಮಾರ್ಮಿಕತೆ ಮತ್ತು ಕಠೋರತೆಗಳನ್ನು ನಾವು ಈ ಕೆಳಗಿನ ಪಂಕ್ತಿಗಳಲ್ಲಿ ನೋಡಬಹುದು :

ಆದರಿನ್ನು ತಿನ್ನುವದೇನನ್ನ ?
ಅನ್ನವೆಲ್ಲವೂ ಆಯಿತು ಚಿನ್ನ !

ನಾನೇ ನನ್ನನ್ನು ತಿನ್ನುವ ಅನ್ನ !
ತಿನ್ನಲಿ ಏನು ನಾ ನನ್ನನ್ನ ?
ಅನ್ನಃ ಅನ್ನಃ ಅನ್ನಃ ಅನ್ನಃ.

ಬೇಂದ್ರೆ, ರಮ್ಯಕವಿ, ಅಧ್ಯಾತ್ಮವಾದಿ, ದೈವವಾದಿ— ಇತ್ಯಾದಿ ವಿಶ್ಲೇಷಣ ಗಳನ್ನು ಮಾಡುವ ವಿಮರ್ಶಕರು ಬೇಂದ್ರೆಯುವರ ಕವನಗಳನ್ನು ಇನ್ನೂ ಆಳ ವಾಗಿ ಪರಿಶೀಲಿಸಬೇಕು. ಬೇಂದ್ರೆಯುವರ ಕಾವ್ಯದ ಬಗ್ಗೆ ತಪ್ಪು ಕಲ್ಪನೆಗಳು ಬೆಳೆದಿರುವದಕ್ಕೆ ಒಂದು ಕಾರಣವಿದೆ. ಅವರ ಕವಿತೆಯಲ್ಲಿ ಸಮಾಜಪ್ರಜ್ಞೆ ರೂಪಿ ಸಿದ ದುರಂತ ವಾಸ್ತವಿಕತೆಗೂ ಮತ್ತು ಅವರು ತಮ್ಮ ವೈಯಕ್ತಿಕ ಸಾಂಸ್ಕೃತಿಕ ವಾತಾವರಣದ ಒತ್ತಡಕ್ಕೊಳಗಾಗಿ ಒಪ್ಪಿಕೊಳ್ಳುವ ಸಮರಸವಾದಕ್ಕೂ ಅಂತರ ವಿದೆ. ಅಷ್ಟೇ ಅಲ್ಲ, ಇವೆರಡರ ಮಧ್ಯೆ ತಿಕ್ಕಾಟವೂ ಇದೆ. ಈ ತಿಕ್ಕಾಟದ ಕಡೆಗೆ ವಿಮರ್ಶಕರು ತಮ್ಮ ದೃಷ್ಟಿಯನ್ನು ಇಲ್ಲಿಯವರೆಗೆ ತಿರುಗಿಸದೇ ಇರುವದಕ್ಕೆ ಕಾರಣವೇನೆಂದರೆ— ಅವರು ಬೇಂದ್ರೆಯುವರ ವೈಯಕ್ತಿಕ ಪ್ರಜ್ಞೆ ಮತ್ತು ಸಮಾಜ ಪ್ರಜ್ಞೆಗಳನ್ನು ಬೇರ್ಪಡಿಸದೇ ಇರುವುದು. ಬೇಂದ್ರೆಯುವರ ಕವಿತೆಯಲ್ಲಿ ನಾವು ಕಾಣುವ ಒಂದು ದೊಡ್ಡ ಗುಣವೆಂದರೆ ಅವರು ತಮ್ಮ ವೈಯಕ್ತಿಕ ನಂಬಿಕೆಗಳನ್ನು ಲಂಘಿಸಿ ಸಮಾಜದ ನಿಜರೂಪವನ್ನು ದಿಟ್ಟಿಸಿ ನೋಡುವ ಶಕ್ತಿ. ವೈಯಕ್ತಿಕ ಮತ್ತು ಸಮಾಜ ಪ್ರಜ್ಞೆಗಳ ತಿಕ್ಕಾಟ ಬೇಂದ್ರೆಯುವರ ಕವಿತೆಗೆ ಒಂದು ಪ್ರಚಂಡ ವಾದ ಶಕ್ತಿಯನ್ನು ನೀಡಿವೆ ಎನ್ನುವದರಲ್ಲಿ ಸಂದೇಹವಿಲ್ಲ. ಬೇಂದ್ರೆಯುವರ ಭಾಷೆಕೂಡ ಈ ತಿಕ್ಕಾಟವನ್ನು ತೀಕ್ಷ್ಣವಾಗಿ ಪ್ರತಿಬಿಂಬಿಸುತ್ತದೆ. ಒಂದು ಕಡೆ ಜನಜೀವನಕ್ಕೆ ಸಾಮೀಪ್ಯವಾದ ದೇಶೀ ಭಾಷೆಯನ್ನು ಬಳಸಿ ಕವಿ ಓದುಗರ ಹೃದಯವನ್ನು ಭೇದಿಸಿದರೆ, ಇನ್ನೊಂದು ಕಡೆ ಅವರ ಬ್ರಾಹ್ಮಣಸಂಸ್ಕೃತಿಯ ಸಮರಸವಾದ ಬೇರೊಂದು ಭಾಷೆಯುಲ್ಲಿ, ಮತ್ತೊಂದು ಧ್ವನಿಯಲ್ಲಿ ಕೇಳಿಸಿಕೊಳ್ಳು ತ್ತದೆ. ಬೇಂದ್ರೆಯುವರ ಪ್ರಥಮ ಸಂಕಲನದಲ್ಲಿ ಮೊದಲನೆಯ ವಾದ, ಮೊದಲನೆಯ ಪ್ರಜ್ಞೆ ಮತ್ತು ಮೊದಲನೆಯ ಭಾಷೆ ತಮ್ಮ ಮೇಲ್ಗೈಯನ್ನು ತೋರಿವೆ ಎಂಬು ವದರಲ್ಲಿ ಏನೂ ಸಂಶಯವಿಲ್ಲ. ಈ ದೃಷ್ಟಿಯಿಂದ ನಾವು ಬೇಂದ್ರೆಯುವರ ಸಮಗ್ರ ಕಾವ್ಯಲೋಕವನ್ನು ಇನ್ನೂ ಚೆನ್ನಾಗಿ ತಿಳಿಯಬೇಕು ಮತ್ತು ಅರ್ಥಮಾಡಿ ಕೊಳ್ಳಬೇಕು. ಈ ರೀತಿಯ ವಿಮರ್ಶನ ಸಾಹಿತ್ಯದೆಡೆಗೆ ಈ ಚಿಕ್ಕ ಪ್ರಬಂಧವನ್ನು ಮೊಟ್ಟಮೊದಲನೆಯ ಹೆಜ್ಜೆಯೆಂದು ಭಾವಿಸಬೇಕು.

§ § § §

೨೦

# ಬೇಂದ್ರೆ ಹಾಗೂ ಸುಮಿತ್ರಾನಂದನ ಪಂತರ ಕಾವ್ಯ

## (ಒಂದು ತೌಲನಿಕ ಅವಲೋಕನ)

ಟಿ. ಆರ್. ಭಟ್ಟ

ಆಧುನಿಕ ಸಾಹಿತ್ಯವಿಮರ್ಶೆಯಲ್ಲಿ ತೌಲನಿಕ ವಿಮರ್ಶೆಗೆ ವಿಶೇಷವಾದ ಮಹತ್ವವಿದೆ. ವರಕವಿ ಅಂಬಿಕಾತನಯದತ್ತರಂತಹ ಖ್ಯಾತಿವಂತರ ಕವಿತ್ವಶಕ್ತಿಯನ್ನು, ವ್ಯಕ್ತಿತ್ವದ ಸಾಧನೆಗಳನ್ನು ಭಾರತೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಎಂದಿಗಿಂತ ಇಂದು ಅತ್ಯವಶ್ಯವೆನಿಸಿದೆ.[1] ಈ ದೃಷ್ಟಿಯಿಂದ ಆಧುನಿಕ ಭಾರತೀಯ ಸಾಹಿತ್ಯದ ಪ್ರಾತಿನಿಧಿಕ ಕವಿವರ್ಯರಾದ ಬೇಂದ್ರೆಯವರನ್ನು ಹಾಗೂ ಹಿಂದೀ ಸಾಹಿತ್ಯದ ಶ್ರೇಷ್ಠ ಭಾವಗೀತಕಾರ ಸುಮಿತ್ರಾನಂದನ ಪಂತರ ಸಾಹಿತ್ಯಿಕ ವ್ಯಕ್ತಿತ್ವವನ್ನು ತೌಲನಿಕವಾಗಿ ಅವಲೋಕನ ಮಾಡುವ ಅವಕಾಶ ನನಗೆ ಲಭಿಸಿತು. ತನ್ಮೂಲಕವಾಗಿ ಈ ಇಬ್ಬರು ಕವಿಗಳ ಕಾವ್ಯಪ್ರೇರಣೆ, ಕಾವ್ಯದ ಬೆಳವಣಿಗೆ, ಕಾವ್ಯದರ್ಶನ ಹಾಗೂ ಭಾರತೀಯ ಸಾಹಿತ್ಯದಲ್ಲಿ ಅವರ ಸ್ಥಾನಮಾನಗಳನ್ನು ಗುರುತಿಸುತ್ತ ತುಲನಾತ್ಮಕವಾಗಿ ನಿಷ್ಕರ್ಷೆ ಮಾಡಿದಾಗ ಕೆಲವು ಗಮನಾರ್ಹ ಸಂಗತಿಗಳು ಕಂಡು ಬರುವವು. ಸ್ಥೂಲವಾಗಿ ಬೇಂದ್ರೆ ಹಾಗೂ ಪಂತರ ವ್ಯಕ್ತಿತ್ವ, ಸಾಹಿತ್ಯಿಕ ಧೋರಣೆ ಹಾಗೂ ಕಾವ್ಯಚಿಂತನೆಗಳ ವಿಮರ್ಶಾತ್ಮಕ ಪರಿಚಯ ಮಾಡಿಕೊಡುವುದು ಈ ಲೇಖನದ ಉದ್ದೇಶವಾಗಿದೆ.

---

1. ಬೇಂದ್ರೆಯವರು ತಮ್ಮ ' ನಾನು ' (ಬಾಹತ್ತರ–ಪು : ೧೫) ಎಂಬ ಕವಿತೆಯಲ್ಲಿ ಮಾನವನ ವಿಶ್ವನಾಗರಿಕತ್ವವನ್ನು ಸೂಚಿಸುತ್ತ " ಭಾರತಮಾತೆಯು ಕೋಟಿ ಕಾರ್ತಿಕೋತ್ಸವದಲ್ಲಿ ಮಿನುಗುತಿಹ ಜ್ಯೋತಿ ನಾನು " ಎಂಬ ಸಾಕ್ಷಿ ಪ್ರಜ್ಞೆಯನ್ನು ಸೂಚಿಸಿದ್ದು ಅರ್ಥಪೂರ್ಣವಾಗಿದೆ. ಆದ್ದರಿಂದಲೇ ಕೀರ್ತಿನಾಥ ಕುರ್ತಕೋಟಿಯವರು ಹೇಳುವಂತೆ ' ಬೇಂದ್ರೆ ' ಮನುಷ್ಯನ ಇತಿಹಾಸಕ್ಕೆ ಸೇರಬೇಕಾದ ಒಬ್ಬ ವ್ಯಕ್ತಿಯ ಹೆಸರು. ಬೇಂದ್ರೆಯವರ ಸ್ವಂತ ಜೀವನಕ್ಕಿಂತ ಕವಿಯ ಪ್ರಜ್ಞೆ ಮಹತ್ವದ್ದಾಗಿದೆ. " ಎಂಬ ನುಡಿಗಳು ತುಂಬ ಮನನೀಯವಾಗಿವೆ — [ ಭೃಂಗದ ಬೆನ್ನೇರಿ. ಪು. ೯ ]

ಈ ಶತಮಾನದ ಮೊದಲದಿನಗಳಲ್ಲಿ ಭಾರತೀಯ ಸಾಹಿತ್ಯದ ಮೇಲೆ ಆಂಗ್ಲಭಾಷಾ ಸಾಹಿತ್ಯದ ಪ್ರಭಾವವು ದಟ್ಟವಾಗಿ ಹರಡಿ ಸಾಹಿತ್ಯಮಾರ್ಗವು ಒಂದು ಹೊಸತಿರುವು ಪಡೆಯಿತು. ಸಾಹಿತ್ಯಕ್ಷೇತ್ರದ ಈ ಉತ್ಥಾನದ ಕಾಲದಲ್ಲಿ ಭಾರತೀಯ ಕವಿಗಳು ದೇಶಾಭಿಮಾನ, ರಾಷ್ಟ್ರೀಯ ಪ್ರಜ್ಞೆ ಹಾಗೂ ಬದುಕಿನ ಮೌಲ್ಯಗಳ ನಿರೂಪಣೆಯನ್ನು ತಮ್ಮ ಕವಿತೆಗಳಲ್ಲಿ ಪ್ರಕಟಿಸುವಲ್ಲಿ ಅತ್ಯಂತ ಯಶಸ್ವಿಯಾದರು. ಈ ನವೋದಯ ಪರಂಪರೆಯ ಕವಿಗಳು ಆಂಗ್ಲರಮ್ಯಸಂಪ್ರದಾಯದ ಕವಿಗಳಿಂದ ಕಾವ್ಯಪ್ರೇರಣೆಯನ್ನು ಪಡೆದು ಭಾರತೀಯ ಹಿನ್ನೆಲೆಯಲ್ಲಿ ಹೊಸರೂಪಕೊಡಲು ಬಹುವಾಗಿ ಶ್ರಮಿಸಿದ್ದು, ಕಾವ್ಯಕ್ಷೇತ್ರದಲ್ಲಿ ಭಾವಗೀತೆಯ ರೂಪದಲ್ಲಿಯೇ ಅದು ಹೆಚ್ಚಾಗಿ ಅಭಿವ್ಯಕ್ತಗೊಂಡಿತು. ವಸ್ತುನಿಷ್ಠವಾದ ಕಾವ್ಯ ಶಿಲ್ಪಕ್ಕೆ ವೈಯಕ್ತಿಕ ಅನುಭವಗಳು, ಸುತ್ತಲಿನ ಪರಿಸರ, ಪ್ರಕೃತಿ ದರ್ಶನದ ವ್ಯಕ್ತಿನಿಷ್ಠವಾದ ಹೊಸ ತೆರೆಗಳು ಭಾರತೀಯ ಕಾವ್ಯಪ್ರವಾಹಕ್ಕೆ ಬಂದು ಕೂಡಿಕೊಂಡವು. ವ್ಯಕ್ತಿನಿಷ್ಠಕಾವ್ಯಕ್ಕೆ ಭಾವಗೀತೆ ಸಮರ್ಥವಾದ ಅಭಿವ್ಯಕ್ತಿಯ ಸಾಧನವಾಯಿತು. ಕರ್ನಾಟಕದಲ್ಲಿ ಬಿ. ಎಂ. ಶ್ರೀ. ಯವರ ದಾರಿಯಲ್ಲಿ ನಡೆದ ಬೇಂದ್ರೆಯವರು ತಮ್ಮ ಭಾವಗೀತೆಯ ಮೂಲಕ ನವ ಮನ್ವಂತರವನ್ನೇ ಸ್ಥಾಪಿಸಿದರು. ಹಾಗೆಯೇ ಮುಂದಿನ ಕವಿಪೀಳಿಗೆಗೆ ಆದರ್ಶರಾದ ಬೇಂದ್ರೆಯವರ ಸಾಹಿತ್ಯಿಕ ವ್ಯಕ್ತಿತ್ವ ಅನಂತವಾದ ಸಾಧನೆಗಳನ್ನು ಮಾಡಿತು. ಹಿಂದೀ ಸಾಹಿತ್ಯದಲ್ಲಿ ಬೇಂದ್ರೆಯವರ ಸಮಕಾಲೀನ ಕವಿಗಳಾದ ಸುಮಿತ್ರಾನಂದನ ಪಂತರು ಭಾವಗೀತೆಗಳ ಮೂಲಕ ಇದೇ ತೆರನಾದ ಸಾಧನೆಗಳನ್ನು ಕಾವ್ಯ ಕ್ಷೇತ್ರದಲ್ಲಿ ಮಾಡತೊಡಗಿದರು. ಪಂತಪೂರ್ವಕಾವ್ಯದಲ್ಲಿ ವಸ್ತುನಿಷ್ಠತೆಯೇ ಕಾವ್ಯದ ದಾರಿಯಾಗಿದ್ದು ಮುಂದೆ ಪಂತರ ಭಾವಗೀತೆಗಳ ಮೂಲಕ ಹಿಂದೀಕಾವ್ಯ ವ್ಯಕ್ತಿನಿಷ್ಠವಾಗಿ ಹೊಸತಿರುವನ್ನು ಪಡೆಯಿತು. ಆಧುನಿಕತೆಯ ಕೋಲಾಹಲದಲ್ಲಿ ಈ ಕವಿಗಳು ಭಾರತೀಯ ಪರಂಪರೆಯನ್ನೂ ಜೀವನಮೌಲ್ಯಗಳನ್ನೂ ಗರ್ಭೀಕರಿಸಿಕೊಂಡು ಕಾವ್ಯದ ಮಾರ್ಗದಲ್ಲಿ ಸಂಯಮಶೀಲವಾದ ನೂತನ ಪರಂಪರೆಯನ್ನು ನಿರ್ಮಿಸಿದರು.

ಬೇಂದ್ರೆಯವರ ಕಾವ್ಯದ ಅನುಸಂಧಾನದಲ್ಲಿ ಅವರ ಕಾವ್ಯಪ್ರಜ್ಞೆಯು ವ್ಯಕ್ತಿಗತ ಜೀವನದ ಸಂವೇದನೆಯನ್ನು ಕಾವ್ಯಶಿಲ್ಪದಲ್ಲಿ ಬಹುವಾಗಿ ಪಡೆಯುತಿದ್ದು, ಆ ಕಾವ್ಯಕ್ಕೆ ಬುದ್ಧಿ-ಭಾವಗಳ ಸಮನ್ವಯದ ತಾತ್ವಿಕ ಹಿನ್ನೆಲೆಯಿದೆ. ವೈಯಕ್ತಿಕ ಸುಖದುಃಖಗಳ ಸಂವೇದನೆಯೊಂದಿಗೆ ಸಾಮಾಜಿಕ ಸಂವೇದನೆಯನ್ನು ನಿಖರವಾಗಿ ಆ ಕಾವ್ಯ ಪ್ರಕಟಿಸುತ್ತದೆ. ಆದರೆ ಪಂತರ ಕಾವ್ಯ ಬಹುವಾಗಿ ವೈಯಕ್ತಿಕ ಸಂವೇದನೆಯ ಅಭಿವ್ಯಕ್ತಿಯಾಗಿದೆ. ಕಾವ್ಯರಚನೆಯ ವಿಕಾಸವು ವ್ಯಕ್ತಿತ್ವ ಮತ್ತು ಪರಿಸರದ ವಾತಾವರಣವನ್ನು ಅನ್ವಯಿಸಿರುವುದರಿಂದ ಈ ಭಿನ್ನತೆ ಸ್ವಾಭಾವಿಕವಾಗಿದೆ.

ಬೇಂದ್ರೆಯವರ ಪ್ರಾರಂಭದ ಕವಿತೆಗಳೇ ಪ್ರಜ್ಞೆಯ ಬೆಳಕಿನಿಂದ ಪ್ರಬುದ್ಧ ವಾಗಿರುವುದರಿಂದ ಅವರ ಕಾವ್ಯವಿಕಾಸದ ವಿವಿಧ ಹಂತಗಳನ್ನು ಕಟ್ಟನಿಲ್ಲಿಸುವದು ಕಷ್ಟಸಾಧ್ಯವಾಗುತ್ತದೆ. ಆ ಕವಿತೆಗಳು ರಚನಾಪ್ರಕ್ರಿಯೆ ಮತ್ತು ಕ್ರಿಯಾಶೀಲ ಸ್ತರಗಳಿಂದ ಹಿರಿದಾಗಿರುವುದರಿಂದ ವಿಷಯ ಮತ್ತು ಶೈಲಿಯ ಏಕರೂಪತೆಯ ಆಧಾರದ ಮೇಲೆ ವಿಂಗಡಿಸುವ ಪ್ರಯತ್ನವು ಸಫಲವಾಗುವುದಿಲ್ಲ. ಇದಕ್ಕೆ 'ನಾದಲೀಲೆ', 'ಸಖೀಗೀತ,' 'ಗರಿ' ಮುಂತಾದ ಕವನಸಂಕಲನಗಳಲ್ಲಿ ಕಾಣುವ ಕವಿಪ್ರತಿಭೆಯ ಏರುಪೇರುಗಳೇ ನಿದರ್ಶನವಾಗಿವೆ. ಹಾಗೆಯೇ ಕವಿ ಪ್ರತಿಭೆಯ ಬೆಳವಣಿಗೆಯ ದೃಷ್ಟಿಯಿಂದ ಭಾರತೀಯ ಸಾಹಿತ್ಯದಲ್ಲಿಯೇ ಅವರ ವ್ಯಕ್ತಿತ್ವ ಅಪೂರ್ವವಾಗಿದೆಯೆಂದು ಇಲ್ಲಿ ಸೂಚಿಸಬಹುದು.

ಪಂತರ ಕಾವ್ಯವು ಅರಳುವ ಪರಿಮಳದ ಮೊಗ್ಗೆಗಳಂತೆಯೇ ಪ್ರತಿಭೆಯ ವಿಶಾಲತೆಯನ್ನು ಪಡೆದು ಒಂದು ಕೇಂದ್ರಬಿಂದುವಿನೆಡೆಗೆ ಸಾಗುವ ಪ್ರಕ್ರಿಯೆಯನ್ನು ಗುರುತಿಸಬಹುದು. ಅನುಭವಗಳು ಮಾಗಿದಂತೆ ಭಾವನೆಗಳು ಬುದ್ಧಿಯೊಡನೆ ವಿದ್ಯುದಾಲಿಂಗನವನ್ನು ಪಡೆದು ಶ್ರೇಷ್ಠಮಟ್ಟದ ಕವಿತೆಗಳನ್ನು ನೀಡುವಲ್ಲಿ ಮತ್ತು ಪಂತರ ಕಾವ್ಯಪ್ರಜ್ಞೆಯ ವಿಕಾಸದಲ್ಲಿ ವಿವಿಧ ಮೆಟ್ಟಲುಗಳನ್ನು ಪಡೆಯುತ್ತೇವೆ. ಸುಮಿತ್ರಾನಂದನ ಪಂತರ ಕಾವ್ಯದಲ್ಲಿ ಜಾಗೃತಕವಿತ್ವವನ್ನೂ, ಚಿಂತನಪರ ಮತ್ತು ಅಧ್ಯಯನಶೀಲವಾದ ಮನೋಭೂಮಿಕೆಯನ್ನೂ ನಾವು ಸ್ಪಷ್ಟವಾಗಿ ಕಾಣ ಬಹುದು. ಹೀಗಿರುವದರಿಂದ ಬಾಹ್ಯಪರಿಸರದಿಂದ ಸ್ಫೂರ್ತವಾದ ಕವಿಪ್ರತಿಭೆ ರಚನಾದೃಷ್ಟಿಯಿಂದ ಸಕ್ರಿಯವಾಗುತ್ತದೆ. ಅದು ಕವಿತೆಯ ಆಯಾಮದಲ್ಲಿ ವಿವಿಧ ಸ್ವರಗಳನ್ನೂ ಪಡೆಯುತ್ತದೆ. ಅವರ ಕಾವ್ಯ ನಿರ್ಮಿತಿ 'ಛಾಯಾವಾದ'ದಿಂದ ಪ್ರಾರಂಭವಾಗಿ 'ಪ್ರಗತಿವಾದ'ಕ್ಕೆ ಹೆಜ್ಜೆಯಿಟ್ಟು ದರ್ಶನವಾದವನ್ನು ಮುಟ್ಟಿ ನಿಲ್ಲುತ್ತದೆ. ಪಂತರ ಕಾವ್ಯ ಈ ಭಿನ್ನ ಮುಖಗಳನ್ನು ಪ್ರಕಟಿಸುವಲ್ಲಿ ತನ್ನ ಪೂರ್ವಪರಂಪರೆಯನ್ನು ಎತ್ತಿ ತೋರಿಸುವದಿಲ್ಲ. 'ವೀಣಾ', 'ಗ್ರಂಥಿ', 'ಪಲ್ಲವ', 'ಗುಂಜನ'ದ ರಚನೆಗಳು ಸೌಂದರ್ಯ ದರ್ಶನ ಕವಿತೆಗಳಾದರೆ 'ಯುಗಾಂತ,' 'ಯುಗವಾಣಿ', 'ಗ್ರಾಮ್ಯಾ' ಇವು ಸಾಮಾಜಿಕ ಪ್ರಜ್ಞೆಯನ್ನು ಹೊಂದಿರುವ 'ಪ್ರಗತಿವಾದ'ದ ಗತಿಬಿಂಬವಾಗಿವೆ. 'ಸ್ವರ್ಣಧೂಲಿ', 'ಸ್ವರ್ಣಕಿರಣ', 'ಉತ್ತರಾ', 'ಲೋಕಾಯತನ'ದ ನೀಳ್ಗವನಗಳು ಆಧ್ಯಾತ್ಮಿಕ ಚಿಂತನೆಯ ಪ್ರಬಲ ಅಭಿವ್ಯಕ್ತಿಯಾಗಿವೆ.

ಬೇಂದ್ರೆಯವರು ಕಾವ್ಯರಚನೆಯಲ್ಲಿ ತೀವ್ರವಾಗಿ ತೊಡಗುವದರಿಂದ ಕ್ರಿಯಾ ಶೀಲತೆಯು ಕೊನೆಯಾಗದೆ ಉಳಿದುಕೊಳ್ಳುವದು ಮತ್ತು ಕವಿತೆಯಲ್ಲಿ ಪರಿಪೂರ್ಣ ವಾದ ಜೀವನ ದೃಷ್ಟಿಯನ್ನು ಬಿಂಬಿಸುವದು ಅವರ ಕಾವ್ಯ ಪ್ರತಿಭೆಯ ಅಪೂರ್ವ ವಾದ ಲಕ್ಷಣವಾಗಿದೆ. 'ಗರಿ', 'ನಾದಲೀಲೆ,' 'ಗಂಗಾವತರಣ,' 'ಸಖೀ-

ಗೀತ,' 'ಹಾಡುಪಾಡು', ಮುಂತಾದ ಸಂಕಲನಗಳ ಕವಿತೆಗಳಲ್ಲಿ ಆತ್ಮಾನು ಭೂತಿಯು ಅತ್ಯಂತ ಸಶಕ್ತವಾಗಿದ್ದು ಭಾಷಾಶಿಲ್ಪದ ದೃಷ್ಟಿಯಿಂದಲೂ ಅವುಗಳು ನವೋದಯ ಕನ್ನಡ ಕಾವ್ಯಕ್ಕೆ ಉತ್ತಮ ಕೊಡುಗೆಯಾಗಿವೆ. 'ಸೂರ್ಯಪಾನ,' 'ಹೃದಯಸಮುದ್ರ,' 'ಚೈತ್ಯಾಲಯ', 'ನಾಕು ತಂತಿ,' 'ಮರ್ಯಾದೆ'ಯ ರಚನೆಗಳು ದಾರ್ಶನಿಕ ಚಿಂತನೆಗಳಿಂದ ತುಂಬಿಕೊಂಡಿದ್ದರೂ ಜೀವನಾಸಕ್ತಿಯನ್ನು ಪ್ರಕಟಪಡಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ.

ಬೇಂದ್ರೆ ಹಾಗೂ ಪಂತರು ತಮ್ಮ ಭಾವಗೀತೆಗಳಲ್ಲಿ ಪ್ರಕೃತಿಯ ಸಮಸ್ತವಾದ ವಸ್ತುಗಳನ್ನು ವರ್ಣಿಸುವಲ್ಲಿ ತಮ್ಮ ಕಾವ್ಯಪ್ರತಿಭೆಯನ್ನು ಭಾರತೀಯ ಹಿನ್ನೆಲೆಯಲ್ಲಿ ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ನಿಸರ್ಗದ ರಮಣೀಯವಾದ ಸನ್ನಿವೇಶಗಳು, ಸೂರ್ಯೋದಯ ಸೂರ್ಯಾಸ್ತಗಳ ಬೆಡಗು, ಪಕ್ಷಿಲೋಕದ ವೈವಿಧ್ಯ, ಶ್ರಾವಣಮಾಸದ ವೈಭವ, ಋತುಮಾನಗಳ ಚಿರಂತನ ಲೀಲೆ, ಗಿರಿಶಿಖರಗಳ ಸಾನ್ನಿಧ್ಯ, ಭೂಮ್ಯಾಕಾಶಗಳ ವಸ್ತುಗಳು ಈ ಭಾವಗೀತಕಾರರ ಕವಿತೆಗಳಲ್ಲಿ ಕಾವ್ಯ ಶಿಲ್ಪವನ್ನು ಪಡೆಯುತ್ತವೆ. ಇವರ ಕಾವ್ಯ ಪ್ರತಿಭೆಗೆ ಪ್ರಕೃತಿ ಪ್ರೇರಣೆಯನ್ನು ನೀಡಿದ್ದರೂ ಅದರ ಆರಾಧನೆಯಲ್ಲಿ ಬದುಕಿನ ಸಹಜತೆಯನ್ನು ನಿರ್ಲಕ್ಷಿಸದೆ ಮಾನವನ ಸುಖದುಃಖಗಳೊಂದಿಗೆ ನಿಸರ್ಗ ಹೇಗೆ ಸಹಭಾಗಿಯಾಗಿ ವರ್ತಿಸುತ್ತದೆಯೆಂಬ ಜೀವನಪ್ರಜ್ಞೆಯು ಅಗಾಧವಾಗಿದೆ.

ಬೇಂದ್ರೆ ಮತ್ತು ಪಂತರು ತಮ್ಮ ಕಾವ್ಯದಲ್ಲಿ ಚಿತ್ರಿಸಿರುವ ಪ್ರೇಮದರ್ಶನವು ಸಾಹಿತ್ಯಜಗತ್ತಿನಲ್ಲಿ ಅತ್ಯಂತ ವಿರಳವಾದುದು. ಪ್ರೇಮದ ವಿವಿಧ ಮುಖಗಳ ಅಭಿವ್ಯಕ್ತಿ ಹಾಗೂ ಸೌಂದರ್ಯದರ್ಶನ ಪಂತರ ಕಾವ್ಯದಲ್ಲಿ ಕಾಣಿಸಿಕೊಂಡರೆ ಬೇಂದ್ರೆಯವರ ಕವಿತೆಗಳಲ್ಲಿ ಅವೆರಡರೊಂದಿಗೆ ದಾಂಪತ್ಯಪ್ರೇಮದ ಮಧುರತೆ ಹಾಗೂ ಪಾವಿತ್ರ್ಯ ಅಲ್ಲದೆ ಸಖ್ಯಯೋಗವನ್ನು ನಿರೂಪಿಸುವ ಧೋರಣೆಯು ಅಪೂರ್ವವಾದ ಸಾಧನೆಯಾಗಿದೆ. ಬೇಂದ್ರೆಯವರ ಸಖೀಗೀತವು ಮದುವೆಯ ಮಧುರಸ್ಮೃತಿಯೊಂದಿಗೆ ಪ್ರಾರಂಭವಾಗಿ ಜೀವನದ ಕಷ್ಟಸುಖಗಳೊಂದಿಗೆ ದಾಂಪತ್ಯಜೀವನದ ಆದರ್ಶಗಳನ್ನು ನಿರೂಪಿಸುತ್ತ ಹೊಸದರ್ಶನವನ್ನು ತೋರಿಸುತ್ತದೆ. ನಾರೀಪ್ರೇಮವು ಪಂತರ ಕಾವ್ಯದ ಮೂಲಪ್ರೇರಣೆಯೊಂದಾಗಿದ್ದು ಸ್ತ್ರೀಯ ಶಾರೀರಿಕ ಸೌಂದರ್ಯದ ಜೊತೆಗೆ ಭಾವ ಸೌಂದರ್ಯವನ್ನು ನಿರೂಪಿಸುವ ಐಂದ್ರಿಕ ಪ್ರೇಮದ ಚಿತ್ರಣವನ್ನು ನೋಡಬಹುದು. ಬೇಂದ್ರೆಯವರ ಪ್ರೇಮ ಗೀತಗಳಲ್ಲಿ ಕೇಂದ್ರಬಿಂದು ಭಾವನೆಗಳ ಸುಖವನ್ನೂ ಆತ್ಮಸಂತೋಷವನ್ನೂ ಸುಂದರ ಸ್ಮೃತಿಚಿತ್ರವನ್ನೂ ನಿರೂಪಿಸುವದಾದರೆ ಪಂತರು ದಾಂಪತ್ಯಪ್ರೇಮಕ್ಕೆ ಹೆಚ್ಚು ಪ್ರಾತಿನಿಧ್ಯ ನೀಡಿಲ್ಲ. ತುಲಸೀದಾಸರಂತೆ ಪಂತರು ನಾರೀ ದೋಷವನ್ನು ಎತ್ತಿ ಹಿಡಿದು ಉನ್ಮುಕ್ತ ಪ್ರೇಮದ ವರ್ಣನೆಯನ್ನೂ ಮಾಡಿದ್ದಾರೆ. ಪಂತರ

ವೈಯಕ್ತಿಕ ಜೀವನದಲ್ಲಿ ಪ್ರೇಮಾನುಭವಕ್ಕೆ ತಕ್ಕ ಅವಕಾಶ ಲಭ್ಯವಾಗದುದೇ ಕಾರಣವಾಗಿರಬೇಕು. ಹಾಗೆಯೇ ಆ ಕಾವ್ಯ ನೀಡುವ ಪ್ರೇಮದರ್ಶನ ನಿರಾಶೆಯ ಛಾಯೆಯನ್ನು ಸಹಜವಾಗಿ ಮೂಡಿಸುತ್ತದೆ. ಆಂಗ್ಲ ಸಾಹಿತ್ಯದ ಕೀಟ್ಸ್, ಶೆಲ್ಲಿ ಮುಂತಾದ ರಮ್ಯಸಂಪ್ರದಾಯದ ಕವಿಗಳಿಂದ ಪ್ರೇರಿತವಾದ ಬೇಂದ್ರೆ–ಪಂತರ ಸೌಂದರ್ಯದರ್ಶನ ಪರಸ್ಪರ ಭಿನ್ನತೆಯಿಂದ ಭಾರತೀಯ ಸಂಸ್ಕೃತಿಯ ಹಿನ್ನೆಲೆ ಯಲ್ಲಿ ನಿರೂಪಿತವಾಗಿದೆ.

ಸಾಮಾಜಿಕ ಪ್ರಜ್ಞೆ ಬೇಂದ್ರೆ–ಪಂತರ ಕಾವ್ಯದಲ್ಲಿ ಸಶಕ್ತವಾಗಿ ಮೂಡಿದ್ದು ನಮ್ಮ ಬದುಕಿನ ರಸಮಯ ಸನ್ನಿವೇಶಗಳಲ್ಲಿ ವಿಷವರ್ತುಲವಾಗಿ ಕಾಡುವ ನೂರಾರು ಸಮಸ್ಯೆಗಳೆಡೆಗೆ ನಮ್ಮನ್ನು ಕರೆದೊಯ್ಯುತ್ತದೆ. 'ಕುರುಡು ಕಾಂಚಾಣ,' 'ನರಬಲಿ', 'ಪುಟ್ಟ ವಿಧವೆ', 'ಭೂಮಿತಾಯಿಯ ಚೊಚ್ಚಿಲ ಮಗ,' 'ತುತ್ತಿನ ಚೀಲ,' 'ಹೆಣದ ಹಿಂದೆ', ಮುಂತಾದ ಕೆಲವೇ ಕವಿತೆ ಗಳಲ್ಲಿಯೂ ಹೃದಯಸ್ಪರ್ಶಿಯಾದ ಭಾವನೆಗಳು ಬೇಂದ್ರೆಯವರ ವಿಚಾರಶೀಲ ಮತಿಯಿಂದ ಹೊರಹೊಮ್ಮಿವೆ. ರಸವ್ಯಂಜನೆಯ ದೃಷ್ಟಿಯಿಂದ ಅವು ಪ್ರಭಾವ ಕಾರಿಯಾಗಿವೆ. ಪಂತರ ಸಾಮಾಜಿಕ ಕವಿತೆಗಳಲ್ಲಿ ಮಾರ್ಕ್ಸ್ ಪ್ರಭಾವಕ್ಕೊಳಗಾದ ಪ್ರಗತಿವಾದದ ಕ್ರಾಂತಿಯ ಕಿಡಿಗಳು ಮೊಳಗಿದ್ದರೂ ಭಾರತೀಯ ಬದುಕಿಗೆ ಅವು ಭಾರವಾದವು. ಇದರಿಂದ ಕಾವ್ಯದ ರಮಣೀಯತೆ, ಮಾಧುರ್ಯ, ಕೋಮಲತೆ ಮಾಯವಾಗಿ ಅವು ಇಂತಹ ವಿಚಾರವನ್ನು ಬಿಂಬಿಸುವ ಕೇವಲ ಪ್ರಯತ್ನಶೀಲತೆಯ ಸಂಕೇತವಾಗಿ ಉಳಿದುಬಿಟ್ಟವು. ಜೀವನದಲ್ಲಿ ಕಷ್ಟನಷ್ಟಗಳನ್ನು ಕಂಡ ಜನತೆ ಬೇಂದ್ರೆಯವರ ಕವಿತೆಗಳಿಂದ ಬಾಳಿನಲ್ಲಿ ಹೊಸ ಭರವಸೆಯನ್ನು ಕಂಡುಕೊಂಡಿತು. ಬದುಕಿನ ವಿಷಮತೆಯಲ್ಲಿ ಆಶಾವಾದದ ಕಿರಣವನ್ನು ಬೇಂದ್ರೆ ಕಂಡಿದ್ದಾರೆ.

ಈ ಶತಮಾನದ ಭಾರತೀಯ ಕವಿಗಳ ಮೇಲೆ ಮಹರ್ಷಿ ಅರವಿಂದರಂತಹ ದಾರ್ಶನಿಕರ ತಾತ್ವಿಕ ಚಿಂತನೆಯ ಪ್ರಭಾವ ದಟ್ಟವಾಗಿ ಹರಡಿದ್ದು ಬೇಂದ್ರೆ ಮತ್ತು ಪಂತರ ಕಾವ್ಯದಲ್ಲಿ ಅದು ಸಾಂದ್ರವಾಗಿ ನಿರೂಪಿತವಾಗಿದೆ. ಕನ್ನಡ ವಚನಕಾರ ನಿಜಗುಣಶಿವಯೋಗಿಗಳಂತಹ ಅನುಭಾವಿಗಳ ಚಿಂತನೆಯನ್ನು ಪಡೆದು ಬೇಂದ್ರೆ, ಅರ ವಿಂದರ ಪೂರ್ಣ ಯೋಗವನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ. ಅವರ ಕಾವ್ಯದ ತುಂಬ ಆ ಕಾವ್ಯ ಧೋರಣೆಗಳನ್ನು ನಾವು ಕಾಣಬಹುದು. ಬೇಂದ್ರೆ ಮೂಲತಃ ಕವಿಗಳು. ನಂತರ ದಾರ್ಶನಿಕ ದೃಷ್ಟಾರರು ಎಂಬುದನ್ನು ಇಲ್ಲಿ ಸೂಚಿಸಬೇಕಾಗಿದೆ. ಭಾರತೀಯ ದರ್ಶನದೊಂದಿಗೆ ಅರವಿಂದ ದರ್ಶನವನ್ನು 'ಚೈತ್ಯಾಲಯ', 'ಮರ್ಯಾದೆ', 'ಶ್ರೀಮಾತಾ' ಮುಂತಾದ ರಚನೆಗಳಲ್ಲಿ ಕಾಣಬಹುದು. ಈ ದೃಷ್ಟಿಯಿಂದ ಸುಮಿತ್ರಾನಂದನ ಪಂತರು ಅರವಿಂದರಿಂದ ಪ್ರಭಾವಿತರಾದ ಬೇಂದ್ರೆಯವರೊಂದಿಗೆ ಸಮಾನತ್ವವನ್ನು ಪಡೆಯುವರು. ಅರವಿಂದ ದರ್ಶನದ ದೃಷ್ಟಿಯಿಂದ ಬೇಂದ್ರೆ ಮತ್ತು ಪಂತರ ಕಾವ್ಯದಲ್ಲಿ ಸಮೃದ್ಧವಾದ ಬೆಳವಣಿಗೆಯನ್ನು ಕಾಣಬಹುದು.

ಪಂತರ 'ಸ್ವರ್ಣಕಿರಣ,' 'ಸ್ವರ್ಣಧೂಲಿ', 'ಉತ್ತರಾ' ಮೊದಲಾದ ಅವರ ಉತ್ತರಕಾಲೀನ ರಚನೆಗಳು ಇದಕ್ಕೆ ನಿದರ್ಶನವಾಗಿವೆ.

ಬೇಂದ್ರೆಯವರ ಪ್ರತಿಭೆ ಕಾವ್ಯ ಕ್ಷೇತ್ರದಂತೆ ಗದ್ಯೋದ್ಯಾನದಲ್ಲಿಯೂ ಚಿರಂತನವಾಗಿ ಕೃಷಿಯನ್ನು ಗೈದಿರುವದರಿಂದ ಬೇಂದ್ರೆಯವರ ಕಾವ್ಯಭಾಷೆ ಕನ್ನಡದ ಶಬ್ದಸೌಷ್ಠವಕ್ಕೆ ಹೊಸಬನಿಯನ್ನು ಕೊಡಲು ಸಮರ್ಥವಾಗಿದೆ. ಪಂತರು ಬೇಂದ್ರೆಯವರಂತೆ ಹಿಂದಿಯ ನವೋದಯ ಕಾವ್ಯಕ್ಕೆ ಹೊಸ ಭಾಷಾಪ್ರಜ್ಞೆಯನ್ನು ನೀಡಿದರು. ಶಬ್ದಸೃಷ್ಟಿ, ಛಂದಸ್ಸು, ಅಲಂಕಾರಪ್ರಯೋಗ, ನವೀನವಾದ ಕಾವ್ಯಭಾಷೆಯ ಬಳಕೆ ಇವುಗಳಿಂದ ಈ ಇಬ್ಬರು ಭಾವಗೀತಕಾರರು ತಮ್ಮ ಕಾವ್ಯ ಕ್ಷೇತ್ರದಲ್ಲಿ ಹೊಸ ಸಾಧನೆಯನ್ನು ಗೈದಿದ್ದಾರೆ. ಬೇಂದ್ರೆಯವರು ಜನಪದ ಭಾಷೆಯನ್ನು ಕಾವ್ಯಭಾಷೆಯನ್ನಾಗಿಸಿ ಸಂಸ್ಕೃತ ಮತ್ತು ಕನ್ನಡದ ಪ್ರಾಚೀನ ವೃತ್ತಗಳನ್ನು ಆಂಗ್ಲ ಕಾವ್ಯರೂಪಗಳಾದ ಸುನೀತ, ಪ್ರಗಾಥ, ಭಾವಗೀತ, ಗೀತರೂಪ, ಮುಕ್ತಛಂದ ಮುಂತಾದ ಛಂದಸ್ಸಿನ ಗಣಸಂಯೋಜನೆಯನ್ನು ಬಳಸಿಕೊಂಡು ಕಾವ್ಯದ ಮೆರುಗನ್ನು ಹೆಚ್ಚಿಸಿದರು. ಆದರೆ ಪಂತರ ಕಾವ್ಯಭಾಷೆ ಗ್ರಾಂಥಿಕವಾಗಿದ್ದರೂ ಅವರ ಸಾಮಾಜಿಕ ಕವನಗಳು ಜನಸಾಮಾನ್ಯರ ಆಡುಭಾಷೆಯನ್ನು ನಿರೂಪಿಸುವದರೊಂದಿಗೆ ಹಿಂದೀ ಕಾವ್ಯಭಾಷೆಯು ದೃಷ್ಟಿಯಿಂದ ಹೊಸತನವನ್ನು ಪಡೆಯಿತು.

ಭೃಂಗದ ಬೆನ್ನೇರಿ, ಅಷ್ಟಷಟ್ಪದಿ ಮುಂತಾದ ಕವಿತೆಗಳು ಸಾಹಿತ್ಯ ಮೀಮಾಂಸೆಗೆ ಬೇಂದ್ರೆಯವರು ಕೊಟ್ಟ ಮಹತ್ವದ ಕೊಡುಗೆಯಾಗಿವೆ. :ಸುಮಿತ್ರಾನಂದನ ಪಂತರು ಕಾವ್ಯವಿಮರ್ಶೆಯನ್ನು ಕುರಿತು ತಮ್ಮ ಚಿಂತನೆಗಳನ್ನು ತಮ್ಮ ಅನೇಕ ಕೃತಿಗಳಲ್ಲಿ ವಿವರಿಸಿದ್ದಾರೆ. ಬೇಂದ್ರೆಯವರು ಸ್ವತಃ ಕವಿಗಳಾಗಿದ್ದು ಅನೇಕ ಕವಿಗಳನ್ನು ಸೃಷ್ಟಿಸಿದ ಧೀಮಂತರಾಗಿದ್ದಾರೆ. ಧಾರವಾಡದಲ್ಲಿ ಗೆಳೆಯರ ಗುಂಪನ್ನು ಕಟ್ಟಿ ಅವರಿಗೆ ಕಾವ್ಯರಚನೆಯ ಬಗ್ಗೆ ಸ್ಪಷ್ಟವಾದ ಹೊಳಹುಗಳನ್ನು ನೀಡಿ ಕನ್ನಡಿಗರು ಮರೆಯಲಾಗದ ಕಾರ್ಯವನ್ನು ಮಾಡಿದ್ದಾರೆ. ಬೇಂದ್ರೆ ಕಾವ್ಯ ನವೋದಯಕಾವ್ಯದ ಮೇಲೆಯೂ ಪ್ರಭಾವ ಬೀರಿವೆ. ಹಿಂದೀ ಸಾಹಿತ್ಯದಲ್ಲಿ ಸುಮಿತ್ರಾನಂದನ ಪಂತರು ಅನೇಕ ಕವಿಗಳಿಗೆ ಕಾವ್ಯದ ಮಹತ್ವವನ್ನು ಮನಗಾಣಿಸಿದ್ದು ನಂತರದ ಕವಿಗಳು ಅವರ ಹಾದಿಯಲ್ಲಿ ನಡೆದಿದ್ದಾರೆ. ಬೇಂದ್ರೆ ಮತ್ತು ಪಂತರು ಕನ್ನಡ ಹಿಂದೀ ಸಾಹಿತ್ಯದ ಶ್ರೇಷ್ಠ ಭಾವಗೀತಕಾರರಾಗಿದ್ದು ಭಾರತೀಯ ಸಾಹಿತ್ಯದಲ್ಲಿ ಅವರ ಕಾವ್ಯ ಚಿರಂತನವಾದ ಜೀವನಾದರ್ಶಗಳನ್ನೂ ಬಾಳಿಗೆ ಬೆಳಗನ್ನೂ ತರುವ ಕಾರ್ಯವನ್ನು ಸಫಲವಾಗಿ ನಿರ್ವಹಿಸಿರುವದರಿಂದ ಅವರು ಭಾರತೀಯ ಜ್ಞಾನಪೀಠದ ಗೌರವವನ್ನು ಪಡೆದು ಸಾಹಿತ್ಯ ಪ್ರಪಂಚದಲ್ಲಿ ಅಮರವಾದ ಸ್ಥಾನವನ್ನು ಗಳಿಸಿದ್ದಾರೆ. ಅವರಿಬ್ಬರ ಕಾವ್ಯಶಕ್ತಿ ಎಷ್ಟು ಘನವಾದುದೋ ಅಷ್ಟೇ ಅವರ ವ್ಯಕ್ತಿತ್ವವು ಬಹುಮುಖವಾಗಿದ್ದು ಅವರು ಆಧುನಿಕ ಯುಗದ ದೃಷ್ಟಾರರಾಗಿದ್ದಾರೆ.

§ § § §

೨೧

# ನಾಟಕಕಾರ ಬೇಂದ್ರೆ

ದಿ. ರಾಮಚಂದ್ರ ಕೊಟ್ಟಲಗಿ

ಕನ್ನಡ ವಾಚಕ ಲೋಕಕ್ಕೆ ನಾಟಕ ಎಂಬ ಸಾಹಿತ್ಯಪ್ರಕಾರದ ಪರಿಚಯ ವಾದದ್ದು ತೀರ ಇತ್ತೀಚೆ. ಕವಿಚರಿತೆಕಾರರು ಶೋಧಿಸಿದಂತೆ ಮಿತ್ರವಿಂದಾ ಗೋವಿಂದಾ— ನಾಟಕವೇ ನಮ್ಮ ನಾಟ್ಯಪ್ರಪಂಚಕ್ಕೆ ಮೊದಲಿನದೆನ್ನಬೇಕು (೧೬೮೦). ಆದಾದರೂ ಸ್ವತಂತ್ರ ಕೃತಿಯಾಗಿರದೆ ಅನುವಾದಿತವಾದದ್ದು. ನಂತರದ ಸಂಶೋಧನೆಯನ್ನು ಅವರು ಮಾಡಲಿಲ್ಲ. ಆದರೆ ಉತ್ತರ ಕರ್ನಾಟಕದಲ್ಲಿ ಇಂಥ ಪ್ರಯತ್ನಗಳು ನಡೆದಿದ್ದವೆಂಬುದಕ್ಕೆ ಸಾಕ್ಷಿಗಳಿವೆ. ಕಾರಣ: ಬದಿಯ ಪ್ರಾಂತವಾದ ಮಹಾರಾಷ್ಟ್ರದಲ್ಲಿ ನಾಟ್ಯರಂಗ ವಿಜೃಂಭಿಸುತ್ತಿತ್ತು. ಅಲ್ಲಿನ ನಾಟಕದ ಮೂಲ ಪೀಠವಾದ ಸಾಂಗಲಿಯು ಕರ್ನಾಟಕಕ್ಕೆ ತೀರ ಹತ್ತಿದ್ದು. ಅನ್ಯ ನಟರೂ, ರಂಗ ಭೂಮಿಯನ್ನು ನಡೆಸಿ, ನಿಲ್ಲಿಸಿ, ಅದನ್ನು ಊರ್ಜಿತಾವಸ್ಥೆಗೆ ಒಯ್ದು ಮುಟ್ಟಿಸಿದ ಕಿರ್ಲೋಸ್ಕರರು ಕನ್ನಡನಾಡಿನ ಗುರ್ಲಹೊಸೂರಿನವರು. ಮಹಾರಾಷ್ಟ್ರದ ನಾಟಕಕಂಪನಿಗಳು ಉತ್ತರ ಕರ್ನಾಟಕದ ಧಾರವಾಡ, ಬೆಳಗಾಂವಿ, ವಿಜಾಪೂರ ಇತ್ತಕಡೆಗೆ ಪ್ರವಾಸವನ್ನು ಕೈಕೊಂಡು ನಾಟಕಗಳನ್ನು ಆಡಿ ತೋರಿಸುತ್ತಿದ್ದವು. ಅವುಗಳಿಂದ ಜನತೆಯ ಮನರಂಜನೆಯು ಆಗುತ್ತಿದ್ದಂತೆ, ಲೇಖಕರಿಗೂ ಸ್ಫೂರ್ತಿಯು ಒದಗುತ್ತಿತ್ತು. ಹೀಗೆ ಪ್ರಭಾವಿತರಾದವರಲ್ಲಿ ಶ್ರೀ ಕೆರೂರ ವಾಸು-ದೇವಾಚಾರ್ಯರೂ ಒಬ್ಬರು. ಅವರು ವಿದ್ಯಾಸಂಪನ್ನರಾಗಿದ್ದಂತೆ ಸ್ವತಂತ್ರ ಬುದ್ಧಿಯ ಕಲ್ಪಕರೂ, ಪ್ರತಿಭಾವಂತರೂ ಆಗಿದ್ದರು. ಅವರ ನಾಟಕಗಳು ಇಂಗ್ಲೀಷಿನ ಅನುವಾದಗಳಿದ್ದರೂ ಅವುಗಳ ಮೂಲ ಸತ್ವ ಈ ನಾಡಿನದು, ಇಲ್ಲಿಯ ಮಣ್ಣಿನದು. ತದನಂತರವಾದರೂ ನಾಟ್ಯರಚನೆಗೆ ಉತ್ತರಕರ್ನಾಟಕವೇ ಮುಂದಾಳಾಗಿ ತನ್ನ ಹೆಸರನ್ನು ಗಳಿಸಿಕೊಂಡಿದೆ. ನಾಟಕಗಳನ್ನು ಆಡುವ ಕಂಪನಿಗಳೂ ಉತ್ತರ ಕರ್ನಾಟಕದಲ್ಲಿ ಹೆಚ್ಚಿದಷ್ಟು ಬೇರೆ ಭಾಗದಲ್ಲಿ ಹುಟ್ಟಲಿಲ್ಲ. ಇದಕ್ಕೆ ಇಲ್ಲಿಯ ಜನತೆಯ ರುಚಿಯೂ— ನಾಟಕ ನೋಡುವ ಹವ್ಯಾಸವೂ ಕಾರಣವಿದ್ದಿರಬೇಕು.

ನಾಟಕರಚನೆ ಬೆಳೆದು ಬಂದರೂ ಅದರಲ್ಲಿ ವೈವಿಧ್ಯ ಬೆಳೆದು ಬರಲಿಲ್ಲ. ಹೊಸತನ ಬಹಳ ದಿನಗಳ ವರೆಗೆ ಕಾಣಲಿಲ್ಲ. ಲೇಖಕರಿಗೆ ಕಾವ್ಯ-ಇನ್ನಿತರ ಗದ್ಯ ಪ್ರಕಾರದಲ್ಲಿ ಆಸ್ಥೆ ತೋರಿದಷ್ಟು ನಾಟಕದಲ್ಲಿ ತೋರಲಿಲ್ಲ. ಇದಕ್ಕೆ ಕಾರಣ ನಾಟಕಗಳನ್ನು ಆಡುವ ಜನರ— ಸುಶಿಕ್ಷಿತ ಸಮಾಜಕ್ಕಾಗಿ ನಾಟಕಗಳನ್ನು ಆಡಿ ತೋರಿಸುವ— ನಟವೃಂದದ ಅಭಾವವೇ ಇದ್ದಿರಬೇಕು. ನಾಟ್ಯವಿಲಾಸಿಗಳ ಮನ್ವಂತರವು ಉದಿಸಲಿಕ್ಕೆ ಇನ್ನೂ ಅನೇಕ ದಶಕಗಳನ್ನು ದಾರಿಕಾಯ ಬೇಕಾಗಿತ್ತು.

ಕಾಲೇಜುಗಳ ಗ್ಯಾದರಿಂಗ ಸಮಯದಲ್ಲಿ ಕೆಲವೊಂದು ನಾಟಕಗಳು ಪ್ರದರ್ಶಿತವಾಗುತ್ತಿರಬಹುದು. ಆದರೆ ಅವು ವರುಷಕ್ಕೆ ಒಂದು ಸಲ. ಇಂಥ ಪರ್ಯಾಯೋತ್ಸವವನ್ನು ನೋಡುವ ಭಾಗ್ಯ ಸರ್ವರಿಗೂ ಲಭಿಸುವಂತಿರಲಿಲ್ಲ. ಇಂದಿನಂತೆ, ನಾಯಿಯ ಛತ್ತರಿಗೆಯ ಹಾಗೆ ಊರಿಗೊಂದು ಕಾಲೇಜೂ ಇರಲಿಲ್ಲ. ಕನ್ನಡ ಜನತೆಗೆ, ವಿದ್ಯಾಭಿರುಚಿಯುಳ್ಳವರಿಗೆ ದೂರದ ಪುಣೆ-ಮುಂಬೈಗಳ ಕಡೆಗೆ ಧಾವಿಸಬೇಕಾಗುತ್ತಿತ್ತು. ನಮ್ಮ ನಾಟಕಕಾರರಲ್ಲಿ ಬಹಳಷ್ಟು ಜನರು ಪುಣೆ-ಮುಂಬೈಗಳಲ್ಲಿಯೇ ತಮ್ಮ ಶಿಕ್ಷಣವನ್ನು ಮುಗಿಸಿ ತಮ್ಮ ನಾಟಕೀಯ ಸ್ಫೂರ್ತಿಯನ್ನು ಅಲ್ಲಿಂದಲೇ ಪಡೆದು ಬಂದವರಾಗಿದ್ದಾರೆ.

'ಹುಚ್ಚಾಟಗಳು' ಎಂಬ ನಗೆನಾಟಕಗಳ ಸಂಕಲನದ ಲೇಖಕರಾದ ಬೇಂದ್ರೆಯವರು ಇದಕ್ಕೆ ಹೊರತಾಗಿಲ್ಲ. ಅವರು ನಾಟಕಕಾರರು ಎನ್ನುವದಕ್ಕಿಂತ ಕವಿಗಳೆಂದೇ ಸರ್ವಮಾನ್ಯತೆಯನ್ನೂ, ಸರಕಾರಿ ಮಾನ್ಯತೆಯನ್ನೂ ಪಡೆದಿದ್ದಾರೆ. ಆದರೆ ಅವರು ಶ್ರೇಷ್ಠ ಜ್ಯೇಷ್ಠ ಕವಿಗಳಾಗಿರುವಂತೆಯೇ ನಾಟಕಕಾರರೂ ಆಗಿದ್ದಾರೆ. ಕವನಗಳನ್ನು ಬರೆವಷ್ಟು ನಾಟ್ಯರಚನೆಗೆ ಲಕ್ಷ್ಯವನ್ನು ಪೂರೈಸಿದ್ದರೆ ಜಾಗತಿಕ ಕೀರ್ತಿಯ ಒಂದೆರಡು ಕೃತಿಗಳನ್ನಾದರೂ ಅವರು ರಚಿಸಬಹುದಾಗಿತ್ತು.

ಈ ಹುಚ್ಚಾಟಗಳಲ್ಲಿ ಅವರು ನಾಟಕಕಾರರಾಗಿ, ವಿಡಂಬನಕಾರರಾಗಿ ಮೈದೋರಿದ್ದಾರೆ. ಅದರ ವಿರಾಟ್ ದರ್ಶನವನ್ನು ಮಾಡಿಸಿದ್ದಾರೆ. ಆ ದರ್ಶನವನ್ನು ಮೊದಲು ತಾವು ಅನುಭವಿಸಿ ನಂತರ ಸಮಾಜಕ್ಕೆ ಅದನ್ನು ತೋರಿಸಿದ್ದಾರೆ. ಆ ದರ್ಶನವನ್ನು ಪಡೆದು ತಾವು ಕೃತಕೃತ್ಯರಾದಂತೆ, ಅದನ್ನು ಜನತೆಗೆ ತೋರಿಸುವದರಲ್ಲಿಯೂ ಮಹಾಸಮಾಧಾನ— ಸಂತೃಪ್ತಿಯನ್ನು ಅವರು ಪಡೆದಿದ್ದಾರೆನ್ನುವದು ನನ್ನ ಭಾವನೆ. ಕಾರಣ ಇವು ಪರಿಪೂರ್ಣ ಕೃತಿಗಳು.

ಈ ಸಂಕಲನದಲ್ಲಿಯ ಐದು ಹುಚ್ಚಾಟಗಳಲ್ಲಿ ನಾಲ್ಕು ನಿಜವಾದ ಹುಚ್ಚಾಟಗಳು. 'ಗೋಲ್' ಎನ್ನುವದು ಈ ಸದರಿನಲ್ಲಿ ಬರೆದ ಗಂಭೀರದೃಶ್ಯ. ಅಲ್ಲಿ ಹಾಸ್ಯವು, ಹುಚ್ಚಾಟವು ಮೋಡದ ಅಂಚಿನ ಬೆಳ್ಳಿಯ ರೇಷೆಯಂತೆ ಭೂಷಣವಾಗಿ

ಬಂದಿದ್ದರೂ ಅದನ್ನು ಶುದ್ಧ ಹುಚ್ಚಾಟವೆನ್ನಲಾಗದು. ಅದನ್ನು ಈ ಸಂಗ್ರಹದಿಂದ ಬಿಟ್ಟಿದ್ದರೂ ನಡೆಯಬಹುದಾಗಿತ್ತು.

ಈ ಹುಚ್ಚಾಟಗಳಲ್ಲಿ ಯಾರ ಹುಚ್ಚಾಟವಿದೆ ? ಜನರದೆ ? ಸಮಾಜದ್ದೆ ? ಸಮಾಜದ ಆಧಾರಸ್ತಂಭಗಳೆಂದು ಕರೆಯಿಸಿಕೊಳ್ಳುವ ಪ್ರತಿಷ್ಠಿತರದೇ ? ಅಥವಾ ಒಂದು ಕಾಲಕ್ಕೆ ಆಗಿ ಹೋದ ರಾಜ–ಮಹಾರಾಜ–ಪ್ರಧಾನಿ-ಮಂತ್ರಿಗಳದೇ ? ಸಾಮಾಜಿಕ ಅರ್ಥದಲ್ಲಿ, ಈ ರಾಜ–ಮಹಾರಾಜರು ೩೦–೪೦ ವರುಷಗಳ ಹಿಂದೆ ಪ್ರತಿಷ್ಠಿತ ಸಮಾಜಘಟಕರಾಗಿದ್ದರು. ಅಧಿಕಾರ ಪೀಠಗಳಲ್ಲಿ ಮಂಡಿತರಾಗಿದ್ದರು. ಎಷ್ಟೇ ಚಿಕ್ಕದಿರಲಿ, ಒಂದು ರಾಜ್ಯವೆಂಬ ಸೀಮೆಗೆ ಒಡೆಯರಾಗಿದ್ದರು. ಅಂಥವರೂ ಇಲ್ಲಿಯ ನಗೆಗೆ, ಹುಚ್ಚಾಟಕ್ಕೆ ಬಲಿಯಾಗಿದ್ದಾರೆ. ಈ ರಾಜ–ಮಹಾರಾಜರ ಕಥೆಗಳನ್ನು ಅವರ ದಿನಚರಿಯ ಬಾಳಿನ ದಿವ್ಯಲೀಲೆಗಳನ್ನು ಕೇಳಿದವರಿಗೆ ಇದರ ಸತ್ಯ ದರ್ಶನವಾಗದೆ ಹೋಗದು. ಹುಚ್ಚಾಟದಲ್ಲಿಯ ಅವರ ಚಿತ್ರವನ್ನು ನೋಡಿದವರಿಗೆ ಇದೇನೂ ಹೊಸದೆನಿಸದು. ತಮ್ಮ ಲೀಲಾವಿನೋದಕ್ಕಾಗಿ ಸಾಕುಪ್ರಾಣಿಗಳಾದ ಬೆಕ್ಕು-ನಾಯಿಗಳ ಮದುವೆಯನ್ನು ಸರ್ವ ವಿಜೃಂಭಣೆಯಿಂದ ಮಾಡಿಸಿ ಆನಂದಪಟ್ಟ ಸಂಸ್ಥಾನಿಕರ ಕತೆಗಳು ಇಂದಿನವರಿಗೆ ಮೋಜಿನವೆನಿಸಬಹುದಾದರೂ, ಅಂದಿನ ಪೀಳಿಗೆಯವರಿಗೆ ಅವು ಸತ್ಯಸಂಗತಿಗಳಾಗಿದ್ದವು. ಸುದೈವದಿಂದಲೋ ಅಥವಾ ದುರ್ದೈವದಿಂದಲೋ ಶ್ರೀ ಬೇಂದ್ರೆ ಅವರಿಗೆ ಇದರ ಪ್ರತ್ಯಕ್ಷ ಪರಿಣಾಮವನ್ನು ಅನುಭೋಗಿಸುವ ಶಿಕ್ಷೆಯು ತಪ್ಪಲಿಲ್ಲವೆಂದು ನಾನು ಕೇಳಿದ್ದೇನೆ. ಅದನ್ನವರು ತಮ್ಮ “ ಸಾಯೋಆಟ ”ದಲ್ಲಿ ಹಾಗೂ ಈ ಸಂಕಲನದಲ್ಲಿ ಬರದೆ ಇದ್ದ “ ಜಾತ್ರೆ ” ಎಂಬ ಏಕಾಂಕದಲ್ಲಿ ಸೂಕ್ಷ್ಮವಾಗಿ ರೇಖಿಸಿದ್ದಾರೆ.

ಈ ಹುಚ್ಚಾಟಗಳಲ್ಲಿ ಸಮಾಜದ ಟೀಕೆ ಇದೆ. ಸಮಾಜದಲ್ಲಿಯ ವ್ಯಂಗ್ಯವನ್ನು ಕಂಡು ನಕ್ಕು ನಗಿಸುವ ತಿಳಿಯಾದ ಹಾಸ್ಯವಿದೆ. ಆದರೆ ಆ ಹಾಸ್ಯ ಸರ್ವ ಸಾಮಾನ್ಯವಾಗಿದೆ. ಅದರಲ್ಲಿ ಯಾರನ್ನೋ ಯಾವುದನ್ನೋ ಗುರಿಯಾಗಿ ಮಾಡಿಕೊಂಡು ಬಾಣವೆಸೆದು ಆಘಾತಿಸುವ ಉದ್ದೇಶವಿಲ್ಲ. ಸಮಾಜವನ್ನು ಟೀಕಿಸಿದರೂ ಅದರಲ್ಲಿಯ ಟೀಕೆ, ವ್ಯಕ್ತಿ, ಸಮಾಜಗತವಾಗಿಲ್ಲ. ಸಾಮಾನ್ಯವಾಗಿದೆ. ಇದೇ ಇಲ್ಲಿಯ ಹುಚ್ಚಾಟಗಳಲ್ಲಿಯ ಮುಖ್ಯ-ಬಹುಮೂಲ್ಯವಾದ ಆಶಯ.

ಕೆಲವೊಂದು ಅರ್ಥದಿಂದ ಈ ಹುಚ್ಚಾಟಗಳು ಗತಕಾಲಕ್ಕೆ ಸೇರಿ ಹೋದವುಗಳೆಂದು ಆಧುನಿಕರಿಗೆ ತೋರಬಹುದು. ಆದರೆ ಇವುಗಳ ಅಂತರಂಗದಲ್ಲಿ ಅಡಗಿದ ತತ್ವ ಎಂದಿಗೂ ನವೋನವ. ಆ ತತ್ವಕ್ಕೆ ಕಾಲದ ಪರಿಮಿತಿಯನ್ನು ಹಾಕಬರದು. ವ್ಯಕ್ತಿಗಳು ತಮ್ಮ ಕಾಲದಲ್ಲಿ ರೂಢಿಯಲ್ಲಿದ್ದ ವೇಷ-ಭೂಷಣ, ಆಕೃತಿ-ಆಕಾರಗಳಲ್ಲಿ ಕಂಡು ಬಂದರೂ ಅವರ ಮಾನಸಿಕ ಪ್ರವೃತ್ತಿ ಎಂದಿಗೂ ಚಿರಂತನ.

‘ದೆವ್ವದ ಮನೆ’ಯಲ್ಲಿ ಬರುವ ಅತ್ತೆ-ಸೊಸೆಯರ ಕುರುಕ್ಷೇತ್ರ ಇಂದಿನ ಬದಲಾದ ಸಮಾಜದಲ್ಲಿ ಇದೇ ರೀತಿಯಲ್ಲಿ ನೋಡಸಿಗದಿದ್ದರೂ, ಇನ್ನೊಂದು ಬಗೆಯಲ್ಲಿ ಅದರ ದರ್ಶನವು ಘಟಿಸಬಹುದು. ಮಾತು ಕಾಲಕ್ಕೆ ಬದಲಾದ ಪರಿಸ್ಥಿತಿಯನ್ನು ಅವಲಂಬಿಸಬಹುದು. ಸತ್ಯವಂತ ರಾಯನಂತಹ ಕೈಸೋತ ನಿರ್ಜೀವ ವ್ಯಕ್ತಿಗಳಿಗೆ ಬರವೇ ಇಲ್ಲ. ಅವನಂಥವರ ತಳಿ, ಕಾಲಕ್ಕೆ ಅನುಗುಣವಾಗಿ, ವೇಷ-ಭೂಷಣವನ್ನು ಬದಲಿಸುತ್ತಿದೆ— ಅಷ್ಟೇ ಮಾತ್ರ. ಆದರೆ ಮೂಲ ಸತ್ವ-ಮೂಲ ತತ್ತ್ವ, ಸನಾತನವಾಗಿರುತ್ತದೆ. ಚಿರಂತನವೂ ಆಗಿದೆಯೋ ಏನೋ ?

‘ದೆವ್ವನ ಮನೆ’ಯಲ್ಲಿ— ದೆವ್ವವನ್ನು ಬಿಡಿಸಲಿಕ್ಕೆ ಬರುವ ನಾನಾ ಕಾಯಕದವರ ಸಾಲಿಗೆ ಸಾಲೇ ಹತ್ತಿರುತ್ತದೆ. ಅವರ ವೃತ್ತಿ-ವ್ಯವಸಾಯದಲ್ಲಿನ ಹಿಕ-ಮತ್ತು, ಮಾತಿನ ರೀತಿ ಇವೆಲ್ಲವನ್ನೂ ನಾಟಕಕಾರರು ಬಹಳೇ ಸೂಕ್ಷ್ಮವಾಗಿ, ಬಹಳೇ ಜಾಣತನದಿಂದ ಪರಿಶೀಲಿಸಿ ರೇಖಿಸಿದ್ದಾರೆ. ಪುಟ ೧೭ರಲ್ಲಿ ಬರುವ ದಾಸಯ್ಯನ ಮಾತುಗಳನ್ನು ನಿರೀಕ್ಷಿಸಿದರೆ ಈ ಸತ್ಯವು ಹೊಳೆಯಬಹುದು. ದಾಸಯ್ಯನು ಆಡುವ ಮಾತಿನ ರೀತಿಯೇ ಇದಕ್ಕೆ ನಿದರ್ಶನ. ಈ ಮಂಘ್ರೇಶ್ವರನ ಇಡಿಯ ಪ್ರವೇಶವೇ ಶ್ರೀ ಬೇಂದ್ರೆ ಅವರ ನಿರೀಕ್ಷಣಸಾಮರ್ಥ್ಯಕ್ಕೆ, ಶಬ್ದ-ಮಾತುಗಳ ಪ್ರಯೋಗಕ್ಕೆ ಕಳಸವಿಟ್ಟಂತೆ ಇದೆ. ಇದೇ ರೀತಿಯಾಗಿ ‘ಸಾಯೋ ಆಟ’ದಲ್ಲಿ ದೊರೆಗಳು ಸೂಳೆಯ ವ್ಯಾಖ್ಯೆಯನ್ನು ಕುಲೀನಳೆಂದು ಮಾಡುವಾಗ—“ಕುಲವಂತರ ಕೂಡ ಅವಳ ಸಂಬಂಧ ಬರುವದರಿಂದ ಅವಳು ಕುಲೀನಳೆಂದೇ ತಿಳಿಯಬೇಕು.” —ಎಂದು ವ್ಯಾಖ್ಯಾನಿಸಿದ್ದನ್ನು ನೋಡಿದರೆ ಈ ನಿರೀಕ್ಷಣಶಕ್ತಿಯ ಸಾಮರ್ಥ್ಯವು ವಿದಿತವಾದೀತು. (ಪುಟ ೬೬) ಈ ಹುಚ್ಚಾಟಗಳಲ್ಲಿ ಜೀವಂತ ಸಂಭಾಷಣೆಗೆ ಪ್ರತೀಕವಾಗಿ ತೋರುವ ಹುಚ್ಚಾಟವೆಂದರೆ, ‘ಸಾಯೋ ಆಟ’ ನಂತರ ‘ದೆವ್ವದ ಮನೆ’. ಶ್ರೀ ಬೇಂದ್ರೆ ಅವರ ನಾಟಕದಲ್ಲಿ, ಪಾತ್ರಗಳ ಮುಖಾಂತರವಾಗಿ ನಾಟಕಕಾರರೇ ಮಾತನಾಡುವುದಿಲ್ಲ. ಆ ಪಾತ್ರಗಳು ತಮ್ಮ ತಮ್ಮ ಮಾತುಗಳನ್ನು ತಮ್ಮ ತಮ್ಮ ಮುಖದಿಂದ ಸಹಜವಾಗಿ ಆಡುತ್ತಿವೆ. ಅವು ಆಡುವ ಮಾತುಗಳು ಹುಚ್ಚು ಹುಚ್ಚಾಗಿಯೋ, ಅನರ್ಥಕಾರಿಯಾಗಿಯೋ ಹೇಗೋ ಇರಬಹುದು. ಆದರೆ ಅದರಿಂದ ಸಹಜವಾದ ಹಾಸ್ಯವು ನಾಟಕ ನೋಡುವವರ, ನಾಟಕವನ್ನು ಓದುವವರ ಹೃದಯವನ್ನು ತಟ್ಟಿ ಹಾಸ್ಯವನ್ನು ಚಿಮ್ಮಿಸುವುದು ಮಾತ್ರ ಸತ್ಯ. ಇಲ್ಲಿ ಶಾಬ್ದಿಕ ಸರ್ಕಸ್ಸನ್ನು, ಹಾಸ್ಯವನ್ನು ನಿರ್ಮಾಣ ಮಾಡಿಸಬೇಕೆಂಬ ಜಿದ್ದಿನಿಂದ ಮಾತುಗಳನ್ನು ಆಡಿಸಬೇಕೆಂಬ ಕಿಂಚಿತ್ತಾದರೂ ಹವ್ಯಾಸವು ಲೇಖಕರಿಗೆ ಇರುವುದಿಲ್ಲ. ಅದು ಸಹಜವಾಗಿಯೇ ಆ ಆ ಪಾತ್ರಗಳ ಬಾಯಿಯಿಂದ ತಂತಾನೇ ಹೊರಹೊಮ್ಮಿ ಬರುತ್ತದೆ.

ಕನ್ನಡದಲ್ಲಿ ನಾಟಕಗಳೇ ಕಡಿಮೆ. ಅದರಲ್ಲಿಯೂ ಈ ಹುಚ್ಚಾಟಗಳ ಮಾದರಿಯ ಫಾರ್ಸುಗಳಂತೂ ತೀರ ವಿರಳ. ಮೇಲಾಗಿ ಒಂದು ಭಾಗದವರ

ಭಾಷೆಯು ಇನ್ನೊಂದು ಭಾಗದವರಿಗೆ ಅರ್ಥವಾಗದೆ ಇರುವ ತೊಂದರೆಯ ತಲೆಭಾರ ಬೇರೆ. ಏಕಾಂಕಗಳಿಗೆ ಎತ್ತಿದ ಕೈಯಾದ ದಿವಂಗತ ಕೈಲಾಸಂ ಅವರ ಏಕಾಂಕ ಗಳು ಉತ್ತರ ಕರ್ನಾಟಕದವರಿಗೆ ಎಷ್ಟು ಬಗೆಯಾಗಿ ಅರ್ಥವಾದೀತೋ ಹೇಳ ಬರದು. ಅವು ಇಲ್ಲಿ ಪ್ರಚಾರವಾದದ್ದು, ಸ್ವಂತ ಕೈಲಾಸಂ ಅವರು ಈ ಭಾಗದ ಬಹಳಷ್ಟು ಕಡೆಯಲ್ಲಿ ಸಂಚರಿಸಿ, ತಾವೇ ಆಡಿ ತೋರಿಸಿದರೆಂದು ಮಾತ್ರ. ಆದರೆ ಈ ಏಕಾಂಕಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಅವುಗಳಲ್ಲಿ ತಂತಾನೇ ಒಗು ಮಿಗುವ ಹಾಸ್ಯ ಬಹಳ ಕಡಿಮೆ. ಕೈಲಾಸಂ ಅವರ ಮುಖ, ಆಕೃತಿ ನಟನಾಸಾ ಮರ್ಥ್ಯವನ್ನು ನೋಡಿ ಬಹಳ ಜನ ನಕ್ಕಿರಬಹುದು. ಆದರೆ ಅದರಲ್ಲಿಯ ಸತ್ವವನ್ನು —ಹಾಸ್ಯವನ್ನು ಅರಿತು ನಕ್ಕವರು ತೀರ ಅಲ್ಪ ಜನ.

ಇವರೆಲ್ಲರಿಗಿಂತಲೂ ಹಳೆಯ ತಲೆಮಾರಿನವರಾದ ದಿವಂಗತ ಕೆರೂರ ವಾಸು- ದೇವಾಚಾರ್ಯರ ಸವ್ಯಸಾಚೀ ಪ್ರತಿಭೆಗೆ ಪ್ರತೀಕವಾಗಿ ಅವರ ನಾಟಕಗಳಲ್ಲಿ ಒಗು ಮಿಗುವ ಹಾಸ್ಯವು ತನ್ನದೇ ಕಂಪನ್ನು ಒಳಗೊಂಡಿದ್ದಾಗಿದೆ. ಅವರ ಸಿರೀಕ್ಷಣ ಶಕ್ತಿ, ಶಬ್ದ, ಮಾತುಗಳನ್ನು ಅಳವಡಿಸಿಕೊಳ್ಳುವ ಬಗೆ, ಶ್ರೀ ಬೇಂದ್ರೆಯವರಂತೆಯೇ ಇದ್ದರೂ ಅದಕ್ಕೆ ವಾಸುದೇವಾಚಾರ್ಯರ ಕಾಲದ ಜನರು, ಸಾಹಿತಿಗಳು ಜಾತೀಯತೆಯ ಬಣ್ಣವನ್ನು ಬಳಿಯಲು ಯತ್ನಿಸಿದರು. ವಾಸುದೇವಾಚಾರ್ಯರು ಸಾಹಿತಿಗಳಾದಂತೆ, ಪ್ರಸಿದ್ಧ ಪತ್ರಿಕೋದ್ಯಮಿಗಳೂ ಆಗಿದ್ದರು. ತಮ್ಮ ಕಾಲದ ಸಮಾಜವನ್ನು ಚಿತ್ರಿಸುವದರಲ್ಲಿ ಅವರಿಂದ ಇಂಥ ಪ್ರಯೋಗಗಳು ಆಗಿದ್ದರೂ ಆಗಿರಬಹುದು. ಇದು ಆ ಸಮಾಜದ ದೃಷ್ಟಿದೋಷವೂ ಇರಬಹುದು ಅಥವಾ ಅಲ್ಪ ತಿಳುವಳಿಕೆಯ ಕಾರಣವೂ ಆಗಿರಬಹುದು. ಆದರೆ ಇದನ್ನೇ ಬಂಡವಲವನ್ನಾಗಿ ಮಾಡಿಕೊಂಡು ಲೇಖಕನನ್ನು ಈ ಪಾಪಕ್ಕೆ ಗುರಿಮಾಡುವುದು ಶುದ್ಧ ಅನ್ಯಾಯ. ವಾಸುದೇವಾ- ಚಾರ್ಯರ ನಾಟಕಗಳು ಇಂದಿಗೂ ಉಳಿದು ಬಂದಿವೆ; ಆದರೆ ಜಾತೀಯ ವಾದಿ ಗಳು ಎಬ್ಬಿಸಿದ ಹುಯಿಲು ಮಾತ್ರ ಇತ್ತೋ ಇಲ್ಲವೋ ಎನ್ನುವಂತೆ ಆಗಿಬಿಟ್ಟದೆ.

ಶ್ರೀ ವಾಸುದೇವಾಚಾರ್ಯರ ಹಾಸ್ಯದ ರೀತಿಯೂ ಶ್ರೀ ಬೇಂದ್ರೆ ಅವರ ಹಾಸ್ಯದ ರೀತಿಯೂ ಬೇರೆ ಬೇರೆ ವಿಧವಾದರೂ ಅದರ ಮೂಲ ಸ್ಫೂರ್ತಿಸ್ಥಾನವು ಒಂದೇ ಎಂದು ಹೇಳಬಹುದು. ಇಬ್ಬರ ನಾಟಕಗಳಲ್ಲಿಯೂ ಬರುವ ಮಾತಿನ ಓಘ—ಚಕಮಕಿ ಇವನ್ನು ಮನದಂದರೆ ಇಬ್ಬರಿಗೂ ಮಹಾರಾಷ್ಟ್ರದ ರಾಮ ಗಣೇಶ ಗಡಕರಿ ಅವರು ಸ್ಫೂರ್ತಿಸ್ಥಾನವಾಗಿರಬಹುದೆಂದು ನನ್ನ ಕಾಯಾಸ. ಶ್ರೀ ಬೇಂದ್ರೆ ಅವರು ಗಡಕರಿ ಅವರ ಸಾಹಿತ್ಯಸಂಪತ್ತನ್ನು ಸವಿದು ಆತ್ಮಸಾತ್ತಾಗಿ ಮಾಡಿಕೊಂಡದ್ದಕ್ಕೆ ಸಾಕ್ಷಿಯಾಗಿ ಅವರ ನಗೆಬರೆಹ-ನಾಟಕಗಳೇ ನಿದರ್ಶನ. ಅಲ್ಲಿ ‘ಮಕ್ಕೀಕಾ ಮಕ್ಕಿ’ ಪ್ರಯೋಗವಿಲ್ಲ ನಿಜ. ಆದರೆ ಗಡಕರಿಯವರ ಆ ಪ್ರತಿಭೆಯ ಪ್ರಭಾವ ಬೇಂದ್ರೆ ಅವರ ಬರೆಹಗಳ ಮೇಲೆ ಆಗಿರುವದೆಂಬುದು ಮಾತ್ರ ಸತ್ಯ. ಶ್ರೀ ಬೇಂದ್ರೆ ಅವರಿಗೆ ಇನ್ನೊಬ್ಬರ ಪ್ರತಿಭೆಯ ಬೆಳಕಿನಲ್ಲಿ ನಡೆಯುವುದು ಅವರ ಜಾಯ

ಮಾನಕ್ಕೇ ಹೊರತಾದ ವಿಷಯ. ಮೂಲದ ಸವಿಯನ್ನು ಆಸ್ವಾದಿಸುತ್ತಿರು ವಾಗಲೇ ಅವರು ಸ್ವಂತದ ಮೂರ್ತಿಯನ್ನು ಆಕೃತಿಯನ್ನು ಸಿದ್ಧಪಡಿಸಿಕೊಳ್ಳು ತ್ತಾರೆ. ಮೂಲದಿಂದ ತಟ್ಟನೆ ಹೊರಬಿದ್ದು ತಮ್ಮದೇ ಆದ ಮಾರ್ಗವನ್ನು ನಿರ್ಮಿಸಿ ಕೊಂಡುಬಿಡುತ್ತಾರೆ. ಹೀಗೆ ನಿರ್ಮಿತವಾದ ಮಾರ್ಗ ಅವರದೇ ಸೊತ್ತಾಗಿ ಬಿಡು ತ್ತಿದೆ. ಅದು ಉಳಿದವರಿಗೆ 'ರಾಜಮಾರ್ಗ'ವಾಗುವದಿಲ್ಲ. ಆ ದಾರಿಯಿಂದ ಪ್ರಯಾಣಿಸುವುದೂ ದುರ್ಗಮವಾಗಿ ಬಿಡುತ್ತದೆ. ಈ ಹುಚ್ಚಾಟಗಳ ಮಾದರಿಯ ದೃಶ್ಯಗಳು ಅಥವಾ ಅಂಥ ಪ್ರಯೋಗಗಳು, ಕನ್ನಡದಲ್ಲಿ ಇಂದಿನ ವರೆಗೂ ಬಾರ ದಿರುವುದಕ್ಕೆ ಈ ದುರ್ಗಮ ವೀಥಿ ಪ್ರಯಾಣ ಕಠಿಣ ಅಸಾಧ್ಯವೆಂಬುವ ಮಾತಿಗೆ ನಿದರ್ಶನ. ಶ್ರೀ ಬೇಂದ್ರೆ ಅವರ ಕಾವ್ಯರೀತಿ ಯಾವ ಬಗೆಯಾಗಿ ಅನುಕರಣೆಗೆ ಅಸಾಧ್ಯವೋ ಅದೇ ರೀತಿಯಾಗಿ ಅವರ ನಾಟ್ಯಪಥವೂ ದುರ್ಗಮ ಅಸಾಧ್ಯವೆನಿಸಿ ಬಿಟ್ಟಿದೆ.

ಹುಚ್ಚಾಟಗಳ ಸಂಕಲನದಲ್ಲಿ ಯಾವುದು ಅತಿ ಶ್ರೇಷ್ಠ, ಯಾವುದು ತದನಂತ ರದ್ದು ಎಂದು ಹೆಸರಿಸುವದು ತುಸು ಬಿಗಿಯಾದ ಸಮಸ್ಯೆ! ಪ್ರತಿಯೊಂದು ಹುಚ್ಚಾಟ ತನ್ನದೇ ಆದ ರೀತಿಯಿಂದ ತಳತಳಿಸಿ ಮುಲಮುಲಿಸಿ ನಿಂತಿದೆ. ತನ್ನದೇ ಆದ ಹಾಸ್ಯ ಮೃದುಗಂಧದಿಂದ ಸುವಾಸನೆಯುಳ್ಳದ್ದಾಗಿದೆ. "ಸಾಯೋ ಆಟ"ದಲ್ಲಿ ರಾಜ-ಮಹಾರಾಜರ, ಅವರ ಪರಿವಾರದವರ ಪರಿಚಯವಿಲ್ಲದ ಜನತೆಗೆ, ಅದು ಒಂದು ಬಗೆಯಿಂದ ವಿಚಿತ್ರವಾಗಿ-ವಿಕಾರವಾಗಿ ಕಾಣಬಹುದು. ಇಂಥ ರಾಜ-ಮಂತ್ರಿಗಳೂ ಇದ್ದರೆ? ಎನ್ನುವ ಶಂಕೆಯು ಓದುಗ-ನೋಡುಗನಲ್ಲಿ ಉದ್ಭವಿಸುವ ಸಂಭವವೂ ಇದೆ. ಬದಲಾದ ಸಾಮಾಜಿಕ ಪದ್ಧತಿ — ಪರಿಸ್ಥಿತಿಯಿಂದ "ದೆವ್ವದ ಮನೆ"ಯ ಕಥಾನಕವೂ ಹಾಸ್ಯಾಸ್ಪದವೆನಿಸುವ ಸಂಭವವಿದೆ. "ಹಳೆಯ ಗೆಣೆಯರು" ಹಾಗೂ "ಗೋಲ್" ಸಾಮಾನ್ಯರ ತಲೆಗೆ ಹತ್ತದೆ ಹೋಗಬಹುದು. ಆದರೆ ಕಾಲ, ದೇಶ, ಪರಿಸ್ಥಿತಿ ಬದಲಾದರೂ "ತಿರುಕರ ಪಿಡುಗಿ"ನ ಸಮಸ್ಯೆ ಇನ್ನೂ ಆಳವಾಗುತ್ತಲಿರುವಾಗ, ಹೊಸ ತಳಿಯನ್ನು ನಿರ್ಮಿಸುತ್ತ ನಡೆದಿರುವಾಗ, ಏನೇ ಬದಲಾವಣೆಯಾದರೂ, ತನ್ನ ಬೆಳವಣಿಗೆಗೆ ಮಾತ್ರ ವ್ಯತ್ಯಯವಿಲ್ಲವೆಂದು ದುಷ್ಟ ಧೈರ್ಯದಿಂದ ಸಾರುತ್ತ ಇಂದಿನ ಮಿತಿಗೂ ನಿಂತಿದೆ. ಮುಂದೆ ಎಷ್ಟು ಕಾಲ ನಿಲ್ಲ ಬಹುದೋ ಹೇಳಬರದು. ಆ ರೀತಿಯಿಂದ ನೋಡಿದರೆ "ತಿರುಕರ ಪಿಡುಗು" ನಾಟ್ಯತಂತ್ರದ ಹೊಸತನದಿಂದ ಏಕಪಾತ್ರಾಭಿನಯದ ರೀತಿಯಿಂದ ಸರ್ವ ಶ್ರೇಷ್ಠ ಕೃತಿಯೆಂದು ಹೇಳಬಹುದು. "ಸಾಯೋ ಆಟ"ದಲ್ಲಿಯ ವ್ಯಕ್ತಿಗಳ ವೈವಿಧ್ಯತೆ ಇದರಲ್ಲಿ ಇಲ್ಲವೆನ್ನುವದು ನಿಜವಾದರೂ, ಒಬ್ಬನೇ ವ್ಯಕ್ತಿ, ವಿವಿಧ ತಿರುಕರಪಾಂಗನ್ನು ಚಿತ್ರಿಸುವ ರೀತಿಯಲ್ಲಿ ವಿವಿಧಾಕಾರ ತಾಳಿ ನಿಲ್ಲುವಂತೆ ಕಾಣು ತ್ತಾನೆ. ಅವನು ತಿರುಕರನ್ನು ಟೀಕಿಸಿ ಹಾಸ್ಯ ಮಾಡುವ ಬಗೆ ಮನೋಜ್ಞ

ವಾಗಿದೆ, ಚಿತ್ತಾಕರ್ಷಕವಾಗಿದೆ. ನಾಟಕಕಾರರ ನಿರೀಕ್ಷಣಶಕ್ತಿಗೆ ಅಪ್ರತಿಮ ದ್ಯೋತಕವಾಗಿದೆ.

ಆದರೆ "ಸಾಯೋ ಆಟ"ದಲ್ಲಿಯ ಮಾತಿನ ಕೌಶಲ್ಯ, ಅದರ ಬೆಡಗು, ಯಾವ ಕೃತ್ರಿಮತೆಯೂ ಇಲ್ಲದೆ ಸರಾಗವಾಗಿ ತೇಲಿ ಬರುವ ಸಂಭಾಷಣೆಯ ರೀತಿ, ಕನ್ನಡ ನಾಟ್ಯಪ್ರಪಂಚಕ್ಕೇ ತೀರ ಹೊಸದು. ಈ ರೀತಿ 'ಸಾಯೋ ಆಟ'ಕ್ಕೆ ನಾಂದಿಯಾದಂತೆ ನಮ್ಮ ನಾಟಕ ಪ್ರಪಂಚಕ್ಕೇ ಭರತವಾಕ್ಯವೂ ಆಯಿತೇನೋ ? 'ಸಾಯೋ ಆಟ'ದ ನಂತರ ಬಂದ ಕನ್ನಡ ನಾಟ್ಯಸಾಹಿತ್ಯವನ್ನು ನೋಡಿದರೆ ಈ ಬಗೆಯ ನೈಜ-ಸಹಜ ಹಾಸ್ಯ ಇಂದಿನ ಮಿತಿಗೂ ಬಂದಿಲ್ಲವೆಂದೇ ಧೈರ್ಯವಾಗಿ ಹೇಳಬಹುದು. ಈ ನಾಟಕದಲ್ಲಿಯ ಕೆಲವು ಮಾತುಗಳನ್ನು ಎತ್ತಿ ತೋರಿಸುವುದರಿಂದ ನಾಟಕಕಾರರ ಮಾತಿನ ಚಮುಕು ತಿಳಿಯಬಹುದೆಂದು ಬಗೆದು ಈ ಮಾತುಗಳನ್ನು ಉದ್ಧರಿಸುತ್ತೇನೆ.

ಪುಟ ೫೪ ಕಳ್ಳಿ :— ಇನ್ನೊಂದೆರಡು ಗಳಿಗೆ ತಡಮಾಡಿ ಸತ್ತಿದ್ದರೆ ನಿನ್ನದೇನು ಪ್ರಾಣ ಹೋಗುತ್ತಿತ್ತೇ — ಅಯ್ಯೋ ಸತ್ತವರ ಮುಂದೆ ಅತ್ತರಾದರೂ ಆಗುವುದೇನು ?

\+ + + + +

ಪುಟ ೫೫ ಕಳ್ಳಿ :— ಅಪ್ಪಾ, ಅದೇನೋ ನನಗೆ ತಿಳಿಯದು. ಈ ಜಗತ್ತನ್ನ ಬಿಟ್ಟು ಹೋದನು. ಸ್ವರ್ಗಕ್ಕೆ ಹೋದನೋ ನರಕಕ್ಕೆ ಹೋದನೋ ಗೊತ್ತಿಲ್ಲ.

\+ + + + +

ಪುಟ ೫೮ ಕಳ್ಳಿ :— ಧರ್ಮರಾಜರು ಹೀಗೆ ಅನ್ಯಾಯ ಮಾಡಬಾರದು. ದೇಹವೇ ಸತ್ತು, ಜೀವವೇ ಉಳಿದಿದ್ದರೆ ಮಣ್ಣು ದೇಹದ ಕೊಲೆಗಾಗಿ, ಮಣ್ಣು ಗೋಡೆಗೆ ಶಿಕ್ಷೆ ಮಾಡಬಹುದಾಗಿತ್ತು. ದೇಹವು ಉಳಿದಿದೆ. ಪ್ರಾಣ ಮಾತ್ರ ಹೋಗಿದೆ. ಆದಕಾರಣ ಆ ಪ್ರಾಣಕ್ಕಾಗಿ ಒಂದು ಪ್ರಾಣವು ಹೋಗುವಂತೆ ದಯಾಳುಗಳಾದ ದೊರೆಗಳು ಅಪ್ಪಣೆ ಮಾಡಬೇಕು.

\+ + + + +

ಪುಟ ೬೨ ದೊರೆ :— ಎಲ್ಲವೂ ವಿಚಿತ್ರ. ಕರೆದು ಹೆಣ್ಣು ಕೊಟ್ಟರೆ ಇವನಿಗೆ ಮುಲರೋಗ ಬಂತೇ ? ಇನ್ನು ಸಾಮೋಪಾಯ ಬೇಡ. ಇಂಥವರಿಗೆ ದಂಡವೇ ಬೇಕು. ದಿವಾಣರೇ ನೋಡುತ್ತೀರೇನು ?

ದಿವಾಣ :— ಕೊತವಾಲ ! ನೋಡುತ್ತೀಯೇನು ?

ಕೊತವಾಲ :— ಏನೂ ಇಲ್ಲ ದೇವರೂ ! ಸಾಯುವನೋ ಬದುಕುವನೋ ನೋಡುತ್ತೇನೆ.

ದಿವಾಣ :— ಸಾಯಲಿಕ್ಕೆ ಅವನಿಗೇನಾಗಿದೆ ?

ದೊರೆ :— ಮತ್ತು ರಾಜಾಜ್ಞೆ ಇಲ್ಲದೆ ಯಮನಾಜ್ಞೆಯಾದರೂ ಅವನಿಗೆ ಹೇಗಾದೀತು ? ಪ್ರಜೆಗಳಿಗೆ ರಾಜನೇ ಯಮನು !

ಗೃಹಸ್ಥ :— ಹೌದು ಪ್ರಭುಗಳೇ ! ತಮ್ಮ ಈ ರಾಜ್ಯದಲ್ಲಿ ತಾವೇ ನಮಗೆ ಯಮ. ತಾವೇ ನಮಗೆ ಮೃತ್ಯು. ತಾವೇ ನಮಗೆ ಸಾವು. ಸರ್ವವೂ ತಾವೇ !

ಪುಟ ೬೬ ದೊರೆ :— ದಿವಾಣರೇ ! ಹೊತ್ತೇರಿತು. ಅವಳನ್ನು ಅರಮನೆಗೇ ತರಲು ಹೇಳಿರಿ. ನಮ್ಮ ಮಧ್ಯಾಹ್ನದ ಊಟವಾಗಿ ವಾಮಕುಕ್ಷಿ ಯಾಗಿ ಎದ್ದ ಮೇಲೆ ಅವಳ ನ್ಯಾಯವಿಚಾರಣೆಯಾಗಲಿ; ಅವಳು ವೇಶ್ಯೆಯಿದ್ದರೂ ಕುಲವಂತರ ಕೂಡ ಸಂಬಂಧ ಬರುವದರಿಂದ ಅವಳು ಕುಲೀನಳೆಂದೇ ತಿಳಿಯಬೇಕು. ಏನಾ ದರೂ ಹೆಂಗಸೇ ! ನಾಲ್ಕು ಜನರು ಕೂಡಿದಲ್ಲಿ ಅವಳ ವಿಚಾರಣೆಯು ಬೇಡ.

ಇದೇ ನಾಟಕದ ಪುಟ ೮೨ರಲ್ಲಿ ನಾಟಕಕಾರರು ಟ್ರ್ಯಾಜಿಡಿಯ ಬಗ್ಗೆ ಮಾಡಿದ ವ್ಯಾಖ್ಯೆಯು ಮೇಲುನೋಟಕ್ಕೆ ಹಾಸ್ಯಕಾರಕವಾಗಿ ತೋರಿದರೂ ಅದರಲ್ಲಿಯ ತತ್ತ್ವವು ಮಹತ್ತರವಾಗಿದೆ. ನಾಟಕದ ತುಂಬೆಲ್ಲ ಇದೇ ಬಗೆಯ ಜಾಣ್ನುಡಿ, ಹಾಸ್ಯದೊಡನೆ ಹಾಸು-ಹೊಕ್ಕಾಗಿ ಹೆಣೆದುಕೊಂಡು ಬಂದಿದೆ. ಇಲ್ಲಿ ಯಾರನ್ನೂ ಟೀಕಿಸುವ, ಯಾರನ್ನೂ ಚುಚ್ಚಿ ನೋಯಿಸುವ ಹವ್ಯಾಸವಿಲ್ಲ. ಮಾತಿನಲ್ಲಿಯ ವ್ಯಂಗ್ಯವನ್ನು ಅರಿತವರಿಗೇ ಅದರ ಆಸ್ವಾದ ಸಿಕ್ಕುವದು. ಕವಿಯ ರಚನೆಯೇ ಡೊಂಕಾಗಿರುವಾಗ ಅದರೊಳಗೆ ಸೇರಿ ಬುದ್ಧಿಯನ್ನು ಜಾಗೃತಗೊಳಿಸುವ ಹಾಸ್ಯವೂ ವ್ಯಂಗ್ಯವಾಗಿರಲಿಕ್ಕೇ ಬೇಕು. ನಾಟಕಕಾರರಲ್ಲಿ ಇಂಥ ಪ್ರಕೃತಿಧರ್ಮವುಳ್ಳವರಿಗೆ ಸರಿಯಾದ ಔಷಧವಿದೆ. ಅದನ್ನವರು ವ್ಯಕ್ತಿಗಳ ಪ್ರಕೃತಿಧರ್ಮವನ್ನು ನೋಡಿ ಸರಿಯಾಗಿಯೇ ಉಪಯೋಗಿಸಿದ್ದಾರೆ.

'ದೆವ್ವದ ಮನೆ'ಯಲ್ಲಿಯ ಸೀತವ್ವ-ಸಾವಿತ್ರಿ, ಸತ್ಯವಂತರಾಯರು, 'ಹಳಿಯುಗೆಣೆಯ'ದಲ್ಲಿಯ ಸಬ್-ಜಜ್ಜ, ಪಿಂಚಣಿದಾರ, ಫೌಜದಾರರು, 'ಸಾಯೋ ಆಟ'ದಲ್ಲಿಯ ರಾಜ-ದಿವಾಣರು, ಇವರೆಲ್ಲ ಸಾರ್ವಕಾಲಿಕ ವ್ಯಕ್ತಿ ಗಳಲ್ಲ, ಇವರು, "ಥಾ, ಏಕ ಜಮಾನಾ"ಕ್ಕೆ ಸೇರಿದ, ಗತಕಾಲದ ವ್ಯಕ್ತಿ

ಗಳು. ಇಂಥವರು ಜೀವಂತ ವ್ಯಕ್ತಿಗಳಾಗಿ, ಸಮಾಜದಲ್ಲಿ ಅಲೆಯುತ್ತಿದ್ದದ್ದನ್ನು ನೋಡಿದ, ಇವರ ಹುಚ್ಚುತನವನ್ನು ಅನುಭೋಗಿಸಿದ ಸಮಾಜವು ಇಂದು ಕ್ವಚಿತ್ತಾಗಿ ನೋಡಸಿಗಬಹುದು. ಈ ಪಾತ್ರಗಳು ನಿತ್ಯ ಜೀವನದಲ್ಲಿ ಅಂದು ನೋಡಸಿಗುತ್ತಿದ್ದರೂ, ಅವರು ಸಾಮಾನ್ಯ ವ್ಯಕ್ತಿಗಳಂತೆ ಸರ್ವರ ದೃಷ್ಟಿಪಥದಲ್ಲಿ ಬರುತ್ತಿರಲಿಲ್ಲ. ತಮ್ಮದೇ ಆದ ಒಂದು ಪರಿಸರದಲ್ಲಿ ಗಾಣದೆತ್ತಿನಂತೆ ಸುತ್ತುತ್ತಿದ್ದರು. ಇಂಥವರನ್ನು ನಾಟಕಕಾರರು ನೋಡಿದ್ದರು. ಅವರನ್ನು ಚಿತ್ರಿಸಿದರು. ಚಿತ್ರಿಸುವಾಗ ಕುಂಚ-ಬಣ್ಣಗಳನ್ನು ಉಪಯೋಗಿಸದೆ, ಛಾಯಾಗ್ರಾಹಕ ಯಂತ್ರವನ್ನು ಉಪಯೋಗಿಸಿ, ಅವರ ಯಥಾವತ್ತಾದ ಪ್ರತಿಕೃತಿಗಳನ್ನು ಮೂಡಿಸಿ ತೋರಿಸಿದರು. ಒಂದು ಕಾಲದಲ್ಲಿ ಆಗಿ ಹೋದ ಜನರನ್ನು ಇಂದಿನವರು ಸರಿಯಾಗಿ ಅರ್ಥ ಮಾಡಿಕೊಂಡಾರೆಂದು ಭಾವಿಸುವದಂತೂ ಅಶಕ್ಯ. ಅವರನ್ನು ಅರ್ಥಮಾಡಿಕೊಳ್ಳಲು ಭಾವನೆಯ— ಕಲ್ಪನೆಯ ಪಕ್ಷಿಯನ್ನು ಗರಿಗೆದರಿ ಹಾರಿಬಿಟ್ಟು ಗತ ಕಾಲದ ಪರಿಸರದಲ್ಲಿ ಓಲಾಡಿ ಬರುವ ಸಾಮರ್ಥ್ಯ ಕೆಲವರಿಗೇ ಇರಬಹುದಾಗಿದೆ. ಅಂಥ ಭಾಗ್ಯವಂತರಿಗೆ ಈ ಹುಚ್ಚಾಟಗಳು ಅರ್ಥವಾದಾವು. ಅವುಗಳಲ್ಲಿಯ ಹಾಸ್ಯ ರಸ ತಿಳಿದೀತು. ಉಳಿದವರಿಗೆ ಅದರಲ್ಲಿಯ ಹಾಸ್ಯದಿಂದ ಮಾತ್ರ ನೀರಡಿಕೆ ಹಿಂಗೀತು. ಇದನ್ನು ಅರಿತೇ ಮಹಾನಾಟಕಕಾರ ಭವಭೂತಿಯು "ಉತ್ಪತ್ಸ್ಯತೇಸ್ತಿ ಮಮಕೋಪಿ ಸಮಾನ ಧರ್ಮಾ ಕಾಲೋಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ" ಎಂದು ಭವಿಷ್ಯವಾಣಿಯನ್ನು ಸಾರಿದ್ದು ಇದೇ ಕಾರಣಕ್ಕಾಗಿಯೇ ಇರಬೇಕು. ಶ್ರೀ ಬೇಂದ್ರೆ ಲಿಖಿತ ಸರ್ವ ಸಾಹಿತ್ಯವೂ ಭವಿಷ್ಯಗರ್ಭದಲ್ಲಿ ಶೇಖರಿತವಾದ ಅಮೂಲ್ಯ ಖನಿಜ. ಅದನ್ನು ಅಗೆದು ಕೈಗೆ ಹತ್ತಿದಷ್ಟು ಭೋಗಿಸಿದವನೇ ಭಾಗ್ಯವಂತ! ಹುಚ್ಚಾಟಗಳು ಆ ಭೂಗರ್ಭ ಶೇಖರಿತವಾದ ಮಹಾನಿಧಿಗೆ ಸಮಾನವಾದುವು.

'ಹೊಸ ಸಂಸಾರ' ಎನ್ನುವ ನಾಟಕಸಂಗ್ರಹದಲ್ಲಿ ಕವಿ ಶ್ರೀ ಬೇಂದ್ರೆ ಅವರ ನಾಲ್ಕು ನಾಟಕಗಳು ಸಂಗ್ರಹೀತವಾಗಿವೆ. ಇವುಗಳಲ್ಲಿ 'ನಗೆಯ ಹೊಗೆ' ಹಾಗೂ 'ಜಾತ್ರೆ' ಎನ್ನುವವು ಏಕಾಂಕಗಳು. ಉಳಿದ 'ಉದ್ಧಾರ' ಮತ್ತು 'ಹೊಸ ಸಂಸಾರ' ಎನ್ನುವವು ದೀರ್ಘ ನಾಟಕಗಳು. ಯೋಗ್ಯತೆಯ ದೃಷ್ಟಿಯಿಂದ– ಸಂಭಾಷಣೆ–ವಿಷಯವೈಚಿತ್ರ್ಯ – ಹಾಸ್ಯ – ಮಾತಿನ ಜಾಣ್ಮೆ ಇವೆಲ್ಲ ದೃಷ್ಟಿಯಿಂದ ಸಂಗ್ರಹದಲ್ಲಿಯ 'ಜಾತ್ರೆ' ಹಾಗೂ 'ನಗೆಯ ಹೊಗೆ' ಏಕಾಂಕಗಳು ತೀರ ಮೇಲ್ತರಗತಿಯವು. 'ಉದ್ಧಾರ' ಹಾಗೂ 'ಹೊಸ ಸಂಸಾರ'ಗಳ ವಿಷಯವು ಆಧುನಿಕವಾಗಿದ್ದರೂ— 'ನಗೆಯ ಹೊಗೆ' 'ಜಾತ್ರೆ'ಗಳ ಯೋಗ್ಯತೆಗೆ ಸರಿ ತೂಗಲಾರವು.

ಮೂರನೆಯ ನಾಟಕವೇ, 'ಜಾತ್ರೆ' ಎಂಬುದು. ಮೊದಲಿನ ಎರಡು ನಾಟಕಗಳು ದುರಂತದಲ್ಲಿ ಮುಕ್ತಾಯವಾಗಿದ್ದರೆ, ಈ ಜಾತ್ರೆ–ಸಂಸ್ಥಾನಿಕನ ಹುಚ್ಚುತನದ

ದುರಂತವನ್ನು ಸಾರುತ್ತ ನಿಂತುದಕ್ಕೆ ಸಾಕ್ಷಿಯಾಗಿದೆ. ಭಾರತದ ಸ್ವಾತಂತ್ರ್ಯಾ ನಂತರ-ಸಂಸ್ಥಾನಗಳು ಭಾರತದಲ್ಲಿ ವಿಲೀನವಾಗಿ ಹೋದವು. ಅವುಗಳಿಗೆ ತೊಡೆದ ಪ್ರತ್ಯೇಕತೆಯ ಬಣ್ಣವು ಅಳಿಸಿ, ಭಾರತದ ಸಮಗ್ರತೆಯಲ್ಲಿ ಐಕ್ಯವಾದವು. ತತ್ಪೂರ್ವದಲ್ಲಿ ಈ ಸಂಸ್ಥಾನಗಳದೊಂದು ಸರಂಜಾಮುಶಾಹಿಯು ವಿಜೃಂಭಿಸುತ್ತಿದ್ದಿತು. ಭಾರತದಲ್ಲಿಯೇ ಸಾವಿರಾರು ಸಂಸ್ಥಾನಗಳು ಜೀವಹಿಡಿದುಕೊಂಡು ನಿಂತಿದ್ದವು. ಕರ್ನಾಟಕದಲ್ಲಿಯೂ ಸಣ್ಣ-ದೊಡ್ಡ ಹತ್ತಾರು ಸಂಸ್ಥಾನಗಳು ಇದ್ದವು. ಅಂಥದೊಂದು ಚಿಕ್ಕ ಸಂಸ್ಥಾನದ ಅಧಿಪತಿಯ ಹುಚ್ಚು ಹುಚ್ಚು ಕಾರುಭಾರದ ಅಧಿಕಾರ ಪ್ರದರ್ಶನದ ರಸರಮ್ಯ ಚಿತ್ರ ಈ ಜಾತ್ರೆಯಲ್ಲಿ ನವೀನವವಾಗಿ ಪಲ್ಲವಿಸಿ ನಿಂತಿದೆ.

‘ಜಾತ್ರೆ’ಯ ಕತೆ ತೀರ ಚಿಕ್ಕದಿದೆ. ಊರಲ್ಲಿ ಗಂಟುಬೇನೆಯ ಇಲಿಗಳು ಬೀಳತೊಡಗಿವೆ. ಸರಕಾರೀ ಡಾಕ್ಟರರ ಅಭಿಪ್ರಾಯದ ಮೇರೆಗೆ, ಸತ್ತ ಜನರು ಗಂಟುಬೇನೆಯಿಂದಲೇ ಎನ್ನುವುದೂ ಸಿದ್ಧವಾಗಿದೆ. ಆದರೂ ಸಂಸ್ಥಾನದ ಉತ್ಪನ್ನದಲ್ಲಿ ಹೆಚ್ಚಳವನ್ನು ಮಾಡುವ ಜಾತ್ರೆ-ದೇವರ ಉತ್ಸವ-ಸಾಂಗವಾಗಲೇಬೇಕು— ಎನ್ನುವುದು ದೊರೆಗಳ ಆಜ್ಞೆ. ಅದನ್ನು ಜಾರಿಯಲ್ಲಿ ತರುವುದರ ಸಲುವಾಗಿ, ದೊರೆಗಳು ಕಾರುಭಾರಿಗಳನ್ನು-ಸರಕಾರೀ ಡಾಕ್ಟರರನ್ನು ವಾದ-ವಿವಾದ ಮಾಡಿ ಮಾತಿನಲ್ಲಿ ತೊಡಕಿಸಿಬಿಡುವ ಅಥವಾ ತಾವೇ ಸಿಕ್ಕುಬೀಳುವ ಪಾಂಗು, ಚಿತ್ತವೇಧಕವಾಗಿದೆ. ದೊರೆಗಳ ಮಾತುಗಳು ನಗದವರನ್ನು ಗಹಗಹಿಸಿ ನಗುವಂತೆ ಮಾಡುತ್ತವೆ. ಕಾರುಭಾರಿಗಳು-ಡಾಕ್ಟರರು, ದೊರೆಗಳಿಗೆ ಕೊಡುವ ಉತ್ತರ ವ್ಯಂಗ್ಯಪೂರ್ಣವಾಗಿದ್ದರೂ, ಆ ವ್ಯಂಗ್ಯಾರ್ಥ ಸರ್ವರಿಗೂ ತಿಳಿಯುವಂತೆ ಸರಳವಾಗಿದೆ. ಆದರೆ ಜಾತ್ರೆಯ ಮಬ್ಬು ಕಣ್ಣಿಗೆಡರಿದ ದೊರೆಗಳಿಗೆ ಮಾತ್ರ ಇವರ ಮಾತಿನ ಅರ್ಥವಾಗುವುದಿಲ್ಲ. ಸಂಸ್ಥಾನದ ಯಂತ್ರಣ ಸಾಗಬೇಕಾಗಿದ್ದುದು ಜಾತ್ರೆಯಿಂದ ಬರುವ ಉತ್ಪನ್ನದ ಮೇಲೆ. ಗಂಟುಬೇನೆ ಇದೆಯೆಂದು ಸುದ್ದಿಯಾದರೆ ಜಾತ್ರೆಯು ನೆರೆಯದು. ಉತ್ಪನ್ನವು ಸಂಗ್ರಹವಾಗದು. ಸರಕಾರೀ ಯಂತ್ರಣವು ಕುಸಿದು ಬೀಳುವುದು. ಇದು ದೊರೆಗಳ ಕಾಯಾಸ. ಈ ಕಾಯಾಸದ ಸೂತ್ರವನ್ನು ಅವಲಂಬಿಸಿ, ಅವರು ಜಾತ್ರೆಯು ಜರುಗಲೇಬೇಕೆಂಬ ಹಟವನ್ನು ಹಿಡಿಯುತ್ತಾರೆ. ಆ ಹಟವನ್ನು ನಾವು ಹುಚ್ಚುತನದ ಮಾದರಿ ಎಂದೆನ್ನಬಹುದು. ಆದರೆ ಅದರಲ್ಲಿಯೂ ಒಂದು ಶಿಸ್ತು ಇದೆ. (A method in madness.) ಅದಕ್ಕೆ ಅನುಸಾರವಾಗಿಯೇ ಅವರ ಬಾಯಿಯಿಂದ ಮುಕ್ತಾಫಲದಂತೆ ಮಾತುಗಳು ಉದುರುತ್ತಿವೆ. ಆ ಮಾತಿನ ಪಾಂಗನ್ನು ನೋಡಿ—

ದೊರೆಗಳು :- ಇಲಿಗಳ ವಿಷಯ ನೀವು ಹೇಳಬೇಡಿರಿ. ಮುಂಬಯಿಯಿಂದ ಸರಕಾರೀ ಉತ್ತರ ಬರಲಿ, ಸರಕಾರ ಹೇಳಿದ್ದು ಸತ್ಯ.... ಜಾತ್ರೆಯಾಗ

ದಿದ್ದರೆ ಸಾವಿರಗಟ್ಟಲೆ ರೂಪಾಯಿ ಬರುವುದಿಲ್ಲ. ಪೂಜೆ ಇಲ್ಲದೆ ದೇವರು ಸಾಯಬೇಕು. ಸಂಬಳ ಸಿಗದೆ ದುಡಿಯುವವರು ಸಾಯಬೇಕು. ನಿಮ್ಮಂತೇ ಆಗಲಿ ಡಾಕ್ಟರೇ, ಪ್ಲೇಗು ಇದೆ ಎನ್ನೋಣ, ಎಷ್ಟು ಜನರು ಸಾಯಬಹುದು ? ಪ್ಲೇಗು ಇರದಿದ್ದರೂ ಕೆಲವು ಜನರು ಸತ್ತೇಸಾಯುತ್ತಿದ್ದಾರೆ. ಆ ಮೇಲೆ ಕೆಲವರು ಮುದುಕರು ಸಾಯುವರೆನ್ನೋಣ. ಮುದುಕರು ಸತ್ತರೆ ಕಸ ಹೋದಂತೆ; ಆಮೇಲೆ ಕೆಲವು ಹೆಂಗಸರು ಸಾಯಬಹುದು. ಅವರು ಇದ್ದು ಗಳಿಸುವುದು ಅಷ್ಟರಲ್ಲೇ ಇದೆ. ಕೂಳು ದಂಡ ! ಇನ್ನು ಕೆಲವರು ಸಣ್ಣ ಹುಡುಗರು ಸಾಯಬಹುದು; ಹುಡುಗರು ಸತ್ತರೂ ತೊಟ್ಟಿಲಗಳೇನೂ ತೆರವು ಬೀಳುವುದಿಲ್ಲ. ಹಿಂದುಸ್ತಾನದ ಖಾನೇಸುಮಾರೀ ಕೇಳಿದ್ದೀರೋ ಇಲ್ಲವೋ, ಹತ್ತು ವರ್ಷಗಳಲ್ಲಿ ೩೩ ಕೋಟಿ, ೪೩ ಕೋಟಿಯಾಗಿದೆ.

ಡಾಕ್ಟರ :– ಬಡಬಗ್ಗರ ಗತಿಯೇನು ದೇವರು ?

ದೊರೆಗಳು :– ಬದುಕುವುದೇ ಕಷ್ಟವಾದಾಗ ಸಾಯುವುದೇ ಸುಖ ಅವರಿಗೆ; ಸತ್ತರೆ ಚಿಂತೆ ಹರಿಯಿತು.

ಡಾಕ್ಟರು :– ಅದಿರಲಿ ದೇವರು, ದುಡ್ಡುಳ್ಳವರು ಯಾರಾದರೂ...............

ದೊರೆಗಳು :– ಅವರಿಗೆ ಯಾರು ಸತ್ತರೇನು ? ದುಡ್ಡು ಇರುವುದಲ್ಲ. ಅವರು ಕಳ್ಳ–ಕಾಕರಿಗೆ ಹೆದರಬೇಕು. ರೋಗದ ಹೆದರಿಕೆಯೇ ಅವರಿಗೆ ? ಹಿರಿಯರು ಸತ್ತರೆ ಮಕ್ಕಳಿಗೆ ಪಟ್ಟ ಬರುವುದು; ಮಕ್ಕಳು ಸತ್ತರೆ ಪಾಲಾಗುವುದುಳಿಯಿತು.

ಸ್ವತಃ ದೊರೆಗಳಿಗೇ ಪ್ಲೇಗಿನ ಲಕ್ಷಣಗಳು ಕಾಣತೊಡಗಿದಾಗ, ಅವರು ಡಾಕ್ಟರರಿಗೆ ತಮ್ಮ ಪ್ರಕೃತಿಯನ್ನು ನೋಡಲು ತಿಳಿಸುತ್ತಾರೆ. ಆಗಿನ ಸಂಭಾಷಣೆಯಂತೂ ಮನೋಹ್ಲಾದಕವಾಗಿದೆ.

ದೊರೆಗಳು :– ........... ಡಾಕ್ಟರೇ, ನನ್ನ ಮೈ ಕಾದಿದೆಯೇನು ನೋಡಿರಿ.

ಡಾಕ್ಟರು :– (ನೋಡಿ) ದೊರೆಗಳ ಮೈ ಬೆಚ್ಚಗಿರಲೇಬೇಕು !

ದೊರೆಗಳು :– (ತನ್ನ ನಾಡೀ ತಾನೇ ನೋಡಿಕೊಂಡು) ನನ್ನ ನಾಡಿ ಇಷ್ಟೇಕೆ ಹಾರುತ್ತಿದೆ ?

ಡಾಕ್ಟರು :– ರಾಜನಾಡಿ ಕೇಳುವುದೇನು ? ರಣಾಂಗಣಕ್ಕೆ ಹೊರಟ ಕುದುರೆಯಂತೆ ಹೊರಟಿದೆ, ದೇವರು.

ದೊರೆಗಳು :- ನನ್ನ ಮೈ ಯಾಕೋ ನಡಗುತ್ತಿದೆಯಲ್ಲಾ ?

ಡಾಕ್ಟರು :- ದೇವರು, ಅದು ಜಾತ್ರೆಯ ಉತ್ಸಾಹ.

ದೊರೆಗಳಿಗೇ ಗಂಟುಬೇನೆಯೂ ಅಂಟಿರುತ್ತದೆ. ಆಗ ಅವರು ಅದನ್ನು ಅಜಮಾಯಿಸಿ-ಅನುಮಾನದಿಂದ ಡಾಕ್ಟರರನ್ನು ಕೇಳುತ್ತಾರೆ—

ದೊರೆಗಳು :- ಹಾಗೆ ಎಂದರೆ ಹೇಗೆ? ಪ್ಲೇಗು ಎಂದೋ ?

ಡಾಕ್ಟರು :- ಆ ಮಾತು ನಾನಾಡಲಾರೆ; ದೊರೆಗಳು ಹೇಳಬಹುದು.

ದೊರೆಗಳು :- ( ಹಾಸಿಗೆಯ ಮೇಲೆ ಉರುಳುತ್ತ ) ಡಾಕ್ಟರೇ, ಪ್ಲೇಗೆಂಬ ಮಾತಿಗೆ ಎಷ್ಟು ಹೆದರುತ್ತೀರಿ ?

ಡಾಕ್ಟರು :- ನನಗೆ ಪ್ಲೇಗಿನ ಭೀತಿಯಿಲ್ಲ, ತಮ್ಮದು ದೇವರು.

ದೊರೆಗಳು :- ಹೆದರದೆ ಹೇಳಿರಿ, ನನಗೇನಾಗಿರಬೇಕು ?

ಡಾಕ್ಟರು :- ಪ್ಲೇಗು ?

.....................................

ದೊರೆಗಳು :- ಕಾರಭಾರಿಗಳೇ, ಇನ್ನೇನು ದೇವರ ಜಾತ್ರೆಯೋ, ದೊರೆಗಳ ಪ್ರೇತ-ಯಾತ್ರೆಯೋ ! ಡಾಕ್ಟರೇ, ಊರ ಜನರಿಗೆ ಊರು ಬಿಡ ಹೇಳಿರಿ, ಜೀವದ ಜಾತ್ರೆ ಹೊರಡಲಿ ! ಡಾಕ್ಟರೇ ನಿಮಗೆ ಬುದ್ಧಿ ಯಿಲ್ಲ, ಹೆದರಿಸಿದರೆ ಹೆದರಿಬಿಡುತ್ತೀರಿ. ಸತ್ತರೂ ಸತ್ಯ ಬಿಡಬಾರದು. ನಾನು ಹೇಳುತ್ತೇನೆ-ಇದು ಪ್ಲೇಗು.

ಡಾಕ್ಟರು :- ಸರಕಾರ ಹೇಳಿದ್ದೇ ಸತ್ಯ, ದೇವರು.

'ಜಾತ್ರೆ' ನಾಟಕ ಮೇಲು ನೋಟಕ್ಕೆ, ಹಗುರಾದ ಫಾರ್ಸ (ಹುಚ್ಚಾಟ) ದಂತೆ ಕಂಡರೂ, ಅದರಂತರಂಗದಲ್ಲಿ ಅಡಕವಾದ ತತ್ತ್ವ, ಆ ಕಾಲದ ಮಾನದಿಂದ ವಿಚಾರಣೀಯವಾಗಿದ್ದಿತು; ವಿಚಾರಾರ್ಹವಾಗಿದ್ದಿತು. ನಾಟಕಕಾರರ 'ನಗೆಯ ಹೊಗೆ'ಯಂತೆ ಇದೂ ಬಹಳಷ್ಟು ಕಡೆಗೆ ಪ್ರಸಾರಿತವಾಗಲಿಲ್ಲ. ದೃಶ್ಯಪ್ರದರ್ಶಿತ ವಾಗಲಿಲ್ಲ. ಜನತೆಯ ಎದುರು ಬರಲಿಲ್ಲ. ಈ ಇಲ್ಲವೆನ್ನುವುದರ ಕಂತೆಯನ್ನು ಬದಿಗಿರಿಸಿ, ನಾಟಕಕಾರರ ಗಣನೆಯನ್ನು ಮಾಡುವ ಪ್ರಸಂಗವೇ ಬಂದರೆ, ಶ್ರೀ ಬೇಂದ್ರೆ ಅವರು, ನಮ್ಮ ಕನ್ನಡ ನಾಟಕಕಾರರಲ್ಲಿ ಅಗ್ರಪಂಕ್ತಿಗೆ ಸೇರಿದವರೆಂಬ ಮಾತನ್ನು ಅಲ್ಲಗಳೆಯಬರದು. ಅವರು ಕವಿಜ್ಯೇಷ್ಠರಿರುವಂತೆಯೇ ನಾಟಕಕಾರ ರಲ್ಲಿ ಕೂಡ, ಶ್ರೇಷ್ಠ ತರಗತಿಯ ನಾಟಕಕಾರರೆಂಬ ಮಾತನ್ನು ನಾವು ಮರೆಯ ಕೂಡದು. ಅವರು ರಚಿಸಿದ ನಾಲ್ಕಾರೇ ನಾಟಕಗಳ ಪ್ರಸಂಗಕ್ಕೆ ನಮ್ಮ ಕನ್ನಡ ದಲ್ಲಿಯ ಇನ್ನುಳಿದ ನಾಟಕಗಳು ಬರುವವೋ ಇಲ್ಲವೋ ಎನ್ನುವುದು ಸಂಶಯ. ಇದ

ರಿಂದ ಶ್ರೀ ಬೇಂದ್ರೆ ಅವರು ಆಡಿದ್ದೆಲ್ಲ ಮುತ್ತು, ಮುಟ್ಟಿದ್ದೆಲ್ಲ ಚಿನ್ನವೆಂದು ಸಾಧಿಸುವ ಹಟ ನನಗಿದೆಯೆಂದು ಭಾವಿಸಕೂಡದು. ಒಳ್ಳೆಯದಾದುದನ್ನು ಒಳ್ಳೆಯದೆಂದು ಮುಕ್ತಮನಸ್ಸಿನಿಂದ ಹೇಳುವುದಕ್ಕೂ, ಹೊಗಳುವುದಕ್ಕೂ ನಮ್ಮ ಜನತೆಯಲ್ಲಿ ಇನ್ನೂ ಸಂಕೋಚ. ಈ ಸಣ್ಣತನ ನೀಗಬೇಕು. ನಮ್ಮವರ ಮನಸ್ಸು ಸಾಗರದಂತೆ ಆಳ–ಮುಗಿಲಿನಂತೆ ವಿಸ್ತಾರವಾಗಬೇಕು. ವ್ಯಾಸ–ವಾಲ್ಮೀಕಿ–ಕಾಳಿದಾಸ–ಭವಭೂತಿ ಎಂದೋ ಆಗಿಹೋದರು. ಅವರ ಕಾಲದಲ್ಲಿದ್ದ ರಾಜರುಗಳ ಚರಿತ್ರೆಯನ್ನು ನಮ್ಮ ಜನತೆ ನಂಬುವುದಿಲ್ಲ. ಆದರೆ ಈ ಮಹಾನ್ ಕವಿಗಳ ಕಾವ್ಯಗಳು ತೀರ ಅನಭಿಜ್ಞರಾದವರ ಬಾಯಲ್ಲಿಯೂ ನಿಂತಿವೆ. ಜೀವನದಲ್ಲಿ ಏಕರಸವಾಗಿ ಹೋಗಿವೆ.

ಕೊನೆಯ ನಾಟಕ 'ಹೊಸ ಸಂಸಾರ' ಅಥವಾ 'ಮಂದಿಯ ಮದುವೆ' ಎನ್ನುವುದಾಗಿದೆ. ಈ ನಾಟಕದಲ್ಲಿ ಹೊಸತನವೇನೂ ಇಲ್ಲ. ಪಾತ್ರಗಳಲ್ಲಿಯ ಮಂದಾರಮಾಲಾ ಹಾಗೂ ಡಾಕ್ಟರ ರಂಗಣ್ಣ ಮದುವೆಯಾಗಿ ಹೊಸ ಸಂಸಾರವನ್ನು ಹೂಡಿರಬಹುದು. ಅದಕ್ಕೆ ಮಂದಾನ ತಂದೆ ಅಜ್ಜಂದಿರು ನೆರವು ನೀಡಿರಬಹುದು. ಆದರೆ ನಾಟಕದ ವಸ್ತು ಸಾಮಾನ್ಯ. ಚಿಕ್ಕ ವಸ್ತು ವಿಸ್ತರಣೆಯಾಗುತ್ತ ಹೋಗುತ್ತಿದೆ. ಫಕ್ಕ–ಫಕ್ಕೀರಿ ಇತ್ಯಾದಿ ಮನೆಯ ಆಳುಗಳ ಜೀಲಿಯ ಮೇಲೆ ನಾಟಕದ ಬಳ್ಳಿ ಹರಡುತ್ತಿದೆ. ಮನೆಯ ಕಂಪೌಂಡುಗೋಡೆಯನ್ನು ಒತ್ತರಿಸಿನಿಂತ ಬಳ್ಳಿಯು ಅಂದವಾಗಿ ಕಾಣುವಂತೆ, ದೂರದಿಂದ ನೋಡುವವರಿಗೆ ಈ ನಾಟಕವು ಅಂದವಾಗಿಯೇ ಕಾಣುವುದು. ಇಂದಿನ ಮಿತಿಗೂ ಇದರ ಪ್ರಯೋಗಗಳು ಆವಾಗ–ಈವಾಗ ನಾಟ್ಯರಸಿಕ ಮಂಡಲಿಗಳ ಕಡೆಯಿಂದ ನಡೆಯುತ್ತವೆ. ಜನರು ನೋಡುತ್ತಾರೆ. ಆದರೆ ನಾಟಕದಲ್ಲಿ ಮಾತ್ರ 'ಬೇಂದ್ರೇ ಬ್ರ್ಯಾಂಡ್'—Speciality ಮಾತ್ರ ಏನೂ ಇಲ್ಲವೆಂದು ನನ್ನ ಅಭಿಪ್ರಾಯ. ಪಾತ್ರಗಳ ಮಾತುಗಳು ಅಳ್ಳು ಹುರಿದಂತೆ ಪಟಪಟನೆ ಹಾರಿ ನಗೆಯ ಬುಗ್ಗೆಯನ್ನು ಎಬ್ಬಿಸುತ್ತಿವೆ. ಇಲ್ಲಿ ಕೃತಕತೆಯ ಸುಳಿವೂ ಕಾಣುವುದಿಲ್ಲ. ಬಂಡೆಪ್ಪ–ಗುಂಡಪ್ಪ–ಅಂಬಕ್ಕನಂಥ ಪಾತ್ರಗಳನ್ನು ನಾವು ಸಮಾಜದಲ್ಲಿ ದಿನನಿತ್ಯವೂ ನೋಡುತ್ತೇವೆ. ಅಥವಾ ಅದರಂತೆಯೇ ನಮ್ಮ ನಟನೆಯೂ ಇರುತ್ತದೆ. ಅಥವಾ ನಮ್ಮಂಥವರ ನಟನೆಯನ್ನು ನೋಡಿಯೆ ನಾಟಕಕಾರರು ಈ ಕೃತಿರಚನೆಯನ್ನು ಮಾಡಿದ್ದರೂ ಮಾಡಿರಬಹುದು. ಯಾರಿಗೆ ಗೊತ್ತು ?

ಈ ಸಂಕಲನದಲ್ಲಿ ಸಂಗ್ರಹೀತವಾದ ನಾಟಕಗಳನ್ನು ದೃಷ್ಟಿಯಲ್ಲಿರಿಸಿಕೊಂಡು ನಾಟಕಕಾರರು, ತಮ್ಮ ಮುನ್ನುಡಿಯಲ್ಲಿ ವಿಮರ್ಶಕನು ಹೇಳಬೇಕಾದ ಮಾತುಗಳನ್ನು ಬಹಳೇ ಸ್ಪಷ್ಟವಾಗಿ ಹೇಳಿದ್ದಾರೆ; ವಿಮರ್ಶಕನ ಕಾರ್ಯವನ್ನು ಹಗುರು

ಮಾಡಿದ್ದಾರೆ; ಸಾಮಾಜಿಕ ಸಮಸ್ಯೆಗಳ ಬಗ್ಗೆಯೂ ವಿವರಣೆಯನ್ನು ಒದಗಿಸಿದ್ದಾರೆ. ಆ ಬಗ್ಗೆ ಅವರು ಹೇಳಿದ ಮಾತುಗಳನ್ನು ಯಾರೂ ಒಪ್ಪಬಹುದಾಗಿದೆ. ‘ನಾಟ-ಕಾದಿ ಕಲೆಗಳಲ್ಲಿ ಸತ್ಯವನ್ನು ಪ್ರಿಯವಾಗುವಂತೆ ಹೇಳುವುದು ನಿಜವಿದ್ದಪಕ್ಷದಲ್ಲಿ, ನಾಟಕಗಳಲ್ಲಿ ಪಕ್ಷಕ್ಕಾಗಿ ಹೋರಾಡುವುದಕ್ಕಿಂತ, ಪ್ರೇಕ್ಷಕರ ಅಂತಃಕರಣ ವಿವೇಕಗಳು ಜಾಗೃತವಾಗುವಂತೆ ಪಕ್ಷ-ಪ್ರತಿಪಕ್ಷಗಳನ್ನು ಚಿತ್ರಿಸುವುದೊಳಿತು.’ ಎನ್ನುವ ಚಿರಂತನ ಸತ್ಯವನ್ನು ಸಾರಿದ್ದಾರೆ. ಅದನ್ನು ತಮ್ಮ ಕೃತಿಗಳಲ್ಲಿ ಸಾಕರಿಸಿಯೂ ತೋರಿಸಿದ್ದಾರೆ. ಆಡಿದಂತೆ ಮಾಡಿತೋರಿಸುವ ಕಲೆಯು ಅವರಿಗೆ ಚೆನ್ನಾಗಿ ಸಾಧಿಸಿದೆ.

§ § § §

---

‘ಬೇಂದ್ರೆ ಸಾಹಿತ್ಯ ಸೌರಭ’ ದಿಂದ.

೨೩

# ಬೇಂದ್ರೆಯವರ ಅರಳು–ಮರಳು

ವಿ. ಕೃ. ಗೋಕಾಕ

## ೧

ಅಂಬಿಕಾತನಯದತ್ತರ ಅರಳು–ಮರಳಿಗೆ ಈ ಮುನ್‌ನುಡಿಯನ್ನು ಬರೆಯುವದು ದೊಡ್ಡ ಹೊಣೆಗಾರಿಕೆ. ಈಗ ಮೂವತ್ತು ವರ್ಷಗಳಿಗೆ ಮೇಲ್ಪಟ್ಟು ಅವರ ಕಾವ್ಯದ ಆಳದಲ್ಲಿ ಮಿಂದಿದ್ದರೂ ಅದರ ಗಭೀರತೆ ಇನ್ನೂ ಹೆಚ್ಚುತ್ತಿದೆ. ಅದರ ಆಳವನ್ನೆಲ್ಲ ನಾನು ಅಳೆದಿದ್ದೇನೆಂದು ಹೇಳಲಾಗುವದಿಲ್ಲ. ಅದರ ವಿಸ್ತಾರಗಳನ್ನೆಲ್ಲ ವಿಚಿಕಿತ್ಸಿಸಿದ್ದೇನೆಂದು ನಾನು ತಿಳಿಯಲಾರೆ. ಏಕೆಂದರೆ ಆಳದ ಅರಿವು ನನ್ನಲ್ಲಿ ಹೆಚ್ಚಾದಂತೆ ಅವರ ಕಾವ್ಯದ ಆಳ ಇನ್ನಿಷ್ಟು ಆಳವಾಗತೊಡಗಿ ಅದರ ವಿಸ್ತಾರ ಇನ್ನೂ ವಿಸ್ತೃತವಾಗಹತ್ತಿದೆ.

ಇಲ್ಲಿ ಮುಖ್ಯವಾದುದು ಕವಿಯ ಆರ್ಷದೃಷ್ಟಿ. ಹೀಗೆಂದೊಡನೆ ಬೇಂದ್ರೆಯವರನ್ನು ಋಷಿಗಳೆಂದು ನಾನು ಕರೆದೆನೆಂದು ನೂರು ಆಕ್ಷೇಪಣೆಗಳು ಏಳಬಹುದು. ಬೇಂದ್ರೆಯವರು ಸಾಧಕರು ನಿಜ. ಅದಕ್ಕಿಂತಲೂ ಹೆಚ್ಚೆಂದು ಅವರೇ ಒಪ್ಪುವದಿಲ್ಲ. ಆದರೆ ಅವರಲ್ಲಿ ಅಂಬಿಕಾತನಯದತ್ತನೆಂಬ ವರಕವಿ ಗೂಡುಗಟ್ಟಿದ್ದಾನೆ. ಬೇಂದ್ರೆಯವರ ಸಾಧನೆಯಲ್ಲಿ ಸಿದ್ಧವಾದುದೆಲ್ಲ— ಉಂಡ, ಕಂಡ ಬದುಕೆಲ್ಲ— ಈ ಕವಿಯ ಸ್ಫೂರ್ತವಾಣಿಯಲ್ಲಿ ಕಾವ್ಯವಾಗಿ ಉಕ್ಕಿ ಬರುತ್ತದೆ. ಒಂದು ರೀತಿಯಿಂದ ಅಂಬಿಕಾತನಯದತ್ತನೇ ಬೇಂದ್ರೆಯವರನ್ನು ಸಾಧನೆಯ ಮಾರ್ಗದಲ್ಲಿ ಮುಂದುವರಿಸಿದ್ದಾನೆ. ಇನ್ನೊಂದು ದೃಷ್ಟಿಯಿಂದ ಬೇಂದ್ರೆಯವರೇ ಅಂಬಿಕಾತನಯದತ್ತನ ಸಿದ್ಧಿಗೆ ಸಾಧನಗಳನ್ನು ಒದಗಿಸುತ್ತಿದ್ದಾರೆ. ಬೇಂದ್ರೆಯವರು ಸೂತ್ರಧಾರನಾದ ಬಾಲಕ. ಅಂಬಿಕಾತನಯದತ್ತ ಅಂತರಿಕ್ಷದಲ್ಲಿ ತೂಗಾಡುವ ಗಾಳಿಪಟ. ಬೇಂದ್ರೆಯವರು ಇಪ್ಪತ್ತನೆಯ ಶತಮಾನದ ಭಾರತದ— ಕನ್ನಡ ನಾಡಿನ— ನಾಗರಿಕರು. ಅಂಬಿಕಾತನಯದತ್ತ ವಿಶ್ವಮಾನವ, ವಿಶ್ವದ ನಾಗರಿಕ. ಆತ ಹೇಳಿದ ಪ್ರಯೋಗಗಳನ್ನು ಬೇಂದ್ರೆಯವರು ಜೀವನದಲ್ಲಿ ನಡೆಯಿಸುತ್ತಾರೆ.

ಇವರು ತಿಳಿಸಿದ ಫಲಿತಾಂಶಗಳನ್ನು ಅಂತರಿಕ್ಷದಲ್ಲಿ ನಿರ್ವಿಕಾರವಾಗಿ ಪರೀಕ್ಷಿಸಿ ಉಳಿಯಬಲ್ಲ ನನ್ನಿಗಳನ್ನು ಅಂಬಿಕಾತನಯ ಉಕ್ತಿಸುತ್ತಾನೆ; ಅಳಿಯುವಂಥವನ್ನು ತೂರಿಬಿಡುತ್ತಾನೆ. ಇಷ್ಟೇ ಅಲ್ಲ. ಅಂತರಿಕ್ಷದಲ್ಲಿ ಅಲೆದಾಡುವ ದಿವ್ಯ ಸಂದೇಶ ಗಳನ್ನು ಗ್ರಹಿಸಿ ಬೇಂದ್ರೆಯವರಿಗೆ ಅವುಗಳನ್ನು ಬರೆದುಕೊಳ್ಳಲು ಹೇಳುತ್ತಾನೆ. ಇದನ್ನೆಲ್ಲ ಲಕ್ಷಿಸಿಯೇ 'ಆರ್ಷದೃಷ್ಟಿ' ಎಂಬ ಮಾತನ್ನು ಇಲ್ಲಿ ನಾನು ಬಳ ಸಿದ್ದೇನೆ.

ಬೇಂದ್ರೆಯವರ ಅರವತ್ತರ ಅರಿವನ್ನು ಅಡಿನೆಲವಾಗಿರಿಸಿಕೊಂಡು ಇಲ್ಲಿ ಅಂಬಿ ಕಾತನಯದತ್ತನ ಅರಳು-ಮರಳು ಹಬ್ಬಿದೆ. ಆನಂತ್ಯದ ದೃಷ್ಟಿಕೋನದಿಂದ ಇಲ್ಲಿ ವಿಶ್ವದ ಹಾಗು ನಿಸರ್ಗದ ಚೆಲವು-ಗೆಲವುಗಳ ಹಾಗು ನೋವು-ಸಾವುಗಳ ನಿರೂ ಪಣೆಯಿದೆ. ಇದೇ ದೃಷ್ಟಿಯಿಂದ ವಿಶ್ವಮಾನವನು ಇಲ್ಲಿ ಜಗತ್ತಿನ, ಭಾರತದ ಹಾಗು ಕನ್ನಡ ನಾಡಿನ ಪ್ರಶ್ನೆಗಳನ್ನು ಪರಿಕಿಸಿದ್ದಾನೆ; ವ್ಯಕ್ತಿ-ಸಮಾಜಗಳ ದೈವ-ದುರ್ದೈವಗಳ ಮೇಲೆ ಬೆಳಕು ಕೆಡವಿದ್ದಾನೆ. ನಮ್ಮ ಸುತ್ತು-ಮುತ್ತಣ ಪ್ರಶ್ನೆ ಗಳನ್ನು ಇಂತಹ ದೃಷ್ಟಿಯ ಬೆಳಕಿನಲ್ಲಿ ನೋಡುವ ಅವಕಾಶ ದೊರೆತಿರುವದು ನಮ್ಮ ನಾಡಿನ ಹಾಗು ನಮ್ಮ ತಲೆಮಾರಿನ ಪುಣ್ಯ. ಉಳಿದ ಪ್ರಾಂತಗಳಲ್ಲಿಯ ಜನತೆ ಅಲ್ಲಲ್ಲಿ ಈ ಕಾವ್ಯದ ರಸಸ್ಪರ್ಶವನ್ನು ಪಡೆದಿದೆ. ಇದಕ್ಕೂ ಮುಂದಿನ ಈ ಕಾವ್ಯದ ಕೀರ್ತಿ ನಮ್ಮ ನಾಡಿನ ಜೀವನದ ವಿಕಾಸವನ್ನೇ ಅವಲಂಬಿಸಿದೆ.

ಅಂಬಿಕಾತನಯದತ್ತರು ಹಾಡಲು ದನಿಯೆತ್ತಿದಾಗ ಇಂದಿನ ಕಾವ್ಯವು ಇನ್ನೂ ಮೂಡುವದರಲ್ಲಿತ್ತು. ಈಗ ನೂರು ಸ್ವರಗಳಾಗಿ ಆ ಗಾನ ಕೇಳಿಸುತ್ತಿದೆ. ಕನ್ನಡನಾಡು ಅಂದು ಹರಿದು ಹಂಚಿತ್ತು; ಇಂದು ಅದು ಬಹುಮಟ್ಟಿಗೆ ಏಕೀಕೃತ ವಾಗಿದೆ. ಅಂದು ಕನ್ನಡದ ಸರ್ವತೋಮುಖ ಪ್ರಗತಿಗಾಗಿ ದುಡಿಯುವವರೇ ಇರಲಿಲ್ಲ. ಇಂದು ನೂರಾರು ತರುಣರು ಆ ಕೆಲಸಕ್ಕಾಗಿ ವೀಳ್ಯವೆತ್ತಿದ್ದಾರೆ. ಅಂದು ಭಾರತ ಪರತಂತ್ರವಾಗಿತ್ತು. ಇಂದು ಅದು ದೇವಕರುಣೆಯಿಂದ ಸ್ವತಂತ್ರ ವಾಗಿದೆ. ಈ ಎಲ್ಲ ಘಟನೆಗಳಿಂದ ಬೇಂದ್ರೆಯವರಿಗೆ ತಮ್ಮ ಜೀವನದಲ್ಲಿ ಒಂದು ಸಫಲತೆ ಕಂಡಿದ್ದರೆ ಆಶ್ಚರ್ಯವಲ್ಲ. 'ನೆನಪು' ಎಂಬ ಕವಿತೆಯಲ್ಲಿ ಸಫಲತೆಯ ಈ ಭಾವ ಪ್ರಸನ್ನವಾಗಿ ತಲೆಯೆತ್ತಿದೆ.

೨

ಅಂಬಿಕಾತನಯದತ್ತರ ಕಾವ್ಯ ತನ್ನದೇ ಆದ ಒಂದು ಪರಂಪರೆಯನ್ನು ಕನ್ನಡದಲ್ಲಿ ನಿರ್ಮಿಸಿಕೊಂಡಿದೆ. 'ಗರಿ', 'ನಾದಲೀಲೆ', 'ಕನ್ನಡ ಮೇಘ ದೂತ' ಮೊದಲಾದ ಅವರ ಕವನಸಂಗ್ರಹಗಳನ್ನು ಓದಿ ಇಲ್ಲವೆ ಕೇಳಿ ಸವಿದ ನಾಡೆಲ್ಲ ಈ ಪರಪಂರೆಯನ್ನು ಬಲ್ಲದು. 'ಅರಳು-ಮರಳು' ಸಂಗ್ರಹದಲ್ಲಿಯ

ಕಾವ್ಯ ಈ ಪರಂಪರೆಯಲ್ಲಿಯೂ ಮುಂದುವರಿದಿದೆ. ಷಟ್ಪದಿಯಲ್ಲಿ ಬೇಂದ್ರೆಯವರು ಬರೆಯಲು ಪ್ರಾರಂಭಿಸಿದ್ದರು. ಇಲ್ಲಿ ಒಂದೆರಡು ವಾರ್ಧಕಷಟ್ಪದಿ ಕವನಗಳೂ ಇವೆ. ಅಕ್ಷರವೃತ್ತವೂ ಒಂದೆರಡು ಎಡೆಗೆ ಲಹರಿ ಲಹರಿಯಾಗಿ ಬಂದಿದೆ. ಅವರ ಅಷ್ಟಷಟ್ಪದಿಗಳ ಕ್ಷುರಧಾರೆಯ ಪರಿಚಯವಿದ್ದವರಿಗೆ 'ಸಕಲ,' 'ವಸುಧಾ', 'ಸ್ಥಿರೆ-ತಿರೆ' ಮೊದಲಾದ ಅಷ್ಟಷಟ್ಪದಿಗಳಿಂದ ಒಂದು ವಿಶೇಷ ಆನಂದವಾಗುವುದರಲ್ಲಿ ಸಂಶಯವಿಲ್ಲ. ಜಾನಪದ ಗೀತಗಳ ಚಕ್ರವರ್ತಿಗಳಾದ ಬೇಂದ್ರೆಯವರು 'ಟೊಂಕದ ಮ್ಯಾಲ ಕೈಯಿಟಗೊಂಡು' ಮೊದಲಾದ ಉತ್ತಮ ಕಾಣಿಕೆಗಳನ್ನು 'ಹುಬ್ಬಳ್ಳಿಯಾಂವಾ'ದ ದಾರಿಯಲ್ಲಿ ನೀಡಿದ್ದಾರೆ. ಓರ್ವ ವ್ಯಕ್ತಿ ಇಲ್ಲವೆ ಒಂದು ಸನ್ನಿವೇಶದ ವರ್ಣನೆ ಸರ್ವಾಂಗಸುಂದರವಾದಾಗ ಪ್ರತೀಕಮಯವೂ ಆಗುತ್ತದೆಂಬುದನ್ನು ನಾವಿಲ್ಲಿ ಲಕ್ಷಿಸಬೇಕಾಗಿದೆ. 'ಹುಚ್ಚನ ಹಾಡು' ಹಾಗೂ 'ಬಿಚ್ಚುಮಾತು' ಇದೇ ದಾರಿಯಲ್ಲಿಯ ಹೊಸ ಪ್ರಯೋಗಗಳನ್ನು ಸೂಚಿಸುತ್ತವೆ. 'ಕಗ್ಗ' ಎಂಬ ಕವಿತೆ ಈ ಜಾಡಿನಲ್ಲಿಯೇ ತೀರ ಸ್ವತಂತ್ರವಾದ ಕವಿತೆಯಾಗಿದ್ದು, ಸಿದ್ಧಹಸ್ತನಾದ ಕವಿ ಜಾನಪದದ ಧಾಟಿ-ಶೈಲಿಗಳನ್ನು ತನ್ನ ದರ್ಶನದ ಅಭಿವ್ಯಕ್ತಿಗೆ ಹೇಗೆ ವಿಲಾಸಪೂರ್ಣವಾಗಿ ಉಪಯೋಗಿಸಬಹುದೆಂದು ನಾವಿಲ್ಲಿ ಕಾಣಬಹುದು. 'ಬಿದಿಗೆ ಚಂದ್ರ ಬಂದ ನೋಡು' ಹಾಗೂ 'ಚಿಟ್ಟಗುಬ್ಬಿ ಚಿಂವು ಚಿಂವು' ಎಂಬ ಬಾಲಗೀತಗಳು 'ಕರಿಮರಿನಾಯಿ', 'ಪಾತರಗಿತ್ತಿ ಪಕ್ಕಾ' ಮೊದಲಾದ ಕೃತಿಗಳ ವರ್ಗವನ್ನು ಸಿಂಗರಿಸಿವೆ. ಬಾಲಗೀತಗಳು ಬಾಲಿಶವಾಗುವ ಭಯ ಅಷ್ಟಿಷ್ಟಲ್ಲ. ಆದರೆ ಎಂತಹ ಪ್ರೌಢರೂ ತಲೆದೂಗುವಂತೆ ಈ ಕವಿತೆಗಳ ತಿರುಳು ಮೂರ್ತಿಗೊಂಡು ನಿಂತಿದೆ. ಕಾಲಿದಾಸನ ಪ್ರತಿಭೆಯನ್ನು ಕನ್ನಡಕ್ಕೆ ತಿರುಗಿಸಿದ ಬೇಂದ್ರೆಯವರು 'ರಮಣಹೃದಯ', 'ಅಮೃತಾನುಭವ', 'ಆನಂದಲಹರಿ' ಹಾಗೂ 'ಓಮರ' ಮೊದಲಾದ ಕವನಗಳಲ್ಲಿ ಇನ್ನೂ ಅನೇಕ ಪ್ರತಿಭಾಶಾಲಿಗಳ ಸಾರಸ್ವತ ಸಂಪತ್ತನ್ನು ಕನ್ನಡಕ್ಕೆ ತಿರುಗಿಸಿದ್ದಾರೆ. ಈ ಅನುವಾದಗಳಲ್ಲಿ ಪುನರವತಾರದ ಕಳೆಯಿದೆ. ಬೇಂದ್ರೆಯವರ ಶ್ಲೇಷಪ್ರಿಯತೆ ಇಂತಹ ಕವನಗಳ ತಲೆಕಟ್ಟಿನಲ್ಲಿಯೂ ವ್ಯಕ್ತವಾಗದೆಯೆ ಇಲ್ಲ. 'ಓಮರ' ಎಂದರೆ ಅವರಿಗೆ ಸಮಾಧಾನವಿಲ್ಲ. 'ಓ-ಮರ' ಎಂದು ವಿಂಗಡಿಸಿ ತೋರಿಸಿದಾಗ ಅವರಿಗೆ ಪೂರ್ತಿ ಸಮಾಧಾನವಾಗುತ್ತದೆ. ಚೈತ್ಯಾಲಯ ಎಂಬ ಭಾಗ ಶ್ರೀ ಅರವಿಂದರ ಅನೇಕ ಕವನಗಳ ಅನುವಾದಗಳಿಗಾಗಿ ಮೀಸಲಾಗಿದೆ ಎನ್ನಬಹುದು. ಕಾಲಿದಾಸನ ರಸವಂತಿಕೆಗಿಂತ ಮಿಗಿಲಾದ ಒಂದು ರಸಪಾಕ ಇಂತಹ ಕವನಗಳಲ್ಲಿದೆ. ಇಲ್ಲಿಯ ಅನುವಾದಗಳಲ್ಲಿ ಬೇಂದ್ರೆಯವರು ಅದೃಶ್ಯಮಯವಾದುದನ್ನು ಅನ್ಯಾದೃಶವಾಗಿ, ದೃಶ್ಯಮಯವಾಗಿಸುವ ಪವಾಡವನ್ನು ಮೂಲದಲ್ಲಿಯಂತೆ ಸಾಧಿಸಿದ್ದಾರೆ. ಶ್ರೀ ಅರವಿಂದರ 'ಸಾವಿತ್ರಿ' ಎಂಬ ಮಹಾಕಾವ್ಯದ ಕೆಲವೊಂದು ಸಾಲುಗಳ ಅನುವಾದವೂ ಇಲ್ಲಿದೆ. ಆದರೆ ನವ್ಯೋನವವಾದ ಈ ಮಹಾನಿರ್ಮಿತಿಯ

ಫಲ ಅಂಬಿಕಾತನಯದತ್ತರಿಗೂ ನಿಲುಕಲಿಲ್ಲ. ವಿಸ್ಮಿತರಾದ ಅವರ ಉದ್ಗಾರ ಈ ವಿಷಯುವನ್ನು ಕುರಿತು ಕೆಲವೊಂದು ಕವನಗಳಲ್ಲಿ ಮೂಡಿದೆ. 'ಸಾವಿತ್ರಿ'ಮಹಾ ಕಾವ್ಯದ ಯುಗ ಇನ್ನೂ ಬರಬೇಕಾಗಿದೆ. ಬೇಂದ್ರೆಯವರಿತ್ತ "ಪೆರುಮಾಳನ ಕೆಂದಾವರೆ" ಮೊದಲಾದ ಕಾಣಿಕೆಗಳನ್ನು ಅರಗಿಸಿದರೂ ನಮ್ಮ ನಾಡಿನ ಪ್ರತಿಭೆ ಇನ್ನಿಷ್ಟು ಉಜ್ವಲವಾದೀತು.

ಬೇಂದ್ರೆಯವರ ವಿನೋದ ವಿಡಂಬನೆಗಳು ಮೊದಲಿನಂತೆ ಇಲ್ಲಿಯೂ ಕೆಲವೊಂದು ಕೃತಿಗಳಲ್ಲಿ ಬಂದಿವೆ. 'ಬೀದಿ ನಾಯಿ ರಾಧೆ', 'ಗಿರಡಿ-ಬುರಡೀ ಅವರ ಸಾಮಾಜಿಕ ತತ್ತ್ವಜ್ಞಾನ', 'ಅಪಾರ್ಥ ಸಮೀಕ್ಷಕರಿಗೆ', 'ನಿರ್ಮಕ್ಷಿಕಾ', 'ವಾರಪತ್ರಿಕೆ' ಮೊದಲಾದ ಕವನಗಳು ಆದರ್ಶಮಯದ ದೃಷ್ಟಿಯಿಂದ ಇಂದಿನ ಅಪೂರ್ಣತೆಯನ್ನು ಅಳೆಯುತ್ತವೆ. ತೀರ ಸುಲಭವಾದ ರೀತಿಯಲ್ಲಿ ಒಂದು ಪ್ರತೀಕವನ್ನು ಆರಿಸಿಕೊಂಡು ಅದನ್ನು ಸುಂದರವಾಗಿ ನಿರೂಪಿಸುವ ಮಾದರಿಯೂ ಬೇಂದ್ರೆಯವರ ಕವನಗಳಲ್ಲಿ ದೊರೆಯುತ್ತದೆ. 'ನವಯುಗಾರಂಭ' 'ದೀಪದ ಮಲ್ಲಿ', 'ಪಾದಪದ್ಮಕೆ ಪ್ರಾರ್ಥನೆ', 'ನೃಸಿಂಹ ಪಾಹಿ ಮಾಂ' ಮೊದಲಾದ ಕವನಗಳಲ್ಲಿ ಇದನ್ನು ನಾವು ಕಾಣಬಹುದು. 'ಪ್ರತಿ ವರ್ಷದಂತೆ ಬಂತು ಶ್ರಾವಣಾ', 'ಗಾಳಿಗಳೇ' ಮೊದಲಾದ ಕವಿತೆಗಳಲ್ಲಿ ಬೇಂದ್ರೆಯವರ ಮೊದಲಿನ ಗೀತಿಕಾಮಣಿಗಳ ವಿಲಾಸವೇ ಮುಂದುವರಿದಂತೆ 'ಜಯಜಯಾ ಗಾಂಧಿಮೋಹನ', 'ಮಧ್ವ', 'ಕಾಲಿದಾಸ' ಮೊದಲಾದ ಕವಿತೆಗಳಲ್ಲಿ ಮಹಾವ್ಯಕ್ತಿಗಳ ವಿಮರ್ಶೆ ಹಾಗೂ ಉತ್ತಮ ತಿಳುವಳಿಕೆ ಇದೆ. 'ಯೌವನದ ಕನಸಿನಂತೆ' ವಚನಪುಂಜಗಳೂ 'ಕರುಳಿನ ವಚನ'ಗಳಂತೆ ಅಲ್ಲಲ್ಲಿ ಇಲ್ಲಿ ಕಣ್ಣಿಗೆ ಬೀಳುತ್ತವೆ. ನೇರವಾದ ಭಾಷೆಯಲ್ಲಿ ಮಂತ್ರದ ಮಾಂತ್ರಿಕತೆಯನ್ನು ರುದ್ರವೀಣೆಯಲ್ಲಿಯಂತೆ ಕಾಯ್ದುಕೊಂಡು ಹೋಗುವ ಭವ್ಯೋಕ್ತಿಯ ಒಂದು ಮಾದರಿ, "ಸಹಸ್ರತಂತ್ರೀ ನಿಃಸ್ವನದಂತೆ" ಎಂಬಲ್ಲಿ ಭವ್ಯತರವಾಗಿದೆ.

ಬೇಂದ್ರೆಯವರ ಕಾವ್ಯಪ್ರಕಾರಗಳ ವೈವಿಧ್ಯ ಎಷ್ಟೊಂದು ಸಂಕೀರ್ಣವಾಗಿದೆಯೆಂಬುದು ಇದರ ಮೇಲಿಂದ ಗೊತ್ತಾಗಬಹುದು. ಈ ಸಂಕೀರ್ಣತೆ ಅವರ ಇಂದಿನ ಕವನಗಳಲ್ಲಿಯೂ ತಪ್ಪದೆ ಮುಂದುವರಿದಿದೆಯೆಂಬುದು ಮೇಲಿನ ಉಲ್ಲೇಖಗಳಿಂದ ಸ್ಪಷ್ಟವಾಗಬಹುದು. ಆದರೆ ಕವಿ, ತಾನು ರಚಿಸಿದ ದಾರಿಯಲ್ಲಿಯೇ ಯಾವಾಗಲೂ ಮುಂದುವರಿಯುವದಿಲ್ಲ. ಪ್ರತಿಭಾವಂತ ಕವಿ ಯಾವಾಗಲೂ ಪ್ರಯೋಗಪ್ರಿಯ, ಪ್ರಗತಿಪರ. ಮೊದಲು ಕಾಣದಿದ್ದ ಸೊಬಗಿನ ಸಾಹಸಕ್ಕೆ ಅವನು ಮತ್ತೆ ಕೈಹಾಕುತ್ತಾನೆ. ಅನೇಕ ನವೀನ ಕಾವ್ಯಮುಖಗಳಲ್ಲಿ ಈ ಪ್ರಗತಿಯು ಕಾಣಿಸಿಕೊಳ್ಳುತ್ತದೆ. ಬೇಂದ್ರೆಯವರ 'ಅರಳು-ಮರಳಿ'ನಲ್ಲಿ ಮರುಳುವಿಕೆಯನ್ನು ಮೀರಿನಿಂತ ಅರಳುಗಳ ಚೆಂದವನ್ನೂ ನಾವೀಗ ನೋಡಬೇಕಾಗಿದೆ.

೩

'ಹೃದಯಸಮುದ್ರ', 'ಮಹಾಪ್ರಸ್ಥಾನ', 'ಇಂದ್ರಜಾಲ', 'ಚೈತ್ಯಾಲಯ', 'ಕಣಸು' ಮೊದಲಾದ ಕವನಗಳಲ್ಲಿ ನವೀನವಾದ ಅಂತರ್‌ದೃಷ್ಟಿಯೊಂದು ಫಲಿಸಿದೆ. 'ಹೃದಯಸಮುದ್ರ'ದ ಅನೇಕ ಚಮತ್ಕಾರಗಳನ್ನು ಪ್ರಜ್ಞೆಯ ಅಂತರ್‌ಲೋಕದಲ್ಲಿ ಅನುಭವಿಸಿ ಹೊಸದೊಂದು ಪ್ರತಿಮಾ ಸೃಷ್ಟಿಯನ್ನೇ ಬೇಂದ್ರೆಯವರು ಇವೇ ಮೊದಲಾದ ಕವನಗಳಲ್ಲಿ ನೀಡಿದ್ದಾರೆ. 'ಚತುರ್ಮುಖ ಸೌಂದರ್ಯ', 'ಹಸಿ ಹಂಬಲ' ಮೊದಲಾದ ಕೃತಿಗಳಲ್ಲಿ ಈ ಅಂತರ್‌ಲೋಕ ಅಲ್ಲಲ್ಲಿ ಕಾಣಿಸಿಕೊಂಡಿತ್ತು. ಆದರೆ ಅವರ ಕಾವ್ಯದಲ್ಲಿ ಅದೀಗ ಬರಿ ಒಂದೊಂದ್ಯ ಮೂರ್ತಿಯ ಆಲಯವಾಗದೆ, ಮೂರ್ತಿಶಿಲ್ಪದ ಒಂದು ಶಿಲ್ಪಶಾಲೆಯಂತೆ ಸಮೃದ್ಧವಾಗಿದೆ. ಎರಡನೆಯದಾಗಿ, 'ಇರುವೆ', 'ಅರಿವೆ', 'ಅದೇ ದೇವ', 'ಕೇಳಿರೊಂದು ಸೋಜಿಗ', 'ಪಾರ್ವತಿ ನೀನೇ ಸಲುಹು', 'ಕೇಳಿ ನುಡಿ', 'ಕಣಿಕೆ' 'ಕಿಡಿಕಿಡಿ', 'ಬಿಡಿಮುತ್ತು', 'ವೈತಂಡವಾದ' ಮೊದಲಾದ ಕವಿತೆಗಳಲ್ಲಿ ಪರಿಣತ ಜ್ಞಾನದ ಮಿತ್ರಸಮ್ಮಿತ, ತಿಳಿತಿಳಿಯಾಗಿ ನಿಂತು ಹಿತವಾಗಿ ಬುದ್ಧಿಗೆ ಬೆಳಕಾಗಿದೆ. ಮೂರನೆಯದಾಗಿ, ವೈದಿಕಛಂದದ 'ಸಪ್ತಕಲಾ', 'ಸ್ವಪ್ನನೌಕೆ' 'ಪ್ರತೀಕ್ಷಾ-ಸಮಾಧಿ' ಮೊದಲಾದ ಕವಿತೆಗಳಲ್ಲಿ ಕವಿಯು ತಾಳಲಯದ ಹೊಸತೊಂದು ಸೆಲೆಯನ್ನು ಗುರುತಿಸಿದ್ದು ನಮಗೆ ಅವಗತವಾಗುತ್ತದೆ. ಈ ನವೀನ ಛಂದಸ್ಸಿಗೆ ಅನುರೂಪವಾಗಿ ಭವ್ಯವಾದ ಒಂದು ಕಾವ್ಯವಸ್ತುವನ್ನು ಹೊಂದಿಕೊಂಡು 'ಸಪ್ತಕಲಾ' ಎಂಬ ಅವರ ಕವನವು ತಲೆಯೆತ್ತಿದೆ. 'ಹೆಣದ ಹಿಂದೆ', 'ತುತ್ತಿನ ಚೀಲ', 'ದಶಾವತಾರ', 'ಮೊದಲಗಿತ್ತಿ' ಮೊದಲಾದ ಕವನಗಳ ವಸ್ತುಗಳಲ್ಲಿ ಕಂಡುಬರುವ ಭವ್ಯತೆಯೂ ವಿಶ್ವವಿಶಾಲತೆಯೂ ಈ ಕವನದಲ್ಲಿ ರೂಪತಾಳುತ್ತವೆ. ಒಂದು ಕಾವ್ಯಶೃಂಗದಿಂದ ಅಷ್ಟೇ ಉನ್ನತವಾದ ಇನ್ನೊಂದು—ಆದರೆ ನವೀನವಾದ— ಕಾವ್ಯಶೃಂಗಕ್ಕೆ ಕವಿಯು ಹೇಗೆ ಕ್ರಮಿಸಬಲ್ಲನೆಂಬುದು 'ಸಪ್ತಕಲಾ' ಎಂಬ ಕವನದಿಂದ ನಾವು ತಿಳಿಯಬಹುದು. ನಾಲ್ಕನೆಯದಾಗಿ, 'ಸಂಖ್ಯಾಂಕಿತ' ಎಂಬ ಕವನದಲ್ಲಿ ಸಾಂಖ್ಯವನ್ನೇ ಉತ್ತಮ ಕಾವ್ಯವಾಗಿ ಪರಿವರ್ತಿಸುವ ಇನ್ನೊಂದು ಪವಾಡ ನಮ್ಮ ಕಣ್ಣಿಗೆ ಬೀಳುತ್ತದೆ. ಕಾವ್ಯವು ಅಲಂಕೃತಸೌಂದರ್ಯವಾಗಿದ್ದರೆ ಭೂಮಿತಿಯು ನಿರಾಭರಣ ಸೌಂದರ್ಯವೆಂದು ಒಬ್ಬ ಅಮೇರಿಕನ್ ಕವಿ ಸೂಚಿಸಿರುವದುಂಟು. ಈ ನಿರಾಭರಣ ಸೌಂದರ್ಯ ಸಂಖ್ಯಾಂಕಿತದಲ್ಲಿ ತಾನೆತಾನಾಗಿ ನಿಂತಿದೆ. ಐದನೆಯದಾಗಿ, 'ಊರು ಮತ್ತು ಬಾಲ್ಡಿಯಾ', 'ಮಧುವಾತಾ ಋತಾಯತೆ' ಹಾಗೂ 'ದರಿದ್ರನಾರಾಯಣ' ಎಂಬ ಕವನಗಳಲ್ಲಿ ಇನ್ನೊಂದು ಕಾವ್ಯಪ್ರಕಾರವನ್ನು ನಾವು ಕಾಣುತ್ತೇವೆ. ಇಲ್ಲಿ ಭಾವಗೀತದ ಚೆಲುವಿನೊಡನೆ ವಿಡಂಬನೆಯ ಒಗರು ಅವಿರಳವಾಗಿ ಬೆರೆತುಕೊಂಡಿದೆ.

ಬೆರಕೆ, ಶೈಲಿಯಲ್ಲಿಯೂ ಚಿತ್ರ ಸೃಷ್ಟಿಯಲ್ಲಿಯೂ ಸಹ ಕಂಡುಬರುತ್ತದೆ. ಈ ಕವನಗಳಲ್ಲಿ ಸರಿಯ ಮೇಲೆ ಸರಿಯಿದ್ದು ಒಂದು ವಿಧದ ಲಹರಿಯಿಂದ ಇನ್ನೊಂದು ಮೂಡಿನ ಲಹರಿಗೆ ಸಹಜವಾದ ಸಂಕ್ರಮಣವಾಗಿ ನವೋನವವಾದ ಒಂದು ಕಾವ್ಯ ಸಿದ್ಧಿ ಸಂಭವಿಸುತ್ತದೆ. ನವ್ಯಕಾವ್ಯದ ಮಾದರಿಯನ್ನು ಅಂಬಿಕಾತನಯದತ್ತನ ಪ್ರತಿಭೆ ಅರಗಿಸಿಕೊಂಡ ರೀತಿ ಇದು.

ತನ್ನ ಮಾನವಿಮ್ಮೆಯ ದಿಬ್ಬದ ಮೇಲೆ ಕುಳಿತು ಪ್ರತಿಭಾವಂತನಾದ ಕವಿ ಬರಿ ತನ್ನ ಹಿಂದಿನ ವಿಜಯದಶಮಿಗಳನ್ನು ನೆನಸಿಕೊಂಡು ಕಾಲಕಳೆಯುವದಿಲ್ಲ. ಬೇರೆ ದಿಗ್ವಿಜಯಗಳ ಸಾಹಸಕ್ಕೆ ಕೈಹಾಕುತ್ತಾನೆ. ಇಂತಹ ಅನೇಕ ಹೊಸ ಹೊಂಚುಗಳನ್ನು ಈ ಸಂಗ್ರಹದಲ್ಲಿ ನಾವು ಕಾಣುತ್ತೇವೆ.

೪

ಕವಿಯ ಜೀವನದೃಷ್ಟಿ ಕಾಲಾಂತರದಲ್ಲಿ ಹೇಗೆ ವಿಕಾಸಗೊಂಡಿದೆ ಎಂಬುದನ್ನು ನಾವಿಲ್ಲಿ ಕಾಣಬಹುದು. ಕವಿಯ ಶ್ರದ್ಧೆ ಇನ್ನಿಷ್ಟು ಆಳವಾಗಿ ಬೆಳೆದು ನಿರ್ಭರತೆಯನ್ನು ಪಡೆದು ಇಲ್ಲಿಯ ಅನೇಕ ಕವನಗಳಲ್ಲಿ ಗುಡಿಗಟ್ಟಿದೆ.

“ ಮಾರ್ತಂಡಮಂಡಲದ ಅಂಡವನು ಪುಟಗೊಳಿಸಿ
ಹಂಸಜಾತಿಯ ಜೀವ-ಜಾತಿ ತೆರೆದವಳು ”

ಎಂದು ಅವರು ಮಹಾಮಾತೆಯುಪರನ್ನು ಸಂಬೋಧಿಸುತ್ತಾರೆ.

“ ವೇದಕ್ಕು ಹಿರಿದು ವಚನಕ್ಕು ಕಿರಿದು
ನುಡಿಕಟ್ಟ ಒಟ್ಟಬಹುದು ”

“ ಆ ಇರವನಿರದ ಅರಿವಾಗದೇಯೆ
ಶ್ರುತಿಯೆಂತು ಹುಟ್ಟಲಹುದು ” —ಎಂದು ಅವರು ದಿವ್ಯಜೀವನ

ದತ್ತ ಹೊರಳಿದ್ದಾರೆ. ಪ್ರಕೃತಿಪುರುಷರ ಆಟದ ರಹಸ್ಯವನ್ನು ತಿಳಿದು ಗಿರಿ ಶಿಖರದ ಕಡೆಗೆ ತಲೆಯೆತ್ತಿದ್ದಾರೆ. ಜೀವದೀ ಶತ್ತಿಯಲ್ಲಿ ದೇವನೆಂಬ ಹಕ್ಕಿ ಕಾದುಕೊಂಡು ಕುಳಿತಿದೆಯೆಂಬದನ್ನು ಅವರು ಅರಿತಿದ್ದಾರೆ. ‘ ಬಲವೆಲ್ಲ ನಂಬಿಗೆಯಲ್ಲಿ ನೆಲೆಯುವ ’ ದೆಂಬ ಮಾತು ಅವರ ಅಂತರಾಳದಲ್ಲಿ ಮೂಡಿದೆ.

“ ತಾನಿನೊಂದು ತಾನಿನಂತೆ
ಅವನು ನೀನು ನಾನೊ ” — ಎಂದು ತಾನು ಎಂಬ ಸರ್ವನಾಮ

ದಲ್ಲಿಯೂ ಅವರು ವೇದಾಂತದ ಕಾವ್ಯವನ್ನು ಇಳಿಸಿದ್ದಾರೆ.

“ ಯಾವ ಪ್ರೀತಿಗಿದನಾರು ಹಡೆದರೋ
ಸೃಷ್ಟಿಕರ್ತ ಬಲ್ಲ ” — ಎಂದು ಅವರು ಸೃಷ್ಟಿಯ ಗೂಢವನ್ನು

ಕುರಿತು ಧೇನಿಸುತ್ತಾರೆ. ಜಗತ್ತಿಗೆ ಹೊಸದೊಂದು ಉಷಃಕಾಲ ಬಂದಿದೆಯೆಂಬ ಅವರ ಶ್ರದ್ಧೆ ಅಚಲವಾಗಿದೆ. ನಾದದಲ್ಲಿ ಛಂದವಡಗಿರುವಂತೆ ಛಂದದಲ್ಲಿ ಜೀವವೂ, ಜೀವದಲ್ಲಿ ದೇವನೂ ಅಡಗಿದ್ದಾರೆ.

" ಅದರದರ ಕಾಲಕ್ಕೆ ಅದರದರ ಫಲವಹುದು " ಎಂಬ ತಿಳಿವು ಅವರ ಅಂತರಾಳಕ್ಕೆ ಒಂದು ಸಂತೃಪ್ತಿಯನ್ನು ತಂದಿದೆ.

" ಕಡ್ಡಿಯಲುಗದು ಆಕಸ್ಮಾತ್ತಿನಿಂದ
ಗುಡ್ಡ ಉರುಳೀತೇನು ಗುಂಡಿನಿಂದ " — ಎಂದು ಗಾಂಧೀಜಿಯವರ ಮರಣವಾರ್ತೆಯನ್ನು ಕೇಳಿದಾಗ, ಘಟನೆಗಳು ದೇವಸಂಕಲ್ಪ ಬಾಹಿರವಲ್ಲವೆಂದು ಅವರು ಸಾರುತ್ತಾರೆ.

" ಶಕ್ತಿಯಿಲ್ಲದ ಶಿವವು ಹುಸಿಯ ಶ್ರವವು " ಎಂದು ಶಿವಗರ್ಭಶಕ್ತಿಯನ್ನೂ ಅವರು ಆಹ್ವಾನಿಸುತ್ತಾರೆ.

ಸಮಾಜದ ವೈಷಮ್ಯಗಳನ್ನು ಕಂಡಾಗ ಕವಿಯ ಅಂತಃಕರಣ ಕರಗಿ ನೀರಾಗುವದುಂಟು.

" ಅನ್ನ ದಾಟಿ, ಮುಪ್ಪ ಮೀರಿ, ಸತ್ಯ ಸೇರಿದಾಗ ಆತ್ಮದ ಉದಯ " ಎಂದು ಹೇಳಿ ಈ ಕೆಳಗಿನ ಸತ್ಯಗಳನ್ನು ಸಹ ಸಮಾಜವು ಅರಗಿಸಿಕೊಳ್ಳದಿರುವದನ್ನು ನೋಡಿ ಕವಿಯು ವಿಹ್ವಲನಾಗುತ್ತಾನೆ.

" ಕಾಯಕವು ಕೈಲಾಸ, ಭಕ್ತರಿಗೆ ಉಪವಾಸ
ಶರಣರಿಗೆ ವನವಾಸ ಉಳಿವಿಹಾದಿ " — ಎಂದು ಸಮಾಜದ ಮೌಢ್ಯವನ್ನು ಕಂಡು ಅವರು ಸಂತಪ್ತರಾಗುತ್ತಾರೆ. ಜಗದಂಬೆಯನ್ನು ಈಚಲ ಮರದಮ್ಮನಾಗಿಸಿ ಜನ ಮೊರೆಹೋಗುವುದನ್ನು ಕಂಡು ಅವರು ಅಸಹ್ಯಪಟ್ಟುಕೊಳ್ಳುತ್ತಾರೆ.

" ತಾಳಿದವ ಬಾಳ್ಯಾನು, ಬದುಕಿದವ ಉಂಡಾನು
ಸರ್ವೋದಯದ ಕೊನೆಯ ಪ್ರಸ್ಥದೂಟ " — ಎಂದು ಇಂದಿನ ಯೋಜನೆಗಳ ಸಫಲತೆಗಳನ್ನು ಅವರು ಬಲವಾಗಿ ಶಂಕಿಸುತ್ತಾರೆ.

" ಇದ್ದ ಜಗಳ ಸಾಲವೆಂದು
ಹಳೆದ ಹಡ್ಡಿ ತರುವರು " — ಎಂದು ಇಲ್ಲದ ಸಲ್ಲದ ಇತಿಹಾಸವನ್ನು ಅಗದು ತೆಗೆಯುವ ಸಂಶೋಧಕರ ಮೇಲೆ ಅವರು ಹರಿಹಾಯುತ್ತಾರೆ. ಇಂದಿನ ಮಾನವಬುದ್ಧಿಯ ಕುಣಿತ ಕರಡಿಕುಣಿತದಂತೆ ಅನ್ನದ ದಾಸ್ಯದಲ್ಲಿದೆ.

ಆದರೆ ಒಂದು ಬಲವಾದ ಶ್ರದ್ಧೆ ಈ ವೈಷಮ್ಯಗಳೊಳಗಿಂದ ಸಹ ಕವಿಗೆ ದಾರಿಯನ್ನು ತೋರಿದೆ. ಲೋಕರಾಜ್ಯ ಉದಯವಾಗಿದೆ. ನವಯುಗ ಆರಂಭ ವಾಗಿದೆ. ಭಾರತಹುಣ್ಣಿಮೆ ಬಂದಿದೆ. ಮಧುವಾತಗಳು ಬೀಸಲಾರಂಭಿಸಿವೆ. ಆಗೀಗ ಯುದ್ಧ ಮನೆಯ ವರೆಗೆ ಬಂದರೂ, "ನರಮನುಷ್ಯ ಒಂದೆ ಜಾತಿ ಎಲ್ಲ ಜನಕೆ ಒಂದೆ ನೀತಿ" ಎಂಬ ನವ್ಯಜೀವನ ಬರಲಿರುವದೆಂಬುದನ್ನು ಅವರು ನಂಬಿದ್ದಾರೆ. ಅಷ್ಟದಳವಾದ ಕನ್ನಡದ ಕಮಳ ಅರಳತೊಡಗಿದೆ, ಕನ್ನಡದ ಪಾವನ ಪರಂಪರೆ ಮಾತೃಭೃತ್ಯನಾದ ಕನ್ನಡದ ಮಗುವನ್ನು ಔತಣಿಸಿದೆ. ಸಿರಿಗನ್ನಡ ಭಾರತಿ ಮತ್ತೆ ತಲೆಯೆತ್ತಿದ್ದಾಳೆ.

"ಜಿನ ಹರಿ ಅಲ್ಲಾ ಶಿವನೇ ಬಲ್ಲಾ
ಒಬ್ಬನಲ್ಲದೇ ಎರಡಿಲ್ಲಾ"— ಎಂಬ ಮಾತು ಜನರ ಚಿತ್ತಭಿತ್ತಿ ಯಲ್ಲಾದರೂ ಮೂಡತೊಡಗಿದೆ. ಹೀಗಾಗಿ ಸಪ್ತಕಲೆಗಳು ಸಮೃದ್ಧಿಯನ್ನು ಸಂಖ್ಯಾಂಕಿತದಲ್ಲಿ ಉಕ್ತವಾದ ಅಮೃತ ತತ್ತ್ವವನ್ನು, ಜೀವನದಲ್ಲಿ ತರದೆ ಮಾಣ ದೆಂದು ಕವಿಯ ವಿಶ್ವಾಸವಾಗಿದೆ.

"ಸಿಂಹಮುಖಕ್ಕಿದೆ ನವಿಲಿನ ಸೋಗೆ
ಶಕ್ತಿಶಾರದೆಯ ಮೇಳದ ಹಾಗೆ!" — ಎಂದು ಒಂದು ಹೊಸ ಮೇಳವನ್ನು ಕಂಡು ಕವಿಯು ಆನಂದಿಸುತ್ತಾನೆ.

೫

ಬೇಂದ್ರೆಯವರ ಶಬ್ದಸೃಷ್ಟಿಯಲ್ಲಿ ಕೆಲವೊಂದು ಚಮತ್ಕಾರಗಳು ಜರುಗು ತ್ತವೆ. ಅವುಗಳನ್ನೆಲ್ಲ ಇಲ್ಲಿ ಕ್ರೋಢೀಕರಿಸುವದಾಗದಿದ್ದರೂ ದಿಗ್ದರ್ಶನ ಸಾಧ್ಯ. ಶ್ಲೇಷವಿಲ್ಲದ ಭಾಷೆಯೇ ಅವರಿಗಿಲ್ಲ. 'ಸಾವಿರದ ಮನೆ' ಎಂದಾಗ ಸಾವಿರವೆಂಬ ಸಂಖ್ಯಾವಾಚಕದೊಡನೆ ಸಾವು + ಇರದ ಎಂಬ ಸಂಧಿಯು ನಮ್ಮನ್ನು ಸಂಧಿಸು ತ್ತದೆ. ಪ್ರಾಸದ ಪ್ರೀತಿ ಶ್ಲೇಷದೊಡನೆ ಸೇರಿಕೊಂಡು ಪದ ಗುಂಫಗಳನ್ನು ಕಟ್ಟು ತ್ತವೆ. ಎಲ್ಲೆಲ್ಲಿಯ ಕಥೆಗಳೋ ಸಂಬಂಧಗಳೋ ಬಂದು-ಬೇಂದ್ರೆಯವರನ್ನು ಆಕರ್ಷಿ ಸುವ ವಿಷಯವಿಲ್ಲ— ಶಬ್ದಗಳ ಆವರಣಗಳಾಗುತ್ತವೆ. ನಮಗೆ ಹೊಳೆಯುವ ಅರ್ಥಕ್ಕಿಂತ ಬೇಂದ್ರೆಯವರು ಹೇಳುವ ಅರ್ಥ, ವಿಶಾಲವಾದುದು. ಅದನ್ನು ಕೇಳಿದ ಮೇಲೆ, ಇದು ನಮಗೇಕೆ ಹೊಳೆಯಲಿಲ್ಲ? ಎಂದು ನಾವು ವಿಹ್ವಲರಾಗುತ್ತೇವೆ. ಹೀಗೆ ಅವರ ಶಬ್ದಗಳಿಗೆ ಪ್ರತಿಮಾಮಯತೆಯಲ್ಲಿದೆ ಒಂದು ಬೌದ್ಧಿಕ ಉತ್ಕರ್ಷವಿದೆ. ಅದನ್ನು ತಿಳಿಯದೆ ಅವರ ಕೃತಿಗಳು ಪೂರ್ಣವಾಗಿ ತಿಳಿಯಲಾರವು. ಸಂಸ್ಕೃತವಲ್ಲಿಯ

ಎಲ್ಲ ಶಾಸ್ತ್ರಗಳನ್ನೂ, ಸಿದ್ಧಾಂತಗಳನ್ನೂ ಅರಗಿಸಿಕೊಂಡು ಆ ಭಾಷೆಯೊಳಗಿನ ಸಾಂಕೇತಿಕ ಶಬ್ದಗಳನ್ನು ಒಂದು ಶಾಸ್ತ್ರದಿಂದ ಇನ್ನೊಂದು ಶಾಸ್ತ್ರಕ್ಕೆ ಹೋಗುತ್ತ ಅನಾಯಾಸವಾಗಿ ಅವರು ಉಪಯೋಗಿಸುತ್ತಾರೆ. ಮಿಲ್ಟನ್ನನ ಪಾಂಡಿತ್ಯಪ್ರಚುರ ಭಾಷೆಯಂತೆ ಬೇಂದ್ರೆಯವರ ಶೈಲಿಯ ವಿಶಿಷ್ಟತೆಯಿದೆ.

ಇದನ್ನೇ ಅವರ ಕಾವ್ಯರಚನಾಕ್ರಮದಲ್ಲಿಯೂ ನಾವು ಕಾಣುತ್ತೇವೆ. **ಮಧುವಾತಾ ಋತಾಯತೇ** ಮೊದಲಾದ ಕವಿತೆಗಳನ್ನು ಓದುವದೆಂದರೆ ಒಂದು ಆಳದಿಂದ ಅದರ ಕೆಳಗಿನಾಳಕ್ಕೆ ಹೋಗುವಂತೆ ನಮಗೆ ಭಾಸವಾಗುತ್ತದೆ. ಶಬ್ದಗಳು ಚಿನ್ನದ ಇಟ್ಟಿಗೆಗಳಾಗುವಂತೆ ರಚನಾಕ್ರಮ ಅದ್ಭುತವಾಸ್ತುಶಿಲ್ಪದ ಒಂದು ಮಂದಿರವಾಗುತ್ತದೆ. ಇದು ಹೊಳೆಯದೆ ಕಾವ್ಯದ ಪೂರ್ಣ ರಸವಂತಿಕೆ ನಮ್ಮದಾಗಲಾರದು. **ಮಧುವಾತಾ**ದ ಮೊದಲನೆಯ ಭಾಗದಲ್ಲಿ ಕಾವ್ಯದ ಆದರ್ಶವನ್ನು ಕುರಿತು ಅವರು ಮಾತನಾಡುತ್ತಾರೆ. ಅದ್ಭುತದ ಉದ್ಭವ, ಅದನ್ನು ಭಾಷಾಂತರಿಸುವ ಭಾವ, ಹೊಸ ಒಸಗೆಗನುವಾಗಿ ವೇಷಾಂತರಿಸುವ ಶೈಲಿ, ಕರ್ಮನಟಿಯ ಪದಹತಿಗೇಳುವ ಛಂದದ ಬಳ್ಳಿ— ಹೀಗಿದೆ ಕಾವ್ಯದ ಉಗಮ ಹಾಗು ವಿಕಾಸ. ಬರಿವಿನಲ್ಲಿ ಹೀಗೆ ಅರಿವು ಕಣ್ತೆರೆಯಲು ಇರವು ಹಿಗ್ಗಿನ ಹರವಾಗುತ್ತದೆ. ಹೊಸ ಕಾಲ ಈಗ ಬಂದಿದೆ. ಮಧು ಕ್ಷರಂತಿ ಸಿಂಧವಃ !

ಎರಡನೆಯ ಭಾಗದಲ್ಲಿ ಈ ಸೂತ್ರವನ್ನು ತಪ್ಪಿ ನಡೆದ ಜೀವನ ಹೇಗೆ ಅವ್ಯವಸ್ಥಿತವಾಗಿದೆಯೆಂಬುದನ್ನು ಅವರು ತೋರಿಸುತ್ತಾರೆ. ಈ ವಸಂತಕಾಲದಲ್ಲಿ ಮಕ್ಷಿಕಾಮಾಲೆ ನಡೆದಿದೆ ನಿಜ. ಆದರೆ ಯಾವ ಹುಟ್ಟಿಗೆ ? ನವ್ಯಕಾವ್ಯದ ಶೈಲಿಯನ್ನು ಬಳಸಿಕೊಂಡು ಇಂದಿನ ಜೀವನದಲ್ಲಿದ್ದ ಅವ್ಯವಸ್ಥೆಯನ್ನೂ, ನೀರಸತೆಯನ್ನೂ ಬಣ್ಣಿಸುತ್ತಾರೆ. ಇಂತಹ ಗೊಂದಲವನ್ನು ಇಂತಹ ಶೈಲಿಯಲ್ಲಿಯೇ ಮೂಡಿಸುವದು ಸಾಧ್ಯ.

ಈ ಫಾಲ್ಗುಣ ಹೋಗಿ ಚೈತ್ರೋದಯ ಬರಲಿದೆ. ತೆರೆಮರೆಯ ಕೆಳಗೆ ಗಂಭೀರ ಭಾವಸಿಂಧುವಿದೆ. ಅದರ ಉಪಾಸನೆಯೇ ಮುಖ್ಯ.

> “ ಅನಿರುದ್ಧ ಶಾಂತಿ ತಳಹದಿಯು ಅದುವೆ ಸಾಕ್ಷಿತ್ವ ಪ್ರಾಣಲಿಂಗ
> ಪ್ರದ್ಯುಮ್ನಕೃತಿಯು ಮೂಡೀತು ಮುಂದೆ ನಿಃಸಂಗ ಶರಣರಂಗ.
> ಸಂಕರ್ಷಣಾಖ್ಯ ಜಯದೇವ ತರುವ ಮಹಲಿಂಗ ಭಾಗಭೋಗಿ.
> ಶ್ರೀ ವಾಸುದೇವ ಮಾಯಾವಿ ಬರಲು ಲೀಲಾವತಾರಿಯಾಗಿ. ”

ಎಂದು ಅವರು ಬೇರೆ ಬೇರೆ ಮತಗಳ ತಿರುಳಿನ ಸಮನ್ವಯದ ದ್ವಾರವಾಗಿ ಜೀವನದ ಮೂಲಸೂತ್ರದೆಡೆಗೆ ನಮ್ಮನ್ನು ಕರೆದೊಯ್ಯುತ್ತಾರೆ. ಅವರ ಕವಿತೆಗಳಿಗೆ ಪ್ರತಿಮೆಗಳ ಸೂಕ್ಷ್ಮದೇಹವಿದ್ದಂತೆ ತತ್ತ್ವದ ಸಮುಕಟ್ಟೂ ಇದೆ.

ಇಲ್ಲಿಯ ಕಾವ್ಯಸೃಷ್ಟಿಯ ಸ್ಥೂಲನಕಾಶವೊಂದನ್ನು ಇಲ್ಲಿ ತೆಗೆದಿದ್ದೇನೆ. ಇದು ಒಂದು ನಕಾಶ ಮಾತ್ರ. ಈ ಕಾವ್ಯದ ಮಲೆನಾಡಿನಲ್ಲಿ ಸಂಚರಿಸಲು ಇಲ್ಲವೆ ವಿಹರಿಸಲು ಇದರಿಂದ ಅಲ್ಪ ಸಹಾಯ ದೊರೆತರೆ ಈ ಮುನ್‌ನುಡಿಯ ಕಾರ್ಯ ಮುಗಿದಂತೆ.

§ § § §

" ಅರಳು–ಮರಳು " ಮುನ್ನುಡಿಯಿಂದ.

೨೩

# ಬೇಂದ್ರೆಯವರ ಸುನೀತಗಳು

ಜಿ. ಎಂ. ಹೆಗಡೆ

ಹೊಸಗನ್ನಡ ಕಾವ್ಯದ ಚರಿತ್ರೆಯಲ್ಲಿ, ಯಾವ ನವೋದಯ ಭಾವಗೀತಕಾರನೂ ಮಾಡದಷ್ಟು ವೈವಿಧ್ಯಪೂರ್ಣ ಛಂದಸ್ಸಿನ ಪ್ರಯೋಗವನ್ನು ಶ್ರೀ. ದ. ರಾ. ಬೇಂದ್ರೆಯವರು ಮಾಡಿದ್ದಾರೆ— ಎಂಬುದು ಅವರ ಕಾವ್ಯವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದವರೆಲ್ಲರ ಅಭಿಪ್ರಾಯವಾಗಿದೆ. ಸಂಸ್ಕೃತದ ವೈದಿಕ ಛಂದಸ್ಸಿನಿಂದ ಹಿಡಿದು, ಕನ್ನಡದ ಅಕ್ಷರವೃತ್ತ, ಮಾತ್ರಾವೃತ್ತಗಳನ್ನೂ ದಾಟಿ, ಆಂಗ್ಲ ಛಂದಸ್ಸಿನ ವೈವಿಧ್ಯದ ವರೆಗೆ ಅದರ ವ್ಯಾಪ್ತಿ ಇದೆ. ಸಾಮಾನ್ಯವಾಗಿ " ಪದ್ಯಗಳ ಲಯದ ಅಭ್ಯಾಸವೇ ಛಂದಸ್ಸು ''—ಎಂದು ಹೇಳುವುದಾದರೆ, ಅದು ಬೇಂದ್ರೆಕಾವ್ಯಕ್ಕೆ ಸಂಪೂರ್ಣವಾಗಿ ಅನ್ವಯಿಸುತ್ತದೆ. ಅವರ ಕವಿತೆಗಳಲ್ಲಿಯ ನಾದ ತರಂಗಗಳು, ಲಯವಿನ್ಯಾಸದ ವೈವಿಧ್ಯ, ಭಾವದ ಬೆಡಗು, ಗೀತಿ ಕಾವ್ಯದ ಮೃದು-ಮಧುರವಾದ ಪದ-ಪದ್ಯ ಬಂಧಗಳಿಂದುಂಟಾಗುವ ನಾನಾತೆರನಾದ ಪ್ರಾಸವಿಧಾನ-ಮುಂತಾದ ಗುಣಗಳಿಂದ ಕೂಡಿದ ಬೇಂದ್ರೆ ಕಾವ್ಯಕ್ಕೆ ಹೊಸಗನ್ನಡ ಛಂದಸ್ಸಿನ ಬೆಳವಣಿಗೆಯಲ್ಲಿಯೂ ಪ್ರಧಾನವಾದ ಸ್ಥಾನ ಸಹಜವಾಗಿ ಸಲ್ಲುತ್ತದೆ.[1]

ನವೀನ ಛಂದಸ್ಸಿನ ಬಳಕೆ ಹಾಗು ಪ್ರಯೋಗಗಳಲ್ಲಿ ಬೇಂದ್ರೆಯವರು ಅನೇಕ ಕವಿಗಳಿಗೆ ಮಾರ್ಗದರ್ಶಕರಾಗಿದ್ದಾರೆ. ನವೋದಯ ಕನ್ನಡಕವಿಗಳು ಬಳಸಿದ ಸರಳ ರಗಳೆ, ಪ್ರಗಾಥ, ಮುಕ್ತಛಂದ, ಕಥನ ಕವನ-ಮುಂತಾದ ಕಾವ್ಯ ರೂಪಗಳಲ್ಲಿ ಸುನೀತಗಳಿಗೆ ವಿಶೇಷವಾದ ಪರಂಪರೆಯಿದೆ. ನವೋದಯ ಕನ್ನಡ ಕಾವ್ಯ ಪರಂಪರೆಗೆ ಆಂಗ್ಲ ಸಾಹಿತ್ಯದಿಂದ ಪ್ರೇರಿತವಾದ " ಸುನೀತ '' ಬಂಧದಲ್ಲಿಯೂ

---

1 ಬಹು ಹಿಂದೆಯೇ " ಹೊಸ ಛಂದಸ್ಸಿನ ಲಯಗಳು " (೧೯೪೧) [ " ಸಮಾಲೋಕನ " ಮೈಸೂರು P. ೧೮೯. ] ಎಂಬ ಲೇಖನದಲ್ಲಿ ಕನ್ನಡದ ಪ್ರಸಿದ್ಧ ವಿದ್ವಾಂಸರಾದ ತೀ. ನಂ. ಶ್ರೀ ಯವರು ಬೇಂದ್ರೆಯವರ ಕವಿತೆಗಳ ಛಂದೋಲಯದ ಘನತೆಯನ್ನು ವಿಶ್ಲೇಷಿಸಿದ್ದು ಪರಿಶೀಲನಾರ್ಹವಾಗಿದೆ.

ಬೇಂದ್ರೆಯವರು ಸಾರ್ಥಕವಾದ ಉನ್ನತ ಕವನಗಳನ್ನು ರಚಿಸಿದ್ದಾರೆ. ಹೊಸಗನ್ನಡ ಕಾವ್ಯಮಾರ್ಗವನ್ನು ಹಲವು ರೀತಿಗಳಲ್ಲಿ ಹರವಾಗಿಸಿದ ಬೇಂದ್ರೆಯವರ ಸುನೀತಗಳು ಇಂದಿಗೂ ಅನನ್ಯವಾಗಿವೆ.[1] ಬೇಂದ್ರೆಯವರ ಸುನೀತಗಳ ಸ್ಥೂಲ ಸಮೀಕ್ಷೆಯೇ ಈ ಲೇಖನದ ಉದ್ದೇಶವಾಗಿದೆ.

---

1 ಇಂಗ್ಲೀಷಿನ ರಮ್ಯ ಸಂಪ್ರದಾಯದಲ್ಲಿ ಬಳಕೆಯಲ್ಲಿರುವ "ಸಾನೆಟ್ಟ"ನ್ನು ಕನ್ನಡ ಕವಿತೆಗಳಲ್ಲಿ ಮೊದಲಿಗೆ ಪ್ರಚಾರಕ್ಕೆ ತಂದ ಎಂ. ಗೋವಿಂದ ಪೈಯವರು ತಮ್ಮ ಹದಿನಾಲ್ಕು ಸಾಲಿನ ಹೊಸ ಕವಿತೆಯ ಬಂಧಕ್ಕೆ "ಚತುರ್ದಶ ಪದ" (೧೯೧೬) ಎಂದು ಹೆಸರಿಟ್ಟರೆ, ಮಾಸ್ತಿಯವರು ಅಚ್ಚಗನ್ನಡ ನುಡಿ ಸಂಪತ್ತಿಗೆ ಎರಕ ಹೊಯ್ಯುವ ತಮ್ಮ ಮನೋಧರ್ಮಕ್ಕನುಗುಣವಾಗಿ "ಸಾನೆಟ್ಟ"ನ್ನು "ಸುನೀತ" (೧೯೩೪) ವೆಂದು ಕರೆದರೆ ಬೇಂದ್ರೆಯವರು ೮ + ೬ = ೧೪ ಚರಣಸಂಖ್ಯೆಯ "ಸಾನೆಟ್"ನ್ನು "ಅಷ್ಟಷಟ್ಪದಿ" ಎಂದು ಹೆಸರಿಸಿದ್ದಾರೆ. ಇದು ಬಹುಶಃ ಏಕೆ, ಖಚಿತವಾಗಿ ಇಟಾಲಿಯನ್ ಮಾದರಿಯ ಸಾನೆಟ್ಟನ್ನು ಲಕ್ಷ್ಯದಲ್ಲಿರಿಸಿಕೊಂಡು ಹೇಳಿದ್ದೆಂದು ತೋರುತ್ತದೆ. ಇದನ್ನು ಕುರಿತು ಪ್ರೊ. ಎಸ್. ಅನಂತನಾರಾಯಣರು– 'ಆದರೆ ಈ ಎಂಟು ಆ ಆರು ಸಾಲುಗಳ ವಿಭಜನೆ ಕೂಡಾ ಎಲ್ಲಾ ಸಾನೆಟ್ಟುಗಳಿಗೆ ಅನ್ವಯಿಸುವದಿಲ್ಲವಾದುದರಿಂದ 'ಅಷ್ಟಷಟ್ಪದಿ' ಎನ್ನುವ ಹೆಸರು ಅಷ್ಟಾಗಿ ಒಪ್ಪುವ ಹೆಸರಲ್ಲ, ಸರಿಯಾದುದಲ್ಲವೆಂದು ನನಗೆ ತೋರುತ್ತದೆ. .... .... ಈ ಸಾನೆಟ್ ರೂಪ ಇಂಗ್ಲೀಷಿಗೆ ಬಂದಾಗ ಇಟಾಲಿಯನ್‌ನಿಂದ ಈ ಹೆಸರಿನೊಂದಿಗೇ ಬಂದಿತು. ಆದ್ದರಿಂದ ನಾವೂ "ಸಾನೆಟ್" ಎಂಬ ಹೆಸರನ್ನೇ ಬಳಸಲು ಯಾವ ಅಡ್ಡಿಯೂ ಇಲ್ಲ." ಎಂದು ಹೇಳಿದ್ದಾರೆ. [ "ಸಾನೆಟ್ ಅಥವಾ ಅಷ್ಟಷಟ್ಪದಿ" "ಅಭಿವಂದನೆ" ಮೈಸೂರು P. ೬೨-೯೩, (೧೯೫೬). ] ಆದರೆ ಬೇಂದ್ರೆಯವರು ಅಷ್ಟಷಟ್ಪದಿಯಂತೆ ಸಾನೆಟ್ಟಿನ ಇನ್ನಿತರ ರೂಪಗಳಲ್ಲಿಯೂ ಕವಿತೆಗಳನ್ನು ರಚಿಸಿದ್ದಾರೆ. ಸೀಸಪದ್ಯಗಳಿಂದ, ಬಿಡಿ ಚೌಪದಿಗಳಿಂದ ಸಾನೆಟ್ಟಿನ ಶಿಲ್ಪ ಕೊಡಲು ಕನ್ನಡ ಕವಿಗಳು ಪ್ರಯತ್ನಿಸಿದ್ದೂ ಉಂಟು. ಹೀಗೆ ಸಾನೆಟ್ಟು ಕನ್ನಡದಲ್ಲಿ ವಿವಿಧ ರೂಪಗಳಿಂದ ಮೈತಳೆದಿರುವದರಿಂದ ಅಷ್ಟಷಟ್ಪದಿ ಸಾನೆಟ್ಟಿನ ಒಂದು ಪ್ರಕಾರವಾಗುತ್ತದೆ ಅಷ್ಟೆ. ಇಂಗ್ಲೀಷಿನ ಸಾನೆಟ್ಟಿಗೂ ಕನ್ನಡದ ಸುನೀತಕ್ಕೂ ಗಣಸಂಯೋಜನೆ ಪ್ರಾಸವಿನ್ಯಾಸ, ಲಯವೈವಿಧ್ಯ ಇವುಗಳಿಂದ ಸಾಕಷ್ಟು ಅಂತರವಿದೆ. ಆದುದರಿಂದ ಮಾಸ್ತಿಯವರು ಕೊಟ್ಟ ಕನ್ನಡದ ಜಾಯಮಾನಕ್ಕೆ ಒಪ್ಪುವ "ಸುನೀತ"ವೆಂಬ ಹೆಸರೇ ಹೆಚ್ಚು ಪ್ರಯೋಗಾರ್ಹವಾದುದು ಎಂಬುದು ನಮ್ಮ ಅಭಿಪ್ರಾಯವಾಗಿದೆ. ಅದಕ್ಕಾಗಿ ಈ ಲೇಖನದಲ್ಲಿ ಅದನ್ನೇ ಉದ್ದಕ್ಕೂ ಬಳಸಲಾಗಿದೆ. ಕನ್ನಡದಲ್ಲಿ ಬೇಂದ್ರೆಯವರಂತೆ ಗೋವಿಂದ ಪೈ (ಗಿಳಿವಿಂಡು), ಮಾಸ್ತಿ (ಮಲಾರ), ಕುವೆಂಪು (ಕೃತ್ತಿಕೆ), ಪು. ತಿ. ನ. (ಹಣತೆ) ಜಿ. ಎಸ್. ಶಿವರುದ್ರಪ್ಪ (ಸಾಮಗಾನ, ದೇವಶಿಲ್ಪ) ಚೆನ್ನವೀರ ಕಣವಿ (ಎರಡುದಡ). ಮುಂತಾದ ಕವಿಗಳು ತಮ್ಮ ಕೃತಿಗಳಲ್ಲಿ ಸುನೀತಗಳನ್ನು ಸೃಷ್ಟಿಸಿ ಕನ್ನಡ ಕಾವ್ಯ ಕಣಜವನ್ನೂ ತುಂಬಿದ್ದಾರೆ.

ಈ ಶತಮಾನದ ಮೊದಲ ದಿನಗಳಲ್ಲಿ ಕನ್ನಡ ಕಾವ್ಯಪ್ರವಾಹಕ್ಕೆ ಸುನೀತಗಳು ಇಂಗ್ಲೀಷಿನಿಂದ ಬಂದು, ನವೋದಯ ಕವಿಗಳಿಗೆ ನೂತನ ಮಾರ್ಗವನ್ನು ಹಾಕಿಕೊಟ್ಟರೂ ಕಾಲಕಳೆದಂತೆ ಅದು ತನ್ನದೇ ಆದ ವೈಶಿಷ್ಟ್ಯವನ್ನು ಪಡೆದುಕೊಂಡಿತು. ಅಂದಿನ ಕವಿಗಳು ೧೪ ಸಾಲಿನ ಸೀಸಪದ್ಯ, ನಾಲ್ಕು ಬಿಡಿ ಚೌಪದಿಗಳ ರಚನೆ, ಮೂರು ಚೌಪದಿಗಳಲ್ಲಿ ಸುನೀತಕ್ಕೆ ಜೀವತುಂಬಲು ಹವಣಿಸಿದ ಕಾಲದಲ್ಲಿ ಬೇಂದ್ರೆಯವರು "ಅಷ್ಟಷಟ್ಪದಿ"ಯೆಂಬ ತಮ್ಮ ಕವಿತೆಯ ಮೂಲಕ ಸುನೀತದ ಲಕ್ಷಣವಿನ್ಯಾಸದ ಪರಿಚಯವನ್ನು ಸಮಕಾಲೀನ ಕನ್ನಡ ಕವಿಗಳಿಗೆ ಪರಿಚಯಿಸಲು ಪ್ರಯತ್ನಿಸಿದಂತಿದೆ. ಸುನೀತದ ಸ್ವರೂಪವಿನ್ಯಾಸದ ಮೇಲೆ ಬರೆದ ಬೇಂದ್ರೆಯವರ ಈ "ಅಷ್ಟಷಟ್ಪದಿ"[1] (ಇಟಾಲಿಯನ್ ಮಾದರಿಯ ಸುನೀತ) ಕನ್ನಡದ ಕಾವ್ಯಸಂಪ್ರದಾಯವನ್ನು ಪರಿಚಯಿಸುವ ಮಹತ್ತ್ವದ ಕವಿತೆಗಳಲ್ಲಿ ಒಂದಾಗಿದೆ. ಸುನೀತದ ಬಗೆಗಿರುವ ಕವಿಕಲ್ಪನೆಯೂ ಸ್ಪಷ್ಟವಾಗಿದೆ.

> ಅಷ್ಟಷಟ್ಪದಿಯಲ್ಲಿ ಉಯ್ಯಾಲೆಯಾಡುತಿದೆ
> ಕೌತುಕದ ಬಗೆ; ಹಾಗೆ ಇದು, ಹೀಗೆ ಇದು, ಎನುತ
> ಜೀಕುಜೀಕಿನ ವಿಲಾಸದಲಿ ತನ್ಮಯವಾಗಿ,
> ಸಂಶಯವೆ ಸಿಂಗಾರವಡೆದು ಸ್ವಚ್ಛಂದದಲಿ
> ಬೀರಿದುದೆ ನೋಟ, ಹಾರಿದುದೆ ಹುಬ್ಬೆನುವಂತೆ
> ಕುಣಿಸುತಿದೆ ಅಂಗಾಂಗ; ಹೃದ್ಯ ಚಿತ್ತತರಂಗ
> ಮಿಂಚಿನಂತುಲ್ಲಟಿಸಿ ಅಟಮಟಿಸಿ ತಾನು ಮಣಿ–
> ದುದೆ ಭಂಗಿ ಎಂಬ ಸಡಗರದೊಳಿದೆ ತೊಳತೊಳಗಿ"

ಹೀಗೆ ಮೊದಲ ಎಂಟು ಚರಣಗಳಲ್ಲಿ ಉಯ್ಯಾಲೆಯಂತೆ ಕಾವ್ಯ ವಸ್ತುವಿನೆಡೆಗೆ ನಮ್ಮನ್ನು ಕರೆದೊಯ್ದು ಕುತೂಹಲವನ್ನು ನಿರ್ಮಿಸಿ, ಒಡನೆಯೇ ಅದಕ್ಕಲ್ಲಿ ತನ್ಮಯವಾಗಿ ಉತ್ತರವನ್ನು ಕಂಡುಕೊಳ್ಳುವಂತೆ ಸಂಶಯಕ್ಕೆಡೆಯಿಲ್ಲದೆ ನೇರವಾಗಿ ಮನವನ್ನು ಮುಟ್ಟುವದು ಸುನೀತದ ಸ್ವಾರಸ್ಯವಾಗಿರುವದನ್ನೂ, ಮಿಂಚಿನಂತೆ ನೂತನವಾದ ಕಾವ್ಯಾನುಭವವನ್ನು ನೀಡುವ ಅದು ವಾಚಕನು ಒಪ್ಪಿಕೊಳ್ಳುವಂತೆ ಮಾಡುವ ಯಶಸ್ವಿಯಾದ ವಾಹಕವೆಂಬುದನ್ನು ಖಚಿತಪಡಿಸಿದ ಬೇಂದ್ರೆಯವರು ಸ್ವಚ್ಛಂದತೆಯೇ ಅದರ ಮೂಲನಡೆ ಎಂಬುದನ್ನು ಗುರುತಿಸಿದ್ದಾರೆ.

---

1 ದ. ರಾ. ಬೇಂದ್ರೆ. "ಉಯ್ಯಾಲೆ" ೩ ನೇ ಮುದ್ರಣ ಧಾರವಾಡ. (೧೯೫೮) ಪು. ೩

" ಮಿಣಿಯಲ್ಲಿ ಮಣಿವ ಕೊಲ್ಲಟಗಿತ್ತಿ ತನ್ನ ಜೋ-
ಕೆಯ ತೂಕದಲ್ಲಿ ತೂಗಾಡುವಳು. ಮೈಯ ಹವ-
ಣಿಕೆ ಮಿಗಿಲು, ಸಿದ್ದೆ ಎಚ್ಚರಗಳಲ್ಲಿ ಒಂದೆ ಬಾ-
ಳಿನ ಬಿಂಬ ತೇಂಕಾಡುವದು. ಉಸಿರ ಬೀಳೇಳಿ
ನಲಿಡೊಂಕೆ ಪ್ರಾಣಗತಿ ? ಬಗೆಯ ಇಬ್ಬಗೆಯಲ್ಲಿ
ಹುರುಳ ತಿರುಳೊಂದು, ಕಣ್ಣೆರಡು. ಕಾಣಿಕೆ ಎರಡೆ ?

ಸುನೀತದಲ್ಲಿ ಬುದ್ಧಿ ಭಾವಗಳು ಹವಣರಿತು ಹದಗೊಂಡ ಸತ್ಯವನ್ನು ಇದು ಸೂಚಿಸುತ್ತದೆ. ಮನಸ್ಸಿನ ನೂರು ಚಿತ್ರಗಳನ್ನೂ ಸಿದ್ದೆ-ಎಚ್ಚರಗಳಂತೆ ಬಿಡಿಸುತ್ತ ಬಿಡಿಸುತ್ತ, ಒಂದು ಅಮೂರ್ತವಾದ ಅನುಭವದಲ್ಲಿ ಕೊನೆಯಾಗಿಸುವದು, ಸುನೀತದ ಕೊನೆಯ ಎರಡು ಸಾಲುಗಳು ಒಟ್ಟು ನೋಟದಲ್ಲಿ ಹೊಸ ಆಯಾಮವನ್ನು ಒದಗಿಸುವದನ್ನೂ ಜೇಂದ್ರೆ ಅತ್ಯಂತ ಪ್ರಭಾವಯುತವಾಗಿ ಸೂಚಿಸಿದ್ದಾರೆ. ದೇಹಕ್ಕೆ ಕಣ್ಣುಗಳೆರಡಾದರೂ ಕಾಣುವ ದೃಷ್ಟಿಗಳು ಹಲವು ಎಂಬುದು ಅರ್ಥಪೂರ್ಣವಾಗಿದ್ದು ' ಸುನೀತ ' ನೀಡುವ ಕಾವ್ಯಾನುಭವವನ್ನೂ, ಮನಸ್ಸನ್ನು ತಬ್ಬಿಕೊಳ್ಳುವ ಸಮಸ್ತವಾದ ಚಿಂತನಶೀಲತೆಯೂ ಈ ಕಾವ್ಯಪ್ರಕಾರದ ಮರ್ಮವನ್ನೇ ಕವಿಹೃದಯ ಬಿಡಿಸಿ ತೋರಿಸಿದಂತಿದೆ. ಕನ್ನಡದಲ್ಲಿ ಸುನೀತದ ಬೆಳವಣಿಗೆಗೆ ಈ " ಅಷ್ಟಷಟ್ಪದಿ " ವಿಶಿಷ್ಟವಾದ ಲಕ್ಷಣಪರಂಪರೆಯನ್ನು ಹಾಕಿಕೊಟ್ಟಿದೆ ಭಾವಗೀತದ ಹಾದಿಯಲ್ಲಿ ಹೊಸ ಚೌಕಟ್ಟನ್ನು ಕಟ್ಟಿಕೊಟ್ಟಿದೆ. ಮತ್ತು ಸುನೀತದ ಅರ್ಥಗೌರವವನ್ನು ಜೇಂದ್ರೆ ಬಹುವಿಧದಿಂದ ಹೆಚ್ಚಿಸಿದ್ದಾರೆ ಎಂಬುದು ಹೊಸ ಗನ್ನಡ ಕಾವ್ಯದ ಚರಿತ್ರೆಯಲ್ಲಿ ಕಾಣಿಸಿಕೊಳ್ಳುವ ಮಹತ್ವದ ವಿಷಯವಾಗಿದೆ.

ಬೇಂದ್ರೆಯವರು ಇಟಾಲಿಯನ್ ಹಾಗೂ ಶೇಕ್ಸಪೀರಿಯನ್ ಮಾದರಿಯ ಸುನೀತಗಳನ್ನೂ ರಚಿಸಿದ್ದಾರೆ. ಇಟಾಲಿಯನ್ ಮಾದರಿಯ ಸುನೀತಗಳನ್ನು " ಅಷ್ಟಷಟ್ಪದಿ " ಎಂದು ಬೇಂದ್ರೆಯವರು ಕರೆದಿದ್ದಾರೆ. ಇಲ್ಲಿ ಮೊದಲ ಎಂಟು ಚರಣಗಳು (Octave) ಒಂದು ರೀತಿಯಾಗಿದ್ದರೆ (ವಿಚಾರದಲ್ಲೂ) ಹೊಸ ತಿರುವನ್ನು ಪಡೆಯುವ ಮುಂದಿನ ಆರು ಚರಣಗಳು (Sestet) ಮಾರ್ಮಿಕವಾದ ನಿರೂಪಣೆಯಿಂದ ಕೊನೆಯಾಗುತ್ತವೆ. ಅಂದರೆ ಅವರ ಕವಿತೆಯ ವಸ್ತು ಹಾಗೂ ಛಂದೋಲಯದಲ್ಲಿ ಸಾವಯವವಾದ ಸಂಬಂಧ ಸ್ಪಷ್ಟವಾಗಿದೆ. ಸಾಮಾನ್ಯವಾಗಿ ಮೂಲ ಇಟಾಲಿಯನ್ ಸುನೀತಗಳಲ್ಲಿ ಅಂತ್ಯ ಪ್ರಾಸ ನಿಯತವಾದುದು. [1]

---

1 ವಿವರಗಳಿಗೆ ನೋಡಿ— Encyclopaedia Britanica Vol, 20, 9 Sonnets, P. 911-12.

ಅಲ್ಲಿ ಪ್ರತಿ ಚೌಪದಿಯ ಮೊದಲ ಮತ್ತು ಕೊನೆಯ ಚರಣಗಳ ಪ್ರಾಸ ಒಂದಾಗಿದ್ದರೆ, ಮಧ್ಯದ ಎರಡು ಸಾಲಿನ ಪ್ರಾಸ ಸಮಾನವಾಗಿರುತ್ತದೆ. ಆದರೆ ಕೊನೆಯ ಮೂರು ಪಂಕ್ತಿಗಳ ಪ್ರಾಸ ಮೇಲಿನ ಮೂರು ಪಂಕ್ತಿಗಳ ಪ್ರಾಸಕ್ಕೆ ಸರಿಯಾಗಿ ಹೊಂದಿಕೊಂಡಿರುತ್ತದೆ. ಕನ್ನಡದಲ್ಲಿ ಈ ಮಾದರಿಯ ಸುನೀತಗಳನ್ನು ರಚಿಸುವ ಕಾಲದಲ್ಲಿ ಪ್ರಾಸಬಿಟ್ಟು ಕವಿತೆಗಳನ್ನು ಬರೆಯುವದು ಒಂದು ಹೊಸತನದ ಹಾಗೂ ಪ್ರಯೋಗ ಕಾಲವಾಗಿದ್ದಂತೆ ಸಂಪ್ರದಾಯವನ್ನು ಬಿಟ್ಟು ಹೋಗುವ ವಾತಾವರಣವೂ ಇತ್ತೆಂದು ತೋರುತ್ತದೆ. ಸುನೀತಗಳಲ್ಲಿ ಪ್ರಾಸಕ್ಕಿಂತ ಅರ್ಥಯತಿಯೇ ಮುಖ್ಯವಾದುದು ಎಂಬ ಭಾವನೆ ಬೇಂದ್ರೆಯವರಿಗಿರುವದರಿಂದ ಅವರ ಇಟಾಲಿಯನ್ ಮಾದರಿಯ ಸುನೀತಗಳೆಲ್ಲವೂ ಅಂತ್ಯಪ್ರಾಸರಹಿತವಾಗಿ ರಚಿತದಾದುವು. ಅವರೇ ಹೇಳುವಂತೆ "ನನ್ನ ಈ ಅಷ್ಟಷಟ್ಪದಿಗಳಲ್ಲಿ ಪ್ರಾಸರಾಹಿತ್ಯ, ಪಾದಾಂತಯತಿಯ ನಿಯತರಾಹಿತ್ಯ, ತಿರುವಿನ ವೈಚಿತ್ರ್ಯ ಇವು ಹೊಸ ಲಕ್ಷಣಗಳಾಗಿವೆ"[1] ಎನ್ನುತ್ತ ಹೊಸ ಹೊಸ ಪ್ರಯೋಗಗಳನ್ನೂ ತಾವು ಮಾಡಿರುವದಾಗಿ ತಿಳಿಸಿದ್ದಾರೆ. "ಅವರ ಗುಮ್ಮ ಎಂಬ ಸಾನೆಟ್ಟನ್ನು ನೋಡಿದಲ್ಲಿ, ಅವರು ಆದಿಪ್ರಾಸ, ಮತ್ತು ಅಂತ್ಯಪ್ರಾಸ ಇವುಗಳನ್ನು ತೊರೆದಿದ್ದರೂ ಒಳಪ್ರಾಸವನ್ನು ಉಳಿಸಿಕೊಂಡಿರುವರೆಂಬುದು ಸ್ಪಷ್ಟವಾಗುತ್ತದೆ."[2] ಇಲ್ಲಿಯ ಒಳಪ್ರಾಸ ಅಲಂಕಾರದ ಭಾಗವಾಗುತ್ತದೆಯೇ ಹೊರತು ಛಂದಸ್ಸಿನ ಭಾಗವಾಗಲಾರದೆಂದು ತೋರುತ್ತದೆ. "ಪ್ರತಿಸಾಲಿನಲ್ಲಿಯೂ ಅಂತ್ಯಪ್ರಾಸವಿರುವದರಿಂದಲೂ ೮-೬ ಸಾಲಿನ ವಿಭಜನೆ ಇರುವದರಿಂದಲೂ ಭಾವಕ್ಕೊಂದು ಬಿಗಿಯಿದೆ, ಒಂದೇ ಮೂಡಿಕೆಯಿದೆ."[3] ಎಂಬ ಮಾತು ಸಮಂಜಸವಾಗಿದೆ.

ಬೇಂದ್ರೆಯವರು ರಚಿಸಿದ ಶೆಕ್ಸಪೀರಿಯನ್ ಮಾದರಿಯ ಸುನೀತಗಳಲ್ಲಿ ಮೊದಲ ಹನ್ನೆರಡು ಚರಣಗಳು ಮೂರು ಚೌಪದಿಗಳಿಂದ ಕೂಡಿದ್ದು ಕೊನೆಯ ಎರಡು ಚರಣಗಳು ದ್ವಿಪದಿಯ ರೂಪದಲ್ಲಿ ಕವಿತೆಯ ವಸ್ತುವಿನ ಸಮುಸ್ತವಾದ ತಿರುಳನ್ನು ನೀಡುತ್ತವೆ. ಇಲ್ಲಿ ಇಟಾಲಿಯನ್ ಸುನೀತಗಳಂತೆ ಮೊದಲ ಎಂಟು ಚರಣಗಳ ನಂತರ ಬಿಡುವಿಲ್ಲ. ಬಿಡುವಿಲ್ಲದ ವಿಚಾರದ ಹಾಗೂ ಭಾವನೆಯ ಓಟ ಇದರ ಲಕ್ಷಣ. ಇಲ್ಲಿ ಮೂಲದ ಪ್ರಾಸಪದ್ಧತಿಯನ್ನು ಬೇಂದ್ರೆಯವರು ಅನುಸರಿಸಿದ್ದಾರೆ. ಚೌಪದಿಯ ಮೊದಲ ಎರಡು ಪಂಕ್ತಿಗಳು ಒಂದು ಪ್ರಾಸದಿಂದ ಕೂಡಿದ್ದರೆ ಕೊನೆಯ ಎರಡು ಪಂಕ್ತಿಗಳು ಇನ್ನೊಂದು ಪ್ರಾಸವನ್ನು ಹೊಂದಿರುತ್ತವೆ. ಕಡೆಯ

---

1 ದ. ರಾ. ಬೇಂದ್ರೆ, ಉಯ್ಯಾಲೆ ೩ ನೇ ಮುದ್ರಣ (೧೯೫೪) ಮುನ್ನುಡಿ P. vi.

2 ಪ್ರೊ. ಎಸ್. ಅನಂತನಾರಾಯಣ— "ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ ಕಾವ್ಯದ ಪ್ರಭಾವ." ರಾಜಲಕ್ಷ್ಮಿ ಪ್ರಕಾಶನ ಬೆಂಗಳೂರು. ದ್ವಿತೀಯ ಮುದ್ರಣ ೧೯೭೬ ಪು. ೧೦೭.

3 ಅದೇ – ಪು. ೨೦೭.

ದ್ವಿಪದಿ ಒಂದೇ ಪ್ರಾಸದಲ್ಲಿ ಮುಕ್ತಾಯವಾಗುತ್ತದೆ. ಬೇಂದ್ರೆಯವರು ಪ್ರಾಸ ವಿನ್ಯಾಸದಲ್ಲಿ ತೋರ್ಪಡಿಸಿದ ಈ ವೈಚಿತ್ರ್ಯಕ್ಕೆ ಹಾಗೂ ಗಣಸಂಯೋಜನೆಗೆ ಇತ್ತೀಚೆ ಪ್ರಕಟವಾದ ಅವರ "ತೀ. ನಂ. ಶ್ರೀ" ಸುನೀತವನ್ನು ನೋಡ ಬಹುದು.

"ಶ್ರೀಕಂಠದಾ ಗಂಟೆ ಪೂಜೆ ನಡೆಸಿರುವಾಗ
ಆ ನಿನಾದವುಹಬ್ಬಿ ಆ ಭಾಗ ಈ ಭಾಗ
ಒಂದೆಂಬ ತೆರದಲಿ ತಾನೆ ಕಂಪನಗೊಂಡು
ರೂಪಿಸಿತು ಋಗ್ಗನೇ ತನ್ನ ತಾನೇ ಕಂಡು

ಮೊದಲ ನೋಟಕೆ ಮೂಡಿ ನೆಲೆನಿಂತ ಆ ಮೋಡಿ
ಯಾವ ಬಲೆಗೂ ಸಿಗದ ಬಯಲಲ್ಲೆ ಹಾರಾಡಿ
ಕ್ರೀಡಿಸುತ್ತಿದೆ, ಸೆಲೆಯು ಯಾವನದಿಗೂತಾಯಿ
ಆ ಜಾವ, ಆ ಭಾವ, ಜನ್ಮಾಂತರಸ್ಥಾಯಿ

ಕಾವ್ಯದಲಿ ಕಾವ್ಯವಾ ರಸಿಕ ಹೃದಯದ ತುಂಬ
ಕಂಡವನ ಕಂಗಳೇ ಕಡಲ ದೀಪಸ್ತಂಭ
ನಿಸ್ತರಂಗದ ಮೇಲೆ ನಿದ್ರೆ ಮಾಡುತ್ತಿತ್ತು
ಕನ್ನಡದ ಹುತ್ತವೋ ಅಂದು ಮಾತಿನ ಸುತ್ತು

ಆ ಚೆಂದ ಹೂ–ನಗೆಯ ಬಿಂಬ ಬಣ್ಣಿಸಲಳವೇ?
ನೀರ ನೆರಳಲ್ಲರಳಿ ಕಮಲವಾಯಿತು ಕೊಳವೆ." [1]

ಅಂತ್ಯಪ್ರಾಸದ ವಿವಿಧತೆಯಿಂದ ಕೂಡಿದ ಈ ಸುನೀತದ ಬಂಧದಲ್ಲಿ ಐದು ಮಾತ್ರೆಯ ನಾಲ್ಕು ಗಣಗಳ ಯೋಜನೆಯನ್ನು ಸೊಗಸಾಗಿ ನಿರೂಪಿಸಿದ್ದು ಕಂಡು ಬರುತ್ತದೆ. ಈ ಸುನೀತವು ಒಂದು ಹಿರಿಯ ಜೀವದ ಉನ್ನತ ಸಾಧನೆಯನ್ನು ಸಮರ್ಥವಾಗಿ ನಿರೂಪಿಸುತ್ತದೆ. ಕನ್ನಡದ ನವೋದಯ ಕಾಲದಲ್ಲಿ ತೀ. ನಂ. ಶ್ರೀ ಯವರು ಬಿ. ಎಂ. ಶ್ರೀಯವರಿಂದ ಕನ್ನಡದೀಕ್ಷೆ ಪಡೆದು ಮೈಸೂರು, ಧಾರವಾಡ ಒಂದೆಂಬ ತೆರದಲ್ಲಿ ಭಾವೈಕ್ಯದ ಸೇತುವೆಯಾಗಿ ಸಾಂಸ್ಕೃತಿಕ ಕಾರ್ಯಗಳನ್ನು ಮಾಡಿದ ಅವರ ಬದುಕು ಕನ್ನಡಿಗರಿಗೆ ಒಂದು ಆದರ್ಶವನ್ನು ತೋರಿಸುತ್ತದೆ. ತೀ. ನಂ. ಶ್ರೀ. ಕಾವ್ಯಮೀಮಾಂಸಕರಾಗಿ, ಕಾವ್ಯ ವಿಮರ್ಶೆಯನ್ನು

---

1 ತೀ. ನಂ. ಶ್ರೀ. ಸ್ಮಾರಕ ಗ್ರಂಥ "ಶ್ರೀಕಂಠತೀರ್ಥ" ಬೆಂಗಳೂರು ೧೯೭೬. ಪು. ೧.

ರಸಿಕ ಹೃದಯಿಗಳಾಗಿ ನೆರವೇರಿಸಿದ್ದು ಬಹುಶಃ ಅವರ ಕಡಲ ದೀಪಸ್ತಂಭದಂತೆ ಕಾಂತಿಯಿಂದ ಚಿಮ್ಮುವ ಕಣ್ಣಿನ ಗುಣವೂ ಇರಬೇಕು. ಕನ್ನಡ ಭಾಷಾ, ಸಾಹಿತ್ಯ ಕ್ಷೇತ್ರಕ್ಕೆ ಹೊಸ ಕಾಣಿಕೆಯನ್ನು ನೀಡಿದ ಶ್ರೀ. ನಂ. ಶ್ರೀ ಯವರ ಸಾಧನೆಗಳನ್ನು ನೆನಪಿಸುತ್ತ ಮೊದಲ ಹನ್ನೆರಡು ಸಾಲುಗಳು ಸಾಗಿ ನಿಂತರೆ ಕೊನೆಯ ಎರಡು ಚರಣಗಳು ತಟ್ಟನೆ ಹೊಸತಿರುವನ್ನು ಪಡೆದು ಅವರ ವ್ಯಕ್ತಿತ್ವವನ್ನೂ ನಿರೂಪಿಸುತ್ತವೆ. ಸುಂದರವಾದ ಹಸನ್ಮುಖವಾದ ಅವರ ವ್ಯಕ್ತಿತ್ವ ಬಣ್ಣಿಸಲಸದಳವಾದುದು. ಕನ್ನಡ ಸರೋವರದಲ್ಲಿ ಅದೊಂದು ಕಮಲದಂತೆ ಅರಳಿ ನಿಂತರೂ ಇಡೀ ಕನ್ನಡ ನೆಲವನ್ನೇ ಕಮಲವನ್ನಾಗಿಸುವಲ್ಲಿ ಅವರದು ಅಪೂರ್ವವಾದ ಶ್ರಮಸಾಧನೆ ಎಂಬುದನ್ನೂ ಚಿತ್ರಿಸುವ ಈ ಸುನೀತ ಕನ್ನಡದ ವ್ಯಕ್ತಿಗೀತಗಳ ಸಾಲಿನಲ್ಲಿ ಉತ್ಕೃಷ್ಟವಾದುದು. ಬೇಂದ್ರೆ ಸುನೀತಗಳು Form ಹಾಗೂ Content ಎರಡೂ ದೃಷ್ಟಿಯಿಂದಲೂ ಅಧ್ಯಯನೀಯವಾಗಿವೆ. ಬೇಂದ್ರೆಯವರ ಇಟಾಲಿಯನ್ ಮಾದರಿಯ ಸುನೀತಗಳೆಲ್ಲವೂ "ಉಯ್ಯಾಲೆ"ಯಲ್ಲಿ ಸಂಕಲಿತವಾಗಿದ್ದು ಅವುಗಳ ರಚನೆಯ ಬೆಳವಣಿಗೆಯನ್ನು ಗುರುತಿಸುವದು ಕಷ್ಟವಾಗುತ್ತದೆ. ಕವಿತೆಯ ವಸ್ತುವಿನಲ್ಲಿಯೂ ಛಂದಸ್ಸಿನಂತೆ ಸಾಕಷ್ಟು ವೈವಿಧ್ಯವನ್ನು ಬೇಂದ್ರೆ ತೋರ್ಪಡಿಸಿದ್ದಾರೆ. ಮೂಲ ಇಟಾಲಿಯನ್ ಸುನೀತಗಳು ಪ್ರಿಯ-ಪ್ರೇಯಸಿಯರ ಮಿಲನ, ಕನಸು, ಆಸೆ, ವಿರಹ, ಮುಂತಾದ ಪ್ರೇಮದ ವಿವಿಧ ಮುಖಗಳ ಅಭಿವ್ಯಕ್ತಿಗೆ ತಕ್ಕ ಮಾಧ್ಯಮವಾಗಿದ್ದವು. ಇಂಗ್ಲೀಷಿಗೆ ಬಂದಾಗ ಶೇಕ್ಸಪಿಯರ್, ಮಿಲ್ಟನ್ ಮುಂತಾದವರು ಸಾಕಷ್ಟು ಪರಿವರ್ತನೆಯನ್ನೂ ಮಾಡಿದರು. ಬೇಂದ್ರೆಯವರ ಸುನೀತಗಳು ವಿಷಯದ ದೃಷ್ಟಿಯಿಂದ ವಿಸ್ತಾರವಾದ ಹರವನ್ನು ಪಡೆದಿವೆ. ಅವು ಬದುಕಿನ ನೆಲೆಯನ್ನು ಶೋಧಿಸುವಲ್ಲಿ, ಕಾಲನ ಕೇಳಿಯಾಟಕ್ಕೆ ಮರೆಯಾಗುವದನ್ನೂ ಗುರುತಿಸುವಲ್ಲಿ, ವ್ಯಕ್ತ್ಯತೀತವಾದ ಮೌಲ್ಯಗಳ ಶೋಧನೆಯಲ್ಲಿ ಮತ್ತು ಸಾಹಿತ್ಯಕ್ಷೇತ್ರದಲ್ಲಿ ಘನವಾದ ದುಡಿಮೆಯನ್ನೂ ತೋರಿಸಿದ ವ್ಯಕ್ತಿಗಳ ಸ್ನೇಹಮಯತೆಯನ್ನು ವರ್ಣಿಸುವಲ್ಲಿ ನಿರತವಾಗಿವೆ.

ಬೇಂದ್ರೆಯವರ ಸುನೀತಗಳು ಅರ್ಥಪೂರ್ಣ ಪ್ರತಿಮೆಗಳ ಮೂಲಕ ಉತ್ಕಟವಾದ ಜೀವನ ಪ್ರಜ್ಞೆಯನ್ನು ಬಿಂಬಿಸುತ್ತವೆ. ಸೃಷ್ಟಿಯ ಗತಿಸ್ಥಿತಿಯಲ್ಲಿ ಕೃಷ್ಣನ ಕೊಳಲಿನ ನಾದ ಅಂಧಕಾರವನ್ನು ತಣಿಸುವಂತೆ ನವಿಲು ನೂರು ಕಣ್ಣುಗಳಿಂದ ಕೂಡಿದ ಗರಿಗಳನ್ನು ಬಿಚ್ಚಿ ನರ್ತನ ಮಾಡುವಂತೆ ಬದುಕಿನ "ಪ್ರಳಯ ಸೃಷ್ಟಿ" ಜೀವಂತವಾದುದೆಂದು ತಿಳಿಸುತ್ತದೆ. ಪ್ರಚಂಡವಾದ ಪ್ರಕೃತಿಯ ಮೇಲೆ ವಿಜಯವನ್ನು ಸಾಧಿಸಲು ಹೊರಟಿರುವ ಇಂದಿನ ಮಾನವ ಅದು ಬಯಸುವ ಸ್ವಾತಂತ್ರ್ಯವನ್ನೂ ಗಮನಿಸಲಿಲ್ಲವಲ್ಲಾ ಎಂದು "ಭಾಟ ಘರಸಾಗರ" ಅಣೆಕಟ್ಟು ಕಟ್ಟಿದ್ದನ್ನು ನೋಡಿ ಕವಿ-ಮನಸ್ಸು ಚಿಂತಿಸುತ್ತದೆ. ಮಗು ಮಣ್ಣಾಟವಾಡಿದಂತೆ.

ಅಲ್ಲವೇ ? ಎಂದು ಪ್ರಶ್ನಿಸುತ್ತದೆ. ಹೃದಯದ ವೈಶಾಲ್ಯತೆ, ಪರಸ್ಪರ ಹಾರ್ದಿಕ ವಾದ ತಿಳುವಳಿಕೆಯೇ ವ್ಯಕ್ತಿತ್ವದ ಗುರಿಯು ಎಂಬುದನ್ನು "ಕರುಳು" ಸುನೀತ ನಿವೇದಿಸುತ್ತದೆ. ಬಡತನದ ಬದುಕಿನಲ್ಲಿ ನಾಳಿನ ಚಿಂತೆ ಇರದೆ ಬೆಳಗಿನಿಂದ ಕತ್ತಲೆ ಕಳೆಯುವ ತನಕದ "ಸಮಸ್ಯೆ"ಯೇ ವಿಶೇಷವಾಗಿರುವದನ್ನು ಕವಿ ಕಾಣಿ ಸುತ್ತಾರೆ. ಜನ "ಸಂತತಿ" ಬೆಳೆಯುತ್ತಿರುವ ಇಂದಿನ ದಿನಗಳಲ್ಲಿ "ವಾನರರು ನರರಾದರೋ ನರರೆ ವಾನರರು ಆಗುತಿಹರೋ"? ಎಂಬುದು ಕವಿಗೆ ಖೇದ ವನ್ನುಂಟುಮಾಡಿದೆ. "ಸುಖಸ್ಪರ್ಶ"ಕ್ಕಾಗಿ ಹಾತೊರೆಯುವ ಇಂದಿನ ನಾಗ ರಿಕಯುಗ ಸಂಸ್ಕೃತಿಯ ಮೌಲ್ಯಗಳನ್ನು ಮರೆತಿದೆ. ಬಾಳಿಗೆ "ಇಜ್ಜೋಡಿ"ನ ಸುಖ ದೊರಕುವದು ಕಠಿಣವಾಗಿದೆ. "ಹುಸಿ ಭೂತ ಖಿನ್ನಳಲಿ ಬೀಸುತಿದೆ ಬಲೆಯ ಯಮ"ಪಾಶ"ದೊಲು" ಎಂಬ ನಿಜಸ್ಥಿತಿಯನ್ನು ಗುರುತಿಸಿದ ಕವಿ ತಟ್ಟನೆ ಆಶಾವಾದಿಯಾಗಿ ವಸಂತಾಗಮನವು ಈ ನೆಲದ ಬದುಕಿಗೆ ಬರಲೆಂದು ಆಶಿ ಸುತ್ತಾರೆ.

ಕವಿಜೀವನದ ವೈಯಕ್ತಿವಾದ ಧೋರಣೆಗಳನ್ನು ಬೇಂದ್ರೆಸುನೀತಗಳು ಪ್ರಕಟಗೊಳಿಸುತ್ತವೆ. ಸೃಜನಶೀಲತೆ ಅವರ ಕವಿಮನೋಧರ್ಮದ ಕೇಂದ್ರಶಕ್ತಿ ಯಾಗಿದ್ದು ಅದು "ಗಾರುಡಿಗ" ಸುನೀತದಲ್ಲಿ ಮೋಡಿ ಪಡೆಯುವ ಬಗೆ ಹೀಗೆ:

> ಇದು ಮಂತ್ರ; ಅರ್ಥಕೊಗ್ಗದ ಶಬ್ದಗಳ ಪವಣಿಸುವ ತಂತ್ರ;
> ತಾನೆ ತಾನೆ ಸಮರ್ಥ ಛಂದ; ದೃಗ್ಬಂಧ — ದಿ-
> ಗ್ಬಂಧ; ಪ್ರಾಣದ ಕೆಚ್ಚು ಕೆತ್ತಿ ರಚಿಸಿದೆ; ಉಸಿರ
> ಹೆದೆಗೆ ಹೂಡಿದ ಗರಿಯು ಗುರಿಯ ನಿರಿಯಿಟ್ಟು ಬರು-
> ತಿದೆ ತೂರಿ ಲೀಲೆಯಲನಾಯಾಸ. ಗರುಡನಂ-
> ತೆರಗಿ ಬಂದಿತು — ಭ್ರಮೆಯೋ ? ಹಮ್ಮದವೊ ? ನಂಜೋ ! ಮರ
> ಣವೋ ? ನಿದ್ದೆಯೋ ! ಮೋಹನವೋ ! ಎಚ್ಚರಕೆ ಕವಿದ
> ಮರೆವೋ ! ಕನಸೋ ! ನನಸು ಎಲ್ಲ ಹಾಲೋ ಹಾಲು ! [1]

ಇಲ್ಲಿ ಕವಿ ತಮ್ಮ ಉಚ್ಚ ಕಾವ್ಯಪ್ರತಿಭೆಯ ಶಕ್ತಿಸಂಚಯದ ಸಾಕ್ಷ್ಯವನ್ನು ಒದಗಿಸಿದ್ದಾರೆ. "ಕವಿಯ ಸೃಜನಶಕ್ತಿಯ ವಿರುದ್ಧವಾಗಿರುವ ಜಡತಾಮಸ ಪ್ರವೃತ್ತಿ ಗಳನ್ನು ಗರುಡ-ಸರ್ಪದ ವೈರದ ಪ್ರತಿಮೆಗಳ ಮೂಲಕ ಶಕ್ತಿಪೂರ್ಣವಾಗಿ ಇಲ್ಲಿ ನಿರೂಪಿಸಲಾಗಿದೆ. ಮುಗಿಲಿನಲ್ಲಿ ಸ್ವೈರ ಸಂಚಾರ ಮಾಡಿ ದೇವತೆಗಳಿಗೆ ಅಮೃತ ಕಲಶವನ್ನು ತಂದುಕೊಟ್ಟ ಗರುಡ ಒಂದೆಡೆಗಿದ್ದರೆ ಇನ್ನೊಂದು ಕಡೆಗೆ ನೆಲಕ್ಕಂಟ

1 ದ. ರಾ. ಬೇಂದ್ರೆ "ಗಾರುಡಿಗ" — ಉಯ್ಯಾಲೆ, ೩ ನೇ ಮುದ್ರಣ (೧೯೫೮) ಧಾರವಾಡ ಪು. ೩೨.

ಕೊಂಡು ಬದುಕು ಸಾಗಿಸುವ ವಿಷವನ್ನೂ ಜೀವನಾಧಾರವಾಗಿಟ್ಟುಕೊಂಡ ಹಾವು. ಇನ್ನೊಂದೆಡೆಗೆ ಈ ಅಷ್ಟಷಟ್ಪದಿಯು ಮೊದಲಭಾಗವು ಬೇಂದ್ರೆಯುವರ ಸ್ವಂತ ಕಾವ್ಯ ತಂತ್ರದ ಮಾರ್ಮಿಕ ನಿರೂಪಣೆಯಿದೆ. ಕಾವ್ಯವೆಂದರೆ "ಮಂತ್ರ," ಅರ್ಥಕೊಗ್ಗದ ಶಬ್ದಗಳ ಪವಣಿಸುವ ತಂತ್ರ." ಕಾವ್ಯ ಸಾಮಾನ್ಯವಾದ ಅರ್ಥವನ್ನೂ ಬಿಟ್ಟುಕೊಟ್ಟು ಸ್ವ ಅರ್ಥವನ್ನು ಸೃಷ್ಟಿಸಿಕೊಳ್ಳಬೇಕೆನ್ನುವ ಹಂಬಲಕ್ಕೂ, ಸೃಜನಶೀಲತೆಯ ತತ್ವವನ್ನು ಅವಲಂಬಿಸದ ಬದುಕಿನ ಹೊಂಚಿಗೂ ಸಂಬಂಧವಿದೆ. ಕಾವ್ಯದಿಂದ ಶಬ್ದಾರ್ಥವನ್ನಷ್ಟೇ ಅಪೇಕ್ಷಿಸುವ ಅಷ್ಟರಿಂದಲೇ ತೃಪ್ತರಾಗುವ ಮನೋವೃತ್ತಿ ಅವನತಿಗೊಂಡ ಸಂಸ್ಕೃತಿಯ ಸಂಕೇತವಾಗಿದೆ.[1] ಎಂದು ಕೀರ್ತಿನಾಥರು ಸಮರ್ಥವಾಗಿ ವಿವೇಚಿಸಿದ್ದಾರೆ.

ಬೇಂದ್ರೆಯುವರು ತಮ್ಮ ಸುನೀತಗಳಲ್ಲಿ ಅಪೂರ್ವವಾದ ವ್ಯಕ್ತಿ ಚಿತ್ರಗಳನ್ನು ನಿರೂಪಿಸಿದ್ದು ಅದು ಕನ್ನಡದ ಸುನೀತಗಳಲ್ಲಿ ವಿಶಿಷ್ಟವಾದ ಸಂಪ್ರದಾಯವಾಗಿದೆ. ಅದರಲ್ಲಿ ಅಗಸ್ತ್ಯನಂತಹ ಋಷಿ ಮುನಿಗಳೂ ಪ್ರಾಚೀನ ಹಾಗೂ ಆಧುನಿಕ ಕಾಲದ ಕನ್ನಡ ಕವಿಗಳ ವ್ಯಕ್ತಿತ್ವದ ಸಾಧನೆ — ಸಿದ್ಧಿಗಳನ್ನು ಗುರುತಿಸಿ ಪರಿಚಯಿಸುವ ಪ್ರಯತ್ನವಿದೆ. ಇದರಿಂದ ಪ್ರಾಚೀನ ಹಾಗೂ ಇಂದಿನ ಕವಿಗಳನ್ನು ಬೇಂದ್ರೆ ಹೇಗೆ ಬೆಲೆಕಟ್ಟುತ್ತ ಅವರ ಘನತೆಯನ್ನು ತೋರ್ಪಡಿಸುತ್ತಾರೆ ಎಂಬುದನ್ನು ತಿಳಿದುಕೊಳ್ಳಬಹುದು. ಅಂದು ಅನುಲ್ಲಂಘನೀಯವಾದ ವಿಂಧ್ಯಪರ್ವತವನ್ನು ತುಳಿದು ದಕ್ಷಿಣೋತ್ತರಗಳ ದಾರಿಯನ್ನು ಕೊರೆದ ಅಗಸ್ತ್ಯ ಇಂದಿನ ಭಾಷೆಗಾಗಿ, ಗಡಿಗಾಗಿ ಹೊಡೆದಾಡುತ್ತಿರುವ ಜನಸಮುದಾಯಕ್ಕೆ ಭಾವೈಕ್ಯದ ಹಾದಿಯನ್ನು ಹಾಕಿಕೊಡಲು ಮತ್ತೆ ಅವತರಿಸಬೇಕಾಗಿದೆಯೆಂದು ಒಂದೆಡೆ ಹೇಳಿದರೆ, "ಅಲ್ಲಮಪ್ರಭು" ವಚನಕಾರನನ್ನು ಕಾಣುವ ಬಗೆ ಹೀಗೆ—ಅಲ್ಲಮಪ್ರಭು ಮಹಾಜ್ಞಾನಿಯಾಗಿ "ಲಿಂಗ ಲೀಲಾ ವಿಲಾಸದಲಿ ನಟಿಸಿದ ಮೂರ್ತಿ – ವಚನ ವಿದ್ಯಾನಟಿ ಕುಣಿಕುಣಿದಳೆಂದು ಮದ್ದಳೆಯ ಸೊಲ್ಲಿಗೆ ವಿವಿಧ ಭಂಗಿಯಲಿ, ಎನ್ನುವ ಅವನ ಕುರಿತು." ಬೇರೆ ದರುಶನವೇಕೆ ? ಮಾತೆ ಜ್ಯೋತಿರ್ಲಿಂಗ ![2] ವೆಂದು ಸಾರಿಬಿಡುತ್ತಾರೆ. ರತ್ನಾಕರವರ್ಣಿಯ "ಕೃತಿ ಶೃಂಗಾರ ಪಾವನ ಗಂಗೆ, ಅದರ ರಸ ಸಮರಸ, ರುಚಿಯು ಶುಚಿ, ಸುಭಗ, ಗಂಭೀರ, ಅಸಮಾನ, ನೂತನ, ರಮ್ಯ"[3] ಮತ್ತು ಅದು ಭೋಗ–ಯೋಗಗಳ ಸಮನ್ವಯ ಸಾಧಿಸಿದ ಅವನ ಕವಿತ್ವಶಕ್ತಿ ಅಸಾಧಾರಣವಾದುದು ಎಂತೆಯೇ "ಋಷಿಯಲ್ಲದವ ಕವಿಯಾಗಲಾರ" ಎಂಬ ಹೇಳಿಕೆಗೆ ತಕ್ಕ ನಿದರ್ಶನ ರತ್ನಾಕರನವರ್ಣನೆ.

---

1 ಪ್ರೊ. ಕೀರ್ತಿನಾಥ ಕುರ್ತಕೋಟಿ. "ಬೇಂದ್ರೆ ವ್ಯಕ್ತಿತ್ವ ಮತ್ತು ಕಾವ್ಯ." ಪ್ರಜಾವಾಣಿ ಸಾಪ್ತಾಹಿಕ ಪುರವಣಿ ೨೮-೪-೧೯೭೪ ಪು. ೧.

2 ದ. ರಾ. ಬೇಂದ್ರೆ 'ಅಲ್ಲಮಪ್ರಭು' 'ಉಯ್ಯಾಲೆ' ೩ನೇ ಮುದ್ರಣ ೧೯೫೮ ಪು. ೧೬

3 ಅದೇ — ರತ್ನಾಕರ — ಪು. ೧೭.

ಕನ್ನಡದ ಕಾರ್ಯಗಳಲ್ಲಿ ಮೊದಲಿಗೆ ಗೆಳೆಯನಾಗಿ ಬಂದ ಚಿದಂಬರನಲ್ಲಿ ಬೇಂದ್ರೆಯವರು ತಮ್ಮ ಸ್ನೇಹಮಂಪುತೆಯನ್ನು ಸುನೀತದಲ್ಲಿ ತೋರ್ಪಡಿಸಿದ್ದಾರೆ.

> ಕನ್ನಡದ ಗುಡಿಯ ಕಟ್ಟುವ ಎಳೆಯ ಗೆಳೆಯರೊಳು
> ನೀನು ಮೊದಲಿಗ ನನಗೆ–ಸ್ನೇಹ ಸಿಂಹಾಸನದ
> ಶೂನ್ಯ ಪೀಠದಿ ಪಟ್ಟಗಟ್ಟಿ, ಓರಿಗೆ ಜೊತೆಯ
> ಎಳೆಯರನು ಎರಡು ಕೈಯಲಿ ತಂದೆ. ಕಲ್ಲನಿ—
> ಕ್ಕಿದೆ ಅಡಿಗೆ; ಗುಡಿಗೆ ಗತಿ ಇಲ್ಲ, ಎಲ್ಲಿದೆ ಶಕ್ತಿ ?
> ನಿಬ್ಬೆರಗುಗೊಂಡ ಹೆಬ್ಬಯಲು ಹಬ್ಬಿದೆ ಗೆಳೆಯ ! [1]

ಎಂದು ಕನ್ನಡಕ್ಕಾಗಿ ಕೈಯೆತ್ತಿ ನಿಂತ ಸಾಹಿತ್ಯಮಿತ್ರನನ್ನು ನೆನಿಸಿಕೊಳ್ಳುತ್ತಾರೆ. ಬೇಂದ್ರೆ ತಾವು ವರಕವಿಗಳಾಗಿದ್ದು ಕನ್ನಡನಾಡಿನಲ್ಲಿ ಅನೇಕ ಕವಿಗಳ ಪ್ರತಿಭೆಗೆ ಎರಕ ಹೊಯ್ದಿದ್ದಾರೆ. ಅವರ ಸಾಹಿತ್ಯಗೋಷ್ಠಿಯ ಮೇಳದಲ್ಲಿ ಭಾಗವಹಿಸುವದು ಅಪೂರ್ವವಾದ ಭಾಗ್ಯದ ಕ್ಷಣಗಳು. ಕರ್ನಾಟಕದ ಹಿರಿಯ ತಲೆಮಾರಿನ ಕವಿಗಳನ್ನು ಕಂಡಾಗ ಅವರ ಅಂತರಂಗ ಭಾವದೀಪ್ತವಾಗುತ್ತಿರಬೇಕು. ಪಂಜೇ ಮಂಗೇಶರಾಯರು ಅಗಲಿದಾಗ ಬರೆದ ಸುನೀತ ಪಂಜೆಯವರ ಸಮಗ್ರವಾದ ಕವಿ ವ್ಯಕ್ತಿತ್ವವನ್ನು ಬಣ್ಣಿಸುತ್ತದೆ :

> “ ಸುಕವಿ ಜನಮಿತ್ರ; ನವ ಕವನಕ್ಕೆ ರನ್ನಗ–
> ನ್ನಡಿ; ರಸಿಕ; ಸರಸಿಗಳ ಮಧ್ಯದಲಿ ಸರಸಿ; ಮು–
> ಪ್ಪಿನಲಿ ಹರೆಯದ ಹಸಿರ, ಹಸುಳೆತನದಾ ಚಿಗುರ
> ಕುಣಿಕುಣಿಸಿ ಕುಣಿದು ಕುಣಿಸಿದ ಮೂರ್ತಿವೆತ್ತ ತೆಂ–
> ಗಾಳಿ; ನೀ ಬಂದೆ ಹಾ, ಪೋದೆ ! ಸಾರಿದೆ ಜಗಕೆ:
> ಕವಿಶಿಷ್ಯನೆಂಬುವಾ ಕೀರ್ತಿ ಕವಿಗೂ ಮೇಲು, ” [2]

ಡಿ. ವಿ. ಜಿ. [3] ಅಗಲಿದಾಗ ಬರೆದ ಶೋಕರೂಪದ ಸುನೀತವೂ ಉತ್ತಮ ಕೊಡುಗೆಯಾಗಿದೆ. ಹೀಗೆ ವ್ಯಕ್ತಿತ್ವದಲ್ಲಿ ಪೂರ್ಣ ದೃಷ್ಟಿಯನ್ನು ಕಾಣಿಸುವ ಬೇಂದ್ರೆಯವರು ಬದುಕಿನ ಹಿರಿತನವನ್ನೂ, ಗುಣಗೌರವವನ್ನೂ, ಘನತೆಯನ್ನು ಕಾಣುವ ದೃಷ್ಟಾರರಂತೆ ತೋರುತ್ತಾರೆ. “ Poets literally leave their Souls on earth. They could not otherwise be at home

---

1 ದ. ರಾ. ಬೇಂದ್ರೆ. — ಚಿದಂಬರ ಪು. ೩೦.

2 ಅದೇ — ಕವಿಶಿಷ್ಯ ಪು. ೨೦.

3 ಡಿ. ವಿ. ಜಿ ಸಂಯುಕ್ತ ಕರ್ನಾಟಕ, ೮-೧೦-೧೯೭೫.

with the generations that follow. And every Soul left on earth preserves with it in the history of manner in which it was perpetuated in the memory of Mankind.[1] ಬಹುಶಃ ಬೇಂದ್ರೆಯವರ ಕಾವ್ಯ ಸಂದೇಶ ಇದನ್ನೇ ಧ್ವನಿಸುತ್ತದೆ. ಅವರ ಸುನೀತಗಳಲ್ಲಿ ಬೇಂದ್ರೆವ್ಯಕ್ತಿತ್ವದ ಹಲವು ಧೋರಣೆಗಳನ್ನೂ, ವಿಸ್ತಾರವಾದ ಕಾವ್ಯಾನುಸಂಧಾನವನ್ನೂ ನಾವು ನೋಡಬಹುದು.

ಒಟ್ಟಿನಲ್ಲಿ ಬೇಂದ್ರೆಯವರ ಸುನೀತಗಳನ್ನು ಅವಲೋಕಿಸಿದಾಗ ಕೆಲವು ಗಮನಾರ್ಹವಾದ ವಿಷಯಗಳು ವಿದಿತವಾಗುತ್ತವೆ. ಇಟಾಲಿಯನ್ ಹಾಗೂ ಶೇಕ್ಸಪೀರಿಯನ್ ಮಾದರಿಯ ಸುನೀತಗಳನ್ನು ಬೇಂದ್ರೆಯವರು ಬರೆದಿದ್ದರೂ ನೂತನವಾದ ಗಣಸಂಯೋಜನೆ ಹಾಗೂ ಲಯವಿನ್ಯಾಸವನ್ನು ನೀಡಿದ್ದಾರೆ. ಮೂಲವನ್ನು ಅನುಸರಿಸಿಯೂ ಅದಕ್ಕೊಂದು ನಿರ್ದಿಷ್ಟವಾದ ಸ್ವರೂಪ ಪ್ರಾಪ್ತವಾಗಿದೆ. ಸುನೀತದ ಗಣವಿಭಾಗ ಮಾಡಿದಾಗ ೫ ಮಾತ್ರೆಯ ೪ ಗಣಗಳು ಪ್ರತಿ ಪಂಕ್ತಿಯಲ್ಲಿ ಕಾಣಿಸಿಕೊಳ್ಳುತ್ತಿದ್ದು ಒಳಪ್ರಾಸ ತಂದಿರುವದೂ ಉಂಟು. ಬೇಂದ್ರೆಯವರು ಪ್ರಾಸರಹಿತವಾಗಿ, ಬರೆಯುವದು ತಮ್ಮ ವೈಶಿಷ್ಟ್ಯವೆಂದು ಇಟಾಲಿಯನ್ ಮಾದರಿಯ ಸುನೀತಗಳಲ್ಲಿ ಹೇಳಿದ್ದರೂ ಅಂತ್ಯ ಪ್ರಾಸಗಳನ್ನು ಶೇಕ್ಸ-ಪೀರಿಯನ್ ಮಾದರಿಯ ಸುನೀತಗಳಲ್ಲಿ ಪ್ರಾಸಂಗಿಕವಾಗಿ ನಿರೂಪಿಸಿದ್ದುಂಟು ಇಲ್ಲಿಯ ಗಣವಿಭಾಗಗಳು ಸುನೀತದ ಲಯವಿನ್ಯಾಸವನ್ನೇ ಅನುಸರಿಸುತ್ತವೆ. ಕವಿತೆಯ ವಸ್ತು ಹಾಗೂ ಛಂದೋಲಯದಲ್ಲಿ ಸಾವಯವವಾದ ಸಂಬಂಧವಿದೆ. ಬೇಂದ್ರೆಯವರ ಸುನೀತಗಳಲ್ಲಿ ಮೂಲದಂತೆ ಪ್ರೇಮವೇ ಸುನೀತದ ವಸ್ತುವಾಗುವ ಏಕತಾನತೆ ಹೊಂದಿರದೆ ವೈವಿಧ್ಯಮಯವಾದ ವಿಷಯಸಂಪತ್ತಿನಿಂದ ಜೀವನ ಪ್ರಜ್ಞೆಯನ್ನು ಬಿಂಬಿಸುತ್ತವೆ. ನಮ್ಮ ನಾಡಿನ ಗಣ್ಯ ಲೇಖಕರ ವ್ಯಕ್ತಿಚಿತ್ರವನ್ನು ಸುನೀತಗಳಲ್ಲಿ ರೂಪಿಸುವಾಗ ನಾವು ಬೇಂದ್ರೆಯವರ ವ್ಯಕ್ತಿತ್ವದ ಶ್ರೀಮಂತಿಕೆಯನ್ನು ಕಾಣಬಹುದು; ಹಾಗೂ ಅವರ ಮೌಲ್ಯ ನಿರ್ಧಾರಕ ಶಕ್ತಿಯೂ ಪರಿಚಿತವಾಗುತ್ತದೆ. ಬೇಂದ್ರೆಯವರ ಕಾವ್ಯಚಿಂತನೆಯಲ್ಲಿ, ಸಂಕೀರ್ಣವಾದ ಬದುಕಿಗೊಂದು ಹೊಸ ಭರವಸೆಯನ್ನು ನೀಡುವಲ್ಲಿ ಸುನೀತಗಳು ಸ್ಪಷ್ಟವಾದ ಕಾವ್ಯಶಿಲ್ಪವನ್ನು ಪಡೆಯುತ್ತವೆ. ಸ್ವಚ್ಛಂದ ರೀತಿಯ ಸ್ವತಂತ್ರ ಮಾರ್ಗವನ್ನು ಅನುಸರಿಸಿದ ಬೇಂದ್ರೆಯವರ ಸುನೀತಗಳು ಅರ್ಥಜ್ಞಾನದಿಂದ ಕನ್ನಡಕ್ಕೆ ಅತ್ಯುತ್ತಮ ಸುನೀತಗಳನ್ನು ನೀಡಲು ಸಮರ್ಥವಾಗಿವೆ. ಪ್ರತಿಮೆ, ಸಂಕೇತ,

---

1 Dr. V. K. Gokak, "Bendre Poet and seer. Pub, Bombay (1970) P. 7.

ಹಾಗೂ ರೂಪಕಗಳಿಂದ ಭಾರವಾದ ಬೇಂದ್ರೆಯವರ ಅಪೂರ್ವವಾದ ಧ್ವನಿಶಕ್ತಿ ಕಲೆ, ಕಲ್ಪನಾವಿಲಾಸ, ಪದ್ಯ—ಪದ್ಯಗಳಲ್ಲಿ ಕಾರಂಜಿಯಂತೆ ಪುಟಿಯುತ್ತದೆ. ಸುನೀತದ ಕೊನೆಯಲ್ಲಿ ಹೊಸ ತಿರುವನ್ನು ಪಡೆದು ನಿಶ್ಚಿತವಾದ ಅನುಭವವನ್ನು ಕವಿತೆ ಪರಿಣಾಮಕಾರಿಯಾಗಿ ನೀಡುತ್ತದೆ. ಕನ್ನಡದಲ್ಲಿ ಸಮಸ್ತವಾದ ಜೀವನ ದೃಷ್ಟಿಯನ್ನು ಬಿಂಬಿಸುವಲ್ಲಿ ಬೇಂದ್ರೆಯವರ ಸುನೀತಗಳು ಅನನ್ಯಾದೃಶವಾಗಿವೆ. ಬೇಂದ್ರೆಯವರ ಸುನೀತಗಳು ನಾಡಿನ ಪತ್ರಿಕೆಗಳಲ್ಲಿ, ಬೇರೆ ಬೇರೆ ಕವಿತೆಯ ಸಂಕಲನಗಳಲ್ಲಿ ಹರಡಿ ಹೋಗಿದ್ದು ಅವರ ಸುನೀತಗಳನ್ನೇ ವ್ಯವಸ್ಥಿತವಾಗಿ ಸಂಕಲನವಾಗಿ ಪ್ರಕಟಿಸುವ ಅಗತ್ಯವಿದೆ.

§ § § §

೨೪

# ಅಂಬಿಕಾತನಯದತ್ತರ–'ಗರಿ'

ಎಸ್. ಪಿ. ಪಾಟೀಲ

'ಅಂಬಿಕಾತನಯದತ್ತ'ರ ಕಾವ್ಯ, ಇತಿಹಾಸ ಪ್ರವರ್ತಕ ಕಾವ್ಯ. ಅದು ಉತ್ತರ ಕರ್ನಾಟಕದ ಅನೇಕ ಕವಿಗಳಿಗೆ ಉತ್ತೇಜನವಿತ್ತು ಭಾವಗೀತಯುಗವನ್ನೂ, ಜಾನಪದ ಛಂದವನ್ನೂ ಜನಪ್ರಿಯಗೊಳಿಸಿದೆ. ವಿಶ್ವಕವಿ ರವೀಂದ್ರನಾಥ ಠಾಕೂರ, ಇಮರ್ಸನ್, ಕೀಟ್ಸ್ ಹಾಗೂ ಅರವಿಂದರ ತತ್ತ್ವಜ್ಞಾನವನ್ನು ಅರಗಿಸಿಕೊಂಡು ಕನ್ನಡ ಕಾವ್ಯವನ್ನು ಶ್ರೀಮಂತಗೊಳಿಸಿದೆ. ಇಲ್ಲಿಯ ಸೌಂದರ್ಯದೃಷ್ಟಿ ವಿಶಿಷ್ಟವಾದುದು, ಕಾವ್ಯದ ಭಾಷೆ ಸುಲಭ. ಉತ್ತರ ಕರ್ನಾಟಕದ ಮನೆಮಾತುಗಳೇ ಸಹಜರೀತಿಯಲ್ಲಿ ಬಸಳಲ್ಪಟ್ಟಿವೆ. ಪದಪ್ರಯೋಗದಲ್ಲಿ ಅವರೊಬ್ಬ ಗಾರುಡಿಗ. ೧೯೧೮ ರಿಂದ ೧೯೩೦ರ ವರೆಗೆ ಅವರು ರಚಿಸಿದ ಕವಿತೆಗಳು 'ಗರಿ' (೧೯೩೨) ಯಲ್ಲಿ ಪ್ರಕಟವಾಗಿವೆ. ಇಲ್ಲಿಯ ಕವಿತೆಗಳು ತಮ್ಮದೇ ಆದ ವೈಶಿಷ್ಟ್ಯದಿಂದ ಇಂದಿಗೂ ಜೀವಂತವಾಗಿವೆ.

**ಪ್ರಣಯಗೀತಗಳು :**

ಅಂಬಿಕಾತನಯದತ್ತರ ಪ್ರಣಯಗೀತಗಳಲ್ಲಿ ಜನಪದ ಲಯವನ್ನು ಕಾಣಬಹುದು. ಜನಪದದ ಅಂತಃಸತ್ವವನ್ನು ಹೀರಿಕೊಂಡು ಅದನ್ನು ತಮ್ಮ ಕವನಗಳಲ್ಲಿ ವ್ಯಕ್ತಪಡಿಸುವುದುಂಟು. "ಶೃಂಗಾರವು ತುಂಬ ಕೋಮಲವಾದ ರಸ. ಅದಕ್ಕೆ ಒಪ್ಪುವ ಸಹಜ ಸರಳತೆ ಹಳ್ಳಿಗರ ಮಾತಿನಲ್ಲಿ ಸ್ವಾಭಾವಿಕವಾಗಿ ದೊರೆಯುತ್ತದೆ. ........ ಮಗುವಿನ ತೊದಲು ನುಡಿಯಂತೆ, ಮುಗ್ಧೆಯ ಸರಳ ವಚನದಂತೆ ಗ್ರಾಮ್ಯಭಾಷೆಯಲ್ಲಿ ಮನಸ್ಸನ್ನು ಸೆರೆಗೊಳ್ಳುವ ಒಂದು ವಿಶೇಷ ಗುಣವಿದೆ. ಅವರ ರಹಸ್ಯವನ್ನು ಅಂಬಿಕಾತನಯದತ್ತರು ಚೆನ್ನಾಗಿ ವಶಮಾಡಿಕೊಂಡಿದ್ದಾರೆ. ಹಳ್ಳಿಗನ ಮಾತಿನಲ್ಲಿ ಹಳ್ಳಿಗರ ಪ್ರಣಯವನ್ನು ಅವರು ವರ್ಣಿಸಲು ಬಲ್ಲರು; ಕೃತಕತೆ ಎಳ್ಳಷ್ಟೂ ತೋರದಂತೆ, ಅದರೊಂದಿಗೆ ಕವಿಕಲ್ಪನೆಯ ತೆಳುಪೊರೆಯೊಂದನ್ನು ನೇಯಲೂ ಬಲ್ಲರು." ಎಂಬ ತೀ. ನಂ. ಶ್ರೀ ಅವರ ಅಭಿಪ್ರಾಯ, ಅಂಬಿಕಾತನಯದತ್ತರ ಪ್ರಣಯ ಗೀತಗಳ ವಿಷಯದಲ್ಲಿ ದಿಕ್ಸೂಚಿಯಾಗಿದೆ.

'ರಾಗ–ರತಿ' ಒಂದು ಸಂಜೆಯ ಚಿತ್ರ. ಮುಗಿಲಿನ ಮುಖವು ಪ್ರಣಯಿಯ ಮುಖದಂತೆ 'ರಾಗ'ದಿಂದ ಕೆಂಪೇರಿದೆ:

ನೆಲದ ಅಂಚಿಗೆ ಮಂಜಿನ ಮುಸುಕು ಹ್ಯಾಂಗೋ ಬಿದ್ದಿತ್ತs
ಗಾಳಿಗೆ ಮ್ಯಾಲಕ್ಕೆದ್ದಿತ್ತs

ಪ್ರಣಯಿಯ ಮುಖದ ಮೇಲಿನ ಮುಸುಕು ಓರೆಯಾಗಿದೆ. ಅದರ ಮೇಲೆ ಬಿದಿಗೆಯ ಚಂದ್ರನ ಚೊಗಚಿಯ ಹೂವಿನ ನಗು ಮೂಡಿದೆ. ಇರುಳು ಹೆಣ್ಣಿನ ಹೆರಳಿನಿಂದ ಅರಳು ಮಲ್ಲಿಗೆ ಉದುರಿದ ಹಾಗೆ ಅತ್ತಿತ್ತ ತಾರೆಗಳು ಮೂಡಿವೆ. ಇಂಥ ಸಮಯದಲ್ಲಿ 'ಬಯಕೆಯ ಹೆಣ್ಣು' ನೀರು ತರಲು ಹೋಗಿ ಹಿಂದಿರುಗುತ್ತಿದ್ದಾಳೆ. 'ಕಾಮಿ' ಅವಳನ್ನು ಹಿಂಬಾಲಿಸುತ್ತಿದ್ದಾನೆ. ಗಾಳಿ ಮೆಲ್ಲಗೆ ಸುಳಿದು ಅವಳ ಸೆರಗನ್ನು ಹಿಡಿದು ಬಿಟ್ಟು ಆಟವಾಡುತ್ತಿದೆ. ಇಲ್ಲಿಯ ಪ್ರತಿಯೊಂದು ಮಾತೂ ಅರ್ಥಗರ್ಭಿತವಾಗಿ ಹೊಂದಿಕೊಂಡಿದೆ. "ಇದು ಯಾವ ಹಳ್ಳಿಯಲ್ಲಾದರೂ ನಡೆಯಬಹುದಾದ ದಿನಚರ್ಯೆ. ಆದರೆ ಕವಿಯ ಪ್ರತಿಭೆ ಅದಕ್ಕೆ ಎಂಥ ಮೆರಗು ಕೊಟ್ಟದೆ! ಇಲ್ಲಿ ಒಂದು ವರ್ಣನೆಯೂ ಅಪ್ರಕೃತವಲ್ಲ; ಒಂದು ಧ್ವನಿಯೂ ಅನುಚಿತವಲ್ಲ. ಅದಕ್ಕೆ ಬದಲು ಪ್ರಕೃತಿಯ ರಾಗದ ಚಿತ್ರದಿಂದಲೇ ಈ ಕಾಮಿಗಳ ಪ್ರಣಯದ ವಸ್ತು ಇಷ್ಟು ಸುಂದರವಾಗಿರುವದು. ಇಲ್ಲಿ ಪ್ರಕೃತಿ ಹೆಚ್ಚು ರಾಗ ಮುಗ್ಧವಾಗಿತ್ತೋ, ಕಾಮಿ ಹೆಚ್ಚು ರಾಗಮುಗ್ಧನಾಗಿದ್ದನೋ ಹೇಳುವದು ಕಷ್ಟ!" ಎಂದು ತೀ. ನಂ. ಶ್ರೀ ಅವರು ಅಭಿಪ್ರಾಯಪಟ್ಟದ್ದಾರೆ.

'ನಗೀ ನವಿಲಿ'ನಲ್ಲಿ ಪ್ರಣಯದ ಇನ್ನೊಂದು ಮುಖ ಚಿತ್ರಿತವಾಗಿದೆ. 'ನಾರಿ'ಯ ಮುಖದ ಮೇಲೆ 'ನಗೆಯ ನವಿಲು' ಆಡುತಿತ್ತು–ನರ್ತಿಸುತ್ತಿತ್ತು.

ಮಿನ ಮಿನ ಮಿನ ಮಿಂಚತಿತ್ತ
ಮೂಡತ್ತಿತ್ತ ಮುಳುಗತಿತ್ತ
ಮುಳುಗತಿತ್ತ ತೊಳಗತಿತ್ತ
ನೆಲಾ ಜಲಾ ಬೆಳಗತಿತ್ತ.

ನೆಲ–ಜಲಗಳೆರಡನ್ನೂ ಬೆಳಗುವ ನಗೆ ಅದಾಗಿದ್ದಿತು. ಅದರ ನೋಟ ಪ್ರಿಯನ ಕಡೆಗಿರಲಿಲ್ಲ. ಮುಗಿಲೆಡೆಗೆ ಅದರ ದೃಷ್ಟಿ. ಈ ಜೀವಿ "ನೊಂದುಕೊಂಡು ಹಗಲಿರುಳು ಮಿಡುಕಾಡತಿತ್ತ" ಕಣ್ಣೀರಿನ ಮಳೆ ಸುರಿಸಿ "ಬೇಡತಿತ್ತs ದೊರಕದಕ್ಕ ಬಾಡತಿತ್ತ."

"ಪ್ರೇಮವು ಮಳೆ ಬಿಸಿಲುಗಳ ಆಟ. ಅಲ್ಲಿ ಈ ನಿರಾಶೆಯೂ ಸ್ಥಿರವಲ್ಲ. ಪ್ರಿಯನ ಪ್ರಯತ್ನ ದೃಢವಾಗಿದ್ದರೆ, ಪ್ರೇಯಸಿಯ ಹೃದಯ ಆರ್ದ್ರವಾಗಿದ್ದರೆ ಮಿಡುಕಾಟ ಮುಗಿಯಲೇ ಬೇಕು, ಇಬ್ಬರೂ ಒಂದು ಗೂಡಲೇ ಬೇಕು." ....

ಹೀಗೆ “ ‘ಅಂಬಿಕಾತನಯದತ್ತರ’ ಪ್ರಣಯಗೀತೆಗಳಲ್ಲಿ ಜೀವನದ ಉಲ್ಲಾಸವೂ ಇದೆ, ಯಾತನೆಯೂ ಇದೆ. ಈ ಯಾತನೆಯ ಅನುಭವವು ಪ್ರೇಮಕ್ಕೆ ಒಂದು ಹೊಸ ಅರ್ಥವನ್ನು ಕೊಟ್ಟಿದೆ. ಈ ಪ್ರೇಮವು ಮುಗಿಲಿನ ಬಣ್ಣಗಳಲ್ಲಿ ಕಟ್ಟತಕ್ಕ ಗಾಳಿಗೋಪುರ ಮಾತ್ರವಲ್ಲ, ಬರಿಯ ಕಣ್ಣು ಬೆರಗು ಮಾತ್ರವಲ್ಲ, ಅದು ಬಾಳಿನ ಕೆಸರಿನಲ್ಲಿ ಆಳವಾಗಿ ಬೇರೂರಿದ್ದು. ಗಾಳಿ, ಮಳೆ, ಬಿಸಿಲುಗಳನ್ನು ತಡೆದದ್ದು. ಅದರಿಂದಲೇ ಕೊನೆತನಕ ನಿಲ್ಲತಕ್ಕದ್ದು. ಇನ್ನು ಅದರ ನಿರೂಪಣೆಯೋ ! — ಮಾತು ಎಷ್ಟು ಸರಳ, ಛಂದಸ್ಸಿನ ಗತಿ ಎಷ್ಟು ಮಧುರ, ಭಾವ ಎಷ್ಟು ಆರ್ದ್ರ ! ” ಎಂದು ಅಂಬಿಕಾತನಯದತ್ತರ ಪ್ರಣಯ ಗೀತೆಗಳನ್ನು ಕುರಿತ ತೀ. ನಂ. ಶ್ರೀ ಅವರ ಅಭಿಪ್ರಾಯ ತಿಲಕಪ್ರಾಯವಾಗಿದೆ.

**ಸಾಮಾಜಿಕ ಚಿತ್ರ :**

‘ ಕೆಲಸವಿಲ್ಲದವರ ಹಾಡು ’ ನಮ್ಮ ಜನರ ರೀತಿ-ನೀತಿಯನ್ನು ನಿರೂಪಿಸುವದು. ಆಲಸ್ಯದಿಂದ ಕೂಡಿದ ಜನ, ಹಸಿವೆಯಿಂದ ತತ್ತರಿಸುವದನ್ನು ತೋರುವದು. ಆಗ, ಇದ್ದ ಅನ್ನವನ್ನೇ ತಿನ್ನುವವರೆಲ್ಲ. ಆದುದರಿಂದ :

ಅನ್ನವೆಲ್ಲವೂ ಆಯಿತು ಚಿನ್ನ !<br>
ನಾನೇ ನನ್ನನು ತಿನ್ನುವ ಅನ್ನ !

ಎಂದು ಮನುಷ್ಯ ತನ್ನನ್ನೇ ತಾನು ತಿನ್ನುವುದೊಂದು ಮಾತ್ರ ಬಾಕಿ ಉಳಿಯುವದು. ಈ ರೀತಿಯ ಶೋಚನೀಯ ಸ್ಥಿತಿಗೆ ಕಾರಣ :

ದೇವರ ಕಾಟವೊ ಮಾನವರಾಟವೊ<br>
ಹತ್ತಿ ಬಿತ್ತಿ ಬೆಳಕೊಂಡೆವು ಹಾಳು<br>
ತಿನ್ನಲು ಬೆಳೆಯದು ತುಸು ಕಡಿ ಕಾಳು<br>
ಬಕ್ಕರಿಸುವದೋ ಹೆಂಟೆಯ ಕೂಳು ?

ಎಂಬ ಪ್ರಶ್ನೆ. “ ಕೆಲಸವಿಲ್ಲದವರ ಹಾಡು ” ಈ ದಿಶೆಯಲ್ಲಿ ಸಾಗಿದ್ದರೆ ‘ ತುತ್ತಿನ ಚೀಲ ’ ದಲ್ಲಿ ಸಮಾಜ ಚಿತ್ರಣದ ಇನ್ನೊಂದು ಅಂಗ ವ್ಯಕ್ತವಾಗಿದೆ. ಮಾನವ ಹೃದಯದ ಆರ್ತನಾದ ಮಿಡಿಯುವದು. ಕವಿ, ಅನ್ನದೇವನ ದರ್ಶನಕ್ಕೆ ಹೋಗಿ ಅಲ್ಲಿ ಕಂಡದ್ದು—

ಡೊಂಬರ ಪೂಜೆಯು,<br>
ಕಾಗೆಯ ಮಂತ್ರ,

ಗಾಳಿಯ ಎಡೆಯು,
ಬೊಬ್ಬೆಯ ಗಂಟೆ—

ಅನ್ನಕ್ಕಾಗಿ ಕಚ್ಚಾಡುವ ವ್ಯವಹಾರ. ಈ ಕಗ್ಗವಿಯಲ್ಲಿ ಮೌನದ ವೀಣೆಗೆ ಕರುಳಿನ ತಂತಿ, ಮಿಡಿದೂ ಮಿಡಿದೂ ಬೆರಳು ಮುರಿದುವಂತೆ. ಬಡತನದ ಮೂಕ ವೇದನೆಯನ್ನು, ದುಃಖ-ದುಮ್ಮಾನವನ್ನು ವ್ಯಕ್ತಪಡಿಸಲು ಇದಕ್ಕೂ ಸಮರ್ಥ ಪದಗಳಾವವು ? ಬಡತನದ ಚಿತ್ರ ಈ ರೀತಿ ಇದ್ದರೆ, ಎಲ್ಲವೂ ಅದೇ ಅಲ್ಲ. ಶ್ರೀಮಂತರೂ ಅಲ್ಲಿದ್ದಾರೆ. ಆ ಕೋಟೆಯ ಮಹಿಮೆಯೆಂದರೆ ಅಲ್ಲಿಯ ದೈವುಳ್ಳವರಿಗೆ ದಯವೇ ಇಲ್ಲ. ಕೂಳಿನ ಕೋಟೆ ತಿತ್ತಿರಿ ತುಂಬಿದೆ. ಆದರೆ

ಬಿಡುಗಣ್ಣವರಿಗೆ
ಕಾಣುವದಿಲ್ಲ
ಅಮೃತದ ತೇಗಿನ
ಮದವಂತಹದು !

ಆದುದರಿಂದ “ಹಸಿದವ ಬಲ್ಲ, ಹಸಿವೆಯ ಶೂಲೆ !” ಈ ಬಡಜನರ ಕಷ್ಟ, ದುಃಖ, ಸಂಕಟವನ್ನು ಸಿರಿವಂತರು ಅರಿಯದೇ ಹೋದಾಗ ‘ಶಿವಶಿವಾ ಹೇ ಮಾದೇವಾ’ ಎಂದು “ಅತ್ತಿತು ಕೂಗಿತು, ಚೀರಿತು ಜೀವ” ಆದರೆ ಆ ಬಡವರ ಮಾತು ಮುಗಿಲಿನ ಕಿವಿಯನು ಮುಟ್ಟಲೇ ಇಲ್ಲ. ಕಿಕ್ಕಿರಿ ತುಂಬಿದೆ ಭೂಮಿಯ ಕಣಜ. ಕಕ್ಕಸಬಡುತಿದೆ ಜೊಕ್ಕಸದೊಡಲು. ಬಾಳಿಗಿಂತಲೂ ಕೂಳೇ ಮೇಲೋ ?

ಆಗ ಮೌನದ ವೀಣೆಯೂ ಮಿಡಿಯುವದು. ನಿರಾಶೆಯ ಉರಿ ಮೇಲೇ-ರುವದು. ಆಗ ಅವರು,

ದೇವರದೊಂದು ಗೋರಿಯ ಕಟ್ಟಿ,
ಧರ್ಮದ ಧೂಪಕೆ
ಬೆಂಕಿಯನಿಕ್ಕಿ
ಗಣ ಗಣ ಬಾರಿಸಿ

ಪ್ರಾಣದ ಗಂಟೆಯು ಸಾವಿನ ನೋವಿಗೆ ಕಲಮಲವೆದ್ದು ನೀವನೆಲ್ಲಾ ತುತ್ತುವೆನೆಂದು ಗದುರುತ್ತಿಹುದು— ಗರ್ಜಿಸುತಿಹುದು ಬಡಬಗ್ಗರ ತುತ್ತಿನ ಚೀಲದ,

ಒಳಗಿನ ಒಳಗಿನ
ಒಳದನಿಯೊಂದು

ಎಂದು ಹೇಳುವಲ್ಲಿ ಬಡಜನತೆಯ ಮನದಾಳಕ್ಕೆ ಇಳಿದು ಅವರ ಹಸಿವಿನ ಸಂಕಟವನ್ನು ಪದಪುಂಜಗಳಲ್ಲಿ ಸೆರೆ ಹಿಡಿಯಲು ಪ್ರಯತ್ನಿಸಿದಂತಿದೆ. ಕವನದ ಆಶಯವನ್ನೂ, ಸಿದ್ಧಿಯನ್ನೂ ಕುರಿತು ತೀ. ನಂ. ಶ್ರೀಯವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ—"ಇಂದಿನ ಆರ್ಥಿಕ ಸಂಗ್ರಾಮದ ತತ್ತ್ವವು ಈ ಕವನದಲ್ಲಿ ಮೂರ್ತಿಗೊಂಡಿದೆ. ಅಲ್ಪಾವಕಾಶದ ಕಿರಿಯ ಚರಣಗಳಲ್ಲಿ, ಕಿರಿಯ ಮಾತುಗಳಲ್ಲಿ ಹಿರಿಯ ಘೋರ ಸತ್ಯವೊಂದು ವ್ಯಕ್ತವಾಗಿದೆ. ಇಲ್ಲಿಯ ನುಡಿ ಬಲು ಹಿಡಿತದಲ್ಲಿದೆ, ಹಲವು ಸಲ ಓದಿ ಮುಗುಚಿದ ಹೊರತು ಕವನದ ಭಾವವನ್ನೆಲ್ಲಾ ಗ್ರಹಿಸುವುದು ಅಸಾಧ್ಯ. ಇಷ್ಟಾದರೂ ಭಾವಕ್ಕೆ ಭಾಷೆ ಅಪರ್ಯಾಪ್ತವಲ್ಲ. ಇದು ರೂಪಕಾಲಂಕಾರದ ಸಾಮರ್ಥ್ಯ........ಅಂಬಿಕಾತನಯದತ್ತರ ಕವಿತೆ ಒಂದು ಚಿಲುಮೆಯಂತೆ. ನೋಡುವದಕ್ಕೆ ಚಿಕ್ಕದಾಗಿ ಕಂಡರೂ, ತೋಡಿದಷ್ಟೂ ಅರ್ಥವು ಉಕ್ಕುತ್ತಲೇ ಇರುತ್ತದೆ. ತೋಡುವ ಶ್ರಮವು ಮಾತ್ರ ಒಂದೊಂದು ಸಲ ಸ್ವಲ್ಪ ಹೆಚ್ಚಾಗಬಹುದು."

ಈ ರೀತಿ ಬಡವರ ಒಳದನಿ ಸಿರಿವಂತರಿಗೆ ಅರ್ಥವಾಗದಿರುವಾಗ ‘ಕರಿಮುರಿ ನಾಯಿ’ ಸ್ಥಿತಿ ಏನಾಗಿರಬೇಕು? ಕರಿಮುರಿನಾಯಿ ಕುಂಯಿಗುಡುತಿತ್ತು, ಭಟ್ಟರ ಬಾಯಿ ಒಟಗುಡುತ್ತಿತ್ತು. ಮಳೆ ಸುರಿದು ನೀರಿನ ಕಾಲುವೆ ಹರಿಯುತ್ತಲಿತ್ತು, ರಭಸದ ಗಾಳಿ ಬೀಸುತ್ತಲಿತ್ತು. ಬೆಚ್ಚನೆ ಮನೆಯಲ್ಲಿದ್ದ ಭಟ್ಟರು ಹೊಸ್ತಿಲದೊಳಗೆ ನಿಂತಿರಲು ಆ ಕುನ್ನಿಯು ಮೆಟ್ಟಿಲು ಏರಲು ಹವಣಿಸಿದಾಗ ಬಾಗಿಲು ಮುಚ್ಚಿತ್ತು,

ಛಪ್ಪರೆ ಛಪ್ಪರೆ ಭಲರೆ! ಭಟ್ಟರೋ
ಕಾಯ್ದರು ಮನೆಯನು ಏನು ದಿಟ್ಟರೋ!
ಕುನ್ನಿಯು ಒಳಗೇ ಬಂದೇನೆಂದಿತು;
ಭಟ್ಟರು, ಬಂದರೆ ಕೊಂದೇನೆಂದರು.

ಭಟ್ಟರ ದಿಟ್ಟತನವನ್ನೂ ಅವರಂತಹ ಇನ್ನೂ ಅನೇಕರಲ್ಲಿ ಬರಬೇಕಾದ ಪ್ರಾಣಿದಯೆ, ಭೂತದಯೆ, ಮಾನವೀಯತೆಯ ಕೊರತೆಯನ್ನು ಹರಿತವಾದ ವಿಡಂಬನೆಯ ಮೂಲಕ ಎಚ್ಚರಿಸಿದ್ದಾರೆ.

**ಕನ್ನಡನಾಡು–ನುಡಿ :**

ಕನ್ನಡನಾಡು–ನುಡಿಯನ್ನು ದೂರದಿಂದ, ಪರಕೀಯನಂತೆ ಕಾಣುವ ದೃಷ್ಟಿ ಅಂಬಿಕಾತನಯದತ್ತರದಲ್ಲ. ಅವರ ಕನಸು–ಮನಸಿನಲ್ಲಿಯೂ ಕನ್ನಡ ವ್ಯಾಪಿಸಿದೆ. ‘ಕನಸಿನೊಳಗೊಂದು ಕಣಸು’ ಕವನದಲ್ಲಿ ನಾಡದೇವಿಯ ಹತ್ತಿರ ಹೋಗಿ, ‘ಯಾರು ನಿಂದವರಲ್ಲಿ ತಾಯೆ’, ‘ಬೇಸರದ ದನಿಯೇಕೆ ಹೆಸರ ಹೇಳಲ್ಲ’, ‘ನೀನಾರ ಮನೆಯವಳು ಮುತ್ತೈದೆ ಹೇಳು, ‘ಅಪ್ಪರಿಲ್ಲವೆ ನಿನಗೆ ಇಷ್ಟರಿಲ್ಲೆ?’ ಎಂದೂ ಕೇಳುವರು. ‘ಇರುವರೇ ಇದ್ದರೆ ಮಕ್ಕಳೆಂಬವರು?’ ಎಂಬ ಪ್ರಶ್ನೆಗೆ ‘ಇರುವ

ರೆಂದರು ಕೂಡ ಯಾರು ನಂಬುವರು ? ' ಎಂಬ ತಾಯಿಯ ಮರುಪ್ರಶ್ನೆ ಅವಳ ಮಕ್ಕಳ ಸಂಬಂಧವನ್ನು ವಿವರಿಸುವದು. ಅವರ ನಡತೆಯ ಕುರಿತು ಬೇಸರ ವಿದ್ದರೂ ಅವರನ್ನು ಪೂರ್ಣ ತಿರಸ್ಕರಿಸುವ ಮನೋಭಾವ ಅವಳದಲ್ಲ. ಇರುವ ರೆಂದು ಹೇಳುವುದಾದರೆ ಅದಕ್ಕೆ ತಕ್ಕ ರೀತಿಯಲ್ಲಿ ಅವರಿಲ್ಲ. ಆದುದರಿಂದ ಅವ ರನ್ನು ಜಾಗೃತಗೊಳಿಸುವ ಹಂಬಲ ಅವಳದಾಗಿದೆ. ಅವಳ ರಾಜಕಳೆಯನ್ನು ಕಂಡ ಕವಿ ' ಯಾವುದಾದರೂ ನಾಡದೇವಿಯೇ ನೀನು ? ' ಎಂದು ಪ್ರಶ್ನಿಸುವರು. ಅದಕ್ಕೆ ನಾಡದೇವಿ, ' ಭಾವುಕರ ಕಂಗಳಿಗೆ ದೇವಿಯೇ ನಾನು ' ಎಂದು ಹೇಳಲು, ಏನಾದರೂ ಬೇಡಬಂದಿರುವೆಯಾ ಎಂದು ಕೇಳುವರು. ಅದಕ್ಕೆ ' ಬೇಡಿದರೆ ಬೇಡಿ ದುದ ಕೊಡುವೆಯಾ ಇಂದು ? ' ಎಂದು ಪ್ರಶ್ನಿಸಲು ಕವಿ ಸಂದಿಗ್ಧತೆಗೆ ಸಿಲುಕಿ ಕೊಳ್ಳುವನು. ಅದಕ್ಕಾಗಿ ' ಅಹುದು ಕೊಡುವೆನು ಎಂದು ನಾನೆನ್ನಬಹುದೆ ? ಎಂದು ಸಂದೇಹದಿಂದ ಕೂಡಿದ ಕವಿಯನ್ನು ಮೆಚ್ಚಲಾರದೆ ' ಬಹುದು-ಗಿಹುದಿನ ಶಂಕಿ ವೀರನಹುದೆ ? ' ಅವನ ವೀರತನವನ್ನು ಶಂಕಿಸುವಳು. ಹಿಂಜರಿಯುವ ಅಂಜಿಕೆ ಕೈಹಿಡಿದಿದೆ ಎಂದು ತನ್ನ ಸ್ಥಿತಿಯನ್ನು ತೋಡಿಕೊಳ್ಳುವನು. ಅದಕ್ಕೆ ಕನ್ನಡ ಹುರುಪಿನಿಂದ ಮುಂದೆ ಬಾರಯ್ಯ ಎಂದು ಅವನಲ್ಲಿ ಉತ್ಸಾಹ ತುಂಬಲು ತಾಯಿ ಪ್ರಯತ್ನಿಸುವಳು. ಅವಳ ಪ್ರೋತ್ಸಾಹದಿಂದ ಉತ್ತೇಜಿತನಾದ ಕವಿ, ' ಚಂಡಿ ಚಾಮುಂಡಿ ಪೇಳ್ ಬೇಕಾಮುದೇನು ? ' ಎಂದು ಧೈರ್ಯವಾಗಿ ಪ್ರಶ್ನಿಸುವನು.

' ಗಂಡುಸಾದರೆ ನಿನ್ನ ಬಲಿಕೊಡುವೆಯೇನು ? '

ಎಂದು ನಾಡಿನ ಕಲ್ಯಾಣಕ್ಕಾಗಿ ಅವಶ್ಯವಾದ ಬಲಿಯನ್ನು ಕೊಡಲು ಕೇಳುವಳು. ಅವಳು ಕೇಳಿದ ತ್ಯಾಗ ಸಾಮಾನ್ಯವಾದುದಲ್ಲ. ನಾಡು-ನುಡಿಗಾಗಿ ಇಂಥ ಅಪೂರ್ವ ತ್ಯಾಗವನ್ನು ಮಾಡಲು ಬೇಕಾದ ಮನಃಸ್ಥಿತಿ ಕನ್ನಡಿಗರಲ್ಲಿ ಮೂಡಬೇಕಾಗಿದ್ದಿತು. ಆದರೆ ಸ್ವತಃ ಕವಿಯೂ ಸಹ ಅದಕ್ಕೆ ಪೂರ್ತಿ ಸಿದ್ಧನಾದಂತೆ ತೋರುವದಿಲ್ಲ. ಆದುದ ರಿಂದ ' ಮನವು ನಡುಗಿತು, ತನುವು ನವಿರಿಗೊಳಗಾಯ್ತು; ನೆನವು ನುಗ್ಗಿತು-ಹೊರಗೆ ಕಂಡೆ-ಬೆಳಗಾಯ್ತು ' ಕನ್ನಡ ನಾಡದೇವಿಯ ಕನಸಿನ ಸಂದರ್ಶನ ಅವಳ ಹೀನ ಸ್ಥಿತಿಯನ್ನು ಚಿತ್ರಿಸುವದು. ಮಕ್ಕಳ ಅನಿಶ್ಚಯತೆ—ಅಂಜಿಕೆಗಳನ್ನು ವ್ಯಕ್ತ ಪಡಿಸುವದು. ಆದರಂತೆ ಇಂಥ ಹೇಡಿತನವನ್ನು ತೊರೆಯದೇ ನಾಡದೇವಿ ಪುನಃ ತನ್ನ ವೈಭವವನ್ನು, ಆತ್ಮಗೌರವವನ್ನು ಪಡೆಯಲಾರಳೆಂದು ಸೂಚಿಸಿದ್ದಾರೆ. ಅದಕ್ಕಾಗಿ ಕನ್ನಡಿಗರು ಬಲಿದಾನಕ್ಕೆ ಸನ್ನದ್ಧರಾಗಬೇಕೆಂದು ಎಚ್ಚರವಿತ್ತಿದ್ದಾರೆ.

ಕನ್ನಡನಾಡ-ನಡುಮನೆಯಾದ ' ಹಂಪೀ ವಿಜಯನಗರ ದರ್ಶನ ' ಯಾರ ಮನವನ್ನಾದರೂ ಕೊರಗಿಸದಿರದು. ಕಾಳನರ್ತಕನ ಕಾಲ್ಕೆಳಗೆ ತೊತ್ತುಳಿಗೊಂಡು ಹುಡಿಗೂಡಿ ಹೋದ ಕನ್ನಡನಾಡಿಗಿದಿರಾಗಿ ಬಂದು ನೋಡುವರು. ಅದರ ಸ್ಥಿತಿಯನ್ನು ನೋಡಿದ ಕವಿಯ ಹೃದಯಕ್ಕೆ ಅದರ ಮೊರೆ ಕೇಳುವದು. ' ಉದ್ಧಾರ

ಮಾಡಿರಿ ’ ಎಂದು ಪಾತಕಿ ಬಂದು ಪಾವನನ ಚರಣಗಳಿಗೆ ’ ಎರಗುವಂತೆ ಕವಿಗೆ ಭಾಸವಾಗುವದು. ಹಂಪೆಯನ್ನು ಹಾಳು ಕೊಂಪೆಯೆಂದು ಕಂಡು ಕಂಡು ಮರುಗಿದವರು ಅನೇಕರಿದ್ದರೂ ‘ ಉದ್ಧಾರ ಮಾಡಿರಿ ’ ಎಂಬ ಯಾಚನೆ ಅಂಬಿಕಾತನಯದತ್ತರ ಸೂಕ್ಷ್ಮ ನಿರೀಕ್ಷಣೆಗೊಳಗಾಗಿದೆ.

ಧರ್ಮ–ಕರ್ಮದ ಪುರಾತನ ಪುರಗಳಿವು ಪೂರ್ವ
ಧರ್ಮ ಬಲದಿಂದೇರಿ ಕರ್ಮಬಲದಿಂದಿಳಿದು
ಮರ್ಮದೊಳು ನೆಡುವಂತೆ ಸಪ್ರಯೋಗಿಕವಾಗಿ
ಕಲಿಸುವುವು ತತ್ತ್ವವೆಂದು.

ಪಾಪ-ಪುಣ್ಯಗಳ ಪರಿಣಾಮವಾಗಿ ಒಳಿತು–ಕೆಡುಕು ಸಂಭವಿಸುವದೆಂಬ ಅಮೌಲ್ಯ ತತ್ತ್ವವನ್ನು ಹಂಪೆಯ ಅವಸ್ಥೆಯಲ್ಲಿ ಕಂಡಿದ್ದಾರೆ.

ಕನ್ನಡ ನಾಡು–ನಾಡದೇವಿಯಂತೆ ಕನ್ನಡದ ಆದಿಕವಿಯ ಬಗೆಗೆ ಅಂಬಿಕಾ–ತನಯದತ್ತರಿಗೆ ಹೆಮ್ಮೆ–ಅಭಿಮಾನ. ಪಂಪನ ಸವ್ಯಸಾಚಿ ವ್ಯಕ್ತಿತ್ವ ‘ ಪಂಪನ ನೆನೆದು ’ ಕವನದಲ್ಲಿ ಮೂರ್ತರೂಪ ತಾಳಿದೆ. ಚಿನ್ನು ನಡೆಯು, ಚಿನ್ನು ನುಡಿಯು, ಚಿನ್ನು ಕೀರ್ತಿಯು, ಎಂದು ಪಂಪನ ನಡೆ–ನುಡಿ–ಕೀರ್ತಿಯನ್ನು ಮೆಚ್ಚಿದ್ದಾರೆ. ಅಲ್ಲದೆ,

‘ ಕದನದೊಳಂ ಸದನದೊಳಂ
ವದನದೊಳಂ ನಿನ್ನ ಕೀರ್ತಿ ಮೆರೆಯಲಿ ಸತತಂ ’

ಎಂದು ಹಾರೈಸಿದ್ದಾರೆ.

ಪಂಪನಂತೆಯೇ ಹೊಸಗನ್ನಡದ ಸರ್ವೋದಯ ಕವಿ ಮುದ್ದಣನ ಬಗೆಗೆ ಆದರದಿಂದ ನುಡಿದಿದ್ದಾರೆ. ಮಂಜು ಮುಸುಕಿದ ಮುಗಿಲ ಕತ್ತಲೆಯ ಕನ್ನಡ ನಾಡಿನೊಳು ಮುಂಜಾವಿನವಳ ತಂಬೆಲರೊಡನೆ ಹುಂಜವೆಕ್ಕಕ್ಕಿ ಕೂಗಿದು’ದು ಮುದ್ದಣನ ಮೂಲಕ. ಕಲ್ಲಾದ ಕನ್ನಡಕ್ಕೆ ಜೀವಕಳೆಯನ್ನು ತುಂಬಿದವ ಅವ.

ಕರ್ನಾಟಕದ ಗತವೈಭವವನ್ನು ನೆನೆದು ಇಂದಿನ ದುರ್ಗತಿಗೆ ಮರುಗಿದ ಕವಿ ಮುಂದಿನ ಏಳ್ಗೆಗಾಗಿ ಯೋಚಿಸದೇ ಇಲ್ಲ. ಕರ್ನಾಟಕದ ಏಳ್ಗೆಗಾಗಿ, ಪ್ರಗತಿಗಾಗಿ ಅವರು ತೋರಿದ ಹಂಬಲ ಹಿರಿದು. ಪಂಗಡ ಪಂಗಡವನ್ನು ಬಿಟ್ಟು ಒಂದಾಗಿ ‘ ಸೀಮೋಲ್ಲಂಘನ ’ ಮಾಡೋಣವೆಂದು ಸಂಗಡಿಗರಿಗೆ ಕರೆಯುತ್ತಿದ್ದಾರೆ. ಇಲ್ಲಸಲ್ಲದ ಅಡೆ–ತಡೆಗಳನ್ನು ಬೀಸಾಡೋಣ. ದೇಶದ ಪ್ರಗತಿಗಾಗಿ ಅಕ್ಕ ತಂಗಿಯರಿಗೆ ವಿದ್ಯೆಯನು ಕಲಿಸೋಣ. ಹೀಗೆ :

‘ ಹಿಂದಿರುವ ಹಗೆಯೀಗೆ ಅಂಗಾರವಾಯ್ತು
ಮುಂದಿರುವ ಗೆಳೆತನದ ಸಿಂಗಾರವಾಯ್ತು
ಇಂದು ಮುಟ್ಟಿದ ಪತ್ರಿ ಬಂಗಾರವಾಯ್ತು
ಹೋಗೋಣ ಬಾ ಇನ್ನು ಸೀಮೆಯನು ದಾಟಿ.

ಹಿಂದಿನ ವೈರವನ್ನು ಮರೆತು ‘ಒಂದೇ ತಾಯಿಯ ಮಕ್ಕಳಂತೆ ಒಂದಾಗಿ’ ಮುಂದಿರುವ ಜನರ ಜೊತೆಗೆ ಸರಿ-ಸಮಾನರಾಗಿ ಹೋಗೋಣ.

ಬೇಗದಿಂ ಕರುನಾಡ ಹರಕುತನವನ್ನು
ಕಳೆದು ಹಿರಿದಾಗೋಣ ಸೀಮೆಯನು ದಾಟಿ.

ಎಂದು ಕರ್ನಾಟಕದ ‘ಹರಕುತನ’ ‘ಒಡಕುತನ’ವನ್ನು ಕಂಡು ಕಸಿವಿಸಿಗೊಳಗಾದ ಕವಿ ಕನ್ನಡ, ತನ್ಮೂಲಕ ಭಾರತದ ಏಳ್ಗೆಗಾಗಿ ಎಲ್ಲರೂ ಒಂದಾಗಬೇಕೆಂಬ ತತ್ತ್ವವನ್ನು ಪ್ರತಿಪಾದಿಸಿದ್ದಾರೆ. ಕರ್ನಾಟಕವೇ ಇರಲಿ, ದೇಶವೇ ಇರಲಿ ನಾಡಿನ ಶ್ರೀಮಂತಿಕೆಗೆ ಆವಶ್ಯವಾದ ಮಾರ್ಗವನ್ನು ತೋರಿದ್ದಾರೆ.

**ಸ್ವಾತಂತ್ರ್ಯ-ದೇಶಭಕ್ತಿ :**

ಅಂಬಿಕಾತನಯದತ್ತರು ರಾಷ್ಟ್ರದ ಪಾರತಂತ್ರ್ಯದ ಶೃಂಖಲೆಯನ್ನು ಕಂಡು, ಅನುಭವಿಸಿ ಕೊರಗಿದವರು. ನಾಡಿನ ದುಸ್ಥಿತಿಗೆ ಮರುಗಿ, ಬಿಡುಗಡೆಗಾಗಿ ಕೂಗಿ ಜನತೆಯನ್ನು ಎಚ್ಚರಿಸಿದ್ದಾರೆ. ಅವರ ಜೀವನ ಉಪಾಸನಶೀಲವಾದುದು. ನಾಡದೇವಿಯನ್ನು ದೂರದಿಂದ ಕಂಡು ದಾಟುವ ಪ್ರವೃತ್ತಿ ಅವರದಲ್ಲ; ಅವಳ ಹತ್ತಿರ ಹೋಗಿ ಮಾತೆಯ ಮಡಿಲಿನಲ್ಲಿ ಮಗ ತೃಪ್ತಿಯಿಂದ ಮಾತನಾಡುವಂತೆ ಮಾತುಕತೆ ನಡೆಸುವರು. ಆಗ ನಾಡಿನ ನರ-ನರಗಳಲ್ಲೂ ನೆಲಸಿದ ಬೇನೆಯನ್ನು ಅವರು ಸೂಕ್ಷ್ಮವಾಗಿ ನಿರೀಕ್ಷಿಸಿದ್ದಾರೆ. ಅವರು ಸೂಚಿಸಿದ ಪಥ್ಯ ದೇಶಕ್ಕೆ ಇಂದಿಗೂ ಉಪಯುಕ್ತವಾಗಿದೆ.

ಸ್ವಾತಂತ್ರ್ಯದ ಮಹತ್ವ—ಆವಶ್ಯಕತೆಯನ್ನು ‘ಅಹಹ ಸ್ವಾತಂತ್ರ್ಯದೇವಿ’ ಕವನದಲ್ಲಿ ಪರಿಣಾಮಕಾರಿಯಾಗಿ ಹೇಳಿದ್ದಾರೆ.

ದೇವ ಮಾನವರೆಲ್ಲ ಕಂಡ ಕನಸೇ
ಬಾರೆ, ಮನಸಿನೊಳು ನೆಲಸು ನನಸೇ.

ಎಂದು ಸ್ವಾತಂತ್ರ್ಯದೇವಿ ಎಲ್ಲರ ಎದೆಯೊಳಗೆ ನೆಲಸಲೆಂದು ಪ್ರಾರ್ಥಿಸಿಕೊಂಡಿದ್ದಾರೆ. ‘ಸೆರೆಯೆಂಬ ಹಿರಿಹಾವ ಹಿಡಿದ ಹದ್ದೇ, ಬಾರೇ, ಬೆಳಕು ಕತ್ತಲೆಯ ಜಿದ್ದೇ, ಪರಮಪುರುಷನು ಜಗಕ್ಕೆ ಕೊಟ್ಟ ಮುದ್ದೇ ಪ್ರೀತಿಯುಗ ಬರುವ ಸದ್ದೇ’ ಎಂದು ಅವಳಿಗೆ ಸ್ವಾಗತ ಬಯಸಿದ್ದಾರೆ.

‘ ಶೆಲೆ ’ಯೊಳಗೆ ಸೆಲೆಯಾಗಿ ಹರಿದ ನೀರೇ
ಬಾರೆ, ಕಂಡ ಕಣಿಯನ್ನು ಸಾರೇ
ಕೃತಯುಗದ ಸಾಮ್ರಾಜ್ಯ ನೆಲಸಿ ತೋರೇ
ಕಣ್ಣ-ಕಟ್ಟಿರುವ ಧ್ರುವನ ತಾರೇ.

ಶೆಲಿ (Shelley) ಆಂಗ್ಲ ಕವಿಯಲ್ಲಿ ಸೆಲೆಯಾಗಿ ಹರಿದುದು ಸ್ವಾತಂತ್ರ್ಯದ ಕಲ್ಪನೆ. ಅದು ಸತ್ಯವಾಗಲು ಕೃತಯುಗದ ಸಾಮ್ರಾಜ್ಯದಲ್ಲಿ ನೆಲಸಿ ತೋರ ಬೇಕಾಗಿದೆ. ಕವಿಕಲ್ಪನೆ ವಾಸ್ತವಜಗತ್ತಿನಲ್ಲಿ ರೂಪದೋರಬೇಕಾಗಿದೆ. ಈ ಕಾರ್ಯ ಯಶಸ್ವಿಯಾಗಲೆಂದು ಹಾರೈಸಿದ್ದಾರೆ.

ಇಂಥ ಸ್ವಾತಂತ್ರದೇವಿಯ ಸ್ವಾಗತಕ್ಕಾಗಿ ಹೋರಾಡುತ್ತಿದ್ದ ಒಬ್ಬ ತರುಣ ದೇಶಭಕ್ತ ನಾಲ್ಕಾರು ತಿಂಗಳವರೆಗೆ ಸೆರೆಮನೆಯಲ್ಲಿ ಅನೇಕ ಯಾತನೆಗಳನ್ನು ಅನುಭವಿಸಿದ. ‘ ತರುಣ ತಪಸ್ವಿ ’ಯ ಮನಸ್ಥಿತಿ ಪಶ್ಚಾತ್ತಾಪವನ್ನುಂಟು ಮಾಡಿರಲು ಆಶ್ಚರ್ಯಪಡಬೇಕಿಲ್ಲ. ಯಾವ ಭರವಸೆಯಿಂದ ಈ ಆಂದೋಲನದಲ್ಲಿ ಸೇರಿದ ತಾನು, ಕತ್ತಲೆಯ ಸೆರೆಮನೆಯವಾಸ ಅನುಭವಿಸಬೇಕಾದುದಕ್ಕೆ ಅವನಲ್ಲಿ ಜುಗುಪ್ಸೆಯುಂಟಾಗುವದು. ಆದರೆ ಸಿದ್ದಿಯಲ್ಲಿ ಅವನಿಗೆ ವಿಜಯದ ಭರವಸೆ ದೊರೆತು ಚೈತನ್ಯಶಾಲಿಯಾಗಿ ಉಧೋ ಉಧೋ ಎಂದು ಜಾಗ್ರತನಾಗಲು ಸೆರೆ ಮನೆಯ ಬಾಗಿಲು ತೆರೆಯುವವು. ಹೊಯ್ದಾಟದಿಂದ ಕೂಡಿದ ಸ್ವಾತಂತ್ರ್ಯ ಯೋಧರಿಗೆ ವಿಜಯದ ಭರವಸೆಯನ್ನೀಯುವ ಕವನ ಅನೇಕರಲ್ಲಿ ಉತ್ಸಾಹ ವನ್ನೂ ಸ್ಫೂರ್ತಿಯನ್ನೂ ತುಂಬಿದೆಯೆನ್ನಲಡ್ಡಿಯಿಲ್ಲ.

ಬಡತನ, ಅಜ್ಞಾನ, ಧಾರ್ಮಿಕ ಅಂಧವಿಶ್ವಾಸಗಳಿಂದ ನಿರ್ಜೀವವಾದ ಜೀವನವನ್ನು ಕಂಡು ಕವಿಮನ ಕರಗುವದು. ‘ ಮೂವತ್ತು ಮೂರು ಕೋಟಿ ’ ಕವನದಲ್ಲಿ ಭಾರತಮಾತೆ ತನ್ನ ಮಕ್ಕಳ ಸ್ಥಿತಿಯನ್ನು ನೋಡಿ ನೊಂದು, ಭ್ರಮೆಗೊಂಡು :

‘ ಮಕ್ಕಳಿವರೇನಮ್ಮ ? ಮಕ್ಕಳಿವರೇನಮ್ಮ
ಮೂವತ್ತುಮೂರು ಕೋಟಿ ?
ನಾ ಹಡೆದ
ಮೂವತ್ತುಮೂರು ಕೋಟಿ ’ |

ಎಂದು ಸಂದೇಹಕ್ಕೊಳಗಾಗಿದ್ದಾಳೆ. ಅವರ ಕುರಿತು ಯೋಚಿಸಿದರೆ ಅವರಲ್ಲಿಯ ಹಲಕೆಲವು ಹುಳಗಳು, ಕುನ್ನಿಗಳು, ಹುಚ್ಚು ಕುರಿಗಳು ಎಂಬುದು ಮನವರಿಕೆ ಯಾಗುವದಲ್ಲದೆ ಲೆಕ್ಕಕ್ಕೆ ಮೂವತ್ತುಮೂರು ಕೋಟಿಯಾದರೂ ‘ ಗಂಡುತನ ಕೇಸೊ ಸೊನ್ನಿ ! ’ ಎಂದು ನಿರುಪಯುಕ್ತತೆಯನ್ನು ಕಟುವಾಗಿ ನುಡಿದಿದ್ದಾರೆ;

ಜನತೆಯ ಹೃದಯಕ್ಕೆ ಬರೆಯನ್ನೆಳೆದಿದ್ದಾರೆ. ದೇಶದ ರಾಜಕೀಯ ಜೀವನಕ್ಕೆ ಕನ್ನಡಿ ಹಿಡಿದಿದ್ದಾರೆ. ದೇಶದಲ್ಲಿಯ ಇಬ್ಭಾಗದಿಂದುಂಟಾದ ಪರಿಣಾಮವನ್ನು ತಿಳಿಸಿದ್ದಾರೆ. ತನ್ನ ಎದೆಯ ಹಾಲನ್ನಿತ್ತು ವಜ್ರದೇಹಿಗಳಾಗಲೆಂದು ಹಾರೈಸಿದ ತಾಯಿಯೇ 'ಹಡೆದೊಡಲು ಬಂಜೆಯಾಯ್ತೇ?' ಎಂದು ತನ್ನ ಮೂವತ್ತು ಮೂರು ಕೋಟಿ ಮಕ್ಕಳ ಹೃದಯಕ್ಕೆ ಚಾಟಿ ಏಟನ್ನಿತ್ತು ಕೇಳುವಳು. ಅದೇ ಚಂಡಿ ಚಾಮುಂಡಿಯಾದ ತಾಯಿ ಅವರಲ್ಲಿ ವಿಶ್ವಾಸವನ್ನು, ಆತ್ಮಪ್ರಜ್ಞೆಯನ್ನು, ದೇಶ ಸೇವೆಗೆ ಸನ್ನದ್ಧರಾಗುವ ಪ್ರತಿಜ್ಞೆಯನ್ನು ಮೂಡಿಸಲೆಂದು ಅವರನ್ನು ವಿಶ್ವಾಸಕ್ಕೆ ತೆಗೆದುಕೊಂಡು,

'ತಾಯಿ ಇದೋ ಬಂದೆವೆನ್ನಿ!'

ಎನ್ನಲು ಹೇಳುವಳು. ಭಾರತಮಾತೆಯ ತಿರಸ್ಕಾರ, ಉದ್ವೇಗ, ಸಂತಾಪ, ಭಾರತೀಯನ ಆತ್ಮವಿಶ್ವಾಸವನ್ನು ಜಾಗೃತಗೊಳಿಸುವುದಾಗಿದೆ.

**ಸೌಂದರ್ಯ-ಪ್ರಕೃತಿ ಕವನ :**

ಇಂದ್ರಿಯಗೋಚರವಾದ ಸೌಂದರ್ಯ, ಕಲ್ಪಕಸೌಂದರ್ಯ, ಬುದ್ಧಿ ಗಮ್ಯಸೌಂಗರ್ಯ ಮತ್ತು ಆಧ್ಯಾತ್ಮಿಕಸೌಂದರ್ಯ ಇವು ಸೌಂದರ್ಯದ ಪರಿ-ಕರಗಳು. ಮೊದಲು ಇಂದ್ರಿಯಗೋಚರ ಸೌಂದರ್ಯಾನುಭವವಾಗುವದು. ಅದು ಮೆಟ್ಟಿಲು ಮೆಟ್ಟಿಲು ಏರುತ್ತ ಪರಮಸೌಂದರ್ಯದ ಆಧ್ಯಾತ್ಮಿಕ ಸೌಂದರ್ಯದಲ್ಲಿ ಪರಿವರ್ತನೆಯಾಗುತ್ತದೆ. ಇಂದ್ರಿಯ, ಮನಸ್ಸು, ಬುದ್ಧಿ ಮತ್ತು ಆತ್ಮಾ ಎಂಬವು ಜ್ಞಾನದ ಸಾಧನಗಳು. ಕಲ್ಪಕ ಹಾಗೂ ಬುದ್ಧಿಗಮ್ಯ ಸೌಂದರ್ಯಕ್ಕಿಂತ ಆಧ್ಯಾತ್ಮಿಕ ಸೌಂದರ್ಯ ಕಂಡಾಗಲೇ ಮನುಷ್ಯನಿಗೆ ಉಚ್ಚಸೌಂದರ್ಯದ ಅನು ಭವವಾಗುತ್ತದೆ. ಈ ಸೌಂದರ್ಯವನ್ನು ಕಾಣುವ ದೃಷ್ಟಿ ಶ್ರೀ ಅರವಿಂದರ ವಿಚಾರ ಗಳಿಂದಲೂ ಬಂದುದಾಗಿದೆ. 'ಚತುರ್ಮುಖ ಸೌಂದರ್ಯ' ತತ್ವವನ್ನು ನಿರೂಪಿ ಸುವ ಕವನಗಳನ್ನು 'ಗರಿ'ಯಲ್ಲಿ ಕಾಣಬಹುದು.

'ಚತುರ್ಮುಖ ಸೌಂದರ್ಯ' ಅಂಬಿಕಾತನಯದತ್ತರ ಸೌಂದರ್ಯ ಪ್ರಜ್ಞೆಯ ನೈಜತೆಯನ್ನು ಅರುಹುವದು. ಕಲ್ಪಕ ಸೌಂದರ್ಯಚಿತ್ರಣ ಪರ-ಮೋಚ್ಚ ಕಲ್ಪನೆಯಿಂದ ಕೂಡಿರುತ್ತದೆ. ಬುದ್ಧಿಗಮ್ಯ ಸೌಂದರ್ಯದಲ್ಲಿ ಹೊಸ ಬೋಧೆಯನ್ನು ವ್ಯಕ್ತಪಡಿಸಿದರೆ, ಆಧ್ಯಾತ್ಮಿಕ ಸೌಂದರ್ಯವನ್ನು ಲೀಲಾಜಾಲ ವಾಗಿ ಅನುಭವಿಸಬಲ್ಲರೆಂಬುದನ್ನು ಸಿದ್ಧಪಡಿಸಿದ್ದಾರೆ.

'ಚತುರ್ಮುಖ ಸೌಂದರ್ಯ' ಕವನ ಈ ತತ್ವವನ್ನು ವಿವರಿಸುವ ಸೂತ್ರ ದಂತಿದೆ. ನಾಲ್ಕು ಪದ್ಯಗಳ ಈ ಕವನದಲ್ಲಿ ಸೌಂದರ್ಯದ ಒಂದೊಂದು ಪರಿಗಳನ್ನು ಒಂದೊಂದು ಪದ್ಯದಲ್ಲಿ ವಿವರಿಸಿದ್ದಾರೆ. ಈ ತತ್ವವನ್ನೇ ಪ್ರತಿನಿಧಿಸುವ

" ಹಂಪೀ ವಿಜಯನಗರ ದರ್ಶನ "ದಲ್ಲಿ ಮೊದಲನೆಯ ಪದ್ಯದಲ್ಲಿ— ಹಂಪಿಯು ಉದ್ಧಾರ ಮಾಡಿರೆಂದು— ಪಾತಕಿ ಬಂದು ಪಾವನನ ಚರಣಗಳಿಗೆ ಎರಗುವ ಕಲ್ಪಕ ಸೌಂದರ್ಯವನ್ನು ವಿವರಿಸಿದ್ದಾರೆ. ಮೂರನೆಯ ಪದ್ಯ ಬುದ್ಧಿಗಮ್ಯ ಸೌಂದರ್ಯದ ಉತ್ತಮ ಉದಾಹರಣೆಯಾಗಿದೆ. ಕೊನೆಯ ಪದ್ಯ ಆಧ್ಯಾತ್ಮಿಕ ಸೌಂದರ್ಯವನ್ನು ತೋರುತ್ತ—' ಧರ್ಮ–ಕರ್ಮದ ಪುರಾತನ ಪುರಗಳಿವು— " ಪೂರ್ವ ಧರ್ಮಬಲ ದಿಂದೇರಿ ಕರ್ಮ ಬಲದಿಂದಿಳಿದುವು " ಎಂಬ ಮರ್ಮವನ್ನು ತಿಳಿಸುವದು. ' ಚತುರ್ಮುಖ ಸೌಂದರ್ಯ ' ಕಲ್ಪನೆ ಈ ರೀತಿ ಅವರ ಕವನಗಳಲ್ಲಿ ವ್ಯಾಪಿಸಿದೆ.

ಅಂಬಿಕಾತನಯದತ್ತರ ಸೌಂದರ್ಯಪ್ರಜ್ಞೆ ಸೃಷ್ಟಿಯ ಸಮಸ್ತವಸ್ತು ಗಳಲ್ಲಿಯೂ ಸೌಂದರ್ಯವನ್ನು ಕಾಣುವದು. ' ಪಾತರಗಿತ್ತಿ ಪಕ್ಕಾ ' ದಲ್ಲಿ ಪಾತರಗಿತ್ತಿಯ ರೇಶಿಮೆಪಕ್ಕಾ ನಯ, ಮುಟ್ಟಲಾರೆ ಭಯ ! ಹೂವಿನ ಪಕಳಿಗಿಂತ ತಿಳಿವು ತಿಳಿವು ಅಂತ ' ಎಂದು ಅದರ ನಯ–ನಾಜುಕನ್ನು ಶಬ್ದಗಳಲ್ಲಿ ಸೆರೆಹಿಡಿ ದಿದ್ದಾರೆ. ಅವು ' ಹೂವಿಗೆ ಹೋಗಿ ತಾವ ಗಲ್ಲಾ ತಿಪಿತಾವ ' ಹಾಗೂ ' ಹುಲ್ಲು ಗಾವುಲದಾಗ ಹಳ್ಳೀಹುಡುಗೀ ಹಾಂಗ ಹುಡುದೀ ಹುಡುದೀ ಭಾಳ ' ಎನ್ನುವಲ್ಲಿ ಪಾತರಗಿತ್ತಿಯ ಚೆಲ್ಲಾಟ, ಪ್ರೇಮವನ್ನು ಚಿತ್ರಿಸಿದ್ಧಾರೆ.

' ಇನ್ನು ಎಲ್ಲಿಗೋಟ ?<br>
ನಂದನ ತೋಟ ! '

ಎಂದು ಹೇಳುವಲ್ಲಿ " ಅದರ ಮರಣದ ಮಾತನ್ನೇ ಎತ್ತದೆ ಹೀಗೆ ದೇವಲೋಕದ ನಂದನವನ ವಿಹಾರ ರೂಪವಾಗಿ ಅದನ್ನು ಮಾರ್ಪಡಿಸಿ ಕವನದ ಮುಖ್ಯ ಭಾವಕ್ಕೆ ಅತಿಶಯವಾದ ಮೆರುಗಿನ ಮುಗಿತಾಯವನ್ನು ಕೊಟ್ಟಿರುವುದು ಕವಿಯ ಉಜ್ಜ್ವಲ ಪ್ರತಿಭೆಗೆ ಸಾಕ್ಷಿ. " ಎಂದ ತೀ. ನಂ. ಶ್ರೀ ಅವರ ಅಭಿಪ್ರಾಯವನ್ನು ಯಾರೂ ತಳ್ಳಿಹಾಕಲಾರರು.

" ಬೇಂದ್ರೆಯವರ ಪ್ರಕೃತಿ–ವರ್ಣನೆಯ ಕವನಗಳಲ್ಲಿ ಉಪಾಸನಶೀಲತೆ ಇದೆ, ನಿಷ್ಠೆ ಇದೆ, ಅದನ್ನು ಮೀರಿದ ಆತ್ಮೀಯತೆಯಿದೆ. ಯಾವ ವಿಷಯವನ್ನೂ ಸೌಂದರ್ಯಯುತಗೊಳಿಸಿ, ಎಂಥವರ ಹೃದಯವನ್ನೂ ಅರಳಿಸಿ, ದಿವ್ಯಶಾಂತಿ ಯನ್ನೀಯುವ ಶಕ್ತಿಯಿದೆ. ಕಂಡದ್ದನ್ನೆಲ್ಲ ಹಿರಿದಾಗಿ ಕಾಣುವ ಹೃದಯ ವೈಶಾಲ್ಯ ಹಾಗೂ ಹೃದಯಂಗಮವಾಗಿ ಹೇಳುವ ಶೈಲಿಯಿದೆ. "

**ಮಾನವೀಯತೆ :**

ವಿಶ್ವದಲ್ಲಿಯ ರುದ್ರಕಾಳಿಯ ಲಾಸ್ಯ ತಾಂಡವನೃತ್ಯವನ್ನು ' ರುದ್ರವೀಣೆ ' ಯಿಂದ ಪ್ರತಿಕೃತಿಸಲು ಪ್ರಯತ್ನಿಸಿದ್ದಾರೆ. ಈ ರುದ್ರವೀಣೆ ' ನೆಲದ ಬಸಿರೊಳುರಿ– ಯುತಿದೆ, ಬೆಟ್ಟದೆದೆಯ ಬಿರಿಯುತಿದೆ, ನೀರು ಮೀರಿ ಹರಿಯುತಿದೆ, ಕೆಂಪು

ನೆಲದಲಿ. ' ಆದರಿಂದಾಗಿ ಧರ್ಮಾಸನ ಹೊರಳುತಿವೆ, ಸಿಂಹಾಸನ ಉರುಳುತಿವೆ, ಜಾತಿ-ಪಂಥ ತೆರಳುತಿವೆ, ಮನದ ಮರೆಯುಲಿ. ' ಅದರ ಬೇಗೆಯಿಂದ ' ಗಂಡು-ಹೆಣ್ಣು ಕೆರಳುತಿದೆ, ಬೇನೆ ತಿನುತ ನರಳುತಿದೆ. ಅಷ್ಟೇ ಅಲ್ಲ,

ಸಾಯಲಾರದಳುತಿದೆ
ಬರುವ ಹಗಲಲಿ.

ಆದರೆ ಆ ರುದ್ರವೀಣೆ ಮಿಡಿಯುವ ಕಾರಣ ಕಲ್ಪನೆಗೂ ಮೀರಿ ನಿಂತಿದೆ.

ಯಾಕೊ ಕಾಣೆ ರುದ್ರವೀಣೆ
ಮಿಡಿಯುತಿರುವದು
ಜೀವದಾಣೆಯಂತೆ ತಾನೆ
ನುಡಿಯುತಿರುವದು.

ಈ ' ರುದ್ರವೀಣೆ 'ಯ ತಾಂಡವದ ಭಯಂಕರತೆಗೆ ಸಾಯಲಾರದೆ ಬಳಲುವ ಮಾನವರಿಗಾಗಿ ಕವಿಹೃದಯ ಮರುಗುವದು, ಕನಿಕರಪಡುವದು. ಜನರ ಬಳಲಿಕೆಯನ್ನು ಯಾವುದೋ ಮಹಾಕಾಳಿ ಆಶಿಸುತ್ತಿದ್ದಾಳೆ. ಆ ಮಹಾಕಾಳಿಯ ಆಶೆ-ಆಕಾಂಕ್ಷೆಯನ್ನು ಅರಿತ ಕವಿ ' ನರಬಲಿ 'ಯಲ್ಲಿ — ' ಬಲಗಾಲಲಿ ಬಿಡುಗಡೆಯನ್ನು ಮೆಟ್ಟಿ-ನಿಂತಿಹೆ ಎಲೆ ಕಾಳಿ, ನಿನ್ನೆಡಗಾಲನು ನೆಕ್ಕುತಲಿಹುದು ಶ್ವಾನಶುಕರಾಳಿ, ಭಯದಾಯಕ ಬಲಗೈಯನು ಚಾಚಿಹೆ ಶಾಸವ ಕೊಡಲೆಡಗೈಯನು ಎತ್ತಿಹೆ ರುದ್ರಕಾಳಿ ' ಎಂದು ಅವಳ ಭಯಂಕರ ಚಿತ್ರವನ್ನು ಕೊಡುವರು. ಅವಳ ಬಯಕೆ,

ಜೀವ ತಿನ್ನುವಾ ಹಸಿವೆ ಮತ್ತೆ ಆ ನೆತ್ತರನೀರಡಿಕೆ
ಮೈಯ ತಾಳಿ ನೆಲದೆದೆಯ ಸೀಳಿ
ಎದ್ದಂತೆ ಪ್ರಳಯಕಾಳಿ. '

ಎಂದು ಮಹಾಕಾಳಿ ಮಾನವರನ್ನು ತಿನ್ನುವ ಹಸಿವೆಯಿಂದಲೂ, ಅವರ ರಕ್ತವನ್ನು ಕುಡಿಯಲು ಬಾಯಾರಿದವಳೂ ಆಗಿದ್ದಾಳೆ. ಇಂಥ ಮಹಾಕಾಳಿಯ ಬಯಕೆ ತೀರುವವರೆಗೆ ವಿಶ್ವದ ಮಾನವರಿಗೆ ಸುಖ-ಶಾಂತಿ ಲಭಿಸಲು ಸಾಧ್ಯವೆ ? ಮಾನವಕೋಟಿಯ ಈ ಸಂಕಟ, ದುಃಖ, ಕವಿಯ ಎದೆಯನ್ನು ತಲ್ಲಣಗೊಳಿಸುವವು. ಆದರೆ ' ಯುಗಾದಿ ' ಬಂದು ಅವನ ದೃಷ್ಟಿಯನ್ನು ಬದಲಿಸಿದೆ. ' ಹೊಸ ವರುಷಕೆ ಹೊಸ ಹರುಷವ, ಹೊಸತು ಹೊಸತು ತರುತಿದೆ ' ಎಂದು ಯುಗಾದಿ ವಿಶ್ವದ ಮಾನವರಿಗೆಲ್ಲ ತರುವ ಹರುಷವನ್ನು ಕವಿ ಮರೆಯಲಾರ. ಆದರೂ

ನಿದ್ದೆಗೊಮ್ಮೆ ನಿತ್ಯ ಮರಣ
ಎದ್ದ ಸಲ ನವೀನ ಜನನ
ನಮಗೆ ಏಕೆ ಬಾರದೊ ?

ಎಂದು ಹುಟ್ಟುಸಾವುಗಳಿಂದ, ದುಃಖದಿಂದ ಮುಕ್ತನಾಗುವದನ್ನು ಆಶಿಸುವಂತಿದೆ. ಆದುದರಿಂದ ಈ ಯುಗಾದಿಯು,

ಹೊಸ ವರುಷಕೆ ಹೊಸ ಹರುಷವ
ಹೊಸತು ಹೊಸತು ತರುತಿದೆ
ನಮ್ಮನಷ್ಟೇ ಮರೆತಿದೆ !

ಎಂದು ನಿಟ್ಟುಸಿರು ಹೊರಡುವದು. ಮಾನವನ ಸುಖ–ದುಃಖಗಳ ಹಿನ್ನೆಲೆ–ಮುನ್ನಡೆ ಇಲ್ಲಿದೆ. ಯುಗಾದಿ ಹೊಸತನ್ನು ತರುವುದಾದರೂ ಅಲ್ಲಿ ಮಾನವನ ಸಾಹಸವೂ ಜೊತೆಗೂಡಬೇಕಾದುದು ಅವಶ್ಯ. ಆದುದರಿಂದ ಇದೊಂದು ಸತ್ತ್ವ ಪರೀಕ್ಷೆಯಂತೆಯೇ ತೋರುವದು.

ಜೀವನವೆಂಬುದು ಕೇವಲ ಕಷ್ಟ ಅಥವಾ ಸುಖವಲ್ಲ. ಅದರ ಮರ್ಮವನ್ನೇ ' ನನ್ನ ಹಾಡು ' ಸಂಗ್ರಹಿಸುತ್ತದೆ. ವಿಶ್ವತತ್ತ್ವದ ದರ್ಶನ ಮಾಡಿಸುತ್ತದೆ.

ರಸವೆ ಜನನ
ವಿರಸ ಮರಣ
ಸಮರಸವೇ ಜೀವನ

ಎಂಬ ಮಹಾಮಂತ್ರ ಕವಿಯ ವಿಶ್ವಮಾನವದೃಷ್ಟಿಗೆ ಸಂಕೇತವಾಗಿ ಅವನಿಂದ ಹೊರಹೊಮ್ಮುವದು. ಮಾನವಕೋಟಿಗೆ ಸುಖದ ಸೂತ್ರವನ್ನು ಅರುಹುವದು. ಇಂಥ ವಿಚಾರಗಳಿಗೆ ಕಾಲ–ಸನ್ನಿವೇಶಗಳ ಮರ್ಯಾದೆಯಿರುವದಿಲ್ಲ.

ಅಂಬಿಕಾತನಯದತ್ತರ ಕಾವ್ಯ ವಿಚಾರಪ್ರಧಾನವಾದ ಕಾವ್ಯ. ಅದರಲ್ಲಿ ಜ್ಞಾನದ ಪದರು–ಪದರುಗಳಿರುವವು. ವಿಚಾರ ಅಧಿಕವಾದಾಗ ರಸಕ್ಕೆ ಭಂಗ ಬರುವದು ಸಹಜ ಆದರೆ ಪದಗಳ ಮೇಲಿನ ಪ್ರಭುತ್ವ ' ಗಾರುಡಿಗತನ 'ದಿಂದ ಅವರ ಕವನಗಳು ಶ್ರೀಮಂತವಾಗಿವೆ. ಅಲಂಕಾರ–ರೂಪಕಾಲಂಕಾರಗಳು ಪ್ರಾಚೀನರಿಂದಲೂ ಕಾವ್ಯದಲ್ಲಿ ಬಳಸಲ್ಪಟ್ಟಿವೆ. ಇಂಥ ಅಲಂಕಾರಗಳು ಕಾವ್ಯದ ಶರೀರವಾಗಿರುತ್ತವೆ. " ಅಂಬಿಕಾತನಯದತ್ತರ ವಾಣಿಯ ಅರ್ಥಸತ್ತ್ವವು ರೂಪಣಶಕ್ತಿಯಲ್ಲಿದೆ. ರೂಪಕವು ನುಡಿಗೆ ಬಿಗಿಯನ್ನು ಕೊಡುತ್ತದೆ, ಅರ್ಥಕ್ಕೆ ಆಳವನ್ನು ಕೊಡುತ್ತದೆ, ರಸಕ್ಕೆ ಪುಷ್ಟಿಯನ್ನು ಕೊಡುತ್ತದೆ. ' ನಗೀ ನವಿಲು '

‘ ಬಾಳ ಕರವಾಳ ’ ‘ ತುತ್ತಿನ ಚೀಲ ’ ಎಂಬೀ ಹೆಸರುಗಳೇ ಇದಕ್ಕೆ ಬೇಕಾದಷ್ಟು ನಿದರ್ಶನ ’’ವೆಂಬ ತೀ. ನಂ. ಶ್ರೀ. ಅವರ ಪ್ರಶಂಸೆ ಸಾರ್ಥಕವಾಗಿದೆ.

ಅಂಬಿಕಾತನಯದತ್ತರ ಕವನಗಳಲ್ಲಿ ವ್ಯಕ್ತವಾದ ವಿಚಾರ ಅಂದಿನಂತೆ ಇಂದಿಗೂ ಅರ್ಥಪೂರ್ಣವಾಗಿರುವದು ಅವರ ಹಿರಿಮೆಗೆ ಜೀವಂತಸಾಕ್ಷಿಯಾಗಿದೆ. ನಾಡು-ನುಡಿಗಾಗಿ, ದೇಶದ ಸ್ವಾತಂತ್ರ್ಯಕ್ಕಾಗಿ, ಬಡ ಜನರ ಕಷ್ಟ-ಸಂಕಟಗಳಿಗಾಗಿ ಚಿಂತಿಸಿದ ಕವಿಯ ದೃಷ್ಟಿ ಸಂಕುಚಿತಗೊಳ್ಳದೆ ಮಾನವಕೋಟಿಯನ್ನೇ ವ್ಯಾಪಿಸಿರುವದು ಅವರ ಉದಾತ್ತ ದೃಷ್ಟಿಗೆ ಕುರುಹು. ಇಂಥ ಕವಿ, ನಾಡು-ನುಡಿ ದೇಶಕ್ಕೆ ಹೆಮ್ಮೆಯ ವಿಷಯ. ಅವರಿಂದ ಕಾವ್ಯರಸಗಂಗೆ ಸದಾ ಹರಿಯುತ್ತ ನಾಡಿಗರನ್ನು ಪುನೀತಗೊಳಿಸಲಿ.

§ § § §

೨೫

# ಬೇಂದ್ರೆಯವರ ಕತೆ–ಹರಟೆ

**ಸ. ಸ. ಮಾಳವಾಡ**

ಕತೆ ಹೇಳುವಲ್ಲಿ, ಹರಟೆ ಹೊಡೆಯುವಲ್ಲಿ ಶ್ರೀ. ದ. ರಾ. ಬೇಂದ್ರೆಯವರದು ಎತ್ತಿದ ಕೈ. ಅವರ ಜೀವನದ ಗೆಲವಿನ ಗುಟ್ಟೂ ಅಲ್ಲಿದೆ. ಅಲ್ಲಿ ರಸವಂತಿಕೆ ಯಿದೆ; ಪ್ರತಿಭೆಯಿದೆ. ಉದಾತ್ತವಾದ ಕಾವ್ಯಸಂಪತ್ತನ್ನು ಒದಗಿಸಿದ ಶ್ರೀ ಬೇಂದ್ರೆ ಯವರ ಗದ್ಯಸಾಹಿತ್ಯದ ಒಂದು ಮುಖವನ್ನು ಅವರ ಕತೆ–ಹರಟೆಗಳಲ್ಲಿ ಕಾಣು ತ್ತೇವೆ.

'ಅಣ್ಣ ಮಾಸ್ತಿಯವರಿಗೆ' ಎಂಬ ಕವನದಲ್ಲಿ :

ನೀನು ಒಂದೇ ಬೆಳಕು
ನಾನು ಹಲ ಬಣ್ಣ

ಎಂಬ ಮಾತಿದೆ. ಅರ್ಥಾತ್ ಬಗೆಬಗೆಯ ಬಣ್ಣಗಳಿಂದ ತುಂಬಿದ ವ್ಯಕ್ತಿತ್ವ ಬೇಂದ್ರೆಯವರದಾಗಿದೆ. ಬಣ್ಣಗಳ ವೈವಿಧ್ಯದ ಹಿಂದೆ ಅವಿತಿರುವುದು ಒಂದೇ ಒಂದಾದ ಶುಭ್ರತೆಯೆಂಬುದನ್ನು ವಿಜ್ಞಾನ ಸಿದ್ಧಮಾಡಿ ತೋರಿಸಿದೆ. ಅಂತೆಯೇ ಬೇಂದ್ರೆಯವರ ವಿವಿಧ ಮುಖಗಳ ವ್ಯಕ್ತಿತ್ವದ ಹಿಂದೆ, ಒಂದೇ ಒಂದಾದ ಗುಟ್ಟಿದೆ. ಅದೆಂದರೆ ವ್ಯಕ್ತಿಯಲ್ಲಡಗಿದ ಅನಂತತೆಯನ್ನು ಹೊರಹೊಮ್ಮಿಸುವ ಪ್ರಚೋದನೆ. ಜೀವನದ ಎಲ್ಲ ಶಕ್ತಿಗಳನ್ನೂ ಸಾಧಿಸುವ, ಆವಿಷ್ಕಾರಗೊಳಿಸುವ ಚೇತನ ಬೇಂದ್ರೆ ಯವರದಾಗಿದೆ.

ಅವರು ರಸಿಕರು; ಸ್ನೇಹಪರರು; ಕವಿಗಳು; ವಿಮರ್ಶಕರು; ಆಲೋಚ ನಾಪರರು; ಸಂಶೋಧಕರು; ಭಾವಜೀವಿಗಳು; ನಿರ್ಮಾಪಕರು; ಜೀವನದ ಕುಲುಮೆಯಲ್ಲಿ ಸುಟ್ಟು ಪರಿಶುದ್ಧರಾಗಿ ಗಹನತತ್ತ್ವಕ್ಕಿಳಿದವರು. ಅಂತೆಯೇ ಅನುಭಾವಿಗಳು. ಬಾಲಕರ ಮುಗ್ಧತೆಯ ನಗೆಯನ್ನು ಜೀವನದ ಉದ್ದಕ್ಕೂ ಕಾಯ್ದುಕೊಂಡು ಬರುವದನ್ನು ಅವರು ಸಾಧಿಸಿದ್ದಾರೆ. ಆಡು ಮುಟ್ಟದ ಗಿಡ

ವಿಲ್ಲ; ಬೇಂದ್ರೆಯವರು ಮಾಡದ ಕಾರ್ಯವಿಲ್ಲ, ಎಂದು ಅವರ ಆಪ್ತಸ್ನೇಹಿತರು ಹೇಳುವದುಂಟು.

ಕವಿಗಳಾಗಿ ಉನ್ನತ ಕೀರ್ತಿಯನ್ನು ಗಳಿಸಿದ ಬೇಂದ್ರೆಯವರು ಹಲವು ಸಣ್ಣ ಕತೆಗಳನ್ನೂ ಬರೆದಿದ್ದಾರೆ. ಗೂಢ ತತ್ತ್ವಗಳನ್ನು ಕೆದಕುವ ಇವರು ಲಘು ಹಾಸ್ಯವೆಂದು ತೋರುವ ಹರಟೆಗಳನ್ನೂ ಬರೆದಿದ್ದಾರೆ. ನಗೆ-ಆನಂದ-ದರ್ಶನ ಇವು ಮೂರೂ ಇವರ ಬಾಳಿನಲ್ಲಿ, ಸಾಹಿತ್ಯಕೃತಿಗಳಲ್ಲಿ ಎದ್ದು ಕಾಣುತ್ತಿವೆ. ಉತ್ಕೃಷ್ಟ ಭಾವಗೀತೆಗಳನ್ನು ರಚಿಸಬಲ್ಲ ಇವರು ಒಳ್ಳೆಯ ಸಣ್ಣಕತೆಗಳನ್ನೂ ಬರೆಯಬಲ್ಲರು. ಸರಸ ಸಂಭಾಷಣೆಯ ಮೋಹನಜೂರ್ಣವನ್ನು ಎಸೆಯುವ ಇವರ ಲಿಖಿತ ಹರಟೆಗಳು ಸ್ವಾರಸ್ಯಪೂರ್ಣವೂ ಚುರುಕಾದವೂ ಆಗಿವೆ.

ಕತೆಗಳು ತಾವಾಗಿಯೇ ಬಂದು ನಮಗೆ ದೆವ್ವಗಳಂತೆ ಬಡಿದುಕೊಳ್ಳುತ್ತಿವೆ; ಅವುಗಳನ್ನು ಇತರರಿಗೆ ಹೇಳಿ ಅವುಗಳಿಂದ ನಾವು ಬಿಡಿಸಿಕೊಳ್ಳಬೇಕು, ಎಂದು ಬೇಂದ್ರೆಯವರು ಗುಣಾಢ್ಯನ ಉದಾಹರಣೆಯನ್ನು ಹೇಳುತ್ತ ಕೆಲವು ಕತೆಗಳನ್ನು ಬರೆದಿದ್ದಾರೆ. ಅವರಿಗೆ ಬಡಿದುಕೊಂಡಿರುವ ದೆವ್ವ ಇನ್ನೂ ಪೂರ್ತಿಯಾಗಿ ಬಿಟ್ಟಿರ ಬಾರದೆಂದೂ ಅವರು ಇನ್ನೂ ಹೆಚ್ಚಾಗಿ ಕತೆಗಳನ್ನು ಬರೆಯಬೇಕೆಂದೂ ನಾವು ಅಪೇಕ್ಷಿಸುವಂತೆ ಆ ಕತೆಗಳಿವೆ.

೧೯೪೦ ರಲ್ಲಿ ಪ್ರಕಟವಾದ 'ನಿರಾಭರಣ ಸುಂದರಿ' ಎಂಬ ಪುಸ್ತಕದಲ್ಲಿ ಬೇಂದ್ರೆಯವರ ಕೆಲವು ಸಣ್ಣಕತೆಗಳೂ ಹರಟೆಗಳೂ ಪ್ರಕಟವಾಗಿವೆ. ಅಪ್ರಕಟಿತ ವಾದವುಗಳ ಸಂಖ್ಯೆಯನ್ನು ಅವರೇ ನಮಗೆ ಹೇಳಬೇಕು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಣ್ಣಕತೆಗಳು ದೊಡ್ಡ ಸಂಖ್ಯೆಯಲ್ಲಿ ಬಂದಿವೆ. ಆದರೆ ಕಥಾವಸ್ತುವಿನ ವೈವಿಧ್ಯ, ನಿರೂಪಣೆಯ ರಸವಂತಿಕೆ, ಚಿತ್ರದ ಉದಾತ್ತತೆ, ಜೀವನ ದರ್ಶನದ ಔನ್ನತ್ಯ-ಇವುಗಳ ದೃಷ್ಟಿಯಿಂದ ಗಮನಿಸಬೇಕಾದ ಸಣ್ಣಕತೆಗಳ ಸಂಖ್ಯೆ ಬಹಳ ದೊಡ್ಡದೆಂದು ಹೇಳಲು ಬರಲಿಕ್ಕಿಲ್ಲ. ನಮ್ಮ ನಾಡಿನ ಸುಪ್ರಸಿದ್ಧ ಕೆಲವು ಕತೆಗಾರರು ಅಂತಹ ಕತೆಗಳನ್ನು ಕೊಟ್ಟಿರುವದು ನಿಜ. ಸುಪ್ರಸಿದ್ಧ ಕವಿಗಳಾದ ಬೇಂದ್ರೆಯವರು ಸುಪ್ರಸಿದ್ಧ ಕತೆಗಾರರ ಸಾಲಿನಲ್ಲಿಯೂ ಸ್ಥಾನ ಪಡೆಯಬಲ್ಲರು.

ಅವರ ಕತೆಗಳ ವಸ್ತುವಿನಲ್ಲಿ ಮನಕ್ಕೆ ಚೇತನವನ್ನೀಯುವ ಒಂದು ಬಗೆಯ ಹೊಸತನ, ಸ್ವಾತಂತ್ರ್ಯ, ಒರಿಜಿನಾಲಿಟಿ ಇರುವುದುಂಟು. ಆಧುನಿಕ ಜೀವನದ ಸ್ಪರ್ಶದಿಂದ ದೂರವಿದ್ದ ಹಿಂದಿನ ತಲೆಮಾರಿನ ಹಳ್ಳಿಗಳ ಸ್ವಚ್ಛಂದ ಜೀವನದ ಸಹಜಚಿತ್ರಣ, ಹಳ್ಳಿಯ ಶಾಲೆಯ ಬಾಲಕರ ಮುಗ್ಧಜೀವನದಲ್ಲಿಯ ಭಾವತೀವ್ರತೆ, ಭೀತಿಯ ಪರಿವೆಯಿಲ್ಲದ ಬಾಲಕರ ವಿಚಿತ್ರ ಸಾಹಸ, ಹಳ್ಳಿಯ ಸಮಾಜ

ದಲ್ಲಿಯ ಕಿರುಕುಳ, ಒಟ್ಟು ಕುಟುಂಬದಲ್ಲಿಯ ಹೆಣ್ಣಿನ ಬಾಳುವೆಯ ವೈಷಮ್ಯ, ಅವಳ ಅಂತರಾಳದ ನಿಸರ್ಗಸಹಜ ಮನದಾಸೆಗಳು, ಅತೃಪ್ತಿಯ ಭೀಕರ ಪ್ರತಿಕ್ರಿಯೆ, ಅನಿರೀಕ್ಷಿತ ಸನ್ನಿವೇಶದ ಕಹಿಯಾದ ಪರಿಣಾಮ, ಹೆಂಡತಿಯ ಮೇಲೆ ಹೆಂಡತಿಯನ್ನು ಸಾಯಹೊಡೆದು ಮತ್ತೆ ಮತ್ತೆ ಮದುವೆಗೆ ಸಿದ್ಧವಾಗುವ, ಹಿರಿದ ಕತ್ತಿಯ ಹಿಂದಿನ ಕಾಲದ ವತನದಾರರು— ಇತ್ಯಾದಿ ಸೃಷ್ಟಿಯನ್ನು ಬೇಂದ್ರೆಯವರ ಸಣ್ಣಕತೆಗಳಲ್ಲಿ ನಾವು ಕಾಣುತ್ತೇವೆ. ಇಂತಹ ಪ್ರಸಂಚದ ಚಿತ್ರಣದಲ್ಲಿದ್ದ ಜೀವನದರ್ಶನವು ಬಾಳಿಗೆ ಪಥಪ್ರದರ್ಶನ ಮಾಡುತ್ತಿದೆ; ರಸಪರಿಪಾಕವನ್ನು ಒದಗಿಸುತ್ತಿದೆ. ಮಾನವನ ಮೂಲಭೂತ ಭಾವನೆಗಳನ್ನು ರೂಪಿಸುವುದರ ಜೊತೆಗೆ ಕಣ್ಮರೆಯಾಗುತ್ತಿರುವ ಹಳೆಯ ಬಾಳಿನ ಕೆಲವು ಅಂಶಗಳ 'ರೆಕಾರ್ಡ' ಒದಗಿಸುತ್ತಿದೆ. ಈಗ ಕೆಲವೊಂದು ವಿವರಗಳನ್ನು ಪರಿಶೀಲಿಸಬಹುದು.

ರಾಮು, ಶೀನ, ಪ್ರಹ್ಲಾದ, ಬಸವಂತ ಎಂಬ ನಾಲ್ವರು ಕನ್ನಡ ಶಾಲೆಯ ಬಾಲಕರು. ಅವರಲ್ಲಿ ಅನ್ಯೋನ್ಯ, ಅವ್ಯಾಜ ಸ್ನೇಹವಿದೆ. ಅದು ಚಿಲ್ಲರೆ ಕಾರಣಕ್ಕಾಗಿ ಒಡೆಯುತ್ತಿದೆ. 'ಪಾಲ್ಯಾ ಗೊಲ್ಯಾ ಪಾಲಾ ಫೂ' ಎಂದು ರಾಮು ಹೇಳಿ ಗೆಳೆಯನೊಂದಿಗೆ ಮಾತುಕತೆ ನಿಲ್ಲಿಸಿಬಿಡುತ್ತಾನೆ. ವಿರಸ ತಲೆದೋರುತ್ತಿದೆ. ಈ ಕತೆಯಲ್ಲಿ ಹುಡುಗಬುದ್ಧಿಯ ಚಿತ್ತಲಹರಿಗಳ ಸಹಜ ವರ್ಣನೆಯೊಂದಿಗೆ ಸೂಕ್ಷ್ಮ ಮನೋವಿಶ್ಲೇಷಣೆಯಿದೆ. ಪಾಲಾ ಫೂ ಮಾಡಿಸಿಕೊಂಡ ಪಲ್ಯಾ ಅದೇ ಕಾರಣಕ್ಕಾಗಿ ರೋಗಕ್ಕೆ ತುತ್ತಾಗುತ್ತಾನೆ. ಕಾರಹುಣ್ಣಿವೆಯ ಮೋಹಕ ಬೆಳದಿಂಗಳಲ್ಲಿ ಹಳ್ಳಿಯ ತಿಳ್ಳಿಯ ಆಟದ ಸಂಭ್ರಮ ನಡೆದಿತ್ತು. 'ರಾಮು ಸತ್ತಾ, ರಾಮು ಸತ್ತಾ ! ಡುರ್ರೊ ಡುರ್ರೊ' ಎಂಬ ಕೂಗಾಟ ಕೇಳಬರುತ್ತಿತ್ತು. ಆಗಲೇ ಪ್ರಹ್ಲಾದನ ಹೆಣ ಹೊತ್ತು ತರುವ ಹೃದಯದ್ರಾವಕ ಸನ್ನಿವೇಶವೊದಗಿತು. ಹೆಣ ಮುಂದೆ ಸಾಗಿತು. ಆಗ ಬೆಳದಿಂಗಳಿಗೇ ಪ್ರೇತಕಳೆ ಬಡಿದುಕೊಂಡಿತಂತೆ. ಹೃದಯಸ್ಪರ್ಶಿಯಾದ ಕತೆಯ ಕೊನೆಯಲ್ಲಿ ಕವಿತೆಯೂ ಹರಿದು ಬಂದಿದೆ.

ಬಾಲ್ಯದ ಸ್ವಚ್ಛಂದದ ದುಡುಕುಗಳನ್ನು ಚಿತ್ರಿಸುವ ಹಳ್ಳಿಯ ಜೀವನದ ಚಿತ್ರ ಇನ್ನೊಂದು ಕತೆಯಲ್ಲಿದೆ. ಮೊಹರಮ್ಮಿನ ಹುಲಿಯೊಂದಿಗೆ 'ಝಿಂಗ ಝಿಂಗಾ ಝಿಂಗ ತಾತಾ, ಝಿಗ್ ತಾತಾ ತಾತಾ' ಎನ್ನುತ್ತ ಆಡುವ ಬಾಲಕ. ಅದೇ ಪ್ರೇರಣೆಯಿಂದಾಗಿ ಆತನು ಮುಂದೆ ಸರ್ಕಸ್ಸಿನಲ್ಲಿಯ ನಿಜವಾದ ಹುಲಿಯೊಂದರ ಕೂಡ ಮಂಗಾಟ ಮಾಡಿದ, ಅಪಾಯಕಾರಿ ಆದರೆ ಕುತೂಹಲಜನಕ ಕತೆ ರಮ್ಯವಾಗಿದೆ.

ತನ್ನ ಪ್ರತಿಷ್ಠೆಗಾಗಿ ತನ್ನ ಚಿಕ್ಕ ಮಗಳನ್ನು ಮುದುಕ ದೇಸಾಯಿಗೆ ಕೊಡಬೇಕೆನ್ನುವ ತಂದೆಯು ಕತ್ತೀ ಹಿರಿದು ಮಗಳನ್ನು ಒಪ್ಪಿಸುವ ಸನ್ನಿವೇಶದ

ಭೀಕರ ಪರಿಣಾಮವನ್ನು ಮತ್ತೊಂದು ಕತೆ ಚಿತ್ರಿಸುತ್ತದೆ. ತಂದೆಯ ಹೃದಯ ಪರಿವರ್ತನೆಯೂ ಅಲ್ಲಿ ಸಹಜವಾಗಿ ಮೂಡಿ ಬಂದಿದೆ.

ಮನೆತನದ ತೊಂದರೆ, ಸಾಮಾಜಿಕರ ಕೀಳುವಿಚಾರ ಇವುಗಳಿಂದ ಕಳವಳಕ್ಕೀಡಾದ ಹಳ್ಳಿಯ ಹೆಣ್ಣುಮಗಳೊಬ್ಬಳು ಬಾವಿಯಲ್ಲಿ ಬೀಳುವ ಪ್ರಯತ್ನದ ಚಿತ್ರವು ಮತ್ತೊಂದು ಕತೆಯಲ್ಲಿದೆ. ಆ ಕತೆಯಲ್ಲಿಯ ಕೆಲವು ಮಾತುಗಳನ್ನು ಅವಲೋಕಿಸಬೇಕು.

“ ತಾನು ಸೀರಿಗೆ ಬಂದವಳು, ಎಷ್ಟು ಹೊತ್ತಾಯಿತು, ಏನು ಮಾಡುತ್ತಿರುವಳೆಂಬ ಅರಿವು ಅವಳಿಗಿರಲಿಲ್ಲ. ಒಂದು ಲೋಕದ ಗುರುತ್ವಾಕರ್ಷಣದ ತೆಕ್ಕೆಯನ್ನು ತಪ್ಪಿಸಿಕೊಂಡ ಧೂಮಕೇತುವೊಂದು ಅಧೋಲೋಕಕ್ಕೆ ಧುಮುಕಲು ಹೊರಟಂತೆ ಅವಳ ಜೀವದ ಚಿಕ್ಕೆಯು ಅವಳ ಬಂಧಗಳನ್ನೆಲ್ಲ ಕಟಕಟನೆ ಹರಿದುಕೊಂಡು ಬೇರೆ ಸೆಳಪಿಗೆ ಬಿದ್ದಿತ್ತು. ಕೊಡಕ್ಕೆ ಕಟ್ಟಬೇಕಾಗಿದ್ದ ಉಕ್ಕಡವನ್ನು ಅವಳು ತನ್ನ ಕೊರಳಿಗೆ ಕಟ್ಟಿಕೊಂಡಳು..... ....

ಭಾವಿಗೆ ನಮಸ್ಕಾರ ಮಾಡಿದಳು. ತನ್ನ ಸೆರಗು, ಕೂದಲು ಸಾವರಿಸಿಕೊಂಡಳು. ಭಾವಿಯ ತುದಿಗೆ ತನ್ನ ಪಾದ ಇಟ್ಟಳು. ”

ಇಂತಹ ಸನ್ನಿವೇಶವನ್ನು ಚಿತ್ರಿಸುತ್ತ ಕತೆ ಮುಂದುವರಿಯುತ್ತಿದೆ. ಆ ಹೆಣ್ಣುಮಗಳು ಭಾವಿಯಲ್ಲಿ ಬೀಳಲು ಸಿದ್ಧಳಾಗುವ ಹೊತ್ತಿಗೆ ಯಾರೋ ಅತ್ತಂತಾಯಿತು. ಆಗ ಆಕೆಗೆ ತನ್ನ ಕೂಸಿನ ನೆನಪಾಗುತ್ತಿದೆ :

“ ಅತ್ತ ನೋಡಿದಳು. ಇತ್ತ ನೋಡಿದಳು. ಮಟಮಟ ಮಧ್ಯಾಹ್ನ. ತನ್ನ ಕೊಡ ಬರಿದು........ ಆಕಾಶವಾಣಿ ಬಂದಂತೆ ಇನ್ನೂ ಕೂಸು ಕರೆಯುತ್ತಿದೆ.

ವಾತ್ಸಲ್ಯ, ಪತಿಭಕ್ತಿ, ಕೃತಜ್ಞತೆ, ಆದರ ಇವೆಲ್ಲ ನಾಲ್ಕು ಹಗ್ಗವಾಗಿ ಹೊಸೆದು ಆಕೆಯನ್ನು ಮನೆಯತ್ತ ಎಳೆಯಹತ್ತಿದವು. ಆಕೆ ಭಾವಿಗೆ ಬಂದು ಕೊಡ ಸೇದಿದಳು. ಬಿರಬಿರನೆ ಮನೆಗೆ ಹೊರಟಳು. ಕೂಸಿನ ದನಿ ಕಿವಿ ದುಂಬಿತ್ತು. ವಾತ್ಸಲ್ಯವು ಎದೆತುಂಬಿ ಬಂದಿತ್ತು.— ಹೀಗಿದೆ ಈ ಕತೆ.

ಈ ಚಿತ್ರಗಳು ಸಹಜವಿರುವಷ್ಟೇ ಅಲ್ಲಿಯ ಭಾವಗಳು ಮೂಲಭೂತವೂ, ಸಂದೇಶವು ಅರ್ಥಪೂರ್ಣವೂ ಆಗಿರುವುದುಂಟು. ಕತೆಗಳು ಹೃದಯಂಗಮವೂ ಆಗಿವೆ. ‘ ಸಿರಾಭರಣ ಸುಂದರಿ ’ ಎಂಬ ಕತೆಯಲ್ಲಿ ಕಲ್ಪಕತೆ, ಕಲಾವಿಮರ್ಶೆ, ಸಂವಾದದಲ್ಲಿಯ ಮಿಂಚು, ಗಂಡಹೆಂಡಿರ ರಸಿಕತೆ, ಜಿನಯೋಗಿಯ ಆತ್ಮಬಿಂಬದ ಸಂಕೇತ ಇವೆಲ್ಲ ಮೂಡಿಬಂದು ಅದನ್ನೊಂದು ಹೊಸಬಗೆಯ ಕತೆಯನ್ನಾಗಿ ರೂಪಿಸಿವೆ.

* * * *

ಇನ್ನು ಹರಟಿಗಳ ವಿಷಯ. ‘ ಹರಟಿಗಳ ಮುಂಚೆ ಒಂದು ಹಳೆಯ ಹರಟೆ ’ ಎಂಬ ಆರು ಪುಟಗಳ ಬರೆಹದಲ್ಲಿ ಬೇಂದ್ರೆಯವರ ಹರಟೆಯ ವೈಭವವನ್ನು ಕಾಣಬಹುದು. ಅಲ್ಲಿ ಹಿಂದಿನ ಹರಟೆಯ ಬಗೆಗೆ ಬಂದ ಮಾತು ಹೀಗಿದೆ :

“ ಹಳೆಯ ಹರಟೆಯ ಮನೆತನ ದೊಡ್ಡದು. ರಾಜರ ಸುಖಸಂಕಥಾವಿನೋದದಲ್ಲಿ ಮೊಳೆತು, ಪಂಡಿತರ ಕಾವ್ಯಶಾಸ್ತ್ರ ವಿನೋದದಲ್ಲಿ ಚಿಗಿತು, ಕವಿಗಳ ಅಕ್ಕರಗೊಟ್ಟೆಯಲ್ಲಿ ಬೆಳೆದು, ವೇಶ್ಯಾವಾಟದ ವಿಟ-ವಿದೂಷಕರಲ್ಲಿ ಶಾಖೋಪಶಾಖೆಯಾಗಿ, ಚದುರೆಯರ ಮಾತಿನಲ್ಲಿ ಹೂತು, ವಿಲಾಸ ವಿಲಾಸವಾಗಿ ಅದು ನಾಟ್ಯವಾಡಿದೆ. ”

ಹೊಸ ‘ ಹರಟೆ ’ಯ ಸಂಸ್ಕಾರದ ಬಗೆಗೆ ಬೇಂದ್ರೆ ಹೇಳುತ್ತಾರೆ :

“ ........ವಕ್ರೋಕ್ತಿಯ ರೀತಿ, ಸುಭಾಷಿತಗಳ ಚಮತ್ಕಾರ, ಅನ್ಯೋಕ್ತಿಯ ಬೆಡಗು, ಕಿರಿಮಾತು, ಕುಸುರಿಮಾತು-ಶ್ಲೇಷೋಕ್ತಿ, ವ್ಯಾಜೋಕ್ತಿ ಮೊದಲಾದ ಉಕ್ತಿಪ್ರಕಾರಗಳು, ಹಾಸ್ಯದಲ್ಲಿದ್ದ ಉಪಮೆ-ರೂಪಕಾದಿಗಳು, ಮಾತಿನ ಜಾಣರ ಮುಂಗಾಲ ಪುಟಿಗೆಯ ಮಾತು, ಕುಹಕರ ಕೊಂಕು-ಕೊಳಕು ಮಾತು, ಮೂದಲಿಸುವವರ ಅಣಕದ ಮಾತು, ಹರಿಕಥೆಯವರ ಅಡ್ಡಕಥೆ, ಅಡ್ಡಮಾತು, ಅಡ್ಡನಗೆ ಇವೆಲ್ಲವು ಇಂದಿನ ಹರಟೆಗೆ ಸಂಸ್ಕಾರವನ್ನು ಕೊಡುವವು. ಹೀಗಂದಷ್ಟಕ್ಕೆ ಹರಟೆ ಶುದ್ಧ ಹುಡುಗಾಟವೆಂದು ತಿಳಿಯಲಾಗದು. ಅದರದೊಂದು ಗಾಂಭೀರ್ಯವಿದೆ. ಪ್ರೋಕರಿತನದ ಹರಟೆಯಿದೆ; ಸಜ್ಜನಿಕೆಯ ಹರಟೆಯಿದೆ; ಪೊಳ್ಳು ಹರಟೆಯಿದೆ; ಹುರುಳುಳ್ಳ ಹರಟೆಯೂ ಇದೆ. ”

ಬೇಂದ್ರೆಯವರು ಹುರುಳುಳ್ಳ ಹರಟೆಗಳನ್ನು ನಮಗೆ ಒದಗಿಸಿದ್ದಾರೆ. ಗೊತ್ತುಗುರಿಗಳಿಲ್ಲದೆ ಎತ್ತೆತ್ತಲೋ ಸಾಗುವದು ಹರಟೆಯ ಲಕ್ಷಣವೆಂದು ತೋರಬಹುದು. ಆದರೆ ನಿಶಿತಮತಿ, ಪ್ರಖರ ತರ್ಕ, ವಿಪುಲವಾಚನ, ಮಾತಿನ ಜಾಣ್ಮೆಗಳನ್ನು ಮೇಳವಿಸಿಕೊಂಡ ಬೇಂದ್ರೆಯವರ ಕೈಯಲ್ಲಿ ಹರಟೆ ಸಿಕ್ಕರೆ ಅದು ಹೇಗೆ ಸೊಗಸಾಗಿ, ಅರ್ಥವತ್ತಾಗಿ ಸಾಗುತ್ತದೆಯೆಂಬುದನ್ನು ನಾವು ‘ ನಿರಾಭರಣ ಸುಂದರಿ ’ ಯಲ್ಲಿ ಬಂದಿರುವ ಹರಟೆಗಳಲ್ಲಿ ಕಾಣುತ್ತೇವೆ.

‘ ನನ್ನ ಅವತಾರ ’ ಎಂಬ ಹರಟೆಯಲ್ಲಿ ಲಘುರೀತಿಯ ಬರೆಹದ ಸ್ವಾರಸ್ಯದೊಂದಿಗೆ ತರ್ಕದ ಜಾಣ್ಮೆ, ಸೂಕ್ಷ್ಮವಿಡಂಬನೆಗಳಿವೆ.

ಬೇನೆಯ ಜೀವಕ್ಕೆ ಬೇಸತ್ತು ಸಾಯಬೇಕೆಂದೆನಿಸಿ ಕೈಕೊಂಡ ಹಲವಾರು ಪ್ರಯತ್ನಗಳ ಫಲವಾಗಿ ಆರೋಗ್ಯ ಲಾಭವೊದಗಿದ ವಿಚಿತ್ರ ನಿರೂಪಣೆ ‘ ಸಾವಿನ ಕೂಡ ಸರಸ ’ ಎಂಬ ಹರಟೆಯಲ್ಲಿದೆ. ಉಸಿರುನಿಲ್ಲಿಸಿ ಸಾಯುವ ಪ್ರಯತ್ನವು

ತನ್ನಿಂದ ತಾನೆ ‘ಪ್ರಾಣಾಯಾಮ’ವಾಗಿ ಪರಿಣಮಿಸಿತು. ಉರಲು ಹಾಕಿಕೊಳ್ಳಬೇಕೆಂಬ ಸಾಹಸವು ಬೆಳಗಿನಲ್ಲಿ ಬೇಗನೆ ಏಳುವ ಚಟವಾಗಿ ಪರಿಣಮಿಸಿತು. ಗುಂಡು ಹಾಕಿಕೊಳ್ಳುವುದು, ವಿಷ ಕುಡಿಯುವುದು, ಬಾವಿಯಲ್ಲಿ ಬೀಳುವದು — ಈ ಯೋಜನೆಗಳು ಆಯುಶಸ್ವಿಯಾದುದರ ರುಚಿಕಟ್ಟಾದ ನಿರೂಪಣೆ ಇಲ್ಲಿದೆ. ಅಂತು, ಸಾಯಬೇಕೆಂದು ಪ್ರಯತ್ನ ಕೈಕೊಂಡಾಗ ‘ಸಾವು ತನ್ನ ಇಚ್ಛೆಯದಲ್ಲ’ ಎಂಬುದನ್ನು ನಿಚ್ಚಳವಾಗಿ ತಿಳಿದುಕೊಂಡ ಸನ್ನಿವೇಶವಿಲ್ಲಿದೆ. ಇಲ್ಲಿ ವಿನೋದ, ತರ್ಕ, ಮಾರ್ಮಿಕತೆಗಳು ತುಂಬಿ ಬಂದಿವೆ.

‘ಮಾನಪತ್ರ’ದ ಅರ್ಥ ಹೀಗಂತೆ : ಮಾ=ಲಕ್ಷ್ಮೀ; ನ=ಇಲ್ಲ; ಪತ್ರ=ಪತ್ರ. (ಏನೂ ಹಣವಿಲ್ಲದೆ ಸನ್ಮಾನವೆಂದು ಹೇಳುವ ಪತ್ರ). ಸಂಸ್ಕೃತ ಶಾಸ್ತ್ರಿಗಳು “ಮಾನಪತ್ರ ಸಮಾರಂಭ” ಪುರಾತನವೆಂದು ಸಮರ್ಥಿಸಿ “ಪತ್ರಂ ಪುಷ್ಪಂ ಫಲಂ, ತೋಯಂ ಶ್ರೀ ಭಗವದ್ಗೀತಾಸು ಉಪನಿಷತ್ಸು....” ಎಂಬ ಸೂತ್ರ ಹೇಳುತ್ತಾರೆ. ಈ ಸೂತ್ರಕ್ಕೆ ಅವರದೇ ಭಾಷ್ಯ ಕೇಳಬೇಕು : ‘ಪತ್ರಂ’ ಅಂದರೆ ಮಾನಪತ್ರ ಕೊಡುವದು. ಆ ಮೇಲೆ ಪುಷ್ಪಂ-ಹೂಮಾಲೆಯನ್ನು ಹಾಕುವದು. ಆ ಮೇಲೆ ಫಲಂ-ಹಣ್ಣು! ಆ ಮೇಲೆ ತೋಯಂ-ಬಹಳಷ್ಟು ತೋಯ ಹಾಕಿದ ಚಹಾ!” ಇಲ್ಲಿಯ ವಿಚಿತ್ರ ಹಾಸ್ಯವು ವಿಡಂಬನೆಗಾಗಿ ಬಂದಿದೆ.

‘ಕಸಬರಿಗೆ’ ಎಂಬ ಚಿಕ್ಕಗಾತ್ರದ ಹರಟೆಯು ಉತ್ಕೃಷ್ಟವಾಗಿದೆ.

“ಗಹನ ವಿಚಾರಗಳು ಇತ್ತೀಚೆಗೆ ಜನರ ಮನಸ್ಸಿಗೆ ಸೇರದಾಗಿವೆ........ ಈಗಿನ ಕಾಲ ಸ್ವಲ್ಪ ತಿರುಗಾಮುರುಗು........ ಹಿಂದಿನವರು ಹಾಲಿನಲ್ಲಿ ಸ್ವಲ್ಪು ನೀರು ಬೆರಸಿ ಕುಡಿದರೆ, ಇಂದಿನವರು ನೀರಿನಲ್ಲಿ ಸ್ವಲ್ಪು ಹಾಲು ಬೆರಸಿ ಕುಡಿಯುವರು. ಅರಗಬಹುದಾದುದನ್ನೂ ದಕ್ಕಬಹುದಾದುದನ್ನೂ ತಿನ್ನಬೇಕು, ಕುಡಿಯಬೇಕು........ ಈಗಿನವರಿಗೂ ನಿರ್ಮಲ ವಿಚಾರಗಳು........ ಬೇಕಾಗಿವೆ. ಆದರೆ ಅವು ರುಚಿಸಬೇಕಾದರೆ ಹೇಳುವ ವಿಧ ಬೇರೆಯಾಗಬೇಕು.........” ಈ ಧಾಟಿಯಲ್ಲಿ ಸಾಗಿದ ಈ ಹರಟೆಯು ‘ಬ್ರಹ್ಮ’ದ ವಿಷಯ ರುಚಿಸುವದಿಲ್ಲವೆಂದು ‘ಕಸಬರಿಗೆಯ’ ಮಹಾತ್ಮೆಯತ್ತ ಮುಂದುವರಿದಿದೆ. ‘ಜಗತ್ತಿನ ಹೊಲಸನ್ನು ಗೂಡಿಸಿ ಕಸದ ಮೂಲೆಯಲ್ಲಿಯೂ ಏಕಾಕಿಯಾಗಿ ಕುಳಿತುಬಿಡುವ ‘ಅವಧೂತ’ನಾಗಿದೆ, ಕಸಬರಿಗೆ. “ಭಾರತದ ಕಸಗೂಡಿಸಿ ತಾನು ಮೂಲೆಗುಂಪಾದ” ಬುದ್ಧದೇವನನ್ನು ಸ್ಮರಿಸಿದೆ. ಅಂತು ಬೇಂದ್ರೆಯವರ ಹರಟೆಯು ಜಾಣ್ಮೆಯು ‘ಕಸಬರಿಗೆ’ಯನ್ನು ಬ್ರಹ್ಮತ್ವಕ್ಕೆ ಏರಿಸಿ ಬುದ್ಧದೇವನ ಸ್ಮರಣೆಯನ್ನು ಒದಗಿಸಿದೆ.

“ಉಗುಳುವದು” ಎಂಬ ಹರಟೆ ಕ್ರಮಬದ್ಧ ನಿಬಂಧ ಲೇಖನದ ಮಾದರಿಯಲ್ಲಿ ಸಾಗಿದೆ. ೧. ವಿಷಯ ಪ್ರವೇಶ. ೨. ಉಗುಳುವದು ಮತ್ತು ಆರೋಗ್ಯ ಶಾಸ್ತ್ರ. ೩. ಉಗುಳುವದು ಮತ್ತು ಅನನ್ಯಸಾಮಾನ್ಯ ಲಕ್ಷಣ. ೪. ಉಗುಳು

ವದು ಮತ್ತು ನಾಟ್ಯಕಲೆ. ೫. ಉಗುಳುವದು ಮತ್ತು ರಾಜಕೀಯ ಚಳವಳಿ. ೬. ಉಪಸಂಹಾರ ಎಂಬ ಭಾಗಗಳಲ್ಲಿ ಈ ಹರಟೆಯು ಬಂದಿವೆ. ವಿಷಯ ಪ್ರವೇಶ ಹೀಗೆ : “ ಓದುವಣ್ಣಗಳಿರಾ, ‘ ಛೀ ಇದೇನು ಮಹಾಪಿಷಯ ’ ಎಂದು ಈ ಪುಟಗಳನ್ನು ಉಗುಳು ಹಚ್ಚಿ ತಿರುವಿ ಹಾಕಿ ಮುಂದೆ ಸಾಗಬೇಡಿರಿ. ”

ಮಾನವನ ಅನನ್ಯ ಸಾಮಾನ್ಯ ಲಕ್ಷಣವೆಂದು ಹೇಳಿದ ಇನ್ನುಳಿದ ವೈಶಿಷ್ಟ್ಯಗಳನ್ನು ಅಲ್ಲಗಳೆದು, ಉಗುಳುವದೇ ಅಂತಹ ಅನನ್ಯ ಲಕ್ಷಣವೆಂದೂ ಶೇಕ್ಸ್‌ಪಿಯರನ ‘ Merchant of Venice ’ ಎಂಬ ನಾಟಕವು ಉಗುಳಿನ ಬಗೆಗಿದೆಯೆಂದೂ ಇಲ್ಲಿ ಸಾಧಿಸಲಾಗಿದೆ. ಉಗುಳುವ ಸೂಕ್ಷ್ಮತೆಯಲ್ಲಿ ಸ್ವಭಾವಭೇದವನ್ನು ಗುರುತಿಸಲಾಗಿದೆ :

ತಾಮಸಿಯು ‘ ಖ್ಯಾಕ್ ’ ಎಂದು ಉಗುಳುವನು.
ರಾಜಸನು ‘ ಥೂ ’ ಎನ್ನುವನು.
ಸಾತ್ವಿಕನು ‘ ಚಿಃ ’ ಎನ್ನುವನು.

ಕೊನೆಗೆ ವೇದಕ್ಕೂ ಉಗುಳಿಗೂ ಸಂಬಂಧ ಕಲ್ಪಿಸಲಾಗಿದೆ. ಈ ‘ ಹರಟೆ ’ಯ ನಗೆಯಲ್ಲಿ ಮೋಜು, ಬೋಧೆ, ಏಟುಗಳಿವೆ.

ಬೇಂದ್ರೆಯವರ ‘ ಹರಟೆ ’ಗಳಲ್ಲಿಯ ಮಾರ್ಮಿಕತೆ, ಹಾಸ್ಯ, ವಿಡಂಬನ, ತತ್ತ್ವ, ಬೋಧೆಗಳು ಹೊಸಗನ್ನಡ ಸಾಹಿತ್ಯಕ್ಕೆ ಕಳೆಯನ್ನು ತರುವಂತಿವೆ.

ಉನ್ನತಮಟ್ಟದ ಕವಿಯಾದ ಬೇಂದ್ರೆಯವರು ಸಣ್ಣಕತೆ ಹರಟೆಗಳಲ್ಲಿಯೂ ಹಿರಿಮೆಯನ್ನು ತೋರಿದ್ದಾರೆ. *

§ § § §

* ‘ ಸಾಹಿತ್ಯ ಸಂಗಮ ’ ದಿಂದ.

೨೬

# ದಾರ್ಶನಿಕಕವಿ ಬೇಂದ್ರೆ

ಶೇಷ ನವರತ್ನ

ಈ ಶತಮಾನದ ಅತ್ಯಂತ ಪ್ರಭಾವಶಾಲೀ ದಾರ್ಶನಿಕಕವಿಯಾದ ಡಾ. ಬೇಂದ್ರೆ, ಕನ್ನಡದ ಜನವಾಣಿಯಲ್ಲಿಯೇ ಅಂತಃಕರಣದ ಜಿಜ್ಞಾಸೆಯ ಅನಂತತೆಯನ್ನು, ಪರಮಾರ್ಥದರ್ಶನದ ತಾತ್ತ್ವಿಕ ಔನ್ನತ್ಯವನ್ನು ಸಮರ್ಥವಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಈ ವಿಷಯದಲ್ಲಿ ಹನ್ನೆರಡನೆಯ ಶತಮಾನದ ಶರಣರೊಂದಿಗೆ ಬೇಂದ್ರೆಯವರನ್ನು ಹೋಲಿಸಬಹುದು. ಇಬ್ಬರೂ ಅನುಭಾವಿಗಳು. ಅನುಭಾವವೆಂಬುದು ಅವರಿಗೆ ನಿತ್ಯದ ಜೀವನದಿಂದ ಬೇರೆಯಾದ (Abstract) ಅಸ್ಪಷ್ಟ ಚಿಂತನವಲ್ಲ. ಬದುಕಿಗೆ ಅನಿವಾರ್ಯವಾದ ಕಾಯಕನಿಷ್ಠೆಯಲ್ಲಿಯೇ ಅವರು ಆತ್ಯಂತಿಕ ಅನುಭಾವದ ಸ್ಪರ್ಶ ಕಂಡುಕೊಂಡರು. ಶರಣರಂತೆ ಬೇಂದ್ರೆಯವರಿಗೂ ನಿತ್ಯಜೀವನದ ಪ್ರತಿಯೊಂದು ಕ್ರಿಯೆಯೂ, ಅನುಭವವೂ ಅನುಭಾವದ ಪರಮಮೂಲ ಸೋಪಾನವಾಗಿದೆ. ಎಂತಲೇ ಬೇಂದ್ರೆದರ್ಶನ ಶರಣರ ದರ್ಶನದಂತೆ ಜೀವಂತಿಕೆಯಿಂದ, ಲವಲವಿಕೆಯಿಂದ ತುಂಬಿ ಆತ್ಮೀಯವೆನಿಸುತ್ತದೆ. ಹತ್ತಾರು ಹೊತ್ತಿಗೆಗಳ ಭಾರ ಹೊತ್ತು ಸಂಗ್ರಹಿಸಿದ ಶಾಬ್ದಿಕ ಪರಿಭಾಷೆಯ ವಿಪ-ರೀತ ವಿದ್ವತ್ತಿನಿಂದ ಬೇಂದ್ರೆ ಬಹಳ ದೂರ. ಅಂತೆಯೇ ಬೇಂದ್ರೆದರ್ಶನ Pedantic ಎನಿಸುವದಿಲ್ಲ. ಏಕೆಂದರೆ ಅದು ಪುಸ್ತಕಪಾಂಡಿತ್ಯದಿಂದ ಉದ್ಭವವಾದ ಬೌದ್ಧಿಕವಿಲಾಸವಲ್ಲ, ಊಹಾಚಮತ್ಕಾರವಲ್ಲ, ಜೀವನದಿಂದ ಒಡಮೂಡಿದ ಅರಿವಿನ ಆಮೋದವದು. ಅಂತೆಯೇ ಬೇಂದ್ರೆದರ್ಶನಕ್ಕೆ ಜೀವಂತಿಕೆಯಿದೆ, ಸ್ವಂತಿಕೆಯಿದೆ, ಪ್ರಗಲ್ಭತೆಯಿದೆ.

ಬದುಕಿನಲ್ಲಿ ತಾಮಸ ವಿಕಾರಗಳಿವೆ. ರಾಜಸ ವಿಲಾಸಗಳಿವೆ. ಸಾತ್ತ್ವಿಕ ಪ್ರಮೋದಗಳಿವೆ. ತ್ರಿಗುಣಗಳ ಸಾಮ್ಯಾವಸ್ಥೆಯಾದ ಪ್ರಕೃತಿಯಲ್ಲಿಯೇ ಮಾನವ ಜೀವ ಬಂಧಿತವಾಗಿದೆ. ಎಲ್ಲವನ್ನೂ ಯಥಾರ್ಥವಾಗಿ ಅನಿವಾರ್ಯವಾಗಿ ಅನುಭವಿಸಬೇಕು. ತಾಮಸದಿಂದ ನೋವು, ರಾಜಸದಿಂದ ಮೋಹ, ಉಂಟಾದರೆ; ಸಾತ್ತ್ವಿಕವು ಆನಂದಸಂಪ್ರಾಪ್ತಿಗೆ ಹಾದಿ ಮಾಡಿಕೊಡುತ್ತದೆ. ಈ ಮೋಹ ಮತ್ತು ಮೋಹದ

ಪ್ರಬಲ ಮೋಡಿಯಿಂದುಟಾಗುವ ನೋವಿನ ಉಪಶಮನವಾಗದ ಹೊರತು ಆನಂದದ ದಾರಿ ತೆರೆಯುವದಿಲ್ಲ. ಇದನ್ನರಿತ ಬೇಂದ್ರೆದರ್ಶನವು ಜೀವನದ ಮೂಲ-ಭೂತವಾದ ನೋವಿನ ನೆಲೆ ಹುಡುಕಲು ಪರ್ಯಟನ ಮಾಡಿದೆ. ನೋವಿನ ಅನಿವಾರ್ಯತೆಯನ್ನು, ಅನಂತಮುಖತ್ವವನ್ನು ಪ್ರಾಯಶಃ ಬೇಂದ್ರೆ ಅರಿತಷ್ಟು ವಾಸ್ತವ ದೃಷ್ಟಿಕೋನದಿಂದ ಅವರ ಸಮಕಾಲೀನ ಕವಿಗಳು ಅರ್ಥಮಾಡಿಕೊಂಡಿಲ್ಲ; ಅರ್ಥಮಾಡಿಕೊಂಡರೂ ಅದನ್ನು ಸಶಕ್ತಕಾವ್ಯವನ್ನಾಗಿ ಮಾಡಲಿಲ್ಲ ಎಂಬುದು ಸ್ಪಷ್ಟವಾಗಿ ವಿಮರ್ಶಿಸಿ ಗುರುತಿಸಬೇಕಾದ ಅಂಶ.

ನೋವಿನ ನೆಲದಲ್ಲಿಯೇ ಆನಂದದ ಉಗಮಸ್ಥಾನವನ್ನು ಕಂಡರಿತ ಮಹಾನತೆಯಲ್ಲಿಯೇ ಬೇಂದ್ರೆದರ್ಶನದ ಸಾಫಲ್ಯವಿದೆ. ದುಃಖ-ಅಜ್ಞಾನ-ಅಸತ್ಯಗಳ ತಾಮಸ ಭೂಮಿಕೆಯಿಂದ ಮೇಲೆದ್ದು ಪ್ರಶಾಂತಿ-ಪ್ರಜ್ಞಾನ-ಸತ್ಯಗಳ ದೈವಿಕ ಸಾಮ್ರಾಜ್ಯದಲ್ಲಿ ಪ್ರತಿಷ್ಠಿತಗೊಳ್ಳುವದೇ ಜೀವನದ ಗುರಿ. "ಕತ್ತಲೆಯಿಂದ-ಬೆಳಕು, ವಿರಸದಿಂದ-ಸಮರಸ, ಅನೃತದಿಂದ-ಅಮೃತ" ಎಂದು ಇದನ್ನು ನಿರ್ದೇಶಿಸಬಹುದು.

ಭವ-ಭಾವ-ಶಿವ ಈ ಮೂರರ ಸಮನ್ವಯವನ್ನೇ ಬೇಂದ್ರೆಕಾವ್ಯಗಳು ಸಾರಿ ಸಾರಿ ಹೇಳುತ್ತಿವೆ. ಭವ ಎಂದರೆ ಆತ್ಮನಕರ್ಮಭೂಮಿ-ಮನುಷ್ಯನ ಕ್ರಿಯಾಶಕ್ತಿಯ ಅಭಿವ್ಯಕ್ತಿಗೆ ನೆಲೆಯಾದ ಜೀವನರಂಗ. ಭಾವ ಎಂದರೆ ಆತ್ಮನ ಚಿತ್ತಭೂಮಿ. ಅಲ್ಲಿ ಇಚ್ಛೆ ಮತ್ತು ಜ್ಞಾನದ ಅಸ್ತಿತ್ವ. ಕರ್ಮ ಮತ್ತು ಚಿತ್ ಶಕ್ತಿಯ, ಕ್ರಿಯೆ ಮತ್ತು ಸಂಕಲ್ಪದ, ಇಚ್ಛೆ ಮತ್ತು ಜ್ಞಾನದ ಅನನ್ಯ ಸಮ-ರಸವೇ; ಏಕೀಭವಿಸಿದ ಸ್ನೇಹರಂಗವೇ ಶಿವಭೂಮಿ. ಅಲ್ಲಿ ತಾದಾತ್ಮ್ಯವಿದೆ.

ಮನುಷ್ಯನ ಸಂಕಲ್ಪಕ್ಕೂ ಕ್ರಿಯೆಗೂ ವೈಪರೀತ್ಯವಿಲ್ಲ; ದ್ವಂದ್ವವಿಲ್ಲ. ಎಲ್ಲ ಕಡೆ ತಿಳಿವಳಿಕೆ, ಆವರಿಸಿದ ಅರಿವು, ಭೋಗಯೋಗಗಳ ಸುಂದರ ಸಮನ್ವಯ, ಸಾತ್ತ್ವಿಕ ಶಕ್ತಿಯ ಪರಮೋಚ್ಚ ಸನ್ನಿಕರ್ಷ. ಜೀವಧರ್ಮವು ದೇವಧರ್ಮವಾಗಿ ಪರಿವರ್ತನೆ ಹೊಂದುವದು. ಆ ದೈವೀ ಸಂಕಲ್ಪಕ್ಕೆ ಆ ವಿರಾಟ್ ದೈವೇಚ್ಛೆಗೆ ತನ್ನನ್ನು ಸಮರ್ಪಿಸಿಕೊಳ್ಳಬೇಕು. ಕರ್ತೃತ್ವವನ್ನು ತನ್ನಲ್ಲಿಯೇ ಆರೋಪಿಸಿಕೊಳ್ಳುವದು ಜೀವನಲ್ಲಿ ಅಹಂಕಾರದ ಪರಾಕಾಷ್ಠೆ. ಈ ಅಹಂಕಾರ ಸ್ಪರ್ಶದ ಶಂಕೆ ಬಂದಾಗಲೇ ಬೇಂದ್ರೆ ಬೇಡಿಕೊಳ್ಳುತ್ತಾರೆ—

"ದಾಸ ಪುರಂದರ ವಿಠ್ಠಲನೊಡೆಯಾ
ಅಹಂಕಾರವಿದೆ ಕೊಡು ಬಿಡುಗಡೆಯಾ"[1]

ಈ ಸಮರ್ಪಣಭಾವ ಬೇಂದ್ರೆ (ವ್ಯಕ್ತಿಯ)ಯವರ ದೊಡ್ಡಗುಣ. ಇದೇ ಆ ಕವಿಯನ್ನು ದಾರ್ಶನಿಕ ಮಟ್ಟಕ್ಕೆ ಏರಿಸಿದ ಪ್ರೇರಕ ಶಕ್ತಿ.

---

[1] ನಾಕುತಂತಿ, ಪುಟ ೬೫.

" ಪುಂಡರೀಕ ವರದಾ | ಅಂಬಿಕಾ-
ತನಯುನನ್ನ ಕರದಾ. [1]

ಬೇಂದ್ರೆ ಅನುಭಾವದಲ್ಲಿ ಜೀವ ಹಾಗೂ ಪ್ರತ್ಯಗಾತ್ಮನ ಮಧ್ಯದ ಅತ್ಯಂತ ಘನಿಷ್ಠ ವಾದ ಆಧ್ಯಾತ್ಮಿಕ ಸಂಬಂಧಕ್ಕೆ ಆದ್ಯಸ್ಥಾನ ಜೀವವು ಪ್ರತ್ಯಗಾತ್ಮನೊಡನೆ ಅವಿನಾ ಭಾವ ಸಂಪರ್ಕ ಹೊಂದಿದೆ. ಉಪಾಸನೆಗಾಗಿ ಅವನನ್ನು 'ವಿಠ್ಠಲ' ಎಂದು ನಾವು ನಿರ್ದೇಶ ಮಾಡಬಹುದು. ಅಂಥ ವಿಠ್ಠಲ (ಅಭಂಗ ವಿಠ್ಠಲ) ಅಂಬಿಕಾತನ-ಯನನ್ನು ಆತ್ಮೀಯತೆಯಿಂದ ಕರೆಯುತ್ತಿದ್ದಾನೆ.

ಅನುಭಾವ ಕಾವ್ಯದ ಮೂಲಗುಣಗಳಾದ ತನ್ಮಯತೆ, ಭಾವನಿರ್ಭರತೆ, ಅಂತರಂಗ ನಿರೀಕ್ಷಣೆ, ಭಗವತ್ ಪ್ರಜ್ಞೆ, ಭಗವಂತನೊಡನೆ ಹೊಂದಿದ ಆಧ್ಯಾತ್ಮಿಕ ಸಂಪರ್ಕದ ಅಪರೋಕ್ಷಾನುಭವ ಮುಂತಾದವುಗಳು ಪರಾಕಾಷ್ಠೆಗೆ ಮುಟ್ಟಿದುದನ್ನು ಬೇಂದ್ರೆಕಾವ್ಯದಲ್ಲಿ ಕಾಣಬಹುದು. ತನ್ನ ಹಾಡನ್ನು, ಗೀತಗುಂಜನವನ್ನು 'ಇದು ನಭೋವಾಣಿ' ಎಂದು ಹೇಳಿಕೊಳ್ಳುವ ಮಟ್ಟಿಗೆ ಬೇಂದ್ರೆ, ಜೀವದ ಹಾಗೂ ಬ್ರಹ್ಮದ ,ಅತ್ಯಂತಿಕ ಅಭಿನ್ನತೆಯನ್ನು ಅನುಭವಿಸಿದ್ದಾರೆ.

ಬ್ರಹ್ಮಚೇತನವು ನಿತ್ಯವಾಗಿದ್ದು ಆಕಾಶದಂತೆ ವ್ಯಾಪಿಯಾಗಿ, ಕಾಲಕಲ್ಪ ನೆಗೂ ಅಧಿಷ್ಠಾನವಾಗಿದೆ. ಈ ಜೀವವು ಆ ಬ್ರಹ್ಮದ ಅಭಿನ್ನವಾದ ಅಂಶವಿಶೇಷವೇ ಆದಾಗ ಈ ಜೀವನ ಮಾತು ಮೂಲತಮ ಅರ್ಥದಲ್ಲಿ ಆ ಬ್ರಹ್ಮದ ಮಾತೇ ಆಗ ಲಿಲ್ಲವೆ ? ಬ್ರಹ್ಮ, ಆಕಾಶವ್ಯಾಪಿಯಾಗಿದ್ದಾನೆ. ಇದು ಬ್ರಹ್ಮನ ವಾಣಿ. ಆಕಾಶ ವ್ಯಾಪ್ತವಾದ ಬ್ರಹ್ಮಚೈತನ್ಯದ ನುಡಿ. ಅಂತೆಯೇ ಇದು ವ್ಯಕ್ತಿಯ ಸೀಮಿತ ಮಾತಲ್ಲ. ಪರಬ್ರಹ್ಮಶಕ್ತಿಯ ಅಸೀಮ ವಾಣಿ. ಅಂತೆಯೇ 'ಇದು ನಭೋವಾಣಿ.' ಇದನ್ನು ಹೇಳಿದ ಕವಿಗೆ ಇರಬೇಕಾದ ಆತ್ಮವಿಶ್ವಾಸ ಅಖಂಡಿತವಾದದ್ದು. ಅವನ ಎದೆಗಾರಿಕೆ ಅದ್ಭುತವಾದದ್ದು. ಈ ಸಂದರ್ಭದಲ್ಲಿಯೇ ಬೇಂದ್ರೆಯವರಿಗೆ ಉಂಟಾದ ಬ್ರಹ್ಮಚೈತನ್ಯದ ಸಾಕ್ಷಾತ್ಕಾರದ ಹಿನ್ನೆಲೆಯ ನಿಗೂಢವನ್ನು ಅರ್ಥೈಸಬಹುದು. ಅರಿಯಬಹುದು.

ರಸವೆ ಜನನ | ವಿರಸ ಮರಣ
ಸಮರಸವೇ ಜೀವನ [2]

ಈ ಕಾವ್ಯಚರಣಗಳಲ್ಲಿ ಬೇಂದ್ರೆದರ್ಶನದ ಅಂತರ್ಯವನ್ನು ಅರಿಯಬಹುದು. ಮಾನವನ ಮೇಲೆ ದಾನವನ ಆವೇಶವಾದಾಗ ವಿರಸವಾಗುತ್ತದೆ. ಜೇವರ ಸನ್ನಿಧಾನ

1 ಇದು ನಭೋವಾಣಿ (ಅಭಂಗ ವಿಠ್ಠಲ) ಪುಟ. ೧೫.
2 ನನ್ನ ಹಾಡು (ಗರಿ) ಪುಟ. ೧೯೪.

ದೊರೆತಾಗ ಸಮರಸ ಉಂಟಾಗುತ್ತದೆ. ವಿರಸ, ದುಃಖದ ಮೂಲ, ಸಮರಸ, ಆನಂದದ ನೆಲೆ. ಅಂತೆಯೇ ದೇವಧರ್ಮ ಹಾಗೂ ಮಾನವಧರ್ಮದ ಸಾಮರಸ್ಯವೇ ಜೀವನತತ್ತ್ವದ ಸಾಫಲ್ಯ.

ಮಾನವನಿಂದ ದೇವನಾಗಬೇಕಾದರೆ ಮಧ್ಯೆಬರುವ ದಾನವನ ಭೀತಿಯನ್ನು ದಾಟಬೇಕು. ನಮಗೆ ಆ ದಾನವನು ದಾನವಿತ್ತುದೇನು ? ಸಾವು. ಸಾವು, ಕತ್ತಲೆಯ ಸಂಕೇತ, ನೋವಿನ ನೆಲೆ. ಅಂತೆಯೇ ಬೇಂದ್ರೆ ಅನುಭಾವವಾಣಿಯು ಪ್ರತಿ-ಕ್ಷಣ ಧೀಶಕ್ತಿಯ ದಮನಕ್ಕೆ ಸಿದ್ಧನಾದ ದಾನವನ ಬಗೆಗೆ ಎಚ್ಚರ ನೀಡುತ್ತದೆ. ಅವನನ್ನು ಕುರಿತು, ವಸ್ತುನಿಷ್ಠವಾಗಿ ಹಾಡುತ್ತದೆ. ಈ ದಾನವ, ವ್ಯಷ್ಟಿಯನ್ನು ಆಕ್ರಮಿಸಿದಂತೆ ಸಮಷ್ಟಿಯನ್ನೂ ಆಕ್ರಮಿಸುತ್ತಾನೆ. ಆಗ ಭೂಮಿಯೆಲ್ಲ ಅಸುರರ ಕಸುವಿನಿಂದ ತತ್ತರಿಸುತ್ತದೆ. ‘ಕುರುಡು ಕಾಂಚಾಣಾ, ಬೀದಿನಾಯಿ ರಾಘೆ, ಹೆಣದಹಿಂದೆ, ಪುಟ್ಟ ವಿಧವೆ, ದುಡ್ಡಿನ ಕಥಿ, ಅನ್ನಾವತಾರ, ತುತ್ತಿನ ಚೀಲ, ನರಬಲಿ’ ಮುಂತಾದ ಕವನಗಳು ಈ ವಿಧದ ಸಮಷ್ಟಿಯನ್ನು ಆಕ್ರಮಿಸಿದ ದಾನವಶಕ್ತಿಯ ರುದ್ರತಾಂಡವವನ್ನೂ ನೋಡಿ ಆ ದೈತ್ಯಶಕ್ತಿಯ ಅಮಾನುಷ ಕ್ರೌರ್ಯಕ್ಕೆ ಸಿಲುಕಿ ಹಣ್ಣಾದ ಜೀವಜಾತದ ಅವಸಾದಕ್ಕೆ ಮರುಕಗೊಂಡಾಗ ಹೃದಯ ಸಮುದ್ರ’ದಲ್ಲಿ ಮೂಡಿ ಬಂದ ಅನುಕಂಪದ ಕಂಪನಗಳು; ತರಲ ಕರುಣೆಯ ತರಂಗಗಳು.

ಬೇಂದ್ರೆದರ್ಶನದ ವೈಶಿಷ್ಟ್ಯವೆಂದರೆ ಅದು ಪ್ರಪಂಚದ ಎಲ್ಲವನ್ನೂ, ಎಲ್ಲರನ್ನೂ ಏಕಕಾಲಕ್ಕೆ ದೈವಿಕ ಅಂತಃಕರಣದಿಂದ, ನಿರ್ಮಲ ಆತ್ಮೀಯತೆಯಿಂದ ಆಲಿಂಗಿಸಿಕೊಳ್ಳುತ್ತದೆ. ಕಾಣಬರುವ ನಾಮರೂಪಗಳ ಭೇದದ ಹಿಂದೆ ವಾಸ್ತವವಾಗಿ ನಿಹಿತವಾದ ಏಕೋಭಾವದ ನಿರಂತರ ಅನುಭವ ಬೇಂದ್ರೆ ವ್ಯಕ್ತಿಯ ಹುಟ್ಟುಗುಣ. ಶಾಬ್ದಿಕ ಪರಿಭಾಷೆಯ ಚೌಕಟ್ಟಿನಲ್ಲಿ ವಿವರಿಸಬಹುದಾದರೆ ಬೇಂದ್ರೆ ಒಂದೇ ಸಮಯಕ್ಕೆ ಅತ್ಯಂತ ಉತ್ಕಟ ‘ರೊಮ್ಯಾಂಟಿಕ್’ ಕವಿ, ಉಜ್ವಲ ‘ಕ್ಲಾಸಿಕಲ್’ ಕವಿ. ವಾಲ್ಮೀಕಿ–ವ್ಯಾಸರ ಅಲೌಕಿಕ ನಿರ್ಲಿಪ್ತತೆ, ಹೋಮರ್-ವ್ಹರ್ಜಿಲ್‌ರ ಸಾರ್ವಭೌಮ ಚಿಂತನಶೀಲತೆ, ಶೇಕ್ಸಪಿಯರ–ಡಾಂಟೆಯವರ ಸಮಗ್ರ ಜೀವನದ ವಸ್ತುನಿಷ್ಠ ಅನ್ವೀಕ್ಷಣೆ, ತುಲಸೀದಾಸ–ಕುಮಾರವ್ಯಾಸರ ಸರ್ವ ಸಮರ್ಪಣದ ಭಕ್ತಿಭಾವಗಳನ್ನು ಬೇಂದ್ರೆಕಾವ್ಯದಲ್ಲಿ ನಿರಾಯಾಸವಾಗಿ ಕಾಣಬಹುದಾದರೆ, ರವೀಂದ್ರ ಹಾಗೂ ಅರವಿಂದರ ನವನವೋನ್ಮೇಷಶಾಲಿನಿಯಾದ ಪ್ರತಿಭಾಪ್ರಸ್ರವಣದಿಂದ ಸಂಚಿತವಾದ ಅದಮ್ಯ ಶಕ್ತಿಶಾಲೀನತೆಯನ್ನು ಗುರುತಿಸಬಹುದು. ಅಷ್ಟೇ ಏಕೆ ? ಇಂಗ್ಲಿಷ್ ಸಾಹಿತ್ಯದ ಪ್ರಸಿದ್ಧ ನಿಸರ್ಗೋಪಾಸಕನಾದ ವರ್ಡ್ಸ್‌ವರ್ಥ ಕವಿಯು ದೃಶ್ಯಪ್ರಕೃತಿಯಲ್ಲಿ ನಿಸರ್ಗದ ಅಭಿರಾಮ ಸನ್ನಿವೇಶಗಳಲ್ಲಿ ಮಿಡಿಯುತ್ತಿರುವ ಪ್ರಾಣಸ್ಪಂದನವನ್ನು ಗುರುತಿಸಿದಂತೆ, ಬೇಂದ್ರೆ

ಕೂಡ ದೃಶ್ಯ ಪ್ರಪಂಚದಲ್ಲಿ, ಭೌತಪ್ರಕೃತಿಯ ಅವ್ಯಾಹತ ಕ್ರಿಯಾಶಾಲೀನತೆಯಲ್ಲಿ ಅಂತಸ್ಸೂತ್ರವಾಗಿರುವ ಜೀವತತ್ತ್ವವನ್ನು ಅರಿತಿದ್ದಾರೆ. ಅಂತೆಯೇ ಅವರಿಗೆ ನಿಸರ್ಗ ಒಂದು ಜಡ ಮಾತ್ರವಲ್ಲ. ಅದು ಸೃಷ್ಟಿಯ ಅನಂತ ಆನಂದದ ರಂಗ ಭೂಮಿ. ರಸೋಪಾಸಿಯಾದ ನಟಿ. ಅಲ್ಲಿರುವ ದೈವಿಕತೆಯ ಸ್ಪರ್ಶದಿಂದ ಮನುಷ್ಯ ನಿಗೆ ಭೂಮಾನುಭೂತಿಯುಂಟಾಗುತ್ತದೆ. ಅಂಥ ಪ್ರಕೃತಿಯ ದೈವೀ ಸ್ಪರ್ಶ ದಿಂದ ಮನುಷ್ಯನಿಗೆ ಪರಾಸಿದ್ಧಿ ಉಂಟಾಗುತ್ತದೆ. ಅಚೇತನದಲ್ಲಿಯೂ ಚೇತನದ ಪ್ರಾಣಸಂಚಾರವಾಗುತ್ತದೆ.

'ತತ್‌ಸಂಯೋಗಾದಚೇತನಂ, ಚೇತನಾವದಿವಲಿಂಗಮ್' ಎಂಬ ಸಾಂಖ್ಯ ಕಾರಿಕೆಯ ಉಕ್ತಿಯನ್ನು ಈ ಸಂದರ್ಭದಲ್ಲಿ ಸಂಸ್ಮರಿಸಬಹುದು. 'ತತ್ ಸನ್ನಿ ಧಾನಾದಧಿಷ್ಠಾತೃತ್ವಂ ಮಣಿವತ್' ಎಂಬುದನ್ನೂ ನೆನಪಿಸಿಕೊಳ್ಳಬಹುದು. ಅಂತೆಯೇ ಬೇಂದ್ರೆ ಕಣ್ಣಿಗೆ ಬೆಳಕು 'ಬರಿ ಬೆಳಗಲ್ಲೋ ಅಣ್ಣಾ' ಆಗಿದೆ, ಕಿವಿಗೆ 'ಗಿಡಗಂಟೆಯ ಕೊರಳೊಳಗಿಂದ ಹೊರಟ ಹಕ್ಕಿಗಳಾ ಹಾಡು' ಕೇಳಿದೆ. 'ಗುಡ್ಡ ಗುಡ್ಡ ಸ್ಥಾವರಲಿಂಗವಾಗಿವೆ; 'ಮುಗಿಲಮಾರಿಗೆ ರಾಗರತಿಯ ನಂಜು' ಏರಿದೆ.

'ಮುಗಿಲು ನೆಲಕೆ ಮುಕ್ಕು ಚಿಕ್ಕೆ
ಕಾಳುಗಳನು ಬಿತ್ತಿದೆ;
ನೆಲವು ಮುಗಿಲಿಗರ್ತಿಯಿಂದ
ಆರತಿಯನ್ನೆತ್ತಿದೆ.' [1]

ದೃಶ್ಯ ಪ್ರಕೃತಿಯಲ್ಲಿ ಮಿಡಿವ ಇಂಥ ಪ್ರಾಣಸ್ಪಂದನವನ್ನು ಗುರುತಿಸಿದ ಇನ್ನಿಬ್ಬರು ಮಹಾನ್ ಕವಿಗಳೆಂದರೆ ಕಾಳಿದಾಸ ಮತ್ತು ರವೀಂದ್ರರು. ಮೂವರದೂ ಒಂದೇ ಚೇತನ. ಅಂತೆಯೇ ಕಾಳಿದಾಸ:

ಧೂಮಜ್ಯೋತಿಃ ಸಲಿಲಮರುತಾಂಸನ್ನಿಪಾತಃ ಕ್ವಮೇಘಃ
ಸಂದೇಶಾರ್ಥಾ ಕ್ವ ಪಟುಕರಣೈಃ ಪ್ರಾಣಿಭಿಃ ಪ್ರಾಪಣೀಯಾ
ಇತ್ಯೌತ್ಸುಕ್ಯಾದ್‌ಪರಿಗಣಯನ್ ಗುಹ್ಯಕಸ್ತಂ ಯಯಾಚೆ
ಕಾಮಾರ್ತಾಹಿ ಪ್ರಕೃತಿ ಕೃಪಣಾಶ್ಚೇತನಾಚೇತನೇಷು ||

ಎಂದು ಹೇಳಿ ಜಡಮೋಡವನ್ನು ಅನುರಾಗದ ಸಂದೇಶವಾಹಕನನ್ನಾಗಿ ಮಾಡು ತ್ತಾನೆ. ಕಾಳಿದಾಸನು 'ಕುಮಾರ ಸಂಭವ'ದ ಮೊದಲಸರ್ಗದಲ್ಲಿ ಬಣ್ಣಿಸಿದ ಹಿಮಾಲಯದ ತಪ್ಪಲಿನ ಪರ್ವತ ಪ್ರಾಂತಗಳ ಅನನ್ಯ ರಮಣೀಯವಾದ ಬಣ್ಣನೆ

1 ಶ್ರಾವಣದ ವೈಭವ (ಸಖೀಗೀತ) ಪುಟ, ೭೯.

ಆ ಕವಿ, ಪ್ರಕೃತಿಯನ್ನು ಕಂಡ ಬಗೆಗೆ ಸಾಕ್ಷಿಯಾಗಿದೆ. ಜಡಪ್ರಕೃತಿಯಲ್ಲೂ ಪ್ರಕೃತಿಮಾತೆಯ (ಮೂಲ ಪ್ರಕೃತಿಯ) ಜೀವನದಾಯಿನಿಯಾದ ಆ ಭಗವತಿಯ ಸಾಕ್ಷಾತ್ಕಾರ ಮಾಡಿಕೊಂಡ ಉತ್ತುಂಗ ಸಿದ್ಧಿ ಕಾಳಿದಾಸನನ್ನು ದಾರ್ಶನಿಕನ ಎತ್ತರಕ್ಕೇರಿಸಿದರೆ. ಅದೇ ಸಿದ್ಧಿ, ರವೀಂದ್ರರನ್ನು, ಬೇಂದ್ರೆಯವರನ್ನು ದಾರ್ಶನಿಕರನ್ನಾಗಿ ಮಾಡುತ್ತದೆ.

"The sky seems to ride fast upon the madly rushing rain; the water in the river is loud and impatient" 'The rainy day' 'The crescent Moon"– ಇದು ಕವೀಂದ್ರರ ಪ್ರಮುಗ್ಧ ಹೃದಯ ಚಿತ್ರಿಸಿದ ಪ್ರಕೃತಿ ಚಿತ್ರಣ. ಪರಮಪಾವನೆಯಾದ ಗಂಗೆಯ ಜಲಧಾರೆಗೆ ಬೇಂದ್ರೆಹೃದಯ ಆಹ್ವಾನಿಸುವ ರೀತಿಯಿದು :

ವೃಂದಾರವಂದ್ಯೆ, ಮಂದಾರಗಂಧೆ
ನೀನೇ ತಾಯಿತಂದೆ.
ರಸಪೂರಜನ್ಯೆ ನೀನಲ್ಲ ಅನ್ಯೆ
ಸಚ್ಚಿದಾನಂದ ಕನ್ಯೆ
ಬಂದಾರೆ ಬಾರೆ, ಒಂದಾರೆ ಸಾರೆ
ಕಣ್‌ಧಾರೆ ತಡೆವರೇನೇ ? [1]

ಎಂಥ ಅದ್ಭುತಸಾಮ್ಯ. ಮಹಾಕವಿಹೃದಯಗಳು ಕಾಲದ ಕಟ್ಟನ್ನೂ ಮೀರಿ ಸಮ್ಮಿಳನಗೊಂಡ ಅಭೂತಪೂರ್ವ ಉದಾಹರಣೆ. ಇದೊಂದು ಉನ್ನತಚೇತನಗಳ ಸಾರ್ವಕಾಲಿಕ ದರ್ಶನಸಿದ್ಧಿಗೆ ಅತ್ಯಪೂರ್ವ ಸಾಕ್ಷಿ. ಹೀಗೆ ಅವ್ಯಕ್ತ ಪ್ರಕೃತಿಯ ಮಾತೃಪ್ರೇಮವನ್ನು ಆಸ್ವಾದಿಸಿದ ಈ ರಸಋಷಿ ಸಕಲಜೀವಜಾತವನ್ನು ಅನಂತ ಕಾಲದಿಂದ ಕರುಣೆಯ ಅಮೃತಧಾರೆಯನ್ನೆರೆದು ಪೋಷಿಸುತ್ತಿರುವ ಆ 'ಭಗವತಿ'ಯ –'ಮಾತೆ'ಯ ಮಹಾಸ್ವರೂಪ ಚಿಂತನಲೀನನಾದಾಗ ಜಗತ್ ಸಮಸ್ತವನ್ನೂ ಶಿಶುವಿನಂತೆ ತಬ್ಬಿಕೊಂಡ ಮಹಾಮಾತೆಯ ಮಮತೆಯ ಮಧುರ ಅನುಭವದಿಂದ ರೋಮಾಂಚಿತನಾಗುತ್ತಾನೆ. ಅಂತೆಯೇ ಬೇಂದ್ರೆ ಮಾತೃವಾತ್ಸಲ್ಯದ ವೈಭವವನ್ನು ಹಾಡಿ ಹಾಡಿ ದಣಿಯುವದೇ ಇಲ್ಲ, ತಣಿಯುವದೇ ಇಲ್ಲ.

ಕಮಲವನ ಸಂಚಾರಿಣಿಯೆ ಮಹಾಲಕ್ಷ್ಮಿ ಬೇಕೆ ಆಸನ
ಅರುಣಚರಣೇ ಮಾಡು ನನ್ನೀ ಹೃದಯವನೆ ಸಿಂಹಾಸನ

---

1 ಗಂಗಾವತರಣ (ಗಂಗಾವತರಣ) ಪುಟ, ೭.

ಎಂದು ಆ ಮಹಾಮಾಯೆಯನ್ನು ಹೃದಯಸಿಂಹಾಸನದಲ್ಲಿ ಪ್ರತಿಷ್ಠಾಪಿತಗೊಳಿಸುವ ಕವಿ.

— ನೂರಿಂಥ ಕಾಯ ||
ಧರಿಸಿದರು ನಿನ್ನಂಥ ತಾಯಿ ಸಿಕ್ಕಾಳೆ ? ||
ಹರಸೆನ್ನ ' ಬಾ ಮಗುವೆ ' ಎಂದು ನಕ್ಕಾಳೇ ? [1]

ಎಂದು ದುಃಖತಪ್ತನಾಗಿ ಹೆತ್ತತಾಯಿಗಾಗಿ ಹಂಬಲಿಸುತ್ತಾರೆ.

' ಉಯ್ಯಾಲೆ 'ಯ ಕರುಳಿನ ವಚನಗಳಲ್ಲಿ ಕಾಣಬರುವ ಭೌತಿಕ ಪ್ರೇಮ, ಕವಿ ಚಿಂತನಶೀಲನಾದಂತೆ ದೈವಿಕ ಪ್ರೇಮವಾಗಿ ' ಶ್ರೀ ಮಾತಾ ' ಹಾಗೂ ' ಮತ್ತೆ ಶ್ರಾವಣಾ ಬಂತು ' ಗೀತಸಂಗ್ರಹಗಳಲ್ಲಿ ದಿವ್ಯತೆಯ ಚರಮೋತ್ಕರ್ಷವನ್ನು ಸಾಧಿಸಿದೆ. " ಸಮಗ್ರ ವಿಶ್ವವೇ ಆ ಮಾತೃಭಗವತಿಯ ಪ್ರಸನ್ನ ಭೂಮಿ ' ಎಂಬ ತಾತ್ವಿಕ ನಿಷ್ಕರ್ಷ ಬೇಂದ್ರೆದರ್ಶನ ಸಾಧಿಸಿದ ಮತ್ತೊಂದು ವೈಶಿಷ್ಟ್ಯ. ಆಗಮಿಕ ಶಕ್ತಿದರ್ಶನ ನಿರೂಪಿಸುವ ಮಾತೃತತ್ತ್ವವನ್ನು ಬೇಂದ್ರೆದರ್ಶನ ಅರಗಿಸಿಕೊಂಡದ್ದನ್ನು ನಿಖರವಾಗಿ ಗುರುತಿಸಬಹುದು.

ತುತ್ತುಮುತ್ತನು ನೀಡು ಸರಸತಿ ಲಕುಮಿ ಕಾಳಿಕೆ ಅಂಬೆ
ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ. [2]

ಎಂಬಲ್ಲಿ ಅರವಿಂದಾಶ್ರಮದ ' ಮದರ್ ' ಅವರಲ್ಲಿ ಜಗನ್ಮಾತೆಯ ವಿರಾಟ್ ಸತ್ತ್ವವನ್ನು ಅಭಿಗ್ರಹಿಸಿ ಸಾಕ್ಷಾತ್ಕರಿಸಿಕೊಂಡ ದರ್ಶನವಿದ್ದರೆ, ' ಓ ತಾಯಿ ಮಾಯಿ ' ಬೇಂದ್ರೆಯವರ ಮಾತೃಸ್ತೋತ್ರಗಳಲ್ಲಿ ಅತ್ಯಂತ ಧೀಮಂತವಾದ ಕವನವೆಂದು ಹೇಳಬಹುದು. ಆದಿ ಜ್ಞಾನಶಕ್ತಿಯು ಸಕಲ ಸೌಂದರ್ಯದ, ರಸದ, ವಾತ್ಸಲ್ಯದ ಮೂಲ ಸ್ತೋತ್ರವಾದ ಭಗವತಿ ಮಾತೆಯನ್ನು ಅವಳ ಅಮಿತ ತೇಜಸ್ಸನ್ನು ಕವಿ ' ನ ಭೂತೋ ' ಎನ್ನುವ ಹಾಗೆ ಹಾಡಿದ್ದಾರೆ.

ಓ ತಾಯಿ ಬಂದೆ, ಮಾಮಾಯಿ ಅಂದೆ, ಈ ಬಾಯಿ ತುಂಬು ಬಂದೇ :

ಮಕರಂದ ಪಾನದಾ ಝರೀ
ತೆರಿತೆರೀ ನಿನ್ನ ತಾವರೀ
ಬಂದ್ಹಾದ ತುಂಬಿಯಾ ಮರೀ. [3]

---

1 ನಲ್‌ತಾಯಿ (ಸೂರ್ಯಪಾನ) ಪುಟ, ೭೮.
2 ಪಾದಪದ್ಮಕೆ ಪ್ರಾರ್ಥನೆ (ಹೃದಯಸಮುದ್ರ) ಪುಟ, ೧೩೯.
3 ಓ ತಾಯಿ ಮಾಯಿ (ಹೃದಯ ಸಮುದ್ರ) ಪುಟ, ೧೪೨.

ಹೀಗೆ ಬೇಂದ್ರೆದರ್ಶನ ಮಾತೃಮಹಿಮೆಯ ಸಾಮಗಾನದಲ್ಲಿ ನಿರಂತರ ನಿರತವಾಗಿದೆ. ಈ ಹಿನ್ನೆಲೆಯಲ್ಲಿ ಬೇಂದ್ರೆ ಹೇಳಿದ 'ಐದು ಐದೆಯರ' ಸ್ವರೂಪ ರಹಸ್ಯವನ್ನು ಅರಿತುಕೊಳ್ಳಬಹುದು.

ಈ ವರೆಗೆ ಬೇಂದ್ರೆದರ್ಶನದ ಕೆಲವು ವೈಶಿಷ್ಟ್ಯಗಳನ್ನು ಕಂಡಾಯಿತು. ಈಗ ಬೇಂದ್ರೆ ದರ್ಶನ–ಧರ್ಮನಿರೂಪಣ ಮಾಡಲು ಉಪಕ್ರಮಿಸೋಣ. ಬೇಂದ್ರೆದರ್ಶನವು 'ಪ್ರಾಣಿದೇಹದಲ್ಲಿ ದೈವಿಕಜೀವನವನ್ನೂ,' ಮರ್ತ್ಯಜೀವನದಲ್ಲಿ ಅಮೃತತ್ತ್ವದ ಅಭೀಪ್ಸೆಯನ್ನೂ' ಬಯಸುತ್ತದೆ. ಸ್ವತಃ ಬೇಂದ್ರೆ ಹೇಳುತ್ತಾರೆ— "ಎಂದಿನಿಂದಲೂ ಮಾನವನ ಅಭೀಪ್ಸೆಯ ಸ್ವರೂಪವು ಒಂದೇ ಆಗಿದೆ. ಯಾವ ಕಾಲದಲ್ಲೂ ಯಾವ ದೇಶದಲ್ಲೂ ಅದರ ಕೆಚ್ಚು ಅದೇ ಉಳಿದಿದೆ. ಅದೆಂದರೆ ದೇವದೇವನ ಸಾಕ್ಷಾತ್ಕಾರ; ಅಂತಹ ಸಾಕ್ಷಾತ್ಕಾರಕ್ಕೆ ಆವಶ್ಯಕವಾದ ವಿಜ್ಞಾನ ಪ್ರಕಾಶ; ಅದರಿಂದ ಅನುಭವಿಸಬಹುದಾದ ಮುಕ್ತಸ್ಥಿತಿ; ಹಾಗೂ ಇವೆಲ್ಲಕ್ಕೂ ಮೂಲಭೂತವಾದ ಅಮೃತತತ್ವ."[1]

ಬೇಂದ್ರೆದರ್ಶನವು ಇಂಥ ಮೂಲಭೂತವಾದ ಅಮೃತತತ್ವದ ಅನುಸಂಧಾನದಲ್ಲಿ ಅಭಿರತವಾಗಿದೆ. ಜೀವನದ ರುದ್ರವಿಷಣ್ಣತೆಯಿಂದ ಪಾರಾಗಿ ಮಂಗಲದ ಸಂಗಕ್ಕಾಗಿ ಹಾರೈಸುವ ಬೇಂದ್ರೆ ಹೃದಯ ಭೌಮಿಕವಾದದ್ದೆಲ್ಲ ದೈವಿಕವಾಗಬೇಕು ಎಂದು ಪರಿತಪಿಸುತ್ತದೆ. ಮಾನವಜೀವನದ, ಅಷ್ಟೇಏಕೆ ? ಸಕಲ ಜೀವ ಜೀವನದ ಚಿರಂತನ ಪರಿಭ್ರಮಣಕ್ಕೊಂದು ಭದ್ರತೆಯ, ಸಮಾಧಾನದ ನೆಲೆ ಕಲ್ಪಿಸುವ ದಿವ್ಯ ಹವ್ಯಾಸದಲ್ಲಿ ಬೇಂದ್ರೆದರ್ಶನಪ್ರಜ್ಞೆ ತೊಡಗಿಕೊಂಡಿದೆ. ಬೇಂದ್ರೆ ನಿಜವಾದ ಅರ್ಥದಲ್ಲಿ ಯಾಜಕ; ಜ್ಞಾನಯಜ್ಞದ ಋತ್ವಿಕ, ಯೋಗಿ–ಯೌಗಿಕ, ರಹಸ್ಯವನ್ನೆಲ್ಲ ಕರತಲಾಮಲಕ ಮಾಡಿಕೊಂಡ ಚಿಂತಕ. ಭಕ್ತ–ಪರಬ್ರಹ್ಮಸಿಗೆ ತನ್ನನ್ನರ್ಪಿಸಿಕೊಂಡ ಸಾತ್ತ್ವಿಕ. ಅಂತೆಯೇ ಬೇಂದ್ರೆಸಾಹಿತ್ಯದಲ್ಲಿ ಜ್ಞಾನ–ಯೋಗ ಭಕ್ತಿಗಳ ಪ್ರಸ್ಯಂದವಿದೆ. "ಇಹ–ಪರದ ದ್ವೈತದಲ್ಲಿ ಭೌಮಾನಂದರು ಭಕ್ತಿ ಪುರುಷಾರ್ಥವನ್ನು ಸಾರ್ಥಕವಾಡುವ ಸಾಮರಸ್ಯದ ಯೋಗ ಸಾಹಿತ್ಯದ ಆತ್ಮ."[2]

ಬೇಂದ್ರೆದರ್ಶನದ ಅಂತಸ್ಸಾರವನ್ನು ಅವರ ಮಾತುಗಳಲ್ಲಿಯೇ ಹೀಗೆ ವಿವರಿಸಬಹುದು. "ಸೃಷ್ಟಿಯು ಸಚ್ಚಿದಾನಂದದ ಲೀಲಾರೂಪ, ಸಚ್ಚಿದಾನಂದವು ಸೃಷ್ಟ್ಯತೀತವಾಗಿರುವಂತೆ ಸೃಷ್ಟಿಗತವೂ ಆಗಿದೆ. ಸೃಷ್ಟಿಯಲ್ಲಿ ಅದು ವ್ಯಕ್ತಿಗಳ ಮುಖಾಂತರ ಪ್ರಕಾಶಿತವಾಗುತ್ತದೆ. ಅದರ ಪ್ರಕಾಶದಲ್ಲಿ ಜ್ಞಾನಾಂಶವು ಇಲ್ಲದೇ

---

1 ಸಾಹಿತ್ಯದ ವಿರಾಟ್ ಸ್ವರೂಪ. ಪುಟ, ೭೫೦.

2 ,, ,, ,, ,, ೬೫.

ಚಿದಂಶವು ವ್ಯಕ್ತವಾಗುವದು ಮಾನವನಲ್ಲಿ. ಮಾನವನಲ್ಲಿಯೂ ಅದು ಅಹಂಕಾರದ ರೂಪದಿಂದ ಅರಳಿ ಹಿಂದುಗಡೆಗೆ ಶುದ್ಧಜ್ಞಾನವಾಗಿ ಪರಿವರ್ತನ ಹೊಂದುತ್ತದೆ. ಈ ಪರಿವರ್ತನಕ್ರಿಯೆ ಪರಿಪೂರ್ಣವಾಗುವುದು, ವಿಜ್ಞಾನವು ಇಲ್ಲವೆ ಅತಿಮಾನಸವು ಅರಳಿದಾಗ ಮಾತ್ರ. ಅಂದರೆ ವ್ಯಕ್ತಿ, ವಿಶ್ವ, ವಿಶ್ವಾತೀತ, ಈ ಮೂರೂ ಅಂಶಗಳು ಸಚ್ಚಿದಾನಂದದ ಮೂರು ಮುಖಗಳು. ಈ ಮಾತನ್ನು ನಾವು ಸ್ಪಷ್ಟವಾಗಿ ಅರಿತಾಗ ವಿಶ್ವಜೀವನವನ್ನು ಮಾಯೆಯಿಂದಾಗಲಿ ದುಃಖ-ಅಜ್ಞಾನ-ಅಸತ್ಯಗಳ ನೆಲೆಯೆಂದಾಗಲಿ ತಿರಸ್ಕರಿಸಬೇಕಾಗುವದಿಲ್ಲ. ಈ ಮೂರನ್ನೂ ಸಮನ್ವಯಗೊಳಿಸುವ ಕೇಂದ್ರಬಿಂದುವನ್ನು ಕಂಡುಕೊಳ್ಳಬೇಕಾಗಿದೆ. " [1]

ಹೂವ ಹಡಲಿಗೆಯನು ಹೊತ್ತ
ಭೂಮಿತಾಯಿ ಜೋಗಿತಿ,
ಮೈಯತುಂಬಿ ಕುಣಿಯುತಿಹಳ-
ನಂತಕಾಲವೀಗತಿ. [2]

ಇಲ್ಲಿ ಪೃಥ್ವಿಯನ್ನು ಜೋಗಿತಿಯನ್ನಾಗಿ ಕಾಣುವ ಕಣ್ಣು ದಾರ್ಶನಿಕನ ಜ್ಞಾನನೇತ್ರವಲ್ಲದೆ ಬೇರೇನು ? ಈ ಪೃಥ್ವಿಯ ದ್ವಿರೂಪವನ್ನು— (೧) ದೈವತರೂಪವನ್ನು (೨) ಪ್ರತ್ಯಕ್ಷ ರೂಪವನ್ನು ಸಾಕ್ಷಾತ್ಕರಿಸಿಕೊಂಡ ಬೇಂದ್ರೆ ‘ ಕುಣಿಯುತಿಹಳನಂತಕಾಲವೀಗತಿ ’ ಎಂದು ಪೃಥಿವೀ ದೇವತೆಯ ಉಜ್ವಲವಾದ ಚಿತ್ರವನ್ನು ಮನಸ್ಸಿಗೆ ಕರುಣಿಸಿದ್ದಾರೆ. ಋಗ್ವೇದದ ಪೃಥ್ವಿದೇವತಾಕವಾದ ಸೂಕ್ತದಲ್ಲಿ ದೊರೆಯುವ ‘ ಸ್ತೋಮಾಸಸ್ತ್ವಾ ವಿಚಾರಿಣಿ " (ಋ-೫-೮೪-೨) ಎಂಬುದಕ್ಕೆ ಈ ‘ ಹೂವಿನ ಹಡಲಿಗೆಯನ್ನು ಹೊತ್ತ ಜೋಗಿತಿ ’ಯ ರೂಪಕವು ಸಂವಾದಿಯಾಗಿದೆ. ಹಾಗೆಯೇ ‘ ಚಿಗರಿಗಂಗಳ ಚೆಲುವಿ ಚದುರಿ ನಿಂತಾಳ ’ [3] ಎಂಬಲ್ಲಿ ಪೃಥ್ವೀ ದೇವತೆಯ ಬಗೆಗಿದ್ದ ಅವರ್ಣನೀಯ ವಾತ್ಸಲ್ಯವು ಸ್ಫುಟವಾಗಿ ಅಭಿವ್ಯಕ್ತವಾಗಿದೆ.

ವೇದಸೂಕ್ತಗಳ ಗಾಂಭೀರ್ಯವು ಸಾಮಗಾನ ಮಾಡುವ ಉದ್ಗಾತೃಗಳ ನಾದೋಚ್ಚಾರಣೆಯನ್ನೇ ಅವಲಂಬಿಸಿದಂತೆ ಬೇಂದ್ರೆಕಾವ್ಯದ ಸತ್ತ್ವಸೌರಭವು ಅರ್ಥಪೂರ್ಣ ನಾದದ ಮೂಲಕವೇ ಅಭಿವ್ಯಕ್ತವಾಗುತ್ತದೆಯೆಂಬುದು ಐತಿಹಾಸಿಕ ಸತ್ಯ. ನಾದ ಹಾಗೂ ಭಾವದ ಅವಿಭಾಜ್ಯಸಂಬಂಧ ಬೇಂದ್ರೆಸಾಹಿತ್ಯದ ಅತಿ ವಿಶಿಷ್ಟ ಗುಣ. ‘ ವಾಗರ್ಥಾವಿವ ಸಂಪೃಕ್ತೌ ’ ಎಂದು ಕಾಳಿದಾಸನೆಂದರೆ

1 ಸಾಹಿತ್ಯದ ವಿರಾಟ್ ಸ್ವರೂಪ. ಪುಟ, ೭೪೪.
2 ಶ್ರಾವಣದ ವೈಭವ (ಸಖೀಗೀತ) ಪುಟ, ೮೧.
3 ಚಿಗರಿಗಂಗಳ ಚೆಲುವಿ (ಸಖೀಗೀತ) ಪುಟ, ೧೧೨.

ಇನ್ನೊಂದು ಹೆಜ್ಜೆ ಮುಂದೆ ಹೋಗಿ ನಾವು ಬೇಂದ್ರೆಯವರ ಬಗೆಗೆ 'ನಾದೋಽರ್ಥಾವಿವ ಸಂಪೃಕ್ತೌ' ಎನ್ನಬಹುದು. ಅವರ ನಾದದಲ್ಲಿ ಕಾಳಿದಾಸನ 'ವಾಕ್' ಹಾಗೂ ಸಾಮವೇದದ 'ಸಾಮಧ್ವನಿ'ಯ ಸಂಯೋಗವಾಗಿದೆ. ಅಂತೆಯೇ ಅವರ ಕಾವ್ಯದ ನಾದಶಕ್ತಿಯು ಅರ್ಥವಲಯಗಳ ವಿಸ್ತಾರಕ್ಕೆ ಕಾರಣವಾಗುವದೇ ಹೊರತು ಅದು ಕೇವಲ ಚಮತ್ಕೃತಿ ಅಥವಾ ಅರ್ಥಹೀನಧ್ವನ್ಯಾಲಾಪವಾಗುವದಿಲ್ಲ.

ನಾ ಭಾಮಾ ಮೈದುನನಲ್ಲ
ನಾನೀ| ನೀ ನಾ|
ನೀ| ನಾದಿ ನೀ| ನಾ ನಾದೆ ನೇ| ನದಿ ನೀ| ಏನಾದಿ ನೀ| ದಾಸೀ|
ವಾದಿ ನೀ| ಸಂವಾದಿ ನೀ| ಸಂವೇದಿ ನೀ| ದಿನ ದಿನ ಸಂಧಾನಿ| ನೀ [1]

\+ \+ \+ \+ \+ \+

ಡೂ ಡೂಽ ಡೊ ಎನ್ನುವಾ
ಡೂಗಿನ ನಡೆಯವನ್ಽ [2]

\+ \+ \+ \+ \+ \+

ಕಾರಾ — ವಾರಾ — ಕರಾವಳಿ ತೀರಾ
ಫಣಿಕಾಽ — ವಣಿಕಾ — ಅಗಣಿಕಾಽ [3]

ಮುಂತಾದ ಗೀತಗಳಲ್ಲಿ ನಾದೋನ್ಮೀಲಿತ ಅರ್ಥವು ಭಾವಗ್ರಾಹ್ಯವಾಗುತ್ತದೆ. ಇದನ್ನೇ ಸಮರ್ಥಿಸಲು ಸ್ವತಃ ಕವಿಯೇ;

ಕವಿಯಲ್ಲವೊ ವಾಚಾಳಿ
ನಿರುಕ್ತ ನಿರ್ವಚನದ ಹಾಳಿ! [4]
ಎನ್ನುತ್ತಾರೆ.

ಬೇಂದ್ರೆಕಾವ್ಯದಲ್ಲಿ ಅರ್ಥವು ಎರಡು ರೀತಿಯಲ್ಲಿ ಒಡಮೂಡುತ್ತದೆ. (೧) ಭಾವಗ್ರಾಹ್ಯ ಅರ್ಥ. (೨) ಬುದ್ಧಿಗ್ರಾಹ್ಯ ಅರ್ಥ. ಬೇಂದ್ರೆಶಬ್ದಗಳ ಸತ್ತ್ವವಿರುವದು ಈ ಎರಡೂ ಅರ್ಥಗಳ ಏಕೋಭಾವದಲ್ಲಿ. ಅಂತೆಯೇ ಬೇಂದ್ರೆ

---

1 ನೀ ನಾದಿನೀ (ದೇವತಾ ಸರಸ್ವತಿ) (ಮರ್ಯಾದೆ) ಪುಟ, ೩.
2 ಡೂ (ನಾಕುತಂತಿ) ಪುಟ, ೩೭.
3 ನಾನೋ ಮಹೀದಾಸ (ಇದು ನಭೋವಾಣಿ) ಪುಟ, ೫೨.
4 ಪಾಂಡುರಂಗ ಸ್ಥಲ (ಇದು ನಭೋವಾಣಿ) ಪುಟ, ೧೦.

ಸ್ವತಃ ತಮ್ಮ ಕಾವ್ಯವನ್ನೋದುವಾಗ ಈ ಎರಡೂ ತರದ ಅರ್ಥಗಳನ್ನು ಶ್ರೋತೃ ಹೃದಯಕ್ಕೆ ತಲುಪಿಸುತ್ತಾರೆ. ಅಂತೆಯೇ ಅವರ ಕಾವ್ಯವಾಚನರೀತಿ ಮಹತ್ವದ್ದಾಗಿದೆ. ಬೇಂದ್ರೆ 'ನಾದಸಿದ್ಧಿ'ಯ ರಹಸ್ಯವು ಅಡಗಿರುವದು ಶಬ್ದಗಳು ಹೊಮ್ಮಿಸುವ ಭಾವಗ್ರಾಹ್ಯ ಅರ್ಥದಲ್ಲಿ. ಆ ಶಬ್ದಗಳ ಮೋಡಿಯೇ ನಮ್ಮನ್ನು ಆಯಸ್ಕಾಂತದಂತೆ ಎಳೆದುಬಿಡುತ್ತದೆ. ಒಂದು ತರದ ಕ್ರಿಯಾತ್ಮಕ ಆಕರ್ಷಣೆಗೆ ಶ್ರೋತೃವು ಒಳಗಾಗುತ್ತಾನೆ. ಆಮೇಲೆ ಅದರ ಬುದ್ಧಿಗ್ರಾಹ್ಯ ಅರ್ಥದ ಅನುಸಂಧಾನಕ್ಕೆ ತೊಡಗಬೇಕು. ಹೀಗೆ ಬೇಂದ್ರೆಯವರ ನಾದಲೋಲುಪತೆಯ ಅಧಿಷ್ಠಾನವು ಅದರ ಶಬ್ದಗಳು ಹೊಮ್ಮಿಸುವ ಭಾವಗ್ರಾಹ್ಯಅರ್ಥದಲ್ಲಿದೆ. ಹಾಗೆಯೇ ಬೇಂದ್ರೆಸೂಕ್ತಗಳು ಸಾಮಸೂಕ್ತಗಳಂತೆ ಮೊದಲು ಭಾವಕ್ಕೆ ಆಮೇಲೆ ಬುದ್ಧಿಗೆ ಗ್ರಾಹ್ಯವಾಗುತ್ತವೆ.

ಬೇಂದ್ರೆಕಾವ್ಯದ ಅಧ್ಯಯನವು ಸುವ್ಯವಸ್ಥಿತವಾಗಿ ಸಾಗಿದ ಹಾಗೆ, ಪ್ರಾಯಶಃ, ಬೇಂದ್ರೆಕಾವ್ಯಗಾನದ ಪದ್ಧತಿಯೊಂದು ಸಾಮಗಾನಪದ್ಧತಿಯಂತೆ ನವೀನತಮವಾಗಿ ನಿರೂಪಿತವಾಗಬಹುದಾದ ಸತ್ಯವನ್ನು ಪ್ರಾಂಜಲವಾಗಿ ಸ್ವೀಕರಿಸಬೇಕಾಗುತ್ತದೆ. ಇದು ಭವಿಷ್ಯಕ್ಕೆ ಸೇರಿದ ವಿಷಯ.

ಪ್ರಸ್ತಾವ-ಉದ್ಗೀಥ-ಪ್ರತಿಹಾರ-ಉಪದ್ರವ-ನಿಧನ ಇವು ಸಾಮಗಾನ ವಿಧಾನದ ಐದು ಆವಶ್ಯಕ ಅಂಗಗಳಾದರೆ, ಬೇಂದ್ರೆಗೀತದ ಗಾನಪದ್ಧತಿಗೂ ಅವಶ್ಯವಾದ ಈ ಪಂಚ ವಿಶಿಷ್ಟ ಉಪಕ್ರಮಗಳನ್ನು ಹೆಸರಿಸಲೇಬೇಕಾದ ಅನಿವಾರ್ಯತೆ ಉಂಟಾದರೆ ಅದು ನಮ್ಮ ಸುದೈವ. ಏಕೆಂದರೆ ಬೇಂದ್ರೆಕಾವ್ಯಗಳು 'ವಿಜ್ಞಾನಯುಗದ ಸಾಮಗಳು.' ಬೇಂದ್ರೆದರ್ಶನ 'ವೈಜ್ಞಾನಿಕ ದರ್ಶನ'. ಅಲ್ಲಿ ಪ್ರಜ್ಞೆ-ಶ್ರದ್ಧೆ-ಸಂಪ್ರದಾಯಗಳ ಸುಂದರ ಸಂಗಮವಿದೆ.

ಹೀಗೆ ನಾದದಲ್ಲಿಯೇ, ನಾದ ಮೂಲಕವಾಗಿಯೇ ಭಾವದ ಅರ್ಥದ ವಿಶೇಷ ಧರ್ಮಪ್ರತಿಪಾದನ ಮಾಡುವದು ಬೇಂದ್ರೆದರ್ಶನದ ಮಹತ್ವದ ಅಂಶ.

"ಏಲಾವನ ಲವಲೀಬನ ಲವಂಗ ಬನಗಳಲೀs
ನಾಗಲತಾಸಂಕುಲ ಬನವಾಸಿಯ ಜನಗಳಲಿsss
ಲೀಲಾಂದೋಲಿತ ದೋಲಾ ಲಲನಾಮಣಿಗಳಲಿss" [1]

ಇದು ಬರಿ ಶಬ್ದಪ್ರಾಸವಲ್ಲ. ಇಲ್ಲಿಯ ನಾದಮಾಧುರ್ಯವು ಭಾವದ ರಸಸೌಂದರ್ಯಕ್ಕೆ, ಅರ್ಥದ ಗಾಂಭೀರ್ಯಕ್ಕೆ ಪುಷ್ಟಿ ನೀಡಿದೆ. ಇದನ್ನು ಓದುತ್ತಿದ್ದಂತೆ ಜಗನ್ನಾಥಪಂಡಿತನ ಗಂಗಾಲಹರಿಯಲ್ಲಿಯ 'ಮರಲ್ಲೀಲಾಲೋಲಲ್ಲಹರಿ ಲುಲಂತಾ

1 ಏಲಾಗೀತೆ (ಗಂಗಾವತರಣ).

ಭೋಜಪಟಲೀ ' ಹಾಗೂ ಜಯದೇವ ಕವಿಯ ಗೀತಗೋವಿಂದದ ‘ ಲಲಿತ ಲವಂಗ ಲತಾ ಪರಿಶೀಲನ ಕೋಮಲ ಮಲಯ ಸಮೀರೇ, ಮಧುಕರನಿಕರ ಕರಂಬಿತ ಕೋಕಿಲ ಕೂಜಿತ ಕುಂಜ ಕುಟೀರೆ ' ಎಂಬ ವಾಕ್ಯಗಳ ನೆನಪಾಗುತ್ತದೆ. ನಾದ ದಲ್ಲಿ ಭಾವದ ಆವಿರ್ಭಾವ ಮಹಾಕವಿಚೇತನಕ್ಕೆ ಮಾತ್ರ ಸಾಧ್ಯ. ಋಷಿಸದೃಶ ಚೇತನಕ್ಕೆ ಮಾತ್ರ ಶಕ್ಯ. ನಾದಸಿದ್ಧಿಯು ಹುಡುಗರ ಆಟವಲ್ಲ. ‘ ಧ್ಯಾನದ ಮೌನಗರ್ಭದಿಂದ ಮಾತ್ರ ಮಂತ್ರಧ್ವನಿ ಹುಟ್ಟುತ್ತದೆ. ' ಈ ಮಂತ್ರಧ್ವನಿಯೇ ನಾದ. ಇದು ಬೇಂದ್ರೆಯವರ ನಾದಸಿದ್ಧಿಯ ರಹಸ್ಯ.

೧೯೧೯ ಮೇ ತಿಂಗಳ ‘ ಆರ್ಯ ' ಸಂಚಿಕೆಯಲ್ಲಿ ಶ್ರೀ ಅರವಿಂದರು ಬರೆದ ಕೀಟ್ಸ್ ಕವಿಯ ಕಾವ್ಯವಿಮರ್ಶೆಯಲ್ಲಿ ಕವಿಯು ಸೌಂದರ್ಯದ ನಾಲ್ಕು ನೆಲೆ ಗಳನ್ನು ಮುಟ್ಟಿದರೆ ಪೂರ್ಣತೆ ಸಾಧಿಸುತ್ತಾನೆ ಎಂದು ಹೇಳಿದ್ದಾರೆ. ಆ ನಾಲ್ಕು ಸೌಂದರ್ಯಗಳನ್ನು ಕ್ರಮವಾಗಿ—(೧) ಐಂದ್ರಿಯಿಕ ಸೌಂದರ್ಯ (Sensuous Beauty) (೨) ಕಾಲ್ಪನಿಕ ಸೌಂದರ್ಯ (Imaginative Beauty) (೩) ಬೌದ್ಧಿಕ ಸೌಂದರ್ಯ (Intellectual Beauty) (೪) ಆದರ್ಶ ಸೌಂದರ್ಯ (Ideal Beauty)— ಎಂದು ಬೇಂದ್ರೆ ಅನುವಾದಿಸಿದ್ದಾರೆ. ಭಗವದ್ಗೀತೆಯು ವ್ಯಕ್ತಪಡಿಸಿದ ಈ ಕೆಳಗಿನ ವಚನದಲ್ಲಿ ಬೇಂದ್ರೆಯವರು ಅರಿತುಕೊಂಡ ಸೌಂದರ್ಯ ತತ್ತ್ವದ ಮೂಲವಿದೆ.

> ಇಂದ್ರಿಯಾಣಿ ಪರಾಣ್ಯಾಹುಃ ಇಂದ್ರಿಯೇಭ್ಯೋ ಪರಾಮನಃ
> ಮನಸಸ್ತು ಪರಾಬುದ್ಧಿಃ ಯೋ ಬುದ್ಧೇ ಪರತಸ್ತುತಃ

ಗರಿ, ನಾದಲೀಲೆಯಲ್ಲಿಯ ಮಧುರ ಮನೋಹರವಾದ ಪ್ರಕೃತಿ ಕವನಗಳಲ್ಲಿ ಬೇಂದ್ರೆ ಸೌಂದರ್ಯಪ್ರಜ್ಞೆ ಚತುರ್ಮುಖವಾಗಿ ಗರಿಗೆದರಿ ನಿಂತಿದೆ. ಚಂದ್ರ, ಗಂಡಸು ಹೆಂಗಸಿಗೆ, ಚತುರ್ಮುಖಸೌಂದರ್ಯ, ಯುಗಾದಿ, ಹೂ, ಹಸಿ-ಹಂಬಲ, ಶ್ರಾವಣ, ಬೆಳಗು, ಸೂರ್ಯ, ಚಂದ್ರ ಇತ್ಯಾದಿ ಕವನಗಳಲ್ಲಿ ಉಂಟಾದ ಸೌಂದರ್ಯ-ಸ್ಫುರಣವು, ಆನಂದ ತತ್ತ್ವಕ್ಕೆ, ರಸದರ್ಶನಕ್ಕೆ ಪೋಷಕವಾಗಿಯೂ, ಪೂರಕ ವಾಗಿಯೂ ಇದೆ.

ಹೀಗೆ ಬೇಂದ್ರೆ ಸೌಂದರ್ಯದರ್ಶನ ಮಾರ್ಗವು ಭೌತಿಕ ಪ್ರಪಂಚದ ದೃಶ್ಯ ಮಾನ ಸೌಂದರ್ಯದ ರಸಾಸ್ವಾದನೆ ಮಾಡಿದಬಳಿಕ ಬೌದ್ಧಿಕ ಸೌಂದರ್ಯದ ಅನುಭೂತಿಯೊಂದಿಗೆ ಆತ್ಯಂತಿಕವಾದ ಆತ್ಮಿಕ ಸೌಂದರ್ಯದ ಸಾಕ್ಷಾತ್ಕಾರದ ಮಾರ್ಗದತ್ತ ಅಭಿಯಾನ ಮಾಡುತ್ತದೆ. ದೇವರು ದಿವ್ಯಸೌಂದರ್ಯದ ಅಭಿವ್ಯಕ್ತಿ ಯಾಗಿದ್ದಾನೆ ಎಂಬ ಸೂಫೀ ಸೌಂದರ್ಯದರ್ಶನವನ್ನೇ ಬೇಂದ್ರೆದರ್ಶನವು ಧ್ವನಿ ಸುತ್ತದೆ. ವೈದಿಕದರ್ಶನವೂ ಇದನ್ನೇ ಹೇಳುತ್ತದೆ.

ಭಾರತೀಯ ಔಪನಿಷಧಿಕ ದರ್ಶನದ ಅತ್ಯಂತ ಉತ್ತುಂಗ ಧ್ಯೇಯವೆಂದರೆ ‘ ಸಮಸ್ತ ವಿಶ್ವದಲ್ಲಿ ದೈವೀ ಆನಂದದ ಸಂಸ್ಪರ್ಶ ಉಂಟಾಗಬೇಕು ’– [ ತೈ. ಆ. ೧೦–೩] ಎಂಬುದು. ಗಾಳಿ–ನದಿ–ಸಸ್ಯಗಳು–ಮಣ್ಣು, ದಿನ–ರಾತ್ರಿ, ಆಕಾಶ–ವೃಕ್ಷ–ಸೂರ್ಯ–ಗೋವುಗಳು ಎಲ್ಲವೂ ಆನಂದದ ನೆಲೆಯಾಗಬೇಕು. ಮನುಷ್ಯ ಜೀವನದಲ್ಲಿ ಆನಂದದ ಸಂವೃದ್ಧಿ–ಸಮೃದ್ಧಿ ಉಂಟಾಗಬೇಕು. ಇದು ಔಪನಿಷಧಿಕ ಋಷಿಗಳ ದರ್ಶನದ ಪರಮ ಅಪೇಕ್ಷೆ. ಇದನ್ನೇ ಬೇಂದ್ರೆ ತಮ್ಮ ದರ್ಶನದ ದಿವ್ಯ ಧ್ಯೇಯವನ್ನಾಗಿ ಸ್ವೀಕರಿಸಿದ್ದಾರೆ. ಈ ವಿಶ್ವದ ಎಲ್ಲವೂ ಆ ಆತ್ಯಂತಿಕ ಆನಂದದ ಅವತರಣಕ್ಕಾಗಿ–ಅಭಿಷಂಗಕ್ಕಾಗಿ ಕಾತರವಾಗಿದೆ. ವೇದನೆಯ ಶಾಶ್ವತಶಮನಕ್ಕಾಗಿ ಸರ್ವಪ್ರಕೃತಿಯೂ ಉತ್ಕಂಠಿತವಾಗಿದೆ. ಸಮಸ್ತ ವಿಶ್ವದೇಹದಲ್ಲಿ, ವಿಶ್ವಮಾನಸದಲ್ಲಿ ಅನಂತ ಆನಂದದ ಸಂಚರಣವಾಗಬೇಕಾಗಿದೆ. ಮಾನವನ ‘ ದೇಹದ ದೇವವೀಣೆ ’ಯಿಂದಲೂ ಜೀವನದ ಆನಂದಸಂಗೀತದ ಸುಸ್ವರಗಳು ಕೇಳಿ ಬರಬೇಕಾಗಿದೆ.

ಬೇಂದ್ರೆದರ್ಶನದ ಯಾತ್ರೆ ಅನಾದಿಯಾದ ಬದುಕಿನ ಅನಿವಾರ್ಯ ನೋವಿನ ನೆಲೆಯಿಂದ ಪ್ರಾರಂಭವಾಗಿ ಶಾಶ್ವತವಾದ ಆನಂದಧಾಮದ ಚಿರಂತನ ಗಂತವ್ಯದತ್ತ ಸಾಗಿದೆ. ನೋವು ಅನಿವಾರ್ಯ ಆದರೆ ಅಪರಿಹಾರ್ಯವಲ್ಲ, ನೋವಿಲ್ಲದಿದ್ದರೆ ಆನಂದದ ಅರ್ಥವಾಗುವದಿಲ್ಲ. ಆ ಮಟ್ಟಿಗೆ ನೋವಿನ ಅಸ್ತಿತ್ವ. ಸಾಕ್ಷಾತ್ಕಾರವಾದ ಮೇಲೆ ಸಮಸ್ತ ಸೃಷ್ಟಿಯೂ ಚಿರಂತನ ಆನಂದದ ಆಗರವಾಗಿದೆ. ಈ ಆನಂದವೇ ಬ್ರಹ್ಮದ ಪರಮರೂಪ. ಈ ವಿವೇಚನೆಯಲ್ಲಿ ಬೇಂದ್ರೆದರ್ಶನದ ಸ್ಥೂಲಸತ್ತ್ವವನ್ನು ಅರಿಯಬಹುದು.

> ಸ್ಪರ್ಶದಿಂದೆಚ್ಚೆತ್ತ ದರ್ಶನದ ಬೆಳಕಿನಲಿ
> ಕಂಡೆ, ನಾದದ ಹಾದಿ, ಮರಣಗಳ ತವರು, ಸಿಧಿ.
> ನಕ್ಷತ್ರ ದೃಷ್ಟಿಗೋಚರವೆ ಕಣ್ ಪಿಳುಕಿನಲಿ ?
> ಆ ತಿರೋಭಾವಕ್ಕೂ ತಪ್ಪದು ಅನುಗ್ರಹದ ವಿಧಿ. [1]

ಇಲ್ಲಿ ಸ್ವತಃ ಕವಿ ತನಗುಂಟಾದ ಅನುಭಾವಸ್ಪರ್ಶವನ್ನು, ದರ್ಶನ ಆಲೋಕದಲ್ಲಿ, ಕಂಡ ಸತ್ಯವನ್ನು ಈ ಮಾತಿನಲ್ಲಿ ತಿಳಿಸಿದ್ದಾರೆ. ‘ ದೇಮವ್ವನ ಮೆರವಣಿಗೆ ’ಯಲ್ಲಿ ಬೇಂದ್ರೆದರ್ಶನ ಒಂದು ದಿವ್ಯಸಿದ್ಧಿಯನ್ನು ಪಡೆದುದರ ಸಾಕ್ಷಿಯಿದೆ. “ ಗ್ರಾಮದೇವತೆಗಳಲ್ಲಿ ದೇಮವ್ವ, ದುರ್ಗವ್ವ ಕಟ್ಟಿಗೆಯ ಮೂರ್ತಿಗಳಾಗಿ ಪ್ರತಿಷ್ಠಿತರಾಗಿದ್ದನ್ನು ಅನೇಕರು ಕಂಡದ್ದುಂಟು. ತ್ವಷ್ಟಾರ–ವಿಶ್ವಕರ್ಮದ ಸಂಸ್ಕೃತಿಯ ಪ್ರತಿಮೆ

---

1 ಮಾತು ಕೃತಿ (ನಾಕುತಂತಿ).

ಪ್ರತೀಕಗಳಿವು. ಡೆಮೊಕ್ರಸಿ ಬಂದಾಗ ಲೋಕಹೃದಯದೊಳಗಿನ ಡೆಮೊಕ್ರಸಿಯು 'Demon' ದೇವು, ದೇವರೂಪದಿಂದ ಎಚ್ಚರಾಗಬೇಕಾಗುತ್ತದೆ."

ಈ ದೇವು, ತಮಸ್ಸಿನ-ನೋವಿನ ಪ್ರತೀಕ; ದೇವ, ತಪಸ್ಸಿನ ಆನಂದದ ಸಂಕೇತ. ಈ ದೇವು-ದೇವರ ದ್ವಂದ್ವಸಂಘರ್ಷದಲ್ಲೇ ಪ್ರಪಂಚವೈಚಿತ್ರ್ಯದ ನವೋನವ ಅನುಭವವಾಗುತ್ತದೆ. ತಮಸ್ಸಿನ ದಮನವಾದಾಗಲೇ ದೀಪ್ತಿಯ ಆಗಮನವಾಗುತ್ತದೆ. ಈ ಸಾತ್ವಿಕದ ದೀಪ್ತಿಯೇ ಡೆಮಾಕ್ರಸಿಯಾಗಬೇಕು. ಎಲ್ಲರ ಬದುಕಿಗೂ ಆನಂದವಾಗಬೇಕು. ಹೀಗೆ ಬೇಂದ್ರೆದರ್ಶನ ರಾಜ್ಯಶಾಸ್ತ್ರಕ್ಕೂ ಅಧ್ಯಾತ್ಮದ ದೀಕ್ಷೆ ನೀಡುತ್ತದೆ.

ಚರಮೂರ್ತಿ, ಸ್ಥಿರಮೂರ್ತಿ ಭಾಗಾದಿಯಾಗದೆ
ಒಡಮೂಡಿಬರಲಿ ಜಗತ್ತು. [1]

ತನ್ನ ಸುತ್ತಲಿನ ಪರಿಸರದಲ್ಲಿ ಉಂಟಾದ ಅಪರಿಮಿತ ಉದ್ವೇಗಕ್ಕೆ ತಾನೇ ಕಾರಣ ಎಂಬುದನ್ನು ಮನುಷ್ಯ ಅರಿಯುವತನಕ ಅವನು 'ಅಕುತೋಭಯನ್' ಆಗಲಾರ. 'ಸಂಹಾರಕಾರಿಯಾದ ಕೋಲಾಹಲದ ಭೀಷಣತೆಗೆ ಮನುಷ್ಯನ ಮತಿ ಹಾಗೂ ಕ್ರಿಯೆಯ ವಿಕಾರವೆ ಕಾರಣ. ಅದನ್ನು ಬೇಂದ್ರೆ 'ವಿಕ್ರಿಯೆ' ಎನ್ನುತ್ತಾರೆ. ಈ ವಿಕ್ರಿಯೆಯ ಬದುಕು ಸಾಕಿನ್ನು.'

ಕಾರ್ಯಕ್ಕೆ ಕಾರಣವ ಹುಡುಕುವದೆ ? ನೆನೆಸಣ್ಣ
ಕರ್ತೃವನು ! ನಿನ್ನ ಆಪತ್ತೆಲ್ಲ ಅದಕಾಗಿ
ವಿಕ್ರಿಯೆಯ ಬದುಕಾಗಿ ಮಟಮಾಯ ತೆರೆಕಣ್ಣ
ಎಚ್ಚರದೊಳಿರು ತಿಮ್ಮ 'ಅಕುತೋಭಯನ್' ಆಗಿ. [2]

ಹೀಗೆ ಬೇಂದ್ರೆದರ್ಶನ ಪ್ರಪಂಚದ ವಿವಿಧ ವಿಕಾರಗಳ ಮೂಲಮಾನವನ ಮನಸ್ಸಿನಲ್ಲಿದೆ ಎಂಬುದನ್ನು ತಿಳಿಸಿಹೇಳಿ, ಆ ವಿಕಾರಗಳಿಂದ ಪಾರಾಗಿ ಸತ್‌ಶಕ್ತಿಯ ಉಪಾಸನೆ ಮಾಡಿ ಬದುಕಿನ ಉದ್ಧರಣ ಮಾಡಲು ಮಾನವನಿಗೆ ಅಂತಃಕರಣ ಪೂರ್ವಕವಾಗಿ ಆಗ್ರಹಪಡಿಸುತ್ತದೆ. ಬೇಂದ್ರೆದರ್ಶನದಲ್ಲಿ ನೀರಸ ಉಪದೇಶಕ್ಕೆ, ವ್ಯರ್ಥ ಕಥಾಕಾಲಕ್ಷೇಪಕ್ಕೆ ಅವಕಾಶವಿಲ್ಲ. ಅಲ್ಲಿರುವದು ಮಡುವುಗಟ್ಟಿ ನಿಂತ ಜೀವನದ ಅನುಭವ. ಅನುಭವ ಹಾಡಾಗಿದೆ. ಅದು ಉಪದೇಶವಲ್ಲ. ತಾತ್ತ್ವಿ

---

1 ದೇಮವ್ವನ ಮೆರವಣಿಗೆ (ನಾಕುತಂತಿ) ಪುಟ, ೭೩.

2 ಯೋಗ (ನಾಕುತಂತಿ) ಪುಟ, ೩೨.

ಕರು, ಪ್ರಜ್ಞಾವಂತರು ಈ ಮಾತನ್ನು ಅರಿತಾಗಲೇ ಬೇಂದ್ರೆಅನುಭಾವದ ನಿಜ ತ್ವದ ಅರಿವಾಗುವದು.

ಆನಂದದ ಉಪಾಸನೆ ಬೇಂದ್ರೆದರ್ಶನದ ಅಂತಿಮ ಗಂತವ್ಯವೆಂದು ಈಗಾಗಲೇ ಸ್ಫುಟವಾಗಿ ಹೇಳಿದ್ದೇವೆ. ಶ್ರೀಗುರು, ಮಾತೆ ಇವರ ಪಾದಪದ್ಮಂಗಳಿಗೆ ಬೇಂದ್ರೆ ತಮ್ಮನ್ನರ್ಪಿಸಿಕೊಂಡಿದ್ದಾರೆ. ಅರವಿಂದಾಶ್ರಮದ 'ಮದರ್' ಶ್ರೀ ಮಾತೆ ಯವರು ಬೇಂದ್ರೆಜೀವನದ ಚೈತನ್ಯಕೇಂದ್ರ. ಆ ತಾಯಿಯ ಸಾತ್ವಿಕ ತೇಜಸ್ಸಿಗೆ ಮಾರು ಹೋದ ಬೇಂದ್ರೆ ಮಾತೆಯ ಮಮತೆಯ ಮಡಿಲ ಶಿಶುವಾಗಿ ಸುಂದರ ವಾದ ಭಕ್ತಿಗೀತಗಳನ್ನು ಹಾಡಿದ್ದಾರೆ. ಶ್ರೀ ಅರವಿಂದರ ಯೌಗಿಕದೀಪ್ತಿಗೆ ನಮೋ ಎಂದಿದ್ದಾರೆ. ಶ್ರೀ ಅರವಿಂದ ಹಾಗೂ ಮಾತೆಯ ದಿವ್ಯಾಂತಃಕರಣ ಸ್ಪರ್ಶದಿಂದ ನಮ್ಮ ಬಾಳಿಗೆ ಬೆಳಕುಂಟಾದುದನ್ನು ಪುನಃ ಪುನಃ ತಮ್ಮ ಗೀತಗಳಲ್ಲಿ ನೆನೆಯು ತ್ತಾರೆ. ಹಾಗೆಯೇ ಬಾ-ಬಾ ಭಗವಾನ್, ಪಾಂಡುರಂಗ-ಸ್ಥಲ, ಸರಸ್ವತೀ ಸೂಕ್ತ, ಅತ್ರೇಯ-ದತ್ತ, ಅ-ಉ-ಮ, ಸಂವಾದ ಮುಂತಾದ ಅಧ್ಯಾತ್ಮ ಗೀತ ಗಳಲ್ಲಿ ಬೇಂದ್ರೆಯವರು ಕೈಕೊಂಡ ಉಪಾಸನಾ ದೀಕ್ಷೆಯ ಬಗೆಗೆ ಗೊತ್ತಾಗುತ್ತದೆ. ಬೇಂದ್ರೆ ಮೂಲತಃ ಭಕ್ತಕವಿ, ಉಪಾಸಕ ಜೀವ ಎಂಬುದನ್ನು ಮರೆತರೆ ಅವರ ದರ್ಶನದ ಮಹತ್ವದ ಅರಿವಾಗುವದಿಲ್ಲ.

ಇಂತು ಬೇಂದ್ರೆದರ್ಶನ ಮಾನವ ಹಾಗೂ ದೇವತತ್ತ್ವದ ಮಧ್ಯೆ ಅಂತರ ವನ್ನು ನಿವಾರಿಸಲು ಉದ್ಯುಕ್ತವಾಗಿದೆ. ಸಮಸ್ತ ಮಾನವಜನಾಂಗದ ಸಮುದ್ಧ-ರಣದ ಶ್ರೀಮಂತ ಆದರ್ಶದಿಂದ ಪ್ರೇರಿತವಾದ ಬೇಂದ್ರೆಹೃದಯ ಮನುಕುಲವನ್ನು ತಾಮಸವಿಕಾರಗಳ ಭೀತಿಯಿಂದ ಮುಕ್ತಮಾಡಲು ಸನ್ನದ್ಧವಾಗಿದೆ. ಮಾನವ್ಯದ ಉದ್ಧರಣ, ದೇವತ್ವದ ಅವತರಣ ಬೇಂದ್ರೆದರ್ಶನದ ಅಭೀಷ್ಟವಾಗಿದೆ. ಬೇಂದ್ರೆ ತಮಗೆ ಪ್ರೇರಣೆಯಿತ್ತ ಶ್ರೀಗುರುಅರವಿಂದರು ತೋರಿದ ಬೆಳಕಿನಲ್ಲಿಯೇ ಮುನ್ನಡೆದವರು. ಶ್ರೀ ಅರವಿಂದರು ಹೇಳುತ್ತಾರೆ :

"India has always existed for Humanity and for herself and it is for Humanity and not for herself that she must be great."

ಬೇಂದ್ರೆದರ್ಶನದ ಏಳು ಮುಖ್ಯ ಸೋಪಾನಗಳನ್ನು ಅಭ್ಯಾಸಿಗಳಿಗಾಗಿ ಹೀಗೆ ಹೆಸರಿಸಲಾಗಿದೆ. ಇವು ಬೇಂದ್ರೆದರ್ಶನದ ಉತ್ತರೋತ್ತರ ಸಂವೃದ್ಧಿಯ ಕ್ರಮಿಕ ಹಂತಗಳು.

(೧) Observation – ಸಮೀಕ್ಷೆ – ಜೀವನದ ಅನಂತತೆಯ ಸಮೀಕ್ಷೆ.
(೨) Determination – ಸಂಕಲ್ಪ – ಬದುಕಿನ ಹೋರಾಟವನ್ನೆದು-ರಿಸುವ ಸಂಕಲ್ಪ.

(೩) Assimilation – ಅವಧಾರಣ–ವಿಶ್ವದ ಸಾಧ್ಯ ಎಲ್ಲವನ್ನೂ ಅರಿತು–
ಕೊಳ್ಳುವ ಅವಧಾರಣ.

(೪) Inquisition – ಅನುಸಂಧಾನ – ಸಮರಸದ ಅನುಸಂಧಾನ.

(೫) Contemplation – ಧ್ಯಾನ – ಯೌಗಿಕ ಚಿಂತನ, ಧ್ಯಾನ, ಮನನ,
ಉಪಾಸನೆ.

(೬) Adoration – ಆರಾಧನ – ಜೀವನ ಸೌಂದರ್ಯದ ಆರಾಧನ.

(೭) Revelation – ಸಾಕ್ಷಾತ್ಕಾರ – ಆತ್ಯಂತಿಕ ಸತ್ಯದ ಸಾಕ್ಷಾತ್ಕಾರ,
ಬ್ರಹ್ಮಭಾವ.

ಇವು ಗಾಯತ್ರಿಯ ವ್ಯಾಹೃತಿಗಳಿಗೆ ಸಂವಾದಿಯಾಗಿವೆ. ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಂ. ಭೂಲೋಕದ ಜೀವನ ಸಮೀಕ್ಷೆಯಿಂದ ಸತ್ಯಲೋಕದ ದೈವೀಸಾಕ್ಷಾತ್ಕಾರ ಬೇಂದ್ರೆದರ್ಶನದ ಅಂತಿಮ ಧ್ಯೇಯ. ಈ ಸಪ್ತ ಲೋಕಗಳನ್ನೆಲ್ಲ ಅನುಭಾವದ ಆಲೋಕ ಪ್ರವಾಹವು ಆವರಿಸಿಬಿಟ್ಟಿದೆ. ಇದನ್ನೇ, 'From Seven Fold ignorance to Sevenfold Knowledge' ಎಂದು ಗುರುತಿಸಿ ಅಜ್ಞಾನದ ಸಪ್ತಕದ ಸೀಮೋಲ್ಲಂಘನ ಮಾಡಿ ಪ್ರಜ್ಞಾನಸಪ್ತಕದ ಆನಂದಸಾಮ್ರಾಜ್ಯದಲ್ಲಿ ಪ್ರವೇಶಿಸುವ ಮಾರ್ಗವನ್ನು ಬೇಂದ್ರೆದರ್ಶನ ಹೇಳಿಕೊಡುತ್ತದೆ.

ವೈದಿಕ ಮಂತ್ರಾರ್ಥ ಸಂಚಿಂತನದಿಂದ, ಔಪನಿಷದಿಕ ಔನ್ನತ್ಯದ ಅನುಸರಣದಿಂದ, ಭಾಗವತಭಕ್ತಿತತ್ತ್ವದ ಅಭಿನಿವೇಶದಿಂದ, ರಾಮ ಹಾಗೂ ಕೃಷ್ಣಭಕ್ತಿ ಪಂಥಗಳ ಅನುಭಾವೀ ಕವಿಗಳ ಅಭಿಷ್ವಂಗದಿಂದ ಬೇಂದ್ರೆದರ್ಶನಕ್ಕೆ ಸನಾತನ ಪರಂಪರೆಯ ಪಾವಿತ್ರ್ಯ ಬಂದಿದೆ. ಮಹಾರಾಷ್ಟ್ರದ ನಾಥಸಂಪ್ರದಾಯ, ವಿಠ್ಠಲ ಭಕ್ತಿಪಂಥ, ಕನ್ನಡದ ಶಿವಶರಣ ಪರಂಪರೆ, ಹರಿದಾಸ ಸಂಪ್ರದಾಯಗಳು ಬೇಂದ್ರೆ ದರ್ಶನಕ್ಕೆ ಪ್ರಾದೇಶಿಕ ಸತ್ತ್ವವನ್ನೂ ಆತ್ಮೀಯತೆಯನ್ನೂ ನೀಡಿವೆ. ಬೇಂದ್ರೆ ಕಾವ್ಯದ ಸೌಂದರ್ಯಪ್ರಜ್ಞೆ ಪರ್ಶಿಯದ ಸೂಫೀ ಅಧ್ಯಾತ್ಮಪಂಥದ ಸೌಂದರ್ಯ ತತ್ತ್ವಕ್ಕೆ ಸಂವಾದಿಯಾಗಿದೆ. ಉತ್ತರಕಾಲೀನ ಷಡ್ದರ್ಶನಗಳು; ದ್ವೈತ, ಅದ್ವೈತ, ವಿಶಿಷ್ಟಾದ್ವೈತಾದಿ ವೈದಿಕ ದರ್ಶನಗಳು; ಅಷ್ಟೇ ಏಕೆ ಬೌದ್ಧ, ಜೈನ ದರ್ಶನಗಳ ಅಂತಃಸತ್ವವನ್ನು ಅಂತಃಕರಣದಿಂದ ಆಲಂಗಿಸಿಕೊಂಡ ಬೇಂದ್ರೆ-ದರ್ಶನ ಸಾವಿರ ಹೊಳೆಗಳನ್ನು ಒಡಲಿನಲ್ಲಿ ಕರಗಿಸಿದ ಕಡಲಿನಂತೆ ಸಾಮ್ರಾಟ ವೈಭವದಿಂದ, ಭೀಷ್ಮಗಾಂಭೀರ್ಯದಿಂದ ಪ್ರಶೋಭಿತವಾಗಿದೆ. ಮಹರ್ಷಿ ಅರ-ವಿಂದರ ಪ್ರತಿಭಾಪ್ರಸಾದದಿಂದ ಚೇತನ ಸಂಚಯ ಮಾಡಿಕೊಂಡ ಬೇಂದ್ರೆದರ್ಶನ

ಶ್ರೀಮಾತೆಯ ( Mother ) ಅಂತಃಕರಣದ ಆಶೀರ್ವಾದದಿಂದ ಪುಷ್ಟವಾಗಿದೆ. ಬ್ರಹ್ಮಚೈತನ್ಯರ ಸಾಕ್ಷಾತ್ಕಾರದಿಂದ ಪರಮೋನ್ನತ ಉತ್ಕರ್ಷವನ್ನು ಸಾಧಿಸಿದೆ.

ಇವೆಲ್ಲಕ್ಕೂ ಮಿಗಿಲಾಗಿ ಬೇಂದ್ರೆಯವರ ವ್ಯಕ್ತಿತ್ವದ ಔನ್ನತ್ಯದ ಕಾರಣವಾಗಿಯೇ, ಅವರ ಉಪಾಸನೆಯ ಮೂಲಕವಾಗಿಯೇ ಬೇಂದ್ರೆದರ್ಶನಕ್ಕೆ ಅಂತಿಮ ಸಿದ್ಧಿ, ಸಾಫಲ್ಯ ದೊರೆತಿವೆಯೆಂಬುದು ಮೂಲಭೂತ ಸತ್ಯ. ಹೀಗೆ ಭಾರತೀಯ ದರ್ಶನದ ಕವಿಪರಂಪರೆಯಲ್ಲಿ ಅಂಬಿಕಾತನಯರಾದ ' ಬೇಂದ್ರೆ ' ಅಮರವಾದ ಹೆಸರು.

§ § § §

೨೭

# ಅಂಬಿಕಾತನಯದತ್ತರ 'ಗಂಗಾವತರಣ'

**ಶ್ರೀಮತಿ ಚಂಪಾಬಾಯಿ ಸೆಟ್ಲೂರ**

"ಲೇಸೆ ಕೇಳಿಸಲಿ ಕಿವಿಗೆ, ನಾಲಗೆಗೆ ಲೇಸೆ ನುಡಿದು ಬರಲಿ.
ಲೇಸೆ ಕಾಣಿಸಲಿ ಕಣ್ಗೆ, ಜಗದೊಳಗೆ ಲೇಸೆ ಹಬ್ಬುತಿರಲಿ
ಲೇಸೆ ಕೈಗಳಿಂದಾಗುತಿರಲಿ, ತಾ ಬರಲಿ ಲೇಸೆ ನಡೆದು
ಲೇಸನುಂಡು, ಲೇಸುಸಿರಿ ಇಲ್ಲಿರಲಿ ಲೇಸೆ ಮೈಯ್ಯ ಪಡೆದು"

ಎಂಬ ಪ್ರಾರ್ಥನೆಯಿಂದ ಮೊದಲುಗೊಂಡು ಗಂಗಾವತರಣದ ಪದ್ಯ ಸಂಕಲನ ಆರಂಭವಾಗಿದೆ. ಈ ಪದ್ಯದಲ್ಲಿರುವಂತೆ, ಗಂಗಾವತರಣದಲ್ಲಿನ ಪದ್ಯಗಳನ್ನು ಓದಿದಾಗ ಎಲ್ಲವೂ ಲೇಸೆನಿಸಿ, ಲೇಸೇ ಮೈಗೊಂಡು ಅಂಬಿಕೆಯಿಂದ ದತ್ತವಾಗಿ ಬಂದಿವೆಯೋ ಎನ್ನುವ ಹಾಗಿದೆ.

ಹೀಗೆ ಅವತರಿಸಿ ಬಂದ ಪದ್ಯಗಳಲ್ಲಿ "ಗಂಗಾವತರಣ"ವು ಒಂದು. ಈ ಪದ್ಯದಲ್ಲಿ ಸಾಹಿತ್ಯಗಂಗೆಯ ಅವತಾರ ಹೇಗಿರಬೇಕು, ಅವತರಿಸಿದಮೇಲೆ ಅದರ ಕರ್ಮವೇನು ಎಂಬ ವಿಚಾರವನ್ನು ಕೇವಲ ಕೆಲವೇ ನುಡಿಗಳಲ್ಲಿ ಹೇಳಿರುವರು. 'ಕರು ಕಂಡ ಕರುಳೆ ಮನ ಉಂಡ ಮರುಳೆ, ಉದ್ದಂಡ ಅರುಳೆ, ಶಿವಶುಭ್ರ ಕರುಣೆ, ಅತಿಕಿಂಚಿದರುಣೆ, ವಾತ್ಸಲ್ಯವರಣೆ' ಎಂದು ಅಭಿಮಾನದಿಂದ ಎಂತು ಸಾಹಿತ್ಯಗಂಗೆಯನ್ನು ಕರೆದರೋ ಅಂತೆಯೇ ಅವಳು ಕೊಳೆಯನ್ನು ತೊಳೆದು, ಶಕ್ತಿಯನ್ನು ಕೊಟ್ಟು ಚೇತನಗೊಳಿಸಿ, 'ಹರಕೆ ಸಂದಂತೆ ಮಮತೆ ಮಿಂದಂತೆ, ತುಂಬಿ ಬಂದಂತೆ ದುಮ್ ದುಮ್ ಎಂದಂತೆ ದುಡುಕಿ' ಅವಳ ಕಂದನನ್ನು ಹುಡುಕಿ ಬರುವಳು. ಎಂದು ಹೇಳಿದ್ದಾರೆ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಕರ್ತಳು ಅವಳೇ ಎಂಬ ಭಕ್ತಿಯೂ ಅಂಬಿಕಾತನಯದತ್ತರಲ್ಲಿ ಅಸಾಧಾರಣವಾದುದು.

ಸಾಹಿತ್ಯದಲ್ಲಿನ ನಂಬಿಕೆ, ಅಭಿಮಾನ, ವಿಶ್ವಾಸ ಮತ್ತು ಭಕ್ತಿ "ಅಂಬಿಕಾತನಯದತ್ತ" ಎಂಬ ಪದ್ಯದಲ್ಲಿ ಮತ್ತಷ್ಟು ಸುಲಭವಾಗಿ ಸ್ಪಷ್ಟವಾಗುತ್ತದೆ.

ಈ ವಿಶ್ವಗರ್ಭದಲ್ಲಿ ಹುದುಗಿರುವ ವಸ್ತು ನಿಯಾಮಕಗಳೆಷ್ಟೊ, ಅದಕ್ಕೆ ಲೆಕ್ಕವೇ! ಆದರೇನು! ಅದರಲ್ಲಿ ಯಾವುದು ಯಾವುದರಲ್ಲಿ ಅಡಗಿ ನಿಂತು ಅರಳಿಸುವುದೋ ಕಂಡವರಾರು? ಅಂಬಿಕಾತನಯನೆಂಬ ನೀರಜಾತವನ್ನು ಕಾವ್ಯವೆಂಬ ಕಿರಣವು ಹೊಕ್ಕು ಆ ಹೂಸೀರಿನ ರುಚಿಗೆ ಸಿಕ್ಕಿ ಅಲ್ಲೇ ನೆಲಸಿತು. ಹೀಗೆ ನೆಲಿಸಿ ಹುಟ್ಟಿ ಬೆಳೆದ ಮಗುವಿನ ಪುದ್ದು, ಸಾಹಿತ್ಯಗಂಗೆ ಎಂಬ ತಾಯಿಯ ಮೂಸೆಯಲ್ಲಿ ಭಾವವಾಗಿ ಕರಗಿ ಜೀವವಾಗಿ ಮಿರುಗಿ ಒಂದು ರೂಪ ಹೊಂದಿದೆ. ಈ ರೀತಿ ರೂಪ ಹೊಂದಿದ ಮಗು ತನ್ನ ತಾಯಿಯ ವಿಷಯದಲ್ಲಿ "ಮಗುವು ಆಗಿ ತೊಡೆಗೆ ಬಂದೆ ತೊರೆದು ಬಂತು ನಿನ್ನೆದೆ, ಅಂತು ಇಂತು ಎನ್ನದೆ. ಹಾಲಿನೊಡನೆ ಪ್ರೇಮ-ರಸವ ಜೀವದಲ್ಲಿ ತುಂಬಿದೆ, ಅಂತೆ ನಿನ್ನ ನಂಬಿದೆ." ಎಂಬ ನಂಬಿಕೆಯೂ, "ತಾಯೆ ಮಾಯೆ ಅಂಬಿಕೆಯೇ ನಿನ್ನ ತನಯ ದತ್ತನು ನೀನು ಇತ್ತುದಿತ್ತನು. ನಿನ್ನ ಜನುಮದೊಂದು ಪಾಡು ಹಾಡು ಆಗಿ ಮೂಡಿತು. ನನ್ನ ಕೊರಳು ಹಾಡಿತು." ಎಂಬ ವಿಶ್ವಾಸವೂ, "ನಿನ್ನ ಲಲ್ಲೆಯಲ್ಲಿ ಹುಟ್ಟಿ ಬೆಳೆದು ಬಂದ ಸೊಲ್ಲಿದು, ಬೇರೆ ಏನು ಬಲ್ಲದು. ನಿನ್ನ ಉದರದೊಂದ ಹೂವ ಸರಸ್ವತಿಗೆ ಸಲಿಸಿದೆ ಚುಕ್ಕೆಯಾಗಿ ನೆಲೆಸಿದೆ" ಎಂಬ ಭಕ್ತಿಯೂ ಹೆಚ್ಚೇನಲ್ಲ. ಆದರೂ ಈ ಪಂಚೇಂದ್ರಿಯಗಳಿಗೆ ಒಳಪಟ್ಟ ಈ ಬುದ್ಧಿ, ಮನಸ್ಸು ದೋಷಕ್ಕೆ ಸಿಲುಕದೆ ಇರಲಾರದು.

ಆದರೆ ಆ ತಾಯಿಯ ಮೇಲಿನ ವಿಶೇಷ ಮಮತೆ ಕವಿಯನ್ನು ಎಂದೂ ಕೈ ಬಿಡುವುದಿಲ್ಲ. ಇದು "ತೇಲಾಡುವಾಗ" ಎಂಬ ಪದ್ಯದಲ್ಲಿ ಚೆನ್ನಾಗಿ ಮೂರ್ತಿಗೊಂಡಿದೆ. ಒಮ್ಮೆ ಒಂದು ಇಣಚಿಯನ್ನು ಕೊಲ್ಲಿಸಲು ತಾನು ಕಾರಣಕರ್ತನಾದೆನಲ್ಲಾ ಎಂಬ ಕವಿಯ ಹೃದಯ ಸಂವೇದನೆ, "ಅಯ್ಯಯ್ಯೊ ತಾಯಿ ನೊಂದೆ, ಕೈಯ್ಯಿಯೆ ಸತ್ತೆ" ಎಂದೆ. "ಚಿಂತ್ಯಾಕೊ ನನ್ನ ಬಾಳ ಅಂತಾವ ಅಂತರಾಳ" ಎಂಬ ಸಾಲಿನಲ್ಲಿ ಚೆನ್ನಾಗಿ ಮೂಡಿ ಬಂದಿದೆ. ತಾಯಿಯ ಬೆರಳು ಒಮ್ಮೆ ಸೋಕಿದೊಡನೆ ಚಿಂತೆ ನಮ್ಮನ್ನಗಲಿ, ಮೈಯೆಲ್ಲ ಕಂಪಿಸಿ ವಾದಗೀದಗಳೆಲ್ಲಾ ಮಮತೆಯ ಸರೋವರದಲ್ಲಿ ಮುಳುಗಿ ಏಕನಾದವೇ ಎಲ್ಲ ಕಡೆ ತುಳುಕಾಡುವುದು. ಈ ಒಂದು ತುಳುಕಾಟದಲ್ಲಿ ಕವಿಗೆ ಒಳಗಿಂದ ಕೇಳಬರುವುದು ತಾಯಧ್ವನಿಯೊಂದೇ. ಸ್ವಾತಿ ಮಳೆಯಂತಿರುವ ಈ ತಾಯಧ್ವನಿ ಚಿಪ್ಪಿನಂತಿರುವ ಕವಿಯೊಳಗೆ ಸೇರಿ ಮುತ್ತಾಗಿ ಹೊರಗೆ ಬರುವುದು. ಈ ಒಂದು ಮಿಂಚುಬಳ್ಳಿ ಏನೇನೊ ಛಂದದಲ್ಲಿ ಹಾಡುವಂತೆ ಮಾಡುತ್ತದೆ. ಕಡೆಗೆ ಇದು ಕನಸಾಗಿ "ತೇಲಾಡುವಾಗ ಮನಸು ಮೇಲಾಡತಾವ ಕನಸು ತಾಕಾಡುವಾಗ ಇತ್ತ ತೇಕಾಡತಾವ ಚಿತ್ತ" ಎಂಬ ನಾಲ್ಕು ಸಾಲು ಮಾತ್ರ ನೆನಪಿನಲ್ಲಿ ಉಳಿಯುವುದು.

ಹೀಗೆ ನೆನಪಿನಲ್ಲಿ ಉಳಿಯುವ ವಸ್ತುಗಳೆಷ್ಟೋ? ಅದರಲ್ಲಿ ಯೌವನದ ಬಹುಭಾಗ ರಸವತ್ತಾಗಿ ಕಾಣುತ್ತದೆ. ಏಕೆಂದರೆ, ಮನುಷ್ಯ ಮನುಷ್ಯನಾಗಿ

ಬಾಳುವುದು ಆ ಒಂದು ನಡುವಯಸ್ಸಿನಲ್ಲೇ. ತೀರ ಮಕ್ಕಳಾಗಿರುವಾಗಲೂ, ತೀರ ಮುದುಕರಾಗಿರುವಾಗಲೂ ಯೌವನದ ವೀರಾವೇಶಗಳನ್ನಾಗಲಿ, ರಸ ಸನ್ನಿವೇಶ ಗಳನ್ನಾಗಲೀ ಅನುಭವಿಸುವ ಸುಯೋಗ ದೊರಕುವುದಿಲ್ಲ. ಆದ್ದರಿಂದ ಈ ಅನು-ಭವ ನೆನಪಾಗಿ ಉಳಿಯುವುದೇ ಹೊರತು ಮತ್ತೇನಿಲ್ಲ. " ಬರುವುದೇನೆ ನೆಪ್ಪಿಗೆ " ಎಂಬ ಪದ್ಯದಲ್ಲಿ, ಸ್ನೇಹಭಾವ ಬೆಳೆದು ಬರಬೇಕಾದರೆ, ಅದರಲ್ಲಿ ನೈಜತೆಯನ್ನು ಕಾಣಬೇಕಾದರೆ, ಸ್ನೇಹವೆಂಬ ಭಾವವು ವಿಧಿಯ ಹರಿತಕ್ಕೆ ಸಿಕ್ಕಿ ಮುಂದಕ್ಕೆ ಬಂದರೇನೇ ಎಂಬುದನ್ನು ಕವಿ ನಿರ್ಧಾರವಾಗಿ ನುಡಿದಿದ್ದಾರೆ. ಈ ಪದ್ಯ ಅವರೇ ತಿಳಿಸಿರುವಂತೆ ಸಖೀಗೀತಕ್ಕೆ ಪ್ರಸ್ತಾವನೆಯಾಗಬಹುದಾದಂಥ ಕವನ.

ನಾನು ನೀನು ಇನ್ನುಮೇಲೆ ಸ್ನೇಹದಿಂದಿರೋಣವೆಂದು ಒಂದುಗೂಡಿದ ಗಂಡು-ಹೆಣ್ಣುಗಳಿಗೆ ಆಗ ಹೊಸಬಾಳು ಹುಟ್ಟಿ ಹೂವಿನಂತೆ ಅರಳುತ್ತದೆ. ಹೆಣ್ಣಿನ ಬೆಳುದಿಂಗಳ ಸವಿಯನ್ನು ಸವಿದು ನಂತರ ಹುಟ್ಟಿದ ಕುಡಿನೋಟದ ಇಂಗಿತ ವನ್ನರಿತ ಗಂಡು ಅದನ್ನು ಒಲವೆಂದು ಕರೆಯುತ್ತಾನೆ. ಇದನ್ನು ಕವಿ " ಆಹಾ ಚೆಲುವೆ ! ಎಂದು ಕುಣಿದೆ ಮಿಕ್ಕ ಸಂಜೆ ಮಬ್ಬಿಗೆ. ಓಹೋ ಒಲವೆ ! ಎಂದು ಕರೆದೆ ಪಲ್ಲವಿಸಿದ ಹುಬ್ಬಿಗೆ, " ಎಂದು ಹೇಳುತ್ತಾರೆ. ಹೀಗೆ ಒಲಿದು ಬಂದ ಹೆಣ್ಣನ್ನು ನೋಡಿದ ಗಂಡಿನಲ್ಲಿ ಹುಟ್ಟಿದ ನಾದವಾದರೂ ಯಾವುದು ! ಅದನ್ನು ಕವಿ " ಬರುವುದೇನೆ ನೆಪ್ಪಿಗೆ ಎದೆಗೆ ಎದೆಯ ಅಪ್ಪಿಗೆ '' ಎಂದು ಹೇಳಿರುವರು. ಹೀಗಿರುವ ಗಂಡು ಹೆಣ್ಣುಗಳು ಆಕಾಶದಲ್ಲಿ ಅರಮನೆಯನ್ನು ಕಂಡಿದ್ದರೆ ತಪ್ಪೇ ನಿಲ್ಲ. ಆದರೆ ಅದು ನಿಜದಲ್ಲಿ ಬದುಕಿನೆಳೆಗೆ ಸಿಕ್ಕಿ ಜೋತುಬಿದ್ದ ಮನಸ್ಸೇ ಹೊರತು ಮತ್ತಾವುದೂ ಅಲ್ಲ. ಇದರ ಅರಿವು ಕಂಡೊಡನೆ ಎಲ್ಲಿಲ್ಲದ ನೋಡ ಬಂದು ಮನಸ್ಸನ್ನಾವರಿಸಿ ಅದರಲ್ಲೇ ಮಿಂಚನ್ನು ಕಾಣಲು ಯತ್ನಿಸುತ್ತಾರೆ, ಈ ಗಂಡು ಹೆಣ್ಣುಗಳು. ಈ ಮಿಂಚು ಮಳೆಯ ಮಿಂಚೇ ಹೊರತು ಬರಿಯ ಮಿಂಚಿ ಮಾಯವಾಗುವ ಮಿಂಚಲ್ಲ. ಈ ಮಳೆ ಯಾವ ಫಲ ಕೊಡುತ್ತೋ ಕಂಡವರಾರು ? ಇದಕ್ಕೇ ಕವಿ, " ಬರುವುದೇನೆ ನೆಪ್ಪಿಗೆ ಕೂಡಿದೊಂದ ತಪ್ಪಿಗೆ " ಎಂದು ಬರೆ ದಿರುವುದು. ಇಂಥ ಸಮಯದಲ್ಲೇ ಆ ಸ್ನೇಹವೆಂಬ ಭಾವ ವಿಧಿಯ ಹರಿತಕ್ಕೆ ಸಿಕ್ಕುವುದು. ಈ ಗಂಡು ಹೆಣ್ಣುಗಳು ಒಂದು ಕಡೆ ದುಃಖವೆಂಬ ಶೂಲೆಯಲ್ಲಿ ಸಿಕ್ಕಿ ನೋವಿನಿಂದ ನರಳುತ್ತಿದ್ದರೂ ಕೂಡ ಇನ್ನೊಂದು ಕಡೆ ಸುಖ ಸಿಕ್ಕೀತೇ ಎಂದು ಹಾತೊರೆದು ಹತ್ತು ದೃಷ್ಟಿಯಲ್ಲಿ ಕಣ್ಣನ್ನು ಹೊರಳಿಸಿ ನೋಡುತ್ತಾರೆ. ಆದರೆ ಕಡೆಗೆ ಕಷ್ಟಕ್ಕೂ ಸುಖಕ್ಕೂ ಎರಡಕ್ಕೂ ಸೋತಂತಾಯಿತು ಎಂದುಕೊಳ್ಳುವರು. ಹೀಗೆ ಸುಖಕ್ಕಾಗಿ ಹತ್ತಾರು ದೃಷ್ಟಿಯಲ್ಲಿ ನೋಡುತ್ತಿರುವಾಗ ಗಂಡುಹೆಣ್ಣು ಗಳಲ್ಲಿ ವಿರಸಸನ್ನಿವೇಶಗಳು ಎದ್ದು ಕಾಣುತ್ತಿರುತ್ತವೆ. ಇಷ್ಟಾದರೂ ಸ್ನೇಹದ ನಿಲುಗಡೆಯ ತತ್ತ್ವವನ್ನು ಕವಿ, '' ಬರುವುದೇನೆ ನೆಪ್ಪಿಗೆ ಹೊರತಾದೆವು ಉಪ್ಪಿಗೆ "

ಎಂದು ಹೇಳುವರು. ಇಷ್ಟೆಲ್ಲ ರಸ-ವಿರಸ ಸನ್ನಿವೇಶಗಳಿಗೆ ಪ್ರೈವೆತ್ತಜೀವಿಗಳು ಈಗ ಬಾಳಿನಲ್ಲಿ ಒಂದು ನೆಲೆಯನ್ನು ಕಾಣುತ್ತವೆ. ಈ ಜೀವಿಗಳಿಗೆ ತಾವು ಬಾಳಿನ ನೈಜತೆಯನ್ನು ಕಾಣದುದರ ಅರಿವು ಉಂಟಾಗುತ್ತದೆ. ಇದನ್ನು ಕವಿ "ಬರುವುದೇನೆ ನೆಪ್ಪಿಗೆ ಸಾವು ಬಿದ್ದ ಟೊಪ್ಪಿಗೆ" ಎಂದು ಹೇಳಿರುವರು. ಈ ಅರಿವು ಉಂಟಾಗಿ ಒಂದು ನೆಲೆಯನ್ನು ಕಂಡ ಮೇಲೆ ಬರುವ ಸುಖ ಸತತವೂ ತೃಪ್ತಿಯನ್ನುಂಟು ಮಾಡುವುದಾಗಿದೆ. ಆಗ ಭೇದಭಾವಗಳೆಲ್ಲ ಅಳಿಸಿ ಹೋಗಿ ನಾನು ಎಂದರೇನು, ನೀನು ಎಂದರೇನು ಎರಡೂ ಒಂದೇ ಎಂಬ ಭಾವ ಎದ್ದು ನಿಲ್ಲುತ್ತದೆ. ಹೀಗೆ ಸೂರೆಗೊಂಡ ಮನಸ್ಸನ್ನು ಕವಿ "ಚಿತ್ತವೆಲ್ಲಿ ಎನುವಾಗಲೆ ಕೊಡುವ ಮೊದಲೆ ಕದ್ದಿದೆ" ಎಂದು ವರ್ಣಿಸಿರುವರು. ಹೀಗೆ ಗಂಡು ಹೆಣ್ಣುಗಳು ಒಬ್ಬರಿಗೊಬ್ಬರು ಪ್ರೀತಿಯೆಂಬ ಸೇವೆಯನ್ನು ಸಲ್ಲಿಸಿ, ಪಡೆದು ತೃಪ್ತಿಗೊಂಡು ಇರುವರು. ಇದನ್ನು ಕವಿ "ಬರುವುದೇನೆ ನೆಪ್ಪಿಗೆ ಜೀವ ಜೀವದಪ್ಪಿಗೆ" ಎಂದು ಹೇಳುವರು.

ಹೀಗೆ ಅವರ ಪದ್ಯಗಳನ್ನು ಓದಿಕೊಂಡು ಹೋಗುತ್ತಿದ್ದರೆ "ಕನಸಿನ ಕಥೆ" ಎಂಬ ಪದ್ಯ ಹೃದಯಸ್ಪರ್ಶಿಯಾಗಿ ನಿಲ್ಲುತ್ತದೆ. ಪಕ್ಷಿ ಬಾನೆಲ್ಲ ಆವರಿಸಿ ಹಾರುವಂತೆ ಮಕ್ಕಳು ಪ್ರತಿಯೊಬ್ಬ ಮನುಷ್ಯನ ಮನಸು, ಹೃದಯಗಳನ್ನು ಆವರಿಸಿ ಆಡುತ್ತಿರುತ್ತವೆ. ಇಂಥ ಜೀವಿಯನ್ನು ಸಂಸಾರಕ್ಕೆ ಸಿಕ್ಕಿಸಿ ಸುಖ-ದುಃಖಗಳ ಸಾರವನ್ನು ಸಮನಾಗಿ ಅನುಭವಿಸುವಂತೆ ಮಾಡಲು ಆರಂಭ ಮಾಡಿಕೊಡುವ ಪ್ರತಿಯೊಬ್ಬ ತಂದೆತಾಯಿಗಳ ಮನಸ್ಸಿನಲ್ಲಿ ನೋವು ಮೂಡುತ್ತದೆ. ಆದರೆ ಆ ಮಗು ತಾಯಿಯಾದರೂ ಕೂಡ ತನಗೆ ಅವಳು ತನ್ನ ಮುದ್ದು ಮಗಳೇ ಹೊರತು ಬೇರೆಯಾಗುವುದಿಲ್ಲ; ಎಂಬ ಭಾವ ಮೂಡಿತೋ ಏನೋ; ಕವಿ ಅದನ್ನು ಪದ್ಯ ರೂಪದಲ್ಲಿ ಭಟ್ಟಿ ಇಳಿಸಿ ಕೊಟ್ಟಿರುವರು. ಈ ಪದ್ಯದ ರೂಪು-ರೇಖೆಗಳು ಬಹಳ ಚೆನ್ನು. 'ಮಂಗಳಾ' ಪದ್ಯದಲ್ಲಿ ಬಂದಿರುವ "ಸ್ವರ್ಗ ಮಕ್ಕಳಾಟ ಕಂಡು ಹಿಗ್ಗಬಲ್ಲ ಕಂಗಳೇ" ನುಡಿಯಂತೆ ಮಕ್ಕಳ ಲೋಕವೆಂಬ ಯಕ್ಷಲೋಕವನ್ನು ಹೊಕ್ಕು, ಆ ಯಕ್ಷಲೋಕದ ವರ್ಣನೆಯನ್ನು ಮಾಡುತ್ತಾ ಕವಿ ಗಿಳಿಹಿಂಡನ್ನು ಕುರಿತು "ಮೈ ಹಸಿರು ಕೆಂಚೂಚು ಕರಿಯ ಕೊರಳು, ಪಚ್ಚೆ, ಮಾಣಿಕ, ಕೆಚ್ಚ ನೀಲಿ ಹರಳು. ದೊಡ್ಡ ವಿರಲಿಲ್ಲ ಅವು ಈಟು ಈಟು, ಕಣ್ಣ ಪಾಪೆಯ ನೆರಳಿನಂತೆ ಥಾಟು. ಕೆಲವು ಕಡಲೆಯ ಮಾಟ, ಮಾಪಿಡಿಯ ಮಾಟ, ಚಿತ್ರದಂತಿತ್ತು ಜೀವಂತ ಆಟ." ಎನ್ನುವರು. ವರ್ಣನೆಯೇನೋ ಗಿಣಿಯದೇ ಇದ್ದರೂ ಅಪ್ಪ ಎಂದರೆ ಅಪ್ಪ ಎನ್ನುವ, ಅಮ್ಮ ಎಂದರೆ ಅಮ್ಮ ಎನ್ನುವ ಪುಟ್ಟ ಮಕ್ಕಳು ಗಿಣಿಗಳಲ್ಲದೆ ಮತ್ತೇನು ? ಇಂಥ ಮಕ್ಕಳನ್ನು ಹಿಡಿಯ ಹೋದವರು ಅವರೇ ಹುಡುಗರಾಗಿ ಮಾರ್ಪಡುವುದರಲ್ಲಿ ಸಂದೇಹವೇ ಇಲ್ಲ.

ಇದು ಇನ್ನೂ ಸ್ಪಷ್ಟವಾಗಿ " ನನ್ನ ಕೈ ಹಕ್ಕಿ ಮಟಮಾಯವಾಗಿ ನಿನ್ನ ತೊಡೆಯ ಲಿತ್ತು ನೀನೆ ತಾಯಾಗಿ " ಎಂದು ಹೇಳುವಾಗ ತಿಳಿಯುತ್ತದೆ. ಹೀಗೆ ಆ ಮಗಳು ತಾಯಾದರೂ ಕೂಡ ತನಗೆ ಮುದ್ದು ಮಗಳೆಂಬುದನ್ನು ಮರೆತಿಲ್ಲ. ಆ ಮಗು ವನ್ನಿಟ್ಟುಕೊಂಡು ಸುಖಿಸುವ ಮಗಳನ್ನು ನೋಡಿದ ತಂದೆ ಮಗಳನ್ನು ಲೇವಡಿ ಮಾಡುತ್ತಾ " ನಿನಗಿಂತಲೂ ನಿನ್ನ ಕೂಸೆ ಮುದ್ದು ಎನುವಂತೆ ನಿಂತಿತ್ತು ನಿನ್ನನೊದ್ದು "— ಎನ್ನುವರು. " ಹೀಗೆನ್ನುವಾಗ ಮಂಗಲೆ ಬಂದು ಎದ್ದು ನನ್ನ ಬೆನ್ನಿಗೆ ಕೊಡುವಳೇನೋ ಗುದ್ದು ಎಂದೆ. ಕೆನ್ನೆಗೆ ಕೊಟ್ಟಳೊಂದು ಮುದ್ದು, " ಎಂದು ಮುಂದುವರಿದು ಹೇಳಿರುವರು. ಇನ್ನು ಆ ಮಗು ಮಾತಾಡುವುದನ್ನು ಹೇಳುತ್ತಾ ಕವಿ, " ಮೊದಲಾಡಿ ತೊದ-ಲಾಡಿ ತೆರೆದು ಬಾಯಿಯನು ಆ ಕೂಸು ಕರೆದಿತ್ತು ನನ್ನ ತಾಯಿಯನು. ಆ ತಾಯಿ ಎಲ್ಲಿಹಳೋ ಇನ್ನು ವರೆಗು ಎನುತ ತಡಕಾಡುತ್ತ ನಿದ್ದೆವರೆಗು — " ಎನ್ನುವರು. ಇಲ್ಲಿ ಆ ತಾಯಿ ಸಾಹಿತ್ಯಗಂಗೆಯೇ ಹೊರತು ಇನ್ನಾರೂ ಇರಲಾರರು. ಸಾಹಿತಿ ಸಾಹಿತ್ಯವನ್ನು ಹುಟ್ಟಿಸಿದರೆ ಪಂಡಿತನು ಅದನ್ನು ವಿಮರ್ಶೆಗೆ ಗುರಿ ಮಾಡಿದಾಗ ಅದು ಬೆಳೆಯುವಂತಾಗಬೇಕೇ ಹೊರತು ವಿಮರ್ಶೆಯ ಬಲೆಯಲ್ಲಿ ಸಿಕ್ಕಿ ನರಳ ಬಾರದು. ಸಾಹಿತಿ, ಸಾಹಿತ್ಯವು ಬೆಳೆಯುವುದಕ್ಕೆ ಎಡೆಮಾಡಿಕೊಡಬೇಕು. ಇಷ್ಟೇ ಅಲ್ಲ. ಹಿಂದೆ ಹೇಳಿದಂತೆ ಅವಳು ಹುಟ್ಟಿ ಬೆಳೆದು ತನ್ನ ಕೆಲಸ ಮಾಡಬೇಕು ಎಂಬ ಅಭಿಲಾಷೆ ವ್ಯಕ್ತಪಡುತ್ತದೆ. ಈ ಹೊತ್ತಿಗೆ ಕನಸು ಎಚ್ಚರವಾಗುತ್ತದೆ. ಕವಿ ಆ ತಂದೆತಾಯಿಗಳ ನೋವು ಹೇಗಿರುತ್ತದೆ ಎಂಬುದನ್ನು " ನನ್ನ ಮಾತಾಗ ದಿರಲದಕೆ ಬಲೆಯು, ಓಡಿವ ಆಟವು ಆಗದಿರಲಿ ಕೊಲೆಯು ಒಡಲ ನೂಲಿನ ಮೇಲೆ ಬಿದ್ದ ಇಬ್ಬನಿಯು ಎಂಬಂತೆ ಮಿನುಗಿತಿರಲೀ ಕಥಾಮಣಿಯು " ಎಂಬ ಮಾತುಗಳಲ್ಲಿ ಚೆನ್ನಾಗಿ ಮೂರ್ತಿಸಿರುತ್ತಾರೆ.

ಇನ್ನು ಗಣ್ಯವ್ಯಕ್ತಿಗಳ ವಿಚಾರದಲ್ಲಿ ಬರೆದಿರುವ ಪದ್ಯಗಳಲ್ಲಿ " ತಂಗಿ ಜಾನಕಮ್ಮ " ಎಂಬ ಪದ್ಯ ಒಂದು. ಜಾನಕಮ್ಮ ಎಂಬುವರು ಕೆಲವೊಂದು ಪದ್ಯಸಂಕಲನಗಳನ್ನು ಬರೆದು ನಮ್ಮನ್ನಗಲಿ ಕಣ್ಮರೆಯಾಗಿರುವರು. ಹೆಣ್ಣು ಮಕ್ಕಳಲ್ಲಿ ಇಷ್ಟರ ಮಟ್ಟಿಗೆ ಬರೆಯುವವರು ಅಪರೂಪ. ಅದರಿಂದಾಗಿ ಅಂಬಿ ಕಾತನಯದತ್ತರು ಈ ಪದ್ಯದಲ್ಲಿ ಬರೆದಿರುವಂತೆ, " ಕವಿಯು ಮಾನಸಪುತ್ರ ಅವನು ಆಗಸದೇಹಿ ಮಾತಿನಲಿ ಮೂಡುವನು ಭಾವಜೀವಿ ಮೈಯಾಚೆ ಉಸಿರಾಚೆ, ಬಗೆಯ ಬಣ್ಣಗಳಾಚೆ ಅವನ ಹೂವರಳುವುದು ಭಾವದೇವಿ " ಎಂಬ ಕವಿಯ ಸ್ವರೂಪ ಜಾನಕಮ್ಮನವರಲ್ಲಿದ್ದು ಈ ಪದ್ಯವನ್ನು ಸಾರ್ಥಕಗೊಳಿಸಿದೆ.

ಕವಿ ಬೇಂದ್ರೆಯವರು ಜಾನಕಮ್ಮನವರ ವಿಷಯವಾಗಿ " ನೂರು ತಂಗಿಯರ ನೀರ್ನೆರದ ನೇಹದಿ ಮಿಂದು ಮಿಂಚಿನಾಚೆಯ ಬೆಳಕ ಬಯಸಿ ಬಳೆದು ' ದೋಷ ರಾಹಿತ್ಯದಾ ಕಲ್ಪನಾರಾಜ್ಯದೊಳು ಸಗ್ಗದೂಟವನುಣುವ ಕೂಪುಕಳೆದು ' "

ಎಂಬ ಮಾತು ತೀರ ಸತ್ಯವಾಗಿದೆ ಎನ್ನಿಸುವುದು, ಜಾನಕಮ್ಮನವರು ಕವಿಯಾಗು-ವುದಕ್ಕೆ ತಕ್ಕವರಿದ್ದಾರೆ. ಆದರೆ ಅವರಿಂದ ಒಳ್ಳೆಯ ಕೃತಿ ಹೊರಬಿದ್ದಿಲ್ಲ. ಮುಂದೆ ಬರಬೇಕು ಎಂಬ ಅಭಿಲಾಷೆಯನ್ನು ಕವಿ ವ್ಯಕ್ತಪಡಿಸಿದ್ದಾರೆ.

‘‘ ಝೇಂಕೃತದ ಸುಳಿಹಿಡಿದು ಅಂತರಂಗಕೆ ಸುಗ್ಗಿ ಕಮಲವನದಲ್ಲಿ ನಿಃಸ್ಸೀಮವಹುದು. ಭಾವಶಿಖರಗಳಲ್ಲೆ ಜೀವಪುರ ನೆಲಸಿಹುದು ಅದನು ನೀ ವೈದೇಹಿ ಕಾಣಬಹುದು, ’’ ಎನ್ನುವರು. ಇನ್ನು ಮುಂದಿನ ಜನ್ಮವೇನಾದರೂ ಇದ್ದಲ್ಲಿ ಇದೇ ಸಂಸ್ಕೃತಿಯು ಮುಂದುವರಿದು ಜೀವಪುರವು ಅವರಿಗೆ ಕಾಣಸಿಕ್ಕಿ “ ಅಲ್ಲಿರುವ ನಲಿವೊಲವು ಇಲ್ಲಿರುವ ಬಲು ಚೆಲುವು ಮಿಕ್ಕು ಸೂಸುವ ಹಾಗೆ ಜಗಕೆ ಸಾರು ’’ ಎಂಬುದು ಶ್ರೀ ಆಂದತ್ತರ ಆಶಯ.

“ ಬುದ್ಧ ” ಎಂಬುದು ಮುಂದಿನ ಪದ್ಯ. ಕವಿವಾಣಿ ಸಾಗುತ್ತದೆ, “ ಜಗ-ವೆಲ್ಲ ಮಲಗಿರಲು ಇವನೊಬ್ಬನೆದ್ದ. ’’ ಹೌದು, ವಿಧಿಯೊಡನೆ ಸೆಣಸಲರಿಯದೆ ಅದರ ಹರಿತಕ್ಕೆ ಸಿಕ್ಕಿ, ಒದ್ದಾಡಿ, ಬೇಸತ್ತು, ದಾರಿಗಾಣದೆ ಅಂಧಕಾರದಲ್ಲಿರುವ ಜನಗಳ ನಡುವೆ ಇವನೊಬ್ಬ ಬೆಳಕನ್ನು ಕಾಣಲು ಎದ್ದ. ಎದ್ದ ಬುದ್ಧನ ರೀತಿ ಯನ್ನು ಬೇಂದ್ರೆಯವರು ಚೆನ್ನಾಗಿ ಚಿತ್ರಿಸಿರುವರು. ‘‘ ಮಡದಿ ಮಗು ಮನೆ-ಮಾರು ರಾಜ್ಯ-ಗೀಜ್ಯ ಹೊತ್ತಿರುವ ಉರಿಯಲ್ಲಿ ಆಯಿತಾಜ್ಯ. ’’ ಯಾವುದಪ್ಪಾ ಅದು ? ಓ, ಬೆಳಕನ್ನು ಕಾಣಬೇಕೆಂಬ ಹಂಬಲು. ಈ ಹಂಬಲು ಲೌಕಿಕ ಭೋಗ ಗಳನ್ನು ಬದಿಗಿಡಲು ಎಡೆ ಮಾಡಿತೇ ಎನ್ನಿಸಿತು. ‘‘ ಹೊರಟ, ಹೊರಟೇ ಹೊರಟ, ಹೊರಟನೆತ್ತೋ ಸಾಹಸಿಯು ಗೊತ್ತುಗುರಿ ಅವಗು ಗೊತ್ತೊ ? ’’ ತನ್ನ ಜೀವನವನ್ನು ಏತಕ್ಕೊ ಮೀಸಲಾಗಿಟ್ಟು ಹೊರಟಿರುವ ಧ್ವನಿ ಚೆನ್ನಾಗಿ ಕೇಳ ಬಂತು.

ಇಲ್ಲಿಂದ ಮುಂದೆ ಬಂದಂತೆ ಕಣ್ಣು ಹೊರಳುವುದು. ‘‘ ಅನ್ನಯಜ್ಞ ’’ದ ಮೇಲೆ. ಇಲ್ಲಿ ಕವಿ ದೇಶಕ್ಕೂ, ಸಮಾಜಕ್ಕೂ ಇರುವ ನಿಕಟ ಸಂಬಂಧವನ್ನು ಎತ್ತಿ ಹಿಡಿದಿದ್ದರೆ ಸಾವು, ಬಾಳುಗಳ ನಡುವೆ ಸಮಾಜವೇನು ಮಾಡುತ್ತಿದೆ, ವ್ಯಕ್ತಿಯು ಬದುಕಲು ಏನನ್ನು ಕೊಡುತ್ತಿದೆ ಎಂಬುದನ್ನು ಅವಲೋಕಿಸುತ್ತ ಒಂದೆಡೆ ‘‘ ಅನ್ನ ದಾನ ಮಹಾಯಜ್ಞ ’’ ಎನ್ನುವರು. ಮತ್ತೊಂದೆಡೆ ‘‘ ಹೊನ್ನ ನೆಕ್ಕಿ ಬಾಳ್ವರಿಲ್ಲ ಅನ್ನ ಸೂರೆ ಮಾಡಿರಿ, ಅಣ್ಣಗಳಿರಾ ಅನ್ನದಲ್ಲಿ ಮಣ್ಣ ಕಲಿಸಬೇಡಿರಿ ” ಎನ್ನುವರು.

ಮುಂದೆ ಬಂದಂತೆ ಮತ್ತೊಂದು ಹೆಜ್ಜೆ ಮುಂದುವರಿದು ‘‘ ನರ್ಸ ’’ ಎಂಬ ಪದ್ಯದಲ್ಲಿ ಕರುಣೆ ಎಂಬ ಹೆಣ್ಣು ಸಮಾಜವನ್ನು ಉದ್ಧಾರ ಮಾಡಬೇಕು ಎಂಬ ಮಾತನ್ನು ಹೇಳುವರು. ಸಮಾಜದಲ್ಲಿ ಇರುವ ವ್ಯಕ್ತಿಗಳ ಸ್ಥೂಲಪರಿಚಯು ಈ ಪದ್ಯದ ಮೊದಲನಾಲ್ಕು ಸಾಲುಗಳಲ್ಲಿ ತಿಳಿಯುತ್ತದ.

' ಇವನಾರೊ ಸಂನ್ಯಾಸಿ, ಅತ್ತೊಬ್ಬ ಬಿಕನಾಸಿ
ಇಲ್ಲೊಬ್ಬ ದರವೇಶಿ ನರಳುತಿಹನು.
ಅಲ್ಲೊ ನಡುಹರೆಯದವ ಮಾಡಿದ್ದ ಮರೆಯದವ
ಮಗ್ಗಲಿಗೆ ಆಗೀಗ ಹೊರಳುತಿಹನು.'

ಆಗೀಗ ಮಗ್ಗಲಿಗೆ ಹೊರಳುತ್ತಿರುವ ಮನುಷ್ಯನ ಸ್ಥಿತಿಗೆ ನರ್ಸಿನ ತೀರ ಯಾಂತ್ರಿಕವಾದ ಚಲನೆ ಚೆನ್ನಲ್ಲ. ಒಟ್ಟನಲ್ಲಿ ಹೇಳುವುದೆಂದರೆ ನಮ್ಮ ಸಮಾಜವು ಆರೋಗ್ಯದಿಂದಿರಬೇಕಾದರೆ ಜನರ ನಡೆನುಡಿಗಳಲ್ಲಿ ಕರುಣೆ ಮೂಡಬೇಕು, ನರ್ಸಿನಂತೆ ಯಾಂತ್ರಿಕವಾಗಿರುವ ನಮ್ಮ ನಡೆನುಡಿ ಮನುಷ್ಯನನ್ನು ದೈವತ್ವಕ್ಕೆ ಕರೆದೊಯ್ಯಲಾರದು.

' ಎಲೆ ಕರುಣೆ ಈ ತರುಣಿ ನಿನಗೆ ಋಣಿಯಾಗಿಹಳು
ನಿನ್ನ ಕಣಿಗಾಗಿ ಕಾದಿಹಳು ಒಳಗೆ
ನಿನ್ನ ಕಿರಣಕೆ ಬಹಳು ಪಲ್ಲವಾಧರೆಯಾಗಿ
ಆ ವರೆಗೆ ನೋಡುವಳು ಮೇಲೆ ಕೆಳಗೆ.'

ಈ ಸಾಲುಗಳಲ್ಲಿ ಕವಿಯ ಭಾವ ಸ್ಪಷ್ಟವಾಗುತ್ತದೆ.

ಹೀಗೆ ಹೇಳಿದ ಕವಿ ಮುಂದೆ ಪ್ರೇಮವೆಂತಹುದು, ಎಷ್ಟು ವಿಧ, ಅದರ ಅಂತಿಮಸ್ಥಿತಿ ಎಂತಹುದು ಎಂಬುದನ್ನು "ಪ್ರೇಮ" ಎಂಬ ವಿಭಾಗದಲ್ಲಿ ಹೇಳಿಕೊಂಡು ಬರುತ್ತಾರೆ. ಮೊದಲ ಪದ್ಯ "ಅಪರೂಪರಾಗ" ಪದ್ಯದಲ್ಲಿ ಬರುವ.

"ಬಾನಿನಲ್ಲಿ ಬರೆದ ಗೆರೆಯ ಹಾಗೆ ಮೆರೆವೆಯೋ
ಆ ಅಗಾಧ ಆಳದಲ್ಲಿ ನನ್ನ ಕರೆವೆಯೋ
ಇಲ್ಲಿ ನಾನು ಎಲ್ಲೊ ನೀನು ಕಿವಿಯೊಳುಲಿವೆಯೋ
ಆಹಾ ! ಚೆಲುವೆ"

ಎನ್ನುವರು ಚೆಲುವನ್ನು ಕುರಿತು. ಚೆಲುವು ಕಾಮನಬಿಲ್ಲಿನಂತೆ ವರ್ಣರಂಜಿತವಾಗಿ ನೋಡುವವನನ್ನು ಸೆಳೆದು ಮತ್ತೆ ಅವನಿಗೆ ನಿಲುಕದೆ ಬರಿಯ ಕವಿಯಲ್ಲಿ ಮಾತ್ರ "ಆಹಾ ! ಚೆಲುವೆ" ಎಂಬ ಶಬ್ದದಲ್ಲಿ ನಿಲ್ಲುವಂತಾಗುವುದು.

"ಒಂದು ಹಾಡು" ಎಂಬ ಪದ್ಯದಲ್ಲಿ ಕವಿ ಬರೆಯುತ್ತಾರೆ :

"ಕೂಡಿರೆ ಹೊಂದಿರೆ ಚಿತ್ತಕೆ ಚಿತ್ತ
ಪವಣಿಸಿದಂತದು ಮುತ್ತಿಗೆ ಮುತ್ತು"

\+ \+ \+ \+ \+ \+

“ ಜೀವಕೆ ದೇವ ನೆರೆ ಬಂದಂತೆ
ಇರದಿಹುದೇ ನರಕದ ಜೋಡು ”

\+ \+ \+ \+ \+ \+

“ ಆಳವನರಿಯದ ಹುಸಿಯೊಲವು
ಊಳದ ಬಿತ್ತದ ಬರಿ ಹೊಲವು ”

ಕಾಮವಿದ್ದಲ್ಲಿ ಕ್ರೋಧವಿರುವುದು ಖಂಡಿತ ಕ್ರೋಧದಿಂದ ವಿರಹದ ಅನುಭವ ಸ್ವಾಭಾವಿಕವಾದದ್ದೇ. ಆ ಸಮಯದಲ್ಲಿ ಪ್ರೇಮಿಗಳ ಹೃದಯ ಹೇಗಿರುತ್ತದೆ ಎನ್ನುವುದನ್ನು ಕವಿ ಚೆನ್ನಾಗಿ ಚಿತ್ರಿಸಿದ್ದಾರೆ, ತಮ್ಮ “ ವಿರಹಿ-ಚುಂಬಿತ ” ವೆಂಬ ಕವನದಲ್ಲಿ. “ ವಿರಹಿ ಬಿಟ್ಟುಸಿರಂತೆ, ಅದರಾ ಚಿಂತೆ, ಯಾರಿಗೆ ಅಂತೆ, ಇದು ಸಂತೆ, ತೇಲುವುದು ಪರದೇಶಿ ಇರಲೂ ಹೇಸಿ, ಆ ದರವೇಸಿ ಇರುವಂತೆ. ಸಂತೆಯೇನೋ ನಿಜ; ಪರದೇಶಿಯಂತೆ ಒದ್ದಾಡುವುದೂ ನಿಜ. ಇರಬೇಕೋ, ಇರಬಾರದೋ, ಇರಬಹುದು, ಇರಲೊಲ್ಲದು — ಈ ರೀತಿ ಅದರ ಒದ್ದಾಟ ಇದ್ದೇ ಇರುತ್ತದೆ. ಕಡೆಗೆ ಇದನ್ನು ತಾಳಲಾರದೆ ನಿಟ್ಟುಸಿರು ಬರುತ್ತದೆ. ಈ ನಿಟ್ಟುಸಿರಿನ ವರ್ಣನೆಯನ್ನು ಕವಿ, “ ಉಳಿವುದೇ ತಾ ಬಾಳಿ, ಹೇಳೀ ಕೇಳೀ, ಕೊನೆಗೂ ಗಾಳಿ ಈ ಉಸಿರು, ” ಎನ್ನುವರು. ಮತ್ತೆ ಆಸೆ ಅಂಕುರ ಎಲ್ಲಿಂದಲೋ ಬರುತ್ತಿರುತ್ತದೆ. ಎಂದರೆ ಕಾಮ ಹೋಗಿ, ಹೆಚ್ಚು ವ್ಯಾಪ್ತಿಯುಳ್ಳ ಪ್ರೇಮ ಮೂಡುತ್ತದೆ. ಇದನ್ನು ಕವಿ “ ಆಸೆಯುಸಿರಸು ಚಾಚಿ, ಹೊರಟ ಪಿಶಾಚಿ, ಗಾಳಿಯ ಬಾಚಿ, ಬರುತಿಹುದೋ ” ಎನ್ನುವರು. ಎಂದರೆ ವಿರಹದಲ್ಲಿ ಕೂಡ ಭಾವೈಕ್ಯತೆಯ ಅಂಕುರದ ಆಸೆಯ ರಸನಿಮಿಷವನ್ನು ಎತ್ತಿ ಹಿಡಿದಿರುವುದು ಕವಿಯ ಭಾವನೆಯ ಮಟ್ಟವನ್ನು ಸೂಚಿಸುತ್ತದೆ.

“ ದವನ-ಕವನ ” ಎಂಬ ಪದ್ಯವು ಹೊಸದಂಪತಿಗಳ ಮಧುರಮಿಲನವನ್ನು ನಮಗೆ ಸೂಚಿಸುತ್ತದೆ. ಇದರಲ್ಲಿ ಕವನವನ್ನು ಕೊಡುವವನು ಗಂಡು; ದವನವನ್ನು ಕೊಡುವವಳು ಹೆಣ್ಣು. ದವನದ ಕಂಪು ಬೇಗ ಅಳಿಸಿ ಹೋಗುವಂತಹುದಲ್ಲ; ಕಸ್ತೂರಿ ಕಟ್ಟಿದ ಬಟ್ಟೆ ಎಂಬುವಂತೆ ಹೆಣ್ಣಿಗೆ ಪ್ರೀತಿ ತಪ್ಪಿದ್ದಲ್ಲ. ಆದರೂ ನಾನು ನೀನು ಎಂಬ ಭೇದಭಾವ ಅಳಿಸಿ ಹೋದ ಮೇಲೆ ಎನಿಸುತ್ತದೆ. “ ನಾನು ನೀನು ಬರಿಯ ನೆವನ ಕೂಡಿ ಜಪಿದೋ ದವನ ಕವನ. ” ಹೀಗಿರುವ ಜೀವಿಗಳಿಗೆ ಎನಿಸುತ್ತದೆ : “ ನನ್ನ ನಿನ್ನ ಜೀವ ಜವನ ದವಡೆ ಮಿರಿಯೊಂದು ಭುವನದಲ್ಲಿ ಒಂದನೊಂದು ಕಂಡು ಗುರುತುಹಿಡಿದು ಮುತ್ತವೇ ? ‘ ದವನಗಂಪೆ, ’

'ಕವನದಿಂಪೆ' ಎಂದು ಎದೆಯುಸೊತ್ತವೇ ?" ಈ ಗಂಡು ಹೆಣ್ಣುಗಳಿಗೆ ಮತ್ತಾವ ಯೋಜನೆಯೂ ಇಲ್ಲ. ದವನದ ಕಂಪು, ಕವನದ ಇಂಪನ್ನು ಬಿಟ್ಟರೆ ಬೇರೆ ಪ್ರಪಂಚವೇ ಬೇಡ. ಇದು ಕಾಲಕ್ಕೆ ಅತೀತವಾಗಿರಬೇಕೆಂಬ ಆಶಯ ಬೇರೆ. ಕಾಲಕ್ಕೆ ಅಧೀನವಾಗದೆ ಬಿಡುತ್ತದೆಯೇ ? ಹೆಚ್ಚುಕಾಲ ನಿಲ್ಲುವುದಿಲ್ಲ. ಹೀಗೆಂದು ವ್ಯಕ್ತಪಡಿಸಿದ ಕವಿಯು "ಹಾರಿ ಸಾರಿ ಬಾ, ಸಖೀಸಖನಿಗೆ ಕೂಡಿದಂತೆ ಹಾರಿ–ಏರಿ ಬಾ" ಎನ್ನುವರು. ಈ ಹಿಂದೆ ಬಂದ 'ವಿರಹಚುಂಬಿತ' ಮದುವೆಯಾಗುವುದರ ಮೊದಲಿನ ಅಗಲಿಕೆಯ ರಸವನ್ನು ಉಣಿಸುತ್ತದೆ.

ಮುಂದೆ ಬರುವ "ಗಮುಗಮಾಡಸತಾವ ಮಲ್ಲಿಗಿ" ಎಂಬ ಪದ್ಯದಲ್ಲಿ, ಮದುವೆಯಾದಮೇಲೆ ಮೊದಲ ಮಧುರಮಿಲನದ ದಿನಗಳನ್ನು ಕಳೆದು ನಂತರ ಬರುವ ದಿನಗಳನ್ನು ವಿರಹವೆಂದೇ ಇಟ್ಟುಕೊಳ್ಳಬಹುದು. ದಿನದಂತೆ ಪ್ರತಿಯೊಂದೂ ಈ ವಿಶ್ವದಲ್ಲಿ ನಡೆಯುತ್ತಿರುವುದು ಸವಿಗನಸಿನಿಂದ ಎಚ್ಚೆತ್ತವರಿಗೆ ಕಂಡು ಬರುತ್ತದೆ. ಇದರಲ್ಲಿ ಯಾಂತ್ರಿಕವಾಗಿ ನಡೆಯುವ ದಿನಚರಿಯ ಬೇಸರ, ಗಂಡಿಗೆ ಮೊದಲು ಉಂಟಾಗುತ್ತದೆ. ಆದರೆ ಹೆಣ್ಣಿಗೆ ನಿಜವಾಗಿ ಮೊದಲಿನಂತೆಯೇ ಹುರುಪು ಇರುತ್ತದೆ. ನಿಷ್ಠುರೋಕ್ತಿಯಿಂದ ಹೆಣ್ಣು ಗಂಡಿಗೆ ಹೇಳುತ್ತಾಳೆ,

> "ಬಂತ್ಯಾಕ ನಿಮಗ ಇಂದ ಮುನಿಸು,
> ಬೀಳಲಿಲ್ಲ ನಮಗ ಇದರ ಕನಸು,
> ರಾಯ ತಿಳಿಯಲಿಲ್ಲ ಮನಸು,
> ನೀವು ಹೊರಟದ್ದೀಗ ಎಲ್ಲಿಗೆ ?"

ಮುಂದಿನ "ಹಿಂದ್ಕ ನೋಡದ್ವ" ಎಂಬ ಪದ್ಯದಲ್ಲಿ, ಕವಿ, "ನಂದ ನನಗ ಎಚ್ಚರಿಲ್ಲ ಮುಂದಿಗೋಡವಿ ಏನ ನನಗ ಒಂದೇ ಅಳತಿ ನಡೆದದ ಚಿತ್ತಾ" ಎನ್ನುತ್ತಾರೆ. ಮುಂದೆ ಇದೇ ಹೆಣ್ಣು, ಗಂಡಿನ ಹೃದಯದಲ್ಲಿ ಪ್ರೇಮಸ್ಮಾರಕವಾಗಿ ನಿಲ್ಲುತ್ತಾಳೆ.

ಇದನ್ನು ಕವಿಯು, "ತಾಜಮಹಲ" ಪದ್ಯದಲ್ಲಿ ಚೆನ್ನಾಗಿ ಬಿಡಿಸಿ ಹೇಳಿರುವರು. ಇದು ಭಾವಗೀತೆಗೆ ಒಳ್ಳೆಯ ಉದಾಹರಣೆಯಾಗುತ್ತದೆ.

> "ಕಬ್ಬ ಬಿಲ್ಲ ಮಾಡಿದ ಕುಸುಮಶರನು ಸೋಲುತ, ಅಬ್ಬ !
> ಕಲ್ಲಲುಂಟಿ ನಲ್ಲೆಗೊಲಿದು ನಲಿವ ಪ್ರಕಾರ! ಎಂದ."

ಹೀಗೆ ಗಂಡಿನ ಹೃದಯ ಪೂರ್ತಿ ಕಲ್ಲಾಗಲು ಸಾಧ್ಯವಿಲ್ಲ. ಅಂದರೆ ಕವಿಯ ಭಾವನೆಯು ಇಲ್ಲಿ ಮುಗಿಲನ್ನು ಮುಟ್ಟಿದೆ ಎಂದರೆ ಸುಳ್ಳಾಗಲಾರದು. ಮತ್ತೆ,

"ಮಣ್ಣ ಪ್ರಕೃತಿಗೆ ಮಣ್ಣ ಆಟವೇ ಸಾಜ
ಅಂದು ಕಥೆಯಾದೀತು ಇಂದಿನದ್ಭುತ ತಾಜ."

ಈ ಎರಡು ಸಾಲುಗಳಲ್ಲಿ ಕವಿ ಒಂದು ಯುಗವನ್ನೇ ದೃಷ್ಟಿಯಲ್ಲಿ ಇಟ್ಟು, ಅಷ್ಟು ಕಾಲವನ್ನು ಕಣ್ಣು ಮಿಟುಕಿಸುವುದರಲ್ಲಿ ಮೂಡಿಸಿದ್ದಾರೆ. ನಮ್ಮ ಗಾಂಧೀಜಿ ಅಹಿಂಸೆಯ ವ್ರತವನ್ನು ಹಿಡಿದು ಸತ್ಯಾಗ್ರಹ ಮಾಡಿ ಸ್ವಾತಂತ್ರ್ಯವನ್ನು ಗಳಿಸಿ ಕೊಟ್ಟದ್ದನ್ನು ನೋಡಿರುವ ನಾವು ನಂಬುತ್ತೇವೆ. ಆದರೆ ಮುಂದಿನ ಪೀಳಿಗೆ ಯವರು ಇದನ್ನು ನಂಬಲಾರರು. ಅವರಿಗೆ ಅದು Fantasy ಎನಿಸಬಹುದು. ಅದೇ ರೀತಿಯಲ್ಲಿ ನಲ್ಲೆಗೊಲಿದು ನಲಿವ ಈ ಪ್ರಕಾರವೂ Fantasy ಯಾಗಿಯೇ ಉಳಿಯಬಹುದೆಂಬ ವಿಚಾರವನ್ನು ಕವಿ ಎತ್ತಿ ಹಿಡಿದಿದ್ದಾರೆ. ಮತ್ತೆ ಇದರ ಮೇಲೆ ಸಾವಿರಾರು ಕವನಗಳು ಹುಟ್ಟಬಹುದು ಎಂಬ ಆಶೆಯನ್ನು ವ್ಯಕ್ತಪಡಿಸಿದ್ದಾರೆ.

ಮುಂದೆ ಮನುಷ್ಯ ತನ್ನ ಪಶುತ್ವವನ್ನು ಕಳೆದು ನಿಜವಾದ ಮನುಷ್ಯನಾಗ ಬೇಕಾದರೆ ದಾಂಪತ್ಯದ ಜೀವನವನ್ನು ಯಾವ ರೀತಿಯಲ್ಲಿ ಸಾರ್ಥಕಗೊಳಿಸಿಕೊಳ್ಳ ಬೇಕು ಎಂಬುದನ್ನು "ಶಿವ–ದೃಷ್ಟಿ" ಎಂಬ ಕವನದಲ್ಲಿ ಬಿಡಿಸಿ ಬರೆದಿದ್ದಾರೆ. ಇಲ್ಲಿ ಪಾರ್ವತಿ ಶಿವನೊಡನೆ ಸರಸದಿಂದಿರುವುದನ್ನು ಬರೆಯುತ್ತಾ, "ಕೂದಲನ್ನು ಹಣಿಗೆಯಂತೆ ಹಿಕ್ಕಿ ಹಿಕ್ಕಿ ಬಾಚಿತು! ಕರುಳಿಗೆ ಕುಡಿ ಚಾಚಿತು!!" ಎಂದು ಹೇಳುವರು. ಇದು ಸಾಮಾನ್ಯವಾಗಿ ಮುದ್ದು ಮಾಡುವ ರೀತಿ. ಮುಖಕ್ಕೆ ಹಣೆಯೆ ಪ್ರಾಧಾನ್ಯ. ಅದು ಆಕಾಶವಿದ್ದಂತೆ. ಅದರ ವೈಶಾಲ್ಯತೆಯನ್ನು ನೋಡಿ ಮುದ್ದಿಡದ ಮನ ಯಾವುದು ? ಅಂತೆಯೇ ಪಾರ್ವತಿ ಶಿವನ ಹಣೆಯನ್ನು ಮುದ್ದಿಸುತ್ತಾಳೆ. ಅವಳಿಗೆ ಕಾಣುವುದು ಶಿವನ ಹಣೆಯ ಮೇಲಿರುವ ಚಂದ್ರ; ಚಂದ್ರನ ಹಾಲಿನ ಬೆಳದಿಂಗಳು ಎಂಥವರ ಮನಸ್ಸನ್ನೂ ತಂಪು ಮಾಡು ವಂತಹದು.

"ಹಣೆಯ ಓರೆ ತಿಂಗಳಲ್ಲಿ ಉಬ್ಬಿ ಹಬ್ಬಿತು!
ಮತ್ತೆ ಮುತ್ತಿ ತಬ್ಬಿತು!!"

ನಂತರ ದೃಷ್ಟಿ ಕಣ್ಣ ನೋಟದೆಡೆಗೆ ಸಾಗುತ್ತದೆ. ಈ ದೃಷ್ಟಿ ಸ್ನೇಹಕ್ಕೆ ಪ್ರತೀಕ ವಾಗಿ ಇರುತ್ತದೆ. ಹೀಗೆ ಬರೆಯುತ್ತಾ ಕವಿ ಗಂಡು ಹೆಣ್ಣಿನ ಬೆಸುಗೆಯನ್ನು ಬಹಳ ಗಂಭೀರವಾಗಿ ಚಿತ್ರಿಸಿದ್ದಾರೆ. ಅದು ಎಷ್ಟು ಚೆನ್ನ ಎಂದು ಹೇಳುವುದು ಬರಿಯ ಮಾತಿನಿಂದ ಹೇಳಲಸಾಧ್ಯ. ಕವಿಯ ಸೊಲ್ಲನ್ನೇ ಕೇಳಿ:

"ನಡುವಿಗೆ ನಡುಪಟ್ಟಿಯಾಗಿ ತೊಡೆಗಳಲ್ಲಿ ತಂಗಿತು!
ಧ್ಯಾನದಲ್ಲಿ ಇಂಗಿತು!!"

ಶಿವ ಕಾಮನನ್ನು ಸುಟ್ಟ. ಪಾರ್ವತಿ ಎಷ್ಟೋ ವರ್ಷ ತಪಸ್ಸು ಮಾಡಿದಳು. ಶಿವನಂತೆಯೇ ಚೈತನ್ಯ ಗಳಿಸಿದಳು. ಈಗ ಎರಡೂ ಶಕ್ತಿಗಳಾಗಿ ಒಂದನ್ನೊಂದು ಅರಿತು ಮನ ಒಂದಾಗಿ ಹೃದಯಸ್ಪರ್ಶವಾದೊಡನೆ ಮೈಯು ಬೆಸುಗೆಗೆ ಕೂಡಿರು ವಾಗ ಅದರ ಅನುಭವವನ್ನು ಕವಿ.

" ಅಡಿಯಿಂದಲೂ ಮುಡಿಯವರೆಗು ಅಳಿದು ಬೆಳೆದು ಹೊಳೆದಿತು
ಮೈಯ್ಯೆನೆಲ್ಲ ತೊಳೆದಿತು ‖ "

ಮುಂದೆ ಶಿವನ ನಿರಾಕಾರ ಮೂರ್ತಿಯು ದೇವಿಯನ್ನು ಹೊಕ್ಕುದನ್ನು ಕವಿ,

" ಅಂತರಂಗದಲ್ಲಿ ತರತ್ತರಂಗವಾಗಿ ಮೂಡಿತು |
ಅಂತರಾತ್ಮಗೂಡಿತು ‖ "

ಎಂದು ಹೇಳುವರು. ಇದಕ್ಕಿಂತ ಬೇರೆ ರೀತಿಯ ಯಾವ ವರ್ಣನೆಯೂ ಇಷ್ಟು ಗಂಭೀರತೆಯನ್ನು ಕೊಡಲಾರದು — ಅದೂ ಶೃಂಗಾರ ರಸದಲ್ಲಿ.

ಜಗತ್ತಿನ ಅಶಾಶ್ವತತೆಯ ಅನುಭವವನ್ನು ಎಲ್ಲರೂ ಅನುಭವಿಸುತ್ತೇವೆ. ವಿಶ್ವಾಸ, ಪ್ರೀತಿ ಎಂದು ಹಾತೊರೆದು ಕಡೆಗೆ "ಕೊಡುವುದೇನು ? ಕೊಂಬು ದೇನು ? ಒಲವು, ಸ್ನೆಹ, ಪ್ರೇಮು," — ಎನ್ನುತ್ತಾರೆ, ಕವಿ. ಇದು ಬಹಳ ಸಹಜಸತ್ಯವೆನಿಸುವುದು. ವಿಶ್ವಾಸಪಡುವವನಿಗೆ ಎಲ್ಲರಲ್ಲೂ ವಿಶ್ವಾಸವಿದ್ದೇ ಇರುತ್ತದೆ. ಪ್ರಾಣಿಯಿಂದ ಹಿಡಿದು ಸಕಲ ಚರಾಚರ ವಸ್ತುಗಳಲ್ಲೂ ಸವಿಯನ್ನು ಕಾಣಬಹುದು,— ಎಂಬುದನ್ನು ಕವಿ, " ಒಲಿಸಿ ಒಲಿವ ನಲಿಸಿ ನಲಿವ ಜೀವ ದಿವ್ಯಗಾನ " ಎಂಬುದಾಗಿ ಹೇಳುವರು. ಹೀಗಿರಲು ಶಕ್ತ ದೇವನೊಬ್ಬನೇ, ಕಷ್ಟ ಕೊಡಬಹುದು; ಆದರೆ ದೇವರು ನಮ್ಮನ್ನು ಮುಕ್ತಿಶಾಲೆಗೆ ಕರೆದೊಯ್ಯುತ್ತಾನೆ. ನಮ್ಮ ಹೃದಯದ ಆಳವಾದ ವಿಶ್ವಾಸವನ್ನು ಕವಿ ದೇವರ ಕುಲುಮೆಯೆಂದು ಕರೆಯುತ್ತಾರೆ. ಎಂದರೆ ದೇವರು ಇಂಥವರ ಮೂಲಕ ಮನಸ್ಸನ್ನು ಕರಗಿಸಿ ಎರಕ ಹೊಯ್ಯುತ್ತಾನೆ. ಕೊಟ್ಟು ತೆಗೆದು ಮಾಡುವಲ್ಲಿ ಬೆಳೆಯುವ ಪ್ರೇಮ ಕೇವಲ ಕ್ಷಣಿಕ. ಅದಕ್ಕೂ ಒಳಗೆ ನೈಜತೆಯಲ್ಲಿ ಕಂಡು ಬರುವ ಪ್ರೇಮವನ್ನು ಗಮನಿಸ ಬೇಕೆಂದು "ಕಾಯದುಸಿರ ಕಳೆದು ನೋಡು ಜೀವದುಸಿರನೆಳೆದು ನೋಡು," ಎನ್ನುವರು. ಇದೇ ಕವಿಯು ಕಂಡುಂಡಿರುವ ಒಲವು. ಆ ಒಲವನ್ನು ಸವಿಯ ಬೇಕಾದರೆ ಈಗಲೂ ಅವರೊಡನೆ ಐದು ನಿಮಿಷಗಳ ಕಾಲವಿದ್ದರೂ ಸಾಕು ಅದರ ಅರಿವಾಗುವುದು.

ಹೀಗಿರುವ ಕವಿಯಲ್ಲಿ "ಹಂಸದ ಹಾಡು" ಹೊರಟಿರುವುದೇನೂ ಆಶ್ಚರ್ಯವಲ್ಲ. ತತ್ವ ಮತ್ತು ಸೃಷ್ಟಿ ಹೆಸರಿನ ಹಿನ್ನೆಲೆಯಲ್ಲಿ ಬರೆದ ಈ ಹಂಸದ

ಹಾಡು, ಸಂಸ್ಕೃತದಲ್ಲಿ ಬರುವ "ಸೋಽಹಂ" ಎಂಬ ಮಾತುಗಳು ಉಸಿರಾಡುತ್ತಾ ಹೇಳುತ್ತಿದ್ದರೆ "ಹಂಸೊ" ಆಗಿ ನಡುವೆ ಹಂಸದ ಧ್ವನಿ ಕೇಳಿಸುತ್ತದೆ. ಇದನ್ನೇ ಕವಿ 'ಹಂಸದ ಹಾಡು' ಎಂದು ಕರೆದಿರುವುದು. ಸಾಧಾರಣ ಮನುಷ್ಯನ ಮನಸ್ಸನ್ನಳಿದರೆ ಲೌಕಿಕದಲ್ಲಿ ಕೂಡಾ ನಾನು ಎಂಬುದು ಮೊದಲು ಹೊರಡುತ್ತದೆ. ಮತ್ತೊಬ್ಬರದು ಆಮೇಲೆ ಹೊರಡುತ್ತದೆ. ಮನುಷ್ಯ ತನ್ನದನ್ನು ಮೊದಲು ಹೇಳಿ ಕೊಂಡು ನಂತರ ಎದುರಿಗಿರುವವರನ್ನು ಕೇಳುವುದು ರೂಢಿ. ಅದಕ್ಕೆ ಕವಿ,

"ಹಂ ಹಂ ಎನ್ನುತ ಹೊರಟಿತು ಉಸಿರು
ಸಃ ಸಃ ಎನ್ನುತ ಹೊಕ್ಕಿತು ಉಸಿರು
ಹಂ ಸೋ ಹಂಸಃ ಎನುತಿದೆ ಉಸಿರು."

ಮತ್ತೆ ಈ ನಾನು, ನೀನು ಎಲ್ಲ ಒಂದೇ ಎಂಬ ಸಿದ್ಧಾಂತ ಪ್ರತಿಯೊಬ್ಬ ಮನು ಷ್ಯನ ನಾಡಿ ನಾಡಿಯಲ್ಲೂ ಸದಾಕಾಲದಲ್ಲಿಯೂ ಮಿಡಿಯಬೇಕು ಎಂಬ ಇಚ್ಛೆ ಯನ್ನು ವ್ಯಕ್ತಪಡಿಸುತ್ತ, ಕವಿ,

"ಮಲಗಲಿ ಏಳಲಿ ಹಂ ಸೋ ಹಂ ಸಃ
ಕೂಡಲಿ ಮಾಡಲಿ ಹಂ ಸೋ ಹಂ ಸಃ
ಹಗಲೂ ಇರುಳೂ ಹಂ ಸೋ ಹಂ ಸಃ

ಮನುಷ್ಯರಲ್ಲಿ ಈ ಭಾವ ಇರುವುದೇನೋ ನಿಜ. ಇದರಿಂದ ಜ್ಞಾನ ಹೊಂದು ವುದೂ ನಿಜ. ಇದನ್ನು ಹಂಸಕ್ಕೆ ಹೋಲಿಸದೆ ಮತ್ತಾವುದಕ್ಕೂ ಹೋಲಿಸಲು ಸಾಧ್ಯವಿಲ್ಲ. ಇದೇ ಒಂದು ಉಸಿರು ಗಾಳಿಯೊಡನೆ ಸೇರಿ ಬಯಲನ್ನೆಲ್ಲಾ ಆವರಿಸಿ ಬ್ರಹ್ಮನಲ್ಲಿ ಐಕ್ಯವಾಗುವ ರೀತಿಯನ್ನು ಕವಿಯು ಬಹಳ ಚೆನ್ನಾಗಿ ಚಿತ್ರಿಸಿದ್ದಾರೆ. ಬ್ರಹ್ಮಾಂಡದಲ್ಲಿ ನಮ್ಮ ಸ್ಥಾನವೇನು ? ಪ್ರಕೃತಿ-ಪುರುಷಗಳು ಯಾವ ರೀತಿ ಹೊಂದಿಕೊಂಡಿವೆ ? ಎಂಬುದನ್ನು ಅರಿತು ಜನ ಬಾಳಬೇಕೆಂದು ಕವಿ ಹೇಳಿರು ವರು.

ಇಲ್ಲಿಂದ ಮುಂದೆ ಬಂದಂತೆ "ಜಿಜ್ಞಾಸೆ" ಎಂಬ ಪದ್ಯವಿದೆ. ಡಿ. ವಿ. ಜಿ. ಯವರು ಹೇಳುವಂತೆ "ಬ್ರಹ್ಮಾಂಡವೇ ರಂಗಸ್ಥಳ, ನಾವೆಲ್ಲ ಪಾತ್ರಗಳು" ನಾಟಕವಾಡಲು ಮೊದಲ ಪ್ರಶ್ನೆ ಬರಬೇಕಾದ್ದೇ 'ಏನು ?' ಎಂಬುದು. ನಂತರ ಬರುವುದೇ 'ಯಾಕೆ' ? ಅದಾದ ಮೇಲೆ ಬರುವುದೇ 'ಎಲ್ಲಿ' ?. ಈ ೩ ಪ್ರಶ್ನೆಗಳಿಗೂ ಉತ್ತರ ಎಲ್ಲರಿಗೂ ದೊರಕುವುದೇ ಎಂದರೆ ದೈವನಿಯಾಮಿತ ವಾದ ಪ್ರಾಣಿಗಳಲ್ಲಿ ಕೂಡ ಇದಕ್ಕೆ ಉತ್ತರ ಉಂಟೇ ಉಂಟು. ಆದರೆ ಅವಕ್ಕಿಂತ

ಮೆದುಳನ್ನು ಹೊತ್ತ ನಾವು ಗಮನದಲ್ಲಿ (Conscious) ಸದಾ ಈ ಒಂದು ಪ್ರಶ್ನೆಯನ್ನು ಹಾಕಿಕೊಳ್ಳುತ್ತಲೇ ಇರುತ್ತೇವೆ. ಕಡೆಯ ಪ್ರಶ್ನೆಗೆ ಉತ್ತರ—ಹತ್ತು ದೇಶ ನೋಡಿದರಿಲ್ಲ; ನೂರು ಶಾಸ್ತ್ರ ಓದಿದರಿಲ್ಲ. ಆದರೆ ಇದು ತೊದಲು ಮಾತಿನಲಿ ನಿಂತು, “ ಇನ್ನೂ ಇದೆ ಅರಿವಿನಲ್ಲಿ ” ಎನ್ನಿಸುವುದು.

ಈ ಒಂದು ತೆರನಾದ ಗುರು–ಶಿಷ್ಯರ ಸಂಭಾಷಣೆ ನಿರಂತರವೂ ಪ್ರತಿ ಮನುಷ್ಯನಲ್ಲೂ ನಡೆಯುತ್ತಿರುತ್ತವೆ, ಮನುಷ್ಯನಾಗಿದ್ದಲ್ಲಿ ಮಾತ್ರ. ಇದನ್ನು ಕವಿ “ ಎದೆಯಲವಿತು ಕುಳಿತ ಗುರುವೆ ” ಎನ್ನುವರು. ಹೀಗೆ ವೈಯಕ್ತಿಕವಾಗಿ ಪ್ರಶ್ನಿಸಿ ಹೊರಟ ಮನುಷ್ಯ, ಅರಿವು ಬಂತು, ಅಮೃತವನ್ನುಂಡೆ ಎಂದುಕೊಳ್ಳುವಷ್ಟರಲ್ಲಿ ಮತ್ತೆ ಅವನು ಜಗತ್ತಿನ ಅಶಾಶ್ವತತೆಯನ್ನು ಅನುಸರಿಸುವಂತಾಗಿ “ ಇದು ಅದೃಷ್ಟ, ಇದು ಅಗಮ್ಯ ” ಎಂಬುದಾಗಿ ಎಂದುಕೊಳ್ಳುತ್ತಾನೆ. ಎಂದರೆ ಮತ್ತೆ ಅದೇ ಕಾಣದ ಒಂದು ಚೈತನ್ಯಕ್ಕೆ ಬಾಗುತ್ತಾನೆ ಎಂದಾಯಿತು. ಇದನ್ನು ಕವಿ :

“ ಸಟೆಯು ತೆರೆಯು ತೆರೆಯುತ
ದಿಟವು ಮೇರೆವರೆಯುತ
ಬಂದರೇನು ಎಂದಿನಂತೆ
ಮುಂದೆಯು ಹಿಂದಿದ್ದ ಚಿಂತೆ
ಇದು ಅದೃಷ್ಟ ಇದು ಅಗಮ್ಯ
ಎನುತ ಎನುತ ಸಾಗಿದೆ. ”

ಎನ್ನುವಲ್ಲಿ, “ ಬಂದರೇನು ಎಂದಿನಂತೆ ಮುಂದೆಯೂ ಹಿಂದಿದ್ದ ಚಿಂತೆ ” ಎನ್ನುವುದನ್ನು ಬಹಳ ಒತ್ತಿ ಹೇಳುತ್ತಾರೆ. ಹೀಗೆ ಇದನ್ನು ಬಳಸುವ ರೀತಿ ಈ ಪದ್ಯಕ್ಕೆ ಸೊಗಸನ್ನು ಕೊಟ್ಟು ಪದ್ಯವು ಸ್ವಾಭಾವಿಕವಾಗಿ ಮನುಷ್ಯನಲ್ಲಿ ಉಂಟಾಗುವ ತೊಳಲಾಟವನ್ನು ಎತ್ತಿ ಹಿಡಿದಿರುತ್ತದೆ. ರಮ್ಯಮಾರ್ಗದಲ್ಲಿ ನೋಡಿದರೂ ಸಹ ಭವ್ಯವೇ ಕಾಣಿಸಿಕೊಂಡು ಅದನ್ನು ನೋಡುವ ದಿವ್ಯತೇಜಸ್ಸು ಅದನ್ನೇ ಚಿಂತಿಸಿ ಮತ್ತೆ ಮರೆತು, ಒಳಹೊಕ್ಕು, ಹೊರಬಂದು ಜೀವವನ್ನೇ ಸಂಭ್ರಮಗೊಳಿಸಿ ಇಷ್ಟಕ್ಕೆಲ್ಲಾ ಕಾರಣನಾದ ದೈವವನ್ನೇ ಶ್ಲಾಘಿಸುತ್ತದೆ. ಸಹಸ್ರನಾಮಾಂಕಿತನಾಗುತ್ತಾನೆ ಆ ದೇವ, ಇದನ್ನು ಕವಿ,

“ ಇಗೊ ಸೃಷ್ಟಿಪುಟದೊಳೆಲ್ಲು
ನಿನ್ನ ಹೆಸರೆ ಬರೆದಿದೆ ”

ವಿಧಿವಿಲಾಸ ನಡೆದಿದೆ, ಮಾಯೆ ನಿಜ, ಹಳೆಯ ಹಾದಿಯನ್ನೂ ಸಹ ಹಿಡಿದಿದೆ. ನಮ್ಮನ್ನು ಸೂತ್ರದ ಗೊಂಬೆಯಂತೆ ಆಡಿಸುತ್ತದೆ. ಬೇರೆ ಬೇರೆ ಆಟದಲ್ಲಿ, ನಾನಾ

ತಿರಸಾದ ಪಾತ್ರವನ್ನು ಕೊಟ್ಟು ರಸ ಹುಟ್ಟಿಸುವಂತೆ ಕರುಣಿಸಬೇಕೆಂದು ಮನುಷ್ಯ ಹೇಳುತ್ತಾನೆ. ಇದನ್ನು ಕವಿ :

“ ಬಯಲಿನಲ್ಲಿ ಗಾಳಿಯಾಡಿದಂತೆ ನಮ್ಮ ಆಡಿಸಿ
ಕ್ರೀಡಿಸುವುದು, ಬಾ ಕರುಣಿಸಿ ಬೇರೆ ಆಟ ಮೂಡಿಸಿ. ”

ಎನ್ನುವರು. ದೇಹ ಒಂದು ಯಂತ್ರ ಎನ್ನುತ್ತೇವೆ. ಆದರೆ ಬುದ್ಧಿ, ಮನಸ್ಸನ್ನೊಳಗೊಂಡ ದೇಹ ಯಾಂತ್ರಿಕವಾಗಿರಲಾರದು. ಕಡೆಯದಾಗಿ ನಿಶ್ಚಿಲ ದೃಷ್ಟಿ ಬರುತ್ತದೆ. ಆಗ ಮನುಷ್ಯ “ ಸಾಗಲಿಂತು ಚಕ್ರವು ನಿನ್ನ ರೀತಿ ವಕ್ರವು ” ಎನ್ನುತ್ತಾನೆ. ಮತ್ತೆ ದೈವವನ್ನು ಕಾಣುವ ರೀತಿಯಲ್ಲೂ ಅವನ ಇಚ್ಛೆ ತಪ್ಪಿದ್ದಿಲ್ಲ. ದೈವ ಅನಂತವಾಗಿ ಬಂದು ಜೀವ ಅಮೃತಮಯವಾಗಿರಬೇಕೆಂದು ಎನ್ನಿಸುವುದು.

ಇಲ್ಲಿಂದ ಮುಂದಕ್ಕೆ “ ಜೋಗಿ ” ಎಂಬ ಪದ್ಯ ಓದಿದಾಗ ಯಾರು ಜೋಗಿ ಎಂಬ ಪ್ರಶ್ನೆ ಮೂಡಿತು. ತಾರ ಪಂಚಮದಲ್ಲಿ ಕುಹೂ ಕುಹೂ ಎಂದು ಕೂಗುವ ಕೋಗಿಲೆಯೋ ಅಥವಾ ಅದರ ಜೊತೆಗೆ ಓಗೊಡುವ ನಾವೋ ? ಈ ಪದ್ಯದಲ್ಲಿ ಕೋಗಿಲೆ ಕೂತು ಕೂಗುವ ಸ್ಥಳವನ್ನು ಯಾವ ರೀತಿಯಲ್ಲಿ ಹೇಳಿರುವರೋ ಹಾಗೆಯೇ ನಮ್ಮಲ್ಲಿಯೂ ಕೂಡ ಬುದ್ಧಿ ಮನಸ್ಸುಗಳು ಕೆಲಸ ಮಾಡುತ್ತಿದ್ದರೂ ಸಹ ಎಲ್ಲೋ ಒಂದೆಡೆ ಈ ಒಂದು ಕೂಗು ಇದ್ದೇ ಇರುತ್ತದೆ ಎಂದ ಮೇಲೆ ನಾವು ಜೋಗಿಗಳಲ್ಲದೆ ಮತ್ತೇನು ? ಈ ಒಂದು ಕೂಗು ಏಳುವುದು ಕೋಗಿಲೆಯು ವಸಂತನು ಬಂದ ಎಂಬ ಶುಭವಾರ್ತೆಯನ್ನು ಹೇಗೆ ತರುತ್ತದೆಯೋ ಹಾಗೆ ಮನುಷ್ಯನಿಗೆ ಕಲ್ಯಾಣಕರವಾದದ್ದು. ಈ ಒಂದು ಸೊಲ್ಲು ಜೀವನವನ್ನು ದುಃಖಾಂತವನ್ನಾಗಿಯೂ, ಸುಖಾಂತವನ್ನಾಗಿಯೂ ಮಾಡಬಲ್ಲದು. ಇದು ಒಂದಾಗಿ ಮನುಷ್ಯನ ಪರಿಸ್ಥಿತಿ ಹೇಗಿರುತ್ತದೆ ಎಂಬುದನ್ನು ಈ ಕವನದಲ್ಲಿ ಬಹಳ ಚೆನ್ನಾಗಿ ಚಿತ್ರಿಸಿರುವರು. ಇದರಲ್ಲಿ ಕೊಡುವ ಚಿತ್ರ ಏನೋ ಒಂದು ತತ್ವವನ್ನು ಕೇಂದ್ರೀಕರಿಸಲು ಹೊರಟಿದೆ ಎಂದರೆ ತಪ್ಪಾಗಲಾರದು.

ಏಕೆಂದರೆ “ ಊರ ತುದಿಯ ಆ ಮೂರು ಬಟ್ಟೆ ಮುಗಿದಲ್ಲಿ ” ಎನ್ನುವಾಗಲೇ ಅದರ ವಾಸನೆ ಬರುವುದು. ಮತ್ತೆ ಅಲ್ಲಿ ಕೇಳಬರುವುದು ಜೋಡ ಗೂಗಿ ಕೂಗುವುದು ಮಾತ್ರ. ಅದನ್ನು ದಾಟಿ ಹೋದಾಗ ಕೊಳ, ಗವಿ, ಗುಡ್ಡ, ಹೊಲ ಎಲ್ಲವೂ ಸಿಗುವುದು. ಊರ ದೇವತೆಗೆ ಮೀಸಲಾಗಿರುವ ಹೊಲದಲ್ಲೇ ಇರುವುದು ಹುಣಿಸೆಮರ. ಅದನ್ನು ಹತ್ತಿ ನೋಡಿದಲ್ಲಿ ಸಣ್ಣ ಪರಿಯ ಮೇಲಿರುವ ಗಿಡಗಳ ಗುಂಪೊಂದು ಕಾಣುವುದು. ಅಲ್ಲಿ ತೊಗಲಬಾವಲಿ, ಪಾಂವಾಳ ಎಲ್ಲವೂ ಕಣ್ಣಿಗೆ ಬೀಳುವುದು, ಎನ್ನುವರು. ಜಾವಳಿಯ ಬೇರಾಟ. ಪಾರಿವಾಳದ ಹೊಕ್ಕು

ಹೊರಡುವಿಕೆ ಎಲ್ಲವೂ ಕ್ಷಣ ಕ್ಷಣಕ್ಕೂ ನಮ್ಮಲ್ಲಿ ಉಂಟಾಗುವ ಅನುಭವವೇ ಹೊರತು ಮತ್ತೇನಲ್ಲ. ಇದನ್ನು ಕವಿ :

“ ಅಲ್ಲಿ ತೊಗಲಬಾವಲಿ ಜೀರತಾವ ಭರತಿ ಹಗಲಿನೊಳಗ
ಹಿಂಡು ಪಾರಿವಾಳ ಹೊಕ್ಕ ಹೊರಡತಾವ ಪುತ್ತ ಒಳಗ ಹೊರಗ
ಅಲ್ಲಿ ಹಬ್ಬಿ ಹರುಷ್ಯಽದ ಜೇಪಿಗೇ ಸುತ್ತ ಅಮೃತಬಳ್ಳಿ
ಹಾಲ ಸುರಪತಾವ ಆಲ ಅಲ್ಲಿ ಅಲ್ಲಾಡತಾವ ಟಿಳ್ಳಿ. ”

ಎನ್ನುವರು— ಅತ್ತಿಗಿಡ, ಅದರ ಹಣ್ಣು, ಮತ್ತು ಅದರ ಸಿಹಿಯಾದ ರಸ— ಇವುಗಳ ಪರಿಚಯ ಮಾಡಿಕೊಟ್ಟ ಕವಿ “ ಅಲ್ಲಿ ಹಬ್ಬಿ ಹರುಷ್ಯಽದ ಜೇಪಿಗೇ ಸುತ್ತ ಅಮೃತ ಬಳ್ಳಿ ” ಎನ್ನುವಾಗ ಸೃಷ್ಟಿ ತನ್ನಲ್ಲಿ ಕರಾಳತೆಯನ್ನೂ, ಸೌಂದರ್ಯವನ್ನೂ ಹೇಗೆ ಹೆಣೆದಂತೆ ತುಂಬಿಕೊಂಡಿದೆಯೋ ಹಾಗೆಯೇ ಮನುಷ್ಯನಲ್ಲಿ ಗುಣದೋಷಗಳು ಹೆಣೆದುಕೊಂಡಿವೆ, ಒಂದಕ್ಕೊಂದು ಓಗೊಡುತ್ತಿವೆಯೋ ಎಂಬಂತೆ— ಎನ್ನುವುದನ್ನು ಸ್ಪಷ್ಟಪಡಿಸಿಸುವರು :

“ ಈ ತೋಪಿನ್ಯಾಗ ಬೆಳೆದ್ವಽದ ಹ್ಯಾಂಗೋ ಮೂಲ್ಯಾಗ ತಪ್ಪಿ ಮಾವು.
ಅದರಡಿಗೆ ಹುತ್ತ ಅದರಾಗ ಐತೆ ಒಂದೇಳ ಹೆಡೆಯ ಹಾವು. ”

ಎನ್ನುವಾಗ ಕಂಪು ಕೊಡುವ ಮಾವಿನ ಮರದಡಿಯಲ್ಲೇ ಇರಬೇಕೇ ಏಳು ಹೆಡೆಯ ಹಾವಿನ ಹುತ್ತ ಎನ್ನಿಸುವುದು.

ಇಂಥದೊಂದು ಮಾವಿನ ಮರದಲ್ಲೇ ಕೋಗಿಲೆ ಕೂಗುವುದು. ಎಂದರೆ ಮನುಷ್ಯನಿಗೆ ಎಚ್ಚರ ಬಂದೊಡನೆ ಶುಭವಾದಂತೆಯೇ ಲೆಕ್ಕ. ಹಾಗಿಲ್ಲದೆ ಬರಿಯ ಕೂಗೇ ಆದಲ್ಲಿ ಅದು ಕಂಠಶೋಷಣೆ.

ಅಂತೂ ಈ ಒಂಗು ಸೃಷ್ಟಿ ಯಾವ ಗತಿಯಲ್ಲಿ, ಯಾವ ಕಾರಣಕ್ಕಾಗಿ ಯಾವುದಕ್ಕೆ ಮೀಸಲಾಗಿ ನಡೆಯುತ್ತಿದೆ ಎಂಬ ಪ್ರಶ್ನೆ ಮೂಡುವುದು ನಿಸರ್ಗವನ್ನು ನೋಡಿದಲ್ಲಿ. ಇದನ್ನು ಕವಿ “ ತಿಳಿಯದ್ಯಾವುದೋ ಕಂಪು ಎಳೀತ್ವಽದ ತುಂಬಿ ಹುಚ್ಚು ಆಗಿ ಎಚ್ಚರಿಲ್ಲದ್ವಽ ಎತ್ತೋ ತಿರಗತಾವ ದಿಕ್ಕು ತೋರದಾಗಿ ” ಎನ್ನುವರು. ಕಡೆಗೆ ಉತ್ತರ ದೊರೆಯುವುದು— ದೈವ ಕಲ್ಯಾಣಕಾರಕವೆಂದು. ಪಂಚಮದಲ್ಲಿ ಕೂಗುವ ಕೋಗಿಲೆಯ ಮಾನಸಿಕ ದೃಷ್ಟಿ ಎಂಥದು; ಅದು ಸುತ್ತಲಿನ ವಾತಾವರಣಕ್ಕೆ ಹೊಂದಿಕೊಂಡಿದೆಯೇ ಎಂದರೆ, ಇಲ್ಲ; ಸುತ್ತಲಿನ ವಾತಾವರಣ ಇದರ ಒಂದು ಲಯಕ್ಕೇ ಹೊಂದಿಕೊಂಡು ಆನಂದದಿಂದ ನರ್ತಿಸುತ್ತದೆ. ಇಷ್ಟಾಗಿ ಈ ಕೋಗಿಲೆ ಯಾವುದು ? ಈ ಜೋಗಿ ಯಾರು ? ದೈವ ಆಗಾಗ್ಗೆ ತನ್ನ ಉಮೇದುವಾರನನ್ನು ಪ್ರಪಂಚದ ಉದ್ಧಾರಕ್ಕಾಗಿ ಕಳುಹಿ ಅವನ ಕಲೆಯಲ್ಲಿ

ತಾನು ಕೋಗಿಲೆಯಾಗಿ ಕುಳಿತು ಕೂಗುತ್ತಿರುವನೋ ಎನ್ನಿಸುವುದು. ಆದರೆ ಮುಂದೆ ಓದಿದರೆ ಕವಿಯು ಹೇಳುತ್ತಿರುವುದು ಅದಲ್ಲ ಎನ್ನಿಸುವುದು; ಎಂಥ ಸುಖ ದೊರೆತರೂ ಕೂಡ ಪ್ರತಿಯೊಬ್ಬರಲ್ಲಿಯೂ ಆತ್ಮವು ಕುಳಿತು ಮತ್ತಾವುದನ್ನೊ, ಏನನ್ನೋ ಬೇಕು, ಬೇಕು ಎಂದು ಕಲೆಯಲ್ಲಿ ಸ್ವರವನ್ನು ಹೊರಡಿಸಿ ಬೇರೆ ಕೆಲಸಕ್ಕೆ ಹೋಗದಂತೆ ಮನಸ್ಸನ್ನು ಕಟ್ಟಿಹಾಕುವುದು. ಈ 'ಏನುಬೇಕು' ಎಂಬುದು ಇವನಿಗೇ ಮನದಟ್ಟಾಗಿರುವುದಿಲ್ಲ. ಹೀಗಾಗಿ ಮನಸ್ಸು ಆತ್ಮನಲ್ಲಿ ಲೀನವಾಗಿ ಆತ್ಮ ಪರಮಾತ್ಮನಲ್ಲಿ ಲೀನನಾಗಬೇಕೆಂಬ ಬಯಕೆ ಹುಟ್ಟುತ್ತದೆ. ಮನುಷ್ಯ ತನ್ನ ಜೀವನವನ್ನು ಸಫಲಮಾಡಿಕೊಳ್ಳಬೇಕು.

"ಮಲ್ಲಿಗೆ" ಎಂಬ ಕವನದಲ್ಲಿ ದೈವ ಮಲ್ಲಿಗೆಯಂತಿದ್ದು ತನ್ನ ಕಂಪನ್ನು ಹರಡುವ ರೀತಿಯನ್ನು ಬಹಳ ಸುಂದರವಾಗಿ ಚಿತ್ರಿಸಿದ್ದಾರೆ, ಕವಿ.

> ಹೇ ಸುಗಂಧ-ಗಂಧ-ಮೋಹನೇ
> ಏ ಮಂದಪವನವಾಹನೇ
> ಹಾ ತಲುಪಿದೆ ಆವಾಹನೇ
> ಆ, ಹಾ, ಹಾ, ಮಲ್ಲಿಗೆ.

ಎಂದಿರುವರು. ಮಲ್ಲಿಗೆಯು ಎಲ್ಲೋ ಇದ್ದು ತನ್ನ ಸುವಾಸನೆಯಿಂದ ತನ್ನೆಡೆಗೆ ಹೇಗೆ ಬರಮಾಡಿಕೊಳ್ಳುವುದೋ ಅದೇ ರೀತಿಯಲ್ಲಿ ದೈವ ನಮ್ಮಲ್ಲಿ ಜ್ಞಾನವನ್ನು ಅಂಕುರಿಸಿ ನಮ್ಮನ್ನು ಮೂಗುದಾರದಿಂದ ತನ್ನೆಡೆಗೆ ಬರಮಾಡಿಕೊಳ್ಳುವದು.

'ತತ್ತ್ವ ಮತ್ತು ಸೃಷ್ಟಿ' ಹೆಸರಿನ ಹಿನ್ನೆಲೆಯಲ್ಲಿ ಬರೆದಿರುವ ಪದ್ಯಗಳಲ್ಲಿ ಕಡೆಯದಾಗಿ "ಮೌನ" ಎಂಬ ಪದ್ಯ ಒಂದು. ಈ ಪದ್ಯವು ಶಂಕರಾಚಾರ್ಯರು ಹೇಳಿರುವಂತೆ ಪಾಂಡಿತ್ಯವಿದ್ದು, ಮಗುವಿನಂತಾಗಿ ಮೌನದಿಂದಿರುವವರೇ ಜ್ಞಾನಿಗಳು ಎಂಬುದನ್ನು ತೋರಿಸಿ ಕೊಡುತ್ತದೆ. ಇದರಲ್ಲಿ ರವಿ, ಸಮುದ್ರ, ಮೋಡ ಎಲ್ಲವೂ ಸದ್ದಿಲ್ಲದೆ ಕರ್ಮಕುಶಲರಾಗಿ ಇರುವ ರೀತಿಯನ್ನು ಈ ಕವನವು ಎತ್ತಿತೋರಿಸುವುದು. "ಮೌನ ಮೊರೆಯಿಡುವಂತೆ ಕಡಲು ತೆರೆತೆರೆದಾಡಿ ಮರ್ಯಾದೆ ಮೀರದಿದೆ" ಎಂಬ ಮಾತು ಬಹಳ ಸೊಗಸಾಗಿರುವುದು. ಸೃಷ್ಟಿಯಲ್ಲಿ ಈ ಸೊಗಸನ್ನು ನೋಡಿದ ಕವಿ ಮಾತೆಂಬ ಕೂಸಿಗೆ ಮೌನವೇ ತಾಯಿ. ಇಂಥ ತಾಯಿಯ ಮಡಿಲಲ್ಲಿ ಮಾತು ಉಳಿದುಕೊಂಡರೆ ಎಂಥ ರಕ್ಷಣೆ! ಎಂದರೆ ಸೃಷ್ಟಿಯಲ್ಲೇ ದೈವವನ್ನು ಕಂಡು ಆನಂದವನ್ನು ಹೊಂದಿದರೆ ಅದೇ ಸುದೈವ. ಕಡೆಯ ಸಾಲಿನಲ್ಲಿ ಕವಿ "ಮಾತು ಮೌನದ ಪ್ರತಿಮೆ, ಮೌನ ಮಾತಿನ ದೈವ" ಎನ್ನುವರು. ಬಹಳ ಸತ್ಯವಾದ ಮಾತು. ಮೌನ ಬಂದಮೇಲೆ ಮಾತು ಮೌನಕ್ಕೆ ಮಗುವಿದ್ದಂತೆ.

ಮನುಷ್ಯ ಎಂದು ತನಗೆ ಎಲ್ಲವೂ ತಿಳಿದಿದೆ ಎಂದುಕೊಳ್ಳುವನೋ ಅಂದೇ ಮುದುಕನಾಗಲು ಆರಂಭಿಸುತ್ತಾನೆ. ಇನ್ನೂ ಅರಿಯುವುದಿದೆ ಎಂದು ಶಾಂತ ಚಿತ್ತನಾಗಿ ಮೌನದಿಂದ ಇರುವವನು ಮತ್ತಷ್ಟು ಹೆಚ್ಚಾಗಿ ಗ್ರಹಿಸಬಲ್ಲ ಶಕ್ತಿಯನ್ನು ಪಡೆದಿರುತ್ತಾನೆ. ಗುರುವೂ ಆಗುತ್ತಾನೆ.

ಸೃಷ್ಟಿಯಲ್ಲಿ ಇಂಥದೊಂದು ಅರಿವನ್ನು ಕಂಡು ಉಂಡು ಉಣಿಸಿದ ಕವಿಯಲ್ಲಿ ಅನುಭಾವಗೀತೆಗಳು ಹೊರಡುವುದು ಆಚ್ಚರಿಯೇನಲ್ಲ. ‘ ಸರಸ್ವತೀ ಸೂಕ್ತ ’ವು ಅನುಭಾವಗೀತೆಯಾಗಿರುವುದು ಸಹಜವೇ ಆಗಿದೆ. ಶಿಶಿರ ಋತುವಿನಲ್ಲಿ ಆಕಾಶದಲ್ಲಿ ಪೂರ್ಣಚಂದ್ರನು ಇರುವಾಗ ತೆಳ್ಳನೆಯ ಬಿಳಿಯ ಮೋಡ ಬಂದರೆ, ಚಂದ್ರ ಮೋಡಕ್ಕೆ ಬೆಳಕನ್ನು ಕೊಟ್ಟರೆ, ಮೋಡವು ಒಳ್ಳೆ ಬಿಡಿಸಿದ ಹತ್ತಿಯಂತೆ ಕಾಣುತ್ತದೆ. ಹಾಗೆಯೇ ನಮ್ಮ ಅಜ್ಞಾನವನ್ನು ಹಿಂಜಿ ಹಿಂಜಿ ಸ್ವಚ್ಛ ಮಾಡಿದಲ್ಲಿ ಜ್ಞಾನದ ಬೆಳಕು ಮಸಕು ಮಸಕಾಗಿಯಾದರೂ ಕಾಣುವುದು. ಹೀಗೆ ಬರುವ ಜ್ಞಾನವನ್ನು ಕವಿ “ ನೀರನುಸಿರೆ ಮೇಲೆ ಹಾರಿ, ಬೆಳಕು ಹಕ್ಕಿ ಬೆನ್ನ ಏರಿ ಬಿಳಿಯ ಮೋಡ ಬೆಳಕಿನಲ್ಲಿ ತೇಲುವಂತೆ ಬಂದಳೋ ನೋಡು ಕಂಡಾ ಎಂದಳು. ” ಎಂದಿರುವರು. ಇದೇ ರೀತಿಯಲ್ಲಿ ಜ್ಞಾನದ ಬೆಳಕು ಕವಿಯ ಮನಸ್ಸನ್ನು ತಣಿಸುತ್ತದೆ. ಜ್ಞಾನದ ಸೊಬಗನ್ನು ವರ್ಣಿಸುತ್ತಾ ಕವಿ, “ ಆಗ ಒಯಲೆ ಆವು ಆಗೆ, ಅದುವೆ ಹಾಲು ಕರೆದ ಹಾಗೆ, ಸುತ್ತು ಹಾಲು ಕರೆದಿತು. ಗಾಳಿ ಮೇರೆವರಿದಿತು ” ಎಂದಿರುವರು. “ ಏನು ಸವಿಯೊ ಅದನೆ ಕುಡಿ. ನಿನ್ನ ರುಚಿಯ ಹದವ ಹಿಡಿ, ನನ್ನನೇನು ಕೇಳುವೆ ಆದರೂನು ಹೇಳುವೆ. ” ಆಗ ಕವಿಗೆ ಎನಿಸುತ್ತದೆ— ಅಮೃತಕ್ಕೆ ಸಮನಾದ ಹಾಲಿನೊಡನೆ ನೀರನ್ನೂ ಸೇವಿಸಬೇಕು. ಇಲ್ಲದಿದ್ದರೆ ಬಾಳು ನೀರಸವಾದೀತು ಎಂದು. ಅವರವರ ರುಚಿಯ ಹದವನ್ನು ಹಿಡಿಯಲು ಅನುಭವ ಬೇಕು.

ನಂತರ ಕವಿಗೆ ಅನುಭವವಾಗುವುದು ಲಕ್ಷ್ಮಿ, ಸರಸ್ವತಿ ಮತ್ತು ಪಾರ್ವತಿಯರುಗಳ ಶಕ್ತಿಯನ್ನೊಳಗೊಂಡ ಲಲಿತೆಯ ಚೇತನ. “ ಲಲಿತೆ ” ಎಂಬ ಪದ್ಯದಲ್ಲಿ ಆರಂಭದಲ್ಲೇ “ ಯಾವ ಬಾನುಲಿ ಕೇಂದ್ರದಲ್ಲಿ ಹಾಡುತ್ತಿರುವೆ ” ಎಂದು ಹೇಳುವಾಗಲೇ ಲಲಿತೆಯ ಸ್ವರೂಪದ ಅರಿವು ಮೂಡುತ್ತದೆ. ಆವಳ ರಾಗದ ಲಹರಿ ತೇಲಿ ಬಂದು ನಾವು ಇರುವ ಸ್ಥಿತಿಯೇ ನಿಜ, ಕನಸಲ್ಲವೆನ್ನುವಂತೆ ಕಿವಿಯಲ್ಲಿ ಆರುಹಿ ನಾವು ಉತ್ಸಾಹದಿಂದ ಇರುವಂತೆ ಮಾಡುತ್ತಾಳೆ. ಲಲಿತೆ ಮಾಯೆಯ ಸ್ವರೂಪದಲ್ಲಿ ತೋರಿ ಮತ್ತಷ್ಟು ನಮ್ಮ ಹಸಿವನ್ನು ಕೆರಳಿಸುತ್ತಾಳೆಯೇ ಹೊರತು ಹಿಂಗಿಸುವುದಿಲ್ಲ. “ ಈ ಲೀಲೆಯಲಿ ಯಾವ ಮೋಡಿ ಇಹುದೋ ! ” ಎಂದು ಕವಿಯು ಅಚ್ಚರಿಯಿಂದ ನುಡಿಯುವಾಗ ಲಲಿತೆಯ ಕಾರ್ಯವೇನು, ಏಕಾಗಿ ನಮ್ಮ ಎದೆ ಹಸಿವನ್ನು ಕೆರಳಿಸಬೇಕು ಎಂಬ ಪ್ರಶ್ನೆ ಮೂಡುತ್ತದೆ. ಆದರೆ ಪ್ರಪಂಚದ ವ್ಯಾಪಾರ ನಡೆಯಬೇಕಲ್ಲ, ಅದಕ್ಕಾಗಿ ಜೀವಿಗಳು ಜೀವವೆತ್ತಬೇಕು. ಎಂದರೆ

ಸೃಷ್ಟಿಗೆ ಬೇಕಾದ ನೆರಳಿನಂತಿರುವ ಮಾಯೆ, ಸ್ಥಿತಿಗೆ ಬೇಕಾದ ತಿರುಳಿನಂತಿರುವ ಶಕ್ತಿ, ಇವೆರಡೂ ಕೂಡಿ ಲಲಿತೆಯ ಸ್ವರೂಪವೆನಿಸುತ್ತದೆ. ಆದರೂ ಸ್ಪಷ್ಟವಾಗಿ ಇದೇ, ಇಷ್ಟೇ ಎಂದು ದೈವವನ್ನು ಕುರಿತು ಹೇಳಲಾಗುವುದಿಲ್ಲ; ಎಂಬುದನ್ನು ಕವಿ "ಓ ಗೊಂಬೆ ! ಏನೆಂಬೆ ಕಾಣೆನೆಂದೆ, ದೇವಿ ! ಮಾದೇವಿ ! ಮಾಮಾಯಿ ಲಲಿತೇ !" ಎನ್ನುವಲ್ಲಿ ಹೇಳಿರುವರು. ಮುಂದುವರಿದು "ಒಳಗನುದ್ದೀಪಿಸುತ ಒಳಗೆ ಕುಳಿತೆ." ಎಂದು ಹೇಳುವಾಗ ಯಾವ ಬಾನುಲಿ ಕೇಂದ್ರದಲ್ಲೂ ಹಾಡುತ್ತಿಲ್ಲ; ನಮ್ಮ ಎದೆಯಲ್ಲೇ ಕುಳಿತು ನಮ್ಮನ್ನು ಉದ್ದೀಪಿಸುತ್ತಿದೆ ಎಂಬ ಮಾತು ಸ್ಪಷ್ಟವಾಗುವುದು. ಇಂಥ ಶಕ್ತಿಚೇತನದ ಮುಂದೆ ಮನುಷ್ಯ ಎಷ್ಟರವನು?

ಲಲಿತೆ ಆಡಿಸಿದಂತೆ ಆಡುವುದು ಸರಿ; ಹಾಡುವುದೂ ಸರಿ. ಆದರೆ ನನ್ನ ನಾ ನೋಡುವೆನು ಎಂದು ಹೇಳುವಾಗ ಕವಿ ನಾನು ಎಂಬುದನ್ನು ಹೇಗೆ ನೋಡುತ್ತಾರೆ ಮತ್ತು ಆ ರೀತಿ ನೋಡಿಕೊಳ್ಳುವುದಕ್ಕೆ ಇರುವ ಧೈರ್ಯ, ಸ್ಥೈರ್ಯ ಮತ್ತು ಚೇತನಗಳು ಕವಿಗೆ ಎಲ್ಲಿಯ ವರೆಗೆ ಇವೆ ಎಂಬುದನ್ನು ಕಾಣಬಹುದು. ಕವಿಯ ವ್ಯಕ್ತಿತ್ವವನ್ನು ಅರಿಯಲಿಚ್ಛಿಸುವವರಿಗೆ ಈ ನುಡಿ ಒಂದು ಬೆಳಕನ್ನು ಕೊಡುತ್ತದೆ. "ಓ ತಾಯಿ ಮಾಯಿ" ಪದ್ಯದಲ್ಲಿ ಭಕ್ತಿಯ ಪರವಶತೆ ಮುಗಿಲನ್ನು ಮುಟ್ಟಿರುವಂತೆ "ಲಲಿತೆ" ಯಲ್ಲಿ ಸಫಲವಾಗಿಲ್ಲ.

ಇನ್ನು ಮುಂದೆ ಬರುವ "ತುಂಬಿ" ಪದ್ಯ Lyric ಗೆ ಒಂದು ಒಳ್ಳೆಯ ಉದಾಹರಣೆಯಾಗಿ ನಿಂತಿದೆ. ಇದು ಒಂದು ಅಕ್ಷಯಪಾತ್ರೆಯಿದ್ದಂತೆ. ತುಂಬಿ ಎಂಬುದು ದುಂಬಿಯಂತೆ ಝೇಂಕರಿಸಿದರೂ ಸಹ ನಾವೆಲ್ಲ ಏಕೆ ಕೇಳದಿರುವುದು ? ಹೌದು, ಕೇಳುವುದಕ್ಕೂ ಸಹನೆಯಿರಬೇಕು. ಇದು ಒಬ್ಬ ವಿಜ್ಞಾನಿಯಲ್ಲಿರಬೇಕಾದ ಲಕ್ಷಣ.

"ತುಂಬಿ" ಪದ್ಯವು ಇತರರಿಗೆ ಬರಿಯ ಶಬ್ದಚಮತ್ಕಾರವೆಂಬಂತೆ ಕಾಣುತ್ತದೆ. ಇಲ್ಲಿ ಕವಿಯ ವೈಜ್ಞಾನಿಕ ದೃಷ್ಟಿಯ ಮಟ್ಟವನ್ನು ಅಳೆಯಬಹುದಾಗಿದೆ. ಈ ಪದ್ಯದಲ್ಲಿ ಈಶಾವಾಸ್ಯೋಪನಿಷತ್ತಿನಲ್ಲಿ ಬರುವ ಶಾಂತಿಮಂತ್ರದಿಂದ ಸ್ಫೂರ್ತಿಗೊಂಡ ಕವಿ ಎಲ್ಲೆಲ್ಲೂ ವ್ಯಾಪಕವಾಗಿರುವ ಪರಮಾತ್ಮನನ್ನೇ ಸ್ಪಷ್ಟವಾಗಿ ವಿವರಿಸಿದ್ದಾರೆ. ಅಂಥ ಭಗವಂತನ ಅನುಗ್ರಹದಿಂದ ಎಲ್ಲ ಅಡ್ಡಿಗಳೂ ದೂರ ಸರಿಯಲಿ ಎಂದು ಪ್ರಾರ್ಥಿಸುತ್ತಲಿದ್ದಾರೆ.

ಇಹ, ಪರಲೋಕಗಳೆರಡೂ ಪರಮಾತ್ಮನಿಂದ ತುಂಬಿಕೊಂಡಿವೆ. ಹೀಗೆ ಪೂರ್ಣವಾಗಿರುವುದರಿಂದಲೇ ಭಗವಂತನಿಗೂ ಪೂರ್ಣವೆಂದು ಹೆಸರು. ಇಂಥ ಪರಿಪೂರ್ಣನಾದ ಪರಮಾತ್ಮನಿಂದ ಬೇರೆ ಬೇರೆಯಾಗಿ ಕಾಣುವ ಜೀವರಾಶಿಗಳೂ ಅವನಿಗಿಂತ ಬೇರೆಯಲ್ಲ. ಯುಕ್ತಿಯಿಂದ ವಿವೇಚಿಸಿ ನೋಡಿದರೆ ಪರಿಪೂರ್ಣನಾದ ಭಗವಂತನಲ್ಲಿಯೇ ಅಡಗಿರುವುದನ್ನು ಮನಗಾಣಬಹುದು. ಇದರಲ್ಲಿ ಕವಿಯು ಈ

ವಿಶ್ವವೇ ಒಂದು ಅಕ್ಷಯ ಪಾತ್ರೆಯಿದ್ದಂತೆ, ನಾವು ಹಸಿದಷ್ಟೂ ಕೊಡಲು ಸಿದ್ಧವಿದೆ; ಅಲ್ಲದೆ ಕೊಟ್ಟಷ್ಟೂ ಮತ್ತೂ ತುಂಬಿ ನಿಲ್ಲುತ್ತದೆ, ಎಂಬದನ್ನು ಸೊಗಸಾಗಿ ಹೇಳಿರುವರು. ಇಲ್ಲಿಂದ ಮುಂದೆ ಕವಿ ಸೃಷ್ಟಿಯಲ್ಲೆಲ್ಲ ಹಿರಿದಾದ ಮನುಷ್ಯನ ಸೃಷ್ಟಿಯ ವರ್ಣನೆಯಿಂದ ಹಿಡಿದು, ಕ್ರಿಮಿಕೀಟಗಳ ಸೃಷ್ಟಿಯ ವರ್ಣನೆಯ ವರೆಗೆ ಬರೆಯುತ್ತಾ ಕೀಟಗಳಲ್ಲಿ ಒಂದಾದ ಜೇನಿನ ವರ್ಣನೆಗೆ ಬಂದು ನಮ್ಮ ಜೀವನವು ಜೇನುತುಪ್ಪದಂತೆ ಸಿಹಿಯಾಗಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸುವ ವರ್ಣನೆಯ ವೈಖರಿ ಬಹಳ ಸೊಗಸಾಗಿದೆ. ಜೇನುಹುಳ ಹೂವಿನಲ್ಲಿರುವ ಮಧುವನ್ನು ಹೀರುವಾಗ ಸಸ್ಯ ಸಂತತಿಯೂ ಸಹ ಬೆಳೆಯುತ್ತದೆ. ಎಲ್ಲ ಸಂತತಿಯ ಬೆಳವಣಿಗೆಗೆ ಕಾರಣಕರ್ತಳಾದ ಮಾಯೆಯ ಶಕ್ತಿಯನ್ನು ಕುರಿತು ಕವಿ, " ಅಂಭೋಜನೇತ್ರೆ ತನ್ನ ರಂಭೋರುಜಾತದಲ್ಲಿ ಸುಚರಿತ್ರೆ ದಿವ್ಯವಾತ್ಸಲ್ಯದಲ್ಲಿ ಒರಗಿರಿಸಿ ನಾದವಲ್ಲಿ ತಂಬೂರಿ ಶ್ರುತಿಗೆ ಸೀಕಾರ ಜತಿಗೆ ದಿಡದಾದಿ ಮೀಟ ದಾಟಿ ಕುಂಭಿಸಿಯ ತುಂಬಿ ಅಂಬರವ ತುಂಬಿ ತುಂಬಿಸಿದಳೆಂಥ ಲಹರಿ. " ಎನ್ನುವರು. ಹೇಗೆ ಜೇನುಹುಳ ಸಸ್ಯಸಂತತಿಗೆ ಕಾರಣವಾಗಿದೆಯೋ ಅದೇ ರೀತಿಯಲ್ಲಿ ಮಾಯೆ ಪ್ರಾಣಿ ಮತ್ತು ಮನುಷ್ಯರ ಸಂತತಿಯ ಬೆಳವಣಿಗೆಗೆ ಕಾರಣಳಾಗಿ, ಜನನಕ್ಕೆ ಪೂರ್ವಭಾವಿಯಾಗಿ ನಡೆಯುವ ಬೆಸುಗೆಯಿಂದ ಸ್ಥಿರಶಾಂತಿ ತುಂಬಿ ಬಂದು, ಕಡು ಕಾಂತಿ ತುಂಬಿ ಏಳಬೇಕು ಎನ್ನುತ್ತಾರೆ. ಎಂದರೆ ಮನುಷ್ಯ ಪ್ರಾಣಿತ್ವವನ್ನು ಕಳೆದು ಮಾನವತ್ವವನ್ನು ಚಿರಂತನ ಬೆಳೆಸಬೇಕೆಂದಾಯಿತು. ಹೀಗೆ ದೇವರಿಂದ ಹಿಡಿದು ಮನುಷ್ಯ, ಪ್ರಾಣಿ, ಕ್ರಿಮಿಕೀಟಗಳ ವರೆಗೆ ಬಂದು ಮತ್ತೆ ದೈವತ್ವಕ್ಕೆ ಕರೆದೊಯ್ಯುವ ಸೃಷ್ಟಿಚಕ್ರದ ಯುಕ್ತಿಯಿಂದ ಕೂಡಿದ ವಿವೇಚನೆ ಭಗವಂತನ ಪೂರ್ಣಸ್ವರೂಪದನ್ನು ಎತ್ತಿ ಹಿಡಿಯುತ್ತದೆ.

ಹೀಗೆ ಬೇಂದ್ರೆಯವರ ಪದ್ಯಗಳು ಗಂಗೆಯಂತೆ ಅವತರಿಸಿ — ಕೌಟುಂಬಿಕ ಭಾವಗಳು ಎಂತಿರಬೇಕೆಂದು ಹೇಳಿ, ಗಣ್ಯ ವ್ಯಕ್ತಿಗಳು ಯಾವ ರೀತಿಯಲ್ಲಿ ಗಣ್ಯ ವ್ಯಕ್ತಿಗಳೆನಿಸಿಕೊಂಡಿರುವರೆಂದು ತಿಳಿಸಿ, ಇಷ್ಟಾದರೂ ದೇಶ ಮತ್ತು ಸಮಾಜದ ಸ್ಥಿತಿಗತಿಗಳೆಂತಿರುವುದೆಂದು ನುಡಿದು ಎಚ್ಚರಿಸಿ, ಅಂತಃಕರಣ, ಪ್ರೇಮ ಕರುಣೆಗಳು ಏನನ್ನು ಮಾಡಬಲ್ಲುವು, ಸಮಾಜದ ಆರೋಗ್ಯವನ್ನು ಹೇಗೆ ಕಾಪಾಡಬಲ್ಲುವೆಂಬುದನ್ನು ಅರುಹಿ, ಯಾರ ಸಹಾಯವೂ ಇಲ್ಲದೆ ಸೃಷ್ಟಿಯಲ್ಲೇ ನಾವು ಎಂತು ತತ್ತ್ವವನ್ನು ಕಾಣಬಹುದೆಂಬುದನ್ನು ಬಗೆದು, ಈ ಸೃಷ್ಟಿಗೆ ಕಾರಣರಾದ ದೈವಗಳ ಬಗ್ಗೆ ಅನುಭಾವಗೀತೆಗಳನ್ನು ಹೃತ್ಪೂರ್ವಕವಾಗಿ ನುಡಿಸಿ— ಮೆರೆದಿವೆ. ನಿಜವಾಗಿ ' ಗಂಗಾವತರಣ 'ವೆಂಬ ನಾಮಾಂಕಿತ, ಈ ಪದ್ಯಸಂಕಲನಕ್ಕೆ ಉಚಿತವಾಗಿದೆ.

§ § § §

೨೮

# ಬೇಂದ್ರೆಯವರ ಕಾವ್ಯದಲ್ಲಿ ಕಲ್ಪನಾವಿಲಾಸ

ಶ್ರೀಮತಿ ಆರ್. ಕೆ. ಪರ್ವತಿ

" ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸಾ
ಮುಸೆದ ಗಾಳಿ ಪಕ್ಕ ಪಡೆಯುತ್ತಿತ್ತು ಸಹಜಪ್ರಾಸಾ
ಮಿಂಚಿಮಾಯವಾಗುತ್ತಿತ್ತು ಒಂದು ಮಂದಹಾಸಾ "

ಎಂದು ಭಾವಗೀತೆಯ ಲಕ್ಷಣವನ್ನು ಹೇಳುವ ಶ್ರೀ ಬೇಂದ್ರೆಯವರ ಕಾವ್ಯದ ಉದ್ದಕ್ಕೂ ಕಲ್ಪನಾವಿಲಾಸದ ವೈಖರಿ ಒಡೆದು ಕಾಣಿಸುತ್ತದೆ. ಕಿರಿದರಲ್ಲಿ ಹಿರಿದಾದ ಅರ್ಥವನ್ನು ಹೇಳುವವನೇ ಕವಿಯೆಂದು ಹೇಳಿದತೂ, ಪದ ಪದದ, ಅಕ್ಕರಕ್ಕರದ ಪರಿಪರಿಗಳನ್ನು ಬಿಚ್ಚಿ ನೋಡಿ, ಬಿಡಿಸಿ ತೋರಿಸುವ ಪ್ರತಿಭನೇತ್ರ ಕವಿಗೆ ಅತ್ಯವಶ್ಯ. ಕವಿಯ ಕಲ್ಪನಾಶಕ್ತಿ ಹಿಗ್ಗಿದಷ್ಟೂ ಕಾವ್ಯಕ್ಕೆ ಮೆರಗು ಬರುತ್ತದೆ. ಅಮೂರ್ತವಾದ ಭಾವಗಳಿಗೆ ಕಲ್ಪನೆ ಸುಸ್ಪಷ್ಟವಾದ ರೂಪವನ್ನು ಕೊಡುತ್ತದೆ. ಅಂತೆಯೇ ಕವಿಗೆ ತನ್ನ ಭಾವನೆಗಳನ್ನು ವ್ಯಕ್ತಗೊಳಿಸುವುದಕ್ಕೆ ಕಲ್ಪನಾಶಕ್ತಿ ಉತ್ತಮವಾದ ಸಾಧನ. ಭೃಂಗದ ಬೆನ್ನೇರಿ ಬಂದ ಕಲ್ಪನಾವಿಲಾಸ, ಅಭಿವ್ಯಕ್ತಿಯ ಉತ್ತಮ ಸಾಧನೆ.

ಬೇಂದ್ರೆಯವರ ಮೊದಲನೆಯ ಕವನ ಸಂಗ್ರಹವಾದ ಗರಿಯಲ್ಲಿಯೇ ಅವರ ಶ್ರೀಮಂತವಾದ ಕಲ್ಪನಾಶಕ್ತಿಯ ನಿದರ್ಶನ ದೊರೆಯುತ್ತದೆ. 'ಪಾತರಗಿತ್ತಿಪಕ್ಕ'ದ ಚೆಲುವಿಕೆಯೊಡನೆ ಆದರ ನಯವನ್ನು ಹೇಳುವಾಗ, "ಗಾಳೀಕೇಸೀಲೇನs ಮಾಡಿದ್ದಾರ ತಾನs' ಎಂದು ಹೇಳುತ್ತಾರೆ. ಕನ್ನಡಾಂಬೆಯ ಭವ್ಯವಾದ ಪರಂಪರೆ, ಇಂದು ಕನ್ನಡ ಜನದಲ್ಲಿ ಮೂಡಿದ ನಿರುತ್ಸಾಹ ಕಂಡು ಕವಿಯ ರೂಪಕ ಶಕ್ತಿ, 'ಕನಸಿನೊಳಗೊಂದು ಕಣಸನ್ನು' ಕಂಡಿತು. ತಾಯಿ ಇದುರಿಗೆ ಬಂದು ನಿಂತು, "ಗಂಡುಸಾದರೆ ನಿನ್ನ ಬಲಿ ಕೊಡುವಿಯೇನು ?" ಎಂದು ಕೇಳಿದಾಗ ಎಷ್ಟು ಜನ ಕನ್ನಡಿಗರ ಎದೆ ನಡುಗಿಲ್ಲ ? ತಾಯಿಯ ಆ ದೈನ್ಯರೂಪ ಎಷ್ಟು ಜನರಿಗೆ ಕಣ್ಣು ತೆರೆಯಿಸಿಲ್ಲ ?

'ರಾಗರತಿ' ಪದ್ಯದಲ್ಲಿ ಕಲ್ಪನಾವಿಲಾಸ ಮೊದಲಿನಿಂದ ಕೊನೆಯವರೆಗೂ ಹಬ್ಬಿಕೊಂಡಿದೆ. ಚಂದ್ರನು ಜೊಗಚೀಹೂವಿನಂತಹ ನಗೆಯನ್ನು ಸೂಸುತ್ತ ಮೂಡಿಬರುವಾಗ 'ಮುಗಿಲನಾರಿ' ರತಿಯರಾಗದಿಂದ ಕೆಂಪಾಗಿತ್ತು ಎಂದು ಕವಿ ಉತ್ಪ್ರೇಕ್ಷಿಸಿದ್ದಾರೆ. ಚಂದ್ರನ ಬರವೇ ಮುಗಿಲಿಗೆ, ಲಜ್ಜೆಯನ್ನುಂಟು ಮಾಡಿತು ಎನ್ನುವಲ್ಲಿಯ ಕಲ್ಪನೆ ತುಂಬ ಹೊಸದು. ಇದೇ ರೀತಿಯಾಗಿ, "ದೀಪ" ಪದ್ಯದಲ್ಲಿ, ಕಿರಿ ಬೆರಳಲಿ ಬೆಳ್ಳಿ ಹರಳು ಕರಿಕುರುಳೊಳು ಚಿಕ್ಕೆ ಅರಳುಗಳನ್ನು ಇಟ್ಟು ಕೊಂಡು ಇರುಳುವೆಣ್ಣು ತನ್ನ ಅರಸನನ್ನು ಅರಸಲು ಹೊರಟಳಂತೆ.

ಪ್ರೀತಿಯ ರೀತಿ ಗೂಢವಾದುದು. ಪ್ರೀತಿಯು ಕುರುಡು ಎನ್ನುವಲ್ಲಿ ಬೇಂದ್ರೆಯವರು ಪ್ರೀತಿಯೆಂಬ ಮಾತು ಕೇಳಿ ಜೀವ, ರೆಕ್ಕೆಗೊಂಡು ಹಾರಿ ಕೈಲಾಸಕ್ಕೆ ಹೋದರೆ ಅಲ್ಲಿ ಅದು ಕಾಡುದೇನು ? ಬೂದಿಬಡಕ ಗಂಡಿನಲ್ಲಿ ಬಳ್ಳಿಯಂಥ ಮಳ್ಳ ಹೆಣ್ಣು ನವರಸವನುಂಡಿತು ಎನ್ನುತ್ತಾರೆ.

ಜೀವನದಲ್ಲಿಯ ನಾನಾ ಅನುಭವಗಳನ್ನೂ ಬೇಂದ್ರೆಯವರು ತಮ್ಮ ಕಲ್ಪನೆಯ ವಿಲಾಸದಿಂದ ಸಚಿತ್ರಗೊಳಿಸಿದ್ದಾರೆ. "ಸುಖತಾನು ಬರುವಾಗ ಗುಳಿಯೆತ್ತಿ ಬರುವುದು" ಎಂದು ಹೇಳಿದ ಕವಿ, ತನ್ನ ಜೀವನದಲ್ಲಿಯ ಸುಖದ ದಿನಗಳನ್ನು ಹೀಗೆ ಬಣ್ಣಿಸಿದ್ದಾರೆ.

"ಗರುಡನ ಹಕ್ಕಿಯು ಗರಿಗೆದರಿ ಹಾರಿತು
ಬಾನಾಗ ಕರೆದಿತು ಬರಿಹಾಲನೆ
ಗಾಳಿಯು ಊದಿತು ಹೊಡೆಯು ಹೆಡೆದೂಗಿತು
ದಿಕ್ಕೆಲ್ಲ ಸುಮ್ಮನೆ ನೋಡುತಿವೆ."

ಮಗುವನ್ನು ಕಳೆದುಕೊಂಡ ದುಃಖದಲ್ಲಿದ್ದರೂ ಅದನ್ನು ಮರೆಮಾಚಿ, ಪತಿಗೆ ಸಮಾಧಾನವನ್ನು ತಂದುಕೊಡಲು ಹವಣಿಸುವ ತಮ್ಮ ಪತ್ನಿಯನ್ನು ಕಂಡು, 'ಮುಮತಾಜಳನ್ನು ಹುಗಿದು ತಾಜಮಹಲನೆ ಕಟ್ಟಿ ನಿಜ ದುಃಖ ಮರೆಸಬಹುದೆ?' ಎಂದು ಕೇಳಿದ್ದಾರೆ. ಎಂತಹ ಭವ್ಯ ಕಲ್ಪನೆ. ತಾಜಮಹಲು ಸುಂದರವಾದರೂ ಅದು ಶಹಾಜಹಾನನ ಕಣ್ಣೀರಿನ ಪ್ರತೀಕವೇ ಅಲ್ಲವೆ ? ಇನ್ನೊಂದು ಪ್ರಸಂಗದಲ್ಲಿ ಪಡೆದ ಕೂಸನ್ನು ಕಳೆದುಕೊಂಡು ಹೇಗೊ ನಿರ್ವಿಣ್ಣಳಾಗಿ ಉಳಿದ ತಮ್ಮ ಪತ್ನಿಯನ್ನು ಕಂಡು, "ದಿಗಿಲಾಗಿ ಅನ್ನತದ ಜೀವ ನಿನ್ನ ಕಣ್ಣಾರೆಕಂಡು ಒಮ್ಮಿಗಿಲ್ಲ ಹುಣ್ಣಿವೀ ಚಂದಿರನ ಹೆಣಾ ಬಂತೊ ಮುಗಿಲಾಗ ತೇಲತ್ಲ ಹಗಲ." ನಿಸ್ತೇಜವಾದ ಆ ತಾಯಿಯ ಮುಖ ಚಂದ್ರನ ಹೋಲಿಕೆಯಿದ್ದರೂ, ಹೆಣದ ನಿಸ್ತೇಜತೆಯನ್ನು ಪಡೆದಿತ್ತಂತೆ. ಮೊಗದಲ್ಲಿ ಚಂದಿರನನ್ನು ಕಂಡ ಕವಿಗಳು ಅನೇಕರಿದ್ದರೂ ಈ ನಿಸ್ತೇಜತೆಗೆ ಹೆಣದ ಕಲ್ಪನೆ ಇದೇ ಮೊದಲಸಲ ಬಂದುದು.

ಬೇಂದ್ರೆಯವರ ಜ್ಞಾನಲಾಲಸೆ ದಿನದಿನಕ್ಕೂ ವಿಸ್ತಾರ ಪಡೆಯುತ್ತ ಹೋದಂತೆ ಅವರ ಸ್ಥಾನ ಉನ್ನತವಾಗಿದೆ. ಅದನ್ನು ತಿಳಿಯುವುದೇ ಅಸಾಧ್ಯವೆಂದಮೇಲೆ ಅದಕ್ಕೆ ಸರಿಸಮನಾಗಿ ಏರುವುದು ಹೇಗೆ ಎಂದು ಅನಿಸುವುದು ಸ್ವಾಭಾವಿಕ. ಬೇಂದ್ರೆಯವರ ಪತ್ನಿಯಂತೆಯುವರು, "ನಾವು ವ್ಯವಹಾರಿಕರು, ನೀವೊ ಎತ್ತರದ ನಿಲುವುಳ್ಳವರು" ಎನ್ನುತ್ತಿದ್ದರಂತೆ. ಆ ಮಾತನ್ನು ಕವಿ ಸಖೀಗೀತದಲ್ಲಿ ಹೇಳಿದ ಸೊಗಸು ಅನನ್ಯವಾದುದು.

"ನಿಮ್ಮ ಜೀವನ ಧ್ಯೇಯ ಗೌರಿಶಂಕರದಂತೆ
ಶಿಖರವನೆತ್ತಿದೆ ಮುಗಿಲಿನೆಡೆ
ನನ್ನೆದೆ ತಿರುಗಿದೆ ಗಂಗೆಯು ಹರಿದಂತೆ
ಜನರೀತಿಯಂತೆಯೆ ನೆಲದ ಕಡೆ
ನಿಮ್ಮೆದೆ ಕರಗಿದರೆ ನನಗೆ ನೀರೆರೆವುದು."

ಜೀವನದ ಅನುಭವಗಳ ರಸವುಂಡು ಹಾಡಿದ ಕವಿ, ನಿಸರ್ಗದ ನಾನಾ ರೂಪಗಳಿಗೆ ಮನಸೋತಿದ್ದಾರೆ. ಅದರ ವೈವಿಧ್ಯ, ಚೆಲುವನ್ನು ಬಣ್ಣಿಸುವಾಗಲೂ ಬೇಂದ್ರೆಯವರ ಕಲ್ಪಕಶಕ್ತಿಯ ಸಾಹಿನ್ಯತೆಯು ಮತ್ತು ಭವ್ಯತೆಯ ಅರಿವಾಗದಿರದು. ಬೆಳಗಿನ ವರ್ಣನೆಯಲ್ಲಿ, 'ಗಿಡಗಂಟೆಗಳ ಕೊರಳೊಳಗಿಂದ ಹಕ್ಕಿಗಳ ಹಾಡು ಹೊರಟಿತು, ಎಂದು ಹೇಳಿದರೆ,

ಬ್ಯಾಸಿಗಿ ಹೊಡದ್ವಾದ ಬಿಸಿಲಿನ ಡೇರೆ
ಮಧ್ಯಾಹ್ನದ ಪಾಹರೆ
ಯಾರಿಗಿಲ್ಲ ಹ್ವಾರೆ
ಸದ್ದು ಸುಳಿವು ಇಲ್ಲ ಬ್ಯಾರೆ."

ಎಂದು ಬೇಸಿಗೆಯ ಮಧ್ಯಾಹ್ನದ ಪ್ರಖರತೆಯನ್ನು ಚಿತ್ರಿಸಿದ್ದಾರೆ.

ಸಂಜೆಯ ಚೆಲುವು ಬೇಂದ್ರೆಯವರ ಕಲ್ಪನೆಯ ಮೂಸೆಯಲ್ಲಿ ಅನೇಕ ರೂಪಗಳನ್ನು ಪಡೆದಿದೆ. ಚಿತ್ತಿಯ ಮಳೆಯ ನಂತರದ ಸಂಜೆಯಲ್ಲಿ,

ಪಡುವಲಕ ಮುಗಿದ ಕಿರಣ
ಮೂಡಲಕ ಚಿಮ್ಮಿಕೊಂಡು
ಅರಿಷಿಣ ಕುಂಕುಮ ತಂದು

ಮರದ್ಹಣಿಗೆ ಹಚ್ಯಾವ
ಸಂಜಿ ಸೂರ್ಯನ ಹೆಗಲ
ಜರದ ಸೆಲ್ಲೇದ ಸೋಗಿ—
ನವಿಲಗೊರಳಿನ ಮುಗಿಲ
ಸೆರಗ ಬೀಸ್ಯಾವ

ಈ ಸೊಬಗನ್ನು ಕಂಡಿದ್ದರೆ, ಇನ್ನೊಂದೆಡೆಗೆ,

ಶಿವನುಂಡ ನಂಜು ತಿಳಿಗೊಂಡ ಮಂಜು
ಮಂಜಾಗಿದೆ ಈ ಸಂಜೆಗೆ

ಇದು ಉಷಾಮಿಷದ ಪೊಸನೇಹ ಸೇರಿ

ಕಳೆ ಏರಿದೆ ಹುರಿಮಂಜಿಗೆ

ಎಂದಿದ್ದಾರೆ.

ಬೆಳದಿಂಗಳ ರಾತ್ರಿ, ಯಾವ ಕವಿಯ ಮನವನ್ನು ಸೂರೆಗೊಂಡಿಲ್ಲ? ಆದರೆ ಬೇಂದ್ರೆಯವರು 'ಬೆಳದಿಂಗಳಲ್ಲಿ' ತಮ್ಮ ಕಲ್ಪನೆಯ ವಿಸ್ತಾರವನ್ನು ತೋರಿದ್ದಾರೆ:

ಮದುಮಗಳ ಕಣ್ಣಿನ್ಹಾಂಗ ಬಗಿ
ಚಂದಿರನ ನಗಿ
ಸುತ್ತು ಹರಿದ್ಹಾಂಗದ
ಕಂಡವರ ಬಾಳು ಮರಿಸ್ಯಾಂಗದ

ಎನ್ನುವಲ್ಲಿ, ಚಂದಿರನ ಮುಗ್ಧ ಮನೋಹರ ರೂಪದ ವರ್ಣನೆಯಿದೆ. ನಾಚಿ, ಹೆಚ್ಚು ಮೋಹಕವಾದ ಮದುಮಗಳ ಮನಸೆಳೆಯುವ ಆಕರ್ಷತೆ ಚಂದಿರನಲ್ಲಿ ಕಲ್ಪಿಸಿದುದು ಹೊಸತನ. ಬ್ಯಾಸಿಗೆಯ ಬಿಸಿಲು ಬಿಸಿಲಿನ ಡೇರೆಯಾದರೆ, ಬೆಳುದಿಂಗಳು ತುಪ್ಪಳದ ಗೂಡು ಎನ್ನುತ್ತಾರೆ. ಬೆಳದಿಂಗಳ ಸ್ನಿಗ್ಧ ಮನೋಹರತೆಯನ್ನು ಕವಿ, ಹಣ್ಣಾದ ಬಿಸಿಲ ಬಣ್ಣನ ಕಳಿತು ಬೆಳುದಿಂಗಳಾತೊ ಏನೊ? ಎಂದಿದ್ದಾರೆ. ಹಣ್ಣಾದ ಮೇಲೆ ಆ ಪ್ರಖರತೆ ಮಾಯವಾಗಿದೆ. ಬಣ್ಣ ಬಂದಿದೆ, ಅದರ ಜೊತೆಗೆ ಸವಿಯೂ ಮೂಡಿದೆ. ಇದು ಎಲ್ಲದರಲ್ಲಿಯೂ ಸರಿಯಷ್ಟೆ? ಪಕ್ವತೆ ಮೂಡಿದ ಮೇಲೆ ಪ್ರಖರತೆ ಉಳಿಯದು. ಮಾಧುರ್ಯ ತಲೆದೋರುವುದು.

ದವನದ ಹುಣ್ಣಿವೆಯು ಮುಂದಿನ ನಿರಭ್ರಆಕಾಶ, ಕವಿಯ ಮನಕ್ಕೆ ತಟ್ಟಿ ಭವ್ಯ ಕಲ್ಪನೆಯನ್ನು ಕುದುರಿಸಿದೆ. ಕವಿಯ ಸಂಸ್ಕಾರ, ಸಾಧನೆಯ ಜೊತೆಗೆ, ಪ್ರತಿಭೆಯ ಮಿಂಚು ಮೂಡಿ ಮಾಯವಾದಾಗ ಮೂಡುವ ಕಲ್ಪನೆಯ ಭವ್ಯತೆಯನ್ನು ಸಾಮಾನ್ಯರು ತಿಳಿದುಕೊಳ್ಳುವುದಕ್ಕೂ ಕಷ್ಟವಾಗುತ್ತದೆ. ಅಂತೆಯೇ ಬೇಂದ್ರೆಯವರ ಪದ್ಯಗಳು ಜಟಿಲವಾಗುತ್ತವೆ ಎನ್ನುವ ಕೂಗು ಅಲ್ಲಲ್ಲಿ ಕೇಳಿ ಬರುತ್ತದೆ. ಅವರ ಸತತಾಭ್ಯಾಸದ ಜೊತೆಗೆ, ಚಿಂತನ — ಮನನದಿಂದ ಭವ್ಯ ಕಲ್ಪನೆ ಮೈದೋರುತ್ತದೆ. ಸಹೃದಯರು ಅದನ್ನು ಸಹಾನುಭೂತಿಯಿಂದ ಅರ್ಥ ಮಾಡಿಕೊಂಡರೆ ಮಹಾಕಾವ್ಯದ ಆನಂದ ಅವರಿಗೂ ಲಭಿಸೀತು. ದವನದ ಹುಣ್ಣಿವೆಯ ಬೆಳಕನ್ನು ಕಂಡು ಕವಿ,

ಆಕಾಶ ಅನಸತದ ಗುಡಿಯ ಹಾಂಗ ಪ್ರಕಾಶ ಮಹಾಲಿಂಗ
ನೆಲ ಅಗಲ ಪೀಠದಂಗ—

ಇದು ಕವಿಯ ಕಲ್ಪನೆಯನ್ನು ಮಾತ್ರವಲ್ಲ ದರ್ಶನವನ್ನು ಸೂಚಿಸುತ್ತದೆ.

ಶ್ರಾವಣಮಾಸ ಕವಿಯ ಅಚ್ಚುಮೆಚ್ಚಿನ ತಿಂಗಳು. ಶ್ರಾವಣದ ಚೆಲುವನ್ನು ಕವಿ ನೂರೊಂದು ಬಗೆಯಾಗಿ ಕಂಡು ಬಣ್ಣಿಸಿದ್ದಾರೆ.

'ಮಳೆಯ ಬಿಲ್ಲು ಮುರಿದು ಹತ್ತು ಕಡೆಗೆ ಹಂಚಿದಂತೆ ಹುಲ್ಲು ಕಸ, ಎಲ್ಲ ಎಲ್ಲ ಬಣ್ಣ ಪಡೆದು ನಿಂತಿವೆ. ಮಣ್ಣು ಹುಡಿಯ ಕಣಕಣವೂ ಕಣ್ಣ ಪಡೆದಂತಿದೆ, ಎಂದು ಶ್ರಾವಣದ ಸೊಬಗನ್ನು ಬಣ್ಣಿಸಿದ್ದಾರೆ; ಹೂವು, ಮತ್ತು ಚಿಟ್ಟೆಗಳ ಸಮೃದ್ಧಿಯನ್ನು ಶ್ರಾವಣದಲ್ಲಿ ಕಂಡ ಕವಿ,

ಹೂವು ಪಕಳೆ ಪ್ರಾಣ ತುಂಬಿ
ಚಿಟ್ಟೆಯಾಗಿ ಕಾಂಬವೊ।
ಕುಣಿದು ದಣಿದ ಚಿಟ್ಟೆ ಪಕ್ಕ
ಹೂವು ಎನಿಸಿಕೊಂಬವೊ।

ಎಂದು ಆಶ್ಚರ್ಯವನ್ನು ವ್ಯಕ್ತಮಾಡಿದ್ದಾರೆ.

ಕವಿಯ ಕಣ್ಣಿಗೆ, ಶ್ರಾವಣ ಒಬ್ಬ ತುಂಟ ಹುಡುಗನಾಗಿ ಕಂಡಿದ್ದಾನೆ. ಅವನ ಬರವಿಗಾಗಿ, ಭೂಮಿತಾಯಿ ಬಿಸಿಲಹಣ್ಣು ಉಂಡಳಂತೆ, ತಂದೆ ಮುಗಿಲ-ರಾಯನಾದರೊ, ಕಣ್ಣು ಕೆನ್ನೆ ತೋಯಿಸಿಕೊಂಡನಂತೆ. ಈ ಶ್ರಾವಣ ಮಗುವಿನ ಚೆಲುವಿಕೆಯೂ ವೈಶಿಷ್ಟಪೂರ್ಣವಾದುದು. ಕವಿಯ ಮಾತಿನಲ್ಲಿಯೇ ಅವನ ಬಣ್ಣನೆಯನ್ನು ಕೇಳಿರಿ,

" ಗುಳ್ಳಗಂಜಿಯ ತೊಡವ ತೊಟ್ಟು ಹಾವಸೆಯ ಉಡುಪನುಟ್ಟು ನಗುವ ತುಟಿಯು ನೆನೆದ ಎವೆಯು ತರಳ ಶ್ರಾವಣನಂತೆ." ಶ್ರಾವಣಮಾಸವೆಂದರೆ ಚರಾಚರರಿಗೂ ಹಬ್ಬದಮಾಸ. ಅಂತೆಯೆ,

" ಬೆಟ್ಟ ತೊಟ್ಟಾವ ಕುತನಿಯ ಅಂಗಿ ಹಸಿರು ನೋಡ ತಂಗಿ, ಹೊರಟಾ- ವೆಲ್ಲೊ ಜಂಗಿ ಜಾತ್ರಿಗೇನೋ, ನೆರದ್ವದ ಇಲ್ಲೆ ತಾನೋ ‖ " ಎಂದು ನಿಸರ್ಗದ ಚೆಲುವನ್ನು ಜನರ ಹುಮ್ಮಸಕ್ಕೆ ಹೋಲಿಸಿದ್ದಾರೆ.

ಬೇಂದ್ರೆಯವರ ಅನಂತಪ್ರಣಯ, ಅವರ ಭವ್ಯಕಲ್ಪನೆಯ ಸುಂದರ ನಿದರ್ಶನ.

ಪ್ರಖರತೆಯಿಂದ ಕೂಡಿದ ಸೂರ್ಯ ಗಂಡಾಗಿ, ಸ್ನಿಗ್ಧತೆಯಿಂದ ಕೂಡಿದ ಚಂದ್ರ ಹೆಣ್ಣಾಗಿ, ಅನಂತಕಾಲದಿಂದ ಅವರಲ್ಲಿ ಪ್ರಣಯದಾಟ ನಡೆದಿದೆ ಎನ್ನು ತ್ತಾರೆ. ಸೂರ್ಯನ ಸುತ್ತು ತಿರುಗುವ ಭೂಮಿ ಮತ್ತು ಚಂದ್ರರ ಭೌಗೋಲಿಕ ಸತ್ಯವನ್ನು ಕವಿ, ಕಾವ್ಯದ ಸತ್ಯಕ್ಕೆ ಏರಿಸಿದ್ದಾರೆ. ಚಂದ್ರ, ಸೂರ್ಯನನ್ನು ಸದಾ ರಮಿಸಿದರೂ, ಸೂರ್ಯ-ಚಂದ್ರರ ಯುತಿ ಅಸಾಧ್ಯಎನ್ನುವ ಸತ್ಯವನ್ನು " ಮಿಲ- ನದ ಚಿಹ್ನವು ತೋರದಿದೆ. " ಎಂದು ಹೇಳಿದ್ದಾರೆ. " ಬಂದ್ವದ ಸೂರ್ಯನ ಹೊಳಿ " ಎಂಬ ಪದ್ಯದಲ್ಲಿ ಜ್ಞಾನದ ಅನುಭೂತಿಯನ್ನು ಸಚಿತ್ರವಾಗಿ ಚಿತ್ರಿ ಸಿದ್ದಾರೆ. " ತುಂ, ತುಂ, ತುಂ, ತುಂ, ತುಂಬಿ ಬಂದಿತ್ತ " ಎಂದು ತುಂಬಿ ಪದದ ಅನೇಕ ಅರ್ಥಗಳ ನೆರವಿನಿಂದ ಕಲ್ಪನೆಯ ಗೋಪುರವನ್ನೇ ಕಟ್ಟಿದ್ದಾರೆ.

ಭೂಮಿತಾಯಿಯ ಕ್ಷಮೆ ದಮೆ ನಿತ್ಯನವೀನತೆ, ಬೇಂದ್ರೆಯವರ ಕಲ್ಪನೆಯ ಕುಲುಮೆಯಲ್ಲಿ, ಸುಂದರವಾದ ಕಾವ್ಯವಾಗಿ ಹೊಮ್ಮಿದೆ. ' ಮೊದಲಗಿತ್ತಿಯಂತೆ ಮೆರೆಯುವೆಯೇ ತಾಯಿ ' ಎನ್ನುವಲ್ಲಿ—

" ಹಾಲಿನ ಹೃದಯಕ್ಕೆ ಕುಬ್ಬುಸವನು ತೊಡಿಸಿ
ಹೂ ಮುಡಿಸಿಕೊಂಡೆಂದು ನೀನಲಿವೆಯೆ ?
ಬಸಿರು ತುಂಬಲು ಹಸಿರುಡಿಗೆಯನುಟ್ಟೆಂದು
ವನವಾಸ ನವಮಾಸ ತೀರಿಸುವೆ ? "

ಎಂದು ವರುಷ ವರುಷವೂ ಹೊಸತನವನ್ನು ತೋರುವ ಭೂಮಿಯ ಚೆಲುವನ್ನು ಕಂಡು ಹೇಳಿದ್ದಾರೆ. ಹದಿನಾರು ರಾಜರು ತಲೆಕೆಳಗಾದರು, ಆದರೂ ತಲೆಯೆತ್ತಿ ನಿಂತಿರುವ ಭೂಮಿತಾಯಿಯ ಸಹನೆಯನ್ನು ಕಂಡು " ನಿನ್ನ ತೇಜದ ಮುಂದೆ ರಾಜತೇಜವು ಕೂಸು " ಎನ್ನುತ್ತಾರೆ.

ಸಖೀಗೀತದಲ್ಲಿ ಬರುವ ಋತುಗಳ ವರ್ಣನೆಯಲ್ಲಿ ಸುಂದರವಾದ ಕಲ್ಪನೆ ಕಂಡು ಬರುತ್ತದೆ. “ಮೃಗಶಿರದ ಮುಂಚಕೆ ಚಂದಿರ ಬರುವಾಗ ಚಂದ್ರಿಕೆಯು ವಾತ್ಸಲ್ಯ ತೋರೆಬಿಟ್ಟಿತು.” ಎಂದು ಹೇಳಿದರೆ, “ಕಾಲ್ಬಿದ್ದು ಕೈಹಿಡಿದು ಮುತ್ತಿಟ್ಟು ಮುಗಿಬಿದ್ದು ಮೈಏರಿ ಮೈಹೊಕ್ಕು ಮಾಗಿ ಬರೆ” ಎನ್ನುತ್ತಾರೆ.

“ದಿನವೂ ಸಂಜೆಗೆ ಬೆವರಿನ ಜಳಕ
ಉಸುರಿನ ಕೂಳಿಗೆ, ಕಂಬನಿನೀರು,
ಎದೆಯ ಗೂಡಿನೊಳು ಚಿಂತೆಯ ಗೂಗಿ
ಮಿದುಳಿನ ಮೂಲೆಗೆ ಲೊಟ ಲೊಟ ಹಲ್ಲಿ
ಮೋರೆಯು ಸಾವನು ಅಣುಕಿಸುತಿಹುದು
ಕೊರಳಿಗೆ ಸಾಲದ ಶೂಲವು ಬೇರೆ.”

ಎಂದು ಭೂಮಿತಾಯಿಯ ಚೊಚ್ಚಿಲ ಮಗನ ಚಿತ್ರ ಬೇಂದ್ರೆಯವರ ಕಲ್ಪನೆಯ ಚಾತುರ್ಯದಲ್ಲಿ ಸುಸ್ಪಷ್ಟತೆಯನ್ನು ಪಡೆದು ಯಾರ ಕರುಳನ್ನಾದರೂ ಮಿಡಿಯುತ್ತದೆ. ಅಂತೇ ರೊಚ್ಚಿಗೆದ್ದ ಕವಿಯ ಮನ,

“ದೇವರದೊಂದು ಗೋರಿಯ ಕಟ್ಟಿ
ಧರ್ಮದ ಧೂಪಕೆ ಬೆಂಕಿಯನಿಕ್ಕಿ”

ಜಗತ್ತನ್ನೆಲ್ಲ ಸುತ್ತುವೆನೆಂದು ಬಡವರ—ಬಗ್ಗರ ತುತ್ತಿನ ಚೀಲದ ಒಳಗಿನ ಒಳಗಿನ ಧ್ವನಿ ಗರ್ಜಿಸುತ್ತಿತ್ತು ಎನ್ನುತ್ತದೆ. ಕುರುಡು ಕಾಂಚಾಣದ ರೂಪವನ್ನು ಕೊಡುವಾಗ, ಬೇಂದ್ರೆಯವರ ಚಿತ್ರಕಶಕ್ತಿಯ ಅಗಾಧತೆ ಸುಸ್ಪಷ್ಟವಾಗುತ್ತದೆ. “ಬಡವರ ಒಡಲಿನ ಬಡಬಾನಲದಲ್ಲಿ ಸುಡು ಸುಡು ಪಂಜು ಅದರ ಕೈಯೊಳಗಿತ್ತು” ಕೂಲಿ ಕುಂಬಳಿಯವರ ಪಾಲಿನ ಮೈದೊಗಲ ಧೂಳಿಯ ಭಂಡಾರ ಹಣೆಯೊಳಗಿತ್ತೆಂದು ಹೇಳುತ್ತಾರೆ.

ಬುದ್ಧಿಗಮ್ಯವಾದ ಕೆಲವು ವಿಷಯಗಳಿಗೆ ತಮ್ಮ ಕಲ್ಪಕತೆಯಿಂದ ಬೇಂದ್ರೆಯವರು ಮೂರ್ತಸ್ವರೂಪವನ್ನು ಕೊಟ್ಟಿದ್ದಾರೆ. ಕವಿಯ ಪ್ರತಿಭೆಯ ಶಕ್ತಿಯಿಂದ ಕಾಲದಂತಹ ಅಮೂರ್ತವಾದ ವಿಷಯವೂ ಸುಂದರ, ಭವ್ಯವಾದ ಹಕ್ಕಿಯಾಗಿ ಜೀವಂತ ಕಳೆಯಿಂದ ಹಾರಿವೆ. ಇವರ ಕಲ್ಪನೆಯ ಭವ್ಯತೆಯಿಂದ “ಮುಗಿಲಿಗೆ ರೆಕ್ಕೆಗಳು ಒಡೆದಿವೆ” ಎವೆ ತೆರೆದಿಕ್ಕುವ ಹೊತ್ತಿನ ಒಳಗೆ ಗಾವುದ ಗಾವುದ ಗಾವುದ ಮುಂದೆ ಹೋಗುವ ಹಕ್ಕಿ ನಿರ್ವಾಣವಾಯಿತು. ನೆಲವೆಲ್ಲ ನೀರಾಗಿದೆ” ಎನ್ನುವಲ್ಲಿ, ಬಾಳನ್ನು ಹೀನಿಗೆ ಹೋಲಿಸಿ “ನೆಲವೆಲ್ಲ ನೀರಾಗಿ

ಬಾನಗಲದ ಕಡಲಾಳದ ಒಂದೇ ಮೀನಕ್ಕೆ ಆನಂದದ ರೆಕ್ಕೆಗಳೊಡೆದವು"
ಎಂದಿದ್ದಾರೆ.

ಬೇಂದ್ರೆಯವರ ಕಲ್ಪನಾಶಕ್ತಿ ಕೆಲವು ಕಟ್ಟುಕತೆಗಳನ್ನು ನಿರ್ಮಿಸಿದೆ. ಹೂ, ಕಾಮೋದೆ, ಚಿಂತೆ, ಸಿಟ್ಟು-ಸಾಂತಿ ಮೊದಲಾದ ಪದ್ಯಗಳಲ್ಲಿ ಇದನ್ನು ಕಾಣುತ್ತೇವೆ. ಬ್ರಹ್ಮನು ಸೃಷ್ಟಿನಿರ್ಮಾಣದಲ್ಲಿ ತಲ್ಲೀನನಾದಾಗ ಫುಃ ಎಂದು ಅವನು ಬಿಟ್ಟ ಉಸಿರೇ, ನೆಲದ ಬಸಿರಲಿ ಬೆಳೆದು ನನೆಯಾಗಿ, ಮೊನೆಯಾಗಿ, ಮುಗುಳಾಗಿ, ಅರಳಾಗಿ ಮತ್ತೆ ಹೂ ಎಂಬ ಹೆಸರನ್ನು ಪಡೆಯಿತಂತೆ. ಪ್ರಳಯದ ಬಸಿರಿನೊಳಗಿಂದ ಹೊರಟ ಸಾಂತಿಯ ರೂಪ ಭಯಾನಕವಾಗಿದೆ.

"ಕುಣಿ ಮಣ್ಣು ಕೊಟ್ಟವು ಮಾಡಲು ನಿನ್ನ
ಚಿತೆ ಬೆಂಕಿಯಿಕ್ಕಿತು ಅದೆ ನಿನ್ನ ಬಣ್ಣ
ಗೋರಿಯ ಹೂಗಳು ಆದವು ಕಣ್ಣು
ಹುಟ್ಟಿದೆ ಜಗದೊಳಗೆ ನೀ ಹೊಸ ಹೆಣ್ಣು"

ಎಂದಿದ್ದಾರೆ.

ಸ್ವಪ್ನನೌಕೆಯಲ್ಲಿ ಬರುವ ದೇವನ ವರ್ಣನೆಯಲ್ಲಿಯ ದಿವ್ಯತೆಯ ಕಲ್ಪನೆ ಒಂದೊಂದು ಶಬ್ದದಿಂದಲೂ ಸುಸ್ಪಷ್ಟವಾಗಿದೆ.

"ಕುಬ್ಬೋ ಅನಂಗನು ಚಿತೆಯಲಿ ಮಣಿಸಿದ ಕಬ್ಬೋ
ಆಹಾ ಈ ಕಾಯಾ ಹಿರಣ್ಯಾಽಽಗರ್ಭಚ್ಛಾಯಾ ಆಕೃತಿ ಬಂಧಾ
ಮೌನಾ ಕರಗಿಸಿ ಎರೆದಾ ಸೆಳೆಮಿಂಚಿನ ತೆರೆದಾ"

ಎಂದು ಹೇಳಿದ್ದಾರೆ.

ಸಾಧನೆಯ ಮಾರ್ಗದಲ್ಲಿ ಬೇರೆ ಬೇರೆ ಹಂತಗಳಲ್ಲಿ ಪಡೆಯುವ ಬೇಂದ್ರೆಯವರ ಅನುಭವಗಳು ಕೇವಲ ಮಾತಿನ ಮುಂಡಿಗೆಯಾಗದೆ, ಅವರ ಕಲ್ಪನಾ ಸಂಪತ್ತಿಯ ಸಹಾಯದಿಂದ ರಸವತ್ತಾದ ಕಾವ್ಯವಾಗಿದೆ. 'ಹೃದಯ ಸಮುದ್ರ'ದ ನೀರು ಬಂಗಾರ ನೀರಂತೆ, ಅದರ ಆಚೆಗೀಚೆಯ ತೀರ ನೀಲ ನೀಲವಂತೆ.

ಇದು ಉಪ್ಪುನೀರ ಕಡಲಲ್ಲೊ ನಮ್ಮ ಒಡಲಲ್ಲು ಇದರ ನೆಲೆಯು
ಕಂಡವರಿಗಲ್ಲೊ ಕಂಡವರಿಗಷ್ಟೆ ತಿಳಿದ್ವದ ಇದರ ಬೆಲೆಯು

ಎಂದಿದ್ದಾರೆ.

"ಎವೆಯನಿಕ್ಕಿ ಕಣ್ಮುಂದೆ ಕಂಡೆ ನಾ ರವಿಯ ತೇಜದಾಟ
ಬಣ್ಣ ಬಣ್ಣದಾಕೃತಿಗಳಲ್ಲಿ ಕುಣಿಕುಣಿವ ಜೋಡಿ ಮಾಟ
ಏಳು ಬಣ್ಣ ಉರುಳುರುಳಿ ಉರುಳಿಯಾದಂತೆ ತಿರುಗುತಿಹುದು;
ಇಂದ್ರಚಾಪವನೆ ತಂತಿಮಾಡಿ ಹೆಣೆದಂತೆ ಮರಳಿ ಬಹವು"

ಎಂದು ಚಿತ್‌ದಂತಹ ಅಮೂರ್ತವಾದುದರ ಪ್ರಕಾಶದ ತೇಜಕ್ಕೆ ಹಿಗ್ಗಿದ ಕವಿ ಹಾಡಿದ ರೀತಿಯನ್ನು ಕಂಡಾಗ ಅವರ ಕಲ್ಪನಾವಿಲಾಸದ ಮಹತಿಯು ಅರಿವಾಗುತ್ತದೆ.

ಬೇಂದ್ರೆಯವರ ಜೀವಕ್ಕೆ ತಾಯಿಯ ಸ್ಪರ್ಶ ಅನಂತವಾದ ಆನಂದವನ್ನು ಕೊಡುತ್ತದೆ. ಪಡೆದ ತಾಯಿಯ ಮೇಲಿನ ಪ್ರೀತಿ ಭಕ್ತಿಗಳೇ ಬೆಳೆದು ವಿಸ್ತಾರ ಪಡೆದು ಜಗದಗಲ ಹಬ್ಬಿನಿಂತಿವೆ ಬೇಂದ್ರೆಯವರ ಕಲ್ಪನೆಯಲ್ಲಿ. ಶ್ರೀ ಮಾತೆಯವರಂತೂ ಇವರ ಬಾಳಿಗೆ ಬೆಳಕನ್ನು ನೀಡಿದವರು. ಅಂತೆಯೇ—

ಸಾವಿನೊಂದು ಪೊರೆಯ ತೊರೆವ ಜೀವ ಮರೆಯುವಂತೆಯೇ
ನೋವು ಗೀವು ಸುಳ್ಳು ಎನಿಸಿ ಹಿಗ್ಗು ಹರಿಯುವಂತೆಯೆ
ಇರುವಿನೊಂದು ಸುಳಿಯ ಒಳಗೆ ಬೇರೆ ಸಿರಿಯ ತೆರೆವುದು
ಇಲ್ಲವೆನಿಸಿದೊಂದು ಬಾಳ ಅಹುದೆನುವೊಲು ಕರೆವುದು

ಎಂದು ತಾಯನಗೆಯನ್ನು ಬಣ್ಣಿಸಿದರೆ,

ನಿನ್ನಿಂದ ಬಂದೆ ನಿನ್ನಲ್ಲಿ ಬೆಳೆವೆ ನಿನ್ನೊಳಗೆ ಸಾಗುವಂತೆ
ತಾ ಹೊತ್ತಲೆಂದು ಬಂದಂಥ ಬತ್ತಿ ದೀಪಕ್ಕೆ ಬಾಗುವಂತೆ.

ಎಂದು ತಾಯಿಯವರಿಗೆ ಬಾಗುವುದಾಗಿ ಹೇಳಿದ್ದಾರೆ.

ಹೀಗೆ ನಿಸರ್ಗಸೌಂದರ್ಯದ ವೈವಿಧ್ಯತೆಯನ್ನು, ಬಾಳಿನ ಅನುಭವದ ಆಳವನ್ನು, ತತ್ತ್ವಚಿಂತನದ ಹಂತ ಹಂತಗಳಲ್ಲಿಯ ಅನುಭವದ ಚೆಲುವನ್ನು ಕಲ್ಪನಾರಮ್ಯವಾದ ಕಾವ್ಯವನ್ನು ರಚಿಸುವುದಕ್ಕೆ ಬೇಂದ್ರೆಯವರ ಪ್ರತಿಭೆ ಅಕ್ಷಯಪಾತ್ರೆಯಾಗಿದೆ. ಇಂದ್ರಿಯಗಮ್ಯವಾದ ಚೆಲುವನ್ನು ಚಿತ್ರಿಸುವಂತೆ, ಮನಕ್ಕೆ-ಬುದ್ಧಿಗೆ ತಟ್ಟಿದ ವಿಷಯಗಳನ್ನು ಬೇಂದ್ರೆಯವರು ತಮ್ಮ ಕಲ್ಪನೆಯ ಮೂಸೆಯಲ್ಲಿ ಕಾವ್ಯವಾಗಿಸಿದ್ದಾರೆ. ಅವರ ಒಂದೊಂದು ಪದ್ಯದಲ್ಲಿಯೂ ಅವರ ಕಲ್ಪನಾವಿಲಾಸದ ವೈಖರಿ ಕಂಡು ಬರುತ್ತದೆ. ಅಂತೆಯೇ,

ಎಷ್ಟು ಹೋಲಿಕೆಯನು ಕೊಟ್ಟು
ಹೊಗಳಿ ಮನವು ತಣಿಯದು
ರೂಪಗಳಿಗೆ ಚಿತ್ರಗಳಿಗೆ
ಉಪಮೆಗಳಿಗೆ ಗಣಿಯದು

ಎಂದು ಅವರು ಶ್ರಾವಣದ ವೈಭವಕ್ಕೆ ಹೇಳಿದಮಾತು ಅವರ ಕಲ್ಪನಾಸಂಪತ್ತಿಗೂ ಅನ್ವಯಿಸುತ್ತದೆ.

§ § § §

೨೯

# ಬೇಂದ್ರೆಯವರ ಕಾವ್ಯದಲ್ಲಿ ಅರವಿಂದರ ದರ್ಶನ

ಚಿ. ನ. ಮಂಗಳಾ

ಭಾರತ ಮಾತೆಯ ಬಂಧವಿಮೋಚನೆಗಾಗಿ ಬದ್ಧ ಕಂಕಣರಾಗಿ, ನಿಸ್ತೇಜವಾಗಿದ್ದ ಭಾರತೀಯ ಜನಾಂಗವನ್ನು ಸಚೇತನಗೊಳಿಸಿ, ನಾಡ ಜನರ ನಾಡಿಯನ್ನು ಮಿಡಿದು, ಭಾರತೀಯತೆಯ ಜ್ಯೋತಿಯನ್ನು ಉದ್ದೀಪನಗೊಳಿಸಿದ ಭಾರತದ ದಿವ್ಯ ಚೇತನಗಳಲ್ಲಿ ಶ್ರೀ ಅರವಿಂದರೂ ಒಬ್ಬರು. ಬಂಗಾಳವು ಅನೇಕ ಕರ್ಮಯೋಗಿಗಳ, ವೀರ ಯೋಧರ, ಭಕ್ತ ಶ್ರೇಷ್ಠರ, ದಾರ್ಶನಿಕರ, ತತ್ತ್ವಜ್ಞಾನಿಗಳ, ಕವಿವರೇಣ್ಯರ, ಕಲಾವಿದರ, ಜ್ಞಾನಯೋಗಿಗಳ, ತವರಾಗಿದೆ. ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ, ಗುರುದೇವ ಟಾಗೋರ್, ಸರೋಜಿನಿ ನಾಯಡು, ಸುಭಾಷ್ ಚಂದ್ರ ಭೋಸ್, ಶ್ರೀ ಅರವಿಂದ ಘೋಷ್–ಇದು ಬಂಗಾಳದ ಭವ್ಯ ಪರಂಪರೆ. ಇಲ್ಲಿ ಭಾರತೀಯ ವಿಶ್ವವ್ಯಾಪಿ ಶಕ್ತಿಯ, ವಿಶ್ವಪಾಲಕ ಶಕ್ತಿಯ, ವಿಶ್ವಚಾಲಕ ಶಕ್ತಿಯ ಆವಿರ್ಭಾವವಾಗಿದೆ; ಭಾರತೀಯ ತೇಜಸ್ಸಿನ ಆವಿಷ್ಕಾರವಾಗಿದೆ.

ಶ್ರೀ ಅರವಿಂದರ ಮೂರ್ತೀಭವಿಸಿದ ಶಕ್ತಿ ನಮ್ಮ ನಾಡನ್ನಷ್ಟೇ ಅಲ್ಲದೆ ಮನುಕುಲವನ್ನೇ ಎತ್ತಬಲ್ಲ ಶಕ್ತಿ, ಉಳಿಸಬಲ್ಲ ಶಕ್ತಿ, ಬೆಳೆಸಬಲ್ಲ ಶಕ್ತಿ. ಈ ಶಕ್ತಿ ಭಾರತೀಯರನೇಕರ ಪ್ರೇರಕ ಶಕ್ತಿಯಾಗಿದೆ. ಬಾಳಿನ ರಕ್ಷೆಯಾಗಿದೆ. ಭವಿತವ್ಯದ ದಿಕ್‌ಸೂಚಿಯಾಗಿದೆ. ಪಾಂಡಿಚೇರಿಯಲ್ಲಿ ಬೃಹದಾಕಾರವಾಗಿ ಬೆಳೆದ ಶ್ರೀ ಅರವಿಂದಾಶ್ರಮ ಶ್ರೀಮಾತೆಯವರ ಮಾರ್ಗದರ್ಶನದಲ್ಲಿ ವಿಶ್ವಕ್ಕೊಂದು ಮಾದರಿಯಾಯಿತು, ಮಾರ್ಗದರ್ಶಿಯಾಯಿತು.

## ಶ್ರೀ ಅರವಿಂದರ ಜೀವನಸ್ಫೂರ್ತಿ :

ಶ್ರೀ ಅರವಿಂದರು ೧೮೭೨ನೇ ಆಗಸ್ಟ್ ೧೫ ರಂದು ಕಲ್ಕತ್ತೆಯಲ್ಲಿ ಜನ್ಮ ತಾಳಿದರು. ಇಪ್ಪತ್ತೊಂದು ವಯಸ್ಸಿನವರೆಗಿನ ಅವರ ವಿದ್ಯಾಭ್ಯಾಸ ಸಂಪೂರ್ಣ

ಪಾಶ್ಚಾತ್ಯ ವಿದ್ಯಾಭ್ಯಾಸವೇ. ಇಂಗ್ಲೆಂಡಿನಲ್ಲಿ ಹದಿನಾಲ್ಕು ವರ್ಷ ವ್ಯಾಸಂಗ ಮಾಡಿದರು. ಅನೇಕ ಪಾಶ್ಚಾತ್ಯ ಭಾಷೆಗಳನ್ನು ಕಲಿತರು. ಗ್ರೀಕ್, ಲ್ಯಾಟಿನ್, ಸ್ಪ್ಯಾನಿಷ್, ಇಟ್ಯಾಲಿಯನ್, ಫ್ರೆಂಚ್, ಜರ್ಮನ್ ಭಾಷೆಗಳೆಲ್ಲ ಅವರ ಕರಗತ ವಾದವು. ಐ. ಸಿ. ಎಸ್. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಸ್ವದೇಶಕ್ಕೆ ಮರಳಿದರು. ಸರ್ಕಾರದ ಕೆಲಸದಲ್ಲಿ ಅವರು ಅತ್ಯುನ್ನತ ಪದವಿಗೇರಬಹುದಾಗಿತ್ತು. ಆದರೆ ಸ್ವಾತಂತ್ರ್ಯಸಂಗ್ರಾಮದ ಕಹಳೆ ಅವರನ್ನು ಕರೆಯಿತು. ಭಾರತದ ವಿಮೋಚನೆ ಗಾಗಿ ಕಾರ್ಯನಿರತರಾದರು. ಬ್ರಿಟಿಷ್ ದಬ್ಬಾಳಿಕೆಯ ವಿರುದ್ಧ ದೇಶಿಯ ಪತ್ರಿಕೆ ಗಳಲ್ಲಿ ಪ್ರಚೋದಕ ಲೇಖನಗಳನ್ನು ಬರೆದರು.

೧೯೦೫ರಲ್ಲಿ ಬಂಗಾಳದ ವಿಭಜನೆಯಾದಾಗ ಶ್ರೀ ಅರವಿಂದರು ಸ್ವಾತಂತ್ರ್ಯ ಯೋಧರಾಗಿ ಮುನ್ನುಗ್ಗಿದರು. ಕಲ್ಕತ್ತದಲ್ಲಿ ಹೊಸದಾಗಿ ಆರಂಭವಾದ ನ್ಯಾಷನಲ್ ಕಾಲೇಜಿನ ಪ್ರಿನ್ಸಿಪಾಲರಾದರು. ಬಾಲಗಂಗಾಧರ ತಿಲಕರ ಮುಂದಾಳುತನದಲ್ಲಿ ರಾಷ್ಟ್ರೀಯ ಪಕ್ಷ ಕಟ್ಟಿದರು. ದಾಸ್ಯದಿಂದ ಯಾವೊಂದು ದೇಶದ್ದಷ್ಟೇ ಅಲ್ಲದೆ ಇಡೀ ಮನುಕುಲದ ಅವನತಿ ಆಗುತ್ತದೆಂದು ಅವರು ತಿಳಿದರು. ರಾಜಕೀಯ ರಂಗದಲ್ಲಿ ಎಂಟು ವರುಷಕಾಲ ಹೋರಾಡಿದರು. ಕಾರಾಗೃಹಕ್ಕೂ ಹೋದರು; ಕಾರಾಗೃಹ ದಲ್ಲಿದ್ದಾಗ ಅವರಿಗೆ ತಮ್ಮ ಭವಿತವ್ಯದ ಬಗ್ಗೆ ದಿವ್ಯದರ್ಶನವಾಯಿತು. ಅವರು ರಾಜಕೀಯ ರಂಗದ ಕರ್ಮಯೋಗಿಯಾಗುವುದು ಭಗವಂತನ ಸಂಕಲ್ಪವಾಗಿರಲಿಲ್ಲ. ಮಾನವನ ನೈತಿಕ ಹಾಗೂ ತಾತ್ತ್ವಿಕ ವ್ಯಕ್ತಿತ್ವದ ಉನ್ನತಿಗಾಗಿ ಅವರ ಜೀವನ ಮುಡಿಪಾಗಿತ್ತು.

**ಸಾಹಿತ್ಯಸೃಷ್ಟಿ :**

ತಮ್ಮ ಕರ್ತವ್ಯದ ಅರಿವು ಮೂಡುತ್ತಲೇ ಅವರು ೧೯೧೦ ರ ಎಪ್ರಿಲ್ ೪ ರಂದು ಪಾಂಡಿಚೆರಿಗೆ ಬಂದರು. ೧೯೧೪ರ ಮಾರ್ಚ ೨೯ ರಂದು ಶ್ರೀಮಾತೆಯ ಆಗಮನವಾಯಿತು. ಆಶ್ರಮ ಬೆಳೆಯಿತು. ಶ್ರೀ ಅರವಿಂದರ ಸಾಹಿತ್ಯಸೃಷ್ಟಿ ಯಾಯಿತು. ೨೩,೮೧೩ ಸಾಲಿನ ಮಹಾಕಾವ್ಯ 'ಸಾವಿತ್ರಿ'— ಜೀವನದ— ಕಾವ್ಯಚೇತನದ— ಧವಳಗಿರಿ; ಲೇಖನಗಳ, ಕಾವ್ಯವಿಮರ್ಶೆಯ, ದಾರ್ಶನಿಕ ಸಾಹಿತ್ಯದ ಯೋಗಪದ್ಧತಿಯ ಹೊಳೆ ಹರಿಯಿತು. ೧೯೨೬ರಲ್ಲಿ ಶ್ರೀ ಅರವಿಂದರು ಹೊರ ಜಗತ್ತಿನಿಂದ ಸಂಪೂರ್ಣವಾಗಿ ದೂರವಾದರು. ಏಕಾಂತವನ್ನಾಶ್ರಯಿಸಿ ಧ್ಯಾನಾಸಕ್ತರಾದರು. ಭಾರತ ಸ್ವತಂತ್ರವಾಯಿತು. ಭಾರತದ ಸ್ವಾತಂತ್ರ್ಯದ ದಿನ ಅವರ ಹುಟ್ಟು ದಿನವೂ ಹೌದು. ಅವರಿಗೆ ಆನಂದವಾಯಿತು. ಡಿಸೆಂಬರ್ ೫, ೧೯೫೦ ರಂದು ಶ್ರೀ ಅರವಿಂದರು ಮಹಾಸಮಾಧಿಯನ್ನೈದಿದರು.

ಪಾಂಡಿಚೆರಿಯ ಆಶ್ರಮದಲ್ಲಿನ ಅವರ ಸಮಾಧಿ ಸ್ಥಾನ ಇಂದು ಜನಕ್ಕೊಂದು ಧ್ಯಾನಸ್ಥಾನ. ಪ್ರಾರ್ಥನಾಸ್ಥಾನ. ಭಾರತ ಸ್ವತಂತ್ರವಾಗಿ ಒಂದುಗೂಡಿ

ನಿಲ್ಲುವುದೂ, ಏಷ್ಯದ ಜನರ ವಿಮೋಚನೆಯಾಗುವುದೂ, ವಿಶ್ವಬಂಧುತ್ವ ಸ್ಥಾಪನೆಯಾಗುವುದೂ, ವಿಶ್ವಕ್ಕೆ ಭಾರತ ತತ್ತ್ವಜ್ಞಾನವನ್ನು ಕೊಡುಗೆಯಾಗಿ ಕೊಡುವುದೂ, ಮಾನವನ ಆತ್ಮೋನ್ನತಿಯಾಗಿ ಮಾನವನ ಬಾಳಿನಲ್ಲಿ ದೈವಿಕತೆ ಬಂದು ನೆಲೆಸುವುದೂ ಶ್ರೀ ಅರವಿಂದರು ಬಯಸಿದ ಸಾರ್ಥಕ ಸಿದ್ಧಿಗಳು. ಇಡೀ ಮಾನವ ಕುಲ ಒಂದಾಗಿ, ಮೃಗತ್ವದ ನಾಶವಾಗಿ ಮಾನವನಲ್ಲಿ ದೈವೀ ಶಕ್ತಿಯ ಸಂಚಾರವಾಗಿ ಇಹದಲ್ಲಿ ಪರತತ್ತ್ವದ ಪ್ರತಿಷ್ಠಾಪನೆಯಾಗುವುದು ಶ್ರೀ ಅರವಿಂದರ ತತ್ತ್ವ-ಅಂತಃಸತ್ತ್ವ.

**ಶಕ್ತಿಸಂಚಾರ :**

ಕನ್ನಡದ ಹಲವಾರು ಕವಿಗಳ ಬಾಳಿನಲ್ಲಿ ಶ್ರೀ ಅರವಿಂದರ ಶಕ್ತಿಯ ಸಂಚಾರವಾಗಿದೆ. ಶ್ರೀ ಅರವಿಂದರ ಪ್ರಭಾವಕ್ಕೆ ಮಣಿದಿರುವ ಕವಿಗಳಲ್ಲಿ ಶ್ರೀ ಬೇಂದ್ರೆಯವರೂ ಒಬ್ಬರು. ಬೇಂದ್ರೆಯವರ 'ಹೃದಯ ಸಮುದ್ರ' ಕವನ ಸಂಕಲನದಲ್ಲಿನ ಕವನಗಳನ್ನು ಓದಿದ ಯಾರಿಗೇ ಆದರೂ ಬೇಂದ್ರೆಯವರ ಬಾಳ ಪಥದಲ್ಲಿ, ಕಾವ್ಯ ಜೀವನದಲ್ಲಿ ಶ್ರೀ ಅರವಿಂದರ ಹಾಗೂ ಶ್ರೀಮಾತೆಯವರ ಪ್ರಭಾವ ಎಷ್ಟರ ಮಟ್ಟಿನದು ಎಂಬುದು ಅರಿವಾಗುತ್ತದೆ. ಬೇಂದ್ರೇಯವರು ಶ್ರೀ ಅರವಿಂದರನ್ನು ಕುರಿತು, ಶ್ರೀಮಾತೆಯವರನ್ನು ಕುರಿತು ಹಲವಾರು ಕವನಗಳನ್ನು ಬರೆದಿದ್ದಾರೆ.

'ಹೃದಯಸಮುದ್ರ'. 'ಶ್ರೀ ಅರವಿಂದರಿಗೆ', 'ಶ್ರೀಗುರುವೆ', 'ನಾನಲೆಯುತಿದ್ದೆ', 'ಶ್ರೀ ಗುರು–ಕರುಣಚರಣ', 'ಅರವಿಂದನಾಭನ ಪಾದಾರವಿಂದಕ್ಕೆ', 'ಚಿತ್ತಭಿತ್ತಿಯ ಚಿತ್ರ', 'ಗುರು ನೆನೆದರೆ', 'ಮಹಾಪ್ರಸ್ಥಾನ', 'ಶ್ರೀಮಾತೆಗೆ', 'ದಿ ಮದರ್', 'ಶ್ರೀ ಮಾತೃಶ್ರೀಗೆ'. 'ಹೃಜ್ಜಾತೇ-ಚಿನ್ಮಾತೇ', 'ಒಂದು–ಹಲವು', 'ಗಿರಿ ಶಿಖರ' ಇವೇ ಮುಂತಾದ ಕವನಗಳಲ್ಲಿ ಶ್ರೀ ಅರವಿಂದರ, ಶ್ರೀಮಾತೆಯವರ ದರ್ಶನವಾಗುತ್ತದೆ.

ಶ್ರೀ ಅರವಿಂದರ ಹೃದಯಾರವಿಂದದಲ್ಲಿ ಮೂರ್ತಗೊಂಡ ಸಿಂಹಶಕ್ತಿ, ಭಾರತದ ಸ್ವಾತಂತ್ರ್ಯಶಕ್ತಿ, ನಾಳಿನ ಜಗತ್ತನ್ನೂ ಜೀವಿಗಳನ್ನೂ ರೂಪಿಸುವ ಶಕ್ತಿ ಎಂಬುದು ಕವಿಯ ನಿಶ್ಚಲ ನಂಬಿಕೆ. ಆ ನಂಬಿಕೆಯೇ ಭಾವವಾಗಿ, ಉಕ್ತಿ ಹಾಡಾಗಿ ಹರಿದು ಒಂದು ಪ್ರಾರ್ಥನಾಗೀತೆಯಾಗಿದೆ. ಅದೇ 'ಹೃಜ್ಜಾತೇ ಚಿನ್ಮಾತೇ.' ಶ್ರೀ ಅರವಿಂದರ ಹೃದಯದಲ್ಲಿ ಹುಟ್ಟಿರುವ ಶಕ್ತಿ ಚಿನ್ಮಾತೆಯ ಶಕ್ತಿ, ಭಾರತದ ನವ ಶಕ್ತಿ. ಇವೇ ಪರಮಾತ್ಮ. ಭಾರತೀಯರೆಲ್ಲರ ಆತ್ಮ. ಈ ಆತ್ಮಕ್ಕೆ ಅದರ ಶಕ್ತಿಗೆ ಭಕ್ತಿಪೂರ್ವಕವಾಗಿ ಮಣಿಯಬೇಕು ನಾವು. ಮಂಗಳಮಯ ಶುಭೋದಯದ, ಹೊಸ ಅಭಯದ ಸ್ವಾತಂತ್ರ್ಯದ ದಿನ ಶ್ರೀ ಅರವಿಂದರ ಜನ್ಮದಿನ

ಅವರ ಹೃದಯದಿಂದ ಹೊರಹೊಮ್ಮಿದ ಶಕ್ತಿಯಾದರೋ ಮಾತೆಯ ಮಂತ್ರೋಕ್ತಿ. ಈ ಮಂತ್ರದ ಶಕ್ತಿ ನಾಡಿನ ಆತ್ಮವನ್ನು ತೆರೆಸುವ ಶಕ್ತಿ.

> " ಅನುಗಾಲವು ಹಿರಿಗುರಿಯಲಿ ಭರವಸೆ ಬರುವಂತೆ
> ನಿನ್ನಾತ್ಮದ ಒಳು ಮೂರ್ತಿಯ ಮೂಡಿಸುತಿರುವಂತೆ
> ಜನ ಜನಕೂ ಗೆಳೆ— ನಾಡಿದು ಆತ್ಮವ ತೆರೆವಂತೆ
> ನಡೆ ನಡಿಸೌ ನುಡಿ ನುಡಿಸೌ ಮಾತೆಯ ಮಂತ್ರೋಕ್ತಿ
> ಅರವಿಂದರ ಹೃಜ್ಜ್ಯೋತೀ ಋತ ತಂತ್ರದ ಯುಕ್ತೀ ! "

**ಬಾನಿನ ಕಣ್ಣು :**

ಶ್ರೀ ಅರವಿಂದರೋ ಬಾನಿನ ಕಣ್ಣು. ಅವರ ಒಳಗಿದೆ ವಿಶ್ವದ ಇಡಿಯ ಗುಟ್ಟು.

> ಕಣ್ಣಿವೆ ಚಾಟಿಗೆ ಕಟ್ಟದೆ ಆನಂದದ ಹುಟ್ಟು
> ಒಳಗಿದೆ ಹೂವರಳಿದವೊಲು ವಿಶ್ವದ ಇಡಿ ಹುಟ್ಟು

ಶ್ರೀ ಅರವಿಂದರ ಭಾವಚಿತ್ರದ ದರ್ಶನ ಮಾತ್ರವೇ ಸಾಕು ಕವಿಯ ಭಕ್ತಿಭಾವದ ಉದ್ದೀಪನಕ್ಕೆ.

> ಕೊಡು ತಂದೇ ಇನ್ನೊಂದೇ ಒಂದೇ ಬಾಯ್ತುಟುಕ
> ಕೊಡು ತಾಯೇ ಇನ್ನೊಮ್ಮೇ ಒಮ್ಮೆ ಎದೆಗುಟುಕು

ಹೃತ್ ಪ್ರಕೃತಿ ತಂದ ಕಿಡಿಹೂವುಗಳನ್ನು ಶ್ರೀಚರಣಕ್ಕೆರೆಯುತ್ತ ಶ್ರೀಗುರು ಅರವಿಂದರಲ್ಲಿ ಸಂಪೂರ್ಣ ದೈನ್ಯ ಭಾವದಿಂದ ಶರಣಾಗಿದ್ದಾರೆ ಕವಿ. ಶ್ರೀರಾಮನಲ್ಲಿ ಶ್ರೀ ತ್ಯಾಗರಾಜರು ಶರಣಾದಂತೆ. ಶ್ರೀ ಕೃಷ್ಣನನ್ನು ಬೇಡಿದ ಭಕ್ತದಾಸರಂತೆ ಬೇಂದ್ರೆಯವರ ಭಕ್ತಿಭಾವ ಹರಿದಿದೆ.

> ಶ್ರೀ ಗುರುವೆ ಅರುವೆ, ಶರಣಾಗಿ ಬರುವೆ ಕರುಣೆಯನು ಕೋರಿ ಬರುವೆ
> ಹೃತ್ ಪ್ರಕೃತಿ ತಂದ ಕಿಡಿ ಹೂವುಗಳನು ಶ್ರೀ ಚರಣಕೆರೆಯುತಿರುವೆ
> ಆ ಪಾದಪದ್ಮ ಎದೆಗವಚಿ ಹಿಡಿದು ನಡುನೆತ್ತಿಗೆತ್ತಿಕೊಂಬೆ
> ಉಸಿರಿಂದಲದನೆ ಬಲಗೊಂಬೆ ನನ್ನ ಕಣ್ ಗೊಂಬೆಗೊತ್ತಿಕೊಂಬೆ
> ಹೇ ಭವನೆ ಶಿವನೆ ಜವನವರ ಜವಕೆ ಶವವಾಗದಂತೆ ಮಾಡು
> ಆ ಅಮೃತದೃಷ್ಟಿಯಲಿ ದಿವ್ಯ-ಸೃಷ್ಟಿಯಲಿ ನೆರೆದು ತೆರೆದು ನೋಡು.

ಶ್ರೀ ಅರವಿಂದರು ಭವ; ಅವರೆ ಶಿವ. ಅಮೃತ ದೃಷ್ಟಿಯಿಂದ ಕವಿ ಹೃದಯದಲ್ಲಿ ದಿವ್ಯಸೃಷ್ಟಿಯನ್ನು ಉಂಟುಮಾಡಬಲ್ಲವರು. ಸದ್ಭಾವವನ್ನು ಒಲಿಸಿ ಬೆಳೆಸಬಲ್ಲವರು. ಎದೆಯೊಳಗಿನ ಬೆಳಕನ್ನು ಬೆಳಗಬಲ್ಲವರು.

ನಸುಕಿನಲ್ಲಿ ಮುಸುಕಿನಲ್ಲಿ ನೆನೆಯುತ್ತ, ಮರೆಯುತ್ತ ಅಲೆಯುತ್ತಿತ್ತು. ಕವಿಯ ಜೀವ ಒಳ ಚಿತ್ತವರಳುತ್ತಿತ್ತು, ನಿಶ್ಚಿಂತ ಚಿಂತೆಯಿಂದ ಕಾಯುತ್ತಿತ್ತು. ಯಾವ ನಿಶ್ಚಿತ ಗುರಿಯೂ ಇಲ್ಲದೆ ತೇಲುತ್ತಿದ್ದ ಜೀವಕ್ಕೆ ಸ್ತಿಮಿತತ್ವವನ್ನು ತಂದು ಕೊಟ್ಟವರು ಶ್ರೀ ಅರವಿಂದರು.

> ಆಃ ನೀನು ಬಂದೆ ತನಿಮಿಂಚಿನುರುಳಿ ತನ್ನನ್ನೆ ತೂಗುವಂತೆ
> ಕಡು ಕಾದ ಮೈಯು ತಡವರಸಿ ಮಮತೆ ನಿದ್ದೆಯಲಿ ತಾಗುವಂತೆ

ಕಾದ ಮೈಯನ್ನು ಮಮತೆಯಿಂದ ನೇವರಿಸುವ ಗುರು ಶ್ರೀಅರವಿಂದರು. ಕಣ್ಣಲ್ಲಿ ನಗೆಯ ತುಳುಕು; ಆ ನಗೆಗಣ್ಣನ್ನು ನೋಡಿದರೆ ಸಾಕು ಮಾತಾಡುತ್ತಿರುವಂತೆಯೇ ಕಾಣುತ್ತದೆ. ಅಷ್ಟು ಜೀವಂತವಾಗಿದೆ ಆ ಕಣ್ಣಿನ ಹೊಳಪು. ಎಲ್ಲಿಯೋ ನೋಡಿದಂತೆಯೇ ಅನಿಸುತ್ತದೆ. ಗುರು ಹಾಡಿದಂತೆ ಭಾಸವಾಗುತ್ತದೆ. ಅಂತಹ ಶಕ್ತಿಯುತ ಭಾವಪೂರ್ಣದೃಷ್ಟಿ ಗುರುವಿನದು.

**ತನ್ಮಯ ಮೂರ್ತಿ :**

ಶ್ರೀ ಅರವಿಂದರ ತನ್ಮಯತೆಯನ್ನು ಚಿತ್ರಿಸುವ ಕವನ 'ಅರವಿಂದನಾಭನ ಪಾದಾರವಿಂದಕ್ಕೆ'. ಇದು ತನ್ನೊಂದು ಪದಲಾಲಿತ್ಯದ ಸೌಂದರ್ಯದಿಂದ, ಒಳ ಪ್ರಾಸದ ರಚನಾ ಕೌಶಲದಿಂದ ನಾಲ್ಕೇ ಸಾಲಿನಲ್ಲಿ ತನ್ಮಯತೆಯ ಮೂರ್ತಿಯನ್ನೇ ಚಿತ್ರಿಸಿದೆ. "ಅರವಿಂದ" ಶಬ್ದದ ಪುನರುಕ್ತಿಯಿಂದ ತನ್ಮಯತೆ ತಾನೇ ತಾನಾಗಿ ಮೂಡಿಬಂದಿದೆ.

> ಅರವಿಂದನಾಭನ ಪಾದಾರವಿಂದಕೆ ಹಸ್ತಾರವಿಂದ ಬಾಗುತಿರೆ
> ನಯನಾರವಿಂದವು ಮುಚ್ಚಿಕೊಂಡಿರುವಾಗ ಹೃದಯಾರವಿಂದವು
> ಅರಳಲಿರೆ
> ಆಸ್ಯಾರವಿಂದವು ನಲಿವನು ಸೂಸುವ ತೆರ ನಿನಗೆ ಸೂಸಲಿ ಮಂಗಲವು
> ಎಂದಿತು ಅರವಿಂದ ಪದಭೃಂಗ ಅರವಿಂದ !
> ಅರವಿಂದಮಯವಾದ ಮಾನಸವು.

ಹಸ್ತ ಒಂದು ಅರವಿಂದ. ನಯನವೊಂದು ಅರವಿಂದ. ಹೃದಯವಿನ್ನೊಂದು ಅರವಿಂದ. ಎಲ್ಲವೂ ಅರವಿಂದಮಯ.

ಹೀಗೆ ಸಮಸ್ತವೂ ಅರವಿಂದಮಯವಾಗಿರುವ ಕವಿಗೆ ಶ್ರೀ ಅರವಿಂದರಿತ್ತ ಪಾಲು ಹಾಲು.

' ಓ ತಾಯಿ ತಂದೆ ಶಿವವೆಂದೆ ನಿಮಗೆ ಕರುಗೊಳುವ ಅರುವಿನಿಂದೆ
ನೀವಿತ್ತ ಪಾಲು ನಮಗದುವೆ ಹಾಲು ಕರುಳಾಯ್ತು ಕರುವಿನಂತೆ '

ಮಗು ತಾಯಬಳಿಗೋಡುವಂತೆ, ಕರು ಹಸುವಿನ ಬಳಿಗೋಡುವಂತೆ, ಕವಿ ಗುರುವಿನ ಬಳಿಗೋಡಿದ್ದಾರೆ. ಗುರುವಿನ ಮಮತೆಯ ಬಿಂದು ಅವರ ಹೃದಯಕ್ಕೆ ತಂಪನೆರೆದಿದೆ ; ಅಭಯ ನೀಡಿದೆ.

ದಾರಿಗಾಣದೆ ಅಲೆಯುವವರನ್ನು ತಮ್ಮ ಬಳಿಗೆ ಕರೆದುಕೊಂಡು ಅವರಿಗೆ ದಾರಿ ತೋರಿ ಅವರ ಆತ್ಮೋನ್ನತಿಗಾಗಿ ತಮ್ಮ ದೃಷ್ಟಿಬೀರಿ ಅವರ ಹೃದಯದಲ್ಲಿ ದಿವ್ಯಸೃಷ್ಟಿಗೆ ಕಾರಣವಾಗುವ ಗುರು ಶ್ರೀಅರವಿಂದರು. ಆ ಗುರುವಿನಿಂದ ಕರೆ ಬಂದ ಗಳಿಗೆ ನಿಜಕ್ಕೂ ದಿವ್ಯವಾದ ಗಳಿಗೆ. ಶ್ರೀ ಅರವಿಂದರು ನವಮನು. ಈ ನವಮನುವಿನಿಂದ ಹೊಸ ಮನುಕುಲದ ಸೃಷ್ಟಿಯಾಗಬೇಕು. ಈ ಸೃಷ್ಟಿಗಾಗಿ ಕರೆ ಬಂದಿದೆ. ನಮ್ಮ ಆತ್ಮೋದ್ಧಾರಕ್ಕೆ ಇದೇ ಕಾಲ. ದಾರ್ಶನಿಕ ಅನುಭಾವಿ, ಅಂತರ್ಮುಖ ಕವಿ ಶ್ರೀ ದ. ರಾ. ಬೇಂದ್ರೆಯವರು ಶ್ರೀ ಅರವಿಂದರ ಅತಿಮಾನಸ ಸಾಕ್ಷಾತ್ಕಾರದಿಂದ ಬಂದ ಸಂಸಾರೋತ್ತಾರಕ ಕರೆಯನ್ನು ಆರಿಸಿದ್ದಾರೆ. ಆ ಕರೆಗೆ ಓಗೊಟ್ಟು ಹೊಸ ದ್ವೀಪಕ್ಕೆ ಹೊರಟದ್ದಾರೆ. ಜೊತೆಗೆ ನಮ್ಮನ್ನೂ ಕರೆಯುತ್ತಿದ್ದಾರೆ. ಹೋಗುವುದಕ್ಕೆ ಮೊದಲು ನಾವು ನಮ್ಮ " ಹೃದಯ ಸಮುದ್ರ "ದ ಅಂತರ್ಯವನ್ನು ಅರಿಯಬೇಕು. ಅದಕ್ಕೆ ಗುರುದರ್ಶನವಾದ, ಗುರು ಸ್ಪರ್ಶವಾದ ಗುರುವಿನ ಕರೆ ಯಾಲಿಸಿದ ಕವಿಯ ಸಾಲುಗಳು ಬೇಕು.

ನಮ್ಮ ಹೃದಯವೊಂದು ಸಮುದ್ರ. ಇದು ಬಂಗಾರ ನೀರ ಕಡಲು. ಬಂಗಾರ ದಂತಹ ನೀರಿನ ಕಡಲು. ಉಪ್ಪು ನೀರಿನ ಕಡಲಲ್ಲ. ಈ ಸಮುದ್ರದ ಈಚೆ ಇಹ, ಆಚೆ ಪರ. ಇಹದ ತೀರದಲ್ಲಿವೆ ನಮ್ಮೆಲ್ಲರ ಊರು. ಆ ಊರೊಳಗೆ ನಾವು ಈ ನಮ್ಮ ಹೃದಯಮುದ್ರದಲ್ಲಿ ಮುಳುಗಿ ಈಜಿ ಮುನ್ನಡೆದರೆ ಆಚೆಗಿದೆ ನಮ್ಮ ಆತ್ಮೋದ್ಧಾರ. ಮೊದಲು ನಾವು ನಮ್ಮನ್ನು ತಿಳಿದುಕೊಳ್ಳಬೇಕು.

**ನಂಬಿಗೆಯ ಅಂಬಿಗ :**

ಹೀಗೆ ನಾವು ನಮ್ಮನ್ನು ತಿಳಿದುಕೊಳ್ಳಲು ನಮ್ಮ ಹೃದಯಸಮುದ್ರವನ್ನು ದಾಟಿ ದಡ ಮುಟ್ಟಲು ಸಮರ್ಥ ಅಂಬಿಗನಿಲ್ಲದೆ ಸಾಧ್ಯವಿಲ್ಲ. ಸಮುದ್ರವನ್ನು ದಾಟುವುದು ಸುಲಭವಲ್ಲ. ಅದರಲ್ಲೂ ನಮ್ಮೊಳಗಡಗಿರುವ ಹೃದಯ ಸಮುದ್ರವನ್ನು

ದಾಟುವುದು ಬಹಳ ಕಷ್ಟ. ಆದರೆ ಶ್ರೀ ಅರವಿಂದರು ಈಗ ಅಂಬಿಗರಾಗಿ ಬಂದಿದ್ದಾರೆ. ಬರಿ ಅಂಬಿಗರಾಗಷ್ಟೇ ಅಲ್ಲ. ನಂಬಿಗ ಅಂಬಿಗನಾಗಿದ್ದಾರೆ. ಸಮುದ್ರವನ್ನು ದಾಟಬಲ್ಲೆನೆಂಬ ನಂಬಿಕೆಯನ್ನು ಕೊಡುವ ಅಂಬಿಗನಾಗಿ ಬಂದಿದ್ದಾರೆ. ನಮ್ಮ ಹೃದಯದೊಳಗಿನ ಬಿರುಗಾಳಿಯನ್ನು ಶಾಂತಗೊಳಿಸಿ ಹೃದಯಾಂತರಾಳದಲ್ಲಿನ ಅಲೆಗಳ ಏರಿಳಿತವನ್ನು ಶಮನಗೊಳಿಸಿ ನಮ್ಮ ಹೃದಯಸಮುದ್ರದ ಈಚಿನ ತೀರದಿಂದ ಆಜೆಯ ತೀರಕ್ಕೆ ಕರೆದೊಯ್ಯಬಲ್ಲ ನಂಬಿಗಸ್ಥ ನಾವಿಕನಾಗಿ ಬಂದಿದ್ದಾರೆ. ನಾವು ಹೃದಯಸಮುದ್ರವನ್ನು ದಾಟಬೇಕು. ಅಂದರೆ ನಮ್ಮ ಹೃದಯವನ್ನು ಅರಿತುಕೊಳ್ಳಬೇಕು. ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ನಮ್ಮ ಒಡಲೊಳಗಡಗಿರುವ ಕಡಲಿನ ಆಳ, ಆದನ್ನು ಅರಿಯುವ ಪ್ರಯತ್ನ ಮಾಡಿ ಅರಿತವರಿಗೆ ಮಾತ್ರ ತಿಳಿಯುತ್ತದೆ.

'ಕಂಡವರಿಗಲ್ಲೊ ಕಂಡವರಿಗಷ್ಟೆ ತಿಳಿದಿದೆ ಇದರ ಬೆಲೆಯು'. ಅಷ್ಟೆ ಅಲ್ಲ. ಒಡಲೊಳಗಿನ ಕಡಲ ದರ್ಶನವಾಗುವುದಕ್ಕೆ ನಮ್ಮ ಕಣ್ಣು ಅರಳಬೇಕು. ಆದರತ್ತ ನಮ್ಮ ಕಣ್ಣು ಹೊರಳಬೇಕು. ಆಗ ತಿಳಿಯುತ್ತದೆ ಆದರ ಕಳೆ. 'ಕಣ್ಣರಳಿದಾಗ ಕಣ್ ಹೊರಳಿದಾಗ ಹೊಳೆಯುವುದು ಇದರ ಕಳೆಯು.'

**ಕಾರಣಪುರುಷರು :**

ಹೃದಯಸಮುದ್ರದ ಕಡೆ ಕವಿಯ ಕಣ್ಣು ಹೊರಳಿದೆ. ಅವರ ಕಣ್ಣು ಅರಳಿದೆ. ಇದಕ್ಕೆ ಕಾರಣಪುರುಷರು ಶ್ರೀ ಅರವಿಂದರು. ಶ್ರೀ ಅರವಿಂದರ ನಾವೆಯಲ್ಲಿ ಕುಳಿತು ಶ್ರೀ ಗುರುವನ್ನೇ ನಂಬಿಕೆಯ ಅಂಬಿಗನಾಗಿ ಉಳ್ಳ ಕವಿಗೆ ನವಮನುವಿನ ಹೊಸ ದ್ವೀಪದ ದರುಶನ ಸುಲಭಲಭ್ಯ. ಕವಿಯ ಕವನವನ್ನೋದಿದಾಗ ಓದುಗರಿಗೂ ಈ 'ನಂಬಿಗ ಅಂಬಿಗ'ನ ದರ್ಶನವಾಗುತ್ತದೆ.

ಸಾವಿರಾರು ಜನರನ್ನು ದಡಮುಟ್ಟಿಸಲು ಹುಟ್ಟಿದ ಶ್ರೀ ಅರವಿಂದ ಗುರು ಎಪ್ಪತ್ತೆಂಟು ವರ್ಷಕಾಲ ಇಹದಲ್ಲಿ ತಮ್ಮ ಕರ್ತವ್ಯ ಪಾಲಿಸಿ, ತಮ್ಮ ಬರಹಗಳಿಂದ, ತಮ್ಮ ಸಂದೇಶದಿಂದ, ಮಾತಿನಿಂದ, ನಗೆಯಿಂದ, ನೋಟದಿಂದ, ಯೋಗಶಕ್ತಿಯಿಂದ ಮನುಕುಲದ ಆತ್ಮೋನ್ನತಿಗಾಗಿ ಬಾಳಿದ ಶ್ರೀಗುರು ೫ ಡಿಸೆಂಬರ್ ೧೯೫೦ರಂದು ಮಹಾಸಮಾಧಿಯನ್ನೈದಿದರು. ಇದೇ ಮಹಾಪ್ರಸ್ಥಾನ–ಬೇಂದ್ರೆಯವರ 'ಮಹಾಪ್ರಸ್ಥಾನ.'

ಅವರೇ ನನಗೊಮ್ಮೆ ಹೇಳಿದಂತೆ, 'ಮಹಾ ಪ್ರಸ್ಥಾನ' ಸ್ವಲ್ಪ ಕಠಿನವಾದ ಕವನ. ಆದರ ಭಾವಸಂದರ್ಭಸೂಚಿ ಹೀಗಿದೆ, "ಶ್ರೀ ಗುರುವಿನ ಸಮಾಧಿಯ ದರ್ಶನವನ್ನು ಮಾಡಿಕೊಂಡು ಆಶ್ರಮದಿಂದ ಮರಳುವಾಗ ಹೃದ್ರಂಗದಲ್ಲಿ ಅನುಪಮ ಪ್ರತಿಮೆಗಳ ಒಂದು ಜಾತ್ರೆಯೇ ನೆರೆಯಿತು. ಅವುಗಳನ್ನು ಭಾವಗಮ್ಯ

ವಾಗಿ ಮಾಡಿಕೊಳ್ಳಲು ಕಲ್ಪನಾಸೂತ್ರದಿಂದ ಪವಣಿಸಿಯೂ ಹೆಣೆದುಕೊಂಡ-ದ್ದಾಗಿದೆ. ಅವರ ಮಹಾಪ್ರಸ್ಥಾನ ಜೀವದ ಜ್ಞಾನಾವತಾರದ ಉತ್ಥಾನ ಎಂಬ ಪ್ರಭಾವ ಇಲ್ಲಿ ಉದ್ಭವಿಸಿದೆ. ಇದನ್ನು ಸಾವಧಾನದಿಂದಲೂ, ಇಲ್ಲಿಯ ನಿಷ್ಠೆಯ ಸ್ವರೂಪನ್ನು ಅರಿತುಕೊಳ್ಳಬೇಕೆಂಬ ಕುತೂಹಲದಿಂದಲೂ ಓದಿಕೊಳ್ಳಬೇಕು. ಈ ಓದಿನಿಂದ ಅವರವರ ಭಾವೋದ್ದೀಪನವಾದರೆ ಅದೇ ಅದರ ಫಲ. ಇದರೊಳಗಿನ ತಿಳಿಯುವ ಸಾಲುಗಳಿಂದ ತಿಳಿಯದ ಸಾಲುಗಳಿಗೆ ಸಂಬಂಧ ಹೊಂದಿಸಿಕೊಳ್ಳಬೇಕು. ಈ ವಿಫಲ ಪ್ರಯತ್ನದಲ್ಲಿಯೂ ಸಾಫಲ್ಯದ ಬೀಜ ಕಾಣಬಹುದೆಂಬ ನಂಬಿಗೆಯಿದೆ."

**ಪ್ರಸ್ಥಾನ-ಉತ್ಥಾನ :**

ಹಿರಿಯ ಜೀವಿಗಳ ಪ್ರಸ್ಥಾನ ಒಂದು ರೀತಿಯಲ್ಲಿ ಉತ್ಥಾನವೂ ಹೌದು. ದೇಹದ ಹೊರ ಚೌಕಟ್ಟಿನಿಂದ ಜೀವಾತ್ಮನ ಬಿಡುಗಡೆಯಾಗಿ ಅವನು ವಿಶ್ವಾತ್ಮ-ನಾಗಲು ಸಹಾಯಕವಾಗುತ್ತದೆ. ದೇಹದ ಪ್ರಸ್ಥಾನ ವಿಶ್ವಾತ್ಮನ ಉತ್ಥಾನ. ದೇಹ ವ್ಯಾಪ್ತಿಗೆ ಒಳಪಟ್ಟದ್ದು ವಿಶ್ವವ್ಯಾಪಿಯಾಗುತ್ತದೆ. ಪ್ರಸ್ಥಾನದಲ್ಲಿ ಉತ್ಥಾನವನ್ನು ಕಂಡಿರುವುದು ಕವಿಯ ಹಿರಿಮೆಗೆ ಉದಾಹರಣೆ. ದಾರ್ಶನಿಕ ಕವಿ, ದೇಹಾಸ್ತದಲ್ಲಿ ಆತ್ಮೋದಯವನ್ನು ಕಂಡಿದ್ದಾರೆ. ಕವಿಯ ಭಾವತರಂಗಗಳ ಅಂತರಂಗವನ್ನು ಅರಿ-ಯುವುದು ಒಮ್ಮೆಗೇ ಕಷ್ಟವಾದರೂ ಪ್ರಯತ್ನ ಸಫಲವಾಗುತ್ತದೆ. ಶ್ರೀ ಅರವಿಂದ ದರ್ಶನವಾಗಿ ಓದುಗನ ಭಾವೋದ್ದೀಪನವಾಗುತ್ತದೆ.

ಈ ಕವನದಲ್ಲಿ ಪ್ರತಿಮೆ (Image)ಗಳ ಜಾತ್ರೆಯಿದೆ ಎನ್ನುವುದು ಎಷ್ಟು ಸತ್ಯವೆಂದರೆ ಕೆಲವು ಸಲ ಒಂದೊಂದು ಸಾಲೂ ಒಂದೊಂದು ಪ್ರತಿಮೆ. ಒಂದೊಂದು ಚಿತ್ರ. ಆರಂಭದ ನಾಲ್ಕು ಸಾಲುಗಳು ಇದಕ್ಕೆ ಉತ್ತಮ ಉದಾಹರಣೆ :

> ಅಗೋ ಜೀವ ಸ್ಫೋಟ ಆ ಸೋಮವಾರದಾ ಮಧ್ಯರಾತ್ರಿಯಲ್ಲಿ
> ಆಕಾಶಗಂಗೆ ಅಭಿಷೇಕ ಮಾಡೆ ಕೈಲಾಸ ಜಾತ್ರೆಯಲ್ಲಿ
> ಮಧುವೇದವಾಣಿ, ಮಧುರಾಜರಾಣಿ ನಕ್ಷತ್ರಪುಂಜ ಕರೆಯೆ.
> ಓಂಕಾರದೆದೆಯೆ ಝೋಂಕರಿಸಿದಂತೆ ನವಜೀವರಾಶಿ ಮೊರೆಯೆ.

ಶ್ರೀ ಅರವಿಂದರ ದೇಹದ ಅಂತ್ಯವನ್ನು ಕವಿ ಈ ರೀತಿ ವರ್ಣಿಸಿದ್ದಾರೆ :

> 'ಅವಭೃತ'ದ ಸ್ನಾನ ಈ ದೇಹದಾನ,
> ಗ್ರಹ ಮುಕ್ತನಾದ ರವಿಯು.

ಗ್ರಹದಿಂದ ಮುಕ್ತನಾದ ರವಿಯಂತೆ ದೇಹದಿಂದ ಮುಕ್ತರಾಗಿದ್ದಾರೆ ಶ್ರೀಗುರು. ಅಷ್ಟೇ ಅಲ್ಲ,

‘ ಅಮವಾಸೆ ಕಳೆದು ಚಿತ್ಕಲೆಯ
ತಳೆದು ಪೌರ್ಣಿಮೆಯ ಹಾದಿ ಹಿಡಿದೆ ”.

**ಕೀರ್ತಿ ಬಯಲ ತುಂಬಿತು :**

ದೇಹವೆಂಬ ಆಲಯದೊಳಗಿದ್ದ ಕೀರ್ತಿ ಒಂದೇ ಒಂದು ರಾತ್ರಿಯಲ್ಲಿ ಹೊರ-ಬಂದು ಬಯಲ ತುಂಬಿತು. ದೇಹಾಂತ್ಯವಾಗಿ ಜೀವಸ್ಫೋಟವಾಗಿ ಹೊರ ಬಂದ ಮೂರ್ತಿ ವಿರಾಟ್‌ಮೂರ್ತಿಯಾಗಿ ವಿಶ್ವದೊಡನೆ ಒಂದಾಗಿ ನಿಂತಿತು, ದೇಹಮಯ-ವಾಗಿದ್ದದ್ದು ವಿಶ್ವಮಯವಾಯಿತು.

ಶ್ರೀ ಅರವಿಂದರ ತತ್ತ್ವದ ಮಹತ್ತಾದರೋ ಯಮತಂತ್ರವನ್ನೂ ಸಂಯಮಿಸಿದ ಸಾವಿತ್ರಮಂತ್ರ, ನಚಿಕೇತಾಗ್ನಿಯ ಶಕ್ತಿ ಇದೆ ಅದಕ್ಕೆ. ಇಂದಿನ ವಿಜ್ಞಾನದ ಯಂತ್ರ ಅಶ್ವತ್ಥಾಮನ ನಾರಾಯಣಾಸ್ತ್ರದಂತೆ ವಿಧ್ವಂಸಕ ಕಾರ್ಯದಲ್ಲಿ ತೊಡಗಿರುವಾಗ, ಸಮುದ್ರಮಥನ ಕಾಲದಲ್ಲಿ ಹಾಲಾಹಲ ಜನಿಸಿದಂತೆ ವಿಜ್ಞಾನದಿಂದ ವಿನಾಶದ ವಿಷ ಉಕ್ಕಿ ಬರುತ್ತಿರುವಾಗ, ಶ್ರೀ ಅರವಿಂದರ ತತ್ತ್ವನವಶಕ್ತಿಯಾಗಿ ನವಮಂತ್ರವಾಗಿ ನವಸೃಷ್ಟಿಯಲ್ಲಿ ತೊಡಗಿದೆ. ಶ್ರೀ ಅರವಿಂದರ ನವಜನ್ಮಯಜ್ಞ ಪರಿಪೂರ್ಣವಾಗಿದೆ. ವಿಧ್ವಂಸಕ ಶಕ್ತಿಗಳ ಶಕ್ತಿಯಡಗಿದೆ, ಅಜ್ಞಾನದ ಅಂತ್ಯವಾಗಿ ಜ್ಞಾನದ ಉದಯವಾಗುವುದೇ ಅರವಿಂದರ ನವಯಜ್ಞದ ಸಿದ್ಧಿ. ಶ್ರೀ ಅರವಿಂದರು ‘ ನವ ಧರ್ಮದ ದೇವವೃಷ್ಟಿ ’ ಗರೆವ ಮೇಘವಾಗಿದ್ದಾರೆ. ಈ ಬದುಕು ಸಕ್ಷೇತ್ರವಾಗಿ ಈ ಸುಕ್ಷೇತ್ರದಲ್ಲಿ ಹೊಸ ಸೃಷ್ಟಿಯಾಗಲು ಅರವಿಂದದೇವವೃಷ್ಟಿ ಅಗತ್ಯವಾಗಿದೆ.

**ಎಂತು ಬಂತೋ ಜಡದಿಂದ ಪ್ರಾಣ ?**

ಜಡಜೀವನದಲ್ಲಿ ಪ್ರಾಣ ಉದ್ಭವಿಸಿದ್ದೇ ಒಂದು ಸೋಜಿಗ.

‘ ಎಂತು ಬಂತೋ ಜಡದಿಂದ ಪ್ರಾಣ ? ’ ಎಂದು ಕವಿ ಆಶ್ಚರ್ಯಗೊಂಡಿದ್ದಾರೆ. ತರುಮರವಾಗಿ, ಕ್ರಿಮಿಕೀಟವಾಗಿ, ಪಶುಪಕ್ಷಿಯಾಗಿ, ಮಾನವನಾಗಿ ಪ್ರಾಣ ಸಂಚಾರವಾಗಿದೆ. ಪಶುವಿನಿಂದ ಮಾನವನ ಉತ್ಥಾನವಾಯಿತು ಇನ್ನು ಮಾನವನಿಂದ ದೇವಜಾತಿಯ ಉತ್ಥಾನವಾಗಬೇಕು. ಭೂಲೋಕದ ನೆಲವನ್ನು ದೇವಸೃಷ್ಟಿಗೆ ಹದಗೊಳಿಸಲು ಶ್ರೀ ಅರವಿಂದರ ಅವತಾರವಾಯಿತು. ನೆಲ ಸ್ವಲ್ಪ ಮಟ್ಟಿಗೆ ಹದವಾಯಿತು. ಅವರು,

‘ ಈ ದೇಹವಿರಲಿ ಇಗೊ ತರುವೆ
ಅಮೃತ ಹೃತ್ಕಲಶಪಾಣಿಯಾಗಿ ’

ಎಂದು ಹೊರಟರು. ಅರವಿಂದರ ಸಂದೇಶ ಆಕಾಶವಾಣಿಯಾಗಿ ಮೊರೆಯಿತು. ಅರುಣಕಿರಣ ಆವರಣವನ್ನು ಹರಿದು ಕನಕದಂತೆ ಕಾಂತಿ ಚೆಲ್ಲಿತು. ಪುಷ್ಕರಣಿಯಲ್ಲಿ ಶ್ರೀಅರವಿಂದತತ್ತ್ವದ ಅವರೋಹವಾಯಿತು, ಅದರಲ್ಲಿ ಮಿಂದವರಿಗೆ ಆತ್ಮೋನ್ನತಿಯ ದಾರಿ ಕಂಡಿತು. ಶ್ರೀಅರವಿಂದರ ಶಕ್ತಿ,

> ‘ ಆದಿತ್ಯ ಶಕ್ತಿ ಚಂದ್ರಮನ ಹೊಂದಿ ಕೌಮುದಿಯೆ ಭ್ರಮಿಸುವಂತೆ
> ಸಾವಿರದ ಸೂರ್ಯ ನಕ್ಷತ್ರರಾಗಿ ತಮವನ್ನೇ ಶ್ರಮಿಸುವಂತೆ. ’

ಶಕ್ತಿಯು ಸಾವಿರ ಕಿಡಿಗಳಾಗಿ ಇಹದ ಜೀವಿಗಳ ತಾಪವನ್ನು ಪರಿಹರಿಸಲು ಉದ್ಯುಕ್ತವಾಗಿದೆ. ಅರವಿಂದ ಎಂಬ ಬರಿಯ ಹೆಸರಿನಲ್ಲೇ ತುಂಬಿದೆ ಸುಗಂಧ. ಅವರ ಚರಿತ್ರೆಯನ್ನು ಜ್ಞಾಪಿಸಿಕೊಂಡರೆ ಸಾಕು ಬ್ರಹ್ಮಾಂಡವೇ ಕಣ್ಣೆದುರು ನಿಲ್ಲುತ್ತದೆ. ವಿಶ್ವರೂಪ ದರ್ಶನವಾಗುತ್ತದೆ. ಅಂತೆಯೇ ಈ ಕವನದಲ್ಲಿ ಶ್ರೀ ಅರವಿಂದ ಶಕ್ತಿಯ ವಿರಾಟ್‌ರೂಪದ ದರ್ಶನವಿದೆ. ಈ ವಿರಾಟ್ ಶಕ್ತಿಯ ದರ್ಶನ ಮಾಡಿಸಲು ಕವಿ ಅನೇಕ ಉಪಮಾನಗಳನ್ನೂ ಪ್ರತಿಮೆಗಳನ್ನೂ ಚಿತ್ರಿಸಿದ್ದಾರೆ. ಹೋಲಿಕೆಗಳ ಒಂದು ಮಾಲಿಕೆಯೇ ಇದೆ. ಆ ಹೋಲಿಕೆಗಳನ್ನೆಲ್ಲ ಒಟ್ಟಿಗೆ ನೋಡಿದಾಗ ನಮಗೆ ಶ್ರೀ ಅರವಿಂದ ದರ್ಶನ ಸಂಪೂರ್ಣವಾಗಿ ಸಮಗ್ರವಾಗಿ ಸರ್ವಾಂಗ ಸುಂದರವಾಗಿ ಆಗುತ್ತದೆ.

**ಸ್ವರ್ಣಗರುಡ :**

ಶ್ರೀ ಅರವಿಂದರು ಪಾತಾಳದಲ್ಲಡಗಿದ್ದ ನಾಗಮಣಿಯನ್ನು ತಂದ ಸ್ವರ್ಣ ಗರುಡ. ಅವರ ಮಂತ್ರ ಸಾವಿತ್ರಮಂತ್ರ. ಅವರ ಶಕ್ತಿ ನಚಿಕೇತ ಅಗ್ನಿ. ಅವರು ಯೋಗೇಶ. ಅವರೇ ಆದಿತ್ಯ ಶಕ್ತಿ, ಸಾವಿರದ ಸೂರ್ಯ. ಅವರಿಂದ ಋತ ಸತ್ಯದ ಅರಿವು. ಅವರು ನವಧರ್ಮ ಮೇಘ. ಅವರಿಂದ ದೇವವೃಷ್ಟಿ. ಆನಂದದ ಸೃಷ್ಟಿ. ಅವರು ಸೌಂದರ್ಯ ಸತ್ಯ, ಸಜ್ಜನಿಕೆಯ ನೆಲೆ, ದೇವಜಾತಿಯ ಸೃಷ್ಟಿಗೆ ದಾರಿ. ಸುಸ್ಫಟಿಕ ಕನಕ. ಅವರಾದರೋ ಎದ್ದು ಗೆದ್ದ ಋಷಿರಾಜ, ವೈದೇಹ ಜನಕ. ರಾಜನಾಗಿದ್ದಾಗಲೇ ಋಷಿಯಾಗಿದ್ದ ಜನಕನಂತೆ ಇಹದಲ್ಲಿದ್ದೂ ಪರತತ್ತ್ವ ಪ್ರಧಾನರು. ತಾಪತ್ರಯಗಳಿಂದ ಆರ್ತರಾದ ಜನರಿಗೆ ನೆರಳನ್ನು ನೀಡಿ ತಂಪನ್ನುಂಟುಮಾಡುವ ವಟವೃಕ್ಷ ಶ್ರೀ ಅರವಿಂದರು. ಅವರ ಭಾವವಾದರೋ ಬ್ರಹ್ಮದಲ್ಲಿ ಬೇರು ಬಿಟ್ಟ ಅಶ್ವತ್ಥ. ಪ್ರಳಯವಾದಾಗ ಅರಳಿಎಲೆಯ ಮೇಲೆ ತೇಲಾಡುತ್ತ ಪ್ರಳಯಾನಂತರದ ಹೊಸ ಸೃಷ್ಟಿಗಾಗಿ ನವಜೀವ ಕೋಟಿಯ ಸೃಷ್ಟಿಗಾಗಿ ಇರುವ ದಿವ್ಯಚೇತನ ಶ್ರೀ ಅರವಿಂದರದು.

ಈ ವಿರಾಟ್ ಮೂರ್ತಿಯ ವಿಶ್ವಚೇತನದ ಸಾಕಾರ ದರ್ಶವನ್ನು ಮಾಡಿ ಕೊಟ್ಟಿದ್ದಾರೆ ಕವಿವರ್ಯ ಶ್ರೀ ಬೇಂದ್ರೆಯವರು. ಕವಿದರ್ಶನದಲ್ಲಿದೆ ಗುರು ದರ್ಶನ. ಕವಿಯ ಏಕಾಗ್ರ ನಿಷ್ಠೆ, ಭಾವದ ಪರಿಪಕ್ವತೆ, ಛಂದದ ಪರಿಪೂರ್ಣತೆ ಶ್ರೀಅರವಿಂದದರ್ಶನಕ್ಕೆ ಪೂರಕವಾಗಿವೆ. ಕವಿಯ ಕಾವ್ಯ ಸಾರ್ಥಕವಾಗಿದೆ. *

§ § § §

* ' ಕಾವ್ಯಕಲ್ಪನೆ 'ಯಿಂದ.

೩೦ | # ಮಾನವಧರ್ಮ ದೃಷ್ಟಾರ ಬೇಂದ್ರೆ

**ಆರ್. ಎಸ್. ಸುಂಕದ**

ಸಾಹಿತ್ಯೋದಯಕ್ಕೆ ಮೂಲ ಪ್ರೇರಣೆ ನೀಡಬಲ್ಲ ಎರಡು ಮುಖ್ಯ ವಿಷಯಗಳೆಂದರೆ (೧) ಕವಿ ಅಂತರ್ಮುಖಿಯಾಗಿ ಜೀವನದ ಜಟಿಲ ಸಮಸ್ಯೆಗಳನ್ನರಿವ ತಾತ್ತ್ವಿಕ ಜಿಜ್ಞಾಸೆ (೨) ಬಹಿರ್ಮುಖಿಯಾಗಿ ತನ್ನ ಸುತ್ತಲಿನ ಸಾಮಾಜಿಕ ಪ್ರಕ್ರಿಯೆಗಳನ್ನವಲೋಕಿಸಿ ಸಮಾಜದ ಸ್ವರೂಪವನ್ನರಿಯಬಯಸುವ ಸಾಮಾಜಿಕ ಚಿಂತನ. ಆದ್ದರಿಂದ ಕವಿ, ಸಮಾಜದ ಶಿಶುವೂ ಹೌದು; ಅದರ ಸಂಸ್ಕಾರ-ಕರ್ತನೂ ಹೌದು.' (A creature and Creator of Society).[1] ಹೀಗೆ ಸಾಹಿತಿಯೂ ಒಬ್ಬ ವ್ಯಕ್ತಿಯಾಗಿ ಸಮಾಜದ ಅನಿವಾರ್ಯವಾದ ಅಂಗವಾಗಿ-ದ್ದಾನೆ ಎಂದ ಮೇಲೆ ತನ್ನ ಸುತ್ತಲಿನ ಸಾಮಾಜಿಕ ಪರಿಸರದ ಉನ್ನತಿ ಅವನತಿಗಳು ಭಾವಜೀವಿಯಾದ, ಚಿಂತನಶೀಲನಾದ, ವಿಚಾರವಂತನಾದ ಅವನನ್ನು ಬಾಧಿಸುವದು ಸಹಜ, ಸ್ವಾಭಾವಿಕವಿದ್ದಷ್ಟೇ ಅಪೇಕ್ಷಣೀಯವೂ ಹೌದು. ಬೇಂದ್ರೆಯವರಂತಹ ಉನ್ನತ ವಿಚಾರವಂತ ಹಾಗೂ ಉತ್ಕಟ ಸಂವೇದನಾಶೀಲ ಕವಿ ತಾವು ಬೆಳೆದ, ಬಾಳಿದ ಸಮಾಜದ ಸ್ಥಿತಿಗತಿಯ ಬಗೆಗೆ ಅತ್ಯಂತ ಜಾಗೃತವಾದ ಜೀವಂತವಾದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾರೆ ಎನ್ನುವ ಮಾತು ಐತಿಹಾಸಿಕ ಸತ್ಯ.

ಬೇಂದ್ರೆಮನೋಧರ್ಮ ಚಿಂತನಶೀಲವಾದದ್ದು. ಸೂಕ್ಷ್ಮಮತಿತ್ವ ಬೇಂದ್ರೆ-ಚಿಂತನದ ಮೂಲ ಗುಣ. ಸಮಸ್ಯೆಯ ಅತ್ಯಂತ ಆಳಕ್ಕಿಳಿದು ಅದರ ಸ್ವರೂಪವನ್ನು ನಿರ್ಧರಿಸುವ ವಿಶಾಲ ವೈಚಾರಿಕರಾದ ಬೇಂದ್ರೆ, ಮಾನವನ ಅಂತರಂಗದ ಅನಂತ ಭಾವನೆಗಳನ್ನು ಸ್ವಚ್ಛಂದವಾಗಿ ಗೀತಿಸಿದ ಹಾಗೆಯೇ ಸಮಾಜಪುರುಷನ ವಿರಾಟ್ ಸ್ವರೂಪವನ್ನು ಕುರಿತು ಅತ್ಯಂತ ಆಸಕ್ತಿಯಿಂದ ಚಿಂತನೆ ಮಾಡಿದ್ದಾರೆ. 'ಮಾನವೀಯ ಅನುಕಂಪ' ಬೇಂದ್ರೆಯವರ ಸಮಾಜಚಿಂತನದ ಅಸ್ತಿಭಾರ.

---

1 ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ. (ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟನೆ) ಪುಟ, ೧೦.

ತನ್ನಂತೆ ಇತರರೂ ಬದುಕಬೇಕು, ಬಾಳುವ ಅವಕಾಶ ಎಲ್ಲರಿಗೂ ಸಮನಾಗಿ ಸಿಗಬೇಕು ಎಂಬುದು ಕವಿಯ ಆಶಯ. ‘ ಸರ್ವೇ ಜನಾಃ ಸುಖಿನೋ ಭವಂತು ’ ಎಂಬ ಪುರಾತನ ಉಕ್ತಿಯನ್ನು ಈ ಸಂದರ್ಭದಲ್ಲಿ ನೆನೆಯಬಹುದು. ಸಾಮಾಜಿಕ ವೈಷಮ್ಯವನ್ನು ಬೇಂದ್ರೆಯವರು ಖಂಡಿಸುತ್ತಾ,

ಒಬ್ಬಗೆ ಬಂದುದು ಎಲ್ಲರಿಗುಂಟು
ಕೊಡಬೇಕು ಹಿಡಿಕೊಡಬೇಕು. [1]

ಎಂದಿದ್ದಾರೆ. ಅನ್ಯಾಯದ ನಿರ್ದಾಕ್ಷಿಣ್ಯ ಪ್ರತಿಭಟನೆ ಬೇಂದ್ರೆಯವರ ಸಮಾಜ ಚಿಂತನೆಯ ಪ್ರಧಾನ ಗುಣ. ಯಾರದೋ ಅಜ್ಞಾನನಿಮಿತ್ತವಾದ ಅಕೃತ್ಯದಿಂದ ಸಹಸ್ರಾರು ಅಸಹಾಯ ಜೀವಿಗಳು ಕಣ್ಣೀರು ಹಾಕಬೇಕಾಗುತ್ತದೆ ಎಂಬುದರ ಅರಿವಾದಾಗ ಕವಿ, ಸಂಪ್ರದಾಯ, ರೂಢಿ, ಪರಂಪರೆಗಳ ಅನಪೇಕ್ಷಣೀಯವಾದ, ಅರ್ಥಹೀನವಾದ ಕಂದಾಚಾರಗಳ ವಿರುದ್ಧ ಬಂಡಾಯ ಹೂಡುತ್ತಾರೆ. ಸಾಮಾಜಿಕ ಸಮಾನತೆ, ಸಾಮಂಜಸ್ಯ ಬೇಂದ್ರೆಹೃದಯದ ಪ್ರಬಲ ಅಭಿಲಾಷೆ.

ದಲಿತರು ಧ್ವನಿ ಎತ್ತಬೇಕು, ಐಶ್ವರ್ಯದ ಅಸಮಾನಹಂಚಿಕೆ ಇಲ್ಲದಾಗಬೇಕು. ನಿರ್ಭಯವಾಗಿ ನಿರ್ಮಲವಾಗಿ ಜೀವಿಸುವ ಮುಕ್ತ ಸಾಮಾಜಿಕ ಅವಕಾಶದ ಅವತರಣಕ್ಕೆ ಬೇಂದ್ರೆಹೃದಯ ಉತ್ಕಂಠಿತವಾಗಿದೆಯೆಂಬುದನ್ನು ಅವರ ಕವಿತೆಗಳ ಮೂಲಕ ಸ್ಫುಟವಾಗಿ ಅರಿಯಬಹುದು. ಹೀಗೆಂದಮಾತ್ರಕ್ಕೆ ಬೇಂದ್ರೆಯವರು Communist ಎಂದು ಭಾವಿಸುವದು ಅಪರಾಧವಾದೀತು. ಬೇಂದ್ರೆಯವರ ಸಮಾಜ ಚಿಂತನ ಯಾವ ಲಾಂಛನದಡಿಗೂ ಸೀಮಿತವಾಗದಷ್ಟು ವಿಶಾಲವಾಗಿದೆ, ಒರಿಜಿನಲ್ ಆಗಿದೆ. ಅದು ಮೂಲತಃ ಉದಾತ್ತವಾದ ಮಾನವೀಯ ಅಂತಃಕರಣದಿಂದ ಪ್ರೇರಿತವಾದ ಋಷಿಚಿಂತನ. ಸಕಲ ಜೀವಿಗಳ ಲೇಸನ್ನು ಬಯಸುವ ಆಶಯವೇ ಬೇಂದ್ರೆ ಕಾವ್ಯದುದ್ದಕ್ಕೂ ಹರಡಿದೆ. ಕುಲ ಮೂಲಗಳಿಂದಾದ ಅಂತಃ ಕಲಹವನ್ನು ಕಂಡು ಕವಿ,

ರವಿ ಚಂದ್ರ ಮನಿ ದೀಪ | ನೆಲಕೆ ನೀರು ಸಮೀಪ
ಮನುಷ್ಯಾರ ಕುಲ ಮೂಲ ಒಂದಾಗಿ
ಸತ್ಯವಂತರಾಗಿ ನಿತ್ಯವಂತರಾಗಿ
ಬಾಳುವೆಮಾಡಲಿ ಚೆಂದಾಗಿ
ದೇವರ ಬೆಳಕಾಗಿ ಮುಂದಾಗಿ. [2]

---

1 ಬೇಕು (ಅರಳು–ಮರಳು) ಪುಟ, ೧೫೭.

2 ಎದೆಯು ಒಕ್ಕಲಿಗನ ಹಾಡು (ನಾಕುತಂತಿ) ಪುಟ, ೬೪.

ಎಂದಿದ್ದಾರೆ. ಸತ್ಯವಂತಿಕೆ–ಸಿತ್ಯವಂತಿಕೆಗಳೇ ಮಾನವನ ಬಾಳನ್ನು ಸಾರ್ಥಕಗೊಳಿಸುವವೇ ವಿನಃ, ಜನನದಿಂದ ಉಚ್ಚ ನೀಚ ಕುಲದವರೆಂಬುದು ನಿಶ್ಚಿತವಾಗದು ಎಂಬ ಅಂತರ್ವಾಣಿ ಇಲ್ಲಿದೆ.

ಸಂಪ್ರದಾಯ, ಪರಂಪರೆ ಅಪೇಕ್ಷಣೀಯವಾದದ್ದು. ಆದರೆ ಸಾಂಪ್ರದಾಯಿಕತೆಯ ಅಂಧಾನುಸರಣ ವ್ಯಕ್ತಿತ್ವದ ಸಮರ್ಥ ವಿಕಾಸಕ್ಕೆ ಬಾಧಕವಾದರೆ ಅಥವಾ ಅಮಾನವೀಯ ( Inhuman ) ಎನಿಸಿದರೆ ಅಂಥ ಸಂಪ್ರದಾಯ ಖಂಡಿತವಾಗಿಯೂ ತ್ಯಾಜ್ಯವಾದದ್ದು. ಬೇಂದ್ರೆಯವರಿಗೆ ‘ಪುಟ್ಟ ವಿಧವೆ’ಯನ್ನು ಬರೆಯುವಾಗ ಬಹುಶಃ ಸಮಾಜದಲ್ಲಿ ಸಂಪ್ರದಾಯದ ಉಕ್ಕಿನ ಪರದೆಯ ಹಿಂದೆ ನಡೆದ ಪೈಶಾಚಿಕ ಕೃತ್ಯದ ನೆನಪಾಗಿರಬಹುದು. ಅಂತೆಯೇ ‘ಪುಟ್ಟ ವಿಧವೆ’ಯ ಮೌನ ಕರುಣದ ಹಿಂದೆ ಅವಿತುಕೊಂಡ ಸಮಾಜದ ಸಂಪ್ರದಾಯದ ವಿರುದ್ಧ ಒಡಮೂಡಿದ ಸಕ್ರಿಯ ರೋಷವು ಪುರಾಣ ಹೇಳುವ ಆಚಾರ್ಯರನ್ನು ತನ್ನ ತೀಕ್ಷ್ಣ ವ್ಯಂಗ್ಯದ, ಕಟುಕಿಯ ಪ್ರಹಾರಕ್ಕೆ ಈಡು ಮಾಡಿದೆ. ಇದು ಸಾತ್ವಿಕ ರೋಷ, ಅಧರ್ಮದ ಪರಿಮಾರ್ಜನೆಗೆ ಪ್ರೇರಿಸುವ ದೈವೀರೋಷ. ಹಾಗೆಯೇ ಯುಗ ಯುಗಗಳಿಂದ ಹಣದ ದಾಸನಾಗಿ ಬರಿ ಬಾಯಲ್ಲಿ ಮಾತ್ರ ಗುಣವನ್ನು ಗೌರವಿಸುವ ಮನುಷ್ಯ, ಅಸಹಾಯನಾಗಿ ಮಾನವ ಕುಲದ ಮೇಲೆ ಧನದ ವಿಜಯವನ್ನು ಒಪ್ಪಿಕೊಳ್ಳುತ್ತಲಿದ್ದಾನೆ. ಬೇಂದ್ರೆಯವರಿಗೆ ಬೇಕಾದದ್ದು ಹಣದ ಮೇಲೆ ಮಾನವನ ಹತೋಟಿ, ಮಾನವನ ಮೇಲೆ ಹಣದ್ದಲ್ಲ. ಆದರೆ ಅಪೇಕ್ಷೆ ಹಾಗೂ ವಾಸ್ತವದ ನಡುವೆ ನಿವಾರಿಸದ ಅಂತರವಿದ್ದಾಗ ಮತ್ತೆ ಕವಿಹೃದಯ ಮಿಡಿಯುತ್ತದೆ.

ಕುರುಡು ಕಾಂಚಾಣಾ ಕುಣಿಯುತಲಿತ್ತು
ಕೂಲಿ ಕುಂಬಳಿಯವರ
ಪಾಲಿನ ಮೈದೊಗಲ
ಧೂಳಿಯ ಭಂಡಾರ ಹಣಿಯೊಳಗಿತ್ತೋ [1]

ಇಲ್ಲಿ, ಕಾಂಚಾಣ ಮದದಿಂದ ಬಡವರನ್ನು ತುಳಿಯುತ್ತಿರುವ ಶ್ರೀಮಂತರ ರುದ್ರತಾಂಡವ ನೃತ್ಯವನ್ನು ಕಂಡು ಕವಿ ಮರುಗಿದ್ದಾರೆ. ಪ್ರಳಯಕಾಲದ ರುದ್ರನ ತಾಂಡವಕ್ಕೆ ಸೀಮೆಯಾದರೂ ಇದೆ ಆದರೆ ಧನಮತ್ತರ ರುದ್ರತಾಂಡವ ಅನಾದಿ ಕಾಲದಿಂದಲೂ ನಡೆದು ಬಂದಿದೆಯೆಂಬುದೇ ಈ ಕವಿತೆಯ ಅಂತರಾರ್ಥ.

ಜಾಗತಿಕ ಶಾಂತಿಯನ್ನು ಕಲಕುವ ಭೀಕರ ಸಂಹಾರಕಾರಿಯಾದ ಯುದ್ಧಗಳ ಬಗೆಗೆ ಕವಿ ಬಹಳ ಭೀತರಾಗಿದ್ದಾರೆ. ‘ನರಬಲಿಯನ್ನು ಬೇಡುವ ಯುದ್ಧವೆಂಬ

---

1 ಕುರುಡು ಕಾಂಚಾಣಾ (ನಾದಲೀಲೆ) ಪುಟ, ೩೦.

ದೈವ ಮಾನವನ ಮನದ ಯಾವ ನೀಚಲೋಕದಿಂದ ಬಂದಿದೆಯೋ ? ನರಬಲಿ ನಿಲ್ಲಿಸುವ ಯುದ್ಧ ಬರಲಿ. ಅದು ನಮ್ಮ ಕುರುಕ್ಷೇತ್ರ ' ಎನ್ನುವದು ಕವಿಯ ಹಾರ್ದಿಕ ಆಶಯವಾಗಿದೆ. ಅಂತೆಯೇ ಅವಕಾಶದೊರೆತಾಗಲೆಲ್ಲ ಮಾನವ ಸಮಾಜವನ್ನು ನೋವಿಗೀಡು ಮಾಡುತ್ತಿರುವ ಈ ಯುದ್ಧಗಳ ಬಗೆಗೆ ಕವಿ ಬಹಳ ನೊಂದು ಯುದ್ಧದ ವಿನಾಶಕ ಆವರಣದಿಂದ ಪಾರಾಗಿ ಹೊರಬರಲು ಮಾನವ ಪ್ರಜ್ಞೆಗೆ ಆದೇಶ ನೀಡುತ್ತಾರೆ. ಜಾಗತಿಕ ಎರಡು ಮಹಾಯುದ್ಧಗಳ ಮಾರಣ ಹೋಮದ ಭೀಕರತೆಯನ್ನು ಅರಿತ ಕವಿ ಮುಂದಾದರೂ ಮಾನವ ಜನಾಂಗ ಎಚ್ಚರಗೊಂಡು ಶಾಂತಿಯ ಮಂಗಲದಿನಗಳನ್ನು ಕಾಣಲಿ ಎಂದು ಹಾರೈಸು ತ್ತಾರೆ. ‘ ಮಾನವತೆ ಮೊಳಗುವ ’ ‘ ನಾಗರಿಕತೆ ಬೆಳಗುವ ’ ಈ ಕಾಲದಲ್ಲಿ,

> ಕೋಳಿಯ ಕೊಯ್ದರೆ ಕೇಳುವರುಂಟು
> ಕುರಿಯನು ಕೊಂದರೆ ಕೇಳುವರುಂಟು
> ಕೋಣನ ಕಡಿದರು ಕಾಯುವರುಂಟು
> ಗುಬ್ಬಿಮಾನವನ
> ಕೊಯ್ದರು ಕೊಂದರು ಕಡಿದರು ಏನು ? [1]

ಎಂಬುವಲ್ಲಿ ಯುದ್ಧಸಂತ್ರಸ್ತ ಮಾನವನ ಬಗೆಗೆ ಕವಿ ತೀವ್ರತರ ವಿಷಾದವನ್ನು ವ್ಯಕ್ತಪಡಿಸುತ್ತಾರೆ. ‘ ಮೊದಲಗಿತ್ತಿ ’ ಎಂಬ ಕವಿತೆಯೂ ಕೂಡಾ ಸಮಾಜ ಚಿಂತನೆಯನ್ನೊಳಗೊಂಡಿದೆ, ಯುದ್ಧೋನ್ಮುಖ ಪ್ರವೃತ್ತಿಗೆ ಪುರಸ್ಕಾರ ಸಾಕೆಂದು ನೀಡುವ ಆದೇಶ ಅಲ್ಲಿದೆ. ಆದುದರಿಂದಲೇ

> ಎಂದು ಮಂಗಲ ನಿನ್ನ ದೇವಗರ್ಭಕೆ ? — ಇನ್ನೂ
> ಮೊದಲಗಿತ್ತಿಯಂತೆ ಮೆರೆಯುತಿಹೆ, [2]

ಎಂದು ಭೂಮಿತಾಯಿಯನ್ನು ಕೇಳಿಕೊಳ್ಳುತ್ತಲಿದ್ದಾರೆ. ಮಾನವಜನಾಂಗದ ಸಮುದ್ಧರಣದ ಆಕಾಂಕ್ಷೆಯಲ್ಲಿ ನಿರತರಾದ ಕವಿ ದೇವಗರ್ಭಕೆ ಮಂಗಲ ವನ್ನು ಬಯಸುತ್ತಾರೆ. ಹೀಗೆ ಬೇಂದ್ರೆಯವರಲ್ಲಿಯ ಕವಿ-ಋಷಿ ಮಾನವಸಮಾಜದ ಶಾಶ್ವತ ಸುಖಶಾಂತಿಗೆ ಪರಿತಪಿಸುತ್ತಾರೆ.

ಸಫಲ ಸಮಾಜದ ನಿರ್ಮಾಣವೆಂದರೆ ಮಾನವೀಯ ಮೌಲ್ಯಗಳ ದೃಢೀಕರಣ. ಬೇಂದ್ರೆಯವರು, ಮಾನವೀಯ ಮೌಲ್ಯಗಳನ್ನು ಹಾರ್ದಿಕವಾಗಿ ಗೌರವಿಸುವ

---

1 ನರಬಲಿ (ಗರಿ) ಪುಟ, ೧೦೦.

2 ಮೊದಲಗಿತ್ತಿ (ನಾದಲೀಲೆ) ಪುಟ, ೪೨.

ಸುಸಂಸ್ಕೃತ ಸಮಾಜದ ಸ್ಥಾಪನೆಗೆ ಮುಂದಾಗಿದ್ದಾರೆ. ಸಂಸ್ಕೃತಿಯೆನ್ನುವದು ನಾಗರಿಕರ ಭೋಗಲಾಲಸೆಯಲ್ಲಿಲ್ಲ; ಅದು ಅಂತಃಕರಣದ ಸಹಜ ವಿಕಾಸದಲ್ಲಿ ಅಡಗಿದೆ. ಅಂತೆಯೇ ಕಪಟವಿನಯಗಳನ್ನು ಪ್ರದರ್ಶಿಸಿ ಕೃತಕನಾಗರಿಕತೆಯ ಆಡಂಬರದ ಸೋಗಿನಲ್ಲಿ ಹೃದಯದ ಕುರೂಪವನ್ನು ಬೈತಿಟ್ಟುಕೊಳ್ಳುವ ಭಾವ ಹೀನರನ್ನು ಕುರಿತು ಕವಿ ವಿಡಂಬನೆ ಮಾಡಿದ್ದಾರೆ, ಇಂಥ ಭಾವಹೀನರಿಗಿಂತಲೂ ಕತ್ತೆಯೇ ವಾಸಿ ಎನ್ನುತ್ತಾರೆ.

ಕತ್ತೆ ಹಿಂಸಕನಲ್ಲ ಸತ್ಯವಾದಿ
ಹಾಳು ಗೋಡೆಯೆ ದಿಕ್ಕು ಅದರ ಹಾದಿ
ಕಳವು ಗೊತ್ತಿಲ್ಲ ಸಂಗ್ರಹವು ಇಲ್ಲಾ
ಬೂದಿಯೆಂದರೆ ಪ್ರೀತಿ ತಿಂದದ್ದೆ ಬೆಲ್ಲಾ. [1]

ಭಾವಹೀನರಿಗಿಂತಲೂ ಕಸಕಡ್ಡಿಯಿಂದಲೇ ಹೊಟ್ಟೆ ಹೊರೆಯುವ ಆಜ್ಞಾಧಾರಕ ಕತ್ತೆಯೆ ವಾಸಿಯಲ್ಲವೆ ?

ಈ ವಿಡಂಬನೆಯ ಹಿಂದೆ ಮಾನವತೆಯ ಸ್ವಾಭಾವಿಕ ವಿಕಸನಕ್ಕೆ ಕಾತರವಾದ ಹೃದಯದ ಉದ್ವೇಗ ಪ್ರೇರಕಭಾವವಾಗಿದೆ ಎಂಬುದನ್ನು ಅರಿತರೆ ಆ ತೀಕ್ಷ್ಣ ವ್ಯಂಗ್ಯದ ವಿಡಂಬನೆಯ ಗಾಂಭೀರ್ಯ ಸಂವೇದ್ಯವಾಗುತ್ತದೆ. ಭಾರತೀಯ ಉಚ್ಚ ಸಂಸ್ಕೃತಿಯ ಪರಿಸರದಲ್ಲಿ ಬಾಳಿಬೆಳೆದ ಕವಿ ಇಂದಿನ ಈ ಪಾಶ್ಚಾತ್ಯ ಅಂಧಾನುಕರಣೆಯ ಫ್ಯಾಶನ್ ಯುಗವನ್ನು ಕಟುವಾಗಿ ಟೀಕಿಸಿದ್ದಾರೆ.

ಅಂಗಾಂಗ ವ್ಯಂಗವಿರಬಹುದು ಇರದಿರಬಹುದು
ವ್ಯಂಗ್ಯಕಾವ್ಯದ ಹಾಗೆ ನಿನ್ನ ಮಾಟ,
ನಿನ್ನ ಮೈಯನ್ನೆಲ್ಲ ನೀನೆ ಬಣ್ಣಿಸಿಕೊಂಡೆ
ಬೇರೆ ಬಣ್ಣನೆ ಬರಿಯ ಬಣ್ಣದಾಟ, [2]

ಈ ಪದ್ಯದಲ್ಲಿ, ಹಾಳಾಗುತ್ತಿರುವ ಭಾರತೀಯ ಸಂಸ್ಕೃತಿಯ ಬಗೆಗೆ ವ್ಯಸನ ಪಟ್ಟಿದ್ದಾರೆ. ಬೇಂದ್ರೆಯವರು, ನಿರ್ಮಲ ಒಲವಿನ ಹರಿಕಾರ ! ಮಾನವೀಯ ಪ್ರೇಮದ ಉದ್ಗಾತೃ. ಅಂತೆಯೇ ಅವರು ಹಾಡುತ್ತಾರೆ,

ಕುಂದು ಕೊರತೆ ತೋರಲಿಲ್ಲ
ಬೇಕು ಹೆಚ್ಚಿಗೇನು ?

1 ಕತ್ತೆಯು ಸತ್ಸ್ವರೂಪ (ಮರ್ಯಾದೆ) ಪುಟ, ೩೬.
2 ಅವರ್ಣನೀಯ ಅರ್ವಾಚೀನ ಸೌಂದರ್ಯ (ನಾದಲೀಲೆ) ಪುಟ, ೫೩.

ಹೊಟ್ಟಿಗಿತ್ತ ಜೀವ ಫಲವ
ತುಟಿಗೆ ಹಾಲು ಜೇನು. [1]

ಜೀವನದ ಸಮಸ್ತವನ್ನೂ ಈ ಒಲವಿನ ವಿದ್ಯುದಾಲಿಂಗನದಲ್ಲಿ ಬಂಧಿಸಬೇಕು. ದುರ್ಬಲ ಸ್ವಾರ್ಥದ ಆಚೆಗೆ ಹೋಗಿ ಶುದ್ಧಾಂತಃಕರಣರಾಗಿ ಒಲವನ್ನು ಅವಲಂಬಿಸಿದರೆ ಜೀವನ ನಂದನವನವಾದೀತು. ಇದು ಬೇಂದ್ರೆ ಉಗ್ಗಡಿಸುವ ಸಾಮಾಜಿಕ ಮೌಲ್ಯದ ಸಾರ್ವತ್ರಿಕ ಪ್ರಶಂಸೆ. ‘ ನಮ್ಮ ಸುಯೋಚನೆಯಂತೆ ಸಮಾಜ ಮಾರ್ಪಡುವವರೆಗೂ ಒಂದರ ಮೇಲೊಂದು ಯೋಜನೆ ಬರಬೇಕು. ಯೋಚನೆ ಸರಿಯಾಗದ್ದರಿಂದಲೇ ಯೋಜನೆ ಕೆಡುವದುಂಟು ’ ಎಂಬುದು ಸುವ್ಯವಸ್ಥಿತ ಸಮಾಜವನ್ನು ನಿರ್ಮಾಣಮಾಡುವಲ್ಲಿ ಬೇಂದ್ರೆ ಅಭಿಪ್ರಾಯವಾಗಿದೆ.

ದೇವಗುಣವು ಬೆಳೆಯುದೇ
ಮಾನವ ಗುಣ ತಿಳಿಯದು.
ಪಶುಪಾಶವು ಅಳಿಯದು | ಮತ್ತೆ ಯೋಚನೆ | [2]

ಹೀಗೆ ಸಮಾಜ ಮಾರ್ಪಾಡಾಗುವವರೆಗೂ, ಪಶುತ್ವದ ದಮನವಾಗಿ ಮಾನವಗುಣ ಜಾಗೃತವಾಗಿ ದೇವಗುಣವಾಗುವವರೆಗೂ ಈ ಸಮಾಜವು ಯೋಚಿಸಲೇಬೇಕಾಗಿದೆ. ಈ ದೇವಗುಣದ ಪುನರುತ್ಥಾನದ ಹಿರಿಯಾಶೆಯೇ ಬೇಂದ್ರೆ ಸಮಾಜಚಿಂತನದ ಅಂತಃಸ್ಫೂರ್ತಿ ಎಂದು ಹೇಳಬಹುದು.

‘ ಪ್ರಜಾಸಂಖ್ಯೆ ಹಿಡಿತಕೆ ಬೇಕು ’ [3] ಎಂಬಲ್ಲಿ ಕವಿಯ ಸಮಕಾಲೀನ ಚಿಂತನೆಯು ಸ್ಫುಟವಾಗಿ ಒಡಮೂಡಿದೆ. ಪ್ರಜಾಸಂಖ್ಯೆಯ ನಿಯಂತ್ರಣ ಇಂದು ನಮ್ಮ ದೇಶದ ಧ್ಯೇಯವಾಕ್ಯವೇ ಆಗಿದೆ. ಕವಿಹೃದಯ ದೇಶದ ಅಂತರಂಗದ ಬಯಕೆಯನ್ನು ಅರ್ಥ ಮಾಡಿಕೊಂಡು ಕಾಲದ ಅವಶ್ಯಕತೆಯನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ.

ದಲಿತರಲ್ಲಿ ದಯೆ ಇರಬೇಕು
ನಿಷ್ಠುರನ್ನೆ ಮೇಲ್ತರಬೇಕು
ಗುಣದಿಂದಲೆ ಮುಂದ ಬರಬೇಕು. [4]

---

1 ನಾನು ಬಡವಿ (ನಾದಲೀಲೆ) ಪುಟ, ೫೯.
2 ಯೋಚನೆ-ಯೋಜನೆ (ಯಕ್ಷಯಕ್ಷಿ) ಪುಟ, ೩೭.
3 ನಾಡಜಾಣರಿಗೆ ನಾಕು ಮಾತು (ಯಕ್ಷ-ಯಕ್ಷಿ) ಪುಟ, ೪೧.
4 ,, ,, ,, ,,

ಈ ವಿಚಾರಗಳಲ್ಲಿ ಹುದುಗಿರುವ ಸತ್ಯವು ಸಮಕಾಲೀನ ಸಾಮಾಜಿಕ ಸಂಗತಿಗಳಿಗೂ ಪೂರ್ಣವಾಗಿ ಅನ್ವಯಿಸುತ್ತದೆ ಎಂಬುದನ್ನರಿತಾಗ ಬೇಂದ್ರೆ ಸಮಾಜಚಿಂತನದ ಜೀವಂತಿಕೆಯ ದರ್ಶನವಾಗುತ್ತದೆ.

ಅನ್ನಬಕಾಸುರನ ರಾಜ್ಯದಲ್ಲಿ ನಡೆದ, ನಡೆಯುತ್ತಿರುವ ಭೀಷಣ ಕೋಲಾಹಲದ ವಿಷಮತೆ ಬೇಂದ್ರೆ ಹೃದಯವನ್ನು ಗಾಸಿಗೊಳಿಸಿದೆ. ಇಲ್ಲಿ ಇರುವದು ಅನ್ನದ ಕೊರತೆಯಲ್ಲ; ಮನದ ಕೊರತೆ, ಮಾನವ್ಯದ ಕೊರತೆ. ಇದನ್ನೇ ಅವರ 'ಅನ್ನಬೇಕು' ಹಾಗೂ 'ಬಿಡುಗಡೆ' ಕವಿತೆಗಳು ಸಾರಿ ಹೇಳುತ್ತವೆ.

ಒಳ್ಳೆ ಮನೆ ಇರಬೇಕು; ಸರಿ ವಸ್ತ್ರ ಬೇಕು  
ಕದ್ದಿಟ್ಟ ಸರಕನ್ನು ಹೊರಗೆ ಹಾಕು. [1]

ಇದು ಬೇಂದ್ರೆ ಹೃದಯದ ಪ್ರಾಮಾಣಿಕ ಅಭೀಪ್ಸೆ. ಆಹಾರದಂತೆ ಒಳ್ಳೆಯ ಆಶ್ರಯ ಆಚ್ಛಾದನಗಳಿರದೇ ಮನುಷ್ಯಬಾಳುವದು ಕಷ್ಟ. ಜೀವನಾವಶ್ಯಕತೆಯ ವಸ್ತುಗಳಲ್ಲಿ ಆಹಾರದೊಡನೆ ಇವುಗಳೂ ಮಹತ್ವದವೆನಿಸಿವೆ. 'ಕದ್ದಿಟ್ಟ ಸರಕನ್ನು ಹೊರಗೆ ಹಾಕು' ಎಂಬಲ್ಲಿ ಬೇಂದ್ರೆಯವರು ಸಮಾಜದ ಕಳ್ಳಪೇಟೆಯ ಕದೀಮರ ಘಾತಕ ಕೃತ್ಯಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ಅವರಿಗೆ ನಿರ್ಭಯವಾಗಿ ಈ ಮಾತನ್ನು ಹೇಳುತ್ತಿದ್ದಾರೆ ಎಂಬುದನ್ನು ತಿಳಿದಾಗ ಆ ಸೂಕ್ಷ್ಮಮತಿತ್ವದ ಸಮಕಾಲೀನ ಸಂವೇದನೆಯ ಬಗೆಗೆ ಆದರ, ಅಭಿಮಾನ ಮೂಡುತ್ತವೆ.

ಬೇಂದ್ರೆಯವರ ಸಮಾಜಚಿಂತನದಲ್ಲಿ ಪಲಾಯನವಾದಿತ್ವಕ್ಕೆ (Escapism) ಎಡೆಯಿಲ್ಲ. ಅವರು ಅತಿಶಯಆದರ್ಶವಾದಿಗಳೂ (Over-ideal) ಅಲ್ಲ. ಅವರ ಆದರ್ಶವು ವ್ಯಾವಹಾರಿಕ ಸಾಧ್ಯತೆಯಿಂದ ಎಂದೂ ದೂರ ಸರಿಯಲಾರದು.

ಆಳುವ ಹಂಬಲ ಹರಿಯುವ ವರೆಗೆ,  
ಆಳುತನದ ಅಂಜಿಕೆ ಅಳಿಯಲಾರದು.  
ಅನ್ನಿಗರನ್ನು ಆಳಲು ಹೋಗಿ,  
ಆಳಿನ ಆಳಾಗುತ್ತಿದ್ದಾರೆ ಜನ ಜನಗಳು  
ತನ್ನ ತಾನಾಳಲು ಒಲ್ಲರು. [2]

ಈ ನುಡಿಯನ್ನು ಒಂದು ಶಾಶ್ವತ ಸತ್ಯ (Eternal truth) ಎಂದು ಸ್ವೀಕರಿಸಬಹುದು. ಬಹುಶಃ ಅಧಿಕಾರಲಾಲಸೆ, ವೈರ ಇತ್ಯಾದಿ ದೈತ್ಯಆವೇಶಗಳ

---

1 ಅನ್ನಬೇಕು (ಯಕ್ಷ-ಯಕ್ಷಿ) ಪುಟ, ೬೭.  
2 ಬಿಡುಗಡೆ (ಯಕ್ಷ-ಯಕ್ಷಿ) ಪುಟ, ೬೯.

ಆವಾಹನಕ್ಕೆ ಈ ಆಳುವ ಬಯಕೆಯೇ ಮೂಲ. ಆಳುವ (ಅಧಿಕಾರದ) ದುರಾಶೆ ದೂರಾಗಬೇಕು. ತನ್ನ ತಾನಾಳುವ ಸ್ವಾತ್ಮನಿಯಂತ್ರಣ ಸಾಧ್ಯವಾದಾಗಲೇ ಜಗತ್ತು ಬದುಕುತ್ತದೆ.

ಹೀಗೆ ಬೇಂದ್ರೆ, ಸಮಾಜದ ಮೂಲಭೂತ ದೌರ್ಬಲ್ಯಗಳನ್ನು ತಮ್ಮ ಕವಿ ಕಣ್ಣಿನ ದುರ್ಬೀನಿನಿಂದ ನಿರೀಕ್ಷಿಸಿ ಅವುಗಳಿಗೆ ಮಾನಸಶಾಸ್ತ್ರೀಯ ಪರಿಹಾರವನ್ನು ನೀಡಿದ್ದಾರೆ. ಸಾಮಾಜಿಕ ಸಮಸ್ಯೆಗಳನ್ನು ಬೇಂದ್ರೆಯವರು ಅಭ್ಯಸಿಸುವದು ಮೊದಲು ಮಾನಸಶಾಸ್ತ್ರಜ್ಞನ ( Psychologist ) ರೀತಿಯಲ್ಲಿ. ನಂತರ ಸಮಾಜಶಾಸ್ತ್ರಜ್ಞನ (Sociologist) ದೃಷ್ಟಿಯಲ್ಲಿ ಕೊನೆಯದಾಗಿ ದಾರ್ಶನಿಕನ (Philosopher) ನೋಟದಲ್ಲಿ ಅಂತೆಯೇ ಬೇಂದ್ರೆ ಸಮಾಜಚಿಂತನವು ಸಾಮಾಜಿಕ ಸಮಸ್ಯೆಗಳಿಗೆ ಎರಡು ರೀತಿಯ ಪರಿಹಾರ ನೀಡುತ್ತದೆ. ಮೊದಲನೆಯದಾಗಿ ಸಮಾಜದ ಸಮಷ್ಟಿ ಮನಸ್ಸನ್ನೇ (Collective Mind) ಪರಿವರ್ತಿಸುವ ಹಾದಿ ಹೇಳಿಕೊಡುತ್ತದೆ. ಎರಡನೆಯದಾಗಿ ವ್ಯಕ್ತಿಯ ಅಂತರಂಗವನ್ನು ( Individual Mind ) ಪರಿವರ್ತನೆ ( Transformation ) ಯ ಮಾರ್ಗದತ್ತ ಕೊಂಡೊಯ್ಯಲು ಉತ್ಸುಕವಾಗುತ್ತದೆ. ಈ ದ್ವಿವಿಧ ಪರಿಹಾರದ ಮಾರ್ಗವು ವಾಸ್ತವಿಕವೂ ಸಾಧ್ಯವೂ ಆಗಿದೆ.

ಮತಮತದ ಬಂಧ, ಜನವಾಯಿತಂಧ, ಜಗ
ಕುರುಕ್ಷೇತ್ರದಿಂದಾಽಽ
ಓ ನೆಲದ ತಾಯೆ, ಓ ಬಾನ ತಂದೆ, ಬಾಂ-
ಧವ್ಯವಿರಲಿ ಚಂದಾಽಽ [1]

ಇಲ್ಲಿ ಮತೀಯ ಜಗಳಗಳಿಂದ ಹಾಳಾದ ಭಾರತೀಯರಿಗೆ ಹಾರ್ದಿಕ ಉಪದೇಶವಿದೆ. ಮತದ ದುರಭಿಮಾನದಿಂದ 'ಮತಿ' ವಿಕೃತವಾಗದಿರಲಿ ಎಂಬುದೇ ಕವಿವರ್ಯರ ಹಿರಿಯಾಸೆ.

ಕುಣಿಯೊಳಗಽ ಕುಣಿಸ್ಯಾಡ್ಯಾರ ಹೆಣಾ
ಬಸಿರಿನೊಳಗ ಬಣಾ ಹುಟ್ಟಿಸ್ಯಾರಣಾ,
ನೆಲಾ ಎಲ್ಲಾ ಮಾಡ್ಯಾರ ಖಣಾ
ನಡೆಸಿದರಿಲ್ಲಿ ರಣಾ
ತೀರಿಲ್ಲಾ–ಇನ್ನೂ ಆ ಜನಾ. [2]

1. ದ್ಯಾವಾ–ಪೃಥಿವೀ (ಯಕ್ಷ-ಯಕ್ಷಿ) ಪುಟ, ೫೯.
2. ಕುಣಿಯೊಳಗ ಹೆಣಾ (ಯಕ್ಷ-ಯಕ್ಷಿ) ಪುಟ, ೬೮,

ಮಾನವಮನಸ್ಸಿನ ಅಸುರೀ ಲಾಲಸೆಯನ್ನು ಇದಕ್ಕಿಂತ ಭೀಷಣವಾಗಿ ಇನ್ನಾರು ಹೇಳಬಲ್ಲರು ? 'ಕುಣಿಯೊಳಗs ಕುಣಿಸ್ಯಾಡ್ಯಾರ ಹೆಣಾ' ಎಂಬ ಶಬ್ದಗಳಲ್ಲಿಯ ರುದ್ರಭೀಭತ್ಸವು ಸಮಾಜದ ವಿಕೃತ ಕೋಲಾಹಲದ ಸ್ಮಶಾನತಾಂಡವಕ್ಕೆ ಶ್ರುತಿ ಗೊಡುತ್ತದೆ, ಭೂಮಿಯನ್ನು ರಣವನ್ನಾಗಿ ಖಣವನ್ನಾಗಿ ಮಾಡಿದ ಮಾನವಮತಿ 'ನೆಲದ ಬಸಿರಿನೊಳಗsಬಣಾ' ಮಾಡಿದೆ. ಈ ಗುಂಪುಗಾರಿಕೆ ಮಾಯವಾಗ ದಿದ್ದಲ್ಲಿ ಸಾಮಾಜಿಕ ಸ್ವಾಸ್ಥ್ಯ, ಸಾಮಾಜಿಕ ಶಾಂತಿ, ವಿಕಾಸ, ಕನಸಿನ ಮಾತಾ ದೀತು. 'ನಾದಲೀಲೆ'ಯಲ್ಲಿ ಬರುವ 'ಸಿಟ್ಟು-ಸಾಂತಿ' ಈ ಮಾತಿಗೆ ಪೂರಕ ವಾಗಿದೆ.

ಹೀಗೆ ಬೇಂದ್ರೆಯವರು ಜಾಗತಿಕ ಸಮಾಜದ ಕನಸನ್ನು ಕಂಡಿದ್ದಾರೆ. ಭೀತಿ ಮುಕ್ತವಾದ, ಶಾಂತಪ್ರಸನ್ನವಾದ, ಸರ್ವರಿಗೂ ಸಮಾನ ಅವಕಾಶನೀಡಬಲ್ಲ ಸುಸಂಸ್ಕೃತ ಸಮಾಜದ ನಿರ್ಮಾಣದಲ್ಲಿ ಬೇಂದ್ರೆಪ್ರಜ್ಞೆ ಆಸಕ್ತವಾಗಿದೆ. ಬೇಂದ್ರೆ ಯವರ ಸಮಾಜಚಿಂತನದ ಗಮನೀಯವಾದ ಗುಣವೆಂದರೆ ಬೇಂದ್ರೆ "ಯುಟೋ- ಪಿಯನ್" ಮಾದರಿಯ ಅವ್ಯಾವಹಾರಿಕ ಆದರ್ಶಗಳ ಪ್ರಸ್ಥಾಪನಕ್ಕಾಗಿ ಪ್ರಯತ್ನಿ ಸುವದಿಲ್ಲ. ಜ್ವಲಂತ ಸಮಸ್ಯೆಗಳಿಗೆ ವಾಸ್ತವಿಕವಾದ ಪರಿಹಾರವನ್ನು ನೀಡುವ ತವಕದಿಂದ ಬೇಂದ್ರೆ, ಸಮಾಜದ ಅಂತರಂಗದ ದೌರ್ಬಲ್ಯಗಳನ್ನು ಶಾಸ್ತ್ರೀಯ ವಾಗಿ ವಿವೇಚಿಸುತ್ತಾರೆ. ಮುಖ್ಯತಃ ಅವರೂ ಒಬ್ಬ ವ್ಯಕ್ತಿಯಾಗಿ ಸಮಾಜದ ವಿಕೃತಿಗಳ ಕಹಿಫಲವನ್ನು ಅನುಭವಿಸಿದ್ದಾರೆ. ಹಾಗೆಂದು ಅವರು ದೃಷ್ಟಾರನಿಗೆ ಸಲ್ಲದ ಉದ್ವೇಗದ ಸೆಳೆತಕ್ಕೆ (Sentimental Attachment) ಸಿಲುಕಿದವರಲ್ಲ. ಸಮಾಜದ ಒಳಗಿದ್ದರೂ ಅದರ ಹೊರಬಂದು (ಮಾನಸಿಕ- ವಾಗಿ) ಒಬ್ಬ ಸ್ಥಿತಪ್ರಜ್ಞನಾದ ಸಂತನ (Detached Saint) ಹಾಗೆ ತಮ್ಮ ಸುತ್ತಲಿನ ವಾತಾವರಣದ ಏರುಪೇರುಗಳನ್ನು ಪರೀಕ್ಷಿಸಿ ಅವು ಗಳಿಗೆ ವ್ಯಾವಹಾರಿಕವಾದ, ತರ್ಕಸಂಗತವಾದ ಪರಿಹಾರಗಳನ್ನು ಸೂಚಿ ಸಿದ್ದಾರೆ.

ಮುಖ್ಯವಾಗಿ ಸಮಾಜದಲ್ಲಿ ಬೇಂದ್ರೆಯವರನ್ನು ಬಾಧಿಸಿದ ವಿಷಯಗಳೆಂದರೆ ೧) ಸಾಮಾಜಿಕ ವರ್ಗ ಕಲಹ ೨) ದಲಿತರ ಮೇಲೆ ಅತ್ಯಾಚಾರ ೩) ಬೌದ್ಧಿಕ ಅಧಃಪತನ ೪) ಸಂಪತ್ತಿನ ಅಸಮಾನ ಹಂಚಿಕೆ ೫) ಮಾನವನಲ್ಲಿ ಅಡಗಿ ಕೊಂಡಿರುವ ಯುದ್ಧೋನ್ಮುಖತೆ. ಈ ಐದೂ ವಿಕಾರಗಳು ನಾಶವಾಗಬೇಕಾದರೆ ಮನುಷ್ಯನ ವ್ಯಕ್ತಿತ್ವದ ಪೂರ್ಣ ವಿಕಾಸವಾಗಬೇಕು. ಮನಸ್ಸಿನ ಶ್ರೀಮಂತಪರಿ- ವರ್ತನವಾಗಬೇಕು. ಪಶುತ್ವದಿಂದ ದೇವತ್ವದ ಹಂತಕ್ಕೆ ಮನುಷ್ಯ ತಲುಪಬೇಕು. ಇದೇ ಕನಸನ್ನು ಮಹರ್ಷಿ ಅರವಿಂದರೂ ಕಂಡರು. ಬೇಂದ್ರೆಯವರೂ ಇದೇ ಕನಸು ಕಂಡಿದ್ದಾರೆ. ತನ್ನ ಮನಸ್ಸಿನ ಅಂತರ್ನಿರೀಕ್ಷಣೆಗಾಗಿ ಇಂದು ಮನುಷ್ಯ

ಸಿದ್ಧನಾಗಬೇಕು. ಈ ಸ್ವಪ್ರಜ್ಞೆಯ ಉದಯ ವಿಕಾಸಗಳಾಗದಿದ್ದರೆ (Development of Self-Knowledge) ಮನುಷ್ಯ ಹೇಗೆ ಸುಧಾರಿಸಬೇಕು ?

'There is nothing for which self Knowledge is more indispensable in practical life than to enable a man to steer a straight course between opposite extremcs and to discern clearly the boundary line between right and wrong.'[1] ಇದನ್ನೇ ಬೇಂದ್ರೆಯವರು 'ತನ್ನ ತಾನಾಳಲು ಒಲ್ಲರು' ಎಂಬಲ್ಲಿ ಹೇಳಿದ್ದಾರೆ.

ಅನ್ಯರ ಕಾರ್ಯಕ್ಷಮತೆಯನ್ನು ಸೌಹಾರ್ದದಿಂದ ಕಾಣದ ದೋಷಿಕ ದೃಷ್ಟಿವಂತರಾದ (ಕು) ವಿಮರ್ಶಕರಿಗೆ ಬೇಂದ್ರೆ ಮೇಲಿಂದ ಮೇಲೆ Reference ಮಾಡುತ್ತಾರೆ. ಇಂಥವರಿಂದ ಸಮಾಜದ ಕ್ರಿಯಾವಂತಿಕೆಗೆ ಬಾಧೆ ಬರುತ್ತದೆ. ಮುಕ್ತಮನಸ್ಸಿನಿಂದ ಮಾಡುವ ಉಪಯುಕ್ತ ವಿಮರ್ಶೆಯಿಂದ ಸಮಾಜದ ಸ್ವಾಸ್ಥ್ಯದ ಸಂವೃದ್ಧಿಯಾದರೆ ದೋಷೈಕ ದೃಷ್ಟಿವಂತರ ಅವಿವೇಕ ವಿಮರ್ಶನದಿಂದ ವಿರಸವುಂಟಾಗುತ್ತದೆ. ಅಂತೆಯೇ ವಿವೇಕಪೂರ್ಣ ವಿಚಾರವಿಮರ್ಶೆಯ ಸತ್‌ಪ್ರಜ್ಞೆ ನಾಡನಾಗರಿಕರಲ್ಲಿ ಬೆಳೆಯಬೇಕು. ಕುವಿಮರ್ಶೆಯ ಅಕಾರ್ಯವನ್ನು ಬೇಂದ್ರೆ ಬಹಳ ಧ್ವನಿಪೂರ್ಣವಾಗಿ ಹೀಗೆ ಹೇಳಿದ್ದಾರೆ,

ನಾಲಿಗೆ ನಿನ್ನಾ ಪಾಲಿಗೆ ಬಂತು  
ರಸವನೆ ವಿರಸಿಸಿ ನುಡಿಸುವುದು  
ನುರಿಸದೆ ತಿಂದೆ, ಅಂತೇ ಎಂದೆ  
ಅನ್ನವು ಹೊಟ್ಟೇ ಕೆಡಿಸುವದು.[2]

ಹೀಗೆ ಬೇಂದ್ರೆ ಸಮಾಜ ಚಿಂತನ ಅತ್ಯಂತ ಜಾಗೃತವಾಗಿದ್ದು ಸಮಾಜದ ಸಾರ್ವಕಾಲೀನ ಹಾಗೂ ಸಮಕಾಲೀನ ಸಮಸ್ಯೆಗಳಿಗೆ ವಾಸ್ತವಿಕವಾದ ವೈಜ್ಞಾನಿಕವಾದ ಪರಿಹಾರವನ್ನು ನೀಡುವಲ್ಲಿ ಯಶಸ್ವಿಯಾಗಿದೆಯೆಂದು ಹೇಳಬಹುದು. ಬೇಂದ್ರೆ ಬಯಸುವದು ದೈವೀಕೃತಮಾನವ್ಯವನ್ನು (Deified humanity); ಅಮಾನವೀಕೃತ ಮಾನವ್ಯವನ್ನಲ್ಲ (Dehumanised humanity). ಸಾಹಿತ್ಯವನ್ನು ಸಮಾಜಸುಧಾರಣೆಗಾಗಿ ದುಡಿಸಿಕೊಳ್ಳಬೇಕು ಎಂಬ ಪ್ಲೇಟೋವಾದದಂತೆ ಇಂದಿನ ಸಮಾಜದ ಪುನರ್ನಿರ್ಮಿತಿಗೆ ಬೇಂದ್ರೆಯವರ ಕಾವ್ಯದಿಂದ ಸರಕು ಹೇರಳವಾಗಿ ದೊರೆಯಬಲ್ಲದು. ಮುಖ್ಯವಾಗಿ ಸಮಾಜಶಾಸ್ತ್ರಜ್ಞರು, ರಾಜಕೀಯ ಮುಂದಾಳುಗಳು ಅತ್ತ ಲಕ್ಷ್ಯಹರಿಸಬೇಕು.

---

1 Modern Science and Modern thought.  
By— S. Laiug. Page 209.

2 ಜಿಹ್ವೆ ! (ಯಕ್ಷ-ಯಕ್ಷಿ) ಪುಟ, ೭೨.

§ § § §

೩೧

# ಬೇಂದ್ರೆ ಕಾವ್ಯದಲ್ಲಿಯ ರಾಷ್ಟ್ರಪ್ರಜ್ಞೆ

ಪ್ರಹ್ಲಾದ ಬ. ನರೇಗಲ್ಲ

**ಪೀಠಿಕೆ :**

ರಾಜಕೀಯ ಪ್ರಜ್ಞೆಯೆಂಬುದು ಸಮಗ್ರವಾದ 'ರಾಷ್ಟ್ರಪ್ರಜ್ಞೆ'ಯ ಒಂದು ವಿಶಿಷ್ಟ ಅಂಶವಾಗಿದೆ. ಆದ್ದರಿಂದ ಕವಿ ಶ್ರೀ ಬೇಂದ್ರೆಯವರ ರಾಷ್ಟ್ರಪ್ರಜ್ಞೆಯನ್ನೇ ಆಧರಿಸಿ ರಾಜಕೀಯ ಪ್ರಜ್ಞೆ ಅವರ ಕಾವ್ಯಗಳಲ್ಲಿ ಅಲ್ಲಲ್ಲಿ ಹೇಗೆ ಒಡಮೂಡಿ ಬಂದಿದೆಯೆಂಬುದನ್ನು ಸ್ಥೂಲವಾಗಿ ಇಲ್ಲಿ ತೋರಿಸಲು ಯತ್ನಿಸಿದ್ದೇನೆ. ಕವಿಯ ಉಕ್ತಿಗಳನ್ನೇ ಸಂಕಲನಗೊಳಿಸಿ ಈ ಲೇಖನಕ್ಕೆ ಆಧಾರ ಎಂದು ಉಲ್ಲೇಖಿಸಿದ್ದೇನೆ. ಅವರ ರಾಷ್ಟ್ರಪ್ರಜ್ಞೆ 'ವಿಶ್ವಪ್ರಜ್ಞೆ'ಯ ಒಂದು ವಿಶಿಷ್ಟ ಆವಿಷ್ಕಾರವೆಂಬುದನ್ನೂ ನಾವು ಅರಿಯಬೇಕು. ಕವಿಪ್ರಜ್ಞೆ ಎಂತಹದೆಂಬುದನ್ನು ಅವರ ಅಮರ ಪದ್ಯ 'ನಾನು' ಎಂಬುದು ಸ್ಪಷ್ಟಗೊಳಿಸುತ್ತದೆ :

" ವಿಶ್ವಮಾತೆಯ ಗರ್ಭಕಮಲಜಾತಪರಾಗ ಪರಮಾಣು ಕೀರ್ತಿ ನಾನು ।
ಭೂಮಿತಾಯಿಯ ಮೈಯ ಹಿಡಿಮಣ್ಣು ಗುಡಿಗಟ್ಟಿ ನಿಂತಂಥ ಮೂರ್ತಿ ನಾನು ।
ಭರತಮಾತೆಯ ಕೋಟಿಕಾರ್ತಿಕೋತ್ಸವದಲ್ಲಿ ಮಿನುಗುತಿಹ ಜ್ಯೋತಿ ನಾನು ।
ಕನ್ನಡದ ತಾಯಿ-ತಾವರೆಯ ಪರಿಮಳವುಂಡು ಬೀರುತಿಹ ಗಾಳಿ ನಾನು ।
ನನ್ನ ತಾಯಿಯ ಹಾಲುನೆತ್ತರವ ಕುಡಿದಂಥ ಜೀವಂತ ಮಮತೆ ನಾನು । "

ಇನ್ನುಳಿದ ಕೆಲ ಉಕ್ತಿಗಳು ಈ ಮಾತನ್ನು ಸಮರ್ಥಿಸುತ್ತವೆ :

" ಕರ್ನಾಟಕ ಒಂದೇ .... ಕನ್ನಡವೂ ಭಾರತವೂ ಜಗವೆಲ್ಲವು ಒಂದೇ "
" ಕರ್ನಾಟಕಂ ಒಂದೆ । ಭೂಮಾತರಂ ವಂದೇ । ಭಾರತಂ ವಂದೇ. "

\+ \+ \+ \+ \+ \+

" ದೇವರಾಷ್ಟ್ರವೀ ಭೂಮಂಡಲವು
ಭಾರತ ರಾಷ್ಟ್ರವು ಅದರ ಮೆರಿ

ಮಾನವ ಕೋಟಿಯ ಪಾಲಕ-ಬಾಲಕ
ಭಾರತೀಯ ಜನ ನರ-ನಾರಿ."

+ + + + + +

## ಸ್ವಾತಂತ್ರ್ಯ-ಬಿಡುಗಡೆ ಕುರಿತು ಕವಿಯ ವಿಚಾರಗಳು :

೧೯೧೮ರಷ್ಟು ಪೂರ್ವದಲ್ಲಿ ಧಾರವಾಡದಲ್ಲಿ ಅದೇ ತಾನೆ ಪ್ರಕಟಗೊಳ್ಳುತ್ತಿದ್ದ. 'ಪ್ರಭಾತ' ಎಂಬ ಪದ್ಯಮಯ ಮಾಸಪತ್ರಿಕೆಯಲ್ಲಿ 'ಅಹಹ ಸ್ವಾತಂತ್ರ್ಯ ದೇವೀ' ಎಂಬ ತಮ್ಮ ಪದ್ಯವನ್ನು ಶ್ರೀ ಬೇಂದ್ರೆಯುವರು ಪ್ರಕಟಿಸಿದರು. ಸ್ವಾತಂತ್ರ್ಯವನ್ನು ಕುರಿತು ಎಷ್ಟೊಂದು ಭವ್ಯ ದಿವ್ಯ ಕಲ್ಪನೆಯನ್ನು ಕವಿ ತನ್ನ ಹೊಚ್ಚ ಹೊಸ ಹರೆಯದ ಮುಂಚಿನ ಅವಧಿಯಲ್ಲಿಯೆ ನೀಡಿದ್ದಾರೆ ಎಂಬುದನ್ನು ನೆನೆದಾಗ ನಾವು ಅಚ್ಚರಿಗೊಳ್ಳುತ್ತೇವೆ. ಇಲ್ಲಿ ಎರಡು ನುಡಿಗಳನ್ನು ಉದ್ಧರಿಸಲಾಗಿದೆ :

**ಅಹಹ ! ಸ್ವಾತಂತ್ರ್ಯದೇವೀ !**

"ದೇವಮಾನವರೆಲ್ಲ ಕಂಡ ಕನಸೇ
ಬಾರೆ, ಮನಸಿನೊಳು ನೆಲಸು ನನಸೇ !
ನೆನೆಸುತಿಹೆ ಹಸಿದ ಚೇತನೆಯ ತಿನಿಸೇ
ಬಾರೆ, ನನ್ನ ಎದೆಯೊಳಗೆ ಜನಿಸೇ !........"

"ಸೆರೆಯೆಂಬ ಹಿರಿಹಾವ ಹಿಡಿದ ಹದ್ದೇ
ಬಾರೆ, ಬೆಳಕು ಕತ್ತಲೆಯ ಜಿದ್ದೇ !
ಪರಮ ಪುರುಷನು ಜಗಕೆ ಕೊಟ್ಟ ಮುದ್ದೇ
ಬಾರೆ, ಪ್ರೀತಿಯುಗ ಬರುವ ಸದ್ದೇ !"

+ + + + + +

ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅತಿ ಮಹತ್ತ್ವದ್ದೆನಿಸಿದ ಗಾಂಧಿ ಯುಗದ ರಾಷ್ಟ್ರೀಯ ಚಳವಳಿಯ ಕಾಲಕ್ಕೆ ಪ್ರಭಾತಫೇರಿಗಾಗಿ ಬರೆದ ಇನ್ನೊಂದು ಪದ್ಯ. '**ಬಿಡುಗಡೆ**' ಎಂಬುದರಲ್ಲಿ ಎಷ್ಟೊಂದು ಸಹಜವಾಗಿ **ಬಿಡುಗಡೆಯ** ತಳಮಳವು ವ್ಯಕ್ತವಾಗಿದೆ ಎಂಬುದನ್ನೂ ರಾಜಕೀಯ ಚಳವಳಿಗೆ ದೈವೀಶಕ್ತಿಯ ಬೆಂಬಲ ಹೇಗೆ ಅವಶ್ಯವೆಂಬುದನ್ನೂ ನೋಡೋಣ :

“ ಇಗೊ ಹೊರಟೆವು ಬಿಡುಗಡೆಗಾಗಿ
ಬಹರಾರು ನಮಗಿದಿರಾಗಿ ? || ಪಲ್ಲ ||
ಮುಗಿಲೊಳಗೂ ಹಕ್ಕಿಗೆ ಹಾದಿ
ಕಡಲೊಳಗೂ ಮೀನಕೆ ಬೀದಿ
ಮಲೆಗಳೊಳೂ ಹೊಳೆಗೂ ಕೋಡಿ
ನಮಗಷ್ಟೇ ಏಕೀ ಬೇಡಿ ?
ಅದಕಾಗಿ | ತಾಗಿ | ಸಾಗಿ
ಇಗೊ........”

ತಳಮಳನೇ ಕುದಿವುದು ಜೀವ
ಈ | ಎದೆಯೊಳು ಹುಟ್ಟಿದೆ ಹೇವ
ನೀ | ಪರಿಕಿಸಿ ನಮ್ಮೀ ಭಾವ
ಬೆಂಬಲಕಿರು ನಮಗೆಲೆ ದೇವ
ಅದಕಾಗಿ | ತಾಗಿ | ಸಾಗಿ
ಇಗೊ........”

\+ \+ \+ \+ \+ \+

೧೯೨೨-೨೩ ರಲ್ಲಿ ನಾಗಪುರದಲ್ಲಿ ಪ್ರಾರಂಭವಾದ ಕಾಂಗ್ರೆಸ್ ತ್ರಿವರ್ಣಧ್ವಜ ಸತ್ಯಾಗ್ರಹಕ್ಕೆ ಅಂದಿನ ತರುಣನಾಯಕ ಡಾ. ಹರ್ಡೀಕರರು ಅಖಿಲಭಾರತ ಸ್ವರೂಪವನ್ನು ಕೊಟ್ಟರು. ಕರ್ನಾಟಕದಿಂದ ಯುವಕರನೇಕರು ಸತ್ಯಾಗ್ರಹಿಗಳಾಗಿ ನಾಗಪುರಕ್ಕೆ ಹೊರಟರು, ಧಾರವಾಡದಿಂದ ದಿ. ಜೋಗ ಶೀನಪ್ಪ ಮೊದಲಾದ, ಕವಿಯ ಪರಮಮಿತ್ರರು ಆ ಸತ್ಯಾಗ್ರಹಕ್ಕಾಗಿ ಹೊರಟಾಗ ಅವರನ್ನು ಬೀಳ್ಕೊಳ್ಳಲು ನಾವೆಲ್ಲಾ ರಾಷ್ಟ್ರೀಯ ಶಾಲಾವಿದ್ಯಾರ್ಥಿಗಳೂ, ಶಿಕ್ಷಕರೂ ರೇಲ್ವೆ ನಿಲ್ದಾಣಕ್ಕೆ ಹೋಗಿದ್ದೆವು. ಅಲ್ಲಿಯೇ ಸ್ಥಳದಲ್ಲಿಯೇ ‘ ನಾಡಗುಡಿ ’ ಪದ್ಯವನ್ನು ಬರೆದು ವೀರ ಸತ್ಯಾಗ್ರಹಿಗಳಿಗೆ ಅರ್ಪಿಸಲಾಯ್ತು.

## ನಾಡಗುಡಿ

ಬಾ ಬಂದೆಯಾ ಹೊತ್ತೆ ! ಬಾಗಿ ಎತ್ತುವೆನಿಂದು
ನಾಡಗುಡಿಯನ್ನು ಕೈಯೊಳ್ |
ಬಾ ಬಂದೆಯಾ ವೀರ, ಪೂರ್ವಜರ ಪುಣ್ಯವೇ
ಚರಿಸಿಂದು ನನ್ನ ಮೈಯೊಳ್ |

ಜೀವಜ್ಯೋತಿಯ ಬೆಳಕು ನಾಡ ಹಸಿರಿನ ಸೆಳಕು
ದೇವರಾಗದಲಿ ಬೆರೆಯೆ |
ಹೇವ ಹುಟ್ಟಿತು ಜೀವಭಾವಗಳ ಹೊಟ್ಟೆಯಲಿ
ಹೊರಟೆ ನಾ ವೈಯ ಮರೆಯೆ |
ಜಯನಾದ ನಾಲಿಗೆಯ ತುದಿಯಲ್ಲಿ ನೊಳಗುತಿದೆ
ಭಯವಿಲ್ಲ ಎದೆಯ ಬದಿಯೊಳ್ |
ಜಯವೆಂದು ಮುಳುಗಿದೆನು ದೇಶಭಕ್ತಿಯ ಪೂರ
ಬಂದಿರಲು ರಾಷ್ಟ್ರನದಿಯೊಳ್ |

ಅಂದಿನ ಚಳವಳಿಯ ಕಾವು ಯುವಕರಲ್ಲಿ ಎಂಥ ಉಗ್ರಹೇವವನ್ನು ಹುಟ್ಟಿಸಿ ಅವರು ಮೈಮರೆತು ಸತ್ಯಾಗ್ರಹದಲ್ಲಿ ಧುಮುಕುವಂತೆ ಮಾಡಿತೆಂಬುದನ್ನು ನವಿರೇಳುವಂತೆ ಕವಿ ವರ್ಣಿಸುತ್ತಾರೆ. ಅಂದಿನ ಮೂಬಣ್ಣದ ನಾಡಗುಡಿಯ (ರಾಷ್ಟ್ರಧ್ವಜದ) ಬಿಳಿ, ಹಸಿರು, ಕೆಂಪು ಬಣ್ಣಗಳಿಗೆ ಎಂಥ ಭವ್ಯ ರೂಪಕಾಲಂಕರ ವನ್ನು ತೊಡಿಸಿರುವರೆಂಬುದು ಮನಮೋಹಕವಾಗಿದೆ. ಹಿಂದು-ಮುಸ್ಲಿಂ ಸೋದ-ರರು ಭಾವೈಕ್ಯದಿಂದ ರಾಷ್ಟ್ರಧ್ವಜದ ಗೌರವಕ್ಕಾಗಿ ಹೋರಾಡಿ ದೇವರ ಪ್ರೀತಿಯ ಕೆಂಪು ಗುಲಾಬಿಯಲ್ಲಿ ಬೆರೆತರೆಂಬುದನ್ನು ಧ್ವನಿತಗೊಳಿಸಲಾಗಿದೆ. ದೇಶಭಕ್ತರ ಜೀವಾತ್ಮಗಳು ರಾಷ್ಟ್ರದ ಸಮೃದ್ಧಶಕ್ತಿಯೊಂದಿಗೆ ದೈವೀಸಂಪತ್ತನ್ನು ಪಡೆದ ರೆಂಬುದನ್ನು ಕವಿ ನಿರ್ಭೀತನಾಗಿ ಸ್ಮರಿಸುತ್ತಾನೆ. ದೇಶಭಕ್ತಿಯ ಮಹಾಪೂರದಲ್ಲಿ ತಾನೂ ಮುಳುಗಿ ಮಿಂದು ಪವಿತ್ರನಾದೆನೆಂದು ಧನ್ಯತೆಯ ಉದ್ಗಾರವನ್ನು ಉಸಿರುತ್ತಾನೆ.

\+ + + + +

## ಮಹಾತ್ಮರ ಅಹಿಂಸಾವ್ರತದ ರಾಜಕೀಯ ಪ್ರಭಾವ:

೧೯೩೨ರಲ್ಲಿ ಧಾರವಾಡದ ಸುಪ್ರಸಿದ್ಧ ಗೋಳೀಬಾರಿನ ಖಟ್ಲೆಯಲ್ಲಿ ಅಂದಿನ ತರುಣರನೇಕರು ಆರೋಪಿಗಳಾಗಿ ಅಂದಿನ ಬ್ರಿಟಿಷ್‌ಸರಕಾರದ ಸೆರೆಮನೆ ಗಳಲ್ಲಿ ಬಂಧಿತರಾದರು. ಅಂದಿನ ತರುಣನಾಯಕರಾದ ಉಭಯ ಶ್ರೀ ರಂಗರಾವ ದಿವಾಕರರೂ, ಮಧ್ವರಾವ ಕಬ್ಬೂರರೂ ಇನ್ನೂ ಅನೇಕ ನಿರಪರಾಧಿ ವೀರರೂ ಆ ರೋಮಾಂಚಕಾರಿ ದಿನಗಳಲ್ಲಿ ಸೆರೆಮನೆಗಳಲ್ಲಿ ಉಗ್ರ-ಕಠೋರಶಿಕ್ಷೆಗೊಳಗಾಗಿ ನಾನಾ ಯಾತನೆಗಳನ್ನು ಅನುಭವಿಸಿದರಷ್ಟೆ. ಇಂಥ ಅಹಿಂಸಾವ್ರತದ ತರುಣ ತಪಸ್ವಿಗಳನ್ನು ಕುರಿತು ರಾಷ್ಟ್ರೀಯಶಾಲೆಯ ಶಿಕ್ಷಕರಾದ ಗುರುವರ್ಯ ಶ್ರೀ ಬೇಂದ್ರೆ ಯವರು 'ತರುಣತಪಸ್ವಿ' ('ಗರಿ' ಯೊಳಗಿನ ೧೫ನೇ ಪದ್ಯ) ಎಂಬ ಅದ್ಭುತ ನಾಟ್ಯಮಯ ಪದ್ಯವನ್ನು ಬರೆದು ವಿದ್ಯಾರ್ಥಿಗಳಾದ ನಮ್ಮೆದುರು ವರ್ಗದ ಕೋಣೆ

ಗಳಲ್ಲಿ ಓದಿ ತೋರಿಸಿದರು. ಶ್ರೀ ದಿವಾಕರರು ಕೋರ್ಟಿನಲ್ಲಿ ಕೊಟ್ಟ ಹೆಸರಾಂತ ಹೇಳಿಕೆಯನ್ನು ಇಂಗ್ಲೀಷಿನಲ್ಲಿ ಓದಿ ತೋರಿಸುತ್ತ ಅದನ್ನು ತೇಜಸ್ವಿ ಕನ್ನಡದಲ್ಲಿ ಭಾಷಾಂತರಿಸುತ್ತ ಹೋದುದನ್ನು ಇಂದಿಗೂ ನಾನು ಸ್ಮರಿಸಿ ರೋಮಾಂಚಿತನಾಗುತ್ತೇನೆ. ಇರಲಿ. ಆ ಅದ್ಭುತ ಪದ್ಯದಲ್ಲಿ ಅಂದಿನ ತರುಣರ ಮಾನಸಿಕ ತುಮುಲವನ್ನೂ ಭಾರತಮಾತೆ ಸ್ವಪ್ನದಲ್ಲಿ ದರ್ಶನವಿತ್ತು ಹೇಳಿದ ‘ ವಿಜಯ ನಿನಗಹುದು ’ ಎಂಬ ಅಭಯದ ಆಶ್ವಾಸನವನ್ನೂ ಹುಬೇಹೂಬಾಗಿ ಕವಿ ಚಿತ್ರಿಸಿದ್ದಾರೆ. ಆಗ ನಿದ್ದೆಯೊಳಗಿಂದ ಎದ್ದ ‘ ತರುಣ ತಪಸ್ವಿ ’ ತನ್ನಷ್ಟಕ್ಕೆ ತಾನೆ ಹೀಗೆ ಉದ್ಗಾರ ತೆಗೆಯುತ್ತಾನೆ :

“ ಕೊಲ್ಲು ಕೊಲ್ಲುವೆನೆಂದು ಕೊಲ್ಲುತಿರುವವನು
ಕೊಲ್ಲುವನೆ ? ಕಾಯುವವ ಯಮನ ಯಮನಿಹನು ! ........
ದೇವನನುಮತಿಯಿಂದೆ ಬೆಂಕಿ ಉರಿಯುವದು
ದೇವನನುಮತಿಯೆಂದೆ ಗಾಳಿ ಹರಿಯುವದು ! ........
ಬಂಧನದೊಳಿರುವವರು ಬದ್ಧರಲ್ಲ,
ಬಂಧನಕೆ ಒಳಗಾಗೆ ಬದ್ಧರೆಲ್ಲಾ !
ಬಂಧನವ ಮೀರಿರುವದೇ ಮುಕ್ತಿ ನಿಜವು,
ಬಂಧನಕೆ ಬೆದರುವುದೆ — ಶಕ್ತಿ ನಿಜವು ?
ಬೆದರಿ ಉದುರುವರಾರು ಈ ನಿಮಿತ್ತಕ್ಕೆ ?
ಇದಿರು ಕಾಂಬುದು ನಿತ್ಯ ನನ್ನ ಚಿತ್ತಕ್ಕೆ. ”

ಎಂದು ಅವನ ಚೇತನದ ಚೆಲುವು ಚೇತರಿಸಿಕೊಂಡು ಏಳುತ್ತದೆ. ‘ ತೃಣಮಪಿನ ಚಲತಿ ತೇನ ವಿನಾ ’ ಎಂಬ ಅಭಯು ದೇವರಿಂದ ದೊರೆಯುತ್ತದೆ. ಆಗ ಆ ವೀರ ತಪಸ್ವಿ ಸತೇಜನಾಗಿ ಎಲ್ಲ ತ್ಯಾಗಕ್ಕೂ ಸಿದ್ಧನಾಗಿ ಸನ್ನದ್ಧನಾಗುತ್ತಾನೆ.

“ ಉಘೊ ! ಉಘೋ ! ಒಳಗಿರುವ ಬೆಳಕೆ ಬೆಳಕೇ !
ಉಘೋ ! ಉಘೋ ! ಹೊರಗೆ ಹರಿ ಏಕೆ ಒಳಕೇ ? ”

ಎಂದು ತಾಯಿ ಜಗದಂಬೆಯನ್ನು ಸ್ಮರಿಸುತ್ತ ಜಯಗಾನ ಮಾಡುತ್ತ ಅಂತಃಪ್ರಕಾಶದಲ್ಲಿ ಮಂತ್ರಘೋಷ ಮಾಡುತ್ತಾನೆ. ಅಕಸ್ಮಾತ್ತಾಗಿ ಅನಪೇಕ್ಷಿತವಾಗಿ ಕತ್ತಲಕೋಣೆಯ ಬಾಗಿಲು ತೆರೆದು ಬಿಡುಗಡೆ ಹೊಂದುವನು, ಎಂಬುದಾಗಿ ಈ ನಾಟ್ಯಮಯ ಪದ್ಯವು ಕೊನೆಗೊಳ್ಳುತ್ತದೆ. ಅಂದಿನ ಸನ್ನಿವೇಶದಲ್ಲಿ ತರುಣ-ನಾಯಕ ಶ್ರೀ ದಿವಾಕರರು ಅನಪೇಕ್ಷಿತವಾಗಿ, ಆರೋಪ ಸಿದ್ಧವಾಗದೆ ತಾತ್ಕಾಲಿಕ

ವಾಗಿ ಬಿಡುಗಡೆ ಹೊಂದಿದ ಪ್ರಸಂಗವು ಇಲ್ಲಿ ಈ ಪದ್ಯದಲ್ಲಿ ಇಂತು ಅಮರತೆಯನ್ನು ಪಡೆದಿದೆ.

\+ + + +

**ಜನ್ಮಭೂಮಿಯ ಪವಿತ್ರ ಮಾತೃದೇವತಾಸ್ವರೂಪ :**

೧) ಕವಿಗಳು ತಮ್ಮ ಜನ್ಮಸ್ಥಳ ಧಾರವಾಡದ ದುರ್ಗಾದೇವಿಯನ್ನು 'ಧಾರವಾಡದ ತಾಯಿ ನನಗಾಧಾರ ನಿನ್ನದಲ್ಲದಿಲ್ಲ' ಎಂದು ಬಾಯ್ತುಂಬಿ ಬಿನ್ನವಿಸುತ್ತಾರೆ. ಆ ಊರು ಬಿಟ್ಟು ಸೊಲ್ಲಾಪುರಕ್ಕೆ ಕನ್ನಡದ ಪ್ರಾಧ್ಯಾಪಕರಾಗಿ ಹೋಗುವಾಗ ಧಾರವಾಡದ ಪವಿತ್ರ ತಾಯಿಯನ್ನು ಸ್ಮರಿಸಿ 'ಹೋಗಿ ಬರತೇವಿನ್ನ ನಮಸ್ಕಾರ ನಿಮಗ' ಎಂದು ಎದೆದುಂಬಿ ಬೀಳ್ಕೊಳ್ಳುತ್ತಾರೆ. ಜನನಿಯೂ ಜನ್ಮಭೂಮಿಯೂ ಸ್ವರ್ಗಕ್ಕಿಂತ ಮಿಗಿಲಲ್ಲವೆ ?

೨) 'ಕನ್ನಡದ ಕಂದವ್ವನ ಲಾಲಿ' ಎಂಬ ಪದ್ಯದಲ್ಲಿ ('ನಾದಲೀಲೆ'ಯಲ್ಲಿಯ ೪೭ ನೇ ಪದ್ಯ) ಕನ್ನಡ ನಾಡತಾಯಿ ಭಾರತಮಾತೆಯ ತನುಜಾತೆ ಎಂದು ೧೯೨೦ಕ್ಕಿಂತ ಮುಂಚೆಯೇ ಸಾರಿದ್ದಾರೆ.

"ಓರ್ವ ತಾಯಿಯು ತನ್ನ ಕೂಸಿರುವ ತೊಟ್ಟಿಲವ
ಕೈಯಿಂದ ತೂಗುತಿಹಳೋ
ಪೂರ್ವ-ಪಶ್ಚಿಮ ಘಟ್ಟದಲ್ಲಿ ಪಟ್ಟಿರುವಂಥ
ನಾಡನ್ನೆ ನೂಗುತಿಹಳೋ !........
ಮುಗಿಲಿನೊಳು ತೊಟ್ಟಿಲವ ಕಟ್ಟಿಸುವೆ, ಹೊಟ್ಟೆಯಲಿ
ಹುಟ್ಟಿ ಬಂದವ್ವ ಜೋಜೋ
ಹಗಲು ನಸುಕಿನ ಬಸುರಿನಿಂದ ಮೂಡುವ ತೆರದಿ
ನನ್ನ ಕಂದವ್ವ ಜೋ ಜೋ !......
ಸಹ್ಯವಾಯಿತು ಬಾಳ್ವೆ — ನಿನ್ನ ಚಿಂತಾಮಣಿಯು
ತುಂಬಿತುಡಿಯನ್ನು ಜೋಜೋ
ಸಹ್ಯಾದ್ರಿ ಶೃಂಗದೆಡೆ ನನ್ನ ತುಂಗಸ್ತನದ
ಹಾಲು ಕುಡಿದಿನ್ನು ಜೋಜೋ
ನಾಳೆ ಬೆಳಗಿನ ವರೆಗೆ ಮಲಗು ಸಂಪಿಂಪಾಗಿ
ಆತ್ಮತನುಜಾತೆ ಜೋಜೋ
ನಾಳೆ ಬೆಳಗಿನ ವರೆಗೆ ಅಂಬಿಕಾತನಯದತ್ತನ ತೊದಲು-
ಮಾತೆ ಜೋಜೋ"

ಬೇಂದ್ರೆಯವರನ್ನು, ಇನ್ನೂ ಮುಖತಃ ನೋಡದೆ ಇದ್ದಾಗ, ‘ಕರ್ಣಾಟ ನಾಟ್ಯ ಪ್ರಹಸನ ಪ್ರಪಿತಾಮಹ’ ಕೈಲಾಸಂರವರು ಈ ಪದ್ಯವನ್ನು ಮೊದಲ ಸಲ ಓದಿದಾಗ ಈ ವಿಲಕ್ಷಣ ಕವಿತೆಯ ವಿಚಿತ್ರ ಕವಿ ‘ಅಂಬಿಕಾತನಯದತ್ತ’ ರೆಂಬವರು ಯಾರು, ಎಲ್ಲಿದ್ದಾರೆ ನೋಡಬೇಕಲ್ಲಾ—ಎಂದು ಭಾವವಶರಾಗಿ ಉದ್ಗಾರ ತೆಗೆದರಂತೆ. ಅಷ್ಟರಲ್ಲಿ ‘ಗರಿ’ ಪ್ರಕಟವಾಗಿ, ‘ಕನಸಿನೊಳಗೊಂದು ಕಣಸು’ ಎಂಬ ಪದ್ಯವನ್ನು ಗೆಳೆಯ ರಾಜರತ್ನಂ ಓದಿ ತೋರಿಸಿದರಂತೆ. ಅಂದಿನಿಂದ ಶ್ರೀ ಕೈಲಾಸಂ ನಾಟ್ಯಮಯ ಸಂವಾದವುಳ್ಳ ಆ ಪ್ರಭಾವಶಾಲಿ ಪದ್ಯವನ್ನು ತಾವು ಹೋದ ಹೋದಲ್ಲೆಲ್ಲಾ ಗಂಭೀರವಾದ ಅಭಿನಯದೊಂದಿಗೆ ಎರಡು ಬೇರೆ ಬೇರೆ ಧ್ವನಿಗಳಲ್ಲಿ ಅಂದು ತೋರಿಸುವ ನಾಟ್ಯಾಭಿನಯ ಕಾರ್ಯಕ್ರಮವನ್ನು ಮೊತ್ತ ಮೊದಲಿಗರಾಗಿ ಅಳವಡಿಸಿದರಂತೆ.

೩) ತಾಯಿ–ಮಕ್ಕಳ ಸಂವಾದವನ್ನು ಒಳಗೊಂಡ ‘ಕನಸಿನೊಳಗೊಂದು ಕಣಸು (‘ಗರಿ’ಯಲ್ಲಿಯ ೨೦ನೇ ಪದ್ಯ)’ ಪದ್ಯವು ೧೯೩೦ ರಲ್ಲಿದ್ದ ಅಂದಿನ ಕನ್ನಡನಾಡಿನ ಮತ್ತು ಕನ್ನಡಿಗರ ದುಃಸ್ಥಿತಿಯನ್ನು ಅತ್ಯಂತ ವಾಸ್ತವಿಕವಾಗಿ ಪ್ರಭಾವಯುಕ್ತವಾಗಿ ಚಿತ್ರಿಸುತ್ತದೆ. ಕರ್ನಾಟಕ ಏಕೀಕರಣದ ಆಂದೋಲನಕ್ಕೆ ಸಮಸ್ತ ಕರ್ನಾಟಕದ ಭಾವನಾತ್ಮಕ ಬೆಂಬಲವನ್ನು ದೊರಕಿಸುವುದರಲ್ಲಿ ಈ ಪದ್ಯ ಯಶಸ್ವಿಯಾಯಿತು. ನಟಶ್ರೇಷ್ಠರೂ ನಾಟ್ಯಾಚಾರ್ಯರೂ ಆದ ಪರಮಪ್ರಿಯ ಪ್ರಾತಃಸ್ಮರಣೀಯ ತ್ಯಾಗರಾಜ ಪರಮೇಶ್ವರ ಕೈಲಾಸಂ ರವರ ಅದ್ಭುತ ಅವಿಸ್ಮರ–ಣೀಯ ನಾಟ್ಯಾಭಿನಯದ ಆ ಕಾರ್ಯಕ್ರಮವು ರಾಜಕೀಯ ಚಳವಳಿಗೆ ಸಾಹಿತ್ಯಕರು ಇತ್ತ ಅತ್ಯದ್ಭುತ ಕಾಣಿಕೆಯಾಗಿತ್ತು. ‘ನಾಡಹಬ್ಬದ’ದ ಸಾವಿರಾರು ಸಭೆಗಳಲ್ಲಿ ಈ ಪದ್ಯ ಅಂದು ಅತ್ಯಂತ ಜನಪ್ರಿಯವಾಗಿತ್ತು.

“ಯಾರು ನಿಂದವರಲ್ಲಿ ತಾಯೆ” ಎಂದೆ.
“ಯಾರು ಕೇಳುವರೆನಗೆ ಯಾಕೆ ತಂದೆ ?”
“ಬೇಸರದ ದನಿಯೇಕೆ ಹೆಸರ ಹೇಳಲ್ಲ”
“ಹೆಸರಾಗಿಯೂ ಕೂಡ ಹೇಳಹೆಸರಿಲ್ಲ”
“ಇರುವರೇ ಇದ್ದರೇ ಮಕ್ಕಳೆಂಬವರು”
“ಇರುವರೆಂದರು ಕೂಡ ಯಾರು ನಂಬುವರು ?”
“ಯಾವುದಾದರು ನಾಡದೇವಿಯೇ ನೀನು ?”
“ಭಾವುಕರ ಕಂಗಳಿಗೆ ದೇವಿಯೇ ನಾನು”........
“ಚಂಡಿ ಚಾಮುಂಡಿ ಪೇಳ್ ಬೇಕಾದುದೇನು ?”
“ಗಂಡುಸಾದರೆ ನಿನ್ನ ಬಲಿ ಕೊಡುವಿಯೇನು ?”

ಎಂಥ ಸತ್ತ್ವಯುತ ಸರಳ ಕಾವ್ಯ ! ವಾಸ್ತವಿಕ ಸ್ಥಿತಿಯನ್ನು ಆದರ್ಶಮಯ ಚಿತ್ರದೊಂದಿಗೆ ನಾಟ್ಯರೂಪದಲ್ಲಿ ಹೆಣೆದ ಕಲಾತ್ಮಕತೆ ಚತುರ ಪ್ರತಿಮಾಶಿಲ್ಪಿಯ ಅಭಿಜಾತ ವರದಾನವಾಗಿದೆ. ಭಾರತದ ಸ್ವಾತಂತ್ರ್ಯಸಮರದಲ್ಲಿ " ೩೩ ಕೋಟಿ " ಎಂಬ ಪದ್ಯ ಎಷ್ಟು ಪ್ರಭಾವ ಬೀರಿತೋ ಅಷ್ಟೊಂದು ಪ್ರಭಾವವನ್ನು ಕರ್ನಾಟಕ ಏಕೀಕರಣದ ಚಳವಳಿಯಲ್ಲಿ ಈ ತಾಯಿ-ಮಕ್ಕಳ ಸಂವಾದ ಪದ್ಯ ಅಂದಿನ ದಿನ ಗಳಲ್ಲಿ ಬೀರಿತೆಂಬುದು ಐತಿಹಾಸಿಕ ಸತ್ಯವಾಗಿದೆ. ಕನ್ನಡದ ಆಸ್ತಿ ಪೂಜ್ಯ ಮಾಸ್ತಿಯವರು ಹೇಳುವಂತೆ " ಇಂಥ ಸಾಹಿತ್ಯದಲ್ಲಿ ಕಾಣುವ ಭಾವದ ಊಟೆ, ಮಾತಿನ ಔಚಿತ್ಯ, ಚಿತ್ರಕರ್ಮದ ಕಲೆ ಪ್ರಪಂಚದ ಅತ್ಯುತ್ತಮ ಸಾಹಿತ್ಯದ ಮಟ್ಟ ವನ್ನು ಮುಟ್ಟುತ್ತದೆ. (ಏಕೆಂದರೆ) ಕವಿ ಜನದ ಬಾಳುವೆಯಲ್ಲಿ ಸೇರಿ ಬೆಳೆದಿದ್ದಾರೆ. ಇವರು ಜನದ ಬಾಳನ್ನು ಚೆನ್ನಾಗಿ ನೋಡಿದಾರೆ. ........ ಸಹಜವಾದ ಜನತೆಯ ಪ್ರೇಮ ಸಾಹಿತ್ಯದ ಪರಿಚಯದಿಂದ ಬೆಳೆದು ಸಹಜವಾದ ಕವನಶಕ್ತಿ ಇದೇ ಪರಿಚಯದಿಂದ ಮಸೆದು ಹಸನಾಗಿ, ಇವರ ಕವಿತೆಯಲ್ಲಿ ಭಾವಕ್ಕೆ ಮಾತಿನ ಅರ್ಥವನ್ನೂ ಸಿದ್ಧಿಯನ್ನೂ ತಂದಿವೆ."

೪) ' ೩೩,೦೦೦೦೦೦೦ ' ಈ ಪದ್ಯ (' ಗರಿ 'ಯೊಳಗಿನ ೨೬ ನೇ ಪದ್ಯ) ಭಾರತದ ಅಂದಿನ ಪರಾಧೀನ ಅಸಹಾಯ ಸ್ಥಿತಿಯನ್ನು ಹುಬೇಹೂಬಾಗಿ ಬಣ್ಣಿ ಸುತ್ತದೆ. ಈ ಪದ್ಯದ ಪ್ರತಿಸಾಲೂ ಚೊಕ್ಕ ಚಿನ್ನವಾಗಿದೆ. ಅದಕ್ಕೆ ಜೋಡಿಸಿದ ಪ್ರಾಸ್ತಾವಿಕ ಟಿಪ್ಪಣಿ ಅದಕ್ಕೆ ನಾಟಕೀಯ ಒಪ್ಪವನ್ನು ತೊಡಿಸಿದೆ. " ಕಡೆಯಿಲ್ಲದ ಕಡಲ ನಡುವೆ ಸ್ಥಿರಾಸನದಲ್ಲಿ ಭೂಮಿತಾಯಿ ಧ್ಯಾನಮುದ್ರೆಯಲ್ಲಿ ಕುಳಿತಿದ್ದಾಳೆ. ಅವಳ ಎಡತೊಡೆಯ ಮೇಲೆ ಭಾರತಿಯು ತನ್ನ ಮೊಗವನ್ನು ಬಲಗೈಯಿಂದ ಒರಗಿಸಿ ಎಡಗೈಯನ್ನೆತ್ತಿ ಹಾಡಿ ಹಾಡಿ ತನ್ನ ಪಾಡನ್ನು ತೋಡಿಕೊಳ್ಳುತ್ತ ಲಿದ್ದಾಳೆ. ಅವಳ ಸುತ್ತಲೂ ಕೋಟ್ಯಾವಧಿ ಪ್ರಾಣಿಗಳು ಅಸ್ತವ್ಯಸ್ತವಾಗಿ ಬಿದ್ದು ಕೊಂಡಿವೆ. " ಈ ಚಿಕ್ಕ ಟಿಪ್ಪಣಿಯೇ ಪದ್ಯಕ್ಕೆ ಅತ್ಯುನ್ನತ ಗಂಭೀರ ರೌದ್ರರೂಪ ವನ್ನು ತಂದುಕೊಟ್ಟಿದೆ. ಕೆಲವೇ ಜನ ಪರಕೀಯರ ದಾಸ್ಯಶೃಂಖಲೆಯಲ್ಲಿ ಕೋಟಿಗಟ್ಲೆ ಜನ ಸಿಲುಕಿರುವುದನ್ನು ಒಂದೇ ಒಂದು ನುಡಿಯಲ್ಲಿ ಸಮರ್ಥವಾಗಿ ಚಿತ್ರಿಸಿದ್ದಾರೆ :

" ಹಂಗಿನರಮನೆಯ ನರಕಾ — ತಂಗುವಿರಿ — ಇಹುದೆ ಮರುಕಾ ?
ಹಿಡಿಬೆರಳ ಹಿಡಿಯಲ್ಲಿ ಅಡಿಯೆರಡರಡಿಯಲ್ಲಿ
ಹೊರಳಿ ಒರಲುವಿರಿ ಅಕಟಾ !
ಅಕಟಕಟಾ
ಮೂವತ್ತುಮೂರು ಕೋಟಿ "

ಎಂದು ಆಕ್ರೋಶಿಸುತ್ತಾಳೆ ಭಾರತಮಾತೆ.

“ ಹಾಳ್ಹರ್ದ ಹೋಳಿಯರೆಂದೂ ಬೀಳ್ಹರ್ದ ಹೆಣ್ಣು ಎಂದೂ
ಹೋಳು ಹೋಳಾಗಿಹುದು ಆಳು ಬಾಳಾಗಿಹುದು
ಏಳಿರೋ ಆಳಿರೆಂಬೆ
ಬಾಳಿರೋ
ಮೂವತ್ತುಮೂರು ಕೋಟಿ ”

೫) ಸ್ವಾತಂತ್ರ್ಯಾನಂತರದಲ್ಲೂ ಕವಿ ಅನೇಕ ರಾಷ್ಟ್ರಪ್ರಜ್ಞಾ ಗೀತಗಳನ್ನು ಬರೆದಿದ್ದಾರೆ; ಬರೆಯುತ್ತಲಿದ್ದಾರೆ. ‘ ಜಯವಾಗತೈತೆ ’ (ಮರ್‍ಯಾದೆ : ೧೩ ನೇ ಪದ್ಯ ) ನೋಡಿರಿ.

“ ಜಯವಾಗತೈತೆ ಜಯವಾಗತೈತೆ
ಭಾರತಿಗೆ — ಪ್ರತಿ ಭಾರತಿಗೇ
ಕನ್ನಡದ ಇನ್ನುಳಿದ ಭ್ರಾತೃಗಳ ಪಥಕೆ
ದಿವ್ಯತೆಯು ಪಥ ತೆರೆವ ಭಾರತ ಮನೋರಥಕೆ ಜಯವಾಗತೈತೆ....”

“ ಹಾಲಕ್ಕಿ ನುಡಿಯುತಿದೆ ಮಂಗಲಪ್ರಭಾತಾ
ದಕ್ಷಿಣಾಪಥವಾಣಿ । ಉತ್ತರಕೆ ಚುಕ್ಕಾಣಿ
ಪೂರ್ವಪಶ್ಚಿಮದಲ್ಲಿ ನಂಟು ಬೆಳೆದು । ಒಂದೀತು ನವಯುಗವು ನವರೂಪ ಕಳೆದು !
ಜಯವಾಗತೈತೆ । ನಾಡಾಡಿ ಬುಡಬುಡಿಕೆಯಲ್ಲ ।
ಇದು ದೇವವಾಣಿಯ ಒಡಂಬಡಿಕೆ ”

ಎಂದು ಆಶಾವಂತನಾಗಿ ಜನರನ್ನು ಕವಿ ಪ್ರೇರಿಸುತ್ತಾನೆ.

## ಉಪಸಂಹಾರ :

ಬೇಂದ್ರೆಯವರ ರಾಷ್ಟ್ರಪ್ರಜ್ಞೆ—ದೇಶಪ್ರೇಮದಿಂದ ಸದಾ ತುಂಬಿ ತುಂಬಿ ತುಳುಕುತ್ತದೆ. ಶ್ರೀ ಸಿಂಪಿ ಲಿಂಗಣ್ಣನವರು ೧೯೪೬ ರಲ್ಲಿ ಕವಿಗಳ ೫೦ನೆಯ ಹುಟ್ಟುಹಬ್ಬದ ಕಾಲಕ್ಕೆ ‘ ದತ್ತಸಾಹಿತ್ಯ ’ ಗ್ರಂಥದಲ್ಲಿ ಹೇಳಿದ ಕೆಳಗಿನ ಮಾತುಗಳು ಅವರ ೭೦ ನೆಯ ಹುಟ್ಟುಹಬ್ಬಕ್ಕೂ ಇಂದು ಹೇಳಿಮಾಡಿಸಿದಂತೆ ಅನ್ವಯಿಸುತ್ತವೆ.

“ ಕವಿಯ ದೇಶಪ್ರೇಮದಲ್ಲಿ ಸಾಹಿತ್ಯಪ್ರೇಮವಿದೆ; ದೇಶವಾಸಿಗಳ ಸಲುವಾಗಿ ಬಂಧುಭಾವವಿದೆ. ಪೀಡಿತರಲ್ಲಿ ಸಹಾನುಭೂತಿಯಿದೆ. ವೈಭವದಲ್ಲಿ ಅಭಿಮಾನವಿದೆ; ಪ್ರಗತಿಯಲ್ಲಿ ಆಶೆಯಿದೆ; ದೇಶದ ಒಂದು ಹುಲ್ಲುಕಡ್ಡಿಯ ಬಗೆಗೂ ಆದರಭಾವವಿದೆ; ನನ್ನದೆಂಬ ಸಾತ್ತ್ವಿಕ ಅಹಂಕಾರವಿದೆ. ಆದುದರಿಂದ ಕವಿಯು

ಪ್ರಾಚೀನ ಕವಿಗಳನ್ನು ನೆನೆವಂತೆ, ಆಧುನಿಕ ಕವಿಗಳನ್ನು ಮರೆತಿಲ್ಲ; ಕವಿಗಳಂತೆ ವಿಭೂತಿಗಳನ್ನೂ, ಜ್ಞಾನಿಗಳನ್ನೂ ಸ್ಮರಿಸಿದ್ದಾನೆ; ಗತವೈಭವದೊಡನೆ ಪ್ರಚಲಿತ ವೈಭವವನ್ನೂ ಹೊಗಳಿದ್ದಾನೆ........ಕವಿಯ ಬಾಯೊಳಗಿನ ನಾಲಗೆಯೆಂದರೆ ನಾಡ ನುಡಿ. ಆ ನುಡಿಯನ್ನು ನಲಿಸುವದೇ ಕವಿಗೆ ದೇಶಪ್ರೇಮದ ಹಾದಿ. ”

ಲೇಖನ ವಿಸ್ತಾರವನ್ನು ಗಮನಿಸಿ, ಇಲ್ಲಿ ಪ್ರಸ್ತಾಪಿಸಲು ಶಕ್ಯವಾಗದ ಕವಿಯ ಇನ್ನಿತರ ಕೆಲವು ಮಹತ್ತ್ವದ ರಾಷ್ಟ್ರಪ್ರಜ್ಞಾಗೀತಗಳ ೫೦ ನಾಮಗಳನ್ನು ಮಾತ್ರ ಉಲ್ಲೇಖಿಸಿ ವಿರಮಿಸುವೆ.

| ಗ್ರಂಥದ ಹೆಸರು | ಕವಿತೆಯ ಹೆಸರು | ಪುಟದ ಸಂಖ್ಯೆ |
|---|---|---|
| ‘ಗರಿ’ : (೧೯೩೨) | | |
| | ೧) ಹಂಪೀ ವಿಜಯನಗರ ದರ್ಶನ | ೧೩ |
| | ೨) ಮುದ್ದಣ | ೧೬ |
| | ೩) ಓ ಹಾಡೇ | ೨೯ |
| | ೪) ಸೀಮೋಲ್ಲಂಘನ | ೪೦ |
| | ೫) ಪಂಪನ ನೆನೆದು | ೪೨ |
| | ೬) ನರಬಲಿ | ೬೫ |
| | ೭) ಮೈಸೂರು | ೮೦ |
| ನಾದಲೀಲೆ : (೧೯೩೮) | | |
| | ೧) ಭೂಮಿತಾಯಿಯ ಚೊಚ್ಚಿಲಮಗ | ೩೬ |
| | ೨) ಮೊದಲಗಿತ್ತಿ | ೪೧ |
| ಗಂಗಾವತರಣ : (೫ನೇ ಮುದ್ರಣ ೧೯೭೧) | | |
| | ೧) ಬಾರೊ ಸಾಧನಕೇರಿಗೆ | ೧೦ |
| | ೨) ಸಂಭಾವನೆ | ೩೬ |
| | ೩) ಪಂಪನಿಗೆ | ೩೭ |
| | ೪) ಬುದ್ಧ | ೩೯ |
| | ೫) ಒಂದೇ ಕರ್ನಾಟಕ | ೪೨ |
| | ೬) ನೀವಾರಲಾ | ೪೪ |
| | ೭) ಸಿದ್ಧರಾಮರ ವಚನವನ್ನು ನೆನೆದು | ೪೮ |
| | ೮) ಪಡುವಲ ಕಡಲ ಅಂಬಿಗರ ಹಾಡು | ೫೩ |

| ಗ್ರಂಥದ ಹೆಸರು | ಕವಿತೆಯ ಹೆಸರು | ಪುಟದ ಸಂಖ್ಯೆ |
|---|---|---|
| **ಸಂಚಯ : (೧೯೫೯)** | | |
| ೧) | ‘ಕರ್ನಾಟಕ ಗತವೈಭವ’ವು ಪ್ರಕಟವಾದದ್ದನ್ನು ಕೇಳಿ | ೩೮ |
| ೨) | ಇವರು ಆಲೂರವರು | ೪೦ |
| ೩) | ರಾಷ್ಟ್ರಗೀತೆ — ನಾರ್ವೆ | ೮೧ |
| ೪) | ,, ಗ್ರೀಸ್ | ೮೩ |
| ೫) | ,, ಜಪಾನ್ | ೮೫ |
| ೬) | ,, ಫಿನ್‌ಲಂಡ್ | ೮೬ |
| ೭) | ,, ಪೋಲ್ಯಾಂಡ್ | ೮೭ |
| ೮) | ಬಿಡುಗಡೆ | ೮೮ |
| **ಮತ್ತೆ ಶ್ರಾವಣಾ ಬಂತು : (೧೯೭೩)** | | |
| ೧) | ಬಾಲ್ಯಕಾಂಡ | ೨ ರಿಂದ ೨೫ |
| ೨) | ೧೫ ಆಗಸ್ಟ್ ೧೯೬೬ | ೩೯ |

§ § § §

೩೨

# ನಾಕುತಂತಿಯಲ್ಲಿ ಅಭಿವ್ಯಕ್ತವಾದ ತತ್ತ್ವಜ್ಞಾನ

ಜಿ. ಎಸ್. ಕುಂದರಗಿ

**ತತ್ತ್ವಜ್ಞಾನವೆಂದರೇನು ?**

'Contemporary British Philosophy' ಎಂಬ ಗ್ರಂಥದಲ್ಲಿ C. D. Broad ಎಂಬವರ "Critical and Speculative Philosophy" ಎಂಬ ಲೇಖನವಿದೆ. ಅದರಲ್ಲಿ ತತ್ತ್ವಜ್ಞಾನದ ಎರಡು ಮುಖಗಳನ್ನು ವಿವರಿಸಲಾಗಿದೆ. (೧) ತತ್ತ್ವಜ್ಞಾನವು, ನಾವು ನಿತ್ಯ ಜೀವನದಲ್ಲಿ ಮತ್ತು ವಿಶಿಷ್ಟ ವಿಜ್ಞಾನಗಳಲ್ಲಿ ಬಳಸುವ ಪದ ಮತ್ತು ವಾಕ್ಯಗಳ (Concepts & Propositions) ವಿಮರ್ಶಾತ್ಮಕ ವಿಶ್ಲೇಷಣೆ. (೨) ನಾವಿರುವ ಜಗತ್ತನ್ನು, ಅಸ್ತಿತ್ವವನ್ನು ಅಖಂಡವಾಗಿ ನೋಡುವದು ಮತ್ತು ಮನುಷ್ಯನ ಸ್ವರೂಪ ಹಾಗೂ ಭವಿಷ್ಯವನ್ನು ಚರ್ಚಿಸುವದು.

ತತ್ತ್ವಜ್ಞಾನದ ಎರಡನೆಯ ಮುಖವು ಸದ್ಯಕ್ಕೆ ಪ್ರಸ್ತುತ. Spinoza, Hegel, Mctaggart, ಅವರು ಈ ಗುಂಪಿಗೆ ಸೇರತಕ್ಕವರು. ಇವರು ಜೀವನದ ವಿವಿಧ ಮುಖಗಳಲ್ಲಿ ಏಕತೆಯನ್ನು, ಸಮಗ್ರತೆಯನ್ನು ಕಾಣುವಂಥವರು. ಜಡ, ಚೈತನ್ಯ, ಆತ್ಮ ಈ ತತ್ತ್ವಗಳನ್ನು ಕುರಿತು ಚಿಂತಿಸುವಂಥವರು.

ಭಾರತೀಯ ತತ್ತ್ವಜ್ಞಾನವು ವಿಶೇಷವಾಗಿ ಜೀವ, ಆತ್ಮ, ಪರಮಾತ್ಮ ಇವುಗಳನ್ನು ಕುರಿತು ಚರ್ಚಿಸುವದು. 'ಆತ್ಮವನ್ನರಿ' ಎಂದು ಉಪನಿಷತ್ತು ಸಾರಿತು. 'ಇಂದ್ರಿಯಗಳು ದೊಡ್ಡವು, ಇಂದ್ರಿಯಗಳಿಗಿಂತ ಮನಸ್ಸು ದೊಡ್ಡದು; ಮನಸ್ಸಿಗಿಂತ ಬುದ್ಧಿ ದೊಡ್ಡದು; ಬುದ್ಧಿಗಿಂತ ಪರಮಾತ್ಮ ದೊಡ್ಡವನು;' ಎಂದು ಗೀತೆ ಹೇಳಿತು. ಆಚಾರ್ಯತ್ರಯರಾದ ಶಂಕರ, ಮಧ್ವ, ರಾಮಾನುಜರು ಜೀವ, ಜಗತ್ತು ಪರಮಾತ್ಮರ ಸ್ವರೂಪ ಸಂಬಂಧಗಳನ್ನು ಕುರಿತು ತಮ್ಮ ದರ್ಶನಗಳನ್ನಿತ್ತರು. ಜೀವನದ ಸಮಗ್ರತೆಯನ್ನು, ಸಮನ್ವಯ ಪದ್ಧತಿಯನ್ನು ಅರವಿಂದರ 'ದಿವ್ಯ-ಜೀವನ' ಪ್ರತಿಪಾದಿಸುತ್ತದೆ. ಇಲ್ಲಿ ಬುದ್ಧಿಗಿಂತ ಅಂತರ್‌ಜ್ಞಾನಕ್ಕೆ, ಅನುಭೂತಿಗೆ (Intuition) ಪ್ರಾಶಸ್ತ್ಯವನ್ನು ಕೊಡಲಾಗಿದೆ.

ತತ್ತ್ವಜ್ಞಾನವು ಶಾಬ್ದಿಕ ವಿಶ್ಲೇಷಣೆಯೆಂದು ತಿಳಿಯಬಾರದು. ದೇವರು, ಆತ್ಮ, ಅಮರತ್ವ–ಈ ತತ್ತ್ವಗಳನ್ನು ಮೌಲ್ಯಗಳೆಂದು ಒಪ್ಪಬೇಕು. ಅನುಭಾವದ, ಅನುಭೂತಿಯ ದಾರಿಯೇ ಗ್ರಾಹ್ಯವಾದುದು. ತತ್ತ್ವಜ್ಞಾನವು ಬರಿಯ ಬುದ್ಧಿವಂತಿಕೆಯ ಕಸರತ್ತಾಗಬಾರದು, ಅದು ನಿತ್ಯ ಜೀವನದಲ್ಲಿ ಇಳಿದು ಬರಬೇಕು. ಅದು ನಮ್ಮ ಜೀವನವನ್ನು ಉದಾತ್ತತೆಯೆಡೆಗೆ, ದಿವ್ಯತೆಯತ್ತ ಕರೆದುಕೊಂಡು ಹೋಗಬೇಕು. ಈ ಮಾತುಗಳನ್ನು ಯೋಗಾಭ್ಯಾಸದ ಹಿನ್ನೆಲೆಯಲ್ಲಿ ನೋಡಿದಾಗ ತತ್ತ್ವಜ್ಞಾನವು 'ದರ್ಶನ'ವಾಗಿ ಪರಿಣಮಿಸುತ್ತದೆ. ನಮ್ಮ ಋಷಿಗಳನ್ನು ಅದಕ್ಕೆಂದೇ 'ದ್ರಷ್ಟಾರ'ರೆಂದು ಕರೆದದ್ದು.

**ಕಾವ್ಯದಲ್ಲಿ ತತ್ತ್ವಜ್ಞಾನ ಅಥವಾ ದರ್ಶನ :**

'ನಾನೃಷಿಃ ಕುರುತೇ ಕಾವ್ಯಂ'. ಹುಟ್ಟು ಋಷಿಯಲ್ಲದವನ ಕಾವ್ಯವು ಜನಕ್ಕೆ ಹಿಡಿಸುವದೆಂತು ? ಕವಿ ತತ್ತ್ವದರ್ಶಿಯಾಗಿರಬೇಕು. ರಸಋಷಿಯಾಗಲು ಸತತ ಸಾಧನೆಯನ್ನು ಅವನು ಮುಂದುವರೆಸಿಕೊಂಡು ಬರಬೇಕು. ತನ್ನ ಕಾವ್ಯವನ್ನು ಪುಟಗೊಂಡ ಚಿನ್ನವನ್ನಾಗಿ ಮಾಡಬೇಕು. ಕಾವ್ಯಯೋಗದ ಉತ್ಪತ್ತಿಯಾಗಬೇಕು. ರಸರಂಗ ಆತ್ಮರಂಗವಾಗಿ ಪರಿವರ್ತಿತವಾಗಬೇಕು. ವ್ಯಾಸ, ವಾಲ್ಮೀಕಿ ಅರವಿಂದರು ಈ ಹಾದಿಯಲ್ಲಿ ನಡೆದವರು.

ಅನಿತ್ಯವಾದ ಜೀವನದಲ್ಲಿ ನಿತ್ಯ, ನೈತಿಕ, ದೈವೀತತ್ತ್ವವನ್ನು ಗ್ರೀಕ ನಾಟಕಕಾರರು ಕಂಡುಕೊಂಡರು. 'ಎಲ್ಲವೂ ನಿನ್ನದು. ನನಗೆ ಆಗುಹೋಗುವ ಒಳಿತು–ಕೆಡಕು ನಿನ್ನನ್ನೇ ಕೂಡಿದ್ದು'. ಎಂದು ಭಗವಂತನಲ್ಲಿ ಮೊರೆಯಿಟ್ಟ ಸ್ಯಾಮಸನ್ನನ ಚಿತ್ರವನ್ನು ಮಿಲ್ಟನ್ 'Samson Agonistes' ದಲ್ಲಿ ಕೊಡುವನು. ಇದು ಭಕ್ತನ, ಭಾಗವತನ ಹಾದಿ. 'ತನ್ನ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡು ಶಾಂತನಾಗುವದು ಅಥವಾ ದೇವರ ಹೆಸರಿನಲ್ಲಿ ಕಾರ್ಯೋನ್ಮುಖನಾಗುವದು ಅಥವಾ ಇವೆರಡು ಮಾರ್ಗಗಳನ್ನು ಸಮರಸಗೊಳಿಸುವದು' ಜ್ಞಾನಿಯಾದ ಭಕ್ತ ಅನುಸರಿಸುವ ಮಾರ್ಗವಿದು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಶ್ರೀ ಬೇಂದ್ರೆ ಹಾಗೂ ಗೋಕಾಕರ ಕಾವ್ಯ ಈ ದಿಶೆಯಲ್ಲಿ ಹರಿಯುತ್ತದೆ.

**ಪ್ರಸ್ತುತ ಲೇಖನದ ಉದ್ದೇಶ :**

ಈ ವರುಷದ 'ಜ್ಞಾನಪೀಠ ಪ್ರಶಸ್ತಿ'ಯನ್ನು ಬೇಂದ್ರೆಯವರಿಗೆ ದೊರಕಿಸಿ ಕೊಟ್ಟ ಅವರ "ನಾಕುತಂತಿ" ಕವನಸಂಗ್ರಹದಲ್ಲಿ ವ್ಯಕ್ತವಾದ ತತ್ತ್ವಜ್ಞಾನದ ಕೆಲವು ಮಾತುಗಳನ್ನು ಮೇಲೆ ಸೂಚಿಸಿದ ಚೌಕಟ್ಟಿನಲ್ಲಿ ವಿವರಿಸುವದು ಈ ಲೇಖನದ ಉದ್ದೇಶ.

## ನಾಕುತಂತಿಯಲ್ಲಿಯ ಕವನಗಳ ಸ್ವರೂಪ :

ಕಾವ್ಯವು ಉನ್ನತ ಮಟ್ಟದ್ದಾಗಬೇಕಾದರೆ ಕವಿಗೆ ಋಷಿಸದೃಶ ತಪಸ್ಸು ಬೇಕು. ಈ ಮಾತು 'ಹೆರಿಗೆ' ಕವನದಲ್ಲಿ ಸೂಚಿತವಾಗಿದೆ.

ಮೂರ್ಧನ್ಯದ ತೇಜಸ್ಸಿನ
  ಯಾವುದೊ ಕಿರಣ
ತಳೆದಿದೆ ವರ್ಣ ವರ್ಣ
  ಶ್ರುತಿಗೋ ಆಭರಣ
ಋಷಿ ತೆರೆದನು
  ಹೃದಯದ ಗವಸಣಿಗೆಯನು....
  ಮಿಡಿದನು ತಂತಿಯ ಹೆಣಿಗೆಯನು....

ಲೇಖಕರೇ ಮುನ್ನುಡಿಯಲ್ಲಿ ಹೇಳಿದಂತೆ ಈ ಕವನಗಳು ಯೋಗಸಾಧನೆಯ ಹಾದಿಯಲ್ಲಿವೆ. ಅವುಗಳ ಸ್ಫೂರ್ತಿಯು ಸೆಲೆ — ನ್ಯಾಯವೈಶೇಷಿಕದ ಬ್ರಹ್ಮ ಮೀಮಾಂಸೆ, ಸಾಂಖ್ಯಯೋಗದ ಭಾಷೆ, ಉಪನಿಷತ್ತಿನ ಆನಂದಘೋಷ, ಅರವಿಂದ ನವನೀತ ಮತ್ತು ಭವ್ಯ ಭಗವದ್ಗೀತೆ.

ನನ್ನಲ್ಲಿ "ನಾನು" ಎಂದು ಹೇಳಿಕೊಳ್ಳುವ ತತ್ತ್ವ (The observer) ನನ್ನಿಂದ ಭಿನ್ನವಾಗಿ "ನೀನು" ಎಂದು ಹೇಳಿಸಿಕೊಳ್ಳುವ ತತ್ತ್ವ ('The observed) ಇವೆರಡರಲ್ಲಿಯೂ "ಸ್ವಯಂ" ಆಗಿರುವ ಆತ್ಮ "ಆನು" ಎಂಬ ತತ್ತ್ವ, ಹಾಗೂ ಎಲ್ಲವನ್ನೂ ವ್ಯಾಪಿಸಿ ತಾನೇ ತಾನಾಗಿರುವ "ಪರಂ" ಎಂಬ ತತ್ತ್ವ — ಇವು 'ನಾಲ್ಕು ತಂತಿಗಳು' ಈ ಕಾವ್ಯಧ್ವನಿಗಳಾಗಿವೆ.

ಆವು ಈವಿನ
ನಾವು ನೀವಿಗೆ
ಆನು ತಾನದ
ತನನನಾನ
.... .... ....
ಚಾರು ತಂತ್ರಿಯ
ಚರಣ ಚರಣದ
ಘನಘನಿತ ಚತು-
ರಸ್ವನಾ

**ನಾಕುತಂತಿಯಲ್ಲಿಯ ತತ್ತ್ವವಿಚಾರ :**

(೧) ದೇವರು ಅಥವಾ ಭಗವಂತ :- ಶ್ರೀ ಬೇಂದ್ರೆಯವರಿಗೆ ಪರತತ್ತ್ವ ಅಥವಾ ಭಗವಂತನ ಅಸ್ತಿತ್ವದಲ್ಲಿ ಅಚಲವಾದ ಶ್ರದ್ಧೆಯಿದೆ. ಈ ಭಗವಂತ ಜಗತ್ತಿನ ತಂದೆ-ತಾಯಿಯಾಗಿ ತೋರುತ್ತಾನೆ. ನಿಸರ್ಗದಲ್ಲಿ, ಶ್ರಾವಣಮಾಸದಲ್ಲಿ, ವಸಂತ ಋತುವಿನಲ್ಲಿ ಕಾಣಿಸಿಕೊಳ್ಳುತ್ತಾನೆ. ವಿವೇಕಾನಂದರಂಥ ವಿಭೂತಿಪುರುಷರಲ್ಲಿ ತಲೆದೋರುತ್ತಾನೆ. "ಓಂ ತತ್ ಸತ್ ಪುರುಷಾಯ ನಮಃ - ವಂದೇ ಮಾತರಂ" ಎಂಬುದಾಗಿ ಜಗತ್ತಿನ ತಂದೆ-ತಾಯಿಗೆ ನಾಕುತಂತಿ ಅರ್ಪಿತವಾಗಿದೆ.

ಶ್ರೀಕೃಷ್ಣ, ಶ್ರೀ ಅರವಿಂದರ ಜನ್ಮಮಾಸವಾದ ಶ್ರಾವಣವು ಜಗದೋದ್ಧಾರನನ್ನು ಹೀಗೆ ಸ್ಮರಿಸುತ್ತದೆ :

> ವಸುದೇವನ ದೇವಕಿ ಗರ್ಭಾ | ತುಂಬಿದ ತುಂಬಿ
> ಸೆರೆ ಬಿಡಿಸಿ ಬಂದಿ | ವಿಶ್ವದ ತಂದಿ....
> .... .... .... ....
> ಘಮಾ ಘಮಾ ಗಂಧಾ
> ಅರವಿಂದಾ ಬಂದಾ

'ಇದು ಯುಗಾದಿ' ಕವನದಲ್ಲಿ ವಸಂತಮಾಸವು ಶಿವ-ಶಕ್ತಿ, ರಾಧಾ-ಕೃಷ್ಣರನ್ನು ಜೊತೆಯಾಗಿ ಇಂತು ನೆನೆಯುತ್ತದೆ :

> ಚೈತ್ರಗೌರಿ ಹೂತಳಣ್ಣಾ
> ನೆನೆದು ಶಿವನ ನಾಮಾ
> ಮಾಧವನಾ ರಾಸಲೀಲೆ-
> ಗಿದೇ ಋತುವು ಹದವು

ವಿವೇಕಾನಂದರ ಚಾರಿತ್ರ್ಯಸಾಕ್ಷಾತ್ಕಾರದಿಂದ 'ಶ್ರೀ ವಿವೇಕಾನಂದ ಶಿಖರ-ಪ್ರಗಾಥಾ' ಹೊರಬಂದಿದೆ. ಇದರಲ್ಲಿ ಬರುವ :

> 'ನಂದಿ ನಾನು, ಆ-ನಂದಿ ನಾನು ಆ ವೃಷಭಧ್ವಜ ಎತ್ತೂಽಽ
> ಬಂದೆ ನಾ ಶಿವಶಕ್ತಿಯ ಹೊತ್ತು'

ಈ ಸಾಲುಗಳಲ್ಲಿ ವಿಶ್ವದ ತಂದೆ-ತಾಯಿಗಳನ್ನೇ ಹೊತ್ತು, ಧರ್ಮಧ್ವಜ ಎತ್ತಿ ತೋರುವ ಈ ಎತ್ತು (ಉದ್ಧಾರಕ ಶಕ್ತಿ) ವಿವೇಕಾನಂದರು ಅದ್ಭುತರಮ್ಯ ವಿಭೂತಿಪುರುಷರು ಎಂಬ ಚಿತ್ರ ಎದ್ದು ಕಾಣುವಂತೆ ಮಾಡುತ್ತದೆ.

ತತ್ತ್ವಶಾಸ್ತ್ರದಲ್ಲಿ ಅಂತಿಮತತ್ತ್ವ ಏಕವ್ರೋ ? ಅನೇಕವ್ರೋ ? ಎಂದು ಚರ್ಚಿಸುವದುಂಟು. ಬೇಂದ್ರೆಯವರು ಬೇಜಾರು ಹುಟ್ಟಿಸುವ ಏಕತ್ವದ ಏಕತಾನ

ವನ್ನು ಒಪ್ಪುವದಿಲ್ಲ. ಅರ್ಪಣದಲ್ಲಿ ಶ್ರೀ ಅರವಿಂದರ 'ಸಾವಿತ್ರಿ' ಕಾವ್ಯದಿಂದ ಅರ್ಥಪೂರ್ಣವಾದ ಒಂದು ಚರಣವನ್ನು ಉದ್ಧರಿಸಲಾಗಿದೆ. 'There oneness was not tied to monotone' ಏಕತ್ವದ ಜೇರಿಲ್ಲದ ಅನೇಕತೆಯನ್ನು ಅವರು ಒಪ್ಪುವದಿಲ್ಲ.

'ನಿನಗೆ ನನಗೆ ಒಂದೆ ಆದಿ — ಒಂದೆ ದಾದಿ
ಯುಗದ ಮಧ್ಯಬಿಂದು ಒಂದು' ('ಇದು ಯುಗಾದಿ')

ಆ 'ಒಂದು' ಇದ್ದುದರಿಂದ ಉಳಿದ ಮೂರು ('ನಾನು,' 'ನೀನು,' 'ತಾನು') ಸತ್ಯ ಎಂದು ಪ್ರೊ. ಜೇಂ. ಮಾ. ರು ಹೇಳುವದುಂಟು. 'ಅಣು-ಮಹತ್' ದಲ್ಲಿ ಬರುವ,

ಒಂದೆ ಇಪ್ಪತ್ತೇಳು
ಮುಂದೆ ಮೂವತ್ತೇಳು....

ಸಾಲುಗಳನ್ನು ನೆನೆಯಬಹುದು.

ಪರತತ್ತ್ವ-ಭಗವಂತನ ಸಾಕ್ಷಾತ್ಕಾರ ತರ್ಕದಿಂದಲ್ಲ, ವಿಚಾರದಿಂದಲ್ಲ, ಅನುಭೂತಿಯಿಂದ, ಅಂತಜ್ಞಾನದಿಂದ.

ಇದು ವಿಚಾರದ ಹಳ್ಳವನ್ನು ಒಳಹೊಕ್ಕಿಲ್ಲ;
ಅಂತರಿಕ್ಷದ ಪಕ್ಷಿ ಈಕ್ಷಿಸುತ್ತಿದೆ ಕ್ಷಿತಿಜ ('ಊಹೆ')
.... .... .... ....
ಶ್ರೀ ಅನಿರ್ವಾಚ್ಯಕ್ಕೆ ಜೇರೆ ಭಾಷ್ಯವು ಜೇಕೆ ?
('ನಾದ ಮಯೂರ')

ಪರತತ್ತ್ವ ಜಡತತ್ತ್ವವಲ್ಲ. ಆದು ಚೈತನ್ಯಮಯ ಸ್ವರೂಪದ್ದು; ಆದು ಸಚ್ಚಿದಾನಂದ.

spirit does not matter
mister ! silence is better (ಹೆಟರ-ಡಾಕ್ಸಿ)
.... .... .... ....
ಸಚ್ಚಿತ್ತು ಆನಂದ
.... .... .... ....
ಉಪನಿಷತ್ ಸಾರ

(೨) ಜಗತ್ತು :

ಜಗತ್ತಿನ ಆದಿತತ್ತ್ವ ಸತ್. ಅದು ಶೂನ್ಯವಲ್ಲ; ಅಸತ್-ಅಲ್ಲ.

‘ ಶೂನ್ಯದಲ್ಲಿ ಲೋಕೋದಯ
ಶೂನ್ಯದಲ್ಲಿ ಲೋಕಲಯ ’
ಬುದ್ಧಿಶೂನ್ಯ ವೊಳಗಿದ
ಇದ್ದಹಾಗೆ ಮುಳುಗಿದ ! (ಅಣು-ಮಹತ್)
.... .... .... ....

‘ ಪಂಚಮಹಾಭೂತಗಳಿಂದ, ತ್ರಿವೃತ್‌ಕರಣ-ಪಂಚೀಕರಣ ಸಂಯೋಗದಿಂದ ಸೃಷ್ಟಿಯ ಉತ್ಪತ್ತಿಯಾಯಿತು ’ ಇದು ವೇದವಾಣಿ. ಈ ಧ್ವನಿಯ ಕೆಲವು ಮಾತುಗಳನ್ನು ‘ ಅಣು-ಮಹತ್ ’ ಕವನದ ಕೆಳಗಿನ ಸಾಲುಗಳಲ್ಲಿ ನೋಡಬಹುದು :

ದೇವ ತೇಜದ ನೀರು
ನಾರಾಯಣನ ಊರು
ಊರ್ವಸಿಯ ಬಸಿರಿನಲಿ ಮಿತ್ರ ವರುಣ
ಆ ವಸಿಷ್ಠನು ಮತ್ತೆ ಆ ಅಗಸ್ತ್ಯನ ಉದಯ
ಎಂಟು ವಸುಗಳ ಗಂಟು
ಘನಗೊಂಡಿತು
ಒಂದೆ ಇಪ್ಪತ್ತೇಳು
ಮುಂದೆ ಮೂವತ್ತೇಳು
ಮೂವತ್ತು ಆರರಲಿ ಅರವತ್ತು ಮೂರು
ಒಂದು ಸೊನ್ನೆಯ ಹಿಂದೆ
ಭವ-ಭಾವ ಬಲದಿಂದೆ
ನೂರು ನೂರರೊಳಿತ್ತು ಸಾವಿರದ ಊರು

ಈ ಜಗತ್ತು ಸತ್ಯ-ಮಿಥ್ಯೆಯಲ್ಲ. ‘ ಈ ಜಗ, ಅಪ್ಪಾ, ಅಮ್ಮನ ಮಗ ’ ‘ ಲೋಕವೇ ಅನನ್ಯವು ’ ‘ ವಿಶ್ವಂ ಆರ್ಯಂ ಕೃಣ್ವಾನ್ ’ ನಾವು ಅಮೃತಪುತ್ರರು. ಈ ‘ ಗ್ಲೋಬು ’ ರಾಸದ ಲೀಲೆ. ಈ ‘ ಭೂಮಂಡಲ ದೇವನ ಮನೆ.’ ಅದು ಚೆಂದ.

(೩) ಜೀವಿ : ಜಗತ್ತಿನಂತೆ ಜೀವಿಯೂ ಭಗವಂತನ ಮಗ. ಚೈತನ್ಯಪುರುಷನು ದೇಹ ಧರಿಸಿ ದೇಹದ ಮೂಲಕ ನೋಡುತ್ತಾನೆ, ಕೇಳುತ್ತಾನೆ ಇತ್ಯಾದಿ.

‘ ಈ ಜಗ, ಅಪ್ಪಾ, ಅಮ್ಮನ ಮಗ
ಅಮ್ಮನೊಳಗ ಅಪ್ಪನ ಮೊಗ
ಅಪ್ಪನ ಕತ್ತಿಗೆ ಅಮ್ಮನ ನೊಗ
ನಾ ಅವರ ಕಂದ
ಶ್ರೀಗುರುದತ್ತ ಅಂದ ’ (‘ ನಾಕುತಂತಿ ’)

ಆದರೆ ಅಜ್ಞಾನದ ಮೂಲಕ ಜೀವಿ ಕ್ಲೇಶಕ್ಕೆ ಗುರಿಯಾಗಿದ್ದಾನೆ. ವೇದನೆ-ಯಿಂದ ಬಳಲುತ್ತಿದ್ದಾನೆ :

‘ ಇದು ಸ್ಪರ್ಶರೋಗ, ಹೋ ಸಂಸರ್ಗಜನ್ಯ ಇದು,
.... .... .... ....
ಎದೆಯು ಡವ
ಡವ ಡಮರು ತಿಮಿರಾಂಧಕಾರ ಘನವಿಷ ತಿಮಿರು.
.... .... .... ....
ಅಗಿದ ಅಗಿದಲ್ಲಿ ವೇತಾಳ – ಅಪಾಯು
ದಿಗ್ಗೇಡಿ ನಾನಂಥ — (‘ ನಟರಾಜನಿಗೆ ’)

ಅಜ್ಞಾನ ಹರಿಯಬೇಕಾದರೆ ಅಹಂಕಾರ ನಶಿಸಬೇಕು. ಸಾಕ್ಷಿಕತೆ ಮೂಡಬೇಕು. ಸುಪ್ರಮಾನಸ ದೃಷ್ಟಿಯರಳಬೇಕು.

ದಾಸ ಪುರಂದರ ವಿಠ್ಠಲನೊಡೆಯಾ
ಅಹಂಕಾರವಿದೆ ಕೊಡು ಬಿಡುಗಡೆಯಾ ||
(‘ ಅಹಂಕಾರದ – ಬಿಡುಗಡೆಗಾಗಿ ’)
ಪ್ರೇಕ್ಷಕನಲಿ ಸಾಕ್ಷಿಕತೆಯು ಸಪ್ತಪಿಂಡವಾಗಲಿ
(‘ ಕೇಳಿ ನುಡಿ ’ ‘ ನುಡಿಯು ಕೇಳಿ ’)
ಮನದಿಂದಾ ಸುಪ್ರಮನಕ್ಕ
ಉನ್ಮನೀ ಸೋಪಾನಾ (‘ ಶಿಶುವಾರನ ಲಾಲಿ ’)

ಕಾದಿ ಗೆಲ್ಲುವ ಹಾದಿ ಸರಿಯಲ್ಲ. ಮುಕ್ತ ಭಕ್ತಿಯೇ ಯೋಗ್ಯ.

ಇದು ಯುಗಾದಿ
ಆಗಿರು ಸಂವಾದಿ
ಏಕೆ ವಾದ ಬೀದಿ ?
ಸಾದಿ ನಮ್ಮ ಹಾದಿ ತಮ್ಮಾ
ಯಾಕೆ ಕೆಡುವೆ ಕಾದಿ ?
(‘ ಇದು ಯುಗಾದಿ ’)

'ಹೊತ್ತೊತ್ತಿಗೆ ಭಕ್ತಿ
ಯುಕ್ತಿ ಹೊಳಿಸೋ' ('ಪಂಚಾರತಿ')

ಚೈತನ್ಯದ ಪೂಜೆಗೆ ಸೌಜನ್ಯವೆಂಬುದು ಹೂವು. ಸಾಮರ್ಥ್ಯವೆಂಬುದು ಬೆಲಪತ್ರಿ. ಸತ್ಯವೆಂಬುದು ನಿತ್ಯದ ದೀಪ. ಪ್ರೀತಿಯೆಂಬುದು ನೈವೇದ್ಯ, ಸೌಂದರ್ಯ ಧ್ಯಾನ. ಆನಂದಗೀತ ಸಾಮವೇದ.

ಈ ಭಾಗವತಜೀವನಕ್ಕೆ ಗುರುಬೇಕು, ಕೃಪೆ ಬೇಕು.

**'ನಾಕುತಂತಿ'ಯಲ್ಲಿ 'ಅರವಿಂದ' ವಿಚಾರಧಾರೆ:**

ಶ್ರೀ ಬೇಂದ್ರೆಯುವರು ಅರವಿಂದರು ತಮ್ಮ ಗುರುಗಳೆಂದು ಒಪ್ಪಿದ್ದಾರೆ. ನಾಕುತಂತಿಯಲ್ಲಿ ೩೫ ರಿಂದ ೪೪ ರ ವರೆಗಿನ ಕವನಗಳಲ್ಲಿ ಪೂರ್ಣಯೋಗದ ಧ್ವನಿಯಿದೆ.

The Life Divine ('ದಿವ್ಯಜೀವನ' ಅಥವಾ 'ಭಾಗವತ ಜೀವನ') ಅರವಿಂದರು ತತ್ತ್ವಶಾಸ್ತ್ರಕ್ಕೆ ಇತ್ತ ಕಾಣಿಕೆ. ಆ ಪುಸ್ತಕದ ಸಂಪುಟ ಎರಡರಲ್ಲಿ Ignorance – ಅಜ್ಞಾನವೆಂದರೇನು, Knowledge – ಜ್ಞಾನ, ವಿಜ್ಞಾನ ವೆಂದರೇನು— ಎಂಬುದರ ವಿವರಣೆಯಿದೆ. ಈ ವಿಭಾಗದಲ್ಲಿ "Out of the seven fold ignorance towards the seven fold knowledge" ಎಂಬುದು ಮಹತ್ತ್ವದ ಅಧ್ಯಾಯವಾಗಿದೆ. ನಾಕುತಂತಿಯ 'ಕೇಳಿ-ನುಡಿ; ನುಡಿ-ಕೇಳಿ' ಕವನದಲ್ಲಿ 'ಅಜ್ಞಾನಸಪ್ತಕದಿಂದ ವಿಜ್ಞಾನ ಸಪ್ತಕದೆಡೆಗೆ, ಎಚ್ಚತ್ತ ಮಾನವನು ಸಾಗಬೇಕಾಗುತ್ತದೆ' ಎಂದು ಹೇಳಲಾಗಿದೆ. "ಪರಾ, ಪಶ್ಯಂತಿ, ಮಧ್ಯಮಾ, ಇವುಗಳ ಸಮ್ಯಕ್ ಯೋಗದಲ್ಲಿ ಶುದ್ಧ ಕಾವ್ಯೋದ್ಭವವಾಗುತ್ತದೆ. ಆ ಶ್ರುತಿಸಂಪತ್ತಿಯನ್ನು ಸಾಮಾಜಿಕ-ರಾಜಕೀಯಗಳ ಕ್ಷಣಿಕ ಸಂಸರಣಗಳಿಂದ ದುರ್ಬಂಧಕ್ಕೆ ಒಳಪಡಿಸಬಾರದು" ಎಂಬ ಎಚ್ಚರಿಕೆ ಯನ್ನು ಕವಿಗಳು ಕೊಟ್ಟಿದ್ದಾರೆ.

ಜಗತ್ತಿನ ಇತಿಹಾಸ-ಧರ್ಮಗಳು ಆತ್ಮಿಕಬಲವನ್ನು ಎತ್ತಿ ಹಿಡಿದು, ಭೂಮಿಯ ಮೇಲೆ ದೇಹಧರಿಸಿ ಇರುವದು ಕಡಿಮೆತನ ಎಂಬ ಅಭಿಪ್ರಾಯವನ್ನು ಸಾಮಾನ್ಯವಾಗಿ ವ್ಯಕ್ತಗೊಳಿಸಿವೆ. ದ್ಯಾವಾ ಪೃಥಿವಿಯನ್ನು ಒಂದುಗೂಡಿಸುವದು ಅರವಿಂದರ ಪೂರ್ಣಯೋಗದ ಗುರಿ. ಮನುಷ್ಯಪ್ರಯತ್ನವಿರಿದಂತೆ ದೈವೀ ಕರುಣೆ ಕೆಳಗಿಳಿದು ಬರುತ್ತದೆ. ಮನಃಪ್ರಧಾನ ಮಾನವನೇ ಜಗತ್ತಿನ ಮೇಲೆ ಬರಬಹುದಾದ ಮಹತ್ತ್ವದ ಜೀವಿಯಲ್ಲ. ಇವನಿಗಿಂತ ಹೆಚ್ಚು ಶಕ್ತಿಶಾಲಿಗಳು ಇಲ್ಲಿಯ ಜೀವನ ವನ್ನು ಆನಂದಮಯವಾಗಿಸಬಲ್ಲವು. ಅಂಥ ಜೀವಿಗಳ ಉದಯವೇ ಈ ಸೃಷ್ಟಿಯ

ಗುರಿ. ಇದೇ Evolution – ಉತ್ಕ್ರಾಂತಿ, ವಿಕಾಸ; Manifestation ಅಥವಾ ಅಭಿವ್ಯಕ್ತಿ. ದೇವಜಾತಿ ಬರುವದಿದೆಯೆಂದು ಅರವಿಂದರ ಮತ. ನಾಕು ತಂತಿಯ 'ಶಿಶುಮಾರನ ಲಾಲಿ' ಇಂಥ ದೇವಜನ್ಮದ ಸ್ವಾಗತದ ಲಾಲಿ. ಈ ಕವನದಲ್ಲಿ "ಭಗವತ್ ತತ್ತ್ವವು ಜಡ-ಪ್ರಾಣ-ಮನಗಳಲ್ಲಿ ಎಂತು ಅರಳಿತು, ಇನ್ನೂ ಅರಳಲಿದೆ, ಯಾವ ಯಾವ ವಿಭೂತಿತತ್ತ್ವಗಳು ವಿಶ್ವದ, ಭಾರತದ ಚರಿತ್ರೆಯಲ್ಲಿ ಪ್ರಕಟಗೊಂಡವು, ಹರಿಹರ ಸಮನ್ವಯತತ್ತ್ವ, ಬಕದಾಲ್ಭ್ಯನ ಧ್ಯಾನತತ್ತ್ವ, ರಾಮಕೃಷ್ಣಬುದ್ಧ-ಮಹಾವೀರಾದಿ ಅವತಾರತತ್ತ್ವ, ಭಗವದ್ಗೀತಾ ತತ್ತ್ವ, ಆಚಾರ್ಯ-ಯತಿಗಳ ಸಾಮಗಾನದ ಸಮ್ಯಕ್ ತತ್ತ್ವ, ಶ್ರೀ ಅರವಿಂದ ಶ್ರೀ ಮಾತೆಯುರ ಸುಪ್ರಮಾನಸ ತತ್ತ್ವ" ಇವೆಲ್ಲವುಗಳಿಗೂ ಕವಿ ಸ್ವಸ್ತಿ ಹೇಳಿ ಆರತಿ ಎತ್ತುತ್ತಾನೆ.

ಓಂ ಸ್ವಸ್ತಿ ! ಸ್ವಸ್ತೀ, ಸ್ವಸ್ತೀ
ಭೂಮಂಡಲ ಸ್ವಾಸ್ಥ್ಯ
ಲಕ್ಷಾ ಕಾರ್ತಿಕವಾಗಿ
ಕೋಟಿ ಕೋಟಿ ಅಬ್ಜಾ
ಆತ್ಮಿಕ ತೇಜಾ, ಕೃತುಬೀಜಾ
ಕೃತುಕೃತ್ಯತೆ ಓಜಾ
ಝೂಽ ಝಾಽ, ದಧಿಕ್ರಾಽ
ದಧ್ಯಂಕನ ನೈಜಾ, ಸ್ವಸ್ತಿ, ಆರತಿ ಬೆಳಗಽ.

ಸರ್ವಭೂಮಂಡಲದ ಯೋಗಕ್ಷೇಮದಲ್ಲಿ ಲಕ್ಷ್ಯವಿಟ್ಟು ಶ್ರೀ ಅರವಿಂದರು ಪ್ರತಿಪಾದಿಸಿದ ತತ್ತ್ವಾನುಭವದ ಬೆಂಬಲಕ್ಕೆ ವೈದಿಕಯೋಗಪದ್ಧತಿಯಿದೆ. ಈ ದೃಷ್ಟಿಯಿಂದ ಅವರ Foundations of Indian Culture ಮಹತ್ತ್ವದ ಗ್ರಂಥ. ಮೇಲೆ ಉದ್ಧರಿಸಿದ ಸಾಲುಗಳಲ್ಲಿ ಭೂಮಂಡಲ ಸ್ವಾಸ್ಥ್ಯದ ಮಾತಿದೆ. ಅದರ ರೀತಿ ವೈದಿಕವಿದೆ. ನಾಕುತಂತಿಯ ೩೦ ರಿಂದ ೩೪ ('ಹೆಟರ-ಡಾಕ್ಸಿ,' 'ಪೌಂಡ್ರಕ-ಪುಳಿಂದಕಂ,' 'ಮಹಾತ್ಮ-ವಚನ'. 'ದಾರಿಗದಾರೋ,' 'ನಿರ್ಬುದ್ಧ') ಈ ಕವನಗಳಲ್ಲಿ ಈ ಭಾವ ಹೆಚ್ಚು ಸ್ಫುಟವಾಗಿ ಬಂದಿದೆ. ಅಲ್ಲಿಯ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು : "ಸಾಕ್ಷಿಪುರುಷನ ಪೂರ್ಣಯೋಗ ಇದು ಮಾನವನ ಆದರ್ಶ. ಸಿಕ್ಕಾಪಟ್ಟೆ (Analysis, Synthesis) ಸಂಗಡಣೆ, ವಿಂಗಡಣೆಗಳು ಚದುರಂಗದಾಟದಲ್ಲಿ ಮಾತ್ರ. ಈ ವಿನೋದವು ಕಾಲ ಕ್ಷೇಪಮಾಡುವ ಮಂದಾನಂದ ಬುದ್ಧಿ .... ಗತ ಸಂಸ್ಕೃತಿಗಳ ತಿರುಳನ್ನು ಪ್ರಕೃತ ಸಂಸ್ಕೃತಿಯಲ್ಲಿ ಗರ್ಭೀಕರಿಸಿ, ಉದ್ಭವಲಿಂಗಕ್ಕೆ ಹಾದಿ ಮಾಡುವದು ವೇದಸಂಪತ್ತಿನ

ಮಾರ್ಗ....ನಮ್ಮ ಇತಿಹಾಸ ಪುರಾಣಗಳಿಂದ ವೇದವಿದ್ಯೆಯನ್ನೇ ವಿಕೃತಗೊಳಿಸಿದರೆ ವಿಶ್ವಸಾಹಿತ್ಯ ಬರಲಾರದು; ಸಾಮಾಜಿಕ, ರಾಜಕೀಯ ದ್ವೇಷೋದ್ದೀಪನಕ್ಕೆ ಇತಿಹಾಸ ದರ್ಶನವು ಹಾದಿಯಾಗಬಾರದು; ಅದು ಸ್ಮಶಾನದ ಹಾದಿ–ಹಿರೋಶಿಮಾ ಹಾದಿ. ''

ಅರವಿಂದರದು ಸಮನ್ವಯಾತ್ಮಕ ದೃಷ್ಟಿ. ಮೇಲೆ ಸೂಚಿಸಿದಂತೆ ೩೫ ರಿಂದ ೪೪ ರ ವರೆಗಿನ ನಾಕುತಂತಿಯ ಕವನಗಳಲ್ಲಿ ಪೂರ್ಣಯೋಗದ ದೃಷ್ಟಿಯಿದೆ. 'ಇದು ಯುಗಾದಿ,' 'ಚೈತನ್ಯದ ಪೂಜೆ,' 'ಪಂಚಾರತಿ,' 'ಎದೆಯ ಒಕ್ಕಲಿಗನ ಹಾಡು,' 'ಅಹಂಕಾರದ ಬಿಡುಗಡೆ,' 'ಸಂಭೂ–ಶಂಭೂ,' 'ಕಣ್ಣರಳು,' 'ದೇಮವ್ವನ ಮೆರವಣಿಗೆ,' 'ಕೇಳಿ–ನುಡಿ; ನುಡಿ–ಕೇಳಿ,' 'ಶಿಶುಮಾರನ ಲಾಲಿ'– ಇವೇ ಆ ಕವನಗಳು. ಇವುಗಳಲ್ಲಿ ಕರ್ಮ, ಜ್ಞಾನ, ಭಕ್ತಿ ಇವು ಯುಕ್ತವಾಗಿ ನಡೆಯುತ್ತವೆ.

ಅರವಿಂದರ ದೃಷ್ಟಿಯಲ್ಲಿ ಅಂತಿಮಸತ್ಯ ಜಡವಲ್ಲ. ಅದು ಚೈತನ್ಯಮಯ ಸ್ವರೂಪದ್ದು. ಅಂತಿಮಸತ್ಯವನ್ನು ತರ್ಕದಿಂದಲ್ಲ, ಅನುಭೂತಿಯಿಂದಲೇ ಅರಿಯಲು ಸಾಧ್ಯ. ಸಮಗ್ರತೆ, ಅತಿಮಾನುಷಪ್ರಜ್ಞೆ ಉದಯಿಸಲು ಅಹಂಕಾರದ ನಿರ್ಮೂಲನವಾಗಬೇಕು. ಡಾಂಭಿಕತೆ, ಪೊಳ್ಳುಜಂಭ ಹೋಗಬೇಕು. ಈ ವಿಷಯ ನಾಕುತಂತಿಯ ಕವನಗಳಲ್ಲಿ ಹೇಗೆ ಮೂಡಿಬಂದಿದೆಯೆಂಬುದನ್ನು ದೇವರು, ಜಗತ್ತು, ಜೀವ ವಿಷಯಗಳ ಚರ್ಚೆಯಲ್ಲಿ ಈಗಾಗಲೇ ವಿವರಿಸಿಯಾಗಿದೆ.

"ಓಂ ತತ್ ಸತ್ ಎಂಬ ಸತ್ತ್ವ ತತ್ತ್ವವು ತನ್ನ ತಪಃಶಕ್ತಿ, ಜನನಶಕ್ತಿಯಿಂದ ಮಹತ್ತಿಗೆ ಪುಷ್ಟಿಕೊಟ್ಟು, ಭೂ, ಭುವಃ ಸ್ವರ್ಗಸ್ಥಿತಿಯನ್ನು ಪೈಶಾಚಿಕ, ರಾಕ್ಷಸಿಕ, ಆಸುರಿಕ ದಾಸ್ಯದಿಂದ ಬಿಡಿಸಿಕೊಳ್ಳಬೇಕು. ಹೀಗೆ ಮಾಡುವಾಗ, ಆ ಚೈತ್ಯಪುರುಷ ತನ್ನ ಸೋಪಾನಗತಿಯಲ್ಲಿ ಮೇಲೆ ಏರಬೇಕು. ಆಧಿಭೌತಿಕ, ಆಧ್ಯಾತ್ಮಿಕ, ಆಧಿದೈವಿಕ ತಾಪಗಳು ತೀರಿ ಸಾಧನೆಯಲ್ಲಿ ತಪವಾಗಿ, ಹೊಸದೊಂದು ಆಧಿಯಜ್ಞಿಕ ಅವತಾರದ ಬರವಿಗೆ ಸಿದ್ಧಿ ಸಂಕಲ್ಪವಾಗಬೇಕು. ಇದಕ್ಕೆ ಕಾಮ ಸಂಕಲ್ಪ ಸಾಲದು. ತಮ್ಮ ತಮ್ಮ ಈಶಸಂಕಲ್ಪ ಬೇಕು. ಇದನ್ನು ಶ್ರೀಮಾತಾ ಶಕ್ತಿ ಮತ್ತು ಶ್ರೀ ಅರವಿಂದ ಅವತಾರ ಸಾರುತ್ತಿದೆ.'' ಎಂದು ಬೇಂದ್ರೆಯವರಿಗೆ ಅನಿಸಿದೆ. ಅದಕ್ಕೆಂದೇ ನಾಕುತಂತಿಯ ಅರ್ಪಣದಲ್ಲಿ,

"ಓಂ ತತ್ ಸತ್ ಪುರುಷಾಯ ನಮಃ" ॥
'ವಂದೇ ಮಾತರಂ'

ಎಂದು ಹೇಳಲಾಗಿದೆ,

**ಮುಕ್ತಾಯ :**

ಶ್ರೀ ಅರವಿಂದರ ದೃಷ್ಟಿಯಲ್ಲಿ ತತ್ತ್ವಜ್ಞಾನವು ಚರ್ಚೆಯಲ್ಲ, ಬೌದ್ಧಿಕ ಕ್ರೀಡೆಯಲ್ಲ, ಹೆಮ್ಮೆಯ ಸಾಧನವಲ್ಲ; ಅದು ದರ್ಶನ. ಇದು ಬೇಂದ್ರೆಯವರ ದೃಷ್ಟಿಯೂ ಹೌದು. ಈ ದರ್ಶನದ ಉದ್ದೇಶ ಭಗವಂತನ ಸಾಕ್ಷಾತ್ಕಾರ. ದಾರಿ ಯೋಗದ ಹಾದಿ, ಭಾಗವತನ ಮಾರ್ಗ. "ನಮ್ಮ ಆಧ್ಯಾತ್ಮಿಕ ಉನ್ನತಿಯು ಸುಪ್ರಮಾನಸ ಭೂಮಿಕೆಯಲ್ಲಿ ಅಚಲಪ್ರತಿಷ್ಠೆ ಹೊಂದಬೇಕು. ಅದರಿಂದಲ್ಲದೇ ಮಾನವನ ಉದ್ಧಾರವಿಲ್ಲ" ಎಂದು ಶ್ರೀ ಅರವಿಂದರೂ, ಬೇಂದ್ರೆಯವರೂ ಹೇಳಿ-ದರೂ, "ಸಾಮಾನ್ಯತೆಯ ಅಜ್ಞಾನ, ಅಹಂಕಾರಗಳಿಗೆ ನಾವು ಪಟ್ಟಗಟ್ಟಿ, ಅದನ್ನು ಶಿಲಾಶಾಪಕ್ಕೆ ಗುರಿಪಡಿಸಬಾರದು. ರಾಮಪಾದಸ್ಪರ್ಶ ಅದಕ್ಕೂ ಬೇಕು. ಆ ದಿವ್ಯದರ್ಶನದಲ್ಲಿ ವ್ಯಾಧನು ವಾಲ್ಮೀಕಿಯಾಗುತ್ತಾನೆ" ಎಂದು ಈರ್ವರೂ ಹೇಳುತ್ತಾರೆ. 'ಇಂಥ ಹುತ್ತದ ಸುತ್ತ,' 'ಆನು,' 'ತಾನು', 'ನಾನು,' 'ನೀನಿ'ನ ನಾಕು ತಂತಿಯ ಈ ಚೌದಂತವೀಣೆ ಮಿಡಿಯುತ್ತದೆ' ಎಂದು ಲೇಖಕರ ಮುನ್ನುಡಿ ಹೇಳುತ್ತದೆ.

ಪ್ರತಿಯೊಂದು ತತ್ತ್ವ ತಿಳಿಸಿಕೊಡಲು ಒಂದು ವೈಜ್ಞಾನಿಕ ಪದ್ಧತಿ ಅಥವಾ ತಾತ್ತ್ವಿಕ ಪದ್ಧತಿಯನ್ನು ಅನುಸರಿಸಲಾಗುತ್ತದೆ. ತಮ್ಮ ದಿವ್ಯಜೀವನದ ತತ್ತ್ವವನ್ನು ತಿಳಿಸಿಕೊಡಲು ಅರವಿಂದರು ವೇದಾಂತಿಕ ಪದ್ಧತಿಯನ್ನು ಅನುಸರಿಸಿದ್ದಾರೆ, ಅವರ ದಾರಿ ಯೋಗದ ದಾರಿಯಾದರೂ, ಶ್ರೀ ಬೇಂದ್ರೆಯವರದು ಯೋಗ ಮಾರ್ಗವಾದರೂ ತಾತ್ತ್ವಿಕ ಹಿನ್ನೆಲೆ, ಪದ್ಧತಿ (Metaphysical Foundation) ಸಾಂಖ್ಯರದು ಎಂದು ನನಗೆನಿಸುತ್ತದೆ. ಅದಕ್ಕೆಂದೇ 'ಸಂಖ್ಯಾ ಶಾಸ್ತ್ರ'ದಲ್ಲಿ ಅವರ ಆಸಕ್ತಿ ದಿನದಿನಕ್ಕೆ ಬೆಳೆಯುತ್ತಿದೆ.

§ § § §

೩೩

# 'ನಾಕುತಂತಿ'ಯ ವೈಣಿಕ, 'ಗಂಗಾವತರಣ'ದ ಭಗೀರಥ

ಎಲ್. ಎಸ್. ಶೇಷಗಿರಿ ರಾವ್

ಕನ್ನಡದ ಕವಿಗಳಲ್ಲಿ ಕುತೂಹಲಕಾರಿಯಾದವರು ಒಂದು ದೃಷ್ಟಿಯಿಂದ ಬೇಂದ್ರೆ ಎನ್ನಬಹುದು. ಅವರ ಕಾವ್ಯದ ಹರವು ಬೆರಗುಗೊಳಿಸುವಂತಹುದು. ಮಾನವನ ಅಸ್ತಿತ್ವದ ವಿವಿಧ ಸ್ತರಗಳ ಅನುಭವಗಳಿಗೆ ಸ್ಪಂದಿಸುವ ಕವಿಜೀವ ಅವರ ಕಾವ್ಯದಲ್ಲಿ ಕಾಣುವಂತೆ ಇನ್ನಾರ ಕಾವ್ಯದಲ್ಲಿಯೂ ಕನ್ನಡದಲ್ಲಿ ಕಾಣುವುದಿಲ್ಲ.

ನಾನು ಬಡವಿ ಆತ ಬಡವ<br>
ಒಲವೆ ನಮ್ಮ ಬದುಕು<br>
ಬಳಸಿಕೊಂಡೆವದನೆ ನಾವು<br>
ಅದಕು ಇದಕು ಎದಕು.

ಎಂದು ಆಧ್ಯಾತ್ಮದ ಸೋಂಕಿಲ್ಲದೆ ನಲ್ಲ ನಲ್ಲೆಯರ ಪ್ರೇಮವನ್ನು ಹಾಡಬಲ್ಲರು; ಅದೇ ಪ್ರೇಮದ ಸ್ಪರ್ಶದ ಅನುಭವಕ್ಕೆ,

ಚಳಿಗೆ ಬಿಸಿಲಿಗೊಂದೆ ಹದನ<br>
ಅವನ ಮೈಯ ಮುಟ್ಟಿ<br>
ಅದೇ ಗಳಿಗೆ ಮೈಯು ತುಂಬ<br>
ನನಗೆ ನವಿರುಬಟ್ಟೆ

ಎಂದು ಭಾಷೆಯ ರೂಪ ತೊಡಿಸಬಲ್ಲರು.

ಹರೆಯದ ತೆರೆ ತೆರೆಗಳಲ್ಲಿ
ಅರೆ ತೆರೆದಿಹ ಮರೆಗಳಲ್ಲಿ
ಎದೆಯ ಮುದದ ತೊರೆಗಳಲ್ಲಿ
ಸುಧೆಯು ಕುಡಿದ ಹಕ್ಕಿ ಜಿಂಕೆ
ಕನಸುಗಳೇ ಬನ್ನಿ.

ಎಂದು ಕರೆಯಬಲ್ಲರು. "ಅನ್ನ ದೇವರು ಮಾತ್ರ ಇನ್ನೂ ಬರಲಿಲ್ಲೋ ?" ಎಂದು ಒಂದು ಇಡೀ ಸಮಾಜದ ಕೊರಗಿಗೆ ಕೊರಳಾಗಬಲ್ಲರು. ದಟ್ಟವಾದ ಪ್ರತಿಮೆಗಳನ್ನೊಳಗೊಂಡ 'ಜೋಗಿ'ಯಂತಹ ಕವನಗಳನ್ನು ಬರೆಯಬಲ್ಲರು. ಇದು ಕವನವೇ ? ಎಂದು ಸಂಶಯ ಬರುವಂತಹ ವಿಶಿಷ್ಟ ಚಿಂತನೆ ಹರಳುಗಟ್ಟಿದ ಕವನಗಳನ್ನೂ ಬರೆಯುತ್ತಾರೆ. ಜ್ಞಾನಪೀಠದ ಬಹುಮಾನ ಪಡೆದ ಅವರ "ನಾಕುತಂತಿ"ಯಲ್ಲಿ "ಪರ್‍ಯಾಶರ ರೂಪಾಃ" ಕವನದ ಕೆಲವು ಪಂಕ್ತಿಗಳು :

ಶರಥನು ರೂಪಾ ವಾಣೀಃ
ಪಶ್ಯನ್ ಪಶ್ಯನ್ ಶ್ವಸನ್ ಜಿಘ್ರನ್
ಕ್ಲೀಂಕರಿ ಸುತ್ರಾಣಿ
ಶಬ್ದ ಬ್ರಹ್ಮನ ರಾಣೀಃ
ಛಂದೋಗಮುಕಾಚ್ಛಾದನೇ
ವ್ಯಕ್ತಾಃ ವ್ಯಕ್ತಾ
ಅನುಗ್ರಹಿಸೌ – ಸದನೇ ಸದನೇ
ವಿಶ್ವಂಃಚರಂತೀಃ
ಅಭ್ರಾಂತಾ ಶಾಂತಾ
ಹೃದಯಾಂಕಿತ ಕಾಂತಾ........

ಬೇಂದ್ರೆಯವರು ಈಚೆಗೆ ಹದಿನೈದು ಇಪ್ಪತ್ತು ವರ್ಷಗಳಿಂದ ಬರೆದ ಕವನಗಳು "ಬೆಳಗು" (ಮೂಡಲ ಮನೆಯ ಮುತ್ತಿನ ನೀರಿನ), "ಪಾತರಗಿತ್ತಿ ಪಕ್ಕಾ," "ಮೂವತ್ತಮೂರು ಕೋಟಿ," "ಹಕ್ಕಿ ಹಾರುತಿದೆ ನೋಡಿದಿರಾ?" "ರುದ್ರವೀಣೆ" ಇಂತಹ ಹಿಂದಿನ ಕವನಗಳಂತೆ ಪ್ರಸಿದ್ಧವಾಗಿಲ್ಲ, ಸಾಮಾನ್ಯ ಕಾವ್ಯಪ್ರಿಯರಿಗೆ ಪರಿಚಿತವಾಗಿಲ್ಲ ಎಂಬುದು ನಿಜ. ಆ ಮೊದಲಿನ ಕವನಗಳನ್ನು ಓದಿದಾಗ ಅಥವಾ ಕೇಳಿದಾಗ ಏನೋ ಒಂದಿಷ್ಟು ಅರ್ಥವಾಯಿತು ಎನ್ನಿಸುತ್ತದೆ. ಬೇಂದ್ರೆಯವರೆಂದಿದ್ದಾರೆ : "ನಾನೇ ನನ್ನ ಗಮಕಿ, ನಾನೇ ನನ್ನ ನಾದಿ–ಸಂವಾದಿ; ನಾನೇ ನನ್ನ ವಿಮರ್ಶಕ–ವಾಗ್ಮಿ. ಹೀಗೆ ಚತುರಂಗ ಸಿದ್ಧನಾಗಿ ನಾನು

ಹೋದ ಐವತ್ತು ವರ್ಷ ಸಾಧನೆ ಮಾಡಿದ್ದೇನೆ.'' ಈಚೆಗಿನ ಹಲವು ಕವನಗಳು ಪ್ರಶ್ನಾರ್ಥಕ ಚಿಹ್ನೆಗಳಾಗಿ ಉಳಿಯುತ್ತವೆ.

ಆದರೆ ಒಂದು ಅಂಶ ನಿರ್ವಿವಾದ. ಬೇಂದ್ರೆಯವರಂತೆ ಭಾಷೆಯನ್ನು ದುಡಿಸಿಕೊಂಡ ಕವಿ ಬೇರೊಬ್ಬರಿಲ್ಲ. ಈ ಮಾತನ್ನು ನಾನು ಹೇಳುವಾಗ ಬಹುಮಟ್ಟಿಗೆ ಪದಗಳ ನಾದಸ್ವರೂಪವನ್ನು ಗಮನದಲ್ಲಿಟ್ಟುಕೊಂಡಿದ್ದೇನೆ. ಪದ್ಯಕ್ಕೂ ಗದ್ಯಕ್ಕೂ ಇರುವ ಒಂದು ಮುಖ್ಯ ವ್ಯತ್ಯಾಸ ಇಲ್ಲಿದೆ. ಪದ್ಯ ಕಾವ್ಯದ ಮಾಧ್ಯಮ. ಒಂದು ಬಿಳಿಯ ಕಿರಣದಲ್ಲಿ ಅಡಗಿರುವ ಏಳು ವರ್ಣಗಳ ಅಸ್ತಿತ್ವವನ್ನು ಪ್ರಿಸ್ಮ್ (ಮುಪ್ಪಟೆಯ ಗಾಜು) ನಮ್ಮ ಅನುಭವಕ್ಕೆ ತಂದುಕೊಡುತ್ತದೆ. ಕಾವ್ಯ ಮಾಡುವುದು ಇಂತಹ ಒಂದು ಕ್ರಿಯೆಯನ್ನು. ಪ್ರಿಸ್ಮ್ ಒಂದು ಬಿಳಿ ಕಿರಣವನ್ನು ಏಳು ಬಣ್ಣಗಳಾಗಿ ಒಡೆದಾಗ, ಬಿಳಿ ಕಿರಣ ತನ್ನ ಅಸ್ತಿತ್ವವನ್ನು ಕಳೆದುಕೊಂಡು, ನಾಶವಾಗಿ, ಏಳು ವರ್ಣಗಳು ಕಂಡವು ಎಂದಿಲ್ಲ, ಅಥವಾ ಪ್ರಿಸ್ಮ್‌ನಲ್ಲಿ ನಾವು ಬಣ್ಣಗಳನ್ನು ಕಾಣುವ ಮುನ್ನ ಬಣ್ಣಗಳಿಗೆ ಅಸ್ತಿತ್ವ ಇರಲಿಲ್ಲ ಎಂದೂ ಇಲ್ಲ ಎಂಬುದು ಗಮನಿಸಬೇಕಾದ ಅಂಶ. ಮೊದಲು ಬಿಳಿ ಕಿರಣವನ್ನು ಕಂಡು ಅದಕ್ಕೆ ಅಸ್ತಿತ್ವವಿದೆ ಎಂದುಕೊಂಡು, "ಅಸ್ತಿತ್ವ'' ಎಂಬುದನ್ನು ಒಂದು ರೀತಿಯಲ್ಲಿ ಅನುಭವಕ್ಕೆ ತಂದುಕೊಂಡ ನಮಗೆ ಅದರ ಏಳು ಬಣ್ಣಗಳನ್ನು ಕಂಡಾಗ, ಅಲ್ಲದೆ ಬಿಳಿಯ ಕಿರಣದ ಅಸ್ತಿತ್ವ ಮೊದಲಿನಂತೆಯೆ ಇದೆ, ಪ್ರಿಸ್ಮ್‌ನ್ನು ಮುಟ್ಟಿದ ನಂತರ ಬದಲಾಗಿದೆ ಎಂದು ಕಂಡಾಗ, ಬಿಳಿಯ ಕಿರಣವನ್ನೂ ಬಣ್ಣದ ಕಿರಣಗಳನ್ನೂ ಪಕ್ಕ ಪಕ್ಕದಲ್ಲಿ ಕಂಡಾಗ "ಅಸ್ತಿತ್ವ'' ಎನ್ನುವದು ಇನ್ನೊಂದು ರೀತಿಯಲ್ಲಿ ಅನುಭವವಾಗುತ್ತದೆ. ಗದ್ಯ ಹೇಳುವುದನ್ನೇ ಇನ್ನೂ ಅಡಕವಾಗಿ ಸುಂದರವಾಗಿ ಹೇಳುವ ವಿಧಾನವಲ್ಲ ಕಾವ್ಯ; ಅದು ನಾವು ಅಸ್ತಿತ್ವ ಎಂದು ಕಲ್ಪಿಸಿಕೊಂಡಿರುವುದರ ವಿವಿಧ ಮುಖಗಳನ್ನು, ವಿವಿಧ ಸ್ತರಗಳನ್ನು, ಸಂಕೀರ್ಣ ಸ್ವರೂಪವನ್ನು ನಮ್ಮ ಅನುಭವಕ್ಕೆ ತಂದು ಕೊಡುವ ಭಾಷೆಯಿಂದ ರೂಪುಗೊಂಡ ರಚನೆ. ಇದರಲ್ಲಿ ಬೌದ್ಧಿಕ ಅಂಶ ಇಲ್ಲದೆ ಇಲ್ಲ. ಆದರೆ ಕಾವ್ಯ ಬುದ್ಧಿಯನ್ನು ಬಳಸಿಕೊಳ್ಳುವ ಆದರೆ ಬುದ್ಧಿಯ ಮಿತಿಯನ್ನು ಗುರುತಿಸಿದ ರಚನೆ. ಆದುದರಿಂದ ಕಾವ್ಯ ಅಸ್ತಿತ್ವದ ಮುಖಗಳನ್ನಾಗಲಿ, ಸ್ತರಗಳನ್ನಾಗಲಿ, ಸ್ವರೂಪವನ್ನಾಗಲಿ ನಮ್ಮ ಬುದ್ಧಿಗೆ ವಿವರಿಸುವುದಿಲ್ಲ, ಪುನರ್‌ಸೃಷ್ಟಿ ಮಾಡಿ ನಮ್ಮ ಅನುಭವಕ್ಕೆ ತಂದು ಕೊಡುತ್ತದೆ. ಈ ಪ್ರತಿಕ್ರಿಯೆಯಲ್ಲಿ ಶಬ್ದಗಳ ನಾದ, ಸ್ವರೂಪದ ಪಾತ್ರ ಗಮನೀಯವಾದದ್ದು. ವಾದ್ಯಸಂಗೀತವನ್ನು ಕೇಳಿದಾಗ ಹಾಡಿನ ಸಾಹಿತ್ಯದ ಪ್ರಶ್ನೆಯೇ ಇಲ್ಲ. ಪದಗಳ ಅರ್ಥಕ್ಕೆ ಸ್ಪಂದಿಸುವ ಅವಕಾಶವೇ ಇಲ್ಲ. ಆದರೂ ವಾದ್ಯಸಂಗೀತ ನಮ್ಮ ಪ್ರಜ್ಞೆಯನ್ನು ಆವರಿಸಿ ಈ ಲೋಕದಲ್ಲಿದ್ದೂ ಬೇರೆ ಲೋಕದಲ್ಲಿ ವಾಸಿಸುವ ಅನುಭವವನ್ನು ತಂದು ಕೊಡುತ್ತದೆ. ಎಷ್ಟೋ ಬಾರಿ

ಅರ್ಥವಾಗದ ಭಾಷೆಯಲ್ಲಿನ ರಾಗವೋ, ಪದಗಳ ಜೋಡಣೆಯೋ ಮನಸ್ಸನ್ನು ಎಲ್ಲಿಗೋ ಕರೆದೊಯ್ಯುತ್ತದೆ. ಕಾವ್ಯವು ಪದಗಳ ನಾದಸ್ವರೂಪವನ್ನು ಹೀಗೆಯೇ ಬಳಸಿಕೊಳ್ಳುತ್ತದೆ. ಕನ್ನಡದ ನಾದಸಂಪತ್ತನ್ನು ಬೇಂದ್ರೆ ಮೊದಲಿನಿಂದ ಸೂರೆಗೊಂಡಿದ್ದಾರೆ.

ಜುಮ್ ಜಮು ರುಮು ಜುಮು ಗುಂಗುಣಂ
ದುಮು ದುಮಂ

ಈ ಇದೂ ತುಂಬಿ ಆ ಅದೂ ತುಂಬಿ
ಯಾವುದೂ ತುಂಬಿ ಇರದೇ
ತುಂಬಿ ಕಳೆದರೂ ತುಂಬಿ ಉಳಿದರೂ ತುಂಬಿ
ತುಂಬಿ ಬರದೇ

ನಾಲ್ಕು ಭಾಗಗಳ ಕವನ “ನಾಕುತಂತಿ”ಯ ಮೊದಲ ಭಾಗದಲ್ಲಿ ನಾದವೇ ಪ್ರಧಾನ: ಅದರ ಪ್ರಾರಂಭದ ಪಂಕ್ತಿಗಳು:

ಆವು ಈವಿನ
ನಾವು ನೀವಿಗೆ
ಆನು ತಾನದ
ತನನನಾಽ
ನಾನು ನೀನಿನ
ಈ ನಿನಾನಿಗೆ
ಬೇನೆ ಏನೋ ?
ಜಾಣಿ ನಾಽ

ಹೀಗೆಯೇ ಛಂದಸ್ಸನ್ನು ಬಳಸಿಕೊಂಡ ವರಕವಿ ಬೇಂದ್ರೆ ಷಟ್ಪದಿ, ಸುನೀತಗಳಂತಹ ಸ್ಪಷ್ಟ ರಚನೆ ಇರುವ ಛಂದಸ್ಸನ್ನು ಬಳಸಿದಂತೆಯೇ ಹೊಸ ಹೊಸ ಪದ್ಯರೂಪಗಳನ್ನು ಸೃಷ್ಟಿಸಿದರು. ಉದಾಹರಣೆಗೆ, ನಾಲ್ಕು ಭಾಗಗಳ ಕವನ ಬಂಧ. ಪಂಕ್ತಿಗಳ ವೇಗವನ್ನು ಭಾವ-ಭಾವನೆಗಳ ಓಟಕ್ಕೆ ಹೊಂದಿಸುವ ಅವರ ಶಕ್ತಿ ಅದ್ಭುತವಾದದ್ದು.

ಭಾಷೆಯ ಪದಸಂಪತ್ತು, ನಾದಸಂಪತ್ತು ಎಲ್ಲವನ್ನು ಬೇಂದ್ರೆಯವರು ತಮ್ಮ ಶ್ರೇಷ್ಠ ಕವನಗಳಲ್ಲಿ ಬಳಸುವುದು, ನಮ್ಮ ಇಂದ್ರಿಯಗಳು ನಿರ್ಮಿಸಿದ ನಮ್ಮ ಜಗತ್ತಿನ ಕೋಟೆಗಳನ್ನು ಒಡೆಯಲಿಕ್ಕಾಗಿ, ಎಲ್ಲೆಗಳನ್ನು ಹಿಂದೆ ತಳ್ಳುವುದಕ್ಕಾಗಿ. ಬೇಂದ್ರೆಯವರ ಕಾವ್ಯದ ಮಹತ್ವದ ಲಕ್ಷಣ ಇದು ಎಂದು ನಾನೆಂದು-ಕೊಂಡಿದ್ದೇನೆ: ಈ ಜಗತ್ತಿನಲ್ಲಿ ಎಷ್ಟು ಜಗತ್ತುಗಳು ಅಡಗಿಕೊಂಡಿವೆ

ಎಂಬುದನ್ನು ಅನುಭವಕ್ಕೆ ತಂದುಕೊಡುವುದು ( ಈ ಜಗತ್ತು ಎಂದಾಗ ಕಾವ್ಯ ಓದುವವನೂ ಅದರ ಭಾಗವೇ. ಅವನ ಅರಿವು-ವ್ಯಕ್ತಿತ್ವಗಳನ್ನು ವಿಶಿಷ್ಟವಾದ ವಿಭಜನೆಗೆ ಬೇಂದ್ರೆ ಒಳಗು ಮಾಡುತ್ತಾರೆ. ) ಅವರ ಶ್ರೇಷ್ಠ ಕವನಗಳಲ್ಲೆಲ್ಲ ನಮಗೆ ಈ ಜಗತ್ತು ತೀವ್ರವಾಗಿ ಅನುಭವವಾಗುತ್ತದೆ. ಯಾವುದೋ ಒಂದು ತಿರುವಿನಲ್ಲಿ ಈ ಜಗತ್ತಿನೊಡನೆ ಇನ್ನೊಂದು ಜಗತ್ತು, ರೂಪತಾಳುತ್ತದೆ. ಅವರ ಪ್ರಾರಂಭದ ಕವನಗಳಲ್ಲಿಯೇ ಈ ವಿಶಿಷ್ಟ ಅನುಭವ ಆಗುತ್ತದೆ :

> ಗಂಧರ್ವರ ಸೀಮೆಯಾಯಿತು
> ಕಾಡಿನಾ ನಾಡು
> ಕ್ಷಣದೊಳು-ಕಾಡಿನಾ ನಾಡು
> ಶಾಂತಿರಸವೇ ಪ್ರೀತಿಯಿಂದಾ
> ಮೈದೋರಿತಣ್ಣಾ
> ಇದು ಬರಿ - ಬೆಳಗಲ್ಲೋ ಅಣ್ಣಾ

ಹಾಗೆಯೇ,

> ಅಪರಂಪಾರಾದ ಪಾರಾವಾರವು ಕೂಡ
> ಎದೆಯ ತೆರೆ ತೆರೆಗೂಡ ಹಾರುವದು.

ಬೇಂದ್ರೆಯವರ ಅನೇಕ ಕವನಗಳಲ್ಲಿ ದೃಶ್ಯವು ದರ್ಶನವಾಗುತ್ತದೆ. ಅನುಭವವು ಕಾಲದೇಶಗಳೆರಡರಲ್ಲಿಯೂ ವಿಸ್ತಾರವಾದ ಜಗತ್ತಿನಲ್ಲಿ ರೂಪ ತಾಳುತ್ತದೆ. ನಮ್ಮ ನಿತ್ಯದ ಬಾಳಿನ ನಿತ್ಯದ ಚಿಂತನೆಯ ಜಗತ್ತು ವಿಸ್ತಾರವಾಗುವ ಈ ಪ್ರಕ್ರಿಯೆಯಲ್ಲಿ ಒಮ್ಮೆಗೇ ಅನುಭವವಾಗುವ ಎರಡು ಮುಖಗಳನ್ನು ಗುರುತಿಸಬಹುದು. ಕವನದ ವರ್ಣನೆಯ ವಿವರಗಳು ಮತ್ತು ಪ್ರತಿಮೆಗಳ ಮೂಲಕ ಸುತ್ತಲಿನ ಭೌತಿಕ ಜಗತ್ತು ಇಂದ್ರಿಯಗಳಿಗೆ ತೀವ್ರವಾಗಿ ಅನುಭವವಾಗುತ್ತದೆ. ಸಾಮಾನ್ಯವಾಗಿ ಚೇತನ-ಜಡ ಜಗತ್ತು ಎಂದು ನಮ್ಮ ಪ್ರಜ್ಞೆಯಲ್ಲಿ ಮನೆಮಾಡಿರುವ ಕಂದರ ಮುಚ್ಚಿಕೊಳ್ಳುತ್ತಾ ಹೋಗಿ ಇಂದ್ರಿಯಗಳ ಅನುಭವದಿಂದಲೇ ನಮ್ಮ ಸುತ್ತಲಿನ ಜಗತ್ತಿನಲ್ಲಿ ಒಂದಾಗುತ್ತೇವೆ. ಇದರೊಂದಿಗೇ ಚೇತನಕ್ಕೊಂದು ಬಿಡುಗಡೆಯ ಅನುಭವವಾಗುತ್ತದೆ. ‘ ಸಾಕುತಂತಿ ’ಯ ‘ ಕೇಳಿ-ನುಡಿ; ನುಡಿ-ಕೇಳಿ ’ ಕವನದ ಪ್ರಾರಂಭದ ಭಾಗದಲ್ಲಿ ಎಷ್ಟು ಇಂದ್ರಿಯಗಳ ಅನುಭವಕ್ಕೆ ಬರುವ ವಿವರಗಳಿವೆ ! ಕ್ರಮೇಣ ಕವನದ ಭಾವನೆ ಇಂದ್ರಿಯಗಳ ಅನುಭವದಿಂದಾಚೆಗೆ ಹೇಗೆ ಸಾಗುತ್ತದೆ ! ಇಷ್ಟಾದರೂ ಇಂದ್ರಿಯಾನುಭವ ಸಂಬಂಧವನ್ನು ಕಡೆಯವರೆಗೆ ಉಳಿಸಿಕೊಳ್ಳುತ್ತದೆ ಎಂಬುದು ಕುತೂಹಲಕಾರಿ. ಕಡೆಯ ಪಂಕ್ತಿಗಳು :

ಎಲುವು ಎಲುವು ನಾದ ನಾದ ಯಾವುದು
ಸಂವಿತ್ತಿಯೇ
ಮಾತೆಯೀವ ಎಣ್ಣೆ ಬೆಣ್ಣೆ ಉಣ್ಣುತ್ತಿದೆ
ನೆತ್ತಿಯೋ
ನಿರ್ಲೇಪದ ರಸದ ಲಹರಿ ಆದಿತ್ಯಗೆ ಭಿತ್ತಿಯೋ
ನುಡಿಯ ಕೇಳಿ

ಬಾಳಿನ ಅಸ್ತಿತ್ವದ ಸ್ವರೂಪದ ರಹಸ್ಯದ ಮೇಲೆ ದಾಳಿ ಮಾಡುವಾಗ ಕವಿ ಎಲ್ಲ ಸಾಧನಗಳನ್ನು ಬಳಸಿಕೊಳ್ಳುತ್ತಾರೆ. "ಡೂ" "ನೋ" ಕವನಗಳಲ್ಲಿ ಒಂದು ಅಕ್ಷರವನ್ನು ಹಿಡಿದು ಚಿಂತನೆಯಲ್ಲಿ ಸಾಗುತ್ತಾರೆ :

ಅದು ಏನೋ ಇತ್ತು
ನೋ ನೋ ನೋ ಎನುತ್ತಿತ್ತು
ಎನುತಲೆ ಇತ್ತು
.... .... .... .... .... ....
ತಾನೋ ? ನಾನೋ ?
ನೀನೋ ?
ಏನೇನೋ
ಆತನೋ ? ಆತ್ಮನೋ ?
ಅವನೋ ?
'ನಾಕುತಂತಿ'ಯಲ್ಲಿ
"ನಾನು" "ನೀನು"
"ಆನು" "ತಾನು"
ನಾ ನಾಕು ತಂತಿ

ಇಲ್ಲಿ-ಈಗ ( Here and now ) ಇವುಗಳ ಕಟ್ಟುಪಾಡಿಲ್ಲದ ಸಮಗ್ರ ವಿಶ್ವಜೀವನದಲ್ಲಿ ಮನುಷ್ಯ ಪಾಲುಗೊಳ್ಳುತ್ತಾನೆ; ಸೃಷ್ಟಿಯ ಗಳಿಗೆಯಿಂದ ಇಲ್ಲಿನ ವರೆಗೆ ಸಾಗಿಬಂದ ಜೀವನ ಪ್ರವಾಹದಲ್ಲಿ ನಾನು ಒಂದು ಹನಿ; 'ನಾನು' ಹನಿಯಾ-ದರೂ ಆ ಪ್ರವಾಹದ ಭಾಗ; ಜೊತೆಗೆ ಇಂದು — ಇಲ್ಲಿ ಇವುಗಳ ಚೌಕಟ್ಟನಲ್ಲಿ ಬದುಕುತ್ತಾನೆ; ಸುತ್ತಲಿನ ಜಗತ್ತಿನ ಭಾಗವಾಗಿ ಬದುಕಿ ತನ್ನ ಸುತ್ತಲಿನ ಮಾನವ ಕೋಟಿಯೊಡನೆ ಸಂಬಂಧಗಳನ್ನು ಸೃಷ್ಟಿಸಿಕೊಂಡು ಬಾಳುತ್ತಾನೆ; ತಂದೆ-ತಾಯಿ-ಮಕ್ಕಳು-ಗೆಳೆಯರು ಎಂದು ತನಗೆ ಹತ್ತಿರವಾದವರೊಡನೆ ಪ್ರೇಮ-ಅನುಭವಗಳು, ಕೊಟ್ಟು-ತೆಗೆದುಕೊಳ್ಳುವ ಪ್ರಕ್ರಿಯೆಯಿಂದ ಜೀವನವನ್ನು ತುಂಬಿ ಕೊಳ್ಳುತ್ತಾನೆ; ಒಂದಿಗೇ ಬೇರೆ ಯಾರೊಂದಿಗೂ ತಾನು ಹಂಚಿಕೊಳ್ಳಲಾಗದ

ಒಂಟಿಯಾಗಿಯೇ ಎದುರಿಸಿ ನಿವಾಸಿಯಾಗಿ ದಾರಿ ಕಂಡುಕೊಳ್ಳಬೇಕಾದ ಮಾನಸಿಕ ಅನುಭವಗಳ ಮತ್ತು ಹುಟ್ಟು—ಸಾವಿನ ಅನಿವಾರ್ಯದ, ಜಗತ್ತನ್ನು ತನ್ನಲ್ಲಿಯೇ ಕಟ್ಟಿಕೊಂಡಿರುತ್ತಾನೆ; ತಾಯಿಯ ಹೊಟ್ಟೆಯಿಂದ ಬಂದು ಭೂತಾಯಿಯ ಹೊಟ್ಟೆ ಸೇರುವವರೆಗಿನ ಪ್ರಯಾಣಿಕ ತಾನೇ ಅರ್ಥ ಕಂಡುಕೊಳ್ಳುವ ಪ್ರಯತ್ನದಲ್ಲಿರುತ್ತಾನೆ. ಈ ಹಲವು ಜಗತ್ತುಗಳು–ಹಲವು ಅಗತ್ಯಗಳನ್ನು ಮತ್ತೆ ಮತ್ತೆ ಬೆಸೆದು ಒಂದರ ಬೆಳಕಿನಲ್ಲಿ ಇನ್ನೊಂದನ್ನು ಕಂಡು, ಒಂದರ ಒರೆಗಲ್ಲಿನಲ್ಲಿ ಇನ್ನೊಂದರ ಅನುಭವವನ್ನು ಉಜ್ಜಿ ನೋಡಿ ಸಮಗ್ರ ಬಾಳಿಗೊಂದು ಸಾಂಗತ್ಯವನ್ನೂ ಸಮಂಜಸತೆಯನ್ನೂ ತಂದುಕೊಡುವ ಚೇತನದ ಅನ್ವೇಷಣೆ ಬೇಂದ್ರೆಯವರ ಕಾವ್ಯ ಎನ್ನಬಹುದು. ಇದರಿಂದಲೇ ಅವರ ಕಾವ್ಯದಲ್ಲಿ ನಮಗೆ ಮತ್ತೆ ಮತ್ತೆ ಕಾಲ–ದೇಶ–ಇಂದ್ರಿಯಾನುಭವಗಳ ಕಟ್ಟುಗಳು ಕಳಚಿ, ಅನುಭವ ಒಂದು ರೀತಿಯಲ್ಲಿ ಸೂಕ್ಷ್ಮ, ಮತ್ತೊಂದು ರೀತಿಯಲ್ಲಿ ಸ್ಪಷ್ಟ ಆಗುವುದು.

ಈ ಕವನಗಳನ್ನೋದುವಾಗ ಒಂದು ಪ್ರಶ್ನೆ ಸಹಜವಾಗಿ ಬರುತ್ತದೆ; ಬೇಂದ್ರೆಯವರ ಈಚೆಗಿನ ಕವನಗಳು ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲವಲ್ಲ ? "ಮೂವತ್ತುಮೂರು ಕೋಟಿ" "ನಾನು ಬಡವೆ" ಇಂತಹ ಕವನಗಳಂತೆ, "ಬೆಳಗಿ" ನಂತೆ ಓದುತ್ತಿರುವಾಗಲೆ ಪ್ರತಿಕ್ರಿಯೆಯನ್ನು ಮೂಡಿಸಲು ಶಕ್ತವಾಗುವುದಿಲ್ಲವಲ್ಲ ? ಇದಕ್ಕೆ ಪ್ರಾಯಶಃ ಉತ್ತರ ಬೇಂದ್ರೆ ಬೆಳೆಯುತ್ತಿರುವ ಕವಿ ಎನ್ನುವುದು. ಅವರ ಕಾವ್ಯಚೇತನದ ಅನುಭವ ಸೂಕ್ಷ್ಮವಾದಂತೆ ಅದನ್ನು ಪ್ರಕಟಗೊಳಿಸುವ ವಿಧಾನವೂ ಬೇರೆಯಾಗುತ್ತದೆ. ಅದನ್ನು ತನ್ನದಾಗಿ ಮಾಡಿಕೊಳ್ಳುವುದು ಓದುಗನಿಗೂ ಕಷ್ಟವಾಗುತ್ತದೆ. "ಬೆಳಗು" ಮುಂತಾದ ಕವನಗಳಲ್ಲಿ ಅವರು ಸೌಂದರ್ಯಕ್ಕೆ ಹೃದಯವನ್ನು ತೆರೆದುಕೊಂಡಿರುವವರೆಲ್ಲರ ಪ್ರತಿನಿಧಿ; "ಮೂವತ್ತುಮೂರು ಕೋಟಿ"ಯಲ್ಲಿ ದೇಶದ ಸ್ಥಿತಿಯನ್ನು ಕಂಡು ಸಂಕಟಪಡುವವರೆಲ್ಲರ ಪ್ರತಿನಿಧಿ. ಈಚೆಗೂ ಇಂತಹ ಕವನಗಳನ್ನು ಬರೆದಿದ್ದಾರೆ. ಈ ಕೆಳಗಿನ ಪಂಕ್ತಿಗಳು ಯಾರಿಗೂ ಕಷ್ಟ ಎನ್ನಿಸುವುದಿಲ್ಲ.

> ಗಾಳಿ ಬಂದಾಗಲೇ ತೂರಿಕೊಂಡವ ಜಾಣ
> ಬಂದ ಪದವಿಯ ಬಿಟ್ಟ ಮುಂದೆ ಅದನೂ ಕಾಣ !
> ಸಿಟ್ಟು ಸೆಡವಿಲ್ಲದೆಯೆ ಬಿಟ್ಟ ದುಡಿದವ
> ಕೋಣ ಲಗಳಿಯ ದೇ. ಭ. ಎನ್ನೋಣ
> ಗಾಂಧೀ ಜಯಂತಿ ದಿನ, ಸತ್ಯವನ್ನಾಡೋಣ
> ಸುಳ್ಳಿಗೂ ಇಡಿ ವರುಷ ತೆರವೆ ಇಹುದು.
> ಆನೆ ಮದವೇರಿದರೆ ಅಂಕುಶ ಉಂಟು
> ಮಾವುತ ಮದವೇರಿದರೆ ಮುಂದೇನಯ್ಯಾ ?

ಆದರೆ ಅಸ್ತಿತ್ವವನ್ನೆ ಒಳಹೊಕ್ಕು ಎಳೆ ಎಳೆ ಬಿಡಿಸಿ ಅವುಗಳ ಬಂಧ ವನ್ನು ಬಿಡಿಸಿ ನೋಡುವ ಘಟ್ಟದಲ್ಲಿ ತರ್ಕ ಹಿಂದುಳಿಯುತ್ತದೆ, ಹಾಗೆಯೇ ತರ್ಕಬದ್ಧತೆ, ತರ್ಕಬಂಧನಗಳೂ ಹಿಂದುಳಿಯುತ್ತವೆ. ಅನುಭವಕ್ಕೆ ಮಾತನ್ನು ಜೋಡಿಸುವಾಗ ಸಂಕೇತ ಪ್ರತಿಮೆಗಳು ಅನಿವಾರ್ಯವಾಗುತ್ತವೆ.

ಭವಕೆ ಅಭವನೆ ಬೇಕು – ನೀಲಲೋಹಿತ ಕಂಠ
ರಜಸ್ತಮವ – ಅಂಧಂತರುವ
ಆ ಕಂಠ ಕುಡಿದ
ದಶಕಂಠಗಿಲ್ಲ ಆರಾಮ

ಎಂಬಂತಹ ಪಂಕ್ತಿಗಳಲ್ಲಿ ಶ್ಲೇಷೆಯನ್ನು ಅರ್ಥದ ಹೊಸ ಸ್ತರಗಳನ್ನು ಮುಟ್ಟಲು ಹೇಗೆ ಬಳಸಿದೆ, ಪೌರಾಣಿಕ ಪ್ರಸ್ತಾಪಗಳನ್ನು ಮೆಟ್ಟಿಲುಗಳನ್ನಾಗಿ ಪರಿವರ್ತಿಸಿದೆ ! ಅಥವಾ,

ಬೇಕು ಕರ್ಮಣೀ ಪ್ರಯೋಗ
ಜ್ಞಾನಕ್ಕೆ ಸಂಬಂಧ — ಅಜ್ಞಾನವೇ ಬಂಧ

ಎಂಬಲ್ಲಿ 'ಕರ್ಮಣೀ ಪ್ರಯೋಗ' ನುಡಿಗಟ್ಟಿನ ವಿಶಿಷ್ಟ ಪ್ರಯೋಗ "ಅಜ್ಞಾನವೇ ಬಂಧ" ಎಂಬುದಕ್ಕೆ ಪೂರಕವಾಗಿ ನಾವು ನಿರೀಕ್ಷಿಸುವ "ಜ್ಞಾನವೇ ಸ್ವಚ್ಛಂದ" ಬಾರದೆ "ಜ್ಞಾನಕ್ಕೆ ಸಂಬಂಧ" ನುಡಿಗಟ್ಟು ಒಂದು ಪಡೆಯುವ ವಿಶೇಷ ಅರ್ಥ ಶಕ್ತಿ – ಇವನ್ನು ಗಮನಿಸಿದಾಗ ಕವಿಚೇತನದ ಅನು ಭವ ಹೊಸ ಎತ್ತರಕ್ಕೇರಿದಾಗ ಅಭಿವ್ಯಕ್ತಿ ಹೊಸದಾಗುವುದರ ಅನಿವಾರ್ಯತೆ ಸ್ಪಷ್ಟ. ಕಾವ್ಯದಿಂದ ದೂರ ಉಳಿಯುವವರನ್ನೂ ಮಧ್ಯಮ ವರ್ಗದ ಕುಟುಂಬ ಗಳ ಗೃಹಿಣಿಯರನ್ನೂ ಪ್ರೌಢಶಾಲೆಗಳ ವಿದ್ಯಾರ್ಥಿ–ವಿದ್ಯಾರ್ಥಿನಿಯರನ್ನೂ ಸಹ ಕಾವ್ಯಪ್ರೇಮಿಗಳ ವೃತ್ತಕ್ಕೆ ಸೆಳೆದ ಕೆಲವರು ಕವಿಗಳಲ್ಲಿ ಪ್ರಮುಖರು ಬೇಂದ್ರೆ. ಈಚೆಗಿನ ಅವರ ಕವನಗಳು ಕೆಲವರ ಅಧ್ಯಯನಕ್ಕೆ ಸೀಮಿತವಾಗುವುದಿಲ್ಲವೆ, ಇದು ಅಪೇಕ್ಷಣೀಯವೆ ?—ಎಂಬ ಪ್ರಶ್ನೆಗಳಿಗೆ ಹಲವು ಮುಖಗಳಿವೆ. ಬೆಳೆಯುವ ಕವಿ ಬೆಳೆಯುವ ಸಾಹಿತ್ಯಗಳು ಎದುರಿಸಬೇಕಾದ ಅನಿವಾರ್ಯ ಸಮಸ್ಯೆಗಳು ಇವು. ಆದರೆ ಬೇಂದ್ರೆಯವರ ಕವನಗಳು ಸೂಕ್ಷ್ಮವಾದ ಅನುಭವಗಳತ್ತ ನಮ್ಮನ್ನೊಯ್ದು ಬಾಳಿಗೆ ನಮ್ಮ ಪ್ರತಿಕ್ರಿಯೆಯನ್ನೆ ಸೂಕ್ಷ್ಮಗೊಳಿಸುತ್ತವೆ ಎಂಬುದೂ ಜೊತೆಗೆ ಅಭಿವ್ಯಕ್ತಿ ಸಂವಹನಗಳ ಮಾಧ್ಯಮವಾದ ಭಾಷೆಯ ಸ್ವರೂಪವನ್ನು ಕುರಿತೇ ಮೂಲಭೂತವಾದ ಮತ್ತು ಬಹು ಕುತೂಹಲಕಾರಿಯಾದ ಪ್ರಶ್ನೆಗಳನ್ನು ಎತ್ತಿವೆ ಎಂಬುದೂ ನಿಸ್ಸಂದೇಹವಾದ ವಿಷಯಗಳು.

§ § § §

೩೪

# ಕಾಲಿದಾಸ ಮತ್ತು ಬೇಂದ್ರೆ
## (ಮೇಘದೂತದ ತೌಲನಿಕ ವಿವೇಚನೆ)

**ಪಂಢರೀನಾಥಾಚಾರ್ಯ ಗಲಗಲಿ.**

ಸಂಸ್ಕೃತ ಮೇಘದೂತ ಕಾಲಿದಾಸನ ಒಂದು ರಸೋತ್ಕಟ ಕೃತಿ, ಸಂಸ್ಕೃತ ಕಾವ್ಯ ಭಾಂಡಾರದ ಒಂದು ಅನರ್ಘ್ಯ ರತ್ನ. ಅದನ್ನು ಸಫಲವಾಗಿಯೋ, ವಿಫಲ ವಾಗಿಯೋ ಅನುಕರಿಸಿ ಸಂಸ್ಕೃತದಲ್ಲಿ ದೂತಕಾವ್ಯ ಕಟ್ಟಿದವರೂ ಕೂಡ ಮಹಾಕವಿ ಮಾನ್ಯತೆ ಪಡೆದಿದ್ದಾರೆ. ಬೇರೆ ಬೇರೆ ಸ್ವದೇಶೀಯ ವಿದೇಶೀಯ ಭಾಷೆಗಳಲ್ಲಿಯೂ ಮೇಘದೂತದ ಭಾಷಾಂತರ ಭಾವಾಂತರ ಅನುಕರಣ ಅನುಸರಣಗಳು ಲೆಕ್ಕವಿಲ್ಲ ದಷ್ಟು ಬಂದಿವೆ, ಬರುತ್ತಲೇ ಇವೆ. ಕನ್ನಡದಲ್ಲಿಯೂ ಶಾಂತಕವಿ, ವರದಾಚಾರ್ಯ, ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿ, ರೈನಾಪೂರ, ಪರಮೇಶ್ವರ ಭಟ್ಟ, ಬೇಂದ್ರೆ ಮುಂತಾ ದವರು ಮೇಘದೂತ ಕಾವ್ಯವನ್ನು ಇಡಿಕಿಡಿಯಾಗಿ ಭಾಷಾಂತರಿಸಿ ಕವಿಪೂಜೆ ಸಲ್ಲಿಸಿದ್ದಾರೆ.

ಇವುಗಳಲ್ಲೆಲ್ಲ ಶೈಲಿಯ ಲಾಲಿತ್ಯ, ಬಿಚ್ಚುಮಾತಿನ ಸರಳತೆ, ಛಂದಸ್ಸಿನ ಲೀಲಾಲಯ, ಪ್ರಾಸದ ಪ್ರಾಸಾದಿಕತೆ, ಅನುವಾದದ ಸ್ವಾಚ್ಛಂದ್ಯ, ನಾದಮಾಧುರಿ, ಭಾವಾವಿಷ್ಕಾರ, ಸಹಜವಿಧಾನ ಮುಂತಾದ ಅನೇಕ ದೃಷ್ಟಿಯಿಂದ ಶ್ರೀ ದ. ರಾ. ಬೇಂದ್ರೆಯವರ ಕನ್ನಡ ಅನುವಾದವು ಹೆಚ್ಚು ಜನಪ್ರಿಯವೂ, ರಸಿಕರಿಗೆ ಆಸ್ವಾದ್ಯವೂ, ಸಹೃದಯರಿಗೆ ಸ್ವಸಂತೋಷದಿಂದ ಪರಿಪಾಠ್ಯವೂ ಆಗಿದೆ.

ಅದೇ ತೂಕದ ಒಬ್ಬ ಕವಿ ಈ ರಸಪರಿಪಾಕವನ್ನು ತನ್ನ ಮಧುಪಾಕದ ವಾಕೋವಾಕುಗಳಲ್ಲಿ ಕಾವುಕೊಟ್ಟು ತೆಗೆದಿದ್ದರಿಂದ ಅದರ ರಸ ಇನ್ನೂ ಘನೀ ಭೂತವಾಗಿದೆ. ಭಾವ ಮತ್ತಿಷ್ಟೂ ಸಾಂದ್ರಸುಂದರವಾಗಿದೆ.

ಒಟ್ಟೊಟ್ಟಿಗೆ ಇಟ್ಟು ಮೂಲ ಹಾಗೂ ಅನುವಾದಗಳನ್ನು ತೂಗಿತೂಗಿ ತಾಳ ಲಯ ಮತ್ತು ರಾಗ ರಸಗಳ ತಾಳೆ ಹಾಕಿ ನೋಡಿದಾಗ ಮೌಲಿಕತೆಯ ಮೌಲ್ಯ ಉಭಯನಿಷ್ಠವಾಗಿ, ಅನುವಾದದ ನೆನಪೇ ನಶಿಸಿ ಹೋಗುತ್ತದೆ. ವಿಮರ್ಶಾತ್ಮಕ ಬುದ್ಧಿಗೂ ರಸಾವೇಶದಿಂದ ತನ್ಮಯತೆ ಬಂದು ತ್ರಯಸ್ಥದೃಷ್ಟಿ ಮಂಕಾಗಿ ಬಿಡು

ವದು. ಅದಕ್ಕಾಗಿ ವಿವೇಚನೆಗೆಂದು ಹೊರಟ ಜಿಜ್ಞಾಸು ಒಂದು ಕ್ಷಣ ಅನುವಾದದ ನಾದಮಾಧುರಿಯ ಕಿಂಕಿಣಿರವದಿಂದ ದೂರನಿಂತು ಮೂಲಾನುವಾದ ಪದ್ಯಗಳನ್ನು ರುಕ್ಷ ವಿಮರ್ಶಕನ ದೃಷ್ಟಿಯಿಂದ ಪರಿಕಿಸಿ ನೋಡಬೇಕು. ಅಂದರೆ ಮಾತ್ರ ಮೌಲ್ಯಮಾಪನ ಸಾಧ್ಯವಾಗಬಹುದು.

ಈ ದೃಷ್ಟಿಯಿಂದ ಕಾಲಿದಾಸನ ಮೇಘದೂತ ಹಾಗೂ ಬೇಂದ್ರೆ ಮೇಘದೂತ ಅನುವಾದಗಳಲ್ಲಿ ಕೆಲವು ಪದ್ಯಗಳ ವಿವೇಚನೆಯನ್ನು ಇಲ್ಲಿ ಮಾಡಲಾಗಿದೆ.

ಹೀಗೊಬ್ಬ ಯಕ್ಷ. ಕುಬೇರನ ಸೇವಕ. ಚಾಕರಿಯಲ್ಲಿ ಏನೋ ತಪ್ಪು. ಅದಕ್ಕೆ ಶಾಪ — ಒಂದು ವರ್ಷ ಮಡದಿಯಿಂದ ಅಗಲಿ ಇರು ಎಂದು. ಆ ಯಕ್ಷ ರಾಮ ಗಿರಿ ಗುಡ್ಡದಲ್ಲಿದ್ದು ಹೇಗೋ ಕೆಲವು ತಿಂಗಳು ಕಳೆದಿದ್ದಾನೆ. ಆಗ ಮಳೆಗಾಲ ಬಂತು. ಗುಡ್ಡದ ತುದಿಯಲ್ಲಿ ಮೋಡ ಕಂಡಿತು. ಆದರೊಡನೆ ತನ್ನ ಪ್ರೆಯಸಿಗೆ ತನ್ನ ಪ್ರೀತಿಯ ಸಂದೇಶವನ್ನು ಕಳಿಸಬೇಕೆಂದು ಬಯಸಿ ಯಕ್ಷನು ಅದರೆದುರು ತನ್ನ ಹೃದಯದ ಹಾಡನ್ನು ತೋಡಿಕೊಳ್ಳುತ್ತಾನೆ. ಇದೇ ಕಾಲಿದಾಸನ ಸಂಸ್ಕೃತ ಮೇಘ ದೂತದ ಮೂಲವಸ್ತು. ಇದನ್ನು ಕವಿ ಪೂರ್ವಮೇಘ, ಉತ್ತರಮೇಘ ಎಂಬ ಭಾಗಗಳಲ್ಲಿ ನೂರಾರು ಪದ್ಯಗಳಲ್ಲಿ ಚೇತೋಹಾರಿಯಾಗಿ ಬಿತ್ತರಿಸಿದ್ದಾನೆ.

ನೇರವಾಗಿ ಸಂದೇಶದ ವಿಷಯಕ್ಕೆ ಬರಬೇಕೆಂದು ತವಕಗೊಂಡ ಕವಿ ಇಲ್ಲಿ ಕಾವ್ಯನಾಯಕ ನಾಯಕಿಯರ ಹೆಸರು ಹೇಳದೆ ಕೇವಲ ಯಕ್ಷ-ಯಕ್ಷಿ ಎಂದೇ ನಿರ್ದೇಶಿಸಿ ತನ್ನ ಕಾವ್ಯಕೈಲಾಸದ ಅಡಿಯಿಂದ ಮುಡಿಯುವರೆಗೆ ಈ ಅನಾಮಧೇಯ ನಾಯಕ-ನಾಯಿಕೆಯರನ್ನು ಜೀವಂತವಾಗಿಸಿ ಓಡಾಡಿಸಿದ್ದಾನೆ.

ಮಂದಂ ಮಂದಂ ನುದತಿ ಪವನಶ್ಚಾನೂಕುಲೋಯಥಾತ್ವಾಂ
ವಾಮಶ್ಚಾಯಂ ನದತಿ ಮಧುರಂ ಚಾತಕಸ್ತೇಸಗಂಧಃ ||
ಗರ್ಭಾಧಾನ ಕ್ಷಣ ಪರಿಚಯಾನ್ನೂನಮಾಬದ್ಧಮಾಲಾಃ
ಸೇವಿಷ್ಯಂತೇ ನಯನ ಸುಭಗಂ ಖೇ ಭವಂತಂ ಬಲಾಕಾಃ ||

ಈ ಪದ್ಯದ ಅನುವಾದವು ಶ್ರೀ ಬೇಂದ್ರೆಯವರ ಲಲಿತ ಕೋಮಲಕಾಂತ ಪದಾವಲಿಗಳಲ್ಲಿ ಎಷ್ಟು ಮನೋಜ್ಞವಾಗಿ ಮೂಡಿಬಂದಿದೆ ನೋಡಿ :

ಗಾಳಿ ಬೀಸುವದು ನಿನ್ನ ನೂಕಿಸುತ ಮಂದ ಮಂದವಾಗಿ
ಚಂಚುಚಾಚಿ ಚಾದಗೆಯು ಎಡಕೆ ಕೂಗುವದು ಚಂದವಾಗಿ
ಬೆದೆಯ ನೆನೆದು ಬೆಳ್ಳಕ್ಕಿ ಬರುವವೋ ಸಾಲು ಸಾಲುಗೊಂಡು
ಬೆನ್ನಗಟ್ಟುವವು ಕಣ್ಗೆ ಸೊಬಗ ನೀ ತಂದೆಯೆಂದು ಕೊಂಡು

ಒಂದೊಂದು ಸಲ, ಅದೇಕೆ, ಅನೇಕ ಸಲ, ಶ್ರೀ ಬೇಂದ್ರೆಯವರ ಅನುವಾದದ ಸೊಬಗು ಮೂಲದ ಮಾಧುರ್ಯವನ್ನು ಮೀರಿಸುವದುಂಟು.

ತಾಂ ಚಾವಶ್ಯಂ ದಿವಸ ಗಣನಾ ತತ್ಪರಾಮೇಕಪತ್ನೀಂ
ಅವ್ಯಾಪನ್ನಾಮ ವಿಹತ ಗತಿರ್ದ್ರಕ್ಷ್ಯಸಿ ಭ್ರಾತೃರ್ಜಾಯಾಂ ||
ಆಶಾಬಂಧಃ ಕುಸುಮ ಸದೃಶಂ ಪ್ರಾಯಶೋಹ್ಯಂಗನಾನಾಂ
ಸದ್ಯಃ ಪಾತಿ ಪ್ರಣಯಿ ಹೃದಯಂ ವಿಪ್ರಯೋಗೇರುಣದ್ಧಿ ||

ಇದರ ಅನುವಾದ ಎಷ್ಟು ಸಮಂಜಸವಾಗಿ ಬಂದಿದೆ ಓದಿ.

ಎಷ್ಟು ದಿವಸ ಇನ್ನುಳಿದವೆಂದು ದಿನದಿನವು ಲೆಕ್ಕವಾಗಿ
ಜೀವ ಹಿಡಿದುಕೊಂಡಿರುವ ನಿನ್ನ ಅತ್ತಿಗೆಯ ನೋಡು ಹೋಗಿ
ನಾರಿಹೃದಯದಲಿ ನಾರಿನೆಳೆಯವೊಲು ಇಹುದು ಆಸೆಯೊಂದು
ಅಗಲಿದಾಗಲೇ ಕಳಚಿ ಬೀಳುವದೆ ಹೂವ ಬಿಗಿದುಕೊಂಡು

ಯಕ್ಷನು ಮೇಘಕ್ಕೆ ತನ್ನ ಮಡದಿಗಾಗಿ ಸಂದೇಶವನ್ನು ಹೇಳುವದಕ್ಕಿಂತ ಮುನ್ನ, ಅದು ಹೋಗಬೇಕಾದ ದಾರಿಯನ್ನು ಹೇಳತೊಡಗುವನು:

ಹಾದಿ ಹೇಳುವೆನು ಕೇಳು ನಿನಗೆ ಅನುಕೂಲ ಪಯಣಕಾಗಿ
ಬಳಿಕ ನನ್ನ ಸಂದೇಶ ಕಿವಿಗೆ ಪರಿಣಮಿಸಲಮೃತವಾಗಿ
ತೊಳಲಿ ಬಳಲಿ ಗಿರಿಶಿಖರಗಳಲಿ ಕಾಲಿಟ್ಟು ಸಾಗುವಾಗ
ದಣಿವ ತವಿಸು, ನೀರನಿಸೆ ಸವಿಸಿ ಆ ಹಳ್ಳಕೊಳ್ಳದಾಗ

ಕಾಮನಬಿಲ್ಲು ಮೂಡಿದ ಮೋಡವನ್ನು ವಿಷ್ಣುವಿನ ದೇಹಕ್ಕೆ ಹೋಲಿಸಿ "ಉಪಮಾ ಕಾಲಿದಾಸಸ್ಯ" ಎಂಬ ಉಕ್ತಿಯನ್ನು ಯಥಾರ್ಥಗೊಳಿಸಿದ್ದಾನೆ ಮೂಲದಲ್ಲಿ ಕಾಲಿದಾಸ. ಅದನ್ನು ಅಷ್ಟೇ ಸುಂದರವಾಗಿ ಕನ್ನಡಕ್ಕಿಳಿಸಿ ಕನ್ನಡದ ಕಾಲಿದಾಸ ಎಂದೆನಿಸಿದ್ದಾರೆ ಶ್ರೀ ಬೇಂದ್ರೆಯವರು.

ಏಳು ರತುನಗಳ ಮೇಳಕೂಡಿ ಕಂಗೊಳಿಸುವಂತೆ ಮುಂದು
ಹುತ್ತದಿಂದ ಎದ್ದಿರುವದಲ್ಲಿ ಅಗೊ ಇಂದ್ರಧನುವದೊಂದು
ನಿನ್ನ ಕಪ್ಪು, ಮೈಗದರ ಒಪ್ಪಬರಲೇನು ಕಾಂತಿಬಂತು
ಗೋಪವೇಷದಾ ವಿಷ್ಣು ಗರಿಯ ಧರಿಸಿರಲು ಕಾಣುವಂತು

ಎಷ್ಟೋ ಕಡೆಗೆ ಮೂಲಕಾಲಿದಾಸನಿಗೇ ಹೊಳೆಯದ ಭಾವ ಚಮತ್ಕಾರಗಳು ಅನುವಾದಕರಿಗೆ ಸ್ಫುರಿಸಿ ಅನುವಾದಗೊಂಡಾಗ ಸುಂದರ ಮೂರ್ತಿಗೆ ಹೊಂದೊಡವೆ

ಇಡಿಸಿದಂತೆ ಇನ್ನೂ ಅಂದವಾಗಿ ಕಾಣುವದು. ಅದಕ್ಕೆ ಒಂದೆರಡು ಉದಾಹರಣೆ ಗಳನ್ನು ಇಲ್ಲಿ ಕಾಣಿಸಬಹುದು.

> ವಕ್ರಃ ಪಂಥಾ ಯದಪಿ ಭವತಃ ಪ್ರಸ್ಥಿತಸ್ಯೋತ್ತರಾಶಾಂ
> ಸೌಧೋತ್ಸಂಗ ಪ್ರಣಯ ವಿಮುಖೋ ಮಾಸ್ಮ ಭೂರುಜ್ಜಯಿನ್ಯಾಃ
> ವಿದ್ಯುದ್ದಾಮ ಸ್ಫುರಿತ ಚಕಿತೈಸ್ತತ್ರಪೌರಾಂಗನಾನಾಂ
> ಲೋಲಾ ಪಾಂಗೈರ್ಯದಿ ನ ರಮಸೇಲೋಚನೈರ್ವಂಚಿತೋಽಸಿ ॥

ಇದರ ಬೇಂದ್ರೇಕೃತ ಅನುವಾದ:

> ಉತ್ತರಕ್ಕೆ ಹೊರಟವಗೆ ಉಜ್ಜಯಿನಿ ಅಡ್ಡವಾದರೇನು
> ಅಲ್ಲಿ ಮೇಲು ಮಾಳಿಗೆಯ ಭೋಗ ಕಳಕೊಳ್ಳಬೇಡ ನೀನು
> ಆ ಊರ ಹೆಂಗಸರ ಕಣ್ಣ ಬಳಿಮಿಂಚೆ ಮಿಣುಕು ಎನ್ನು
> ಅವರ ಕಣ್ಣಕುಡಿ ಲಲ್ಲೆಯೊಲ್ಲೆಯಾ ವ್ಯರ್ಥ ಇದ್ದು ಕಣ್ಣು

ಮೂಲದಲ್ಲಿ ಕವಿ “ ನೋಡ ಬಂದಾಗ ಹೊಳೆಯುವ ಮಿಂಚಿನಿಂದ ಚಕಿತ ರಾದ ಆ ಉಜ್ಜೈನಿಯ ಚೆಲುವಿಯರ ಚಂಚಲಗಣ್ಣಿನ ಕುಡಿನೋಟದ ವಿಲಾಸವನ್ನು ನೋಡಿ ಆನಂದ ಪಡದಿದ್ದರೆ ನಿನ್ನ ಕಣ್ಣು ಇದ್ದೂ ವ್ಯರ್ಥ ” ಎಂದು ಮೇಘಕ್ಕೆ ಹೇಳಿ ದ್ದಾನೆ. ಅನುವಾದದಲ್ಲಿ ಈ ಆಶಯವನ್ನು ಇನ್ನೂ ಸ್ವಾರಸ್ಯವಾಗಿ “ ಉಜ್ಜೈನಿಯ ಹೆಂಗಳೆಯರ ಕಣ್ಣಿನ ಮುಂದೆ ಮಿಂಚು ಮಿಣುಮಿಣುಕು. ಇಂಥ ಮಿಂಚುಗಣ್ಣಿನ ಚಂಚಲೆಯರ ಕಣ್ಣಕುಡಿ ಲಲ್ಲೆಯನ್ನು ಒಲ್ಲೆಯಾದರೆ ನಿನ್ನ ಕಣ್ಣೇ ವ್ಯರ್ಥ ” ಎಂದು ಭಾವಪೂರ್ಣವಾಗಿ ಹೇಳಲಾಗಿದೆ. ಮುಂದೆ ನಿರ್ವಿಂಧ್ಯಾನದಿಯ ತೆರೆಗಳ ತುಳುಕಾಟ ತೀರದ ತರುರಾಜಿಯಲ್ಲಿಯ ಹಕ್ಕಿಗಳ ಕಲಕಲಾಟಗಳನ್ನೂ ಹರಿತ, ನೊರೆತಗಳನ್ನೂ ಬಿಂಕದ ಹೆಣ್ಣ ನಡಿಗೆಯ ಬಿನ್ನಾಣಕ್ಕೆ ಹೋಲಿಸಿ ಹೇಳಿದ ಕಾಲಿದಾಸನ ಪದ್ಯವನ್ನು ಮೂಲಕ್ಕಿಂತ ಹೆಚ್ಚು ಸ್ವಾರಸ್ಯಪೂರ್ಣವಾಗಿ ಅನುವಾದಿಸಿದ್ದನ್ನು ಕಾಣಬಹುದು:

> ನಿನ್ನ ಕಂಡು ನಿರ್ವಿಂಧ್ಯೆ ಮುಂದೆ ತೆರೆತೆರೆದು ಅಂಚೆ ಉಲಿಸಿ
> ಗೆಜ್ಜೆಪಟ್ಟಿಗಿಲಕೆನಿಸಿ ಎಡವಿ ಸುಳಿನಾಭಿ ತೋರಿ ನಲಿಸಿ
> ಹಾದಿಯಲ್ಲಿ ಬರೆ ಆಗು ಸಮರಸಿಯು ಕೇಳಬೇಡ ಬಡಲು
> ಹೆಣ್ಣಿನೊಲವಿನಲಿ ಮಳ್ಳ ಮುದುಕವೇ ಮಾತಿಗಿಂತ ಮೊದಲು

ಮೂಲದಲ್ಲಿಯ ಕೊನೆಯ ಸಾಲನ್ನು ಸಂಸ್ಕೃತಕ್ಕಿಂತಲೂ ಹೆಚ್ಚು ಕನ್ನಡದ ಹೃದಯದ ಹದನಕ್ಕೆ ಹತ್ತಿರವಾಗುವಂತೆ ಆಡುನುಡಿಯ ಜಾಡನ್ನು ಇಳಿಸಲಾಗಿದೆ. ಸಂಸ್ಕೃತದ ಕ್ಲಿಷ್ಟ ರೂಪಕವನ್ನು ಹೀಗೆ ಅಚ್ಚಗನ್ನಡದ ಅಚ್ಚಿನಲ್ಲಿ ಎರಕ ಹೊಯ್ಯು ವದು ಬೇಂದ್ರೆಯವರನ್ನು ಬಿಟ್ಟರೆ ಯಾರಿಗೆ ತಾನೇ ಸಾಧ್ಯವಾದೀತು !

ಎಷ್ಟೋ ಕಡೆಗೆ, ಬಹಳಷ್ಟು ಕಡೆಗೆ ಕಾಲಿದಾಸನ ಮೂಲಪದ್ಯಗಳ ಭಾವಾನು-ಭಾವವೈಭವದ ಎತ್ತರ ಬಿತ್ತರಕ್ಕೆ ಹತ್ತಿರವಾಗಿ ಹೊಯ್‌ಕೈಯಾಗಿ ಬೇಂದ್ರೆಯವರ ಅನುವಾದವೂ ಸಲೀಸಾಗಿ ಸಾಗಿದ್ದನ್ನು ಕಾಣುತ್ತೇವೆ.

ರುದ್ರಗಣವು ಬಾಗೀತು ನಿನಗೆ, ಹೇ ಕೊರಳಗರಳ ವರಣಾ
ಕಾಣ ಹೋಗು ಶ್ರೀ ಚಂಡಿಪತಿಯು ಮಾಂಕಾಳಿ ಪುಣ್ಯ ಚರಣಾ
ಅವನ ತೋಟದಲಿ ಗಾಳಿ ತೀಡುವದು ಗಂಧವತಿಯು ನೆರೆದು
ಕಮಲಗಂಧಿಯರು ಮಿಂದ ನೀರಿನರವಿಂದ ಗಂಧ ಬೆರೆದು

ದೇವದಾಸಿಯರು ಹೆಜ್ಜೆ ಹಾಕಿ ನಡುಗೆಜ್ಜೆ ಕುಣಿಸಿನವುರಿ
ಬಳ್ಳಿ ತೋಳ ಬಳುಕಾಡೆ ಬೀಸುವದು ರನ್ನಗಾವಚವರಿ
ನಿನ್ನ ಮೊದಲ ಹನಿ ಉಗುರು–ತಾಣ ತಂಗೊಳಿಸೆ ಎದೆಯ ತಾಗಿ
ನೋಟ ಬೀರುವರು ನಿನ್ನ ಕಡೆಗೆ ತುಂತುಂಬಿ ಮಾಲೆಯಾಗಿ

ಬೇಂದ್ರೆಯವರ ನುಡಿಯ ಮೋಡಿ ಹೊಸಗನ್ನಡದ ಲಲಿತ ಮಧುರ ಪದಗಳ ಜಾಣ್ಮೆ ಜೋಡಿ ಜೋಡಣೆಯಿಂದ ಅನುವಾದದ ವೇದಿಕೆಯ ತುಂಬ ಜೇನು ಜಿನಗು-ವಂತೆ ಮಾಡುತ್ತದೆ. ಇದೇ ಪೂರ್ವ ಮೇಘದಲ್ಲಿ

ಜನ್ಹುಕನ್ಯೆ ತೊಳೆದಿಳಿದಳಣ್ಣಿ ಕನಖಲದ ಮಲೆಯಬಳಿಗೆ
ಸಗರ ಸಂತತಿಗೆ ಸ್ವರ್ಗದೊಂದು ಸೋಪಾನವಾಗಿ ಇಳೆಗೆ
ಗೌರಿ ಮುರಿವಳಬ್ಬಬ್ಬ ಹುಬ್ಬು–ಎನೆ ನಕ್ಕು ನೊರೆಗಳಿಂದ
ಜಗ್ಗುತಿಹಳು ಶಿವಜಡೆಯ ಚಂದ್ರಮಣಿ ಕೈಯ ತೆರೆಗಳಿಂದ

ಎಂಬ ಪದ್ಯವನ್ನು ಓದಿದರೆ ಕಾಲಿದಾಸನೇ ಕನ್ನಡದಲ್ಲಿ ಕವನ ಕಟ್ಟಿದ್ದಾನೆ ಎನಿಸು-ವದು. ಅನುವಾದ ಎಂಬ ಕಲ್ಪನೆಯೇ ಇಲ್ಲದಾಗುವದು.

ಹೀಗೆ ಪೂರ್ವ ಮೇಘದ ತುಂಬ ರಸದೋಕುಳಿಯಾಡಿದ ಕವಿವಾಣಿ ಉತ್ತರ ಮೇಘದಲ್ಲಿ ಉತ್ತರೋತ್ತರ ಹುರಿಗೊಂಡು ಹೊಗರೇರುತ್ತ ಹೋಗುತ್ತದೆ.

ಅಲ್ಲಿ ನಮ್ಮ ಮನೆ ಯಕ್ಷಪತಿಯ ಮನೆಯುತ್ತರಕ್ಕೆ ಇಹುದು
ಇಂದ್ರಚಾಪ ತೋರಣದಿ ಮೆರೆದು ದೂರಿಂದ ಕಾಣಬಹುದು
ಹತ್ತಿರಕ್ಕೆ ನನ್ನಾಕೆ ನೀರನುಣಿಸಿರುವ ಕಂದನಾಗಿ
ಕೈ ಎತ್ತರಾದ ಮಂದಾರವೊಂದು ಇದೆ ಗೊಂಚಲಾಗಿ ಬಾಗಿ

ಸುತ್ತಮುತ್ತ ಮದರಂಗಿ ನಡುವೆ ಮಾಧವಿಯು ಬಳ್ಳಿಮಾಡಾ
ಅತ್ತ ಚಂದ ಕೇಸರವು, ಇತ್ತಲಿದೆ ಕೆಂಪಶೋಕ ನೋಡಾ
ಒಂದು ಬೇಡುವದು ನಿನ್ನ ಸಖಿಯ ಎಡಗಾಲು ಸೋಂಕಲೆಂದು
ಮುಕ್ಕ ಮಧುವನುಗುಳಿದರೆ ಸಾಕು ಬಯಸುವದು ಮತ್ತೊಂದು

ಮರದ ನಡುವೆ ಬಿಳಿಹಾಸುಗಲ್ಲು ಬಂಗಾರ ಕೋಲು ನಡಕೆ
ಎಳೆ ಬಿದಿರ ಬಣ್ಣ ಜೆಲೆ ಹರಳಿನಿಂದ ನೆಲೆಗಟ್ಟು ಅದರ ಬುಡಕೆ
ಆ ಕೋಲಿನಲ್ಲಿ ಕುಣಿಸುವಳು ನವಿಲು ನನ್ನಾಕೆ ಸಂಜೆಯಲ್ಲಿ
ಕೈ ತಟ್ಟಿ ಮಾಟ ಬಳೆ ತಾಕಲಾಟ ಥಕ ಥೈಯ ಥಾಟನಲ್ಲಿ

ಎಷ್ಟೇ ಸುಂದರವಾದ ಹಿನ್ನೆಲೆ ವಾತಾವರಣ ನನ್ನ ಮನೆಗಿದ್ದರೂ ನಾನಿಲ್ಲದ್ದರಿಂದ ಕಳೆಗೆಟ್ಟು ಹೋಗಿದೆ. ಸೂರ್ಯನಿಲ್ಲದ ತಾವರೆಯಂತೆ ಎಂದು ಹೇಳಿ ಆ ಮನೆಯಲ್ಲಿರುವ ತನ್ನ ಪ್ರೇಯಸಿಯ ದೀನ ದೀನ ಹಾಗು ದುಃಖದಲಿತ ಚಿತ್ರವನ್ನು ಕಾಲಿದಾಸ ಕರುಣಾಜನಕವಾಗಿ ಬಿಡಿಸಿದ್ದಾನೆ. ಅದನ್ನು ಅಷ್ಟೇ ನಯ ನಾಜೂಕಿನಿಂದಲೇ ಶ್ರೀ ಬೇಂದ್ರೆಯವರು ಕನ್ನಡ ಭಿತ್ತಿಯಲ್ಲಿ ಮತ್ತೊಮ್ಮೆ ಕೆತ್ತಿ ಕುಸುರಿನ ಕೆಲಸ ಮಾಡಿ ಅನುವಾದದ ಸೂಕ್ಷ್ಮ ಕೌಶಲವನ್ನು ಮೆರೆದಿದ್ದಾರೆ.

ಅತ್ತು ಅತ್ತು ಮತ್ತತ್ತು ಕೆದರಿಕೊಂಡಿಹುದು ಕಣ್ಣು ಪೊಗರು
ಬಿಚ್ಚನುಸಿರನುಂಡುಂಡು ಸೊಪ್ಪೆಯಾಗಿಹುದು ತುಟಿಯ ಚಿಗುರು
ಗಲ್ಲದಲ್ಲಿ ಕೈ, ಓರೆ ಮೋರೆ ನಿಡಿಗೂದಲುದ್ದ ಚಿಂತೆ
ಮೋಡ ಮುಸಕಲಿರೆ ಮಂಕುಗವಿದ ಆ ದೀನ ಚಂದ್ರನಂತೆ

ಆದರೆ ಮೇಘಕ್ಕೆ ಯಕ್ಷ "ನೀನು ಹೋದಾಗ ಒಂದು ವೇಳೆ ಅವಳು ಮಲಗಿದ್ದರೆ ಮಾತ್ರ ಅವಳನ್ನು ಎಬ್ಬಿಸಬೇಡ. ಕದಾಚಿತ್ ಆಗ ಅವಳು ಕನಸಿನಲ್ಲಿ ನನ್ನನ್ನು ಕೂಡಿರಬಹುದು" ಎಂದು ಎಚ್ಚರಿಸುತ್ತಾನೆ. ಇದನ್ನು ಕನ್ನಡದ ಕೆಚ್ಚಿನಲ್ಲಿ ಅಚ್ಚಿನಲ್ಲಿ ಇನ್ನೂ ಸ್ವಾರಸ್ಯವಾಗಿ ಪಡಿಮೂಡಿಸಿದ್ದಾರೆ ಶ್ರೀ ಬೇಂದ್ರೆಯವರು:

ನೀನು ಹೋದ ಆ ಹೊತ್ತೆ ನಿದ್ದೆ ಚಿತ್ತೈಸೆ ಅವಳ ನೋಡಾ
ಮೇಘರಾಜ ದಯಮಾಡಿ ತಡೆಯೊ ಹುಸಿಗುಡುಗು ಹಾಕಬೇಡಾ
ಹೇಗೊ ಕನಸಿನಲಿ ಸೇರಿ ನನ್ನ ಮುಗಿಬಿದ್ದು ಕೊರಳ, ಹುಚ್ಚಿ
ಎದ್ದಾಳೋ ಬಾಲೆ ಬಿದ್ದಾಳೊ ಬೆದರಿ ಕೈ ಮಲಕು ಬಿಚ್ಚಿ ಬಿಚ್ಚಿ

ಅವಳನ್ನು ಮೆಲ್ಲನೆ ತಕ್ಕೈಸಿ ಮಾತನಾಡಿ ನನ್ನ ಸಂದೇಶವನ್ನು ತಿಳಿಸು,

ಕುಶಲನಿರುವೆ ನಾನಿಲ್ಲಿ ನಿನ್ನನೇ ನೆನೆದು ಧೈರ್ಯತಾಳಿ
ನೀನು ಕೂಡ ಎದೆಗೆಡಿಸಿಕೊಳ್ಳದಿರು ಏನೊ ಸುದ್ದಿ ಕೇಳಿ
ಅಗಲಿದಾಗ ತಿನ್ನುವದು ಸ್ನೇಹವೆನ್ನುವರು ಜೀವವನ್ನು
ಕೂಟದೊಡನೆ ಅದೆ ಸೂರೆ ಮಾಡುವದು ಪ್ರೇಮಭಾವವನ್ನು

ನನ್ನ ಈ ಸಂದೇಶವನ್ನು ಅವಳಿಗೆ ಮುಟ್ಟಿಸಿ ನೀನು ಮರಳಿ ಇಲ್ಲಿಗೆ ಬಂದು ಅವಳ ಪ್ರತಿ ಸಂದೇಶವನ್ನು ತಂದು ತಿಳಿಸು ಎಂದು ಯಕ್ಷ ಹೇಳುತ್ತಾನೆ.

ಮೊದಲ ವಿರಹದಲಿ ಬೆಂದ ಸಖಿಗೆ ನೀ ಹೇಗೆ ಧೈರ್ಯ ಹೇಳಿ
ಶಿವನ ಬಸವನಗೆದಿರುವನಗದ ತುದಿಯಿಂದ ಕಾಲಕೀಳಿ
ಮರಳಿ ಬಂದು ಅವಳೊಸಗೆ ತಂದು ನನಗೆಂದು ಬಾಳ ನೀಡು
ಕಳಚಿ ಬೀಳಲಿಹ ಕುಂದ ಕುಸುಮದೊಲು ಇಹುದು ನನ್ನ ಪಾಡು.

ಒಪ್ಪಿಕೊಂಡೆಯಾ ಅಪ್ಪ ಹೇಳು ಈ ಬಂಧು ಕೃತ್ಯವನ್ನು
ಇಲ್ಲವೆಂದು ನಾ ತಿಳಿಯೆ ನಿನ್ನ ಗಂಭೀರ ಮೌನವನ್ನು
ನೀರ ನೀಡಿ ಚಾದಗಗೆ ಸುಮ್ಮನಿಹ ಬೇರೆ ಸಾಕ್ಷ್ಯಬೇಕೆ
ತಮ್ಮ ಇಷ್ಟದವರಿಷ್ಟ ಮಾಡವವ ಬಾಯಲಾಡಲೇಕೆ

ಬೇಂದ್ರೆಯವರ ಅನುವಾದದ ರಸಾಳ ಶೈಲಿ ತಾನೂ ಯಕ್ಷನ ಸಂದೇಶದೊಡನೆ ಮೇಘಾರೂಢವಾಗಿ ಓದುಗರ ಹೃದಯವನ್ನು ಸ್ವಪ್ನಸುಂದರವಾದ ಆಗಸದ ಅಂಗಳದಲ್ಲಿ ಯಕ್ಷಲೋಕದಲ್ಲಿ ಹಗುರಾಗಿ ತೇಲುವಂತೆ ಕನಸಿನ ಯಕ್ಷ ಮಂದಾರಗಳನ್ನೆಲ್ಲ ಕಂಡರಿಸುವಂತೆ ಮಾಡುತ್ತದೆ. ಅವರ ಶಬ್ದಶಕ್ತಿ, ಅನುವಾದ ಶಕ್ತಿ ಎರಡೂ ಒಗ್ಗೂಡಿ ಕನ್ನಡವನ್ನು ಸಂಸ್ಕೃತ ಭಾಷೆಯ ತೂಕಕ್ಕೆ ಏರಿಸಿದೆ. ಆದರ ರಸಪಾಕಕ್ಕೆ ಇಳಿಸಿದ ಸಂಸ್ಕೃತದ ಎಂಥ ಗಹನ ಗಂಭೀರ ಕೃತಿಯನ್ನೂ ಕನ್ನಡ ಕಾಸಾರದಲ್ಲಿ ಪಡಿಮೂಡಿಸಬಹುದು ಎಂಬ ಭರವಸೆಯನ್ನು ಅವರ ಮೇಘದೂತ ನೀಡಿದೆ. ಇಂಥ ಯಶಸ್ವಿ ಅನುವಾದವನ್ನು ಕನ್ನಡಕ್ಕೆ ಕೊಟ್ಟ ಕವೀಂದ್ರರಿಗೆ ಸಂಸ್ಕೃತವಾಗ್ದೇವಿ ಹರಸಿ ಅವರಿಂದ ಇನ್ನೂ ಇಂಥ ಹತ್ತಾರು ಸಂಸ್ಕೃತ ಭಾವಗೀತೆಗಳು ಈಗಿನ ಅವರ ಪರಿಪಕ್ವ ಶೈಲಿಯಿಂದ ಹರಿದು ಬರಲಿ ಎಂದು ಹಾರೈಸಿ ಈಗಾಗಲೇ ಸಾಕಷ್ಟು ಲಂಬಿಸಿದ ಈ ಸಮೀಕ್ಷೆಯನ್ನು ಇಲ್ಲಿಗೆ ಮುಗಿಸುವೆ.

§ § § §

---

‘ಪಂಚಾಮೃತ’ ಸಂ. ೧೦ ಸಂ. ೩+೪ ಯಿಂದ.

೩೫

# ಸಣ್ಣ—ಸೋಮವಾರ

**ಕೀರ್ತಿನಾಥ ಕುರ್ತಕೋಟಿ**

ಬೇಂದ್ರೆಯವರು ತಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿ ತಮ್ಮ ಬಾಲ್ಯದ ಅನುಭವವನ್ನು ನಿರೂಪಿಸಿ ಬರೆದ ಕವಿತೆ ಇದು. ಆದರೆ ಈ ಕವಿತೆಯಲ್ಲಿ ಮೂಡಿ ಬಂದದ್ದು ಕವಿಯಲ್ಲಿ, ಈ ಇಳಿವಯಸ್ಸಿನಲ್ಲಿಯೂ ಜೀವಂತವಾಗಿರುವ ಅನುಭವವೇ ಹೊರತು ಕಳೆದು ಹೋದ ಅನುಭವವಲ್ಲ. ಕವಿತೆಯ ಕೊನೆಯಲ್ಲಿ ಬರುವ ಈ ಸಾಲುಗಳು ಅನುಭವ ಇನ್ನೂ ಜೀವಂತವಾಗಿರುವದನ್ನು ಸೂಚಿಸುತ್ತವೆ :

ಎಣಿಸಿದರ ಏನೋ ಕನಸ
ಕಂಡಾಗ ಅನಸ್ತದ
ಕಣ್ಣು । ಆಗ್ತಾವ ಹ್ಯಾಂಗೊ ತೇಲುಮೇಲಾ

ನೆನಪಿನ ಓರಿಯೊಳಗ
ಮಿಣುಕ್ತಾವ ಎಣ್ಣೀದೀಪ
ಎಲ್ಲೆ । ಹೋದಾವೊ ಗೆಳೆಯಾ ಆ ಕಾಲಾ ?

ಕವಿಯ ಈ ವೈಯಕ್ತಿಕ ಅನುಭವ, ಕಾಲ ಮತ್ತು ದೇಶಗಳಿಂದ ಸೀಮಿತ ವಾಗಿದ್ದರೂ ಕವಿತೆಯಲ್ಲಿ ಅದು ಪುನಃಸೃಷ್ಟಿಯನ್ನು ಪಡೆದು ಒಂದು ಕಾಲಾತೀತ ವಾದ ಅನುಭವವಾಗುತ್ತದೆ. ಮುಖ್ಯವಾಗಿ ಇಲ್ಲಿ ನಿರೂಪಿತವಾಗಿರುವದು ಆಸ್ತಿ-ಕತೆಯ ಅನುಭವ. ಚಿಕ್ಕಂದಿನಲ್ಲಿಯೇ ಎಳೆಯ ಮನಸ್ಸಿನಲ್ಲಿ ಸುತ್ತುಮುತ್ತಲಿನ ಪರಿಸರದ ಪ್ರಭಾವದಿಂದ ದೃಢವಾಗಿ ಬೇರೂರಿ ಬೆಳೆದುಬಂದ ಅನುಭವ. ಆಸ್ತಿ-ಕತೆಯ ಅನುಭವದ ಗುಣಧರ್ಮವೆಂದರೆ ಅದರ ವಿಶಿಷ್ಟತೆ ಮತ್ತು ಸಾಮಾನ್ಯತೆ ಗಳೆರಡೂ ಪ್ರಾದೇಶಿಕತೆಯ ಸತ್ವದಿಂದ ಉಂಟಾಗಿರುವಂಥದು. ಈ ಕವಿತೆಯಲ್ಲಿಯ ವೈಯಕ್ತಿಕತೆಯಲ್ಲಿ ಮುಚ್ಚು-ಮರೆ ಏನೂ ಇಲ್ಲ.

ಧಾರವಾಡದ ನಿಸರ್ಗರಮ್ಯ-ವಾತಾವರಣದಲ್ಲಿಯ ಸೋಮೇಶ್ವರದೇವ-ಸ್ಥಾನದ ವರ್ಣನೆಯಿಂದಲೇ ಕವಿತೆ ಪ್ರಾರಂಭವಾಗುತ್ತದೆ :

ಬಂತಣ್ಣ ಸಣ್ಣ-ಸೋಮವಾರ
ಕಾಣಬೇಕಣ್ಣ ಸೋಮೇಶ್ವರ.

'ಕಾಣಬೇಕು' ಈ ಕ್ರಿಯಾಪದದ ಕಾಲ ಭೂತಕಾಲಕ್ಕೆ ಅನ್ವಯಿಸುವಂತೆ ವರ್ತಮಾನ-ಭವಿಷ್ಯಗಳನ್ನೂ ಸೂಚಿಸುತ್ತದೆ. ಕವಿಯ ಬಾಲ್ಯದಲ್ಲಿ ಕಂಡ ಸೋಮೇಶ್ವರ ಇಂದಿಗೂ ಹಾಗೇ ಇದೆ; ಪ್ರತಿ ಶ್ರಾವಣಸೋಮವಾರ ಅದನ್ನು ಕಾಣಬೇಕೆಂಬ ತವಕ ಬಾಲ್ಯದಲ್ಲಿಯಂತೆ ಈಗಲೂ ಇದೆ :

ಹಾದಿಗುಂಟ ಚೆಲ್ಲಾಟ
ದಾರಿ ಉದ್ದ ನೀರ ನೋಟ
ಹಸರಾಣಿ ಬನರಾಣಿ ತ್ವಾಟ;
ಅತ್ತ ಏರಿ ಇತ್ತ ವಾರಿ
ನಡುನಡುವೆ ಕೆರಿ, ಕೆರಿ
ಸುತ್ತುಮುತ್ತು ಪಯಿರಿನ ಮಾಟ.

ಕ್ರಿಯಾಪದವೇ ಇಲ್ಲದ ಈ ವರ್ಣನೆ ಮತ್ತೆ ಮೇಲಿನ ಮಾತನ್ನೇ ಸೂಚಿ-ಸುತ್ತದೆ. ಇಲ್ಲಿಂದ ಎರಡು ಮೂರು ನುಡಿಗಳಲ್ಲಿಯ ವರ್ಣನೆಯಲ್ಲಿ ಬಾಲ್ಯದಲ್ಲಿ ದೊರೆತ ಸೋಜಿಗದ ಅನುಭವ ಇಂದಿಗೂ ಮರುಕಳಿಸುತ್ತಿರುವ ಸಂಗತಿಯ ನಿರೂ-ಪಣೆ ಇದೆ. ಮಳೆಯಲ್ಲಿ ತಪತಪ ತೊಯ್ದು ನೀರಲಗಿಡಗಳನ್ನೇರಿ ಕುಳಿತ ಮಂಗ ಗಳು, ಗಿಡಗಳನ್ನು ಅವು ಅಲುಗಾಡಿಸಿದಾಗ ನೀರ ಹನಿಗಳ ಬದಲು ಬೀಳುವ ನೀರಲ ಹಣ್ಣುಗಳು, ಹುಡುಗರ ತುಂಟಾಟಗಳನ್ನು ಅಣಕಿಸುವ ಕಪಿಚೇಷ್ಟೆಗಳು, ದುಡು ದುಡು ದೂಡಿ ಬರುವ ಗೂಡ್ಸುಗಾಡಿ— ವರ್ಣನೆಯ ಈ ವಿವರಗಳಲ್ಲಿ ಸಾರ್ವಕಾಲಿಕತೆ ಇದೆ. ರೇಲ್ವೆ ಹಳಿಗಳನ್ನು ದಾಟಿ ಹೋದರೆ ದೂರದ ಸೋಮೇಶ್ವರ ಕಣ್ಣಿಗೆ ಕಾಣುತ್ತದೆ :

ತಗ್ಗಿನ್ಯಾಗ ಗಿಡಗ ಗುಂಪು
ಹೊಂಡ್ವದ ನೀರು ತಂಪು
ದೂರಿಂದ ಕಂಡರೂ ಸೊಂಪು.

ಇಲ್ಲಿಂದ ಮುಂದೆ ಕವಿತೆಯ ವಾತಾವರಣದಲ್ಲಿ ಬದಲಾವಣೆ ಕಾಣುತ್ತದೆ. ನೀರಲಹಣ್ಣು, ಸಂಗಡ ಕಟ್ಟಿ ತಂದ 'ಫರಾಳ', ಗೂಡ್ಸುಗಾಡಿಯ

ಆಟ—ಹೀಗೆ ದಿಕ್ಕು ದಿಕ್ಕಿಗೆ ಚದರಿ ಹೋಗುವ ಚೈತನ್ಯಕ್ಕೆ ಗುರಿ ಕಾಣುತ್ತದೆ. ಇನ್ನು ಮುಂದಿನ ಗತಿ ಲಯಬದ್ಧವಾದದ್ದು. ಜೀವನ ತನಗೆ ಗೊತ್ತಿಲ್ಲದಂತೆ ಅನುಸರಿಸುವ ನಂಬಿಕೆಯ ಲಯ :

ಭಜನೀಯ ಮ್ಯಾಳದ ಧನಿ
ಅಲ್ಲಾ ದೂರಾ ಅಲ್ಲಾ ಸನಿ
ತುಳಕ್ಯಾಡತಾವ ದಿಕ್ಕು ದಿಕ್ಕು.

ತಪ್ಪಿ ಉಳಿದ ಕೋಗಿಲಾ
ನಡುವೇನs ಕೂಗ್ತದ
ಶ್ರಾವಣದ ಝುಡಿಯೊಳಗ ಸಿಕ್ಕು.

ಹರಹರ ಮಹಾದೇವಾ
ಈಸಾಡತಾವ ಜೀವಾ
ಮಾನಸ ಸರೋವರ ಹೊಕ್ಕು.

ಇಲ್ಲಿಯ ಮೂರು ಪ್ರತಿಮೆಗಳೂ ಮನುಷ್ಯಜೀವದ ಆಂತರಿಕ ಸತ್ಯವನ್ನು ಕಣ್ಣಿಗೆ ಹಿಡಿಯುತ್ತವೆ. ಭಜನೆಯ ಮೇಳದ ಹಾಡಿನಲ್ಲಿ, ಕೋಗಿಲೆಯ ಕೂಗಿನಲ್ಲಿ, ಮೀನಗಳ ಈಸುವಿಕೆಯಲ್ಲಿ ಇರುವ ಸಮಾನಧರ್ಮವೆಂದರೆ ಪುನರಾವರ್ತನೆ, ಮತ್ತು ಅದನ್ನು ಲಯಬದ್ಧವಾಗಿಸಿ ಅದರಿಂದ ಪಾರಾಗಬೇಕೆನ್ನುವ ಹವಣಿಕೆ. ದೂರವೂ ಅಲ್ಲ, ಹತ್ತಿರವೂ ಅಲ್ಲದ ಭಜನೆಯ ಧ್ವನಿ, ಕಣ್ಣಿಗೆ ಕಾಣದಂತೆ ಕೂತು ಕೂಗುವ ಕೋಗಿಲೆ, ನೀರಿನಾಳದಲ್ಲಿ ಈಸಾಡುವ ಮೀನ ಇವು ಲೌಕಿಕ ಹಾಗೂ ಪಾರಲೌಕಿಕ ಎಳೆತದಲ್ಲಿ ಸಿಕ್ಕ ಜೀವನ ಒದ್ದಾಟವನ್ನು ಪ್ರತಿಫಲಿಸುವ ಪ್ರತೀಕಗಳಾಗುತ್ತವೆ. ಇಂಥ ಜೀವದ ಆಧಾರ-ಶ್ರುತಿಯೆಂದರೆ ನಂಬಿಕೆ. ಮುಂದಿನ ಎರಡು ನುಡಿಗಳಲ್ಲಿ ಬಾಲ್ಯದ ಆಸ್ತಿಕತೆಯ ಅನುಭವದ ಎರಡು ಮುಖಗಳು ಕಾಣುತ್ತವೆ :

ಗರ್ಭಗುಡಿಯೊಳಗ ಲಿಂಗ
ನಿದ್ದಿಯೊಳಗs ನೋಡಿಧಾಂಗ
ಕಣ್ಣು ಮುಚ್ಚತಾವ ನಮೋ ಎಂದು.

ಗವಿಯೊಳಗಿನ ದಾರಿ
ಹರದಾರಿ ಹರದಾರಿ
ಮಿಂಚಿತ್ತು ಚಂದ್ರಕ್ವಾರಿ ಒಂದು

ನಿಂತಽ ಮೈಯಾಗಿ ಖಂಬ
ಸೋರ್‍ಯಾವ ಜಂಬ–ಗಿಂಬ
ಹಿಡಿದಾನ ಕೈಯ ಶಿವನೆ ಬಂದು.

ಎಚ್ಚರ್‍ಽದಾಗ ಇದು
ಹುಚ್ಚುಚ್ಚಾರ ಅನಿಸಿ
ಎಲ್ಲಾರ ಕೂಡ ಕೈಮುಗಿದು

ಬೆಂಡೂ ಬತ್ತಾಸ ಅಂತ
ತಿಂತಽನ ನುರಿಸಿಕೊಂತ
ಹೋಗತಿದ್ವಿ ಜಾತ್ರಿಗೆ ಜಿಗಿದು.

ಮೊದಲನೆಯ ನುಡಿಯಲ್ಲಿ ಬಾಲಮನಸ್ಸಿನ ಕಲ್ಪನೆಯ ಸ್ವೈರವಿಹಾರದ ಚಿತ್ರವಿದೆ. ಗರ್ಭಗುಡಿಯೊಳಗಿನ ಲಿಂಗ ದೂರದಿಂದ ಅಸ್ಪಷ್ಟವಾಗಿ ಸಿದ್ದೆಯಲ್ಲಿ ನೋಡಿದಂತೆ ಕಾಣುತ್ತದೆ. ಕಣ್ಣು ತಾವಾಗಿಯೇ ಭಕ್ತಿಯಿಂದ ಮುಚ್ಚಿಕೊಳ್ಳು-ತ್ತವೆ. ಆಸ್ತಿಕತೆ ಹೀಗೆ ಸುಪ್ತಮನಸ್ಸಿನ ಆಳಕ್ಕೆ ಇಳಿಯುತ್ತದೆ. ಗರ್ಭಗುಡಿಯ ಹಿಂದೆ ಇರಬಹುದಾದ ಗವಿ, ಅದರೊಳಗಿಂದ ಹೋದರೆ ತೆರೆಯಬಹುದಾದ ಹರ-ದಾರಿ ದೂರದ ದಾರಿ, ಅಲ್ಲಿ ಮಿಂಚುವ ಚಂದ್ರನ ಕಲೆ-ಇವೆಲ್ಲ ಕಲ್ಪನೆಯ ಕಣ್ಣಿಗೆ ಕಾಣುವ ಬದುಕು. ಆಸ್ತಿಕತೆ ಹೀಗೆ ಸೃಜನಶೀಲವಾದ ಭಾವನೆಯಾಗುತ್ತದೆ. ಅಸ್ತಿತ್ವದಲ್ಲಿ ನಂಬಿಕೆಯಿದ್ದವನಿಗೆ ಮಾತ್ರ ಆಸ್ತಿಕತೆ ಸಾಧ್ಯವಾಗಬಲ್ಲದು. ನಿಂತ ಮೈ ಕಂಬದಂತೆ ಸ್ಥಿರವಾಗಿ ಜಂಬ ಸೋರಿ ಹೋದಾಗ ಶಿವನೆ ಬಂದು ಕೈಹಿಡಿ-ಯುತ್ತಾನೆ.

ಆದರೆ ಇದೆಲ್ಲ ಮನಸ್ಸಿನ ಒಳಗೆ ನಡೆಯುವ ವ್ಯಾಪಾರ. ಅಂತರ್ಮುಖತೆಗೆ ಮಾತ್ರ ಕಾಣುವ ಸತ್ಯ. ಎಚ್ಚರದಲ್ಲಿ ಮಾತ್ರ ಇದೆಲ್ಲ ಹುಚ್ಚುಚ್ಚು ಎನಿಸಿ ಅದನ್ನು ಮರೆಯಲು ಬೆಂಡು ಬತ್ತಾಸ ತಿಂದು ಜಾತ್ರೆಗೆ ಹೋಗುವ ಚಿತ್ರ ಹುಡುಗತನದ ವಾಸ್ತವ ಚಿತ್ರ :

ಶಾಲ್ಯಾಲಿ ಸಣ್ಣ ಬಾಲಿ
ಕಿವಿಯಲ್ಲಿ ತಾಳಿ–ವಾಲಿ
ಗರಿಗರಿ ಬನದಾಗ ಅಡಗಿ

ಗಂಗಾ ಹೊಳಿಯಾಗಿ
ಸಾಗರಬಿದ್ದು ಸಾಗರಕಾಗಿ
ಹೊರಟಾಳ ಗೋಕರ್ಣ ಕಡಿಗಿ

ಬೂರಲ ದೀಪಮಾಲಿ
ನಂದಿಸಿ ಸೆಜ್ಜ ಸಾಲಿ
ಗತ್ತಿನ ಸಪ್ಪಳಿಲ್ಲದ ನಡಿಗಿ.

ಸೋಮೇಶ್ವರದ ಹತ್ತಿರದಲ್ಲಿಯ ಒಂದು ಸಣ್ಣ ಹೊಂಡದಲ್ಲಿ ಉಗಮ ಹೊಂದುವ ಶಾಲ್ಮಲಾ ನದಿಯ ವರ್ಣನೆಯಿದು. ಈ ನದಿಯೇ ಮುಂದೆ ಗಂಗಾವಳಿ ಎಂಬ ಹೆಸರಿನಿಂದ ಗೋಕರ್ಣದ ಹತ್ತಿರ ಸಮುದ್ರವನ್ನು ಸೇರಬೇಕು. ನದಿಯ-ಗುಂಟ ಹಬ್ಬಿದ ಬನದಲ್ಲಿ ಕೇದಗೆ ಮತ್ತು ಬೂರಲ-ಗಿಡಗಳು. ನದಿ ಇಲ್ಲಿ ದೇವರ ಪ್ರೇಯಸಿಯಾಗಿ ವರ್ಣಿತವಾಗಿದ್ದಾಳೆ. ಆದರೆ ನದಿ ಇನ್ನೊಂದು ದೃಷ್ಟಿಯಿಂದ ಸಾತತ್ಯದ ಮತ್ತು ನಿರಂತರದ ಪ್ರತೀಕವೂ ಹೌದು. ಯಾವಾಗಲೂ ಹರಿಯುತ್ತ ಮುಂದುವರಿದರೂ ನಿಂತಲ್ಲಿಯೇ ನಿಂತಂತಿರುವ ನದಿ, ಉಗಮದಲ್ಲಿ ಸೋಮೇಶ್ವರ ಕೊನೆಯಲ್ಲಿ ಮಹಾಬಲೇಶ್ವರ ಇವರ ಸ್ಪರ್ಶದಿಂದ ಪವಿತ್ರವಾಗಿರುವ ನದಿ, ಇನ್ನೊಂದು ದೃಷ್ಟಿಯಿಂದ ಆಸ್ತಿಕತೆಯ ಬೆಳವಣಿಗೆಯನ್ನೂ ಸೂಚಿಸುತ್ತದೆ. ಆಸ್ತಿಕತೆಯ ಭಾವನೆ ಶಾಲ್ಮಲೆಯ ಗುಪ್ತ ಪ್ರವಾಹದಂತೆ ಚೇತನವನ್ನು ಬೆಳೆಸು-ವಂಥದು. ಆದರದು 'ಗತ್ತಿನ ಸಪ್ಪಳಿಲ್ಲದ ನಡಿಗಿ.' ಆಸ್ತಿಕತೆಗೂ ಅಸ್ತಿತ್ವಕ್ಕೂ ಇರುವ ನಂಟನ್ನು ಈ ಕೆಳಗಿನ ಮಾತುಗಳಲ್ಲಿ ಬೇಂದ್ರೆಯವರು ಕಾಣಿಸಿದ್ದಾರೆ :

ಭಾವಾ ಇದ್ದಾಂಗ ದೇವಾ
ಹೇಳಿದ್ರು ಹಿರಿಯರು
ಅಲ್ಲೆ। ಸುತ್ತಾಡತಾವ ನಮ್ಮ ಖ್ಯಾಲಾ.

ಇಡೀ ಕವಿತೆಯನ್ನು ಮತ್ತೆ ಮತ್ತೆ ಓದಿದಾಗ ಈ ಸರಳವಾದ ಮಾತುಗಳ ಅರ್ಥ ಇನ್ನೂ ದಟ್ಟವಾಗುತ್ತದೆ. ದೇವಸ್ಥಾನ, ಭಜನೆಯ ಮೇಳ, ನದಿ, ಸುತ್ತಲಿನ ಬನ, ಧಾರವಾಡದ ಸೀಮೆಯ ಚಂದ ಇವೆಲ್ಲ ಆಸ್ತಿಕತೆಯ ಭಾವವನ್ನು ಹುಟ್ಟಿಸಿವೆ. ದೇವರ ಸ್ವರೂಪ ಈ ಭಾವದ ಪ್ರತಿಬಿಂಬವಾಗುತ್ತದೆ. ಕವಿಯ ಸಂವೇದನೆಯೆಲ್ಲ ಈ ಭಾವದಿಂದ ರೂಪಿತವಾದದ್ದು. ಅಂತಲೇ ಕೊನೆಯದಾಗಿ ಅವರು ನೆನಪಿಗೆ ಉಪಯೋಗಿಸುವ ಪ್ರತೀಕ ಕೂಡ ಇದೇ ಭಾವ-ಲೋಕದಿಂದ ಬಂದದ್ದಾಗಿದೆ :

ನೆನಪಿನಾ ಓರಿಯೊಳಗ
ಮಿಣುಕ್ತಾವ ಎಣ್ಣೀದೀಪ
ಎಲ್ಲೆ। ಹೋದಾವೊ ಗೆಳೆಯಾ ಆ ಕಾಲಾ ?

§ § § §

# ೩೬ | ಬೇಂದ್ರೆಯವರ ಕೆಲವು ಕವನಗಳು

ಸಿ. ಪಿ. ಕೆ.

೧

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಅವರು ಮಹಾಕಾವ್ಯಪ್ರತಿಭೆಗೆ ಹೇಗೋ ಹಾಗೆ ಬೇಂದ್ರೆಯವರು ಭಾವಗೀತ ಪ್ರತಿಭೆಗೆ ಶೃಂಗಸಿದರ್ಶನವಾಗಿದ್ದಾರೆ. ಅವರ ಕಲ್ಪನಾವಿಲಾಸ ಅಸಾಧಾರಣ ಮೋಹಕವಾದುದು. "ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸ" ಎಂದು ಅವರು ಹೇಳುವಲ್ಲಿ–ಅದು ಭಾವಗೀತೆಯನ್ನೇ ಕುರಿತ ಉಕ್ತಿ-ಕಲ್ಪನಾವಿಲಾಸದ ಲಕ್ಷಣ ಲಕ್ಷ್ಯಗಳೆರಡೂ ಸೊಗಸಾಗಿ ಮೂಡಿ-ಬಂದಿವೆ. ಭಾವಗೀತೆಗೆ ಬೇಕಾದ ಸಂಕ್ಷಿಪ್ತತೆ, ಭಾವತೀವ್ರತೆ, ಧ್ವನಿಪೂರ್ಣತೆ, ಗೇಯತೆಗಳಿಗೆ ಬೇಂದ್ರೆಯವರ ಕವಿತೆ ಅತ್ಯುತ್ತಮ ಉದಾಹರಣೆಯಾಗುತ್ತದೆ. ಭಾವಗೀತಕಾರರಾಗಿ ಅವರು ಪಡೆದಿರುವ ಸಿದ್ಧಿ ಒಟ್ಟಿನಲ್ಲಿ ಅನನ್ಯವಾದದ್ದು.

ಬೇಂದ್ರೆಯವರನ್ನು ಜನತೆಯ ಕವಿ ಎಂದು ನಿರ್ದೇಶಿಸಬಹುದು. ಸಾಮಾನ್ಯ ಜನಜೀವನವನ್ನು, ಅದರ ನೋವು–ನಲಿವುಗಳನ್ನು, ಚೆಲುವು–ಒಲವುಗಳನ್ನು, ಮಿಡಿತ-ತುಡಿತಗಳನ್ನು ಅವರಂತೆ ನೋಡಿ ಹಾಡಿನಲ್ಲಿ ಮೂಡಿಸಿದ ಕವಿಗಳು ನಮ್ಮಲ್ಲಿ ಬಹಳ ಮಂದಿಯಿಲ್ಲ. ಅವರ ಕಾವ್ಯದ ಭಾಷೆ, ಲಯಗಳಲ್ಲಿ ಜಾನಪದ ಸತ್ತ್ವ ತುಂಬಿ ತುಳುಕುತ್ತಿದೆ. ಈ ದೇಸಿಗುಣವೇ ಅವರನ್ನು ಇತರ ಕವಿಗಳಿಂದ ಬೇರ್ಪ-ಡಿಸಿ ಒಂದು ವಿಶಿಷ್ಟವಾದ ನಿಲುವಿನಲ್ಲಿರಿಸಿರತಕ್ಕದ್ದು. ಜನಪದ ಕವಿಗಳನ್ನು ಬಿಟ್ಟರೆ ದೇಸಿಯನ್ನು ವೀರ್ಯವತ್ತಾಗಿ, ವೈವಿಧ್ಯಪೂರ್ಣವಾಗಿ ಬಳಸಿಕೊಂಡವರು ಬೇಂದ್ರೆಯವರೇ.

ಕನ್ನಡದ ಎಲ್ಲ ನವೋದಯ ಕವಿತೆಗಳಂತೆ ಬೇಂದ್ರೆಯವರು ಜೀವನದ ಸಕಲ ಮುಖಗಳನ್ನೂ ತಮ್ಮ ಕೃತಿಗಳಲ್ಲಿ ಕನ್ನಡಿಸಿದವರು, ಕಂಡರಿಸಿದವರು. ವ್ಯಷ್ಟಿ-ಪ್ರಜ್ಞೆಯೊಂದೇ ಅಲ್ಲ, ಸಾಮಾಜಿಕ ಪ್ರಜ್ಞೆ, ರಾಷ್ಟ್ರೀಯ ಪ್ರಜ್ಞೆ, ವಿಶ್ವಪ್ರಜ್ಞೆಗಳೂ ಅವರ ಕಾವ್ಯದಲ್ಲಿ ಆವಿಷ್ಕೃತವಾಗಿವೆ; ಐಹಿಕಪ್ರಜ್ಞೆಯೊಂದೇ ಅಲ್ಲ, ಪಾರಲೌಕಿಕ

ಪ್ರಜ್ಞೆಯೂ ಕಣ್ದೆರೆದಿದೆ; ಅಂತಃಪ್ರಕೃತಿಯೊಂದೇ ಅಲ್ಲ, ಬಾಹ್ಯಪ್ರಕೃತಿಯೂ ಶೋಧಗೊಂಡಿದೆ; ವರ್ತಮಾನವಷ್ಟೇ ಅಲ್ಲ, ತ್ರಿಕಾಲಗಳೂ ಪ್ರತಿಫಲಿಸಿವೆ. ಬದುಕಿನ ಎಲ್ಲ ಪರಿಗಳೂ, ಸ್ತರಗಳೂ ಅಲ್ಲಿ ದನಿಗೊಂಡಿವೆ, ಧ್ವನಿಗೊಂಡಿವೆ. ಇಡೀ ಭಾರ-ತೀಯ ಪರಂಪರೆಯನ್ನು ಜಾನಪದ ಪ್ರಣಾಳಿಕೆಯಲ್ಲಿ ಹೊನಲುವರಿಸಿರುವ ಸೋಜಿಗ ವನ್ನು ಬೇಂದ್ರೆಯವರ ಕವಿತೆ ತೋರಿಕೊಡುತ್ತದೆ.

ಈ ಕವಿಯ ಮಾತೆಲ್ಲ ಮಂತ್ರ. ಅವರು ಕೊಡುವ ಒಂದೊಂದು ಅನುಭವವೂ ಸುಮೂರ್ತವಾದುದು, ಉತ್ಕಟವಾದುದು. ಅನುಭವವನ್ನು ಕುರಿತ ವ್ಯಾಖ್ಯಾನದಲ್ಲಿ ಬೇಂದ್ರೆಯವರು ಸಾಮಾನ್ಯವಾಗಿ ತೊಡಗುವುದಿಲ್ಲ; ಅನುಭವವನ್ನಷ್ಟೇ ಹರಳುಮಾಡಿ ಕೊಟ್ಟು ವಿರಮಿಸುವುದು ಅವರ ಸ್ವಭಾವ. ಆದ್ದರಿಂದಲೇ ಅವರ ಕವಿತೆಯ ಶಿಲ್ಪ ದುರ್ಬಲವಾಗದೆ, ಬಿರುಕುಗೊಳ್ಳದೆ ಸುಸ್ಥಾವಾಗಿ ಉಳಿಯುತ್ತದೆ; ತೀವ್ರ ಪರಿಣಾಮ ಕಾರಿಯಾಗುತ್ತದೆ.

ವಸ್ತುವೈವಿಧ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಬೇಂದ್ರೆಯವರ ಕೆಲವು ಪ್ರಾತಿನಿಧಿಕವೆನ್ನಬಹುದಾದ ಕವನಗಳನ್ನು ಪ್ರಕೃತ ಅನುಶೀಲನ ಮಾಡಬಹುದು. ಬೆಳಗು, ಗಂಗಾವತರಣ, ಹಕ್ಕಿ ಹಾರುತಿದೆ ನೋಡಿದಿರಾ, ಕನಸಿನೊಳಗೊಂದು ಕಣಸು, ಬುದ್ಧ, ಗಮುಗಮಾ ಗಮಾಡಸತಾವ ಮಲ್ಲಿಗಿ, ತುತ್ತಿನ ಚೀಲ, ನಾನು ಬಡವಿ, ಬಿಸಿಲುಗುದುರೆ, ಮೊಲೆ – ಈ ಹತ್ತು ಕವನಗಳು ಇಲ್ಲಿ ವಿವಕ್ಷಿತ.

೨

ಬೆಳಗನ್ನು ಹೊಸ ದೃಷಿಯಿಂದ ಚಿತ್ರಿಸಿದ ಒಂದು ಅಪೂರ್ವ ಕವನ 'ಬೆಳಗು'. ಪ್ರಭಾತದ ಪ್ರಶಾಂತಿ-ಪ್ರಸನ್ನತೆಗಳನ್ನೂ, ಕವಿಯ ತನ್ಮಯತೆಯನ್ನೂ ಕವನದ ಅನುದ್ವಿಗ್ನ ಮಂದ ಲಯವಿನ್ಯಾಸವೆ ವ್ಯಂಜಿಸುತ್ತದೆ. ಭಾಷೆ ಬಹಳ ಸರಳವಾಗಿ ತಿಳಿಯಾಗಿದೆ; ಮಹಾಪ್ರಾಣಾಕ್ಷರಗಳೇ ವಿರಳ. ವಾಗರ್ಥಗಳ ಸಾಮರಸ್ಯಕ್ಕೆ ಈ ಕವನವೊಂದು ಸಮೀಚಿನ ದೃಷ್ಟಾಂತ.

ಕವಿಗೆ ಬೆಳಗು ಶಾಂತರಸದ ಅವತಾರವಾಗಿ ಅನುಭೂತವಾಗುತ್ತದೆ.[1] ಆ ಅನುಭವ ಕೇವಲ ಇಂದ್ರಿಯ ಪರಿಮಿತವಾಗಿ ಉಳಿಯದೆ, ಸುಲಭವಾಗಿ, ಸಹಜವಾಗಿ ಅತೀಂದ್ರಿಯತೆಗೆ ಹೊರಳುತ್ತದೆ; ಬೆಳಗು ಬರಿಯ ಬೆಳಗಾಗದೆ, ಕೇವಲ ಒಂದು ಇಂದ್ರಿಯಗಮ್ಯವಾದ ನಿಸರ್ಗವ್ಯಾಪಾರ ವಿಶೇಷವಾಗದೆ Something divine

1. ಬೆಳಗು ತಪೋವನದಂತೆ ಕಂಡಿತೆಂದು ಹೇಳುವ ನಾಗಚಂದ್ರನ ಪದ್ಯವೊಂದು ನೆನಪಾಗುತ್ತದೆ; ಆದರ ಬಗೆ ಬೇರೆ.

ಆಗಿ ಪರಿಣಮಿಸುತ್ತದೆ. ಈ ಪರಿಣಮನ ಸಂವೇದನೆಯ ಹಂತದಲ್ಲಿ ಜರುಗುತ್ತದೆಯೆ ವಿನಾ ಬೌದ್ಧಿಕ ಕ್ರಿಯೆಯಾಗಿ ಅಲ್ಲ.

ಬೆಳಕು ಹರಿದು ಜಗವೆಲ್ಲ ತೊಯ್ದುದನ್ನು ಕವಿ ಪ್ರಾರಂಭದಲ್ಲಿ ಒಂದು ಗೃಹ-ರೂಪಕದಿಂದ ವರ್ಣಿಸುತ್ತಾರೆ. ಮೂಡಲಮನೆಯ ಬಾಗಿಲನ್ನು ಯಾರೋ ತೆರೆದು ಮುತ್ತಿನ ನೀರೆರಚಿದ್ದಾರೆ; ಅದೇ ಬೆಳಕಾಗಿ ಲೋಕವನ್ನು ತೊಯ್ಯಿಸಿದೆ. ಬೆಳಗಾಗ ಎದ್ದು ಬಾಗಿಲು ತೆರೆದು ನೀರು ಹಾಕುವ ಗರತಿಯ ಚಿತ್ರವೊಂದು ಇಲ್ಲಿ ಸೂಚಿತವಾಗುತ್ತದೆ.[1] ಬೆಳಕು ಹರಿಯುವ ಕ್ರಿಯೆ, ಅದರಿಂದ ಚೋದಿತವಾಗುವ ಗೃಹಕೃತ್ಯ ಎರಡೂ ಇಲ್ಲಿ ಅಭಿನ್ನವಾಗಿರುವುದನ್ನು ಗಮನಿಸಬಹುದು. ಬೆಳಗಿನ ಬಾಗಿಲನ್ನು ತೆರೆಯುತ್ತಲೇ ಕವಿ ಜನಜೀವನದ ಒಂದು ಪುಟವನ್ನೂ ತೆರೆದಿದ್ದಾರೆ. ಇಲ್ಲಿ ವಿವರಣೆಯಿಲ್ಲ, ಧ್ವನಿಯಿದೆ. ಇದು ಬೇಂದ್ರೆಯವರ ಕಲೆಯ ಜಾಯಮಾನ.

ಮುಂದೆ ಕವಿ ಬೆಳಗಿನ ವರ್ಣಮಯ, ಗಂಧಮಯ ಸ್ವರೂಪವನ್ನು ಚಿತ್ರ-ವತ್ತಾಗಿ ಅನುಕರಣ ಶಬ್ದಗಳ ಮೂಲಕ ನಿವೇದಿಸುತ್ತಾರೆ:

> ರತ್ನದ ರಸದ ಕಾರಂಜೀಯೂ
>   ಪುಟಪುಟನೇ ಪುಟಿದು
> ತಾನೇ–ಪುಟಪುಟನೇ ಪುಟಿದು
> ಮಘಮಘಿಸುವಾ ಮುಗಿದ ಮೊಗ್ಗೀ
>   ಪಟಪಟನೇ ಒಡೆದು
> ತಾನೇ–ಪಟಪಟನೇ ಒಡೆದು.

ಎಲೆಗಳ ಮೇಲೆ, ಹೂಗಳೊಳಗೆ ನೆಲಸಿದ ತುಷಾರಕಣಗಳು ಕವಿಗೆ 'ಅಮೃತದ ಬಿಂದು'ಗಳಾಗಿ ತೋರುತ್ತವೆ. "ಯಾರಿರಿಸಿರುವರು ಮುಗಿಲಿನ ಮೇಲಿಂದಿಲ್ಲಿಗೇ ತಂದು" ಎಂದು ಅವರು ವಿಸ್ಮಯಪಡುತ್ತಾರೆ. ಈ ಪ್ರಶ್ನಾತ್ಮಕ ವಿಸ್ಮಯ ಕವಿಗೆ ಬೇಕಾದದ್ದು; ಉತ್ತರಿಸುವುದು ಅವನ ಜವಾಬ್ದಾರಿಯಲ್ಲ. ಪ್ರಶ್ನೆ ಕೇಳಿದರೆ ಕವಿ; ಉತ್ತರ ಕೊಟ್ಟರೆ ತತ್ತ್ವಜ್ಞಾನಿ.

---

1. "ಬೆಳ್ಳನೆ ಬೆಳಗಾಗಿ ಬೆಳ್ಳಿ ಮೂಡಲವಾಗಿ ಒಳ್ಳೊಳ್ಳೆ ಮೀನು ಗರಿ ತೆಗೆದು ಅಡ್ಯಾವು ಗರತಿ ಗಂಗಮ್ಮ ನುಡಿಯಾಗ" ಎಂಬ ಜನಪದ ತ್ರಿಪದಿಯೂ ಗರತಿಗುಣದ ಸ್ಥಾಯಿ-ಯಲ್ಲೇ ಬೆಳಗನ್ನು ಕಂಡಿದೆ. ಬೇಂದ್ರೆಯವರ ಕವಿತೆ ಜನಪದ ಕಾವ್ಯದ ಗರತಿಸಂಮಿತ ದಿಂದ ಪ್ರಭಾವಿತ. ನಮ್ಮ ಇತ್ತೀಚಿನ ಕಾವ್ಯ ಮಾತ್ರ ಬೆಳಗನ್ನೂ ಕಾಪಿ-ದ ನಿಲುವಿ-ನಿಂದಲೇ ಅನುಭವಿಸುವ ವಿಕಾರಕ್ಕೆ ಪಕ್ಕಾಗಿದೆ.

ತಂಗಾಳಿಗೆ ಹೂಗಳು ಒಲೆಯುವುದು, ಪುಷ್ಪಸೌರಭವನ್ನು ಹೊತ್ತ ದುಂಬಿ-ಗಳು ಹಾರಾಡುವುದು—ಈ ಚಿತ್ರಗಳನ್ನು ಕವಿ ಕೊಡುವ ಮೋಡಿಯಿದು :

ತಂಗಾಳೀಯಾ ಕೈಯೊಳಗಿರಿಸೀ
ಎಸಳೀನಾ ಚವರಿ
ಹೂವಿನ-ಎಸಳೀನಾ ಚವರಿ
ಹಾರಿಸಿಬಿಟ್ಟರು ತುಂಬಿಯ ದಂಡು
ಮೈಯೆಲ್ಲಾ ಸವರಿ
ಗಂಧಾ-ಮೈಯೆಲ್ಲಾ ಸವರಿ.

ಒಂದೊಂದು ಮಾತೂ ಒಂದೊಂದು ದೃಶ್ಯವನ್ನು ಸ್ಫುಟವಾಗಿ ಕೊರೆದು ಮೂಡಿಸುತ್ತದೆ. ತಂಗಾಳಿಯ ಕೈಯಲ್ಲಿ ಚವರಿಯಿತ್ತವರು, ದುಂಬಿಯ ದಂಡನ್ನು ಹಾರಿಸಿದವರು ಯಾರೆಂಬುದನ್ನು ಕವಿ ಹೇಳುವುದಿಲ್ಲ; ಅದೇ ಇಲ್ಲಿನ ಸ್ವಾರಸ್ಯ. ಈ ಸೊಬಗು ಪೂರ್ತಿ ಈ ಲೋಕದ್ದಲ್ಲ, ಅನ್ಯಲೋಕದ ಕೈವಾಡ ಅದರಲ್ಲಿದೆ ಎನ್ನುವುದು ಕವಿಯ ಇಂಗಿತ.

ಎಲ್ಲೆಲ್ಲೂ ಹಕ್ಕಿಗಳ ಹಾಡು ತುಂಬಿರುವುದನ್ನು ಕವಿ ಒಂದು ಸೊಗಸಾದ ರೂಪಕದಿಂದ ತಿಳಿಸುತ್ತಾರೆ :

ಗಿಡಗಂಟಿಯಾ ಕೊರಳೊಳಗಿಂದ
ಹಕ್ಕಿಗಳ ಹಾಡು
ಹೊರಟಿತು-ಹಕ್ಕಿಗಳ ಹಾಡು

ಗಿಡಗಂಟೆಗಳು ಬೇರೆಯಲ್ಲ, ಹಕ್ಕಿಗಳು ಬೇರೆಯಲ್ಲ ಎಂಬ ಅದ್ವೈತಾನುಭವ ಇಲ್ಲಿದೆ. ಗಿಡಮರಗಳಲ್ಲಿ ಹುದುಗಿರುವ ಹಕ್ಕಿಗಳು ಕಾಣುವುದೇ ಇಲ್ಲ; ಅವುಗಳ ಉಲಿ ಮಾತ್ರ ಕೇಳಿಸುತ್ತದೆ. ಎಂತಲೇ ಅವುಗಳ ಹಾಡು ಗಿಡಗಂಟೆಗಳ ಹಾಡೇ ಆಗುತ್ತದೆ, ಕವಿಯ ಪಾಲಿಗೆ. ಇಲ್ಲಿ ಯಾವ ಚಮತ್ಕಾರವೂ ಇಲ್ಲ, ಸಹಜ ಸುಂದರವಾದ ಅನುಭೂತಿಯಿದೆ.

ಬೆಳಗಿನ ಈ ಎಲ್ಲ ವೈಭವದಲ್ಲಿ ಪಂಚೇಂದ್ರಿಗಳೂ ಪಾಲ್ಗೊಂಡು ತಲ್ಲೀನವಾಗುತ್ತವೆ; ಶರೀರ ಅದರಲ್ಲಿ ಒಂದಾಗುತ್ತದೆ:

ಕಂಡಿತು ಕಣ್ಣು ಸವಿದಿತು ನಾಲಗೆ
ಪಡೆದೀತೀ ದೇಹ
ಸ್ಪರ್ಶಾ-ಪಡೆದೀತೀ ದೇಹ.

ಕೇಳಿತು ಕಿವಿಯು ಮೂಸಿತು ಮೂಗು
ತನ್ಮಯವೀ ಗೇಹಾ
ದೇವರ-ದೀ ಮನಸಿನ ಗೇಹಾ.

ಆದರೆ ಬೆಳಗಿನ ಅನುಭವವೆಲ್ಲ ಇಷ್ಟಕ್ಕೆ ಮುಗಿದುಹೋಯಿತೆ ? "ಅರಿಯದು ಅಳವು, ತಿಳಿಯದು ಮನವು, ಕಾಣ್ಣದೋ ಬಣ್ಣಾ" ಎಂದು ಉದ್ಗರಿಸುತ್ತಾರೆ ಕವಿ. ಅದು ಇಂದ್ರಿಯಗಳಿಗೆ, ಮನಸ್ಸಿಗೆ ಸಂಪೂರ್ಣ ನಿಲುಕದು; ಆದರಾಚೆಗೆ ವ್ಯಾಪಿಸುತ್ತದೆ, ಅತೀತದ ಒಂದು ನಿಲುವಿನಲ್ಲಿ ಸಮ್ಮೋದ ಬೀರುತ್ತದೆ. "ಶಾಂತೀ ರಸವೇ ಪ್ರೀತೀಯಿಂದಾ ಮೈದೋರೀತಣ್ಣಾ" ಎನ್ನುತ್ತಾರೆ ಕವಿ; ಈ ನಿರ್ಣಯ ಅನವಶ್ಯಕವೆನಿಸುತ್ತದೆ. ಇಡೀ ಕವನವೇ ಶಾಂತದ ಸಮರ್ಥ ಅಭಿನಯವಾಗಿರು-ವಾಗ ವಾಚ್ಯವಾಗಿ ಅದನ್ನು ಹೇಳಬೇಕಿತ್ತೆ ? ಕಡೆಗೆ ಕವಿ ಅಂದುಕೊಳ್ಳುತ್ತಾರೆ: "ಇದು ಬರಿ ಬೆಳಗಲ್ಲೋ ಅಣ್ಣಾ". ಇದು ಬರಿಯ ಬೆಳಗಲ್ಲ, ಅದನ್ನು ಮೀರಿದ್ದು. ಆದರೆ ಅದು ಯಾವುದು ಎಂಬುದನ್ನು ಕವಿ ಹೇಳಿಲ್ಲ; ಹೇಳುವುದು ಬಹುಶಃ ಸಾಧ್ಯ ವಿಲ್ಲ. ಈ ಅನುಕ್ತಿಯಲ್ಲೇ ಕವನದ ಔಚಿತ್ಯ, ಅರ್ಥವಂತಿಕೆ ಇರತಕ್ಕದ್ದು.

ಬೆಳಗಿನ ಲೌಕಿಕ, ಆಧ್ಯಾತ್ಮಿಕ ಸ್ತರಗಳೆರಡನ್ನೂ ಪರಸ್ಪರ ಅವಿರುದ್ಧವಾದ ರೀತಿಯಲ್ಲಿ, ಈ ಕವನ ಆದಿಯಿಂದ ಅಂತ್ಯದವರೆಗೆ ಮೈಗೂಡಿಸಿಕೊಂಡಿರುವ ಮಾಟ ಬೆರಗುಗೊಳಿಸುವಂಥದು.

ಪೌರಾಣಿಕ ಪ್ರತಿಮೆಯೊಂದರ ಮೂಲಕ ದೈವೀಶಕ್ತಿಯನ್ನು ಆಹ್ವಾನಿಸುವ ಯಾಚನೆಯ ಭಂಗಿಯಿದೆ 'ಗಂಗಾವತರಣ' ಕವನದಲ್ಲಿ. ಮಗು ತಾಯನ್ನು ಆರ್ತತೆಯಿಂದ, ಆವೇಶದಿಂದ ಕರೆಯುವ ಪರಿಯಿದು. ಬೇಂದ್ರೆಯವರಲ್ಲಿ ಮಾತೃ ಭಾವ, ವಾತ್ಸಲ್ಯಭಾವಗಳನ್ನು ವಿಶೇಷವಾಗಿ ನೋಡುತ್ತೇವೆ; ಇದನ್ನು ಅವರ ಕಾವ್ಯನಾಮವೇ ಸಂಕೇತಿಸುತ್ತದೆ. 'ಗಂಗಾವತರಣ'ವೂ ಈ ಮಾತೃಭಾವಕ್ಕೆ ಸಾಕ್ಷಿ. ಕವಿ ಗಂಗೆಯನ್ನು ಆಮಂತ್ರಿಸುವುದು ವೈಯಕ್ತಿಕ ಉದ್ಧಾರಕ್ಕಾಗಿ ಅಲ್ಲ; ಸಮಷ್ಟಿಯ ಉದ್ಧಾರಕ್ಕಾಗಿ. ಜನತೆಯ ಒಳಿತಿನ ಬಗ್ಗೆ ಅವರಿಗಿರುವ ಕಳಕಳಿ ಇದರಿಂದ ವಿದಿತವಾಗುತ್ತದೆ.

ನಾದಲೀಲೆ ಬೇಂದ್ರೆಯವರ ಕಾವ್ಯದ ಒಂದು ವೈಶಿಷ್ಟ್ಯ. ಇದು ಎಷ್ಟೋ ವೇಳೆ ಅತಿರೇಕಿಸಿ ಅರ್ಥವನ್ನು ಹಿಂದೆ ಹಾಕುವುದುಂಟು, ಅಸ್ಪಷ್ಟತೆಗೆ ಎಡೆಗೊಡು-ವುದುಂಟು. 'ಗಂಗಾವತರಣ'ದಲ್ಲಿ ಕೆಲವು ಕಡೆ ಹಾಗಾಗಿರುವುದನ್ನು ನೋಡ-ಬಹುದು:

ಹರನ ಜಡೆಯಿಂದ
ಹರಿಯ ಅಡಿಯಿಂದ

ಖುಷಿಯ ತೊಡೆಯಿಂದ
ನುಸುಳಿ ಬಾ

ಎನ್ನುವಲ್ಲಿ ಕಿವಿಗೆ ತುಷ್ಟಿ ಕೊಡುವ ಗುಣವಿದ್ದರೂ 'ಖುಷಿಯ ತೊಡೆಯಿಂದ' ಎನ್ನುವ ಮಾತು ಕೇವಲ ಪ್ರಾಸಾರ್ಥವಾಗಿ ಬಂದುದೆಂಬುದು ಸ್ಪಷ್ಟ.

ದಯೆಯಿರದ ದೀನ
ಹರೆಯುಳಿದ ಹೀನ
ನೀರಿರದ ಮೀನ
ಕರೆಕರೆವ ಬಾ

ಎನ್ನುವಲ್ಲಿ 'ಹರೆಯುಳಿದ ಹೀನ' ಎನ್ನುವುದೂ ಅಷ್ಟೇ. ('ನೀರಿರದ ಮೀನ' ಒಳ್ಳೆಯ ರೂಪಕ). ಆದರೆ ಈ ಭಾಗವನ್ನು ನೋಡಿದರೆ ನಾದವೈಭವ ಹೇಗೆ ಸಾರ್ಥಕವಾಗಿದೆ-ಯೆಂಬುದು ಗೊತ್ತಾಗುತ್ತದೆ:

ಸುರಸ್ವಪ್ನವಿದ್ದ ಪ್ರತಿಬಿಂಬಬಿದ್ದ
ಉದ್ಬುದ್ಧ ಶುದ್ಧ ನೀರೇ
ಎಚ್ಚತ್ತು ಎದ್ದ ಆಕಾಶದುದ್ದ
ಧರೆಗಿಳಿಯಲಿದ್ದ ಧೀರೇ
ಸಿರಿವಾರಿಜಾತ ವರ ಪಾರಿಜಾತ
ತಾರಾ-ಕುಸುಮದಿಂದೆ
ವೃಂದಾರವಂದ್ಯೆ ಮಂದಾರಗಂಧೆ
ನೀನೇ ತಾಯಿ ತಂದೆ.
ರಸಪೂರಜನ್ಯೆ ನೀನಲ್ಲ ಅನ್ಯೆ
ಸಚ್ಚಿದಾನಂದ ಕನ್ಯೆ
ಬಂದಾರೆ ಬಾರೆ ಒಂದಾರೆ ಸಾರೆ
ಕಣ್ ಧಾರೆ ತಡೆವರೇನೇ ?

ಕವಿಯ ಭಾವಾವೇಗ, ತಾದಾತ್ಮ್ಯಗಳು ಇಲ್ಲಿ ಚೆನ್ನಾಗಿ ವ್ಯಕ್ತವಾಗುತ್ತವೆ. ಹೀಗೆಯೇ,

ಕರು ಕಂಡ ಕರುಳೆ
ಮನ ಉಂಡ ಮರುಳೆ

ಉದ್ದಂಡ ಅರುಳಿ
ಸುಳಿಸುಳಿದು ಬಾ

ಎಂಬಲ್ಲಿಯೂ ವಾಗರ್ಥ ನಾದಗಳ ಸಮನ್ವಯವಿದೆ. 'ಕರು ಕಂಡ ಕರುಳೆ' ಎನ್ನು-ವಲ್ಲಿ ವಾತ್ಸಲ್ಯ, 'ಮನ ಉಂಡ ಮರುಳೆ' ಎನ್ನುವಲ್ಲಿ ಆ ಶಕ್ತಿಯ ಮಾದಕ ಗುಣ ಸೊಗಸಾಗಿ, ಸಂಕ್ಷಿಪ್ತವಾಗಿ ಸೂಚಿತವಾಗಿವೆ.

ನಿನಗೆ ಪೊಡಮಡುವೆ
ನಿನ್ನನುಡುತೊಡುವೆ
ಏಕೆ ಎಡೆತಡೆವೆ

ಎಂಬ ಸಾಲುಗಳಲ್ಲಿಯೂ ಪ್ರಾಸಗಳು ಭಾವೋತ್ಕಟತೆಗೆ ಪೋಷಕವಾಗಿವೆ. 'ನಿನ್ನ-ನುಡುತೊಡುವೆ' ಎನ್ನುವಲ್ಲಿ ಭಕ್ತಿಯ, ಅನನ್ಯ ಶರಣಾಗತಿ ಭಾವದ ಸಾಂದ್ರತೆಯಿದೆ. "ಕಣ್ಣ ಕಣ ತೊಳೆಸಿ, ಉಸಿರ ಎಳೆ ಎಳಸಿ, ನುಡಿಯ ಸಸಿ ಮೊಳೆಸಿ, ಹಿಗ್ಗಿ ಬಾ" ಎಂಬ ಉಕ್ತಿಗಳೂ ಸುಂದರವಾಗಿವೆ.

"ಸತ್ತ ಜನರನ್ನು ಎತ್ತ ಬಾ" ಎಂದು ಮೊರೆಯಿಟ್ಟಿದ್ದಾರೆ ಕವಿ. ಹಿಂದೆ ಗಂಗೆ ಸಗರಪುತ್ರರನ್ನು ಉದ್ಧರಿಸುವುದಕ್ಕಾಗಿ ಅವತರಿಸಿದಳು; ಇಂದು, ಬದುಕಿಯೂ ಸತ್ತಂತಿರುವ ಜನತೆಯನ್ನು ಉದ್ಧರಿಸಲು ಆಕೆ ಬರಬೇಕಾಗಿದೆ. ಆದರೆ "ಅವತಾರ ವೆಂದೆ, ಎಂದಾರೆ ತಾಯಿ, ಈ ಅಧಃಪಾತವನ್ನೇ" ಎಂಬ ಮಾತು ಕವನದ ಒಟ್ಟು ಧೋರಣೆಗೆ ಹೊರಚ್ಚಾಗಿ ನಿಲ್ಲುತ್ತದೆ. ಒಟ್ಟಿನಲ್ಲಿ ಭಗವತ್ಕಾರುಣ್ಯದ ಆವಾಹನೆ-ಗೊಂದು ಶಕ್ತವಾದ ಪ್ರತಿಮೆ 'ಗಂಗಾವತರಣ'; ಆದರೆ ನಾದಪರಿಣಾಮಕ್ಕಾಗಿ ಅದನ್ನು ಲಂಬಿಸಿದ್ದರಿಂದ ತುಸು ಜಾಳಾಗಿದೆಯೆನಿಸುತ್ತದೆ.

'ಹಕ್ಕಿ ಹಾರುತಿದೆ ನೋಡಿದಿರಾ' ಒಂದು ಅದ್ಭುತವಾದ ಕವನ. ಬೇಂದ್ರೆ-ಯವರ ಕಾವ್ಯದಲ್ಲಿ ಕಂಡುಬರುವ ನಾಟಕೀಯತೆ ಇಲ್ಲಿ ಪ್ರಭಾವಶಾಲಿಯಾಗಿ ಸಹೃದಯರನ್ನು ವಶೀಕರಿಸುತ್ತದೆ[1]. ಅಮೂರ್ತವಾದ ಕಾಲವನ್ನು ಕವಿ ಹಕ್ಕಿಯ ರೂಪದಲ್ಲಿ ಸುಮೂರ್ತಗೊಳಿಸಿ ಅದಕ್ಕೆ ದೃಗ್ಗೋಚರತ್ವವಿತ್ತಿದ್ದಾರೆ. ಆದರೆ ಅದು ಸಾಮಾನ್ಯ ಪಕ್ಷಿಯಲ್ಲ; ವಿರಾಟ್ ಪಕ್ಷಿ. ಅದರ ಮಹತ್ತು ಬೃಹತ್ತುಗಳನ್ನೂ, ಕ್ರಿಯಾ ಪರಂಪರೆಯನ್ನೂ ರೋಮಾಂಚಕಾರಿಯಾಗಿ ನಿರೂಪಿಸಲಾಗಿದೆ.

---

1. ಬೇಂದ್ರೆಯವರೊಮ್ಮೆ ಸಭೆಯೊಂದರಲ್ಲಿ ಈ ಕವನವನ್ನು ವಾಚಿಸಿದಾಗ ಜನ ಮುಗ್ಧರಾಗಿ ಆಕಾಶದತ್ತ ನೋಡಿದರಂತೆ.

ಇರುಳಿರುಳಳಿದು ದಿನದಿನ ಬೆಳಗೆ
ಸುತ್ತಮುತ್ತಲೂ ಮೇಲಕೆ ಕೆಳಗೆ
ಗಾವುದ ಗಾವುದ ಗಾವುದ ಮುಂದೆ
ಎವೆ ತೆರೆದಿಕ್ಕುವ ಹೊತ್ತಿನ ಒಳಗೆ
ಹಕ್ಕಿ ಹಾರುತಿದೆ ನೋಡಿದಿರಾ ?

ಕಣ್ಣುಮುಚ್ಚಿ ತೆರೆಯುವುದರೊಳಗೆ ವ್ಯಕ್ತಿಜೀವನದಲ್ಲಿ, ಲೋಕಜೀವನದಲ್ಲಿ ಮಹದ್ಘಟನೆಗಳು—ಇತಿಹಾಸದ ದಿಕ್ಕನ್ನೇ ಬದಲಿಸುವಂಥವು—ನಡೆದುಹೋಗಬಹುದು; ಅದನ್ನು ಕವಿ ಈ ಸಾಲುಗಳಲ್ಲಿ ಸೂಚಿಸಿರುವಂತಿದೆ. ಈ ಕಾಲಪಕ್ಷಿಗೆ ಕರಿ-ನರೆ ಬಣ್ಣದ ಪುಚ್ಚಗಳೂ, ಬಣ್ಣಬಣ್ಣದ ಗರಿಗಳೂ ಉಂಟಂತೆ. ಕರಿ-ನರೆ ಬಣ್ಣದ ಪುಚ್ಚಗಳು ಹಗಲು ರಾತ್ರಿಗಳನ್ನೂ, ಬಣ್ಣಬಣ್ಣದ ಗರಿಗಳು ಕಾಲ ತರುವ ವೈವಿಧ್ಯಮಯ ಅನುಭವಗಳನ್ನೂ ಸಂಕೇತಿಸಬಹುದು.

ಅದು ನೀಲಮೇಘ ವರ್ಣದ ಪಕ್ಷಿ; ಅದರ ರೆಕ್ಕೆಗಳು ಮುಗಿಲಿಗೆ ತಾಗುತ್ತವೆ; ನಕ್ಷತ್ರಮಾಲಿಕೆಯನ್ನೇ ಅದು ಧರಿಸಿದೆ; ಸೂರ್ಯಚಂದ್ರರೇ ಅದರ ಕಣ್ಣುಗಳು—ಈ ಭವ್ಯ ಚಿತ್ರವನ್ನು ಕೊಡುತ್ತಾರೆ ಕವಿ. ಅನಂತತೆಯನ್ನು ಸಂಕೇತಿಸುತ್ತದೆ ಅದರ ನೀಲವರ್ಣ. ಕಾಲಪಕ್ಷಿಯ ವ್ಯಾಪಾರಗಳನ್ನು ಮುಂದೆ ವರ್ಣಿಸುತ್ತಾರೆ ಕವಿ:

ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ
ಮಂಡಲ-ಗಿಂಡಲಗಳ ಗಡ ಮುಕ್ಕಿ
ತೇಲಿಸಿ ಮುಳುಗಿಸಿ ಖಂಡ-ಖಂಡಗಳ
ಸಾರ್ವಭೌಮರಾ ನೆತ್ತಿಯ ಕುಕ್ಕಿ
ಹಕ್ಕಿ ಹಾರುತಿದೆ ನೋಡಿದಿರಾ ?

'ತೆನೆ ಒಕ್ಕಿ' ಎಂಬ ಮಾತಿನ ಕಸುವನ್ನು ಪರಿಭಾವಿಸಬೇಕು. ಒಂದೊಂದು ಸಾಮ್ರಾಜ್ಯವೂ ಕಾಲಪಕ್ಷಿಗೆ ಒಂದು ತೆನೆಯಷ್ಟೆ; ಅಂಥ ತೆನೆಗಳ ಮೆದೆಮೆದೆಗಳನ್ನೇ ಅದು ಒಕ್ಕಿದೆ. 'ನೆತ್ತಿಯ ಕುಕ್ಕಿ' ಎಂಬ ಮಾತೂ ಎಷ್ಟು ಶಕ್ತಿವತ್ತಾಗಿದೆ! ಸೌರ್ವಭೌಮರು ಮೂರ್ಧಾಭಿಷಿಕ್ತರಾದ್ದರಿಂದ ಅವರ ನೆತ್ತಿಯನ್ನೇ ಕುಕ್ಕಿ ಕಿರೀಟಗಳನ್ನುರುಳಿಸಿದೆ ಕಾಲಪಕ್ಷಿ. "ತೇಲಿಸಿ ಮುಳುಗಿಸಿ ಖಂಡ-ಖಂಡಗಳ" ಎನ್ನುವಲ್ಲಿ ಕವಿದೃಷ್ಟಿಗೆ ವಿಜ್ಞಾನದ ಬೆಂಬಲವಿದೆ. ಭೂಮಿಯ ಇತಿಹಾಸವನ್ನು ನೋಡಿದರೆ ಒಂದು ಕಾಲದಲ್ಲಿ ಸಾಗರಗಳಿದ್ದ ಕಡೆ ಪರ್ವತಗಳು, ದ್ವೀಪಗಳು ತಲೆಯೆತ್ತಿವೆ; ನೆಲವಿದ್ದ ಕಡೆ ಸಾಗರಗಳು ಉಕ್ಕಿವೆ. ಇವೆಲ್ಲ ಕಾಲಪಕ್ಷಿಯ ಕೆಲಸ. ಮುಂದಿನ ಪಂಕ್ತಿಗಳು ಸಾಂಪ್ರತ ಯುಗಧರ್ಮವನ್ನು ಪ್ರಸ್ತಾಪಿಸುತ್ತವೆ :

ಯುಗ-ಯುಗಗಳ ಹಣೆಬರಹವ ಒರಸಿ
ಮನ್ವಂತರಗಳ ಭಾಗ್ಯವ ತೆರೆಸಿ
ಹೊಸಗಾಲದ ಹಸುಮಕ್ಕಳ ಹರಸಿ
ಹಕ್ಕಿ ಹಾರುತಿದೆ ನೋಡಿದಿರಾ ?

ಮನನಯೋಗ್ಯವಾದ ಮಾತುಗಳಿವು. ಕಾಲಪಕ್ಷಿ ಅನೂಚಾನವಾಗಿ ಬಂದ ಹಿಂದಿನ ಯುಗಗಳ ಹಣೆಬರಹವನ್ನು ತೊಡೆದಿದೆ; ಇಂದಿನ ಯುಗದವರಿಗೆ ಅದು ಅನುಕೂಲ ವಾಗಿದೆ. ನಿರಂಕುಶರಾದ ಆಳರಸರ ಕಾಲ ಆಗಿ ಹೋಯಿತು; ಇದು ಸ್ವಾತಂತ್ರ್ಯ-ಪ್ರಜಾಪ್ರಭುತ್ವಗಳ ಕಾಲ, ಸರ್ವೋದಯ ಯುಗ. ಈ ಮನ್ವಂತರದ ಭಾಗ್ಯ ನಿಜವಾಗಿಯೂ ತೆರೆದಿದೆ, ಶಾಪಮುಕ್ತವಾಗಿದೆ. ಇದೂ ಕಾಲಪಕ್ಷಿಯ ಸಾಧನೆ.

ಕವಿ ಪ್ರವಾದಿಯಂತೆ ಮತ್ತೂ ಹೇಳುತ್ತಾರೆ, ಕಾಲಪಕ್ಷಿ, ಶುಕ್ರ, ಚಂದ್ರ, ಮಂಗಳ ಮುಂತಾದ ಅನ್ಯಗ್ರಹಗಳಲ್ಲೆಲ್ಲ ವಿಹರಿಸಲಿದೆಯೆಂದು. ಈ ಕಾಲಜ್ಞಾನ ಇಂದು ದಿಟವಾಗುತ್ತಿದೆ. ಚಂದ್ರಮಂಡಲವನ್ನು ಮಾನವ ಗೆದ್ದಾಯಿತು; ಇತರ ಗ್ರಹಗಳನ್ನು ಮುಟ್ಟಲು ಅವನ ಸಿದ್ಧತೆ ನಡೆದಿದೆ; ಆ ದಿನ ದೂರವಿಲ್ಲ.

ಏನಿರಬಹುದು ಈ ಕಾಲಪಕ್ಷಿಯ ಯೋಜನೆ? ಕವಿ ಊಹಿಸುತ್ತಾರೆ:

ಮುಟ್ಟಿದೆ ದಿಗ್ಮಂಡಲಗಳ ಅಂಚ
ಆಚೆಗೆ ಚಾಚಿದೆ ತನ್ನಯ ಚುಂಚ
ಬ್ರಹ್ಮಾಂಡಗಳನು ಒಡೆಯಲು ಎಂದೊ
ಬಲ್ಲರು ಯಾರಾ ಹಾಕಿದ ಹೊಂಚ
ಹಕ್ಕಿ ಹಾರುತಿದೆ ನೋಡಿದಿರಾ ?

ಇದು ವಿಜ್ಞಾನಕ್ಕೆ ಸಮ್ಮತವಾದ ಭಾವವೇ. ಮುಂದೆ ಎಂದೋ ಒಂದು ದಿನ ಈ ಜಗತ್ತು ನಾಶವಾಗುವ ಸಂಭವವಿದೆ ಎನ್ನುತ್ತದಲ್ಲವೆ ವಿಜ್ಞಾನ?

"ಸರ್ವಂ ಯಸ್ಯ ವಶಾದಗಾತ್ ಸ್ಮೃತಿಪಥಂ ಕಾಲಾಯ ತಸ್ಮೈ ನಮಃ" ಎಂದಿದ್ದಾನೆ ಭರ್ತೃಹರಿ. ಅದು ಸುಂದರವಾದ ಒಂದು ಹೇಳಿಕೆಯಷ್ಟೆ. ಬೇಂದ್ರೆಯವರ ಕವನ ಅದಕ್ಕೆ ಬರೆದ ಜ್ಯೋತಿರ್ಮಯ ಕಾವ್ಯಭಾಷ್ಯದಂತಿದೆ. ಭರ್ತೃ-ಹರಿ ಭೂತವನ್ನಷ್ಟೆ ಕುರಿತು ಹೇಳಿದರೆ, ಬೇಂದ್ರೆಯವರ ದರ್ಶನ ವರ್ತಮಾನವನ್ನು ಸ್ಪರ್ಶಿಸಿ, ಭವಿಷ್ಯಗ್ರಾಸಿಯಾಗಿದೆ. ಒಟ್ಟಿನಲ್ಲಿ ವಿಜ್ಞಾನವಿರುದ್ಧವಾಗದ ಕಲ್ಪನೆಯ ಭೂಮತೆ 'ಹಕ್ಕಿ ಹಾರುತಿದೆ ನೋಡಿದಿರಾ' ಕವನದಲ್ಲಿ ನಿದರ್ಶಿತವಾಗಿದೆ.

"ಈಗಿನ ಕನ್ನಡನಾಡಿನ ಮತ್ತು ಕನ್ನಡಿಗರ ಸ್ಥಿತಿಯ ಚಿತ್ರ"ವನ್ನು ತಾಯಿ-

ಮಕ್ಕಳ ಸಂವಾದದ ರೂಪದಲ್ಲಿ ಕೊಡುತ್ತದೆ– 'ಕನಸಿನೊಳಗೊಂದು ಕಣಸು'. ಕನ್ನಡತಾಯ ದುರವಸ್ಥೆಯನ್ನು ಬಹಳ ಮಾರ್ಮಿಕವಾಗಿ ನಿರವಿಸುವ ಈ ಪದ್ಯ ಅವಳೊಡ್ಡುವ ರುದ್ರಭಯಂಕರವಾದ ಸವಾಲಿನಲ್ಲಿ ಮುಗಿಯುವುದು ಯುಕ್ತ-ವಾಗಿದೆ. ಬೇಂದ್ರೆಯವರ ಅರ್ಥಪೂರ್ಣವಾದ ವಾಕ್‌ಚಮತ್ಕಾರ ಇಲ್ಲಿ ಉದ್ದಕ್ಕೂ ಕುಡಿಪಸರಿದಿದೆ. ಕೆಲವು ಭಾಗಗಳನ್ನು ನೋಡಿದರೆ ಸಾಕು :

"ಬೇಸರದ ದನಿಯೇಕೆ ಹೆಸರ ಹೇಳಲ್ಲ."
"ಹೆಸರಾಗಿಯೂ ಕೂಡ ಹೇಳ ಹೆಸರಿಲ್ಲ."
"ನೀನಾರ ಮನೆಯವಳು ಮುತ್ತೈದೆ ಹೇಳು."
"ನಾನಾರ ಮನೆಯವಳೊ ಬಯಲನ್ನೆ ಕೇಳು."
"ಇರುವರೇ ಇದ್ದರೇ ಮಕ್ಕಳೆಂಬವರು ?"
"ಇರುವರೆಂದರು ಕೂಡ ಯಾರು ನಂಬುವರು ?"
"ನಿನ್ನ ಮಾತಿನಲಿಹುದು ಒಡಪಿನಂದ !"
"ನನ್ನ ಹತ್ತಿರದೊಂದೆ ಉಳಿದಿಹುದು ಕಂದ."
"ಯಾವುದಾದರು ನಾಡದೇವಿಯೇ ನೀನು ?"
"ಭಾವುಕರ ಕಂಗಳಿಗೆ ದೇವಿಯೇ ನಾನು."

ಕನ್ನಡಿಗರನ್ನು ಕುರಿತ ವಿಡಂಬನ ಎಷ್ಟು ತೀಕ್ಷ್ಣತಮವಾಗಿ ಬಂದಿದೆ! ಕನ್ನಡಾಂಬೆ ಏನೋ ಬೇಡ ಬಂದಿದ್ದಾಳೆ. ಮೊದಮೊದಲು ಮಗ ತಾಯಿಗೆ ಮಾತು ಕೊಡಲು ಹಿಂಜರಿಯುತ್ತಾನೆ. ಕಡೆಗೆ ಅವಳ ನುಡಿಗಳಿಂದ ತುಸು ಹುರುಪುಗೊಂಡು ಅರೆಮನಸ್ಸಿನಿಂದಲೇ " ಚಂಡಿ ಚಾಮುಂಡಿ ಪೇಳ್ ಬೇಕಾದುದೇನು ? " ಎಂದು ಕೇಳುತ್ತಾನೆ. ಆಗ ಸ್ಫೋಟಿಸುವ ಉತ್ತರ ತೀರ ಅನಿರೀಕ್ಷಿತವಾದದ್ದು, ಸರ್ವಾ-ರ್ಪಣವನ್ನು ಬಯಸತಕ್ಕದ್ದು; "ಗಂಡುಸಾದರೆ ನಿನ್ನ ಬಲಿಗೊಡುವೆಯೇನು ? " ಈ ಸವಾಲಿಗೆ ಮಗ ಉತ್ತರಿಸುವುದಿಲ್ಲ; ಆತ್ಮತ್ಯಾಗಕ್ಕೆ ಅವನು ಸಿದ್ಧನಿಲ್ಲವೆಂಬು-ದನ್ನು ಇದು ಸೂಚಿಸುತ್ತದೆ. ತಾಯ ಸವಾಲನ್ನು ಮಕ್ಕಳು ಸ್ವೀಕರಿಸುವ ತನಕ ಅವಳಿಗೆ ದುಃಖದಿಂದ ಬಿಡುಗಡೆ ಹೇಗೆ ?

ನಾಡು-ನುಡಿಗಳ ಸ್ಥಿತಿಗತಿಗಳನ್ನು ವಿಶಿಷ್ಟವಾದ ತಂತ್ರದ ಮೂಲಕ ಕೆಲವೇ ಮಾತುಗಳಲ್ಲಿ ಯಶಸ್ವಿಯಾಗಿ ಹಿಡಿದಿಟ್ಟಿದ್ದಾರೆ ಕವಿ.

'ಬುದ್ಧ' ಆ ಮಹಾತ್ಮನನ್ನು ಕುರಿತ ಒಂದು ಶ್ರೇಷ್ಠ ಕವನ. ಅದರ ಮೊದಲ ಎರಡು ಸಾಲುಗಳು ಮೇಲುನೋಟಕ್ಕೆ ಕೇವಲ ಪ್ರಾಸಬದ್ಧವಾಗಿ, ಹಗುರವಾಗಿ ಕಾಣಬಹುದು; ಆದರೆ ವಾಸ್ತವವಾಗಿ ಧ್ವನಿಪರಂಪರೆಯನ್ನು ತಾಳಿಕೊಂಡಿವೆ :

ಬುದ್ಧ, ಬುದ್ಧ—
ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ.

ರಾತ್ರಿ ಹೊತ್ತು ಎಲ್ಲರೂ ನಿದ್ರಿಸುತ್ತಿದ್ದಾಗ ಬುದ್ಧ ರಾಜ್ಯತ್ಯಾಗ ಮಾಡಿ ಹೊರಟ ಚಾರಿತ್ರಿಕಾಂಶವನ್ನು ಈ ಮಾತುಗಳು ಬಾಹ್ಯಸ್ತರದಲ್ಲಿ ತಿಳಿಸುತ್ತವೆ. ಲೋಕವೆಲ್ಲ ಅಜ್ಞಾನ ನಿದ್ರೆಯಲ್ಲಿ ಕೆಡೆದಿದ್ದಾಗ ಇವನೊಬ್ಬ ಜಾಗೃತನಾಗಿ, ಜ್ಞಾನಾನ್ವೇಷಕ ನಾಗಿ ಹೊರಟನೆಂಬುದು ಇದರ ಧ್ವನಿ. ಅಷ್ಟೇ ಅಲ್ಲ, 'ಮಲಗು' ಎಂಬ ಮಾತು ಲೈಂಗಿಕ ಭೋಗವನ್ನು ಸೂಚಿಸುವಂಥದು. ಲೋಕದ ಗಂಡು-ಹೆಣ್ಣುಗಳೆಲ್ಲ ಪರ-ಸ್ಪರ ಅಪ್ಪುಗೆಯಲ್ಲಿ ಸುಖಮಗ್ನರಾಗಿದ್ದಾಗ ಇವನೊಬ್ಬ ಅದನ್ನು ಧಿಕ್ಕರಿಸಿ ನಡೆದ ಎಂದೂ ಅರ್ಥವಾಗುತ್ತದೆ. ಬುದ್ಧನ ಅಧ್ಯಾತ್ಮದಾಹಕ್ಕೆ ಉಳಿದುದೆಲ್ಲ ಇಂಧನ-ವಾದುದನ್ನು ಈ ಸಾಲುಗಳು ಬಣ್ಣಿಸುತ್ತವೆ :

ಮಡದಿ ಮಗು ಮನೆ-ಮಾರು ರಾಜ್ಯ-ಗೀಜ್ಯ
ಹೊತ್ತಿರುವ ಉರಿಯಲ್ಲಿ ಆಯಿತಾಜ್ಯ
ಹಿಂದೆ ಬಿದ್ದುವು ಎಲ್ಲೊ ಕುದುರೆ ಕಾಲಾಳು
ಬಿಚ್ಚಿ ಉದಿರಿತು ಎಲ್ಲೊ ಮನದ ಬಾಳು
ಹೊರಟ ಹೊರಟೇ ಹೊರಟ, ಹೊರಟನೆತ್ತೋ
ಸಾಹಸಿಯ ಗೊತ್ತುಗುರಿ ಅವಗು ಗೊತ್ತೋ !

ಮನೆ-ಮಾರು, ರಾಜ್ಯ-ಗೀಜ್ಯ ಎಂಬ ಮಾತುಗಳಲ್ಲಿ ತಿರಸ್ಕಾರ ವ್ಯಂಗ್ಯವಾಗಿದೆ. ಕುದುರೆ, ಕಾಲಾಳುಗಳು ರಾಜ್ಯವೈಭವವನ್ನು ಸಂಕೇತಿಸುತ್ತವೆ. ಸಂಸಾರ, ಸಾಮ್ರಾಜ್ಯ ಎರಡನ್ನೂ ತ್ಯಜಿಸಿ ನಡೆದ ಬುದ್ಧ. "ಬಿಚ್ಚಿ ಉದುರಿತು ಎಲ್ಲೊ ಮನದ ಬಾಳು" ಎಂಬುದು ತುಂಬ ಸೊಗಸಾದ ಅಭಿವ್ಯಕ್ತಿ. ಅವನ ಮನದ ಬಾಳಿ ನಲ್ಲಿ-ನಿಕೇತನ ಪ್ರಜ್ಞೆಯಲ್ಲಿ-ಮೊದಲು ಗಂಟು (Complex) ಗಳಿದ್ದುವು ಎಂಬು ದನ್ನು 'ಬಿಚ್ಚಿ' ಎಂಬುದು ಧ್ವನಿಸುತ್ತದೆ. ಅವನ ಚಿತ್ತ ಅಹಂಕಾರ, ಮಮಕಾರ ಗಳ ಬೀಡಾಗಿತ್ತು. ಈಗ ಅವೆಲ್ಲ ಜಗುಳಿದುವು; ಈರ್ಷಣೆ ನಿಂತು ಮನಸ್ಸಿಗೆ ಏಕ-ಮುಖತೆ, ಏಕನಿಷ್ಠೆ ಬಂತು. ಆದ್ದರಿಂದಲೇ ಅವನು ತಿರುಗಿ ನೋಡದೆ "ಹೊರಟ ಹೊರಟೇ ಹೊರಟ."

ಮುಂದೆ ಬುದ್ಧ ಅರಿಷಡ್ವರ್ಗವನ್ನು ಗೆದ್ದು ಏರಿದ ಎತ್ತರ ಈ ಭಾಗದಲ್ಲಿ ಚಿತ್ರಣಗೊಂಡಿದೆ :

ಕಾಮಕ್ರೋಧಪ ದಾಟಿ, ಮದ ಮತ್ಸರವ ತುಳಿದು
ಮೋಹ ಲೋಭವ ಮೆಟ್ಟಿ ಅಡಿ ಕಿತ್ತಿ ಇಟ್ಟು,

ಇದೊ ತಗ್ಗು, ಅದೊ ಗುಡ್ಡ, ಅಗೊ ಮಲೆಯು ಬಿಟ್ಟ
ನೆಲ ತೆಳಗೆ ಬಿಟ್ಟ

ಕಾಮಕ್ರೋಧಾದಿಗಳನ್ನು ಪಟ್ಟ ಮಾಡಿದ್ದು ವಾಚ್ಯವಾಯಿತೆನಿಸುತ್ತದೆ. ಕಡೆಗೆ ಬುದ್ಧ ಪಡೆದುಕೊಂಡ ಅನಿರ್ವಚನೀಯವಾದ ಸಿದ್ಧಿಯನ್ನು ಕವಿ ಮಾತಿನಹಿಡಿತ-ಕ್ಕೊಳಪಡಿಸಲು ಯತ್ನಿಸುತ್ತಾರೆ :

ಏರಿದೇರಿದನೇರಿ ಗಾಳಿಗುದುರೆ ಸವಾರಿ
ಚಂದ್ರಕಿರಣವ ಮೀರಿ ಸೂರ್ಯ ಸೇರಿ
ಬೆಳಕನ್ನೆ ಹಿಂದೊಗೆದು ತಮದ ಬಸಿರನೆ ಬಗೆದು
ಅಸ್ಪರ್ಶ ಅವಕಾಶದಲ್ಲಿ ಇದ್ದ....
ಶಬ್ದ-ನಾದಧ್ವನಿಯ ಸದ್ದ ಮೀರಿದ್ದ.

ಆದರೆ ಬುದ್ಧನಿಗೆ ತಾನೊಬ್ಬನೆ ಉದ್ಧಾರಗೊಳ್ಳುವುದು ಬೇಕಿರಲಿಲ್ಲ; ಎಲ್ಲ-ರನ್ನೂ ಭವಚಕ್ರದಿಂದ ಪಾರುಮಾಡುವುದು ಅವನ ಧ್ಯೇಯವಾಗಿತ್ತು. ಆದ್ದರಿಂದ ಅವನು ತಾನೇರಿದ ಎತ್ತರದಿಂದ ಕೆಳಗಿಳಿದು ಬಂದು ಜೀವಕೋಟಿಯ ಎದೆಯಲ್ಲಿ ನಿವಾಸಿಯಾದುದನ್ನು ಈ ಭಾಗ ಹೇಳುತ್ತದೆ :

ಅಲ್ಲಿಂದ ಇಲ್ಲಿವರೆ ಹೊರಳಿ ನೋಡಿ
ಇದ್ದುದಿದ್ದಂತಿತ್ತು ಜನನ ಮರಣದ ಜೋಡಿ
ಗೆದ್ದುದೇನೆಂದೆನುತ ಮರಳಿ ಜಿಗಿದ
ಭೂತಜಾತದ ಎದೆಯ ಸೀಳಿ ಸಿಗಿದ
ಅದೆ ತನ್ನ ಮನೆಯೆಂದು ಸಿದ್ಧ ಬಗೆದ.

ಇದು ಕವನದ ಶಿಖರ. ( ' ಸೀಳಿ ಸಿಗಿದ ' ಎಂಬ ಮಾತು ಉಚಿತವೆನಿಸದು. ) ಮುಂದೆ ಕವಿ " ಬುದ್ಧನೆಂಬುವ ಒಬ್ಬ ಎಂದೊ ಇದ್ದ " ಇತ್ಯಾದಿಯಾಗಿ ಬೆಳೆಸಿರು-ವುದು ಅನಗತ್ಯ ಅವರೋಹಣವಾಗಿದೆ. " ಬುದ್ಧನ ಸಮಾಧಿಯದು ಮಾನವನ ಹೃದಯ " ಎಂದಿದ್ದಾರೆ ಕವಿ. ಈ ಆಲೋಚನೆ ಹಿಂದೆಯೆ ಉಕ್ತವಾಗಿದೆ.

'ಗಮಗಮಾ ಗಮಾಡಸತಾವ ಮಲ್ಲಿಗಿ' ಒಂದು ಅತ್ಯಂತ ವಿಶಿಷ್ಟ ಕವನ. ಹೆಣ್ಣೊಬ್ಬಳು ಗಂಡನ್ನು ಉದ್ದೇಶಿಸಿದಂತೆ ಇಲ್ಲಿನ ಸಂದರ್ಭ. " ನೀವು ಹೊರಟದ್ದೀಗ ಎಲ್ಲಿಗೆ ? " ಎಂಬ ಅವಳ ಕರುಳಿರಿಯುವ ಪ್ರಶ್ನೆ ಪದ್ಯದ ಪಲ್ಲವಿಯಾಗಿದೆ. ಇದು ವರೆಗೆ ಭೋಗದಲ್ಲಿ ಮುಳುಗಿದ್ದ ಆ ವ್ಯಕ್ತಿ, ಈಗ ತದ್ವಿಮುಖನಾಗಿ ಇದ್ದಕ್ಕಿದ್ದಂತೆ ಎತ್ತಲೋ ಹೊರಟದ್ದಾನೆ; ಬಹುಶಃ ವೈರಾಗ್ಯದ ಹಾದಿ ಹಿಡಿದಿದ್ದಾನೆ (ಅದನ್ನು

ಕವಿ ಬಾಯಿಬಿಟ್ಟು ಹೇಳುವುದಿಲ್ಲ). ಅವನೊಡನೆ ಒಲಿದು ಒಂದಾಗಿದ್ದ ರಾಗೋ-ನ್ಮತ್ತ ಹೆಣ್ಣಿನ ಆರ್ತನಾದ, ಆಕ್ರಂದನಗಳು ಕವನದುದ್ದಕ್ಕೂ ಹೃದಯಸ್ಪರ್ಶಿ-ಯಾಗಿ ಹೊರಹೊಮ್ಮಿವೆ. ತನ್ನ ಬಯಕೆಯ ಉತ್ಕಟತೆಯನ್ನೂ, ಇದುವರೆಗೆ ತಾವು ಪಟ್ಟ ಸುಖದ ಅಮಲನ್ನೂ ಅವಳು ನಿವೇದಿಸುವ ಪರಿ ಕವಿಪ್ರತಿಭೆಗೆ ಉಜ್ವಲ ಸಾಕ್ಷಿಯಾಗಿದೆ.

ಅವಳನ್ನು ಅನೈಚ್ಛಿಕವಾಗಿ ಕವಿಯುವ ಸುಖನಿದ್ರೆಯ ಮನೋಜ್ಞ-ಚಿತ್ರವಿದು :

ತುಳುಕ್ಯಾಡತಾವ ತೂಕಡಿಕಿ
ಎವಿ ಅಪ್ಪತಾವ ಕಣ್ಣ ದುಡುಕಿ
ಕನಸು ತೇಲಿ ಬರತಾವ ಹುಡುಕಿ
ನೀವು ಹೊರಟದ್ದೀಗ ಎಲ್ಲಿಗೆ ?

ಅವಳ ಭೋಗಾಕಾಂಕ್ಷೆಗೆ ಪ್ರಕೃತಿಯೆಲ್ಲ ಉದ್ದೀಪನ ವಿಭಾವವಾಗಿದೆ :

ಚಿಕ್ಕಿ ತೋರಸ್ತಾವ ಚಾಚಿ ಬೆರಳ
ಚಂದ್ರಾಮ ಕನ್ನಡೀ ಹರಳ
ಮನಸೋತು ಆಯಿತು ಮರುಳ
ನೀವು ಹೊರಟದ್ದೀಗ ಎಲ್ಲಿಗೆ ?

ಗಾಳಿ ತಬ್ಬತಾವ ಹೂಗಂಪು
ಚಂದ್ರನ ತೆಕ್ಕಿಗಿದೆ ತಂಪು
ನಿಮ ಕಂಡರ ಕವದಾವ ಜೊಂಪು
ನೀವು ಹೊರಟದ್ದೀಗ ಎಲ್ಲಿಗೆ ?

ಅವಳ ಮೋಹಾವಿಷ್ಟತೆಯನ್ನು ಇದಕ್ಕಿಂತ ಪರಿಣಾಮಕಾರಿಯಾಗಿ ಹೇಳುವುದು ಶಕ್ಯವಿಲ್ಲ. ಚಿಕ್ಕೆ-ಚಂದ್ರಮ-ಹೂಗಂಪುಗಳೆಲ್ಲ ಇಲ್ಲಿ ಶೃಂಗಾರಕ್ಕೆ ಪೋಷಕವಾಗಿ ಬಂದಿವೆ. ಆದರೆ ಅವಳ ನಲ್ಲ ಅವಳನ್ನು ನಡುನೀರಿನಲ್ಲಿ ಬಿಟ್ಟು ('ಹೀಂಗ ಬಿಟ್ಟು ಇಲ್ಲಿ ನನ್ನ ನಡ್ಡುಕ') ಹೊರಟದ್ದಾನೆ.

ಇದುವರೆಗೆ ತಾವು ಹೇಗೆ ಒಂದಾಗಿದ್ದು ಸುಖಿಸಿದೆವೆಂಬುದನ್ನು ಅವಳು ಹೇಳಿ ಕೊಳ್ಳುತ್ತಾಳೆ :

ನಮ್ಮ ನಿಮ್ಮ ಒಂದತನದಾಗ
ಹಾಡು ಹುಟ್ಟಿ ಒಂದು ಮನದಾಗ
ಬೆಳದಿಂಗಳಾತು ಬನದಾಗ
ನೀವು ಹೊರಟದ್ದೀಗ ಎಲ್ಲಿಗೆ ?

ನಾವು ಬಂದೆವಲ್ಲಿದಿಲ್ಲಿಗೆ
ಬಾಯಿ ಬಿಟ್ಟವಲ್ಲ ಮಲ್ಲಿಗೆ
ನೀರೊಡೆದಿತಲ್ಲ ಕಲ್ಲಿಗೆ
ನೀವು ಹೊರಟದ್ದೀಗ ಎಲ್ಲಿಗೆ ?

'ನೀರೊಡೆದಿತಲ್ಲ ಕಲ್ಲಿಗೆ' ಎಂಬ ಮಾತಿನಲ್ಲಿ ಏನು ಸೊಗಸಿದೆ ! ಸಂಸಾರದ ಕ್ಲೇಶ ಕಾಠಿಣ್ಯಗಳನ್ನು ಅವರು ಅನುಭವಿಸಲೇ ಇಲ್ಲ; ಎಲ್ಲವೂ ಅವರ ಪಾಲಿಗೆ ರಸವತ್ತಾಗಿಯೇ ಇತ್ತು. ಯಾರು ನಿರೀಕ್ಷಿಸಿದ್ದರು ಈ ಆಘಾತವನ್ನು ?—

ಬಂತ್ಯಾಕ ನಿಮಗೆ ಇಂದ ಮುನಿಸು
ಬೀಳಲಿಲ್ಲ ನಮಗ ಇದರ ಕನಸು
ರಾಯಾ ತಿಳಿಯಲಿಲ್ಲ ನಿಮ್ಮ ಮನಸು
ನೀವು ಹೊರಟದ್ದೀಗ ಎಲ್ಲಿಗೆ ?

'ತಿಳಿಯಲಿಲ್ಲ ನಿಮ್ಮ ಮನಸ್ಸು'. ಹೌದು, ಇನ್ನೂ ಬಯಕೆಯ ಕೆಂಬೆಳಕಿನಲ್ಲಿ ಮಿಡುಕುತ್ತಿರುವ ಈ ಹೆಣ್ಣಿಗೆ ಅವನ ಗೊತ್ತು ಗುರಿಗಳು ಹೇಗೆ ಅರ್ಥವಾಗಬೇಕು ? ತನಗಾದ ನಷ್ಟವನ್ನು ಮಾತ್ರ ಅವಳು ಅರಿಯಬಲ್ಲಳು, ಅರುಹಬಲ್ಲಳು. ಅಂತೂ ಈ ಕವಿತೆಯ ಧ್ವನಿಪೂರ್ಣತೆ, ನಾಟಕೀಯತೆ, ಲಯದಲ್ಲಿ ಆದ್ಯಂತವಾಗಿ ಮಿಡಿಯುವ ವಿಷಾದದ ಭಂಗಿ ಅದನ್ನು ಸಹೃದಯರ ಪಾಲಿಗೊಂದು ಅವಿಸ್ಮರಣೀಯವಾದ ಅನುಭವವನ್ನಾಗಿಸಿವೆ.[1]

---

1- ಇದರೊಡನೆ ಗೋಪಾಲಕೃಷ್ಣ ಅಡಿಗರ 'ಮೋಹನ ಮುರಲಿ' ಕವನವನ್ನು ಹೋಲಿಸಬಹುದು. ಇದೇ ಅನುಭವ ಅಡಿಗರಲ್ಲಿ ತೀರ ವಾಚ್ಯವಾಗಿ ಬಂದಿದೆಯೆನಿಸುತ್ತದೆ. ಈ ಸಾಲುಗಳನ್ನು ನೋಡಿದರೆ ಸಾಕು: "ಹೂವು ಹಾಸಿಗೆ ಚಂದ್ರ ಚಂದನ ಬಾಹುಬಂಧನ ಚುಂಬನ....ಒಲಿದ ಮಿಡುವೆದೆ ರಕ್ತಮಾಂಸದ ಬಿಸಿದು ಸೋಂಕಿನ ಪಂಜರ." ಮೋಹನ ಮುರಲಿ, ಬೃಂದಾವನಗಳ ಪ್ರತಿಮೆಯಲ್ಲೂ ಹೊಸತನವಿಲ್ಲ. ಬೇಂದ್ರೆಯವರ ಈ ಕವನವೇ ಅಡಿಗರಿಗೆ ಪ್ರೇರಣೆಯೊದಗಿಸಿರುವುದು ಸಾಧ್ಯ. ಹೀಗಿರುವಾಗ 'ಮೋಹನ ಮುರಲಿ'ಯನ್ನು "ಕಾವ್ಯವಿಮರ್ಶೆಯ ಯಾವ ವಿಧವಾದ ದಿವ್ಯದಲ್ಲಿಯೂ

( ೪೦೨ ನೆಯ ಪುಟಕ್ಕೆ )

'ತುತ್ತಿನ ಚೀಲ' ಬೇಂದ್ರೆಯವರ ಸಾಮಾಜಿಕ ಪ್ರಜ್ಞೆಗೆ ಜ್ವಲಂತ ದೃಷ್ಟಾಂತ ವಾಗಿದೆ. ದಾರಿದ್ರ್ಯದ, ಹಸಿವಿನ ಘೋರ ದುರಂತವನ್ನು ಇಲ್ಲಿ ಕವಿ ಮನಮುಟ್ಟು ವಂತೆ ಚಿತ್ರಿಸಿದ್ದಾರೆ. ಮೊದಲು ಅನ್ನಬ್ರಹ್ಮದ ದೇಗುಲದಲ್ಲಿ ನಡೆಯುವ ವಿಕಟ-ಪೂಜೆಯನ್ನು ಬಣ್ಣಿಸುತ್ತಾರೆ :

ಬೆಳಗೂ ಬೈಗೂ
ಭಿಳಿ ಭಿಟಿ ಬೆಂಕಿ
ಡೊಂಬರ ಪೂಜೆಯು
ಕಾಗೆಯ ಮಂತ್ರ,
ಗಾಳಿಯ ಎಡೆಯು,
ಬೊಬ್ಬೆಯ ಗಂಟೆ—

ಇದು ಬಡವರ ಅನ್ನಬ್ರಹ್ಮದೇಗುಲ. ಅಲ್ಲಿ ಸದಾ ಬೆಂಕಿ ಧಗಧಗಿಸುತ್ತಿದೆ; ಅದು ಜಠರಾಗ್ನಿಯಲ್ಲದೆ ಮತ್ತೇನು? ಅದಕ್ಕೆ ತೃಪ್ತಿ ಎಲ್ಲಿ? ಇನ್ನು ಅವರ ನಾದ-ಬ್ರಹ್ಮದ ಕಗ್ಗವಿಯಲ್ಲೋ—

ಮೌನದ ವೀಣೆಗೆ
ಕರುಳಿನ ತಂತಿ,
ಮಿಡಿದೂ ಮಿಡಿದೂ
ಮುರಿದವು ಬೆರಳು.

ಯಾವ ಸುರಸ ಸಂಗೀತ ಹೊಮ್ಮೀತು ಬಡವರ ಹಸಿದೊಡಲಿಂದ? ಕರುಳಿನ ತಂತಿ ಮೌನದ ವೀಣೆಯನ್ನು ಮಿಡಿಯಬೇಕಷ್ಟೆ. ಅವರ ಅಸಹಾಯಕತೆ, ಮೂಕಶೋಕ ಸೈರಣೆಗಳನ್ನು ಈ ರೂಪಕ ಮನಗಾಣಿಸುತ್ತದೆ. ಇನ್ನು, ಶಬ್ದಬ್ರಹ್ಮದ ಗುಮ್ಮಟದಲ್ಲಿ—

---

( ೪೦೧ ನೆಯ ಪುಟದಿಂದ ಬಂದದ್ದು )

ತನ್ನ ಶ್ರೇಷ್ಠತೆಯನ್ನು ಮೆರೆಯಬಲ್ಲ ದಿವ್ಯಗೀತ" ವೆಂದಿರುವುದು ಕೇವಲ ಉತ್ಪ್ರೇಕ್ಷೆ. (ನೋಡಿ : 'ಕಟ್ಟುವೆವು ನಾವು', ದ್ವಿತೀಯ ಮುದ್ರಣ, ೧೯೩೩, ಅರ್ಥವಿವರಣೆ, ಪು. ೬೫) ಪು. ತಿ. ನ. ಅವರ 'ಅಹಲ್ಯೆ' ನಾಟಕದಲ್ಲಿ ಅಹಲ್ಯೆ ತಪೋನಿರತ ಗೌತಮ-ನನ್ನು ಕುರಿತು " ಎನಿತು ದೂರಕೆ ಸರಿದು ನಿಂತಿಹೆಯೋ ನನ್ನ ಮನದನ್ನ " ಎಂದು ಹಾಡುತ್ತ ತನ್ನ ಬಾಳಿನ ಅರಕೆಯನ್ನು ತೋಡಿಕೊಳ್ಳುವ ಭಾಗವೂ (ಪು. ೩೩-೩೪) ಇಲ್ಲಿ ನೆನಪಾಗುತ್ತದೆ. ಬೇಂದ್ರೆ., ಪು. ತಿ. ನ., ಅಡಿಗರ ಮೂರೂ ಕವನಗಳನ್ನು ತೌಲನಿಕವಾಗಿ ಅಧ್ಯಯನ ಮಾಡಬಹುದು.

ಹಗಲೂ ಇರುಳೂ
ವೇದದ ವಾದ,
ಪಾಪಪುಣ್ಯಗಳ
ಜಾಳಿಗೆಯಲ್ಲಿ
ನೇತಿದೆ ಜೋತಿದೆ
ಜೀವದ ಜೇಡ—

ಇತಿಹಾಸದುದ್ದಕ್ಕೂ ಉಳ್ಳವರು ಇಲ್ಲದವರನ್ನು ತುಳಿದ ಒಂದು ವಿಧಾನ ಇಲ್ಲಿ ಉಕ್ತವಾಗಿದೆ. ಉತ್ತಮರು ಎನಿಸಿಕೊಂಡವರು ವೇದಶಾಸ್ತ್ರ, ಪುರಾಣ, ಪಾಪ-ಪುಣ್ಯ, ಧರ್ಮ-ಕರ್ಮಗಳ ಬಲೆಯಲ್ಲಿ ಸಾಮಾನ್ಯರನ್ನು ಸಿಕ್ಕಿಸಿ ಶೋಷಿಸಿದರಲ್ಲವೆ? ಅಧ್ಯಾತ್ಮ ನಮ್ಮಲ್ಲಿ ಸುಲಿಗೆಯ ಸಾಧನವಾಯಿತು. ಆದ್ದರಿಂದಲೇ ವಿವೇಕಾನಂದರು ಮೊದಲು ಹೊಟ್ಟೆಗೆ ಅನ್ನ, ಆಮೇಲೆ ವೇದಾಂತ ಎಂದದ್ದು. 'ನೇತಿದೆ ಜೋತಿದೆ' ಎಂಬಲ್ಲಿ ಬಡವರನ್ನು ನೇಣುಹಾಕಿದ, ಶಿಲುಬೆಗೇರಿಸಿದ ಚಿತ್ರ ಸ್ಫುರಿಸುತ್ತದೆ. (ಆದರೆ ಜೇಡನ ರೂಪಕ ಇಲ್ಲಿ ಸಾಧುವಾಗಿದೆಯೆ ?)

ಮುಂದೆ ಕವಿ ವಿಡಂಬಿಸುತ್ತಾರೆ :

ಬಿಡುಗಣ್ಣವರಿಗೆ
ಕಾಣುವುದಿಲ್ಲ
ಅಮೃತದ ತೇಗಿನ
ಮದವಂತಹುದು !

ಬಿಡುಗಣ್ಣ ದೇವತೆಗಳು ಇಲ್ಲಿ ಶ್ರೀಮಂತ ಶೋಷಕ ವರ್ಗಕ್ಕೆ ಸಂಕೇತವಾಗಿದ್ದಾರೆ. ಅವರು ಅನಿಮಿಷರಾದರೂ ಅಂಧರು ಎಂದು ಕವಿಯ ಕಟಕಿ. ಪೂಜ್ಯವೆನಿಸುವ ದೇವತೆಗಳು ಮತ್ತು ಅಮೃತ ಇಲ್ಲಿ ವಿಡಂಬನಗೊಂಡಿರುವುದನ್ನು ಗಮನಿಸಬೇಕು. ಹಸಿದು ಕಂಗಾಲಾದ ಸಾಮಾನ್ಯನೊಬ್ಬನ ನಿಲುವಿನಲ್ಲಿ ಕವಿ ನುಡಿಯುತ್ತಿದ್ದಾರೆ.

ನೊಂದ ಜೀವ "ಶಿವಾ ಶಿವಾ ಹೇ ಶಿವ ಮಾದೇವಾ" ಎಂದು ಚೀರುತ್ತದೆ. ಆದರೆ ಬಾಯಂಗಳದಲ್ಲಿ ಹುಟ್ಟಿದ ಮಾತು ಮುಗಿಲಿನ ಕಿವಿಯನ್ನು ಮುಟ್ಟುವುದೇ ಇಲ್ಲ; ಹಾಡುವ ಸಭೆಯಲ್ಲಿ ನರಳುವುದುಂಟೆ ? ಬಡವರ ಗೋಳಾಟ ಯಾರು ಕೇಳಬೇಕು ? ಮುಂದೆ ಕವಿ ಹೇಳುತ್ತಾರೆ :

ಕಿಕ್ಕಿರಿ ತುಂಬಿದೆ
ಭೂಮಿಯ ಕಣಜ

ಕಕ್ಕಸಬಡುತಿದೆ
ಬೊಕ್ಕಸದೊಡಲು

ಭೂಮಿತಾಯಿ ಬಂಜೆಯಲ್ಲ, ಬೇಕಾದಷ್ಟು ಕೊಡುತ್ತಾಳೆ. ಅದನ್ನೆಲ್ಲ ಯಾರು ಯಾರೋ ಲಪಟಾಯಿಸಿ ಕೃತಕ ಕ್ಷಾಮಗಳನ್ನು ಸೃಜಿಸುತ್ತಾರೆ. ಅಂತೂ:

ಬರಿದೋ ಬರಿದು
ತೆರವೋ ತೆರವೂ
ಬಡವರ ಬಗ್ಗರ
ತುತ್ತಿನ ಚೀಲಾ

"ಬರಿದೋ ಬರಿದು ತೆರವೋ ತೆರವು" ಎಂಬ ಮಾತಿನ ಶಕ್ತಿಯನ್ನು ಲಕ್ಷಿಸಬೇಕು; ಅಗಾಧ ಶೂನ್ಯವೊಂದರ ಚಿತ್ರವನ್ನು ಶಬ್ದಗಳೇ ನಿರ್ಮಿಸುತ್ತವೆ.

ಈ ಕಡೆಯಿಲ್ಲದ ಹಸಿವಿನ ಪರಿಣಾಮ ಏನಾದೀತು ಎಂಬುದರ ಕಡೆಗೆ ಕವಿ-ಮನ ಹರಿಯುತ್ತದೆ. ಇದು ಕಮ್ಯುನಿಸಮ್ಮಿಗೆ ಆಹ್ವಾನವಲ್ಲವೆ ? ಅದು ಬಂದಾಗ ದೇವರು, ಧರ್ಮ ಎಲ್ಲ ಧ್ವಂಸಗೊಳ್ಳುತ್ತವೆ; ವಿನಾಶ ತಾನೇ ತಾನಾಗುತ್ತದೆ; ಹಸಿವಿಗೆ ಎಲ್ಲ ಬಲಿಯಾಗುತ್ತದೆ :

ದೇವರದೊಂದು
ಗೋರಿಯ ಕಟ್ಟಿ,
ಧರ್ಮದ ಧೂಪಕೆ
ಬೆಂಕಿಯನಿಕ್ಕಿ....
ನೆಲವನ್ನೆಲ್ಲಾ
ತುತ್ತುವೆನೆಂದು
ಗದರುತ್ತಿಹುದು
ಗರ್ಜಿಸುತಿಹುದು
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಒಳ ದನಿಯೊಂದು !

ಬಡವರಿಗೂ ಪ್ರಾಯಃ ಗೊತ್ತಿಲ್ಲ, ತಮ್ಮ ತುತ್ತಿನ ಚೀಲದ ಒಳದನಿಯ ಮೊರೆತ; ಮುಂದೆ ಎಂದೋ ಅದು ಸಿಡಿದು ಹಿಂಸಾತ್ಮಕವಾಗುತ್ತದೆ. ಕವಿಕಲ್ಪನೆ ಇತ್ತೀಚಿಗೆ

ಸತ್ಯವಾಗುತ್ತಿರುವುದನ್ನು ಕಾಣುತ್ತಿದ್ದೇವೆ. ನಕ್ಸಲೀಯ ಚಳುವಳಿ ಇತ್ಯಾದಿಗಳು ಇದಕ್ಕೆ ಸಾಕ್ಷಿಯಾಗಿವೆ.

ಆದರೆ ಈ ಸಮಾಜವಾದದ ಹೊಳಹು ಕವಿತೆಯಲ್ಲಿ ಕಲೆಯಾಗಿ ಬಂದಿದೆಯೆ ಹೊರತು ಪ್ರಚಾರಾತ್ಮಕ ರಕ್ತಘೋಷಣೆಯಾಗಿ ಅಲ್ಲ. ಅನ್ಯಾಯ, ಅಸಮತೆ ಶೋಷಣೆಗಳಿಗೆ ಕೆರಳಿಯೂ ಬೇಂದ್ರೆ ಕವಿಯಾಗಿಯೇ ಉಳಿದಿದ್ದಾರೆ.

ಸಾಮಾನ್ಯ ಜನಜೀವನದ ಇನ್ನೆರಡು ಮುಖಗಳನ್ನು ಚಿತ್ರಿಸುವ ಕವನಗಳು 'ನಾನು ಬಡವಿ' ಮತ್ತು ಬಿಸಿಲುಗುದುರೆ'. 'ನಾನು ಬಡವಿ' ಕವನದಲ್ಲಿ ಹೊರಗಿನ ಬಡತನವನ್ನು ಮೆಟ್ಟನಿಂತ ಎದೆಯ ಸಿರಿತನ, ಒಲವಿನ ಸಂಪತ್ತು ಬಂಧುರವಾಗಿ ಘೋಷಿತವಾಗಿದೆ. ಬಡದಂಪತಿಗಳು ಒಲವನ್ನೇ ಬಂಡವಾಳವಾಗಿ ಬಳಸಿಕೊಳ್ಳುವ ಚಿತ್ರ ಇಲ್ಲಿದೆ :

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು.

ಪತಿಯೇ ಅವಳ ಸರ್ವಸ್ವ; ಅವನ ಕಣ್ಣು ಕಟ್ಟುವಂಥ ಮೂರ್ತಿಯೇ ಅವಳ ಕಿವಿಗೆ ಮೆಚ್ಚಿನೋಲೆ. ಅವಳಿಗೆ ಮೈತುಂಬ ಬಟ್ಟೆಯಿಲ್ಲ, ಅವನೇ ಅವಳಿಗೆ ಬಟ್ಟೆ ಎಂಬ ಭಾವ ಸ್ವಾರಸ್ಯಪೂರ್ಣವಾದದ್ದು :

ಚಳಿಗೆ ಬಿಸಿಲಿಗೊಂದೆ ಹದನ
ಅವನ ಮೈಯ ಮುಟ್ಟಿ
ಅದೇ ಗಳಿಗೆ ಮೈಯ ತುಂಬ
ನನಗೆ ನವಿರು ಬಟ್ಟೆ.

ಅವನ ಸ್ಪರ್ಶವೇ ಅವಳ ಮೈಗೆ ನವಿರು ಬಟ್ಟೆಯಂತೆ. ಅವನ ಆಲಿಂಗನದಿಂದಾಗುವ ರೋಮಾಂಚನವೇ ಅವಳ ವಸ್ತ್ರ ಎಂದೂ ಅರ್ಥವಾಗುತ್ತದೆ. ಶ್ರೀಮಂತರು ಪತ್ನಿಯರಿಗೆ ಒಡವೆ ಮಾಡಿಸಿಕೊಡುತ್ತಾರೆ. ಬಡವ ಏನು ಕೊಡಬಹುದು ? ಇದೋ—

ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು

ತೋಳುಗಳಿಗೆ ತೋಳಬಂದಿ
ಕೆನ್ನೆ ತುಂಬ ಮುತ್ತು.

ಅವಳಿಗೆ ಯಾವ ಕೊರತೆಯೂ ಇಲ್ಲ; ಅವಳ ಹೊಟ್ಟೆಗೆ ಅವನು ಜೀವಫಲವನ್ನೂ, ತುಟಿಗೆ ಹಾಲುಜೇನನ್ನೂ ಕೊಟ್ಟಿದ್ದಾನೆ. ಮತ್ತೇನು ಬೇಕು?

ಸಂಸಾರದಲ್ಲಿ ಸಾಮಾನ್ಯವಾಗಿ ಕೊರತೆಗಳನ್ನು ಕಲ್ಪಿಸಿಕೊಂಡು ಗೊಣಗುವವರು ಸ್ತ್ರೀಯರೇ. ಇಲ್ಲಿ ಕವಿ ಹೆಣ್ಣಿನ ಬಾಯಲ್ಲೇ ಅವಳ ಸಂತೃಪ್ತಿಯನ್ನು ಹೇಳಿಸಿರುವುದು ಔಚಿತ್ಯಪೂರ್ಣವಾಗಿದೆ. ಬಡತನವನ್ನು ಗೆದ್ದ ಒಲವಿನ ವೈಜಯಂತಿ ಈ ಕವಿತೆಯಲ್ಲಿ ಹಾರಾಡುತ್ತಿದೆ.

ಬಡತನ ಒಲವಿಗೆ ಬಾಧಕವಲ್ಲ. ದಿಟ. ಆದರೆ ಅದು ಹೇಗೆ ಸಂತೋಷವನ್ನು ಬಲಿತೆಗೆದುಕೊಳ್ಳುತ್ತದೆ, ಮೊಗದ ಮೇಲಿನ ನಗೆಯನ್ನು ಅಳಿಸುತ್ತದೆ ಎಂಬ ಕಟು ಸತ್ಯವನ್ನೂ ಬೇಂದ್ರೆಯವರು ಚಿತ್ರಿಸುತ್ತಾರೆ, 'ಬಿಸಿಲು ಗುದುರೆ' ಕವನದಲ್ಲಿ. ಸಂಸಾರದ ತಾಪತ್ರಯಗಳಲ್ಲಿ ಬಾಡಿಹೋಗುವವಳು ಮುಖ್ಯವಾಗಿ ಹೆಣ್ಣು; ಅವಳ ಸಂಕಟವನ್ನು ಇಲ್ಲಿ ಗಂಡಿನ ಬಾಯಲ್ಲಿ ಹೇಳಿಸಿರುವುದು ಯುಕ್ತವಾಗಿದೆ. ಆ ಸಾಧ್ವಿ ತನ್ನ ಅಳಲನ್ನು ತಾನಾಗಿ ಹೇಗೆ ಹೇಳಿಕೊಂಡಾಳು?

ದಾಂಪತ್ಯಪೂರ್ವದಲ್ಲಿ ಹೆಣ್ಣಿನಲ್ಲಿದ್ದ ಉಲ್ಲಾಸ, ಹರ್ಷಗಳನ್ನೂ ಅವುಗಳ ಈಗಿನ ಅಭಾವವನ್ನೂ ಕವಿ ಪಲ್ಲವಿ ಅನುಪಲ್ಲವಿಗಳಲ್ಲೇ ಸೂಚಿಸುತ್ತಾರೆ:

ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತ

ಏನೊಂದು ನಗಿ ಇತ್ತ ಏನೊಂದು ನಗಿ ಇತ್ತ
ಏನಿಕಿ ನಗಿ ಇತ್ತ

ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ
ಹೋಗೇತಿ ಎತ್ತೆತ್ತ

ಅಂದು ಹುಡುಗಿಯಾಗಿದ್ದ ಅವಳ ನಿರಾತಂಕ ಸಹಜಸ್ಥಿತಿಯ ಚಿತ್ರ ಈ ಪಂಕ್ತಿಗಳಲ್ಲಿ ಮೂಡಿದೆ:

ಕಣ್ಣಾನ ಬೆಳಕೇನ ಮಾರ್‍ಯಾಗಿನ ತುಳುಕೇನ
ತುಟಿಯಾಗಿನ ಝುಳುಕೇನ
ಉಡುಗಿಯ ಮಾಟೇನ ನಡಿಗೆಯ ಥಾಟೇನ
ಹುಡುಗಿ ಹುಡುಗಾಟೇನ!

ಆಗ ಬದುಕು ಯಾಂತ್ರಿಕವಾಗಿರಲಿಲ್ಲ, ವೈವಿಧ್ಯಪೂರ್ಣವಾಗಿತ್ತು; ನೋಟ ನುಡಿ, ನಡೆಗಳೆಲ್ಲ ನವೋನವವಾಗಿದ್ದುವು. ಸುಖದ ಹೊರತು ಬೇರೊಂದರ ಅರಿವಿರಲಿಲ್ಲ :

ಕಂಡ್ಹಾಂಗ ಕಾಣ್ಸಲಿಲ್ಲ ಅಂದ್ಹಾಂಗನ್ನಸಲಿಲ್ಲ
ಬಂದ್ಹಾಂಗ ಬರಲಿಲ್ಲಾ
ಚಂದಾನ ಒಂದೊಂದ ಅಂದೇನಿ ಬೇರೊಂದ
ಅರಿವನ್ಸ ಇರಲಿಲ್ಲ |

ಆದರೆ ಮದುವೆಯಾಗಿ ಸಂಸಾರ ಹೂಡಿದಮೇಲೆ ಆದದ್ದೇನು ?—

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯು ಒಲಿವ್ಯಾಗ
ಸುಟ್ಟ ಹಪ್ಪಳದ್ಹಾಂಗ ಸೊರಗಿದಿ ಸೊಪ್ಹಾಂಗ
ಬಂತಂತ ಮುಪ್ಪು ಬ್ಯಾಗ |

ಸುಟ್ಟ ಹಪ್ಪಳದ, ಸೊರಗಿದ ಸೊಪ್ಪಿನ ಉಪಮಾನಗಳನ್ನು ಗೃಹಿಣಿಗೆ ಕೊಟ್ಟಿರು-ವುದು ಸಾರ್ಥಕವಾಗಿದೆ. ಈಗ ಅವಳ ಪಾಲಿಗೆ ನಗೆ ಬಿಸಿಲುಗುದುರೆಯಾಗಿದೆ, ಕನಸಾಗಿದೆ. ಅದನ್ನು ಮತ್ತೆ ಕಾಣಬೇಕೆಂದು ಗಂಡನ ಹಂಬಲ. ಅವಳ ಮೋರೆಯನ್ನು ಅವನು ಮತ್ತೆ ಮತ್ತೆ ನೋಡುತ್ತಾನೆ. ಆದರೆ ಆ ನಗೆ ಮರಳ-ಬಹುದೆ ?

ದುರ್ಭರ ವಾಸ್ತವಿಕತೆಯ ಒಂದು ನಿಷ್ಠುರ ಚಿತ್ರವನ್ನು ಇಲ್ಲಿ ಬೇಂದ್ರೆ-ಯವರು ಮನಕರಗುವಂತೆ ನೀಡಿದ್ದಾರೆ. ಇದು ಎಷ್ಟು ಸಂಸಾರಗಳ ಕರುಣ ಕಥೆಯೊ !

ಕಡೆಯದಾಗಿ ಬೇಂದ್ರೆಯವರ ಸ್ವೋಪಜ್ಞತೆ ಎಂಥದೆಂಬುದಕ್ಕೆ ಉದಾ-ಹರಣೆಯಾಗಿ 'ಮೊಲೆ' ಎಂಬ ಕವನವನ್ನು ನೋಡಬಹುದು. ( ಇದು 'ಕರುಳಿನ ವಚನ'ಗಳಲ್ಲೊಂದು. ) ನಮ್ಮ ಹಿಂದಿನ ಕಾವ್ಯಗಳಲ್ಲಿ ಸ್ತನವರ್ಣನೆ ರಾಶಿರಾಶಿ ಯಾಗಿ ಬಂದಿದೆ; ಅದೆಲ್ಲ ಶೃಂಗಾರಪರವಾಗಿ. ( ಅದೂ ಕೆಟ್ಟ ಶೃಂಗಾರ. ) ಹಿಂದಿನ ಕವಿಗಳಿಗೆ ಸ್ತನಗಳೆಂದರೆ ಶೃಂಗಾರರಸ ಕುಂಭಗಳಲ್ಲದೆ ಮತ್ತೇನಲ್ಲ. ವಾಸ್ತವವಾಗಿ ಅವು ಕ್ಷೀರಾಗಾರಗಳು; ತಾಯ್ತನದ ಪ್ರತೀಕಗಳು, ಪರಿಕರಗಳು. ಹಾಗೆ ತಾಯ್ತನದ, ವಾತ್ಸಲ್ಯಭಾವದ ಹಿನ್ನೆಲೆಯಲ್ಲಿ ಸ್ತನಗಳನ್ನು ಕಂಡು ಬಣ್ಣಿ-ಸಿದವರು ಪ್ರಾಯಃ ಬೇಂದ್ರೆಯವರೊಬ್ಬರೇ. ಈ ದೃಷ್ಟಿಯಿಂದ ಅವರ 'ಮೊಲೆ' ಕವನ ಬಹಳ ಮಹತ್ವದ್ದು. ಇಲ್ಲಿ ಬೇಂದ್ರೆಯವರು ಸ್ತನಗಳನ್ನು ಗಂಡಿನ ಕಣ್ಣಿನಿಂದ

ನೋಡಿಲ್ಲ; ಹೆಣ್ಣಿನ ನಿಲುವಿನಿಂದಲೇ ಕಂಡರಿಸಿದ್ದಾರೆ. ಆದ್ದರಿಂದ ಕವನದಲ್ಲಿ ಶುದ್ಧ ವಾದ ಮಾತೃಭಾವ ಸ್ಥಾಯಿಯಾಗಿದೆ. ಏನೇ ಇರಲಿ, ಈ ದರ್ಶನ ಹೊಸದು.

ತಾಯಿಗೆ ಮಗು ದೇವರೇ; ಆದ್ದರಿಂದ ಅವಳ ವಾತ್ಸಲ್ಯಭಾವದಲ್ಲಿ ಭಕ್ತಿಯ ಹೊಗರೂ ಬೆರೆತಿರುತ್ತದೆ. ಸ್ತನಗಳು ಅವಳ ಪಾಲಿಗೆ ಬರಿಯ ದೇಹಾಂಗಗಳಲ್ಲ; ಕಾಮಸಾಮಗ್ರಿಯಲ್ಲ; ಅವುಗಳಲ್ಲಿ ದಿವ್ಯಾಂಶವಿದೆ. ಅದನ್ನು ದ್ಯೋತಿಸುವ ರೂಪಕ ಗಳನ್ನು ಕವಿ ಕೊಡುತ್ತ ಹೋಗುತ್ತಾರೆ: ಅವು ಕಪಿಲಿ ಕಾಮಧೇನುಗಳು, ಹಿಮವತಿಯ ತುಂಗಶಿಖರಗಳು, ಅವಳಿ ಶಂಖಗಳು, ಗುಡಿಯ ಜೋಡಿ ಕಳಸಗಳು; ಅಷ್ಟೇ ಅಲ್ಲ, ಜಗದಂಬೆ ಜೀವಶಿಶುವನ್ನು ಮಲಗಿಸಿ ತೂಗುವ ತೊಟ್ಟಿಲ ಕಾಲುಗಳು :

ನನ್ನ ಬಾಲ ಗೋಪಾಲನ ಗೋದಲೆಗಳವ್ವಾ;
ಕಪಿಲೆ ಕಾಮಧೇನುಗಳು ಕಟ್ಟಿಹವಿಲ್ಲಿ.
ಅವನಿಗೇನು ಕಡಿಮೆ ?

ಗಂಗೆಗೆ ಉಣಿಸುವ ಹಿಮವತಿಯ
ತುಂಗ ಶಿಖರದ ಮಾದರಿಗಳಿವು....

ವಾತ್ಸಲ್ಯದ ವಿಜಯ ಯಾತ್ರೆಯಲ್ಲಿ
ನನ್ನ ಕಂದನೂದುವ ಅವಳಿಶಂಖಗಳಿವು....

ಎಲ್ಲರ ತಾಯಿಯಾದ ನಲ್ಲಮ್ಮನ ಗುಡಿಯ
ಜೋಡು ಕಳಸಗಳಿವು....

ಹಾಲಿನ ಬಟ್ಟಲುಗಳಲ್ಲ; ಮಾಂಸದ ಒಟ್ಟಿಲುಗಳಲ್ಲ !
ಜಗದಂಬೆಯು ಜೀವಶಿಶುವನ್ನು ಮಲಗಿಸಿ ತೂಗುವ
ತೊಟ್ಟಿಲ ಕಾಲುಗಳಿವು.

ಒಂದೊಂದು ರೂಪಕವೂ ಸ್ತನಗಳ ಸಹಜಚಿತ್ರವನ್ನು ಒಂದು ಉದಾತ್ತ ವಾದ ನೆಲೆಯಲ್ಲಿ ಸೃಜಿಸುತ್ತದೆ. ಅವು ಅವಳಿ ಶಂಖಗಳು ಎಂಬುದಂತೂ ಎಷ್ಟು ಯಥಾರ್ಥವಾದ ಅಪೂರ್ವಚಿತ್ರ ! ಪ್ರತಿಭೆಯೆಂದರೆ ಇದು.

ಬೇಂದ್ರೆಯವರ ಕಾವ್ಯ ಬಹು ಸೂಕ್ಷ್ಮವಾದದ್ದು; ಸುಲಭವಾಗಿ ಹಿಡಿತಕ್ಕೆ ಸಿಗುವಂಥದಲ್ಲ. ಸುರಸ್ವಪ್ನದಂತೆ, ಇಂದ್ರಚಾಪದಂತೆ, ಇಂದ್ರಜಾಲದಂತೆ ಅದರ ಸ್ವರೂಪವಿನ್ಯಾಸಗಳು. ಅದನ್ನು ಆಸ್ವಾದಿಸಬಹುದೇ ಹೊರತು ವ್ಯಾಖ್ಯಾನಿಸು-ವುದು ದುಷ್ಕರ. ಈ ದಿಶೆಯಲ್ಲಿ ಒಂದು ನಮ್ರಪ್ರಯತ್ನ ಈ ವಿವೇಚನೆ.

§ § § §

---

"ಆಲೋಚನೆ" ಯಿಂದ

# ' ಉದ್ಧಾರ '

೩೭

ವ್ಹಿ. ಎ. ದಿವಾಣಜಿ

' ಉದ್ಧಾರ ' ಒಂದು ಸಾಮಾಜಿಕ ಸಮಸ್ಯೆಯ ಆವಿದ್ಧ ನಾಟಕ. ಹಲವಾರು ರೀತಿಗಳಿಂದ ಅದು ಮಹತ್ವದ ನಾಟಕವಾಗಿದೆ. ಅದರ ಮೊದಲನೆಯ ಹಾಗೂ ಮಹತ್ವದ ಲಕ್ಷಣ ಎಂದರೆ ಅದರ ಸಂಕೀರ್ಣವಸ್ತುವನ್ನು ಸರಳರೂಪದಲ್ಲಿ ಇಳಿಸಲು ಸಾಧ್ಯವಾಗದೆ ಇರುವದು. ಅಸ್ಪೃಶ್ಯೋದ್ಧಾರದ ವಿಷಯವನ್ನು ಒಳಗೊಂಡ ನಾಟಕ ಎಂದು ಸುಲಭವಾಗಿ ಅದರ ವಸ್ತುವನ್ನು ನಿರೂಪಿಸುವದು ಸಾಧ್ಯವಿಲ್ಲ. ಎರಡನೆಯದಾಗಿ ಅದರ ಅಂಗವಾಗಿ ಅರ್ಥಪೂರ್ಣವಾಗಿ ಬರುವ ಸಾಂಕೇತಿಕತೆ. ಕೊನೆಯದಾಗಿ ಈ ನಾಟಕದ ದುರಂತದ ಸ್ವರೂಪ ತುಂಬ ಸಂಕೀರ್ಣವಾಗಿದೆ. ಇಲ್ಲಿಯ ದುರಂತ ಯಾರದು ? ಗರ್ಭಗುಡಿಯಲ್ಲಿ ದುರಗಪ್ಪನ ಮೃತ್ಯುವಿಗೆ ಕಾರಣವಾದ ಹಾವು ಧ್ವನಿಸುವ ಸತ್ಯ ಯಾವುದು ? ರುದ್ರಯ್ಯ ಹಾಗೂ ವಿಘ್ನೇಶ್ವರ ಭಟ್ಟ ಇವರ ವ್ಯಕ್ತಿತ್ವ ಪಡೆಯುವ ಸತ್ತ್ವದ ಸ್ವರೂಪ ಯಾವುದು ? ಹೀಗೆ ಅನೇಕ ಸಮಸ್ಯೆಗಳು ಎದ್ದು ಓದುಗರ ಕುತೂಹಲವನ್ನು ಕೆರಳಿಸುತ್ತವೆ.

' ಉದ್ಧಾರ ' ತಾತ್ತ್ವಿಕ ನಾಟಕ. ಆದರೆ ಪ್ರಮೇಯಾತ್ಮಕ ನಾಟಕವಲ್ಲ ಎಂಬುದನ್ನು ಗಮನಿಸಬೇಕು. ಸಾಮಾನ್ಯವಾಗಿ - ಒಂದು ಮಹತ್ವದ ಆದರ್ಶ- ಅದರಿಂದ ಪ್ರೇರಿತನಾದ ಮಹಾತ್ಮ — ಅವನಿಗೆ ವಿರೋಧ — ಯಾವ ಶಕ್ತಿಗೂ ಬಗ್ಗದ ನಾಯಕನ ಉನ್ನತ ಸತ್ತ್ವ — ಕೊನೆಗೆ ಅವನ ಆತ್ಮಾಹುತಿ.— ಹೀಗೆ ದುರಂತನಾಟಕದ ಸೂತ್ರವನ್ನು ನೆನಪಿನಲ್ಲಿಟ್ಟುಕೊಂಡು ಈ ನಾಟಕವನ್ನು ನೋಡಿದರೆ ಸಾಲದು. ಈ ನಾಟಕದ ಯಾವ ಪಾತ್ರವೂ ಮಹೋನ್ನತ ಸತ್ತ್ವದಿಂದ ಕೂಡಿದ್ದಲ್ಲ. ನಾಟಕಕಾರರ ಉದ್ದೇಶ ಏನು ? ಅಸ್ಪೃಶ್ಯತೆ ನಿವಾರಣೆಯಾಗಬೇಕು, ಅದು ಮಾನವತೆಯ ಕಲಂಕ ಎಂಬುದನ್ನು ಅಥವಾ ಇದರ ವಿರುದ್ಧ ಪಕ್ಷವನ್ನು ಅವರು ವಹಿಸಿ ಪ್ರೇಕ್ಷಕರನ್ನು ಪರಿವರ್ತಿಸುವ ಪ್ರಯತ್ನವನ್ನು ಇಲ್ಲಿ ಮಾಡಿಲ್ಲ. ಆದುದರಿಂದಲೇ ಇದು ತಾತ್ವಿಕನಾಟಕ - ಪ್ರಮೇಯಾತ್ಮಕ ನಾಟಕವಲ್ಲ ಎಂದು ಎತ್ತಿ ಹೇಳಿದ್ದು.

ಕತೆಯ ಹರಹು ಸಾಕಷ್ಟಿದೆ. ನಾಟಕದಲ್ಲಿ ಬರುವ ಪಾತ್ರಗಳು ಸಮಾಜದ ವಿವಿಧ ಸ್ತರಗಳಿಂದ ಬಂದು ಸಮಸ್ಯೆಯ ವ್ಯಾಪಕತೆಯನ್ನು ಸೂಚಿಸುತ್ತವೆ. ತಕ್ಕ ಮಟ್ಟಿಗೆ ದೊಡ್ಡದಾದ ಊರಿನಲ್ಲಿ ಈ ನಾಟಕ ನಡೆಯುತ್ತದೆ. ಕೋದಂಡರಾಯ ಒಬ್ಬ ಖ್ಯಾತ ವಕೀಲ, ಸುಧಾರಕ. ಅಲ್ಲಿಯ ಅಸ್ಪೃಶ್ಯವರ್ಗದಲ್ಲಿ ಮೂರು ವಿಚಾರ ಪ್ರವಾಹಗಳಿವೆ. ಒಂದು ಪರಂಪರೆಯ ಪ್ರಣಾಲಿ, ಸಿದ್ದಪ್ಪ ಅದರ ಪುರಸ್ಕರ್ತ. ಎರಡನೆಯದು ಅರಬಣ್ಣ ತೋರಿಸುವ ಚರ್ಚು — ಮಸೂತಿಯ ದಾರಿ. ಮೂರನೆಯದೆ ಸುಧಾರಣೆಯ ಮಾರ್ಗ, ಅಸ್ಪೃಶ್ಯರಿಗೆ ನ್ಯಾಯವನ್ನು ಒದಗಿಸಿಕೊಡುವ ಮಾನವೀಯತೆಯ ದಾರಿ. ದುರಗಪ್ಪ ಈ ಪಂಥದ ಮುಂದಾಳು. ಅಸ್ಪೃಶ್ಯರು ಹೊಸಗಾಳಿ ತಾಗಿದವರು. ಅವರದೊಂದು ಸಹಕಾರಿಸಂಘವಿದೆ. ಅವರ ಈಶ್ವರನಿಗೊಂದು ದೇವಾಲಯ ಬೇಕಾಗಿದೆ. ಒಂದು ಸ್ಥಳವನ್ನು ಅವರು ಸೂಚಿಸಿ ಸರಕಾರಕ್ಕೆ ಪ್ರಾರ್ಥಿಸಿದ್ದಾರೆ. ಆದರೆ ಆ ಸ್ಥಳ ಬಸವೇಶ್ವರನ ದೇವಾಲಯದ ದಾರಿಯಲ್ಲಿ ಬರುತ್ತದೆ ಎಂಬ ನೆಪದಿಂದ ಆ ಸ್ಥಳವನ್ನು ಸರಕಾರ ನಿರಾಕರಿಸಿದೆ.

ಇದೇ ವೇಳೆಗೆ ಭೈರವೇಶ್ವರನ ಮೂರ್ತಿ ಯಾರಿಂದಲೋ ಭಗ್ನವಾಗಿದೆ. ಹೀಗೆ ಹಲವಾರು ಮೂರ್ತಿಗಳು ಹಲವಾರು ಸ್ಥಳಗಳಲ್ಲಿ ಭಗ್ನವಾಗಿವೆ. ಭೈರವೇಶ್ವರ ದೇವಾಲಯದ ಉದ್ಧಾರದ ವಿಷಯದಲ್ಲಿ ಸಮಾಜದ ಪ್ರಮುಖರು ಔದಾಸೀನ್ಯವನ್ನು ತೋರಿದಾಗ ಕೋದಂಡರಾಯ ಅದನ್ನು ಅಸ್ಪೃಶ್ಯರಿಗೆ ಕೊಡಿಸುವ ದಾರಿಯನ್ನು ಮುಂದಿಡುತ್ತಾನೆ. ಆಗ ರುದ್ರಯ್ಯ, ವಿಘ್ನೇಶ್ವರ ಭಟ್ಟ, ಅಹೋಬಲಾಚಾರ್ಯರು ಕೋದಂಡರಾಯನನ್ನು ವಿರೋಧಿಸುತ್ತಾರೆ. ಆದರೆ ಅವನು ಅವರ ವಿರೋಧವನ್ನು ಲೆಕ್ಕಿಸದೆ ಮುಂದೆ ಹೆಜ್ಜೆ ಇಡುತ್ತಾನೆ. ಅಸ್ಪೃಶ್ಯರಲ್ಲಿ ಸಿದ್ದಪ್ಪ, ಕೋದಂಡರಾಯನ ಹೊಸದಾರಿಯನ್ನು ಮೆಚ್ಚುವದಿಲ್ಲ. ದುರಗಪ್ಪನ ಹೇಳಿಕೆಯಿಂದ ಅವರು ಕೋದಂಡರಾಯನ ದಾರಿಯನ್ನು ಸ್ವೀಕರಿಸುತ್ತಾರೆ. ನಾಟಕದ ಗತಿ ಇಲ್ಲಿ ಆಕಸ್ಮಿಕ ತಿರುವನ್ನು ಹೊಂದುತ್ತದೆ. ರುದ್ರಯ್ಯ, ವಿಘ್ನೇಶ್ವರ ಭಟ್ಟ ಇವರ ವ್ಯಕ್ತಿತ್ವದಲ್ಲಿ ಅನಪೇಕ್ಷಿತವಾದ ಬದಲಾವಣೆಯುಂಟಾಗುತ್ತದೆ. ಅವರು ಭೈರವೇಶ್ವರ ದೇವಸ್ಥಾನದ ಸಂರಕ್ಷಣೆಯ ಹೊಣೆಯನ್ನು ಸ್ವೀಕರಿಸಲು ಸಮಾಜಕ್ಕೆ ಕರೆಯನ್ನು ಕೊಡುತ್ತಾರೆ. ಆದರೆ ಸಮಾಜದ ಕಿವಿಗೆ ಅದು ತಲುಪುವದಿಲ್ಲ. ಕೊನೆಗೆ ಇಬ್ಬರೇ ಸಿದ್ಧರಾಗುತ್ತಾರೆ. ಜಂಗುಳಿಯ ತುಳಿತಕ್ಕೆ ಸಿಕ್ಕು ಗರ್ಭಗುಡಿಯ ಬಾಗಿಲಲ್ಲಿ ಅವರು ಮೃತರಾಗುತ್ತಾರೆ. ದುರಗಪ್ಪ ಗರ್ಭಗುಡಿಯಲ್ಲಿ ಹಾವು ಕಚ್ಚಿ ಮೃತನಾಗುತ್ತಾನೆ.

ಪ್ರಾರಂಭದಲ್ಲಿ ಸ್ವಾರ್ಥದ ತಿರುಗಣಿಯಲ್ಲಿ ಮುಳುಗುತ್ತಿರುವ ರುದ್ರಯ್ಯ, ವಿಘ್ನೇಶ್ವರ ಭಟ್ಟ ಇವರ ವ್ಯಕ್ತಿತ್ವದಲ್ಲಿ ಅದ್ಭುತ ಬದಲಾವಣೆಯುಂಟಾಗಿ ಅವರ ಸಾವು ದುರಂತದ ಅಂಗವಾಗಿ ಬರುವದು. ಅವರ ವಿಷಯದಲ್ಲಿ ಸಹಾನುಭೂತಿ,

ಅವರ ಕೆಚ್ಚಿಗಾಗಿ ಗೌರವ ಉಂಟಾಗುವವು. ಆದುದರಿಂದ ನಾಟಕದ ಬಲಪಾತ್ರ ಗಳಾಗಬಹುದಾಗಿದ್ದ ಪಾತ್ರಗಳ ಅನಿರೀಕ್ಷಿತ ಪರಿವರ್ತನೆ ನಾಟಕದಲ್ಲಿ ಸಂಕೀರ್ಣತೆ ಯನ್ನುಂಟು ಮಾಡುತ್ತದೆ. ಹೀಗೆ ಆದುದು ನಾಟಕಕಾರರ ಅಚಾತುರ್ಯ ಎಂದು ಭಾವಿಸಿದರೆ ನಾಟಕದ ಆಶಯವನ್ನು ತಿಳಿದುಕೊಂಡತಾಗುವುದಿಲ್ಲ. ‘ ಪತಿತರ ಉದ್ಧಾರವೂ ಆಗಲಿ ಪತಿತ ಪಾವನರ ಉದ್ಧಾರವೂ ಆಗಲಿ ’ [1] ಕೋದಂಡರಾಯನ ಈ ಉದ್ಗಾರದಲ್ಲಿ ನಾಟಕದ ರಹಸ್ಯವಿದೆ. ಭ್ರಷ್ಟವಾದ ಭೈರವೇಶ್ವರನ ದೇವಾಲಯ ನಾಟಕದ ಕೇಂದ್ರಪ್ರತಿಮೆಯಾಗುತ್ತದೆ.

ನಾಟಕಕಾರರು ಒಂದೊಂದು ಸಣ್ಣ ಸಂಗತಿಯನ್ನೂ ಧ್ವನಿಪೂರ್ಣವಾಗಿ ಬಳಸಿದ್ದಾರೆ — ಎಂಬುದನ್ನು ಕಾಣಬಹುದು. ಬಸವಣ್ಣನ ಗುಡಿಯ ದಾರಿಯಲ್ಲಿ ಅಸ್ಪೃಶ್ಯರಗುಡಿ ಇರಬಾರದೆಂದು ಬಸವಣ್ಣನ ಅನುಯಾಯಿಗಳು ಪ್ರಯತ್ನಿಸಿ ಅದರಲ್ಲಿ ವಿಜಯಿಗಳಾಗುವದು ಎಷ್ಟು ಅರ್ಥಪೂರ್ಣವಾಗಿದೆ! ಎಂತಹ ಆಘಾತಕ್ಕೂ ನಿದ್ರೆಯಿಂದ ಎಚ್ಚರಿಯದ ಸಮಾಜದರ್ಶನವನ್ನು ಈ ನಾಟಕದಲ್ಲಿ ನಾಟಕಕಾರರು ಮಾಡಿಸಿದ್ದಾರೆ. ಆದುದರಿಂದಲೇ ಇದು ಕೇವಲ ಅಸ್ಪೃಶ್ಯರ ಉದ್ಧಾರದ ಸಮಸ್ಯೆ-ಯಲ್ಲ. ಪತಿತಪಾವನರ ಉದ್ಧಾರವೂ ಆಗಬೇಕಾಗಿದೆ. ಅಸ್ಪೃಶ್ಯರ ಮಾರ್ಗದರ್ಶಕ-ನಾದ ಕೋದಂಡರಾಯ ವಕೀಲನಾದುದು ಅರ್ಥಪೂರ್ಣವಾಗಿದೆ. ಕಾಯಿದೆ ಪುಸ್ತಕದಲ್ಲಿ ಬರುವ ಚೇಳನ್ನು ಕಂಡು ‘ ನಮ್ಮ ಕೈ ಕಸದಾಗಿನ ಚೇಳು; ಅದು ನಮಗ ಕಡಿಯೂದಿಲ್ಲ ’ ‘ ನಮಗ ಕಡಿಯೋವರ ಕೊಂಡೀ ಹೀಂಗ ಮುರೀತೀವಿ ನಾವು ’ – ಕೋದಂಡರಾಯ ಹೇಳುವದು ಅವನ ಮನೋಧರ್ಮವನ್ನು ಎತ್ತಿ ತೋರಿಸುತ್ತದೆ.

“ ಕೋದಂಡರಾಯನಂಥ, ತುಂಟತನವೇ ಗುಣವಾಗಿ ಉಳ್ಳ ವಕೀಲರು, ಸಮಾಜಸೇವೆಯ ನೆವದಲ್ಲಿ ಸ್ವಾರ್ಥಸಾಧಿಸುವ ಸ್ಪರ್ಶಾನಂದರಂಥ ಆಧುನಿಕ ಸಾಧುಗಳು, ಒಳ್ಳೆಯತನವಿದ್ದು ಅಂಧಶ್ರದ್ಧೆಯ ಹಿಡಿತದಲ್ಲಿ ಸಿಕ್ಕ ವಿಘ್ನೇಶ್ವರ ಭಟ್ಟ ಹಾಗೂ ರುದ್ರಪ್ಪ........” [2] ಎಂಬ ಪಾತ್ರವಿವೇಚನೆ ಅಷ್ಟು ಸರಿಯಾಗಿಲ್ಲ. ಕೋದಂಡರಾಯನ ವ್ಯಕ್ತಿತ್ವಕ್ಕೆ ತುಂಟತನದ ಆರೋಪಕ್ಕೆ ನಾಟಕದಲ್ಲಿ ಆಧಾರ-ವಿಲ್ಲ. ನಾಟಕದಲ್ಲಿ ಅವನ ದೃಢವ್ಯಕ್ತಿತ್ವ, ಆದರ್ಶನಿಷ್ಠೆ, ಸಮಾಜಸುಧಾರಣೆ ಇವೆಲ್ಲ ಚೆನ್ನಾಗಿ ಅಸಂದಿಗ್ಧವಾಗಿ ಪ್ರಕಟವಾಗಿವೆ. ಸಮಾಜಸೇವೆಯ ನೆವದಲ್ಲ ಸ್ಪರ್ಶಾನಂದ ಸಾಧಿಸಿಕೊಳ್ಳುವ ಸ್ವಾರ್ಥ ಯಾವುದೂ ಇಲ್ಲ. “ ‘ ಆನಿಚೈವ ಶ್ವಪಾ-ಕೇಚ ಪಂಡಿತಾಃ ಸಮದರ್ಶಿನಃ ’ ಹೀಂಗ ನಮ್ಮ ಸ್ವಾಮೀಜಿಯವರ ಆಚರಣೆ

---

1 ‘ ಉದ್ಧಾರ,’ ಪುಟ ೧೧.

2 ನಡೆದು ಬಂದ ದಾರಿ ಸಂಪುಟ, ೧, ೩೩೨.

ಆದ.' ಅವರ ಯೋಗ್ಯತಾ ಎಲ್ಲೆ ? ನಿಮ್ಮ ಯೋಗ್ಯತಾ ಎಲ್ಲೆ, ಭಟ್ಟರs ' ? "[1] ಕೋದಂಡರಾಯನ ಮಾತುಗಳಲ್ಲಿ ನಿರ್ವಂಚನೆಯ ಯಥಾರ್ಥ ವ್ಯಕ್ತಿತ್ವದ ಚಿತ್ರಣ ವಿದೆ. ಸ್ಪರ್ಶಾನಂದನಿಗೆ ದಲಿತರ ವಿಷಯದಲ್ಲಿ ಸಹಾನುಭೂತಿ ಇದೆ—' ನೀವೆಲ್ಲಾ ಭೂಮಿತಾಯಿಯ ಮಕ್ಕಳು. ನಿಮ್ಮ ಪಾಡೇ ಎಲ್ಲರ ಪಾಡು. ನಿಮ್ಮ ಬಾಳುವೆಯೇ ಎಲ್ಲರ ಬಾಳು. ' ಅವನ ಹೇಳಿಕೆ ಅವನ ಹೃದಯದ ಆಳದಿಂದ ಬಂದುದು ಎಂಬು ದನ್ನು ಅಲ್ಲಗಳೆಯುವ ಕಾರಣವಿಲ್ಲ. ವಿಘ್ನೇಶ್ವರ ಭಟ್ಟ ಹಾಗು ರುದ್ರಯ್ಯ ಇವರು ಕೂಡ ಯಾವ ದೃಷ್ಟಿಯಲ್ಲಿ ಒಳ್ಳೆಯವರು ? ಆದರೆ ಅವರಲ್ಲಿ ಉಂಟಾಗುವ ಅನಿರೀಕ್ಷಿತ ಬದಲಾವಣೆಯಿಂದ ಅವರಲ್ಲಿ ಒಳ್ಳೆಯತನವನ್ನು ಆರೋಪಿಸ ಬಹುದು.

ಕೋದಂಡರಾಯನ ಸಮಾಜ ವಿಶ್ಲೇಷಣೆಯನ್ನು ಗಮನಿಸಿದರೆ, ' ಉದ್ಧಾರ ' ನಾಟಕದ ಆಶಯವೇ ಬದಲಾಗುತ್ತದೆ. ಕೋದಂಡರಾಯನ ಉದ್ದೇಶ ಹಾಗೂ ನಿಷ್ಠೆಯನ್ನು ಪ್ರಶ್ನಿಸುವ ಅವಕಾಶ ನಾಟಕದಲ್ಲಿ ಇಲ್ಲ. ಆದುದರಿಂದ " ' ಉದ್ಧಾರ ' ನಾಟಕವನ್ನು ಪಾಪವಿಲ್ಲದಲ್ಲಿ ಪಾಪದ ಭ್ರಮೆಯನ್ನು ಹುಟ್ಟಿಸಿ ತಮ್ಮ ಸ್ಪರ್ಶದಿಂದ ಅದನ್ನು ಪುಣ್ಯವಾಗಿಸಲು ಹೊರಟ ಪಾಪ ಜೀವಿಗಳ ಕತೆ. "[2] ಎಂದು ಹೇಳುವದು ಅನುಚಿತವಾಗುತ್ತದೆ. ಅಂದಿನ ಸಾಮಾಜಿಕ, ರಾಜಕೀಯ ಸನ್ನಿವೇಶದಲ್ಲಿ, ಕೋದಂಡರಾಯ ತನ್ನ ಕೋಣೆಯಲ್ಲಿ ಹಾಕಿದ ದಯಾನಂದ ಸರಸ್ವತಿ, ಸ್ವಾಮಿ ಶ್ರದ್ಧಾನಂದ ಮತ್ತು ಮಹಾತ್ಮಾ ಗಾಂಧಿಯವರ ಚಿತ್ರಪಟಗಳು ಅವನ ಸಮಾಜ-ಸೇವೆಯ ಪ್ರೇರಣೆಯ ಉಗಮಗಳನ್ನು ಸೂಚಿಸುತ್ತವೆ. ಸಮಾಜಸುಧಾರಣೆಯ ವಿಷಯದಲ್ಲಿ ಅವನ ತಳಮಳ ಪ್ರಾಮಾಣಿಕವಾಗಿದೆ. ನಾಟಕದಲ್ಲಿ ಎಲ್ಲ ದೃಷ್ಟಿ ಯಿಂದಲೂ ಕೋದಂಡರಾಯನದು ಎತ್ತರದ ಪಾತ್ರ. ಅವನ ಬೌದ್ಧಿಕ ಸ್ತರವು ಉನ್ನತವಾಗಿದೆ. ' ನನಗ ಪಾಪ, ಪ್ರಾರಬ್ಧ, ನರಕ ಇವುಗಳ ಭಯ ಹಾಕಬ್ಯಾಡ್ರಿ. ಅವಕ್ಕೆಲ್ಲಾ ಹೆದರೋ ಅಂಜುಗುಳಿಯಲ್ಲಾ ನಾ. ಹೊಲೇರೂ ಮನುಷ್ಯರs. ಮನುಷ್ಯಮಾತ್ರಕ್ಕ ಇರೊ ಹಕ್ಕೆಲ್ಲಾ ಅವರಿಗೂ ಇರಬೇಕು. ಅವರ ಹಕ್ಕನ್ನು ನಾ ಎಂದಿಗೂ ಕಳೆಯಿಸಿಕೊಡಲಾರೆ. '[3] ' ಆಗ ಆ ಭಂಗಾದ ಸುದ್ದಿ ಕೇಳಿ ನೀವು ಥಣ್ಣಗ ನಿರಾಕಾರ, ನಿರ್ಗುಣಬ್ರಹ್ಮ ಕೂತ್ಹಂಗ ಕೂತದ್ದು ನೋಡಿ ಈ ರಾಯನ ಎದಿ ಎಷ್ಟು ಕುದ್ದೂ ಬೆಂದೂ ಹೋಗಿರಬೇಕೆಂಬೋದು ನಿಮಗೇನಾರ ಹೊಳೀತs ? ' — ಕೋದಂಡರಾಯನ ಈ ಮಾತುಗಳು ಅವನ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿಯುತ್ತವೆ.

---

1 ' ಉದ್ಧಾರ, ' ಪುಟ, ೫೩.

2 ನಡೆದು ಬಂದ ದಾರಿ-ಸಂಪುಟ ೧—೨೪೪.

3 ' ಉದ್ಧಾರ ' ಪುಟ ೫೭.

ಇಷ್ಟೆಲ್ಲ ಅನುಕೂಲತೆಯಿದ್ದು ಕೋದಂಡರಾಯ ನಾಟಕದ ನಾಯಕನಲ್ಲ. ದುರಗಪ್ಪ ನಾಟಕದ ನಾಯಕನಾಗಬಹುದಿತ್ತು. ' ಉದ್ಧಾರ ' ನಾಟಕದಲ್ಲಿ ನಾಯಕನಿಲ್ಲ ಎಂದು ಹೇಳಬಹುದು. ದುರಗಪ್ಪನ ಸಾವು ಆಕಸ್ಮಿಕವಾಗಿದೆ. ಲೇಖಕರು ದಲಿತರ ಕೈವಾರಿಗಳಾಗಿ ಅವರ ಉದ್ಧಾರದ ವಿಷಯವಾಗಿ ಇಲ್ಲಿ ಬರೆದಿಲ್ಲ. ಅವರಿಗೆ ಇದಕ್ಕಿಂತ ಹೆಚ್ಚಿನದಾದುದನ್ನು ಕಲಾತ್ಮಕವಾಗಿ ಸಾಧಿಸ ಬೇಕಾಗಿದೆ. ಅಸ್ಪೃಶ್ಯರು ಹಿಂಸೆಯನ್ನು, ಅಪಮಾನವನ್ನು ತಾಳಿ ಉಚ್ಚವರ್ಣೀ-ಯರ ಕಾಲಡಿಯಲ್ಲಿ ಬಿದ್ದು ಹೊರಳುವದನ್ನು ಚಿತ್ರಿಸಿ ಕರುಣೆಯ ಹೊನಲನ್ನು ಹರಿಸುವ ಪ್ರಯತ್ನಕ್ಕೆ ಅವರು ಕೈ ಹಾಕಿಲ್ಲ. ಉಚ್ಚವರ್ಣೀಯರ ಅಧಃಪತನವನ್ನು ಅವರು ಸಮರ್ಥ ರೀತಿಯಲ್ಲಿ ಚಿತ್ರಿಸಿದ್ದಾರೆ. ಉಚ್ಚಸಂಸ್ಕೃತಿಯ ವಾರಸುದಾರ ರಾದ ವಿಘ್ನೇಶ್ವರ ಭಟ್ಟ, ರುದ್ರಯ್ಯ, ಅಹೋಬಲ, ಹಯವದನ, ವೀರಭದ್ರಯ್ಯ ಮೊದಲಾದವರಿಂದ ತುಂಬಿದ ಸಮಾಜದ ಜಂಜೆತನವನ್ನು ಭೈರವೇಶ್ವರನ ಕೇಂದ್ರ ಪ್ರತಿನಿಧೀಕರಿಸುತ್ತದೆ. ಅಲ್ಲಿ ಹೊಸ ಮೂರ್ತಿಯ ಪ್ರಾಣಪ್ರತಿಷ್ಠೆಯಾಗಬೇಕಾಗಿದೆ.

ಒಂದು ವಿಶಿಷ್ಟ ತತ್ವಪ್ರಣಾಲಿಯನ್ನು ಪ್ರತಿಪಾದಿಸುವದಕ್ಕಾಗಿ ನಾಟಕ-ಕಾರರು ಪಾತ್ರಗಳನ್ನು ಸೃಷ್ಟಿಸಿ ಅವುಗಳ ಸೂತ್ರವನ್ನು ತಮ್ಮ ಕೈಯಲ್ಲಿ ಹಿಡಿದು-ಕೊಂಡು ಅವುಗಳನ್ನು ನಡೆಸುತ್ತಿಲ್ಲ. ಆದುದರಿಂದ ಪಾತ್ರಗಳು ನಿರ್ಜೀವವಾಗಿಲ್ಲ. ಅವುಗಳಿಗೆ ಸ್ವತಂತ್ರವಾದ ವ್ಯಕ್ತಿತ್ವವಿದೆ. ಅವುಗಳನ್ನು ನಾಟಕಕಾರರು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಯಾವುದೇ ಒಂದು ಪಾತ್ರವನ್ನು ತಮ್ಮ ಮುಖವಾಡವನ್ನಾಗಿ ಅವರು ಮಾಡಿಕೊಂಡಿಲ್ಲ. ಯಾವುದೇ ಒಂದು ಪಾತ್ರಕ್ಕೆ ತಮ್ಮ ಸರ್ವಸ್ವವನ್ನು ಅವರು ನಿವೇದಿಸಿಲ್ಲ. ನೈಜವಾದ ಪರಿ-ಸರದಲ್ಲಿ ಪಾತ್ರಗಳು ಅರ್ಥಪೂರ್ಣವಾಗಿ ಎದ್ದು ಕಾಣುತ್ತವೆ. ಇದು ಕೇವಲ ವೈಚಾರಿಕನಾಟಕವೂ ಅಲ್ಲ. ಇಲ್ಲಿಯ ದುರಂತ, ನೈತಿಕ ಸಮಸ್ಯೆಯ ವ್ಯಾಪಕ ಕ್ಷೇತ್ರವನ್ನು ಒಳಗೊಂಡಿದೆ. ನಾಟಕಕಾರರು ಜೀವಂತ ಪಾತ್ರಗಳಿಂದ ಜೀವನ ವನ್ನು ಸೃಷ್ಟಿಸಿ ಅದನ್ನು ಪಾತ್ರಗಳಿಂದ, ಕ್ರಿಯೆಗಳಿಂದ ನಾಟ್ಯಪೂರ್ಣವನ್ನಾಗಿ ಮಾಡಿದ್ದಾರೆ. ಇದು ಪಡಸಾಲೆಯ ನಾಟಕವಾಗಿಲ್ಲ ಎಂಬುದಕ್ಕೆ ಅವರ ಕೌಶಲವೇ ಕಾರಣ.

ಸಿದ್ದಪ್ಪನ ವ್ಯಕ್ತಿತ್ವ ಸಹೃದಯರ ಮನಸ್ಸನ್ನು ಆಕರ್ಷಿಸುತ್ತದೆ. ಅವನು ತಲ್ಲೀನನಾಗಿ ಭಜನೆಯನ್ನು ಮಾಡುತ್ತಾನೆ. ವಿವೇಕವುಳ್ಳವ.

ಜಂಭಾ ಬ್ಯಾಡೋ | ಜಂಭಾ ಬ್ಯಾಡೊ ಬ್ಯಾಡೊ !
ಹುಂಬಾ, ಶಿವನ | ನಂಬೀ ಬೀಡೋ ಬೀಡೋ.

— ಎಂಬುದು

ಅವನ ಜೀವನದ ಪಲ್ಲವಿ. ಅವನ ಸೌಜನ್ಯ ಸೈಜವಾದುದು. ಅವನಿಗೆ ಸಂಘರ್ಷ ಸೇರದು. ‘ ಅಯ್ಯೋ ಯಪ್ಪಾ ! ಇಲ್ಲದ ಹುತ್ತಿಸ್ಯಾಗ ನಮ್ಮ ಕೈ ಯಾಕ ತುರಕ-ತೀರೋ ಯಪ್ಪಾ ! .... ಈ ಬೆಂಕೀ ಮಾತ್ರ ಹಬ್ಬಸಬ್ಯಾಡೋಯಪ್ಪಾ. ಇದು ಎಲ್ಲರನೂ ಸುಡತೈತಿ ’ [1] ಹೀಗೆ ಹೇಳಿ ಅವನು ಕೋದಂಡರಾಯನ ಯೋಜನೆಗೆ ಅಸಮ್ಮತಿಯನ್ನು ಸೂಚಿಸುತ್ತಾನೆ.... ‘ ಇದರಾಗ ಯಾರಿಗೂ ಸುಕಾ ಇಲ್ಲ. ಈ ಕೋಳೀ ಕಾದಾಡಿಸೋರ ಜಾಡ ಬ್ಯಾಡೋ ಯಪ್ಪಾ, ಬ್ಯಾಡಾ ! ನಿಮಗ ಈಗ ತಿಳಿಯಾಕಿಲ್ಲ ’ [2] ಎಂದು ತನ್ನವರಿಗೆ ಎಚ್ಚರಿಕೆಯನ್ನು ಕೊಡುತ್ತಾನೆ. ಅವನ ತಿಳಿವಳಿಕೆ ಅನುಭವದಿಂದ ಬಂದುದು. ಅದರಲ್ಲಿ ಜಂಭಕ್ಕೆ ಆಸ್ಪದವಿಲ್ಲ. ಬೇಕಾದ-ದ್ದನ್ನು ಅರಿತು ಬೇಡವಾದದ್ದನ್ನು ಮರೆಯುವ ವ್ಯಕ್ತಿ ಅವನಲ್ಲ. ‘ ಮಾತಿನ ದಾರಿ; ತಪ್ಪಿದರ ಮಾರಿ. ’ ಆದರೆ ಅವನ ವಿವೇಕವನ್ನು ಕಿವಿಯ ಮೇಲೆ ಹಾಕಿಕೊಳ್ಳು-ವವರು ಯಾರೂ ಇರಲಿಲ್ಲ. ವಿವೇಕದ ನುಡಿಯನ್ನು ಉನ್ಮತ್ತತನದಿಂದ ಧಿಕ್ಕರಿ ಸುವದೇ ದುರಂತವಲ್ಲವೆ ?

ಕೊನೆಯ ದೃಶ್ಯದಲ್ಲಿ ರೌದ್ರವು ವಿಜೃಂಭಿಸಿದೆ. ಉದ್ಧಾರದ ಆವಿದ್ಧದಲ್ಲಿ ಕರುಣೆಗೆ ಆಸ್ಪದವಿಲ್ಲ. ರೌದ್ರಕ್ಕೆ ಎಲ್ಲ ಪರಿಕರಗಳಿವೆ. ಹೊರಗಿನಿಂದ ಹರಿದು ಗರ್ಭಗುಡಿಯಲ್ಲಿ ಸೇರಿ ದುರಗಪ್ಪನ ಸಾವಿಗೆ ಕಾರಣವಾದ ಹಾವು, ‘ ಮನುಷ್ಯನಿಗೆ ಮೀರಿದ ನ್ಯಾಯವೊಂದು ಕುರಡಾಗಿಲ್ಲ ಎಂಬ ಮಾತಿಗೆ ಸಂಕೇತ ’ [3] ಎಂಬ ಮಾತನ್ನು ಒಪ್ಪುವದು ಅಸಾಧ್ಯವಾಗುತ್ತದೆ. ದುರಗಪ್ಪನು ಅನ್ಯಾಯವನ್ನು ಮಾಡಿದವನಲ್ಲ. ತನ್ನ ಸಮಾಜದ ಮಾನವೀಯ ಹಕ್ಕಿಗಾಗಿ ನಿಃಸ್ವಾರ್ಥಭಾವ ದಿಂದ ಹೋರಾಡಿದವನು. ಅವನ ಸಾವಿಗೆ ಕಾರಣವಾದ ಹಾವು ಕುರುಡಾಗಿಲ್ಲದ, ಮನುಷ್ಯನಿಗೆ ಮೀರಿದ ನ್ಯಾಯದ ಸಂಕೇತ ಎಂದು ಹೇಳಿದರೆ, ಅದು ದುರಗಪ್ಪನ ಸಾವಿನಿಂದ ಏನನ್ನು ಸಾಧಿಸಿತು ? ಎಂದು ಕೇಳಬೇಕಾಗುತ್ತದೆ. ಸರಳರೂಪ ವನ್ನು ತಾಳಬಹುದಾಗಿದ್ದ ‘ ಉದ್ಧಾರ ’ ನಾಟಕವನ್ನು ಅಪಾಯಗಳಿಂದ ಪಾರು ಮಾಡಿದ ಸಂಗತಿಗಳೆಂದರೆ ವಿಶ್ವೇಶ್ವರ ಭಟ್ಟ, ರುದ್ರಯ್ಯ ಇವರ ಹೌತಾತ್ಮ್ಯ ಹಾಗೂ ದುರಗಪ್ಪನ ಸಾವಿಗೆ ಕಾರಣವಾದ ಹಾವು ಎಂದು ಹೇಳಬಹುದು.

‘ ಉದ್ಧಾರ ’ ನಾಟಕ, ವಾಸ್ತವವಾದದ ಜಾಡಿನದು. ‘ ಕಲ್ಪನೆಯ ಹಾದಿ ಯನ್ನು ಬಿಟ್ಟು ವಾಸ್ತವದ ಬೀದಿಯಲ್ಲಿ ಅಲೆದಾಡುವ ಬಯಕೆ ಹುಟ್ಟಿದೆ ಜನರ ಅಂತಃಕರಣದಲ್ಲಿ ’ ಇದನ್ನು ಗುರುತಿಸಿದ ನಾಟಕಕಾರರು, ಸಂಕುಚಿತ ರೀತಿ ಯಾದರೂ ವಾಸ್ತವತೆಯ ದಾರಿಯಲ್ಲಿ ಮಾನವನ ‘ ಗುಣದೋಷಗಳನ್ನು, ಒಳ

1 ಉದ್ಧಾರ ಪುಟ, ೨ .
2 ,, ,, ೨೪.
3 ನಡೆದು ಬಂದ ದಾರಿ ಸಂಪುಟ, ೧. ೨೩೩.

ಹೊರಗನ್ನು, ಕೀಳು – ಮೇಲನ್ನು, ಉನ್ನತಿ–ಅವನತಿ ಪಥಗಳನ್ನು, ಒಂದಿಷ್ಟೂ ಬಿಡದೆ ' ಚಿತ್ರಿಸಿದ್ದಾರೆ. ಆದರೆ ವಾಸ್ತವದ ಸಂಕುಚಿತತೆಯನ್ನು ಸಾರ್ಥಕ ಸಾಂಕೇತಿಕತೆಯಿಂದ ಮೀರಿದ್ದಾರೆ. ಈ ದೃಷ್ಟಿಯಿಂದ ವಿಘ್ನೇಶ್ವರ ಭಟ್ಟ, ರುದ್ರಯ್ಯ ಇವರ ಸಾವು ದುರಂತನಾಟಕದಲ್ಲಿ ನಿರರ್ಥಕ ಹಾಗೂ ರಸಾಭಾಸಕ್ಕೆ ಕಾರಣ ಎಂದು ಭಾವಿಸುವದು ಅನುಚಿತವಾಗುತ್ತದೆ. ಹಾವು ಮಾನವನನ್ನು ಮೀರಿದ ದುರ್ದಮ್ಯವಾದ ದುರ್ದೈವದ ಪ್ರತೀಕವಾಗುತ್ತದೆ.

ಉದ್ಧಾರದಲ್ಲಿ ಚಿತ್ರಿತವಾದ ನೈತಿಕ ಸಮಸ್ಯೆ ವ್ಯಾಪಕವಾದುದಾಗಿದೆ. ಸಮತೆ, ಸ್ವಾತಂತ್ರ್ಯ ಹಾಗೂ ಬಂಧುತ್ವ ಇವುಗಳಿಂದ ಸಾವಿರಾರು ವರುಷಗಳಿಂದ ವಂಚಿತ-ವಾದ ಸಮಾಜವೊಂದು ಅವುಗಳಿಗಾಗಿ ಹಾತೊರೆದು ಸಂಘರ್ಷವನ್ನು ಎದು-ರಿಸುತ್ತದೆ. ಅದರ ಆಹ್ವಾನವನ್ನು ಪ್ರತಿಪಕ್ಷ ಸರ್ವತೋಮುಖವಾಗಿ ಸ್ವೀಕರಿಸುವದಿಲ್ಲ. ಒಂದು ವೇಳೆ ವಿಘ್ನೇಶ್ವರ ಭಟ್ಟ, ರುದ್ರಯ್ಯ ತಮ್ಮ ತಮ್ಮ ಸಮಾಜದ ನಾಗರಿಕರಂತೆಯೆ ತೆಪ್ಪಗಿದ್ದರೆ ಭೈರವೇಶ್ವರನ ಮಂದಿರದಲ್ಲಿ ಅಸ್ಪೃಶ್ಯರ ಈಶ್ವರನ ಪ್ರತಿಷ್ಠೆಯಾಗಿ ಬಿಡುತ್ತಿತ್ತು. ಆದರೆ ಇಷ್ಟರಿಂದ ಅವರ ಉದ್ಧಾರವಾಗುತ್ತಿತ್ತೆ ? ಸಮತೆ, ಸ್ವಾತಂತ್ರ್ಯ, ಬಂಧುತ್ವ ಇವುಗಳ ಹಸಿವು ಹಿಂಗುತ್ತಿತ್ತೆ ? —ಎಂಬುವು ಮಹತ್ವದ ಪ್ರಶ್ನೆಗಳು.

ಒಂದು ಕೃತಿ ತನ್ನಷ್ಟಕ್ಕೆ ಸ್ವಯಂಪೂರ್ಣವಾಗಿ ಸಹೃದಯನ ಚಿತ್ತವನ್ನು ಆಕರ್ಷಿಸಿದರೆ ಸಾಲದು; ತೃಪ್ತಿಯನ್ನು ನೀಡಿದರೆ ಸಾಲದು. ಜೀವನದ ಆಳದಲ್ಲಿ ಅವನನ್ನು ಮುಳುಗಿಸಿ ಅದರ ಗಭೀರತೆಯನ್ನು ಅನುಭವಕ್ಕೆ ತಂದುಕೊಡುವ ಕಲಾಕೃತಿ ಮಾತ್ರ ಶ್ರೇಷ್ಠ ಎಂದು ಹೇಳಬಹುದು. ಇಂತಹ ಶಕ್ತಿ ' ಉದ್ಧಾರ ' ನಾಟಕದಲ್ಲಿದೆ. ಇದು ಲೇಖಕರ ಅಭಿಪ್ರಾಯವೆಂದು ನಾಟಕವನ್ನು ಹಿಂಡಿ ಯಾವುದೇ ಅಭಿಪ್ರಾಯವನ್ನು ತಲೆಗೆ ಕಟ್ಟುವದು ಸರಿಯಾಗುವದಿಲ್ಲ. ವ್ಯಾಪಕ ವಾದ, ಉದಾರವಾದ ಜೀವನದೃಷ್ಟಿಯಿಂದ, ಚಿಂತನದ ಪ್ರಭಾವದಿಂದ, ಅನು-ಭವಸಂಪತ್ತಿನಿಂದ ಸಮೃದ್ಧವಾದ ' ಉದ್ಧಾರ ' ನಾಟಕ ಹಲವಾರು ದೃಷ್ಟಿ ಗಳಿಂದ ಅಪೂರ್ವ ನಾಟಕವಾಗಿದೆ. ' ಒಂದು ಸಾಮಾಜಿಕ ತೊಡಕಿನಿಂದ ಸಮಾಜ-ದಲ್ಲುಂಟಾದ ಸುಖಃದುಖದ ಅರಿವನ್ನು ಎಲ್ಲರ ಅಂತಃಕರಣಕ್ಕಾಗುವಂತೆ, ಪಕ್ಷ ಕಟ್ಟಿ ಹೋರಾಡುವದಕ್ಕಿಂತ, ಪ್ರೇಕ್ಷಕರ ಅಂತಃಕರಣ–ವಿವೇಕಗಳು ಜಾಗೃತವಾಗು ವಂತೆ ಪಕ್ಷ–ಪ್ರತಿಪಕ್ಷಗಳನ್ನು ಚಿತ್ರಿಸುವದು ' ನಾಟಕಕಾರರ ಧ್ಯೇಯವಾಗಿದೆ. ನಾಟಕ ಸಹೃದಯನ ಅಂತಃಕರಣವನ್ನು ಕಲಕುತ್ತದೆ. ಹಲವಾರು ಪ್ರಶ್ನ-ತರಂಗಗಳನ್ನು ಎಬ್ಬಿಸುತ್ತದೆ. ವಿಚಾರಗಳ ಕೋಲಾಹಲವನ್ನುಂಟುಮಾಡು-ತ್ತದೆ; ಅವನ ಪ್ರಜ್ಞೆಯ ಕ್ಷಿತಿಜವನ್ನು ವಿಸ್ತರಿಸುತ್ತದೆ, ಜೀವನದ ಅರ್ಥ ಶೋಧನೆಗೆ ಅವನನ್ನು ಪ್ರೇರಿಸುತ್ತದೆ. ಇದರಲ್ಲಿಯೇ ನಾಟಕದ ಸಾರ್ಥಕತೆಯಿದೆ.

ಸತ್ವಪೂರ್ಣವಾದ ನಾಟಕೀಯ ಕ್ರಿಯೆಗಳಿಂದ ಸಮೃದ್ಧವಾದ ನಾಟಕ 'ಉದ್ಧಾರ' ಎಂದು ಹೇಳಬಹುದು.

ಸಾಮಾಜಿಕ ತೊಡಕುಗಳಿಗೆ ಲೆಕ್ಕದಂತೆ ಸ್ಪಷ್ಟೋತ್ತರವನ್ನು ಕೊಡುವ ಪ್ರಯತ್ನವನ್ನು ನಾಟಕಕಾರರು ಮಾಡಿಲ್ಲ. ಆದರೂ ನಾಟಕದಲ್ಲಿ ಕಂಡುಬರುವ ಸಂಗತಿಗಳಿಂದ ನಾಟಕಕಾರರ ಅಭಿಪ್ರಾಯವನ್ನು ಊಹಿಸಬಹುದು ಎಂದು ಭಾವಿಸಿ 'ಇಂತಹ ವಿಚಾರಗಳಲ್ಲಿ ನಡಿಗೆಯ ವೇಗವನ್ನು ಸ್ವಲ್ಪ ಮಂದಗೊಳಿಸುವದೇ ಲೇಸೆಂಬುದು ನಾಟಕಕಾರರ ಅಭಿಪ್ರಾಯವಿರುವಂತೆ ತೋರುತ್ತದೆ. ಯಾವಾಗಲೂ ಕೂತು ಮಲಗಬೇಕು. ಕಾದು ಸಾಧಿಸಬೇಕು.'[1] ಎಂಬ ಅಭಿಪ್ರಾಯವನ್ನು ಮಂಡಿಸಲಾಗಿದೆ. ಆದರೆ ಸಮಸ್ಯೆಯ ತೀವ್ರತೆಯನ್ನು, ಅದರ ಶೀಘ್ರಪರಿಹಾರದ ಅಗತ್ಯತೆಯನ್ನು ಎಲ್ಲಕ್ಕಿಂತ ಮಿಗಿಲಾಗಿ ಅಸ್ಪೃಶ್ಯರ ಮಾನವೀಯ ಹಕ್ಕುಗಳನ್ನು ಒಪ್ಪುವ ನಾಟಕಕಾರರು ವರ್ತಮಾನದ ಆಹ್ವಾನವನ್ನು ಭವಿಷ್ಯದ ಪಾಲಿಗೆ ಬಿಟ್ಟು ನಿಶ್ಚಿಂತರಾಗಲು ಬಯಸಿದ್ದರೆ – ದುರಂತಕ್ಕೆ ಯಾವ ಕಲಾತ್ಮಕ ಸಾರ್ಥಕತೆಯಿದೆ ಯೆಂದು ಕೇಳಬೇಕಾಗುತ್ತದೆ.

'ಹರಿಜನರು ತಮ್ಮ ಉದ್ಧಾರಕ್ಕೆ ಹಾತೊರೆಯುವದಕ್ಕಿಂತಲೂ ಹೆಚ್ಚಾಗಿ ರಾಯರೂ, ಸ್ಪರ್ಶಾನಂದರೂ ಹಾತೊರೆಯುತ್ತಾರೆ. ಇವರು ಹೇಳಿಕೊಟ್ಟದ್ದನ್ನು ಗಿಳಿಯಂತೆ ಒಪ್ಪಿಸಿದ ಮಾತ್ರಕ್ಕೆ ಅವರಿಗೆ ಬಂದ ಭಾಗ್ಯವೇನು? ಎಂಬುದು ನಾಟಕಕಾರರ ಪ್ರಶ್ನೆ ಇರಬೇಕು'[2] ಎಂಬುದು ನಿರಾಧಾರ ಸಂಗತಿಯಾಗಿದೆ. ಹರಿಜನರು ಸುಸಂಘಟಿತರಾಗಿದ್ದಾರೆ. ಅವರು ಆಡುವ ಮಾತುಗಳು ಇನ್ನೊಬ್ಬರು ಕಲಿಸಿದವುಗಳಲ್ಲ ಅವರ ಅಂತಃಕರಣದಲ್ಲಿ ಸಾಮಾಜಿಕ ನ್ಯಾಯದ ಆರ್ತವಾಣಿ ಕೇಳಿಬರುತ್ತದೆ. ಮಾರಿ–ದುರಗಪ್ಪ–ಅರಬಣ್ಣ ಇವರ ಮಾತುಗಳಲ್ಲಿ ಹರಿಜನರು ತಮ್ಮ ಉದ್ಧಾರಕ್ಕಾಗಿ ಎಷ್ಟು ಹಾತೊರೆಯುತ್ತಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

> 'ಎಲ್ಲರ ಕಾಲಕೆಳಗೆ ಹುಡಿಹುಡಿಯಾಗಿ
> ಕಲ್ಲು ನೆಲದ್ವ ಮುರುದು ಕುಡಿಕುಡಿಯಾಗಿ
> ಇಲ್ಲಿ ತನಕ ನೊಂದೆವೊ ಮಹಾದೇವ
> ಬಲ್ಲ ಕರುಣಿ ಕರುಣಿಸೋ ಬೆಳೆಯೋ ಜೀವ'[3]

---

1 ಕನ್ನಡ ನಾಟಕ ಪು. ೩೪೬.
2 ಕನ್ನಡ ನಾಟಕ ಪು. ೩೩೭.
3 'ಉದ್ಧಾರ' ಪು. ೨೭.

— ಎಂಬ ಆ ಆರ್ತಸ್ವರ ಸಿದ್ದಪ್ಪನದೊಬ್ಬನದೇ ಅಲ್ಲ. ಹರಿಜನರ ಮೂಕ-ವೇದನೆ ಅವನ ಹಾಡಿನಲ್ಲಿ ಹರಿದಿದೆ. ಸಿದ್ದಪ್ಪನ ಈ ಹಾಡು ರಾಯರು, ಸ್ಪರ್ಶಾ-ನಂದರು ಹೇಳಿಕೊಟ್ಟುದಲ್ಲ. 'ಹರಿಜನರು ತಮ್ಮ ನಡತೆಯನ್ನು ಉತ್ತಮ ಗೊಳಿಸಿಕೊಂಡು ಸವರ್ಣಿಗಳೊಡನೆ ಸೇರಲು ತಕ್ಕ ಯೋಗ್ಯತೆಯನ್ನು ಗಳಿಸಿ ಕೊಳ್ಳಬೇಕು.'[1] – ಎಂಬುದು ನಾಟಕಕಾರರ ಅಭಿಪ್ರಾಯವಾಗಿದ್ದರೆ ನಾಟಕದ ಸ್ವರೂಪ ಈಗಿದ್ದಂತೆ ಇರುತ್ತಲೇ ಇರಲಿಲ್ಲ. ನಾಟಕದಲ್ಲಿ ಹರಿಜನರ ಕುಂದು ಕೊರತೆಗಳನ್ನು ಚಿತ್ರಿಸದೆ ನಾಟಕಕಾರರು ಸವರ್ಣಿಗಳ ಸಮಾಜದ ಆಧ್ಯಾತ್ಮಿಕ ಅಧಃಪತನವನ್ನು ಚಿತ್ರಿಸಿದ್ದಾರೆ. ಸಿದ್ದಪ್ಪನಂತಹ ಒಂದು ಪಾತ್ರವನ್ನು ಸವರ್ಣಿಗಳಲ್ಲಿ ಅವರು ಚಿತ್ರಿಸಿಲ್ಲ ಎಂಬುದನ್ನು ಗಮನಿಸಬೇಕು.

ನಾಟಕಕಾರರ ಮುಖ್ಯಪ್ರಶ್ನೆ, 'ಯುಟೋಪಿಯಾ' ಏಕೆ ವಿಫಲ ವಾಗುತ್ತದೆ? — ಎಂಬುದು. ಹದಿನೆಂಟನೆಯ ಶತಮಾನದ ಮಾನವತಾವಾದ ಭಾರತಕ್ಕೆ ಬಂದ ಮೇಲೆ — ಸಾಮಾಜಿಕ ನ್ಯಾಯದ ಹಸಿವಿಗೆ ಮಾತು ಬಂದಿತು. ಅದರ ಸಾಧನೆಗಳನ್ನು ಗಮನಿಸಿಯೂ ನಾಟಕಕಾರರು ಅದರ ಇತಿಮಿತಿಗಳನ್ನು ಮರೆತಿಲ್ಲ. ಅವರ ದೃಷ್ಟಿಯಲ್ಲಿ ಅಸ್ಪೃಶ್ಯತೆಯ ಸಮಸ್ಯೆ ವ್ಯಾಪಕಸ್ವರೂಪವನ್ನು ತಾಳುತ್ತದೆ. ವ್ಯಾಪಕತೆಯನ್ನು ಒಂದು ಕ್ರಿಯಾಸಮೂಹದಿಂದ ಅನುಭವಕ್ಕೆ ತಂದುಕೊಂಡುವ ಪ್ರಯತ್ನವನ್ನು ಅವರು ಇಲ್ಲಿ ಮಾಡಿದ್ದಾರೆ ಕೋದಂಡರಾಯನು ಹರಿಜನರಿಗೆ ನೀಡುವ ಆಶ್ವಾಸನೆಯ ಸ್ವರೂಪ ಕಾನೂನಿನ ಮೇಲೆ ಆಧರಿಸಿದೆ. ಅಸ್ಪೃಶ್ಯರ ಕೈವಾರಿಯಾದ ಕೋದಂಡರಾಯ ವಕೀಲನಾದುದು ಇದರ ಸಂಕೇತ ವಾಗಿದೆ. ಮಾನವತಾವಾದದ ಧ್ಯೇಯಗಳು ಕೇವಲ ಲೌಕಿಕಗಳಲ್ಲ ಎಂಬುದನ್ನು ಮನಗಾಣಬೇಕು. ಆಂತರಿಕ ಜೀವನದ ಬಹಿರಂಗದ ಅಭಿವ್ಯಕ್ತಿಗಳಾಗಿ ಅವು ಬಂದರೆ ಅರ್ಥಪೂರ್ಣವಾಗುತ್ತದೆ. ಅವುಗಳನ್ನು ಕೇವಲ ಸಾಮಾಜಿಕ ಹಾಗೂ ರಾಜಕೀಯ ಸ್ತರಗಳಲ್ಲಿ ಮಾತ್ರ ಸಾಧಿಸಿದರೆ ಸಾಲದು. ಏಕೆಂದರೆ ಅಲ್ಲಿ ಅವು ಮಾನವಧರ್ಮವಾಗಿ ಬರುವದಿಲ್ಲ. ಸಮತೆ, ಸ್ವಾತಂತ್ರ್ಯ, ಬಂಧುತ್ವ ಇವು ಮನೋಲೋಕದ ಮೌಲ್ಯಗಳಲ್ಲ; ಆತ್ಮಿಕ ಮೌಲ್ಯಗಳು. ಬಂಧುತ್ವವಿಲ್ಲದೆ ಸಮತೆ, ಸ್ವಾತಂತ್ರ್ಯ ಇವು ಮಾನವಸಮಾಜದಲ್ಲಿ ಅವತರಿಸುವದಿಲ್ಲ. ಬಂಧುತ್ವ ರಕ್ತ ಸಂಬಂಧಿಕವೂ ಅಲ್ಲ, ಕೇವಲ ಬೌದ್ಧಿಕತತ್ತ್ವವೂ ಅಲ್ಲ.

ಹಾಗಾದರೆ ಮನುಷ್ಯ ಕೈಕಟ್ಟಿಕೊಂಡು ಕೂಡ್ರಬೇಕೆ? ಎಂಬ ನೈರಾಶ್ಯ-ವನ್ನು ನಾಟಕಕಾರರು ಉಪದೇಶಿಸುವದಿಲ್ಲ. 'ಇದ್ದ ತೊಡಕುಗಳನ್ನು ಬಿಡಿಸು-ವವರಾದರೂ ಬರಬಹುದೆ'?[2] ಎಂದು ಹಾದಿಕಾಯುತ್ತ ಕೂಡುವ ನಿಷ್ಕ್ರಿಯ

1 ಕನ್ನಡ ನಾಟಕ ಪು. ೪೩೬.
2 'ಉದ್ಧಾರ' (ಮುನ್ನುಡಿ) ಪು. ೬

ವಾದಿಗಳಲ್ಲ ಅವರು. ಸಾಹಿತಿಯ ಹೊಣೆಯನ್ನು ಅವರು ಅರಿತಿದ್ದಾರೆ. ಅನೇಕ ಮತಸ್ಥಾಪಕರು, ಸಮಾಜಸುಧಾರಕರು, ತತ್ತ್ವಜ್ಞಾನಿಗಳು, ಅರ್ಥಶಾಸ್ತ್ರಜ್ಞರು ಈ ದಿಸೆಯಲ್ಲಿ ತಮ್ಮ ತಮ್ಮ ದಾರಿಗಳಲ್ಲಿ ಪ್ರಯತ್ನವನ್ನು ನಡೆಯಿಸಿದ್ದಾರೆ. ಸಾಹಿತಿಗಳದೂ ಒಂದು ದಾರಿ.

ನಾಟಕಕಾರರ ದೃಷ್ಟಿಯಲ್ಲಿ 'ದೃಶ್ಯಕಾವ್ಯಗಳ ದರ್ಶನಯೋಗವು ಒಂದು ಜಾಗೃತ ಸಮಾಧಿಯಿದ್ದಂತೆ'[1] ನಾಟಕಾನುಭವದಲ್ಲಿ 'ಪ್ರೇಕ್ಷಕ ಪದವಿಯ ಮೂಲಕವಾಗಿ ಬರುವ ತಾಟಸ್ಥ್ಯದಿಂದ ನಿರ್ಲಿಪ್ತ ದೇವತೆಗಳ ಪದವಿಯುಂಟಾಗಿ, ರಂಜನೆಯ ತನ್ಮಯತೆಯಲ್ಲಿ ಅಂತಃಕರಣದ ವೈಷಮ್ಯವು ಕಡಿಮೆಯಾಗುವುದು.' ನಾಟಕಕಾರರು ಬೋಧಪರವಾದಿಗಳಾಗಿದ್ದರೂ ಕೃತಿಯ ಕಲಾಮೌಲ್ಯಗಳಿಗೆ ಭಂಗ ತಂದಿಲ್ಲ ಎಂಬುದನ್ನು ಗಮನಿಸಬೇಕು. ಸಹೃದಯರನ್ನು ಬೇರೆ ಲೋಕಕ್ಕೆ ಒಯ್ದು ಅವರಿಗೆ ಆತ್ಮವಿಸ್ಮರಣವನ್ನು ತಂದು ಕೊಡುವುದು ಕಲೆಯ ಗುರಿ ಎಂದು ಅವರು ಒಪ್ಪುವದಿಲ್ಲ. ನಮ್ಮ ಜೀವನ ಹೇಗೆ ಇರಬೇಕು ಎಂಬ ಕಲ್ಪನೆಯ ಮಾದರಿಯನ್ನು ರೂಪಿಸದೆ ಅವರು ತನ್ನ ಅರಿವು ತನಗಾಗಬೇಕೆಂಬ ಮಾನವನ ಎದುರು ಸಮಾಜಚಿತ್ರವನ್ನು ಇಟ್ಟಿದ್ದಾರೆ.

ನಾಟಕದ ಶಿಲ್ಪ ಕೊರೆದು ಮಾಡಿದ ಹಾಗೆ ಪರಿಪೂರ್ಣವಾಗಿಲ್ಲ. ಶಿಲ್ಪದಲ್ಲಿ ಶಿಥಿಲತೆ ಕಂಡುಬರುತ್ತದೆ. ಎರಡನೆಯ ದೃಶ್ಯದಲ್ಲಿಯ ಲಾವಣಿ ಅನಾವಶ್ಯಕವಾಗಿ ದೀರ್ಘವಾಗಿದೆ. ಆದರೆ ನಾಟಕದ ಗತಿ ಅನಿರುದ್ಧವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ನಾಟಕದಲ್ಲಿಯ ಭಾಷೆ, ಶೈಲಿ ಸತ್ವಪೂರ್ಣವಾಗಿದೆ, ವೀರ್ಯವತ್ತಾಗಿದೆ. ನಾಟಕದ ಎಲ್ಲ ಪಾತ್ರಗಳೂ ತಮ್ಮ ತಮ್ಮ ಮಾತುಗಳನ್ನಾಡುತ್ತವೆ. ಯಾವ ಪಾತ್ರವೂ ನಾಟಕಕಾರರ ಭಾಷೆಯನ್ನಾಡುವದಿಲ್ಲ. ಒಂದು ಪಾತ್ರವನ್ನು ಇನ್ನೊಂದು ಪಾತ್ರದಿಂದ, ಅದು ಆಡುವ ಭಾಷೆಯಿಂದ ವಿಂಗಡಿಸಬಹುದು. ಪಾತ್ರ ವೈವಿಧ್ಯ, ಭಾಷಾವೈಚಿತ್ರ್ಯದಿಂದ ಸ್ಪಷ್ಟವಾಗಿ ಕಾಣುತ್ತದೆ. ನಾಟಕದಲ್ಲಿಯ ಶೈಲಿ, ಕೃತಿಯ ಮರ್ಯಾದೆಯನ್ನು ಮೀರಿ ತನ್ನ ವೈಭವವನ್ನು ಮೆರೆಯಬಾರದು. ನಾಟಕದ ಉದ್ದೇಶವನ್ನು ನಿರ್ವಹಿಸಿ ನಾಟಕದ ಅಂಗಗಳಲ್ಲಿ ಒಂದಾಗಿರಬೇಕು. 'ಉದ್ಧಾರ'ದಲ್ಲಿ ಶಬ್ದದ ದುಂದುಗಾರಿಕೆಯಿಲ್ಲ.

ಪಾತ್ರದ ಭಾವಾನುಸಾರವಾಗಿ ಶಬ್ದ ಬರುತ್ತದೆ. ಶಬ್ದ-ಭಾವ ಇವುಗಳ ಅನ್ಯೋನ್ಯ ಸಾಮರಸ್ಯ ಅಪೂರ್ವವಾಗಿದೆ. ಯಾವ ಬಂಧನವೂ ಇಲ್ಲದೆ ಭಾವ ಅಭಿವ್ಯಕ್ತವಾಗಿದೆ. ನಾಟಕದ ತುಂಬ ಭಿನ್ನಭಿನ್ನ ಭಾವಗಳ ವಿಕಾಸವಿದೆ.

---

1 'ಉದ್ಧಾರ' – ಪು. ೩೩.

ನಾಟಕಕಾರರು ತಮ್ಮ ಶೈಲಿಯ ಸಾಮರ್ಥ್ಯದಿಂದ ಖಚಿತವಾಗಿ ಅವುಗಳಿಗೆ ನಾಟ್ಯ-ರೂಪವನ್ನು ಕೊಟ್ಟಿದ್ದಾರೆ. ಸಂವಾದಗಳಲ್ಲಿ ಸಹಜತೆಯಿದೆ, ಸರಳತೆಯಿದೆ. ಶಬ್ದ, ಭಾವ, ಚಿಂತನ ಇವುಗಳಿಂದ ಗರ್ಭಿತವಾಗಿದೆ. ಈ ಎಲ್ಲ ಮಾತುಗಳಿಗೆ ಉದಾಹರಣೆಯೆಂದು ಒಂದು ಸಣ್ಣ ಸನ್ನಿವೇಶವನ್ನು ನೋಡಬಹುದು :

ರಾಯರು :– ನಿಮ್ಮ ಈ ತವಡುಕುಟ್ಟೋ ಮಾತು, ಪೊಳ್ಳು ಬೆವರಿಕೆ ಕೇಳಲಿಕ್ಕಂತೂ ನನಗ ಸುತಾರಾಂ ಅವಕಾಶವಿಲ್ಲ.

ವಿಘ್ನ :– ರಾಯರs, ದೇವಾಲಯಪ್ರವೇಶ ಅಂದರ ಸುಲದ ಬಾಳೀಹಣ್ಣು ಅಂತ ತಿಳಿದೀರೇನು ?

ಸ್ಪರ್ಶ :– ಅಷ್ಟೂ ಇಲ್ಲ. ಬಾಯಿ ಹಾಕಿದವರಿಗೆ ಸಿಗೋ ಬೇಲಿಯ ದ್ರಾಕ್ಷಿಯಿದು.

ರುದ್ರಯ್ಯ :– ಬಾಯಾಗ ಬಿದ್ದದ್ದೆಲ್ಲ ಗಂಟಲ ಕೆಳಗ ಇಳಿದೀತೆಂಬೋ ನಿಯಮಿಲ್ರಿ ! ನಾವು ಆದೀವಿ ಇಲ್ಲೇ ನಿಮ್ಮ ಗಂಟಲಗಾಣರು.

ಸಂವಾದದಲ್ಲಿಯ ಖಚಿತತೆ, ಸ್ಪಷ್ಟತೆ, ಸಂಕ್ಷಿಪ್ತತೆ, ಎಲ್ಲ ಗುಣಗಳೂ ಇಲ್ಲಿ ಕಂಡುಬರುತ್ತಿವೆ. ಅಲ್ಲಲ್ಲಿ ಅಮೂರ್ತವನ್ನು ಮೂರ್ತಗೊಳಿಸುವ ಶಕ್ತಿ ' ಉದ್ಧಾರ ' ನಾಟಕದ ಶೈಲಿಯಲ್ಲಿದೆ. ನಾಟಕದ ಪ್ರತಿಮಾಸಂಯೋಜನೆ ಕೂಡ ಬಹಳ ಪರಿಣಾಮಕಾರಿಯಾಗಿದೆ. ಅದೇ ಒಂದು ಸ್ವತಂತ್ರ ಪ್ರಬಂಧವಾಗುವಷ್ಟು ಅದರ ವಿಸ್ತಾರವಿದೆ. ಒಟ್ಟಿನ ಮೇಲೆ ' ಉದ್ಧಾರ ' ಹಲವಾರು ರೀತಿಗಳಿಂದ ಸಾರ್ಥಕ ಕೃತಿ ಎಂದು ಹೇಳಬಹುದು.

§ § § §

೩೮

# ಬೇಂದ್ರೆ ಕಾವ್ಯಸ್ರೋತ

ಬಿ. ಎಚ್. ಶ್ರೀಧರ

೧

ಗರಿಯಲ್ಲಿ ಬಂದಿರುವ “ ಸನ್ನ ಕಿನ್ನರಿ ” ಎಂಬುದೊಂದು ಅತಿ ಚಿಕ್ಕ ಸರಳ ಪದ್ಯ. ಆದರೆ ಇದರಲ್ಲಿ ಬೇಂದ್ರೆಯವರ ಬಾಳಿನ ಭಾವಸ್ರೋತಸ್ಸಿನ ಅತಿ ದೊಡ್ಡ ಸೆಲೆಯೊಂದು ಅಡಗಿದೆ ಎನ್ನಬಹುದು. ದಾಸ-ಶರಣರಂತೆ ಅವರ ವ್ಯಕ್ತಿ-ತ್ವದ ಭಕ್ತಮುಖ ಅತ್ಯಂತ ಘನವಾದುದು. ಅವರನ್ನು ಕೇಳಿದರೆ ಬಹುಶಃ ಭಕ್ತಿಯು ಸರ್ವೋತ್ತಮ ರಸವೆಂದು ಹೇಳಿಯಾರು ಎಂಬುದು ಅವರ ಕೆಲ ಕವಿತೆಗಳ ಅವಲೋಕನದಿಂದ ಸ್ಪಷ್ಟವಾಗುತ್ತದೆ.

ಮೇಲೆ ಹೇಳಿದ ಪದ್ಯದ ಆರಂಭವು ಸಾಮಾನ್ಯ ಸುಸಂಸ್ಕೃತ ಭಾರತೀಯನ ವೇದಾಂತೋನ್ಮುಖ ಭಾವನೆಯನ್ನು ಬಿಂಬಿಸುತ್ತದೆ. ಆದರೆ ಕೊನೆಯಲ್ಲಿ ‘ ಯಾರದೋ ಜೆಟ್ಟಿಗೆ ಮೂಡಲಸಿಟ್ಟಿಗೆ ನೋಡ್ತೇನ ನೋಡ್ತೇನ ನೋಡ್ತೇನ, ಕಾಣದ್ದರ ಹಾಡೊಂದ ಹಾಡ್ತೇನ ’ ಎನ್ನುವಲ್ಲಿ ಸಾಮಾನ್ಯ ವೇದಾಂತಪರತೆಯ ಗಡಿಯನ್ನು ದಾಟಿ ಅನುಭಾವದ ಹೊಳಪನ್ನು ಬೀರುತ್ತದೆ ದಿವ್ಯದರ್ಶನಕ್ಕಾಗಿ ಭಕ್ತ ಹೃದಯವು ದಾರಿನೋಡುತ್ತಿದೆ— ಎಂಬ ಅಭಿನಿವೇಶ ಅಲ್ಲಿ ಸೂಚಿತವಾಗಿದೆ. ಆ ದರ್ಶನವಾಗದಿರುವಾಗ ಅದರ ಬಗ್ಗೆ ಹಾಡುತ್ತೇನೆ ಎಂಬುದೂ ಅರ್ಥವತ್ತಾಗಿದೆ. “ ಕಂಡ್ಹಂಗಾತು ನೀರಿನ ಕೊಳ, ಎಂಥ ಝಳ ಝಳ ” ಎಂದ ಮಾತಿನಂತೆ ಅಲ್ಲಿ ಇಲ್ಲಿ, ಆಗ ಈಗ ಕವಿಯ ಭಾವಗಗನದಲ್ಲಿ ದಿವ್ಯತೆಯ ಈಷದುನ್ಮೇಷ ಉಂಟಾಗಿ, “ ಸವಿ ಹಚ್ಚಿ ಗೆಣೆಯ ಸರಕೊಂಡ ” ಎಂಬಂತೆ ಮಿಂಚಿ ಮಾಯವಾಗುತ್ತಿದ್ದ ದರ್ಶನದ ಮಂದಹಾಸದಿಂದ ಆಕೃಷ್ಟವಾದ ಜೀವನು “ ಕಾಣದ್ದರ ಹಾಡೊಂದ ಹಾಡ್ತೇನ ” ಎನ್ನಲು ಶಕ್ತನಾಗಿದ್ದಾನೆ.

೨

ಸಖೀಗೀತದಲ್ಲಿ “ ಮಾಯಾಕಿನ್ನರಿ ” ಎಂಬ ಪದ್ಯವು ಹಿಂದಿನ ಪದ್ಯದಲ್ಲಿ ಕಂಡು ಬಂದ ಜೋಗಿ-ಜಂಗಮ ಮನಃಪ್ರಣಾಳಿಯನ್ನೇ ಬಿಂಬಿಸುವ ಮತ್ತೊಂದು

ಕೃತಿ. ಆ ಧಾಟಿಯಲ್ಲೇ ನಡೆಯುತ್ತ ಈ ಪದ್ಯವು ವೇದಾಂತದ ಪುರುಷಾರ್ಥದ ಅರ್ಥವನ್ನು ಅತ್ಯಂತ ಸುಂದರವಾದ ಕಾವ್ಯಮಯ ಶೈಲಿಯಲ್ಲಿ ಧ್ವನಿಸುತ್ತದೆ :

> " ಆತನೀತನವಂತ ಯಾತನದ ಯಾತನೆಯು ಯಾತ ಕಿರುಗುಟ್ಟೋದು
> ನಿಂದ್ಹಾಂಗ
> ನಾನೀನ ನುಡಿ ನುಂಗಿ ತಾನೀನ ತಾನೇ ತಾ ತಾನಾಗಿ ತನನ ಅಂದ್ಹಂಗ "

" Word-music ಮಾತು ಮಾತು ಮಥಿಸಿ ಬಂದ ನಾದದ ನವನೀತವು " ಮೇಲಿನ ಸಾಲುಗಳಲ್ಲಿ ಅದ್ವಿತೀಯ ಔಚಿತ್ಯದಿಂದ " ನಚತ್ವಂ ನಚಾಹಂ ನಚಾಯಂ ಪ್ರಪಂಚಃ '' ಮತ್ತು " ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ " ಎಂಬ ಭಾವಲೋಕವನ್ನು ತುಂಬಿ, " ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಃ ಸ್ತ್ವಚ್ಛಿನ್ನ ಸಂಶಯಃ '' ಎಂಬ ಅರ್ಥಾಂಶವನ್ನು ತನನಿಸುತ್ತದೆ. ಇದನ್ನರಿತ ಕವಿ ಮಾಯೆಯ ಮೈಗೆ ಮತ್ತೊಂದು ಮೈಮೂಡಿ ಬಂದಂತೆ ಕಿನ್ನರಿ ನುಡಿಯ ಲಾರಂಭಿಸಿತೆಂದು ಅದೇ ನುಡಿಯ ಅಂತ್ಯದಲ್ಲಿ ಪಡಿನುಡಿದಿದ್ದಾನೆ. ಕಿನ್ನರಿಯು ಭಕ್ತಾತ್ಮ, ಜಂಗಮವು ದೇವತಾತ್ಮ. ಈ ಆಭಾಸಿಕ ದ್ವಂದ್ವದ ಅವಿಭಕ್ತಸ್ಥಿತಿ ಯನ್ನು ನಾದದ ನದಿ ಇಲ್ಲಿ ನಿನದಿಸುತ್ತದೆ. ಭಕ್ತಿಯು ಕವಿಯ ಪ್ರಕೃತಿ, ಸ್ವಭಾವ; ಅದು ಭಗವಂತನನ್ನು (ಪುರುಷನನ್ನು) ಮರುಳು ಮಾಡ ಹೋಗಿ ತಾನೇ ಅವನಿಗೆ ಮರುಳಾದ ಆಶ್ಚರ್ಯದ ಸಂಗತಿಯನ್ನಿಲ್ಲಿ ಹಾಡಲಾಗಿದೆ. ಏಕೆಂದರೆ ಭಗವಂತನು "ಜನ್ಮಾದ್ಯಸ್ಯ ಯತಃ '' ಎಂಬುದರಲ್ಲಿ ಹೇಳಿದಂತೆ ಎಲ್ಲ ಪ್ರಕೃತಿಗಳ ಮೂಲಾಧಾರ, ಅವರ್ಣನೀಯ ನಾದ ಪ್ರಾಚೀನ ಸೌಂದರ್ಯನಿಧಿ (ಭೂತವಸ್ತು). " ನಿಜಧೀರರ ನಿಲುವೇ ಚೆಲುವು " ಎನ್ನುವಂತಹ ಚೆಲುವು ಆತನದು; ಪ್ರಪಂಚದ ಪ್ರಕೃತಿ ಯನ್ನು ಪ್ರತಿನಿಧಿಸುವ ಭಕ್ತಾತ್ಮದ್ದು ಶತರೂಪ, ಬಹುರೂಪ ! ಅನೇಕಾಂತ, ಅನೇಕಾಗ್ರತೆಗಳುಳ್ಳ ಭಕ್ತಭಾವವು Ascend— ಲೋಕೋತ್ತರತೆಗೇರಿದಾಗ ಏಕಾಂತವೂ ಏಕಾಗ್ರವೂ ಅಲೌಕಿಕವೂ ಆದ ದೈವತತ್ವವು Descend-ಅವತರಿಸಿ ಸಮರಸವನ್ನೊಡರಿಸಿದ ಸ್ಥಿತಿಯು ಸುಕೃತ, ರಸ, ಆನಂದ, ಮೋಕ್ಷ—ಅದೊಂದು ಮಂಜುಗೀತ !

೩

ಸೂರ್ಯಪಾನದಲ್ಲಿ ಬಂದ " ಸಪ್ತಕಲೆ "ಯು ಸಾಮಾಚ್ಛಂದಾನುಗಾಮಿ. ಅದೊಂದು ನಾದಬ್ರಹ್ಮನ ಕಿನ್ನರಿ. ಅದು ವರ್ಣಿಸುವುದು ನಾದ-ಬಿಂದು-ಕಲಾ- ತೀತನ ಲೀಲೆಯನ್ನು. ಅದರಲ್ಲಿಯ ಒಂದೊಂದು ಮಾತೂ ಒಂದೊಂದು ಅಮೃತ ಬಿಂದು. ಅದರ ಮೊದಲನೆಯ ಖಂಡವು ಬ್ರಹ್ಮತತ್ವದ Dynamism ಉತ್

ಕ್ರಿಯತ್ವವನ್ನು ವರ್ಣಿಸುತ್ತದೆ. ಜೀವನವು ಕ್ರಿಯಾಮಯ. ಕ್ರಿಯೆಯು ಸ್ವತಂತ್ರ. ಸ್ವಾತಂತ್ರ್ಯವು ಸ್ವಾಭಾವಿಕ. ಆದರಿಂದ ನಾದಪ್ರಸವ. ಸಂಗೀತವು ನಾದಸಂಘರ್ಷ. ಭಗವಂತನ ಉಕ್ತಸ್ವಾತಂತ್ರ್ಯವು ನಿಯಂತ್ರಿತ ಕ್ರಿಯಾರೂಪದಲ್ಲಿ ಆವಿರ್ಭವಿಸುತ್ತದೆ. ಆಗ ಅದಕ್ಕೆ ಅಡೆತಡೆಯಿರದು. ಸ್ವಾತಂತ್ರ್ಯಪಡೆಯಲು ಸಂಘರ್ಷ ನಡೆಸುವುದೇ ಬಾಳಿನ ಗುರಿ. ಸ್ವತಂತ್ರವಾಗಿ ಇರಬೇಕೆಂದು ಬಯಸುವುದು ಬಾಳಿನ ಒಳತಿರುಳು. ಅದು ಬಹುತ್ವದಲ್ಲಿ ಆರಂಭವಾಗಿ ಐಕ್ಯವನ್ನು ತಲುಪುತ್ತದೆ ಮತ್ತು ಎರಡನೆಯದನ್ನು ಮೀರುತ್ತದೆ. ಈ ಸಂಘರ್ಷ ಅಥವಾ ಹೋರಾಟವು ನಮ್ಮ ವೈಯಕ್ತಿಕ ತಪಸ್ಸಿನ ಮೂಲಕ ಕೊನೆಯಲ್ಲಿ ಸ್ವಾತಂತ್ರ್ಯದ ಸಂಪೂರ್ಣ ಆವಿರ್ಭಾವಕ್ಕೊಯ್ದು ಮುಟ್ಟಿಸುತ್ತದೆ. ಭಗವಂತನು(ಬ್ರಹ್ಮನು)ಇಂಥ ತಪಸ್ಸನ್ನು ಮಾಡಿ ಸೂರ್ಯ-ಚಂದ್ರಾದಿಗಳನ್ನು ಪ್ರಕಟಿಸಿದನು. ಬ್ರಹ್ಮನ ಸ್ವಾತಂತ್ರ್ಯ ಸಿದ್ಧಿಯ ಈ ಬಯಕೆಯು ಮಾತನ್ನು ಮೀರಿದ ಒಂದು ಮಹಾಗೀತ. ಅದರ ರಾಗ-ಥಾಟ-ತಾಳಗಳೆಲ್ಲ ಅವನ ಪ್ರೇಮಶೈಲಿಯಲ್ಲೇ ಅಡಗಿದೆ. ಸಂಗೀತಕಲೆಯು ಈ ಪ್ರಕಾರ ಬ್ರಹ್ಮನ ಆದ್ಯಸೃಷ್ಟಿ.

ಎರಡನೆಯ ಖಂಡದಲ್ಲಿ ರೇಖಾಪ್ರಧಾನವಾದ ರೇಖಾಚಿತ್ರ, ವರ್ಣಚಿತ್ರ, ಮೂರ್ತಿಚಿತ್ರಗಳ ಕಲೋದ್ಭವವನ್ನು ಅದೇ ಮೇರೆಗೆ ವರ್ಣಿಸಲಾಗಿದೆ. ಆಕಾಶದಲ್ಲಿಯ ಕಿರಣಗಳು ರೇಖೆಗಳು; ಅವು ಪರಮಾತ್ಮನ ಹೃದಯಾಂತಃಕೇಕೆಗಳು ! ಶಿಲಾಕಾಶದಲ್ಲೂ ಹಾಗೇ. ಕವಿಪ್ರತಿಭೆಯ ಲೇಖೆ ವ್ಯಂಗ್ಯವಾಗಿ ಹೊಳೆಯುವಂತೆ ಶಿಲ್ಪಿಪ್ರತಿಭೆಯ ರೇಖೆ ವಕ್ರವಾಗಿ (ಸುಂದರವಾಗಿ), ಸಂಘರ್ಷಿಸಿ, ಸಂಮಿಲಿತವಾಗಿ ಕೀರ್ತಿಕಾಮದಿಂದ (ರೇಖಾ-ವರ್ಣ) ಮೂರ್ತಿಗಳಲ್ಲಿ ಪ್ರಾದುರ್ಭವಿಸಿದ್ದು ಅದರ ಸ್ವಾತಂತ್ರ್ಯದ ಹೋರಾಟ ಮತ್ತು ಸಾಧನೆ.

ಮೂರನೆಯ ಖಂಡದಲ್ಲಿ ಮೂಕ ಕಲೆಗಳಲ್ಲಿ ಅಗ್ರಗಣ್ಯವಾದ ನೃತ್ಯದ ಸಂಭವವನ್ನು ಹೇಳಲಾಗಿದೆ. ಭಗವಂತನ ನರ್ತನದ ಮೂಕಭಾವವು ಆವೇಶ ಸಂಘರ್ಷದಿಂದ ಸ್ವಾತಂತ್ರ್ಯಪಡೆಯಲು ಯತ್ನಿಸಿದುದರ ಫಲವಾಗಿ ಮರ್ತ್ಯ ಲೋಕದಲ್ಲಿ ಅಂಗಚಲನ ಸ್ವರೂಪ ತಾಳಿ ಪ್ರಕಟವಾಯಿತು—ಎಂಬ ಅಂಶ ಬಂದಿದೆ. ತಾಂಡವ-ಲಾಸ್ಯಗಳೆಂಬ ನೃತ್ಯಪ್ರಕಾರಗಳು ಹುಟ್ಟಿದ್ದು ಬ್ರಹ್ಮನ ಅಂತಃಕರಣದಲ್ಲಿಯ ಭಾವಕ್ಕೆ ಉಂಟಾದ ಹೊಟ್ಟೆಯ ನೋವಿನ ಅಥವಾ ತಪಸ್ಸಿನ ಪರಿಣಾಮವಾಗಿಯೇ !

ನಾಲ್ಕನೆಯದಾಗಿ ನಾಟ್ಯ ಅಥವಾ ನಾಟಕ ಎಂಬ ಕಲೆಯ ಉತ್ಪತ್ತಿ. ಪ್ರಕೃತಿ-ದೈವಗಳ ಸಂಘರ್ಷದಲ್ಲಿ ಪರಮಾತ್ಮನ ಅವಿದಿತ, ವಿದಿತ, ಉದಿತ ಸಾತ್ವಿಕಭಾವಗಳು ಜೀವಂತವಾಗಿ ಕೃತಿರೂಪದ ದೃಷ್ಟಿಶ್ರುತಿಯೆಂಬ ನಾಟಕದ

ಅಥವಾ ರೂಪಕದ ರೂಪದಲ್ಲಿ ಗರ್ಭೋತ್ಪಾಟನ ಮಾಡಿ ಸ್ವಾತಂತ್ರ್ಯ ಪಡೆದು ಪ್ರಕಟವಾದವು. "ಸತ್ತ್ವೋದ್ರೇಕಾದಖಂಡಃ ಸ್ವಪ್ರಕಾಶಾನಂದ ಚಿನ್ಮಯಃ" ಎಂಬುದು ನಾಟ್ಯರಸದ ಸ್ವರೂಪ. "ಅವಸ್ಥಾನುಕೃತಿರ್ನಾಟ್ಯಂ" ಮತ್ತು "ಲೋಕವೃತ್ತಾನುಕರಣಂ ನಾಟ್ಯಂ" ಹಾಗೂ "ತ್ರೈಗುಣ್ಯೋದ್ಭವಮತ್ರಲೋಕ ಚರಿತಂ ನಾನಾರಸಂ ನಾಟ್ಯಂ" ಎಂಬ ಲಕ್ಷಣಗಳು ಕರ್ಮಾಕರ್ಮಗಳ ಫಲ ವಿಫಲತೆಗಳನ್ನು ಆಧರಿಸಿದವು ಎಂಬುದನ್ನು ಮೊದಲು ಉಲ್ಲೇಖಿಸಲಾಗಿದೆ. ಇಂಥ ನಾಟಕವು ಮನುಷ್ಯನಿಗೆ ಮತ್ತು ದೇವರಿಗೆ ತಮ್ಮತಮ್ಮ ಸ್ವರೂಪಗಳನ್ನು ತೋರಿಸಿ ಕೊಡುವ ದೀಪ !

ಐದನೆಯ ಖಂಡದಲ್ಲಿ ಪರಮಾತ್ಮನ ಪ್ರಪಂಚ ಸೃಷ್ಟಿಯ ಕಲೆಯ ಉಲ್ಲೇಖ ವಿದೆ. ಅದ್ವೈತವು ದ್ವೈತಾದಿಗಳನ್ನು ಹಡೆಯುವ "ಏಕೋऽಹಂ ಬಹುಸ್ಯಾಂ ಪ್ರಜಾಯೇಯ" ಎಂಬ ಬಯಕೆಗನುಸಾರವಾಗಿ ಸದ್ರೂಪ ಸಹಿತನಾದ ಶಾಂತ-ಬ್ರಹ್ಮನು ಬೀಜ-ಬಿಂದುಗಳ ಮೂಲಕ ಕಲಲವನ್ನು ನಿರ್ಮಿಸಿ ಅಕಲ-ವಿಕಲ ಸ್ಥಿತಿ-ಗಳನ್ನು ದಾಟಿ ಸಕಲನಾದ ಮಾನವನ ಶರೀರವನ್ನು ರಚಿಸುವ ವರೆಗಿನ ಸೃಷ್ಟಿ ಕ್ರಮವನ್ನು ಹೇಳಲಾಗಿದೆ. ಇದೂ ಬ್ರಹ್ಮನ ಬಯಕೆ ಮಾಡಿದ ಸ್ವಾತಂತ್ರ್ಯ ಸಂಪಾದನೆಯ ಹೋರಾಟವೇ. ಈ ಕಾಮಸಂಘರ್ಷ ಬ್ರಹ್ಮೇಚ್ಛೆ ಪೂರ್ಣವಾಗು ವಾಗ ಸಂಭವಿಸುವುದೇ ಬೇನೆ, ನೋವು, ಕಷ್ಟ, ತಪಸ್ಸು !

ಆರನೆಯ ಖಂಡದಲ್ಲಿ ವಾಸ್ತುಶಿಲ್ಪದ ಉದಯವನ್ನು ಕೊಡಲಾಗಿದೆ. ಜನ್ಮಾಂತರದಿಂದ ಬಂದ ಪ್ರತಿಸೃಷ್ಟಿ ಮಾಡುವ ಉತ್ಸಾಹಶಕ್ತಿಯುಳ್ಳ ದಿವ್ಯ ಪ್ರತಿಭೆಯು ಮಾನವನೆದೆಯಲ್ಲಿ ತಪಸ್ಸೈಗೈದು ಸ್ವಾತಂತ್ರ್ಯ ಪಡೆದಾಗ ವಾಸ್ತು-ಸ್ವರೂಪಗಳುಂಟಾದವು. ಈ ಜನ್ಮಾಂತರ ಸಂಸ್ಕಾರಗಳೆಲ್ಲ ಭಗವಂತನ ಕಲ್ಪನಾ-ಗರ್ಭಿತ ಬಿಂಬಗಳು. ವಿವಿಧ ಲೋಕಗಳ ನಿರ್ಮಾತೃವಾದ ಆತನ ಸ್ಫೂರ್ತಿ ಪ್ರಕಾರಗಳು ಬಿಂಬಗಳು; ಮಾನವನ ಮನದ ಸ್ಫೂರ್ತಿಪ್ರಕಾರಗಳು ಅವುಗಳ ಪ್ರತಿಬಿಂಬಗಳು, ದರ್ಶನಗಳು. ದರ್ಶನದಂತೆ ಶಿಲ್ಪರಚನೆ, ಗುಡಿ-ಗೋಪುರಗಳ ನಿರ್ಮಾಣ.

ಏಳನೆಯ ಖಂಡದಲ್ಲಿ ಸಾಹಿತ್ಯಕಲೆಯ ವಿಕಾಸವನ್ನು ವಿವರಿಸಲಾಗಿದೆ. ಮಾತಿನಲ್ಲಿ ನಾಲ್ಕು ವಿಧ — ಪರಾ, ಪಶ್ಯಂತೀ, ಮಧ್ಯಮಾ, ವೈಖರೀ— ಎಂದು. ಪರಾ ಎಂಬುದು ಯೋಗಿಗಳಿಗೆ ಮಾತ್ರ ತಿಳಿಯುವ ಭಾಷೆ; ಪಶ್ಯಂತಿಯನ್ನು ಋಷಿ-ಮುನಿಗಳು ತಿಳಿಯಬಲ್ಲರು; ಮಧ್ಯಮೆಯು ಸಿದ್ಧಾದಿಗಮ್ಯ; ವೈಖರಿಯು ಎಲ್ಲ ಸರ್ವಸಾಮಾನ್ಯರಿಗೂ ತಿಳಿಯುವ ಭಾಷೆ. ಅತ್ಯುತ್ತಮ ಕಾವ್ಯ ಹೊರಡುವುದು ಪಶ್ಯಂತಿಯ ಕೇಂದ್ರದಿಂದ. "ನಾನೃಷಿಃ ಕುರುತೇ ಕಾವ್ಯಂ" ಎಂಬುದು ಈ

ದೃಷ್ಟಿಯಿಂದಲೇ ಸಾರ್ಥಕ. ವೇದೋಪನಿಷತ್ತುಗಳು ಪಶ್ಯಂತಿಯು ಮಧ್ಯಮೆಯಾಗಿ, ಮಧ್ಯಮೆಯು ವೈಖರಿಯಾಗಿ ರೂಪ ಹೊಂದಿದ ಪರಮಕಾವ್ಯಗಳು; ಪಶ್ಯಂತಿಯಲ್ಲಿ ಕಂಡದ್ದನ್ನು ವೈಖರಿಯಿಂದ ಹೇಳಿದ ಸಾಹಿತ್ಯಪ್ರಬಂಧಗಳು. ಈ ವಾಕ್ ಸಂಘರ್ಷವು ಬ್ರಹ್ಮ...ನರೂಪದ ಸರಸ್ವತಿಯ ತಪಸ್ಸೆ. ಕೃತಿರಚನೆಯಲ್ಲಿ ಅವಳ ಸ್ವಾತಂತ್ರ್ಯವು ಸಿದ್ಧಿಸುತ್ತದೆ. ಕವಿಹೃದಯದಲ್ಲಿ ತದ್ವತ್ ಸ್ಫುರಣ-ಸ್ಪಂದನ ಉಂಟಾದಾಗ ಆ ಬ್ರಹ್ಮಭಾವವೇ ಹೃದಯದ್ರವ್ಯವಾಗಿ ಭವಮಂಥನ ನಡೆದು ಕಾವ್ಯರಚನೆಯಾಗುತ್ತದೆ; ಸ್ಫೂರ್ತವಾದ ಮೂರ್ತವು ಆವಿರ್ಭೂತವಾಗುತ್ತದೆ. ಇಂಥ ಆವಿರ್ಭಾವವು ದಿವ್ಯ, ಭವ್ಯ, ನವ್ಯ, ಉತ್ತಮ ರಸಿಕ (ಶ್ರೋತ್ರಿಯ) ಗಮ್ಯ.

ಸತ್ ಅಥವಾ ಶಿವ, ಭಾವ, ಭವ, ಅನುಭವ, ಅನುಭಾವಗಳು ಅಮೂರ್ತ ಬ್ರಹ್ಮನು ಮೂರ್ತರೂಪ ತಾಳುವಾಗಿನ ಐದು ಘಟ್ಟಗಳು. ಶಿವವು ದಿಕ್ಕಾಲಾದ್ಯನವಚ್ಛಿನ್ನ; ಭಾವವು ದಿಕ್ಕಾಲಾದ್ಯವಚ್ಛಿನ್ನವಾದ ಹಿರಣ್ಯಗರ್ಭ. ಆ ಕಮಲ ಸಂಭವನಿಂದ ಸೃಷ್ಟವಾಗುವುದು ಭವ; ಭವದಿಂದ ಅನುಭವ; ಅನುಭವಸಾಗರವನ್ನು ಕಡೆದು ತೆಗೆದ ಅಮೃತ ಅನುಭಾವ. ಈ ಐದರಲ್ಲಿ ನಡುವಣ ೩ ಕಾವ್ಯಸ್ಥಳಗಳು, ಕಲಾಸಂಭವಗಳು. ಪೂರ್ಣಾವಸ್ಥೆಯ ಅನುಭಾವವು ಶಿವದಂತೆಯೇ ನಿರ್ವಿಕಲ್ಪಮೌನಸ್ಥಳ. ಅಪೂರ್ಣಾವಸ್ಥೆಯ ಅನುಭಾವವು ಕೆಲವೊಮ್ಮೆ ಕಾವ್ಯೋದ್ಯಮವೆನ್ನಿಸಬಹುದು.

೪

**ತುಂಬಿ**ಯಲ್ಲಿ "ಪೂರ್ಣಮಿದಂ ಪೂರ್ಣಮದಃ ಪೂರ್ಣಾತ್ ಪೂರ್ಣಮುದಚ್ಯತೇ, ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ" ಎಂಬ ಉಪನಿಷದ್ಘೋಷವಿದೆ. ಭಗವಂತನು ಪೂರ್ಣನು (Perfect). ಅದೇ ಮೇರೆಗೆ ಆವನು ತುಂಬಿಕೊಂಡಿರುವ ಪದಾರ್ಥಗಳೆಲ್ಲವೂ ಆಯಾ ಪದಾರ್ಥತ್ವದ ದೃಷ್ಟಿಯಿಂದ ಪೂರ್ಣವಾಗಿ ಇವೆ. ಇರುವೆ-ಎಂಭತ್ತುಕೋಟಿ ಚರಾಚರಗಳಲ್ಲಿ ಪ್ರತಿಯೊಂದಕ್ಕೂ ಅದರದರ ಸ್ವರೂಪದ ತರ್ಕಶುದ್ಧ ಪೂರ್ಣತೆಯಿರುವುದು ಪೂರ್ಣವಾದ ಪರಮಾತ್ಮನು ಆ ಪ್ರತಿಯೊಂದರಲ್ಲೂ ತುಂಬಿಕೊಂಡಿರುವುದರಿಂದಲೇ. ಎಲ್ಲ ವೈಯಕ್ತಿಕ ಸಾಪೇಕ್ಷ ಪದಾರ್ಥಗಳೂ ನಿರಪೇಕ್ಷಪದಾರ್ಥದ ವ್ಯಾಪಕತ್ವದ ಪರಿಣಾಮವಾಗಿ, ಅಂತರ್ಯಾಮಿತ್ವದ ಫಲವಾಗಿ ಆಯಾ ಸ್ವರೂಪ ಪರಿಮಿತಿಯಲ್ಲಿ, ಅವಚ್ಛೇದಕ ಧರ್ಮವತ್ತೆಯಲ್ಲಿ ಪೂರ್ಣವಾಗಿ, ಸಾಕಷ್ಟಾಗಿ ಅಥವಾ ಕನಿಷ್ಠಾವಧಿಕವಾಗಿಯಾದರೂ ಸಾರ್ಥಕವಾಗಿವೆ. ಪೂರ್ಣವೆಂದರೆ ತುಂಬುವುದು, ತುಂಬಿಸುವುದು; ತುಂಬಿದ್ದೇ ಹೂರಣ, ತಿರುಳು, ಆತ್ಮ (Essence). ಪರಮಾತ್ಮನು ಎಲ್ಲವುಗಳ

ಆತ್ಮ — “ ಈಶ್ವರಃ ಸರ್ವ ಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ. ” ಆತನು ಸರ್ವಾತಿರಿಕ್ತನಾದಾಗ ಪರಮಾತ್ಮ, ವ್ಯಕ್ತಿಗತನಾದಾಗ ಆತ್ಮ, ಚೇತನೆ. ಚೇತನೆ ನಮ್ಮ ಮೈಯಲ್ಲಿ ಎಲ್ಲಿ ಇಲ್ಲ ? ಪ್ರಪಂಚದಲ್ಲಿ ಎಲ್ಲಿ ಇಲ್ಲ ? ಅದರಿಂದಲೇ “ ಸರ್ವಂ ಖಲ್ವಿದಂ ಬ್ರಹ್ಮ, ತಜ್ಜಲಾನಿತಿ ಶಾಂತ ಉಪಾಸೀತ ” ಎಂದು ಉಪನಿಷದ್ರಹಸ್ಯದ ಉಪದೇಶಘೋಷವಿದೆ. ಕಲ್ಲಿನಲ್ಲಿ ಘನೀಭೂತ ಚೇತನೆಯಿದ್ದರೆ, ನೀರಿನಲ್ಲಿ ದ್ರವೀಭೂಪ್ರವಾದ ಚೇತನೆಯೂ, ವಾಯುವಿನಲ್ಲಿ ಅದಕ್ಕೂ ಸೂಕ್ಷ್ಮರೂಪದ ಚೇತನೆಯೂ, ಆಕಾಶದಲ್ಲಿ ಸೂಕ್ಷ್ಮತರರೂಪದ ಚೇತನೆಯೂ, ಆಕಾಶೋತ್ತರದಲ್ಲಿ ಬ್ರಹ್ಮತ್ವವುಳ್ಳ ಸೂಕ್ಷ್ಮತಮಚೇತನೆಯೂ ( Consciousness ) ತುಂಬಿರುವುದು ಶ್ರುತಿಸಿದ್ಧ. ಎಲ್ಲೆಲ್ಲೂ ಅದೇ ತುಂಬಿಕೊಂಡದ್ದರ ಪರಮಾವಧಿ ದರ್ಶನದಲ್ಲಿ ಅದರಿಂದ ಭಿನ್ನಪದಾರ್ಥಕ್ಕೆ ಅಸ್ತಿತ್ವವೇ ಇಲ್ಲ ! ಆಗ ಸಾಯುಜ್ಯ, ಬ್ರಹ್ಮೈಕ್ಯ, ಸೋಹಂಜ್ಞಾನದ ಅಪರೋಕ್ಷಾನುಭೂತಿ ! ಪೂರ್ಣದಿಂದ ಪೂರ್ಣವನ್ನು ತೆಗೆದರೆ ಪೂರ್ಣ ಉಳಿಯುವುದು ಹೇಗೆ ? ಎಲ್ಲೆಲ್ಲೂ ಪೂರಿತವಾದುದನ್ನು ತೆಗೆದಿಡಲು ಮತ್ತೊಂದು ಸ್ಥಳ (Space) ಇಲ್ಲದುದರಿಂದ ! ಇನ್ನೊಂದು ದೃಷ್ಟಿಯಿಂದ ಅಪ್ಪನಿಂದ ಮಗ ಹುಟ್ಟಿದರೆ ಅಪ್ಪನಲ್ಲಿ ಹಾಗೂ ಮಗನಲ್ಲಿ ಮನುಷ್ಯತ್ವದ ಪೂರ್ಣತೆ ಇದ್ದೇ ಇರುತ್ತದೆ ಎಂದೂ ಅರ್ಥಯಿಸಬಹುದು. ಒಳ್ಳೆಯ ಮನುಷ್ಯತ್ವವಿರಲಿ, ಕೆಟ್ಟದ್ದಿರಲಿ ಮನುಷ್ಯ ಎಂಬ ನಾಮರೂಪಸಂಪನ್ನತೆ ಇಬ್ಬರಿಗೂ ಇದ್ದೇ ಇದೆಯಲ್ಲವೇ ? ಪೂರ್ಣಾರ್ಥಕ ಮನುಷ್ಯನಿಂದ ಪೂರ್ಣಾರ್ಥಕ ಮನುಷ್ಯ ಹೊರಬಿದ್ದರೆ ಎಲ್ಲಿ ಏನು ಕಳೆದು ಹೋಯಿತು ?

೫

ಸಚ್ಚಿದಾನಂದದಲ್ಲಿ :

‘ ಪ್ರಕೃತಿ ಪುರುಷಗೆ ಸೋತು
ಪ್ರಾಣದ್ವಂಜಿಯು ಮಾತು
ಅನುಭವದ ಸವಿಮಾತು ಆದ್ಹಂಗ ’

ಎಂಬ ನುಡಿಯನ್ನು ನೆನಪಿಗೆ ತಂದುಕೊಡುವ Absolute ನಿರಪೇಕ್ಷ ಮತ್ತು Relative ಸಾಪೇಕ್ಷ ಬ್ರಹ್ಮಸ್ವರೂಪಗಳ ಸಂವಾದ ನಡೆದಿದೆ. ನಿರಪೇಕ್ಷವು ಬೆಳಕಾದರೆ ಸಾಪೇಕ್ಷವು ಕತ್ತಲು. ಕತ್ತಲಿನ ಒಳಗೂ ಹೊರಗೂ ಬೆಳಕಿದೆ. ಕತ್ತಲನ್ನು ಕಾಣಿಸಲೂ ಬೆಳಕು ಬೇಕು; ಕಾಣಿಸಿಕೊಳ್ಳಲೂ ಕತ್ತಲೆಗೆ ಬೆಳಕು ಬೇಕು. ಬೆಳಕು ಕತ್ತಲಿಗಾಧಾರ. ಅನುಭವದಲ್ಲಿ ಬೆಳಕು ಕತ್ತಲೆಂಬ ಭೇದ; ಅನುಭಾವದಲ್ಲಿ ಬೆಳಕೊಂದೇ ಒಂದು. ಏಕೆಂದರೆ ಅನುಭಾವದಲ್ಲಿ ಒಳ–ಹೊರಗೆಂಬ ಭೇದವಿಲ್ಲ— ರಹಸ್ಯವೆಲ್ಲ ಪ್ರಕಾಶ ! ದಿವ್ಯಜ್ಞಾನವಿರುವಾಗ ತರ್ಕಜ್ಞಾನದ ಹಣತೆಯೇಕೆ ?

ಸತಿ, ಅಜ್ಞಾನ, ಮಾಯೆ, ಪ್ರಕೃತಿ, ಸಾಪೇಕ್ಷಸತ್ಯ, ಅಹಂಕಾರ, ಪ್ರತ್ಯೇಕ ವ್ಯಕ್ತಿತ್ವ, ನಾನಾತ್ವಗಳು ಕತ್ತಲು; ಪತಿ, ಜ್ಞಾನ, ಬ್ರಹ್ಮ, ಪುರುಷ, ನಿರಪೇಕ್ಷ ಸತ್ಯ, ಬ್ರಹ್ಮಾಹಂಕಾರ (ವೈಯಕ್ತಿಕನಿರಹಂಕಾರ), ಸಾರ್ವತ್ರ್ಯ, ಏಕತ್ವಗಳು ಬೆಳಕು, ಪರಂಜ್ಯೋತಿ, ಜ್ಯೋತಿಷಾಂ ಜ್ಯೋತಿಸ್, ಸಚ್ಚಿದಾನಂದ, ಸತ್ಯಜ್ಞಾನಾನಂತ (Supramental, Suprarational, Mystic Consciousness).

೬

**ನಿದ್ದೆಯಲ್ಲಿ :** ತಮಸ್, ಅಜ್ಞಾನ, ಕತ್ತಲು, ಜಾಡ್ಯ, ಮಾಂದ್ಯ, ಪ್ರಾಕೃತತೆ,, ಅಸುರತ್ವ, ಮೌಢ್ಯ, ಮಾಯೆ ಎಂಬುದರ ತಿರಸ್ಕಾರವಿದೆ, ತ್ಯಾಜ್ಯತೆಯ ಉಲ್ಲೇಖವಿದೆ. ಏಕೆ ? "ಜ್ಞಾನಿಯ ಗತಿ ಇರುಳೊಳಗತಿ ನಿಜ ಜಾಗೃತಿ ಇರುವುದು !" ನಿದ್ದೆಯು ಸಮಾಧಿಯ ಆಭಾಸ—ಪಶುತ್ವ, ಪಶುಪತಿತ್ವವಲ್ಲ, ಮುಕ್ತತ್ವವಲ್ಲ — ಬದ್ಧತ್ವ. ನಿರ್ವಿಕಲ್ಪಸಮಾಧಿ ಎಂಬ ತುರೀಯಾವಸ್ಥೆಯ ಇದಿರು ಜಾಗ್ರತ್–ಸ್ವಪ್ನ–ಸುಷುಪ್ತ್ಯಾವಸ್ಥೆಗಳೆಲ್ಲವೂ ನಿದ್ರೆಯೇ; ಜಾಗ್ರದವಸ್ಥೆ ಕಡಿಮೆ ನಿದ್ದೆಯಲ್ಲದೆ ಪೂರ್ಣ ಎಚ್ಚರವಲ್ಲ. ಪೂರ್ಣ ಎಚ್ಚರವೆಂದರೆ ಪ್ರಬೋಧ, ಆತ್ಮಜ್ಞಾನ.

> "ಆತ್ಮಜ್ಞಾನವಿಹೀನಾ ಮೂಢಾಃ,
> ತೇ ಪಚ್ಯಂತೇ ನರಕನಿಗೂಢಾಃ"

ನಿದ್ದೆಯ ನರಕಾವತಾರದ ಲೀಲೆಯನ್ನೀ ಪದ್ಯವು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಇದನ್ನೋದಿದವರೆ ಯಾರ ನಿದ್ದೆಯಾದರೂ ಪಲಾಯನಸೂತ್ರವನ್ನು ಪಠಿಸದಿರದು ! ಅತಿ ನಿದ್ರೆಯು ಸಂಸಾರಸಾರವನ್ನು ಹೀರುವ ಜಿಗಳೆಯಾದರೆ ಅಲ್ಪನಿದ್ರೆಕೂಡ ಪ್ರಜ್ಞಾನಘನತೆಗೆ ಶತ್ರು.

೭

**ಬೈರಾಗಿಯ ಹಾಡಿನಲ್ಲಿ :** ಕವಿಯ ವಿಶ್ವಕರ್ನಾಟಕ (ಅಥವಾ ವಿಶ್ವ ಭಾರತೀಯ) ದೃಷ್ಟಿಯು 'ಜಲಧಿವರೆಗು ಒಂದೆ ಕುಲ' ಎಂದು ಉದ್ಗರಿಸಿದ್ದಲ್ಲದೆ, 'ಬೆಳೆವಗೆ ನೆಲವೆಲ್ಲ ಹೊಲ' ಎಂಬ ಮಾತಿನಲ್ಲಿ "Where there is a will there is a way — ಕ್ರಿಯಾಸಿದ್ಧಿಃ ಸತ್ವೇ ಭವತಿ ಮಹತಾಂ ನೋಪಕರಣೇ" ಎಂಬ ಮಹಾಸತ್ಯವನ್ನೂ ಸಾರಿದೆ. "Nothing is impossible ಅಸಾಧ್ಯವೆಂಬುದಿಲ್ಲ" ಎಂಬ ನೆಪೋಲಿಯನ್ ದಾರ್ಢ್ಯವನ್ನಿಲ್ಲಿ ಸಂನ್ಯಾಸಿಗನ್ವಯಿಸಲಾಗಿದೆ. ಮೋಕ್ಷವು ಸನ್ಯಾಸಿಯ ಪರಮಾದರ್ಶ. ಅದರ

ಸಾಧನೆಗೆ ಪ್ರೀತಿಬಲ ಅಗತ್ಯ ಎಂದುದು ರವೀಂದ್ರ ಸಿದ್ಧಾಂತಕ್ಕೆ ಅನುಗುಣವಾಗಿದೆ. ವಿರಾಗವೆಂದರೆ ಪ್ರೀತ್ಯಭಾವವೆಂದು ಹಲವರು ತಿಳಿದುಕೊಂಡದ್ದು ತಪ್ಪು. ವಿರಾಗವು ಅಪ್ರೀತಿಯೆನ್ನಿಸಿದರೆ ಅದು ಯಾವುದರಲ್ಲಿ ? ತನ್ನ ಐಹಿಕ ಮತ್ತು ಸ್ವರ್ಗೀಯ ಸ್ವಾರ್ಥವಿಷಯಗಳಲ್ಲಿ. ಅದು ಸ್ವಾರ್ಥತ್ಯಾಗದಲ್ಲಿ ವಿಶಿಷ್ಟರಾಗವೆನ್ನಿಸುತ್ತದೆ. ರಾಗವಿಲ್ಲದಲ್ಲಿ ರಸವೆಲ್ಲಿಂದ ಬಂತು ? 'ಅನ್ನವೆ ಧರ್ಮದ ಮೂಲ' ಎಂಬಲ್ಲಿಯೂ ಹಾಗೇ ಸತ್ಪಾತ್ರರಾದ ಅನ್ಯರಿಗೆ ಅನ್ನಾದಿದಾನ ಮಾಡುವುದೇ ಧರ್ಮದ ನೆಲಗಟ್ಟು ಎಂದರ್ಥವಲ್ಲದೆ, ಅನ್ನಭಕ್ಷಣದಿಂದ ಧರ್ಮಸಾಧನೆಯಾಗುತ್ತದೆ ಎಂದಲ್ಲ.

ಸ್ವಾರ್ಥದಲ್ಲಿ ಮೂರು ವಿಧ: ಇಹ, ಪರ, ಪರಾತ್ಪರ— ಎಂದು. ಅವುಗಳಲ್ಲಿ ಮೊದಲಿನ ಎರಡು ಸಂಕುಚಿತ; ಮೊದಲಿನದಂತೂ ಅತಿಸಂಕುಚಿತ. ಹಾಗೆ ಪ್ರೀತಿ ಅಥವಾ ರಾಗವು ಮೊದಲಿನೆರಡರಲ್ಲಿದ್ದರೆ ಅದು ಕಾಮ. ಆಸಕ್ತಿ; ಮೂರನೆಯದ-ರಲ್ಲಿದ್ದರೆ ಅನಾಸಕ್ತಿ, ನಿಃಸ್ವಾರ್ಥ, ನಿಷ್ಕಾಮ ಎನ್ನಿಸುತ್ತದೆ. ಸಂಸಾರಿಯು ಮೊದಲಿನೆರಡು ಸ್ವಾರ್ಥಗಳ ಪ್ರಪಂಚಕ್ಕೆ ಸೇರಿದವನು. ಸನ್ಯಾಸಿಯು ಕೊನೆಯದಾದ ಪರಮಾರ್ಥಪ್ರಪಂಚದಲ್ಲಿ ಹೋಗಬಯಸುವವನು. ಆದರೆ ಇಬ್ಬರಿಗೂ ಪ್ರೀತಿಯೇ ಬಲ, ಸಾಮರ್ಥ್ಯ, ಸಾಧನ. ಪ್ರೀತಿ ಎಂದರೇ ಬಲ. ಎಲ್ಲ ಪ್ರೀತಿಬಲ-ವನ್ನೂ ಏಕಾಗ್ರಗೊಳಿಸಿದಾಗಲೇ ಇಷ್ಟವಸ್ತು ಲಭ್ಯ; ಮತ್ತು ಹಾಗೆ ಮಾಡಿದಾಗ ಏಕೇತರ ಪದಾರ್ಥಗಳಲ್ಲಿ ಒಮ್ಮೆ ದ್ವೇಷ ಉಂಟಾದೀತು ಇಲ್ಲವೆ ಪ್ರೀತ್ಯಭಾವ ತಲೆ-ದೋರೀತು. ಭೋಗಪ್ರಪಂಚವನ್ನು ದ್ವೇಷಿಸುವವರಿಗಿಂತ ಉದಾಸೀನದೃಷ್ಟಿಯಿಂದ ನೋಡುವ ಸಂನ್ಯಾಸಿಗಳಿಂದು ಜಗತ್ಪ್ರಿಯರಾಗುತ್ತಿದ್ದಾರೆ. ಇಂದ್ರಿಯಾರ್ಥಗಳನ್ನು ಉದಾಸೀನ ದೃಷ್ಟಿಯಿಂದ ನೋಡಿದರೆ ಪರವಾಯಿಲ್ಲ; ಆದರೆ ತುಚ್ಛವೆನ್ನುವುದು ಇಂದಿನ ಮಾನ್ಯ (ಐಹಿಕ) ಲೌಕಿಕರಿಗೆ ರುಚಿಸದು. ಸರ್ವಜನಪ್ರಿಯವಾಗಿರುವ ಸಂನ್ಯಾಸವೆಂದರೆ ಸರ್ವಸತ್ಪಾತ್ರರಲ್ಲೂ ಸಮಾನ ಪ್ರೀತಿಯನ್ನು ಅಕ್ಷರಶಃ ತೋರಿಸುವ ಸಂನ್ಯಾಸಿ, ಆಧ್ಯಾತ್ಮಿಕ. ಇಂದ್ರಿಯಭೋಗದ ಸಾಧನಗಳನ್ನು ದಾನ ಮಾಡುವುದು ಧರ್ಮ; ಅಂಥ ಧರ್ಮದಲ್ಲಿ ಪ್ರೀತಿಯಿರುವುದು ಮೋಕ್ಷಕ್ಕೆ ಸಾಧನ ! ಮೋಕ್ಷವು ಮರದ ತುದಿಯಲ್ಲಿರುವ ಫಲದ ಹಾಗೆ; ಸಂನ್ಯಾಸಿ ಕೆಳಗೆ ನಿಂತ ವಾಮನನ ಹಾಗೆ— ತ್ರಿವಿಕ್ರಮಗಳನ್ನು ಮಾಡದೆ ಅವನಿಗೆಂತು ಅದು ದೊರಕೀತು ? ಭೋಗ್ಯತ್ಯಾಗ, ಭೋಜಕರಿಗೆ ದಾನ ಮತ್ತು ಮೋಕ್ಷ-ಪ್ರೀತಿಗಳೇ ಆ ತ್ರಿವಿಕ್ರಮಗಳು !

೮

ಭಾವಗೀತದಲ್ಲಿ : "ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತ" ಎಂದುದು ಮಾರ್ಮಿಕವಾಗಿದೆ. ಜ್ಞಾತೃ-ಜ್ಞೇಯಗಳ, ಸಿದ್ಧಿ-ಸಾಧಕರ, ರಸಿಕ-

ರಸವಸ್ತುಗಳ ಐಕ್ಯಸ್ಥಲದಲ್ಲಿ ಯತ್ನ-ಫಲಗಳ ಭೇದವಿಲ್ಲ. ಪೂರ್ಣತೆಯ ಅವಸ್ಥೆಯಲ್ಲಿ ಸಚ್ಚಿದಾನಂದಗಳಲ್ಲಿ ಭೇದವಿಲ್ಲ — ಸತ್ಯ, ಜ್ಞಾನ, ಅನಂತಗಳೊಂದೇ. ಹಾಗೇ ಭಾವಗೀತವೊಂದು ಶುದ್ಧ ಸೌಂದರ್ಯ, ಪೂರ್ಣರಸ ಎನ್ನಿಸಿದಾಗ ಅದಕ್ಕದೇ ಅರ್ಥ, ಪ್ರಯೋಜನ — ತದ್ಭಿನ್ನವಾದ ಪ್ರಯೋಜನವಿಲ್ಲ; ಅಲ್ಲದೆ “ ಪರಸ್ಯ-ನಪರಸ್ಯೇತಿ ಮಮೇತಿ ನ ಮಮೇತಿ ಚ” ಎಂಬಂತೆ ಸ್ವಾರ್ಥ-ಪರಾರ್ಥಗಳು ಅಲ್ಲಲ್ಲಿ. Whether Art is Expression or Communication ಎಂಬ ಪ್ರಶ್ನೆಗೆ ಎಡೆಯೇ ಇಲ್ಲ. ಕವಿಗಾಗಿ, ಜನರಿಗಾಗಿ, ಇಬ್ಬರಿಗೂ ಆಗಿ ಕವಿಯು ಕಾವ್ಯ ಬರೆದನೆಂಬ ಮೂರು ವಿಕಲ್ಪಗಳೂ ಪರಿಪೂರ್ಣ ಕಾವ್ಯಕರ್ಮಕ್ಕನ್ವಯಿಸವು. ಏಕೆಂದರೆ ಅಂಥ ಕರ್ಮದ ಪೂರ್ಣತೆಯಲ್ಲಿ (Perfect, Perfection) ಕವಿ ಬೇರೆಯಲ್ಲ, ಅವನ ಕಾವ್ಯಕೃತಿ ಬೇರೆಯಲ್ಲ; ಅದು ತುಂಬಿ ಬಂದದ್ದು, ಆದುದರಿಂದ ಸರ್ವವಿಕಲ್ಪಾಸಹ, ಆದರೆ ಸರ್ವ ವಿಕಲ್ಪಗಳನ್ನೂ ಏಕಕಾಲದಲ್ಲಿ ಸಮರ್ಥಿಸಬಲ್ಲುದು ! Suprarational ವಿಚಾರತೀತ ಮುಟ್ಟಿದ ರಸವು ವಿಚಾರಾತೀತ ಸುಕೃತ, ವಿಚಾರಾತೀತ ಸತ್ಯ ಮತ್ತು ವಿಚಾರವನ್ನು ಮೀರಿದ ಪ್ರಯೋಜನ. ವಿಚಾರದಾಚೆಗೆ ಯಾವುದಾದರೂ ವಿಕಲ್ಪವಿರಲು ಸಾಧ್ಯವೇ ? “ ಬರಿಯ ಭಾವಗೀತ ” ಈ ಸಂದರ್ಭದಲ್ಲಿ Absolute ತದಿತರವಸ್ತು ನಿರಪೇಕ್ಷವೆಂದು ಭಾವಿಸಿದರೆ ಅದೊಂದು ಅದ್ವಿತೀಯ Concrete Beauty ಸಾರವತ್ತಾದ ರಸಮೂರ್ತಿ; ಅದು ಸ್ವಯಂಭುವಿನಂತೆ ಎಲ್ಲಿಂದಲೋ ಭೃಂಗದ ಬೆನ್ನೇರಿ ಬಂದಂತೆ ತೋರುವ ಅಜತ್ವ-ಅಮರತ್ವಗಳುಳ್ಳದ್ದು ! Abstract ಅಮೂರ್ತ — concrete ಮೂರ್ತ ಎಂಬ ಭೇದಗಳನ್ನು ಸಹ ಮೀರಿದ್ದು ಎಂದು ಅನ್ನಿಸುವಂಥದೆಂದರೂ ಸರಿಯೆ !

೯

**ನಮನದಲ್ಲಿ** : ಮಾತು, ಮಾತೆ, ಜ್ಯೋತಿ, ಭಾವಪ್ರಪಂಚ, ದೇವಮಂಚ, ಸುಧಾಸ್ಫೂರ್ತಿಗಳು ಏಕತ್ವದಲ್ಲಿವೆ. ರವಿಕಿರಣ, ಕಡಲ್ನೀರು, ಭೂಮಿ, ಸ್ವಾಮಿಗಳೆಲ್ಲ ನಮಿಸುತ್ತಿವೆ, ದಿಂಡುರುಳುತ್ತಿವೆ, ಬಲವರುತ್ತಿವೆ, ಅವತರಿಸುತ್ತಿವೆ. ಆದುದರಿಂದ ಭಕ್ತಿಯಿಂದ ನತರಾಗುವುದು ಸುಲಭ, ಶಕ್ತಿಯಿಂದ ಮತ ಸಿದ್ಧಿಸಿಕೊಳ್ಳುವುದು ಕಷ್ಟ. ಯುಕ್ತಿಶಕ್ತಿಗಿಂತ ಭಕ್ತಿಶಕ್ತಿ ಸುಲಭಗಮ್ಯ. ತನು ಮುಗಿದರೆ (ನಮಿಸಿದರೆ) ಮನ ಹಿಗ್ಗುತ್ತದೆ, ಅಗಲವಾಗುತ್ತದೆ, ಅರಿವಿನ ವಿಸ್ತಾರಕ್ಕೇರುತ್ತದೆ; ಭಕ್ತಿಯಿಂದ ಜ್ಞಾನಪ್ರಾಪ್ತಿ; ಮಾತು ಅಥವಾ ಜ್ಞಾನವೇ ಆನಂದ. ಆದುದರಿಂದ ನಮನದಲ್ಲಿ ಸಕಲ ಅಥವಾ ಷೋಡಶಕಲಾಸಹಿತನಾದ, ಸರ್ವಕಲಾಯುಕ್ತನಾದ ಪುರುಷ ಅಡಗಿದ್ದಾನೆ; ಅವನ ಸಾಕ್ಷಾತ್ಕಾರ ಅದರಿಂದ ಆರಂಭ !

೧೦

ಸೌಭಾಗ್ಯದರ್ಶನದಲ್ಲಿ: "ಜಗತ್ತುಚ್ಛಮೇತತ್" ಎಂಬ ವಾದದ ಖಂಡನೆಯಿದೆ. ಇದು ಆಧುನಿಕ ಯೋಗ-ಭೋಗ ಸಮನ್ವಯಪಂಥಿಗಳ ಪೌರುಷ-ಸಂಸ್ಕೃತಿಯ ಕಲ್ಪನೆ. ಈ ಸಂದರ್ಭದಲ್ಲಿ—

"ವಿಕಾರಹೇತೌ ಯದಿ ವಿಕ್ರಿಯಂತೇ
ಯೇಷಾಂ ನ ಚೇತಾಂಸಿ ತ ಏವ ಧೀರಾಃ"

ಎಂದು ಸಾರಿ, ಅನಂತರ "ಕುಮಾರ ಸಂಭವ"ದಲ್ಲಿ ಕಾಳಿದಾಸನು "ಹರಸ್ತು ಕಿಂಚಿತ್ ಪರಿವೃತ್ತ ಧೈರ್ಯಃ" ಎಂದು ಹೇಳಿದ್ದನ್ನು ನೆನೆದುಕೊಳ್ಳಬೇಕು. ದಂಡಿಯ "ದಶಕುಮಾರಚರಿತ"ದಲ್ಲಿ ಬಂದ ಮರೀಚಿಮುನಿಯ ಆತ್ಮ-ವೃತ್ತಾಂತವನ್ನೋದಬೇಕು. "ದೃಷ್ಟಿಯಂತೆ ಸೃಷ್ಟಿ ಮತ್ತು ಯದ್ಭಾವಃ ತದ್ಭವತಿ ಹಾಗೂ ಯೋ ಯಚ್ಛ್ರದ್ಧಃ ಸ ಏವ ಸಃ" ಎಂಬ ಮಾನಸಶಾಸ್ತ್ರೀಯ ಸೂತ್ರಗಳನ್ನು ಆಧರಿಸಿ ಪರಾಮರ್ಶಿಸಿದರೆ ಎಲ್ಲೆಲ್ಲೂ ಕಲ್ಪಿಸಿದ ಸೌಭಾಗ್ಯ ಕಂಡೀತು—ಭಕ್ತರಿಗೆ ಇಷ್ಟದೇವತಾಸಾಕ್ಷಾತ್ಕಾರವಾದ ಹಾಗೆ — ಎನ್ನುತ್ತೀರಾ ? ಆದರೆ "ಶ್ರುತೌ ತಸ್ಕರತಾಸ್ಥಿತಾ — ಶಶವಿಷಾಣಾದಿವತ್ !" — ಎಂಬ ಪ್ರತಿವಾದ ಈಗಲೂ ಎದುರಾದರೆ ? ಮಾಯಾವಾದ ಮರುಕಳಿಸಿದರೆ ?

ಅದಕ್ಕುತ್ತರ : ಆ ಮಟ್ಟ ಬೇರೆ, ಈ ಮಟ್ಟ ಬೇರೆ ಎಂದು The Sun-word will raise the earth Soul to light! Divinisation ದಿವ್ಯತಾಸಂಪಾದನದಿಂದ ಹಿಂದೆ ಸಾಧ್ಯವಾದಿದ್ದ ಮಲವನ್ನು ಅನ್ನವನ್ನಾಗಿ ಮಾರ್ಪಡಿಸುವ ಹೊಸ Supramental Force ಮಾತೃ-ಶಕ್ತಿಯಿಂದು ಹರಿದು ಬಂದಿದೆ. ಎಲ್ಲಿದೆ ? "ಕಂಡವರಿಗಲ್ಲ ಕಂಡವರಿಗಷ್ಟೆ ತಿಳಿದದ ಅದರ ನೆಲೆಯು !" ಇದು ಕ್ರಿಸ್ತಮಾನವಲ್ಲ, ಅರವಿಂದಮಾನ ಎಂಬುದನ್ನು ಹಲವರು ಅರಿತಿಲ್ಲ, ಅರಿಯ ಹೋಗಿಲ್ಲ, ಅರಿಯ ಹೋದಲ್ಲಿ ಸಾಧ್ಯವಾಗಲಿಲ್ಲ— ಈ ತ್ರಿವಿಧ ಸಾಧಕರ ಪಾಲಿಗೆ ಜೀವನದಲ್ಲಿ ಸೌಭಾಗ್ಯದರ್ಶನವಿಲ್ಲ, ನಿಸರ್ಗ (ವಿಸರ್ಗ) ದರ್ಶನವಷ್ಟೇ ಲಭ್ಯ ! ಚತುರ್ಥಸಾಧಕವರ್ಗದ ಪ್ರಕಾರ "ಜಗದ ನೆತ್ತಿಯ-ಲಿಹುದು ಸೌಭಾಗ್ಯಬಿಂದು !" "Good Cometh out of Evil—ದುರ್ಭಾಗ್ಯಕವಚದಲಿ ಸೌಭಾಗ್ಯಬೀಜವಿದೆ" — ಎನ್ನುತ್ತಾನೆ ಕವಿ.

ಶಬ್ದಕ್ಕೆ ಮಾತ್ರ ಕಾಲಹೋದಹಾಗೆ ಅರ್ಥ ಬದಲಾಗುವುದೆಂಬ ಮಾತಿಗೂ, ಮುಂದೆ ಅರ್ಥಕ್ಕೂ ಅರ್ಥಬದಲಾವಣೆಯುಂಟೆಂಬುದು ಕವಿ ಹೃದಯ. ಪದ-ಅರ್ಥ-ಪದಾರ್ಥಗಳೆಲ್ಲವೂ ಪರಿವರ್ತನಶೀಲ, ಪರಿಣಾಮಿಸತ್ಯ, ಸಾಹಸಸಮರ್ಥ

ಮತ್ತು ದೃಷ್ಟಿನಿಯಂತ್ರಿತ, ದರ್ಶನಾಧೀನ ಎಂಬ ಧ್ವನಿಯ ಅರ್ಥವನ್ನು ಬಲ್ಲವ-ರಲ್ಲದೆ ಇತರರು ಬಲ್ಲರೆ ?

೧೧

**ಭೂಮಿತಾಯಿಯಲ್ಲಿ :** ನಡೆಯುವಾಗ ಮಗು ಬಿದ್ದರೆ ಭೂಮಿತಾಯಿಯ ತೊಡೆಯ ಮೇಲಲ್ಲದೆ ಮತ್ತೆಲ್ಲಿ ಬಿದ್ದೀತು ? ಎಂಬ ದೃಷ್ಟಿದಾರ್ಢ್ಯದ ಭಾವ ಸಂಪತ್ತಿದೆ. The horror of Nature is no horror at all for one who is absorbed in the beauty and goodness of Nature ಎಂಗಹಾಗೆ ರಸಮಯ ಜೀವಕ್ಕೆ ವಿಷವೆಲ್ಲೂ ಕಾಣಿಸದು; ಅದರ ಪಾಲಿಗೆ ವಿಷವಿಲ್ಲವೇ ಇಲ್ಲ. ವಿಷವನ್ನು ಅಮೃತವನ್ನಾಗಿ ಅನುಭವಿಸಬಲ್ಲ ದೃಷ್ಟಿ-ದಾರ್ಢ್ಯ ಉಳ್ಳವನೇ ಯೋಗಿ, ವಿಕಾರವನ್ನು ಆಕಾರವನ್ನಾಗಿ ಸಾಕ್ಷಾತ್ಕರಿಸಿಕೊಳ್ಳ ಬಲ್ಲವನೇ ದ್ರಷ್ಟಾರ. ಅಶುಭದ ಬಗ್ಗೆ ಕುರುಡನಾದ ಅರ್ಥಾತ್ ಶುಭಸರ್ವಸ್ವನಾದ ಜೀವಾತ್ಮನ ಮಾತೃಭಕ್ತಿಯ ಮಂಗಲದರ್ಶನ ಈ ಪದ್ಯದಲ್ಲಿ ಮುದ್ದಾಗಿ ಬಂದಿದೆ. ಇಂಥ ಅರಿವಿನಿಂದ ತುಂಬಿ ಬಂದ ಭಕ್ತಿಯು ಆನಂದವನ್ನಲ್ಲದೆ ಮತ್ತೇನನ್ನು ಹಾಡೀತು ? ಈ ಇಂದ್ರಿಯಾತೀತ ದೃಷ್ಟಿಯು ಸಾಮಾನ್ಯರಿಗೆ ಬರಿ ಕಲ್ಪನಾ ವಿಲಾಸ, ಭಕ್ತರಿಗೆ ಅನುಭವ ಕೊಡುವ ದರ್ಶನ. One man's meat is another man's poison ಎಂಪ ಹಾಗೇ One man's poison is another's meat ಎಂದೂ ಹೇಳಬಹುದಲ್ಲವೇ ?

೧೨

**ಮದ್ಯ :** ಎಂಬುದೊಂದು ಪದ್ಯ. ಆಧ್ಯಾತ್ಮಿಕ ಭಾವನೆಯು ರೇಖೆ ಕಪಿಯಲ್ಲಿ ಮೂಡಿ ಸ್ಥಾಯಿಯಾಗಿ ನಿಂತುದರ ಮೂಲವನ್ನು ನಾವು ಅದರಲ್ಲಿ ಕಾಣಬಹುದು. ದೇವರ ತೀರ್ಥವನ್ನೊಮ್ಮೆ ಕುಡಿದಾಗ “ ಹುದುಗಿ ಇದ್ದ ಬೀಜವೊಂದು ತನ್ನನೆ ಹೊರದೂಡಿತು ” ಎನ್ನುತ್ತಾನೆ ಕವಿ. ಆಧ್ಯಾತ್ಮಿಕತೆಯ ಬೀಜ ಕೆಂಪು ಮಿಂಚಾಗಿ ಚಿಗಿತು ತ್ರಿಶೂಲದಂತೆ ಮೂಡಿತಂತೆ. ಅದು ಕೆಂಪು ಬೀರಿದ ಕೂಡಲೆ ಕತ್ತಲೆ (ಅಜ್ಞಾನ) ಓಡಿತಂತೆ. ಆಗ ಕವಿಗಾದ ಅನುಭವ ಸ್ವಯಂವೇದ್ಯ—

ನನ್ನ ನಾನು ಮರೆಯುವಂತೆ
ಮದ್ಯವನ್ನು ಕುಡಿದೆನು
ತನ್ನ ತಾನು ಅರಿಯುವಂಥ
ವಿದ್ಯೆಯನ್ನು ಹಿಡಿದೆನು !

'ನಾನು' ಎಂಬುದಿಲ್ಲಿ ಜೀವಾತ್ಮನ ಪ್ರತ್ಯೇಕ ಅಸ್ತಿತ್ವಪ್ರಜ್ಞೆ, ಅಹಂಕಾರ; 'ತಾನು' ಶುದ್ಧವಾದ ಆತ್ಮ. ಅಹಂಭಾವ ಮರೆತುಹೋಯಿತು, ಆತ್ಮಜ್ಞಾನ ಹೊಳೆಯಿತು— ಎಂಬಂತಹ Flash ಪ್ರಕಾಶಸ್ಫೂರ್ತಿ ಮೂಡಿದ್ದನ್ನು ಹೇಳಿ-ರುವ ಸ್ವಾಭಾವಿಕ ಉಕ್ತಿ Most artful being most artless ಎಂಬಂತಿದೆ.

೧೩

**ತಾಯಿಯಲ್ಲಿ :** ಕವಿಯು "ಅಂಬಿಕಾತನಯ" ದತ್ತನಾದುದರ ಮರ್ಮ ಅಡಗಿದೆ. ತಂದೆಯನ್ನು ಕಳೆದುಕೊಂಡು ತಾಯ ಕೈಯ ಕೂಸಾದ ಕವಿ ಅರವಿಂದ ಗುರುಮಠದಲ್ಲಿಯೂ ತಾಯ ಕೈಯ ಕೂಸಾದುದಲ್ಲದೆ, ಭಕ್ತನ Ascent ದಿವ್ಯತಾರೋಹಣಕ್ಕೆ ನೆರವಾಗುವ ತಾಯಿತತ್ತ್ವವೆನ್ನಿಸಿದ ಸಚ್ಚಿದಾನಂದನ Descending ಶಕ್ತಿಯಾದ Supermind ಅತಿಮಾನಸದ ತತ್ತ್ವಕ್ಷೀರ ಪಾನವನ್ನು ಮಾಡುವಂತಾದುದು ಜೀವನದ ಒಂದು ಮಹಾದ್ಭುತ. ಈ ಭವಿಷ್ಯ-ವನ್ನು ಪ್ರಸ್ತುತ ಪದ್ಯದ "ತಾಯಿಗಿಂತ ಯಾರು ಹೆಚ್ಚು ?" ಎಂಬ ಪ್ರಶ್ನೆಯೇ ಸೂಚಿಸಿದೆ. ಜೊತೆಗೆ ಮಾತೆಗೂ ಮಾತಿಗೂ ಗಂಟುಹಾಕುವ ಕವಿಭಾವವನ್ನೂ "ಮಾತಿಗಿಂತ ಏನು ಹೆಚ್ಚು ?" ಎಂಬ ಅಲ್ಲೇ ಎತ್ತಿದ ಇನ್ನೊಂದು ಪ್ರಶ್ನೆ ಪ್ರಮಾಣಿಸುತ್ತದೆ. ಮಾತು ಮಾತೆಯಾಗಿ ಅಂಬಿಕಾತನಯತ್ವಕ್ಕೂ ಕವಿತ್ವಕ್ಕೂ ಜನ್ಮವಿತ್ತಿತು. ಈ ಕವಿ ಮಾತಿನ ಮಗ — ಹನುಮಂತನು ಗಾಳಿಗೆ ಮಗನಾದ ಹಾಗೆ. "ಮಾತೆ ಜ್ಯೋತಿರ್ಲಿಂಗ," "ವಾಗ್ವೈಸಮ್ರಾಟ್ ಪರಮಂ ಬ್ರಹ್ಮ", "ದೇವೀಂ ವಾಚಮಜನಯಂತ .ದೇವಾಃ" ಎಂಬ ಮಾತುಗಳನ್ನಿಲ್ಲಿ ನೆನೆದರೆ ಮಾತಿನ ಮಾತೃತ್ವದ ಮಾಹಾತ್ಮ್ಯ ಎಷ್ಟೆಂಬುದು ಗೊತ್ತಾಗುತ್ತದೆ. ಮಾತಿನ ಮಗ ಅರ್ಥ !

೧೪

**ಸುಪ್ರಭಾತೇ :** ಎಂಬುದೊಂದು ಸಂಸ್ಕೃತ ಕವನ. ಕವಿ ಷಡಕ್ಷರಿ ದೇವತಾ ಸ್ತೋತ್ರ ಮಾಡುತ್ತ ತನ್ನ ಕಾವ್ಯದ ಆರಂಭ ಭಾಗದಲ್ಲಿ ಭಕ್ತಿಯ ಆವೇಶ ಜಾಸ್ತಿ ಯಾಗಲು "ನಮದಮರವಧೂಟೀಕುಂತಲಸ್ರಸ್ತ ಮಾಲಾ" ಎಂಬ ಸಂಸ್ಕೃತ ಶ್ಲೋಕವನ್ನು ರಚಿಸಿಬಿಟ್ಟಹಾಗೆ ಪ್ರಸ್ತುತ ಪದ್ಯವು ಕನ್ನಡ ಪದ್ಯಗಳ ನಡುವೆ ಅಕಸ್ಮಾತ್ತಾಗಿ ನಿಂತು, ಕವಿಗೆ "ಉಭಯ ಕವಿ ಕಮಲರವಿತ್ವ"ವನ್ನು ದಯ-ಪಾಲಿಸಿದೆ. ಇದರಲ್ಲಿಯ ದರ್ಶನ ಶಿವಶಕ್ತ್ಯಾತ್ಮಕ ಅರ್ಧನಾರೀನಟೇಶ್ವರನದು. ಅದು ಸಹಿತದ ಭಾವ, ಸಾಹಿತ್ಯ !

" ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ "

ಎಂಬ ಕಾಳಿದಾಸನ ಮಂಗಲಶ್ಲೋಕವಿಲ್ಲಿ ಸ್ಮರಣೀಯ.

೧೫

**ಹುಟ್ಟಿನಗುಟ್ಟಿನಲ್ಲಿ :** ಕಾರಣದ ಕಾರಣವನ್ನು ಕೇಳುತ್ತ ಹೋದ ಗಾರ್ಗಿಗೆ ಜನಕನ ಆಸ್ಥಾನದಲ್ಲಿ ಯಾಜ್ಞವಲ್ಕ್ಯನು ಅತಿಪ್ರಶ್ನೆ ಹಾಕಕೂಡದೆಂದು ಗದ್ದರಿಸಿದ ಭಾವವು ವ್ಯಕ್ತವಾಗಿದೆ. "ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ" ಎಂಬಂತೆ ಜಗತ್ತಿನ ಜನ್ಮರಹಸ್ಯವನ್ನು ಹೇಳಲು ಕೇಳಲು ಹೊರಡದೆ ಮೌನವಾಗಿರ ಬೇಕೆಂದು ಈ ಪದ್ಯವು ಮೌನವ್ಯಾಖ್ಯಾನದ ಮಾತನ್ನಾಡಿದೆ :

" ಹರ ಓಂ, ಹರಿ ಓಂ, ಹರಿಹರ ಓಂ ಬ್ರಹ್ಮ "

ಎಂಬುದೇ ಆ ರಹಸ್ಯಸಾಂಕೇತಿಕ ಭಾಷೆ. ಆತ್ಮಜೀವಾತ್ಮಗಳ ಅವಳಿಜವಳಿತನ ವೊಂದು ಇಂದ್ರಜಾಲ. ಆತ್ಮದಿಂದ ಜೀವಾತ್ಮ ಹುಟ್ಟಿದ್ದು ಅನಾದಿಯಿಂದ. ಆ ಹುಟ್ಟಿನ ಸ್ವರೂಪ ಅಜ್ಞೇಯ, ಅನಿರ್ವಚನೀಯ.

" ತಿಳಿಸುವ ಮಾತಲ್ಲ
ತಿಳಿಸದೆ ತಿಳಿಯುವ ಮಾತಲ್ಲ
ತಿಳಿಸದೆ ತಿಳಿಯದು
ತಿಳಿದಮೇಲಳಿಯದು
ಅಳಿದಮೇಲುಳಿಯದು ! "

ಎಂಬುದೇ ಸ್ಥಿತಪ್ರಜ್ಞನ ಕಾಭಾಷೆ, ಕೋಬ್ರಹ್ಮನ " ಕಸ್ಮೈದೇವಾಯ. " ಈ ಶೂನ್ಯಸಂಪಾದನೆಯ ಪೂರ್ಣಸಂಪಾದನೆ ವಿಸ್ಮಯಸ್ಮಿತವುಳ್ಳದ್ದು. " ಸರ್ವತ್ರಾ-ಪ್ಯದ್ಭುತೋ ರಸಃ " ಎಂಬ ಸರ್ವರಸಾಧಾರವಾದ ಅದ್ಭುತ ತತ್ತ್ವವಿದೇ !

§ § § §

೩೯

# ಬೇಂದ್ರೆಯವರ ಎರಡು ಶ್ರಾವಣಗೀತಗಳು

ಜಿ. ಎಸ್. ಆಮೂರ

'ಒಡಲ ಒಡೆಯ'ರಾದ ಮೂವರೂ 'ಮಹಾನುಭಾವ'ರನ್ನು ಕುರಿತು ಬೇಂದ್ರೆಯವರು ಹಾಡಿದ್ದಾರಾದರೂ[1], ಅವರ ಅತ್ಯಂತ ಆಸ್ಥೆಯ ಋತು ವರ್ಷಾ-ಕಾಲ; ಅದರಲ್ಲಿಯೂ ಶ್ರಾವಣಮಾಸ. ಇದಕ್ಕೆ ಕಾರಣವನ್ನು ಅವರೇ ಸೂಚಿ-ಸಿದ್ದಾರೆ :

> ವರ್ಷವರ್ಷಕ್ಕೂ ಹೊಸತನ ತರುವದು ವರ್ಷಾಕಾಲ. ಕೆಲವರು ತಮ್ಮ ವಸಂತ ಇಳಿಸುತ್ತಾರೆ. ಕೆಲವರು ಚಳಿಗಾಲದ ಲೆಕ್ಕವನ್ನೂ ಇಡ-ಬಹುದು. ನನಗೆ ಶ್ರಾವಣ ಹೊಸತನವನ್ನು ತರುತ್ತದೆ.[2]

ಬೇಂದ್ರೆಯವರ ಅನೇಕ ಶ್ರಾವಣಗೀತಗಳು ಶ್ರಾವಣದ ವೈಶಿಷ್ಟ್ಯವನ್ನು ಎತ್ತಿ ತೋರಿಸುತ್ತವೆ. ಹರಿಹರರಿಬ್ಬರಿಗೂ ಪ್ರಿಯವಾದ ಈ ತಿಂಗಳು ಶ್ರುತಿ-ಕೃತಿಗಳ ಪುಣ್ಯ ಲಭಿಸುವ ಕಾಲ; ಕಾವ್ಯೋದ್ಯೋಗಕ್ಕೂ, ಅಭಿಜಿದ್ಯೋಗಕ್ಕೂ ಅನು-ಕೂಲ ವೇಳೆ; ಇದಲ್ಲದೆ, ಇದು ಶ್ರೀ ಅರವಿಂದರ ಮಾಸ; ಸಾಂಖ್ಯಸೂತ್ರವನ್ನೇ ತಿರುವು-ಮುರುವು ಮಾಡಿ ಪ್ರಕೃತಿ-ಸಾಕ್ಷಿಯೆದುರು ಪುರುಷನಾಟ್ಯದ ನವ್ಯೋನವ ವಿಚಿತ್ರ ಘಟಿಸುವ ಪರ್ವಕಾಲ. ಭಾರತದ ಸ್ವಾತಂತ್ರ್ಯದ ವರ್ಧಂತಿಯೂ ಶ್ರಾವಣದಲ್ಲಿ ಬರುವುದು ಬೇಂದ್ರೆಯವರ ಎಣಿಕೆಯಲ್ಲಿ ಆಕಸ್ಮಿಕ ಘಟನೆಯಲ್ಲ. ಒಂದೇ ಜೀವನತತ್ತ್ವದ ಆವಿಷ್ಕಾರವನ್ನು ಅವರು ವ್ಯಕ್ತಿಯ ಬದುಕಿನಲ್ಲಿ, ರಾಷ್ಟ್ರದ ಜೀವನದಲ್ಲಿ ಪ್ರಕೃತಿಯ ಪರಿವರ್ತನೆಗಳಲ್ಲಿ ಕಾಣುತ್ತಾರೆ :

---

1. ಇದು ನಭೋವಾಣಿ, ಸಮಾಜ ಪುಸ್ತಕಾಲಯ, ೧೯೭೦, ಪು ೧.
2. ಅರಳು-ಮರಳು, ಸಮಾಜ ಪುಸ್ತಕಾಲಯ, ೧೯೬೯, ಪು. ೫೦೨.

ಭಾರತಸ್ವಾತಂತ್ರ್ಯದ ವರ್ಧಂತೀ
ಶ್ರಾವಣಮಾಸದ ಮಳೆ-ಬಿಸಿಲು
ಜೀವನಚಕ್ರವ ತಿರುಗಿಸುತ್ತಲಿದೆ
ಜೀವನ ತತ್ತ್ವವ ಬಿಂಬಿಸಲು [1]

ಹೊಸಹುಟ್ಟಿನ ಗುಟ್ಟನ್ನೊಳಗೊಂಡ ಈ ಜೀವನತತ್ತ್ವವೇ ಅವರ ಶ್ರಾವಣಗೀತಗಳ ಮುಖ್ಯ ಪ್ರೇರಣೆಯಾಗಿದೆಯೆಂದೆನ್ನಬಹುದು.

**ಸಖೀಗೀತ, ಅರಳು-ಮರಳು, ನಾಕುತಂತಿ** ಮೊದಲಾದ ಅನೇಕ ಕವನಸಂಗ್ರಹಗಳಲ್ಲಿ ಬೇಂದ್ರೆಯವರ ಶ್ರಾವಣಗೀತಗಳಿವೆ. ಅವುಗಳಲ್ಲಿ ಎರಡನ್ನು ಕುರಿತು ಬರೆಯುವ ಪ್ರಯತ್ನ ಮಾತ್ರ ಇಲ್ಲಿದೆ. ಮೊದಲನೆಯದು, **ಸಖೀಗೀತ**ದಲ್ಲಿ ಪ್ರಕಟವಾದ 'ಶ್ರಾವಣದ ವೈಭವ';[2] ಎರಡನೆಯದು, **ಅರಳು-ಮರಳು** ಸಂಗ್ರಹದ 'ಪ್ರತಿ ವರ್ಷದಂತೆ ಬಂತುವ ಶ್ರಾವಣಾ'[3], ಕಾಲದ ದೃಷ್ಟಿಯಿಂದ ಈ ಕವನಗಳಲ್ಲಿ ಅಂತರವಿದೆಯಾದರೂ, ದರ್ಶನ ನಿರಂತರವಾಗಿರುವುದರಿಂದ ಜ್ಞಾನ-ಪ್ರತ್ಯಭಿಜ್ಞಾನಗಳ ಸಂಬಂಧ ಅವುಗಳಿಗಿದೆ. ಉಳಿದ ಋತುಗಳಿಗೂ, ವರ್ಷಾ-ಕಾಲಕ್ಕೂ ಬೇಂದ್ರೆ ಕಲ್ಪಿಸುವ ಭೇದ ಈ ದೃಷ್ಟಿಯಿಂದ ಮಹತ್ವದ್ದಾಗಿದೆ. ಶ್ರಾವಣದಲ್ಲಿ ಕವಿ ಕಾಣುವ ಹೊಸತು ಋತುಚಕ್ರದಲ್ಲಿ ಮತ್ತೆ ಮತ್ತೆ ಬರುವ, ಪರಿಚಯದ ಹೊಸತು. ವಸಂತದ ಮಾತು ಹಾಗಲ್ಲ. ವಸಂತದಲ್ಲಿ ಕವಿ ಕಾಣುವ 'ಗಿಡ-ಮರ-ಬಳ್ಳಿಗಳೆದೆ ಹಿಗ್ಗು' ಈ ಸಲದ ಸುಗ್ಗಿ ಪ್ರತಿ ವರ್ಷದ ಹಾಗಲ್ಲ ಎಂಬ ಕಾಣ್ಕೆಗೆ ಕಾರಣವಾಗುತ್ತದೆ.[4] ಶ್ರಾವಣ ಮತ್ತೆ ಮತ್ತೆ ಬರುತ್ತದೆ ('ಮತ್ತ ಶ್ರಾವಣಾ' 'ಮತ್ತೆ ಶ್ರಾವಣಾ ಬಂದಾ') ಸಂಜೀವಿನಿಯಂತೆ ಸತ್ತದ್ದರಲ್ಲಿ ಜೀವವನ್ನು ತುಂಬುತ್ತದೆ; ಮರ್ತ್ಯಕ್ಕೆ ಅಮರ್ತ್ಯದ ಶಕ್ತಿಯನ್ನು ನೀಡುತ್ತದೆ :

ಅಕ್ಷರದೀ ಬ್ರಹ್ಮಕೃತ್ಯ ನಿತ್ಯದ ಈ ನೃತ್ಯ
ಚಿತ್ತದಲ್ಲಿ ಚಿತ್ರಿಸುತಿದೆ ಮರ್ತ್ಯವಹುದಮರ್ತ್ಯ [5]

---

1. ಮರ್ಯಾದೆ, ಸಮಾಜ ಪುಸ್ತಕಾಲಯ, ೧೯೬೬, ಪು. ೧೭.
2. ಸಖೀಗೀತ, ಸಮಾಜ ಪುಸ್ತಕಾಲಯ, ೧೯೬೫, ಪು. ೭೭-೮೧.
3. ಅರಳು-ಮರಳು; ಪು. ೧೦೪-೧೦೫.
4. ಅರಳು-ಮರಳು, ಪು. ೨೬೪.
5. ಅರಳು-ಮರಳು, ಪು. ೩೦.

೧

'ಶ್ರಾವಣದ ವೈಭವ'ವು ಶ್ರಾವಣ ಗೀತವಿದ್ದಂತೆ ಸಖೀಗೀತವೂ ಆಗಿರುವುದರಿಂದ ಪ್ರಕೃತಿಯ ಪವಾಡದೊಂದಿಗೆ ಪ್ರೇಮದ ಹಿರಿಮೆಯೂ ಇಲ್ಲಿ ಕಾವ್ಯವಸ್ತುವಾಗಿದೆ. 'ಏನು ಹಸಿರು! ಏನು ಹಳದಿ! ಸುತ್ತುಮುತ್ತು ನೋಡು ಕೆಳದಿ!' ಎಂಬ ಪ್ರೇಮಿಯ ಉದ್ಗಾರದೊಂದಿಗೆ ಪ್ರಾರಂಭವಾಗುವ ಈ ಕವಿತೆಯಲ್ಲಿ ಪ್ರೇಮದ ಪ್ರತಿಮೆಗಳಿಗೆ ಮಹತ್ವದ ಸ್ಥಾನವಿದೆ....ಉದಾಹರಣೆಗಾಗಿ, ಕವಿತೆಯ ಮೊದಲ ಭಾಗದಲ್ಲಿ ಬರುವ ಹುಲ್ಲು ಹೂವು-ದಿಬ್ಬಗಳ, ನೆಲ-ಮುಗಿಲುಗಳ ಸಂಬಂಧಗಳನ್ನು ತೋರಿಸುವ ಚಿತ್ರಗಳನ್ನು ನೋಡಬಹುದು. ನಿಸರ್ಗದಲ್ಲಿ ನಡೆದು ಹೋದ ಪವಾಡಕ್ಕೂ, (ಹಸಿರು-ಹಳದಿ), ನಿಸರ್ಗದಲ್ಲಿ ವ್ಯಕ್ತವಾಗುವ ಪ್ರೇಮ-ಸಂಬಂಧಗಳಿಗೂ ಕಾರ್ಯ-ಕಾರಣದ ಹೊಂದಾಣಿಕೆಯನ್ನು ಕವಿ ಕಾಣುತ್ತಾನೆ. ಆದರೆ ಮುಖ್ಯವಾಗಿ ಅವನ ಮನಸ್ಸನ್ನು ಆಕರ್ಷಿಸುವ ವಿಷಯವೆಂದರೆ, ಪ್ರಕೃತಿ ಶ್ರಾವಣದಲ್ಲಿ ಪಡೆಯುವ ಹೊಸ ಹುಟ್ಟು; ಅದರ ವೈಭವ. ಇದರ ಅನೇಕ ನಿದರ್ಶನಗಳನ್ನು ಕವಿ ನಿಸರ್ಗದಲ್ಲಿ ಕಾಣುತ್ತಾನೆ. ಹುಲ್ಲು ಕಸವು ಕೂಡ ಬಣ್ಣ ಬಡೆದು ಹೂತು ನಿಂತಿದೆ; ನೆಲದ ಬಸಿರ ರತ್ನರಾಶಿ ಬಣ್ಣದ ಜಾತ್ರೆಗಾಗಿ ತನ್ನ ಪಯಣ ಬೆಳೆಸಿದೆ; 'ಮಣ್ಣು ಹುಡಿಯು ಕಣಕಣವೂ ಕಣ್ಣು ಪಡೆದ ಹಾಗಿದೆ'. ನೆಲವನ್ನು ಪ್ರೀತಿಯಿಂದ ತಬ್ಬಿದ ಹಸಿರು-ಹಳದಿ ಹೂಗಳ ಸಾಂಕೇತಿಕತೆಯಲ್ಲಿ ಪ್ರೇಮ, ಹೊಸ ಹುಟ್ಟುಗಳ ತಾತ್ವಿಕತೆಯನ್ನಲ್ಲದೆ, ಮನುಜಕ್ರಮ ಸೃಷ್ಟಿಕ್ರಮಗಳ ಏಕರೂಪತೆಯ ದರ್ಶನವನ್ನೂ ಕವಿ ಅನುಭವಿಸುತ್ತಾನೆ.

ಈ ಹೊಸಹುಟ್ಟಿಗೆ ಹೂವಿನಷ್ಟೇ ಪ್ರಭಾವಿಯಾದ ಇನ್ನೊಂದು ಪ್ರತೀಕ ಚಿಟ್ಟೆ:

ಹುಡಿಯು ಅರಳಿ ಹೂವು ಆಗೆ,
ಹುಳಕೆ ರೆಕ್ಕೆ ಒಡೆದವು;
ಮುಸುಕು ಹರಿದು ಪಕ್ಕ ತೆರೆದು
ಚಿಟ್ಟೆ ಮುಕ್ತಿ ಪಡೆದವು.

ಹುಡಿಯು ಅರಳಿ ಹೂವಾದಂತೆ, ಹುಳ ರೆಕ್ಕೆಪಡೆದು ಚಿಟ್ಟೆಯಾಗುವ ಈ ಹೊಸ-ಹುಟ್ಟಿನ ಸಂಭಾವ್ಯತೆಗಳು ಕವಿಗೆ ಕುತೂಹಲದ ವಿಷಯವಾಗುತ್ತವೆ. ಚಿಟ್ಟೆಗೆ ದೊರೆಯುವ ಮುಕ್ತಿ, ಹಿಗ್ಗು ಅವನು ನಂಬಿದ ಮೌಲ್ಯಗಳೇ ಆದ್ದರಿಂದ ಚಿಟ್ಟೆಯ ಮಹತ್ವ ಇನ್ನೂ ಹೆಚ್ಚುತ್ತದೆ. ಈಗ ಕವಿಯ ಜಗತ್ತೆಲ್ಲ ಹೂವು, ಚಿಟ್ಟೆಮಯ. ಒಂದನ್ನೊಂದು ತಬ್ಬಿ ಏಕಜೀವವಾದ ಹೂವು-ಚಿಟ್ಟೆಗಳಲ್ಲಿನ ಭೇದ ಕೂಡ ಮಾಯವಾಗಿ ಪ್ರೇಮದ ಅದ್ವೈತದ ದರ್ಶನವೊಂದೇ ಅವನ ಅನುಭವವಾಗಿ ಉಳಿಯುತ್ತದೆ. 'ಬೇರಾಗಿ ಬೆರೆಯುವುದೇ ಕಾರ್ಯ'ವೆನ್ನುವ ಶ್ರಾವಣದ ಸಂದೇಶ ಮೂರ್ತರೂಪವನ್ನು ತಳೆದು ಅವನ ಮನಸ್ಸನ್ನು ತುಂಬುತ್ತದೆ:

ಹೂವು ಪಕಳೆ ಪ್ರಾಣ ತುಂಬಿ
ಚಿಟ್ಟೆಯಾಗಿ ಕಾಂಬವೋ !
ಕುಣಿದು ದಣಿದ ಚಿಟ್ಟೆ-ಪಕ್ಕ
ಹೂವು ಎನಿಸಿಕೊಂಬವೋ !

ಜಡ-ಜೀವಗಳಲ್ಲಿಯು, ಪ್ರಕೃತಿ-ಪುರುಷರಲ್ಲಿಯು ಈ ಅದಲು ಬದಲು ಸಮಷ್ಟಿಗೆ ಪುಷ್ಟಿ ಕೊಟ್ಟು ಕವಿಯ ದರ್ಶನದ ದೃಷ್ಟಿಯಿಂದ ಬಹಳ ಮಹತ್ವದ ಘಟನೆ-ಯೆನಿಸುತ್ತದೆ.

ಕವಿತೆಯ ಕೊನೆಯ ಭಾಗದಲ್ಲಿ ಬರುವ ಎರಡೂ ಚಿತ್ರಗಳು ಕಾವ್ಯಾರ್ಥದ ತಿರುಳಿಗೆ ನೇರವಾಗಿ ಸಂಬಂಧಪಟ್ಟುವಾಗಿವೆ. ಒಂದು, ಪುಷ್ಪರಾಶಿಯ ರಾಸ-ಲೀಲೆಯಿಂದ ವ್ಯಾಪ್ತವಾದ ನೆಲ. ಇನ್ನೊಂದು, ಹೂವಿನ ಹಡಲಿಗೆಯನ್ನು ಹೊತ್ತು ಮೈತುಂಬಿ ಕುಣಿಯುತ್ತಿರುವ ಭೂಮಿತಾಯಿ-ಜೋಗಿತಿ. ಒಂದು ಪ್ರೇಮದ ನಿದ-ರ್ಶನವಾದರೆ ಇನ್ನೊಂದು ಭಕ್ತಿಯ ಅಭಿವ್ಯಕ್ತಿ, ಇವೆರಡಕ್ಕೂ ಇರುವ ಅನ್ಯೋ-ನ್ಯತೆ. ಎರಡೂ ಚಿತ್ರಗಳಿಗೂ ಸಮಾನವಸ್ತುವಾಗಿರುವ ನೆಲ-ಹೂವು ಸಂಕೇತ ಗಳಲ್ಲಿ ಒಡಮೂಡಿದೆ. ಹೀಗಾಗಿ, ಪ್ರಕೃತಿಯ ನಾಟ್ಯದಲ್ಲಿ ಪ್ರೇಮದ ಸಾಕ್ಷಾತ್ಕಾರ ವನ್ನು ಒಡಮೂಡಿಸುವ ಕವಿತೆಯ ಉದ್ದೇಶ ಸಫಲವಾಗುತ್ತದೆ.

ಕಾವ್ಯೋದ್ದೇಶದ ದೃಷ್ಟಿಯಿಂದ, ಹೂವು-ಚಿಟ್ಟೆಗಳಂಥ ಪ್ರತೀಕಗಳ ಉಪ-ಯೋಗದಲ್ಲಿ 'ಶ್ರಾವಣದ ವೈಭವ' ತುಂಬ ಯಶಸ್ವಿಯಾದ ಕವಿತೆ; ಹೀಗಿದ್ದರೂ ಅದರ ಕೆಲವೊಂದು ಭಾಗ ಶಿಥಿಲವಾಗಿದೆಯೆನ್ನುವುದನ್ನು ಒಪ್ಪದೆ ಗತ್ಯಂತರವಿಲ್ಲ. ಉದಾಹರಣೆಗೆ, 'ರಂಗು ಇಹುದು, ರೂಪ ಇಹುದು' ಮುಂತಾಗಿ ಪ್ರಾರಂಭ-ವಾಗುವ ಕವಿತೆಯ ಎರಡನೆಯ ಭಾಗವನ್ನು ನೋಡಬಹುದು. ರಂಗುರಂಗಾಗಿ, ಗುತ್ತಾಗಿ ಬೆಳೆದ, ಮಳೆ-ಬೇಸಿಗೆಗಳನ್ನು ಮೀರಿನಿಂತ ಹೇಸಿಗೆ ಹೂ ಕವಿತೆಯ ಜಗ ತ್ತಿನ ಅವಿಭಾಜ್ಯ ಅಂಗವಾಗಿದ್ದರೂ ಕೂಡ, ಅದನ್ನು ಕೇವಲ-ಅದೂ ಸುಲಭವಾದ ನೀತಿ-ಪಾಠಕ್ಕಾಗಿ ಕವಿ ಬಳಸುವ ರೀತಿ ಮುಖ್ಯ ಕಾವ್ಯೋದ್ದೇಶಕ್ಕೆ ಹೊರಗಿನದಾಗಿ ಕಾಣುತ್ತದೆ. ಇಂಥ ಶಿಥಿಲತೆ ಕೆಲಮಟ್ಟಿಗೆ ಕವಿತೆಯ ಉಳಿದ ಭಾಗಗಳಲ್ಲಿಯೂ ಕಾಣುತ್ತವೆ. ಕವಿತೆಯ ಕೊನೆಯಲ್ಲಿಯ 'ಎಷ್ಟು ಹೋಲಿಕೆಯನ್ನು ಕೊಟ್ಟೊ । ಹೊಗಳಿ ಮನವು ತಣಿಯದು' ಎನ್ನುವ ಹೇಳಿಕೆಯಂತೂ ಶುಷ್ಕ ಗದ್ಯವಾಗಿಯೇ ಉಳಿಯುತ್ತದೆ. ಈ ದೃಷ್ಟಿಯಿಂದ, 'ಶ್ರಾವಣದ ವೈಭವ' ನವೋದಯ ಕಾವ್ಯದ ಶಕ್ತಿ - ಸಾಮರ್ಥ್ಯಗಳನ್ನು ಗುರುತಿಸುವಂತೆ ಅದರ ದೌರ್ಬಲ್ಯದ ಪ್ರತೀಕವೂ ಆಗಿದೆ.

೨

'ಶ್ರಾವಣದ ವೈಭವ' ಬೇಂದ್ರೆಯವರ ಮೊತ್ತಮೊದಲಿನ ಶ್ರಾವಣಗೀತ-ಗಳಲ್ಲೊಂದು. ಅದರ ನಂತರ ಎಷ್ಟೋ ವರ್ಷಗಳ ನಂತರ ಬಂದ 'ಪ್ರತಿ ವರ್ಷ-ದಂತೆ ಬಂತಽ ಶ್ರಾವಣಾ' ಅವರ ಮಾಗಿದ ಕಲೆಯ ಫಲ. ಇಲ್ಲಿಯೂ ಕೂಡ ಅದೇ ವೈಭವದ—

> ನೆಲದ ಗರ್ಭದಾ ಹೊನ್ನು
> ನೀಲಿ ನೀರನ್ನು
> ಕುಡಿದು ಹಸಿರನ್ನು

ಉಗುಳಿದ— ಪುನರ್ದರ್ಶನವಿದೆ. ಅದೇ ಹಸಿರು-ಹಳದಿ ಬಣ್ಣಗಳ ರಾಜ್ಯ; ಅದೇ ಪ್ರಕೃತಿಯ ಹೊಸಹುಟ್ಟಿನ ಸಂಭ್ರಮ. ಆದರೆ ನೋಡುವ ಕಣ್ಣಿನಲ್ಲಿ ಮಾತ್ರ ಬದಲಾವಣೆಯಾಗಿದೆ. 'ಶ್ರಾವಣದ ವೈಭವ'ದ ಕವಿ ಸಾಕ್ಷಿಕ ಚೆಲುವಿನ ಅನುಭೂತಿಯಿಂದ ಪುಲಕಿತನಾದ ಪ್ರೇಮಿಯಾದರೆ ಇಲ್ಲಿನ ಕವಿ ದ್ರಷ್ಟಾರನಾಗಿದ್ದಾನೆ, ಚಿಂತಕನಾಗಿದ್ದಾನೆ.

ಶ್ರಾವಣದ ಬರುವಿಕೆಗೆ ಹಾತೊರೆದು ಕುಳಿತ ಕವಿಗೆ ಅದರ ಆಗಮನ ಹರ್ಷ-ವನ್ನು ತರುತ್ತದೆ. ('ಅಹಹಾ ಬಂತು ಶ್ರಾವಣಾ') ಇದು ಅವನ ಶ್ರಾವಣದ ಮೊದಲ ಅನುಭವವೇನೂ ಅಲ್ಲ. ಹಸಿರಾಗಿ ಪಸರಿಸಿದ ಶ್ರಾವಣ ಜಗದ ಜೀವ, ಕರುಳಿನ ಹೂವು, ಮೂರ್ತಿವೆತ್ತ ಪ್ರೀತಿ ಎನ್ನುವುದು ಅವನಿಗೀಗಾಗಲೇ ತಿಳಿದಿದೆ. ಅದರ ವಿಶ್ವಕರ್ಷಕ ಶಕ್ತಿಯನ್ನೂ ಅವನು ಬಲ್ಲ. ಆದರೆ ಈ ತಿಳುವಳಿಕೆಯೂ ಸಾಲದೆಂಬಂತೆ ಕವಿತೆಯಲ್ಲಿ ಶ್ರಾವಣದ ಅರ್ಥದ, ಅಗಮ್ಯತೆಯ ಶೋಧವಿದೆ. ತಾತ್ವಿಕತೆ ಈ ಕವಿತೆಯ ಜೀವಾಳವಾಗಿದ್ದರೂ, ಕವಿಗೆ ಶ್ರಾವಣದ ಸಾಕ್ಷಾತ್ಕಾರ-ವಾಗುವುದು ಹಸಿರಿನ ಮೂಲಕ— 'ಶ್ರಾವಣದ ವೈಭವ' ಕವಿತೆಯಲ್ಲಿಯಂತೆ. ನೆಲದ ಗರ್ಭದ ಹೊನ್ನು ನೀಲಿ ನೀರನ್ನು ಕುಡಿದು ಹಸಿರನ್ನು ಉಗುಳಿದ ಪವಾಡ-ವನ್ನು ಮೋಡದೊಡ್ಡಿನ ಮೇಲೆ ನಿಂತ ಮಳೆಯ ಮೇಳದಂತೆ ('ಬಾನಿನಂಚಿನಲ್ಲಿ ಮೋಡ| ನೋಡಲಿದನೆ ಬಾಗಿದೆ'— ಶ್ರಾ. ವೈ.) ಜಗತ್ತು ಮೌನದಿಂದ ನೋಡು-ತ್ತಿದೆ. (ಪ್ರಕೃತಿನಾಟ್ಯ, ಪುರುಷ ಸಾಕ್ಷಿ) ಕವಿಯೂ ಅದಕ್ಕೆ ಸಾಕ್ಷಿಯಾಗಿ-ದ್ದಾನೆ. 'ಇದು ಎಂಥ ಹಸುರಿನ ಕಂಪು' ಎನ್ನುವುದು ಅವನಿಗೆ ಅಗಮ್ಯವಾಗಿ-ದ್ದರೂ ಆ ಹಸಿರಿನ ಸಾಂಕೇತಿಕತೆ ಅವನಿಗೆ ತಿಳಿದಿದೆ. ಶ್ರಾವಣದ ಹಸಿರು ಬೆಳೆಗೆ ಸಂಜೀವನಿಯಾಗಿದ್ದಂತೆ ಹೃದಯಕ್ಕೂ ಸಂಜೀವನಿಯಾಗಿದೆ ಎನ್ನುವುದನ್ನು ಅವನು ಬಲ್ಲ.

ಬೆಳಿಗೆಲ್ಲಾ ಹಸುರೆ ಕಾರಣಾ
ಹೃದಯುದ ಕಣಾ
ಆಗತಾವ ಹೆಣಾ
ಹಸಿರು ನಂದಿ
ಹಸಿ ಹೀರಿ ಬಿಸಿಯು ಹೊಂದಿ.

ಭೂಮಿತಾಯಿಯ ಉಸಿರಿನಲ್ಲಿ, ಅವಳ ಜಸಿರಿನ ಸಂಕೇತ (ಶ್ರಾ. ವೈ. ದಲ್ಲಿಯೂ ಇದರ ಉಪಯೋಗವಿದೆ.)ವಾದ ಪಚ್ಚೆಯ ಹಸಿರಿನಲ್ಲಿ ಕವಿಗೆ ಶ್ರಾವಣದ ಸಂಚಾ-ರದ ಅರಿವಾಗುತ್ತದೆ. ಹೊರಗಿನ 'ಬನದ ಕಾವು', ಒಳಗಿನ 'ಸುಳಿವ ಭಾವ' 'ಇದು ಹಾಡು, ಶ್ರಾವಣಾ ಹಾಡು' ಎನ್ನುವ ಭರವಸೆಯನ್ನು ಅವನಲ್ಲಿ ಹುಟ್ಟಿ-ಸುತ್ತವೆ. ಬೀಸುವ ಗಾಳಿಯೂ (ಶ್ರಾ. ವೈ. ದಲ್ಲಿಯೂ ಇದರ ಉಲ್ಲೇಖವಿದೆ.) ಅವನನ್ನು ಧೃತಿಗೆಡಿಸುವುದಿಲ್ಲ. ಏಕೆಂದರೆ, ಈ ಹೆಗ್ಗಾಳಿ ಮೃತ್ಯುವಿನ ಮೇಲೆ ನಡೆದ ದಾಳಿ ಎಂಬುದು ಅವನಿಗೆ ಗೊತ್ತಿದೆ:

ಹೊರಟ್ಟದ ದಾಳಿ
ಶಿವನ ಗಣಕ
ಹುಟ್ಟ್ಯದ ಜೀವ ಹೆಣಕ.

ಮರಣದ ಭೀತಿಯನ್ನೇ ಗೆದ್ದ ಉತ್ಸಾಹ ಈಗ ಕವಿಯನ್ನು ಹುಚ್ಚನನ್ನಾಗಿ ಮಾಡುತ್ತದೆ. ಶ್ರಾವಣದೊಂದಿಗೆ ತಾದಾತ್ಮ್ಯವನ್ನು ಹೊಂದಿದ ಅವನಿಗೆ ಶ್ರಾವ-ಣಕ್ಕೂ ಕೂಡ ಗ್ಯಾನ ತಪ್ಪಿರಬೇಕು ಎನ್ನುವ ಭ್ರಮೆಯಾಗುತ್ತದೆ.

'ಶ್ರಾವಣದ ವೈಭವ'ದಲ್ಲಿ ಸೂಕ್ಷ್ಮವಾಗಿ ಸೂಚಿತವಾದ ಮರಣ ಭೀತಿ ('ಗಾಳಿ ಬೀಸಿ ಹಾಸಿ ಹೋಗಿ| ಗಾಸಿ ಮಾಡ ಬಂದರೂ....') ಈ ಕವಿತೆಯಲ್ಲಿ ಕಾವ್ಯವಸ್ತುವಿನ ಮುಖ್ಯ ಅಂಶವಾಗಿದೆ. ಶ್ರಾವಣ ತರುವ ಹೊಸ ಹುಟ್ಟು ಪ್ರಕೃತಿಯ, ಮನುಷ್ಯನ ವೈಭವದರ್ಶನಕ್ಕೆ ಕಾರಣವಾಗಿದೆ ಎನ್ನುವುದು ಮೊದ-ಲಿನ ಕವಿತೆಯ ಕಾಣ್ಕೆಯಾದರೆ, ಮರಣಕ್ಕೆ ಆಹ್ವಾನ ಸೀಡಿ ಹೆಣದಲ್ಲಿಯೂ ಪ್ರಾಣ ವನ್ನು ಪ್ರತಿಷ್ಠಾಪನೆ ಮಾಡಬಲ್ಲ ಶ್ರಾವಣದ ಸಾಮರ್ಥ್ಯದ ವಿಜೃಂಭಣೆ ಈ ಕವಿತೆ-ಯಲ್ಲಿದೆ. ಅವೇ ವಸ್ತು, ಅವೇ ಸಂಕೇತಗಳನ್ನು ಉಪಯೋಗಿಸಿಯೂ ಕವಿ ತನ್ನ ದರ್ಶನದ ಬೇರೊಂದು ಮುಖವನ್ನು ಇಲ್ಲಿ ತೋರಿಸ್ಸಾನೆ.

ಬೇಂದ್ರೆಯವರ ಈ ಕವಿತೆಗಳನ್ನೋದುವಾಗ ವ್ಹಿಟಮನ್ ಕವಿಯ (Leaves of Grass) ಕಾವ್ಯದ ನೆನಪಾಗುತ್ತದೆ. ಬೇಂದ್ರೆಯವರಲ್ಲಿ,

ದರ್ಶನದ ಸಂಪರ್ಕ ತಪ್ಪಿ ತೊಳಲಾಡುವ ರೊಮ್ಯಾಂಟಿಕ್ ಕವಿಯ ವ್ಯಥೆ-ಯಾಗಲಿ, ಅವನ Nostalgia ಆಗಲಿ ಕಂಡು ಬರುವುದಿಲ್ಲ. ವ್ಹಿಟಮನ್-ನಂತಹ 'Transcendentalist ಕವಿಯಲ್ಲಿ ನಾವು ನೋಡುವ ದರ್ಶನದ ಸಾತತ್ಯ, ವಿಜೃಂಭಣೆಯ ಹೌಸು ಬೇಂದ್ರೆಯವರಲ್ಲಿಯೂ ಕಾಣಬರುತ್ತವೆ; ತಾತ್ವಿಕತೆ ಇಂಥ ಕಾವ್ಯದಲ್ಲಿ ಹಾಸುಹೊಕ್ಕಾಗಿ ನಿಂತರೂ ಕಾವ್ಯದ ಮುಖ್ಯ ಅನುಭವ ಕವಿಯದೆ. ವ್ಹಿಟಮನ್‌ನಿಗೆ ಹುಲ್ಲಿನ ದಳ, ದೈವಿಕತೆಯ, ಅಮರತ್ವದ ಧ್ವಜವಾಗಿ ತೋರಿದಂತೆ ಬೇಂದ್ರೆಯವರಿಗೆ ಶ್ರಾವಣದ ಹುಲ್ಲು, ಹೂವು ಅಮರ್ತ್ಯದ ಕನಸನ್ನು ನನಸಾಗಿ ತೋರಿಸುವ ಸಾಧನಗಳಾಗಿವೆ.

§ § § §

೪೦

# 'ಜೋಗಿ'

ಸುಮತೀಂದ್ರ ನಾಡಿಗ

'ಗಂಗಾವತರಣ' ಸಂಗ್ರಹ ಮೊದಲು ಪ್ರಕಟವಾದದ್ದು ೧೯೫೧ ರಲ್ಲಿ. ಅದರ ಪರಿವಿಡಿಯಲ್ಲಿ ಅಲ್ಲಿನ ಕವನಗಳನ್ನು ಏಳು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಆರನೆಯ ಭಾಗ ತತ್ತ್ವಸೃಷ್ಟಿ ಎಂದಿದ್ದರೆ ಏಳನೆಯದು, ಅನುಭಾವ ಗೀತೆಗಳು ಎಂದಿದೆ. ಬೇಂದ್ರೆಯವರು ಆರನೆಯ ಭಾಗದಲ್ಲಿ 'ಜೋಗಿ' ಎನ್ನುವ ಕವಿತೆ-ಯನ್ನು ಸೇರಿಸಿದ್ದರೂ, ಅದೊಂದು ಅನುಭಾವಗೀತೆಯಾಗಿ ಕಾಣಿಸುತ್ತದೆ. ಆದ್ದ-ರಿಂದ, ಬೇಂದ್ರೆಯವರ 'ಅನುಭಾವ' ಪದದ ಅರ್ಥ ಬೇರೆಯೇ ಇರಬಹುದು.

ಅನುಭಾವ ಆದಿಭೌತಿಕವಾದದ್ದರ ಅನುಭವ. ಈ ಅನುಭವ ಕವಿತೆ-ಯಾಗಬೇಕಾದಾಗ ಜನರಿಗೆ ಪರಿಚಿತವಾದ ಪ್ರತಿಮೆಗಳ ಮತ್ತು ಶಬ್ದಗಳ ಮೂಲಕ ಭಾಷೆಯಲ್ಲಿ 'ಆಗ'ಬೇಕಾದದ್ದು ಅನಿವಾರ್ಯವಾಗುತ್ತದೆ. ಓದುಗನಿಗೆ ಅನು-ಭಾವಿಯ ಸಿದ್ಧಿ ಬಂದಿರಲಿ, ಬಾರದಿರಲಿ, ಅವನಿಗೆ ತನ್ನ ಅನುಭವವನ್ನು ಮುಟ್ಟಿಸದಿದ್ದರೆ ಅನುಭಾವಿ - ಕವಿ ನಿರುಪಯೋಗಿಯಾಗುತ್ತಾನೆ. ಆದಕಾರಣ ಓದುಗನಿಗೆ ಮತ್ತು ಕವಿಗೆ ಆತ್ಮೀಯವಾದ ಭಾಷೆಯನ್ನು ವಿಶೇಷ ರೀತಿಯಲ್ಲಿ ಬಳಸಿಕೊಂಡು ತನ್ನ ಅನುಭಾವವನ್ನು ಭಾಷೆಯಲ್ಲಿ ಸಾಕ್ಷಾತ್ಕರಿಸಿ 'ವಸ್ತುರೂಪ'-ವನ್ನು ಕೊಡಬೇಕಾಗುತ್ತದೆ. ಉದಾಹರಣೆಗೆ ಅಲ್ಲಮಪ್ರಭುವಿನ ವಚನವೊಂದರಲ್ಲಿ ಈ ರೀತಿಯ ಗ್ರಹಿಕೆ ಕಂಡುಬರುತ್ತದೆ:

> ಎತ್ತಣ ಮಾಮರ, ಎತ್ತಣ ಕೋಗಿಲೆ ? ಎತ್ತಣಿಂದೆತ್ತ ಸಂಬಂಧವಯ್ಯ?
> ಬೆಟ್ಟದ ನೆಲ್ಲಿಯಕಾಯಿ-ಸಮುದ್ರದೊಳಗಿನ ಉಪ್ಪು ಎತ್ತಣಿಂದೆತ್ತ ಸಂಬಂಧ?
> ಗುಹೇಶ್ವರಲಿಂಗಕ್ಕೆಯು ಎನಗೆಯು ಎತ್ತಣಿಂದೆತ್ತ ಸಂಬಂಧವಯ್ಯ?

ಇಲ್ಲಿ ಸಾಮಾನ್ಯವಾದ ಮಾಮರದ ಮತ್ತು ಕೋಗಿಲೆಯ ಸಂಬಂಧದಿಂದ ಪರ-ಮಾತ್ಮ ಮತ್ತು ಜೀವರ ಸಂಬಂಧಕ್ಕೆ ದಾಟಿಸುವ, ಆ ಸಂಬಂಧದ ಅರಿವನ್ನು ತೀವ್ರಗೊಳಿಸುವ ಕಾವ್ಯಕ್ರಿಯೆ ಸಫಲವಾಗಿದೆ.

'ಜೋಗಿ' ಕವನಕ್ಕೆ ಬೇಂದ್ರೆಯವರು ಭಾವ-ಸಂದರ್ಭ ಸೂಚನೆ ಕೊಡುತ್ತ, "ಈ ಗೀತ ಧಾರವಾಡದ ಸುತ್ತಲಿನ ನಿಸರ್ಗದ ಮಾಯೆಯಿಂದಲೂ, ಒಳಜೀವನದೊಳಗಿನ ಕಾಳರಾತ್ರಿಯ ಭಯಾನಕ ಸಂಶಯಾಕುಲಿತ ಭಾವನೆಯಿಂದಲೂ ಉದಿತವಾಗಿದೆ" ಎಂದು ಹೇಳಿದ್ದಾರೆ. ಈ ಕವನದಲ್ಲಿ ನಿಸರ್ಗದ ಮಾಯೆ, ಕೇವಲ ಮಾಯೆಯಾಗಿರದೆ, ಒಳಜೀವನದೊಳಗಿನ ಕಾಳರಾತ್ರಿ, ಕಾಳರಾತ್ರಿಯಾಗಿ ಉಳಿಯದೆ ಇವುಗಳಿಂದ ಉದಿತವಾದ ಈ ಕವಿತೆ ಸಂಕೀರ್ಣ ಅನುಭವವೊಂದನ್ನು ಸಮರ್ಥವಾಗಿ ರೂಪಿಸುತ್ತದೆ.

ಊರ ತುದಿಯ ಮೂರು ಬಟ್ಟೆ ಮುಗಿದಲ್ಲಿಂದ ಕವಿತೆ ಆರಂಭವಾಗುತ್ತದೆ. ಊರ ತುದಿ ಬದುಕಿನ ಆಚೆಯದನ್ನು ಧ್ವನಿಸುತ್ತದೆ. ಈ ಮೂರು ಬಟ್ಟೆಯ ಆಚೆ, ದಿಕ್ಕು ತಪ್ಪಿಸುವಂಥ ಕಾಡಿನ ವರ್ಣನೆಯಿದೆ, ಬದುಕಿನ ಹೊರಗೇನಿದೆಯೆಂದು ಹುಡುಕುವುದರಲ್ಲಿನ ಕಷ್ಟವನ್ನು ಈ ಭಾಗ ಅರ್ಥೈಸುತ್ತದೆ. ಈ ಕಾಡಿನ ದಟ್ಟವಾದ ನೆರಳಿನಲ್ಲಿ ಇರುಳು ಅಂದುಕೊಂಡು ಹಗಲಿನಲ್ಲೂ ಕೂಗುವ ಜೋಡು ಗೂಗೆಗಳು ಭಯಾನಕ ವಾತಾವರಣವನ್ನು ಸೃಷ್ಟಿಸುತ್ತವೆ. ಜೋಡಿ ಗೂಗೆಗಳು ಸಾವನ್ನು ಸೂಚಿಸುವ ಹಾಗೆ, ಅವಿರುವ ಕಾಡಿನ ಆಚೆಗಿನ ಮಸಣವಾಟ ಮತ್ತು ಅದರ ಆಚೆಗೆ ಎಡಕ್ಕಿರುವ ಹೊಂಡವೂ ಸಾವನ್ನು ಸೂಚಿಸುತ್ತವೆ.

> ಅದನ ದಾಟ ಆ ಮಸಣವಾಟ, ಎಡಕಾಗಿ ಅದರ ಆಚಿ
> ಕಾಮ ತನ್ನ ಹಚ್ಚಂಗಿ ಹಾಸಿಧಾಂಗೆಲ್ಲ ನೀರಪಾಚಿ
> ಹೊಚ್ಚ ಹೊಂಡವನು ಮೆಚ್ಚ ಮಾಡತಾವೊ ಕಂಡ ಕಣ್ಣುಗಳಿಗೆ
> ಪಾಚಿ ಸರಿಸಿದಾಗ ಕಪ್ಪುನೀರು ಕರಿತಾವ ಒಳಗ ಬಳಿಗೆ

ಹೊಂಡದ ವರ್ಣನೆಯಲ್ಲಿ ಕಾಮನ ಹಸುರಂಗಿಯ ಮೋಹಕತೆ ಇದ್ದರೂ, ಕಪ್ಪುನೀರು ಒಳಗೆ ಕರೆಯುವುದು ಭೀತಿ ಹುಟ್ಟಿಸುತ್ತದೆ. ಈ ಪ್ರಯಾಣದ ಮುಂದಿನ ಮಜಲು ಗವಿ-ಗುಡ್ಡ. ಅಲ್ಲಿಂದ ಮುಂದೆ ಕಾಳಮ್ಮನ ಹೊಲ. ಆ ಹೊಲದ ನಡುವಿರುವ ಹುಣಸಿಯ ಮರವನ್ನು ಏರಿ ನೋಡಿದಾಗ ಇನ್ನೊಂದು ಕಾಡು ಕಾಣಿಸುತ್ತದೆ. ಆ ಕಾಡಿನ ವರ್ಣನೆ ಹಿಂದೆ ಉದ್ದೀಪಿಸಿದ ದಿಗ್ಭ್ರಮೆ, ಹೆದರಿಕೆ, ಮೋಹಕತೆ ಮುಂತಾದ ಭಾವನೆಗಳನ್ನು ಪುಷ್ಟಿಗೊಳಿಸುತ್ತ ಹೋಗುತ್ತದೆ. ತೊಗಲಬಾವಲಿ-ಪಾರಿವಾಳ, ಬೇವು - ಅಮೃತ ಬಳ್ಳಿ, ಮಾವು - ಏಳುಹೆಡೆಯ ಹಾವು, ಇಂತಹ ವಿಷಮ ಭಾವನೆಗಳನ್ನುದ್ದೀಪಿಸುವ ಪ್ರತಿಮೆಗಳನ್ನು ಮುಖಾಮುಖಿಯಾಗಿಸುವುದರಿಂದ ಉಂಟಾಗುವ ವಿಚಿತ್ರ-ರಹಸ್ಯ-ಭಯಾನಕ-ರಹಸ್ಯಮಯ ವಾತಾವರಣವೊಂದು ಸೃಷ್ಟಿಯಾಗುತ್ತದೆ. ಈ ವಾತಾವರಣ ಒಳಜೀವನದ ಕಾಳರಾತ್ರಿಯನ್ನು ಸೂಚಿಸುತ್ತದೆ. ಆದರೆ ಹೊರಗೆ ಹಗಲಿರುವುದರಿಂದ, ಈ ಹಗಲಿನಲ್ಲಿ ಕಾಣುವ

ಕತ್ತಲೆ ಅವುಗಳ ಪರಸ್ಪರ ವಿರೋಧದಿಂದ ತೀವ್ರವಾದ ತಳಮಳದ ಅನಿಸಿಕೆಗಳನ್ನು ಮೂಡಿಸುತ್ತದೆ.

ಈ ತಳಮಳದಲ್ಲಿದ್ದಾಗಲೆ ಅದು ಸುಗ್ಗಿಯ ಕಾಲದ ಒಂದು ದಿವಸವೆಂದು, ಆ ಕಾಡಿನಲ್ಲಿರುವ ಮಾವಿನ ಮರದಲ್ಲಿರುವ ಕೋಗಿಲೆಯೊಂದು ತನ್ನನ್ನು ಕರೆಯು-ತ್ತಿದೆಯೆಂದು ನಾಯಕನಿಗೆ ಅನಿಸುತ್ತದೆ. ಕೋಗಿಲೆಯ ಕೂಗು ಆ ಮಾವಿನ-ಮರದ ಕೆಳಗಿರುವ ಏಳುಹೆಡೆಯ ಹಾವನ್ನು, ಇಲ್ಲಿಯ ವರೆಗಿನ ಪ್ರವಾಸದಲ್ಲಾದ ತಳಮಳವನ್ನು ಮರೆಸುತ್ತದೆ. ನಾಯಕನ ಪ್ರಜ್ಞೆಯಲ್ಲಿ ಒಂದೇ ಸಮನೆ ಕರೆಯುವ ಕೋಗಿಲೆಯ ಕೂಗೇ ತುಂಬಿಹೋಗುತ್ತದೆ. ಸುಗ್ಗಿಯ ಕಾಲದ ಕಂಪು ದುಂಬಿ-ಗಳನ್ನು ಹುಚ್ಚು ಹಿಡಿಸುವಷ್ಟರ ಮಟ್ಟಗಿದೆ. ಪ್ರಕೃತಿಯ ಲಯಗಳನ್ನು ಹಿಡಿದ ಹಾಗೆ ಆ ಕೋಗಿಲೆಯ ಮಾಂತ್ರಿಕ ಕೂಗು ಕೇಳಿಸುತ್ತದೆ:

ಬಂತು ಸುಗ್ಗಿ ಬಂದ್ಹಾದ ಸುಗ್ಗಿ ಬರತ್ಹಾದ ಸುಗ್ಗಿ ಎಂದು
ಕುಹೂ ಅನ್ನತದ ಕುಹೂ ಅನ್ನತದ ಕುಹುಕ್ಕುಹೂ ಅಂದು.

ತಾರ-ಪಂಚಮದಾಗ ಕೂಗುವ ಕೋಗಿಲೆಗೆ ಎಂಥ ಬಣ್ಣ ಮತ್ತು ಕಣ್ಣಿವೆಯೆಂದು ನೋಡಬೇಕೆನ್ನಿಸಿದ ನಾಯಕ, ಹೋಗಿ ನೋಡಲೆ ಎಂದು ಜೋಗಿಯನ್ನು ಪ್ರಶ್ನಿ-ಸುತ್ತಾನೆ. ಥಟ್ಟನೆ ಇಲ್ಲಿ ಕಾಣಿಸಿಕೊಳ್ಳುವ ಜೋಗಿ, ಇಲ್ಲಿಯ ವರೆಗಿನ ನಿರೂ-ಪಣೆಯ ಧಾಟಿಯನ್ನು ಬದಲಾಯಿಸುತ್ತಾನೆ. ಇದ್ದಕ್ಕಿದ್ದಂತೆ ಇನ್ನೊಂದು ಪಾತ್ರದ ಅರಿವಾಗಿ, ಕವಿತೆ ನಾಟಕ ಗುಣವನ್ನು ಪಡೆಯುತ್ತದೆ. ಕೋಗಿಲೆಯ ಕೂಗಿನ ಲಯಕ್ಕೆ ತೋಟವೆಲ್ಲ ಹೂವಾಗಿ, ಕಾಯಾಗಿ, ಹಣ್ಣಾಗುವುದು ನಾಯಕನಿಗೆ ಅರಿ-ವಾದದ್ದನ್ನೂ, ಬೆಳಗಿನಿಂದ ಒಂದೇ ಸಮನೆ ತಲೆ ಸುಡುತ್ತಿರುವ ಬಿಸಿಲಿನಲ್ಲಿ ಮಾವಿನಮರದಲ್ಲಿ ಕುಳಿತು, ಕೊಳಲು ನುಡಿಸಿದ ಹಾಗೆ ಕೂಗುತ್ತಿರುವ ಕೋಗಿಲೆ-ಯತ್ತ ಗಮನ ನೆಟ್ಟಿರುವದನ್ನೂ, ಬೇರೆ ಕೆಲಸದಲ್ಲಿ ಮನಸ್ಸಿಲ್ಲದ್ದನ್ನೂ ನಾಯಕ ಜೋಗಿಗೆ ನಿವೇದಿಸುತ್ತ ಮತ್ತೊಮ್ಮೆ ಕೋಗಿಲೆಯನ್ನು ನೋಡಬಹುದೆ ಎಂದು ಪ್ರಶ್ನಿಸುತ್ತಾನೆ. ಇದಾದ ನಂತರ ಕೋಗಿಲೆಯ ಕೂಗಿನ ಬಗ್ಗೆ ಹೇಳುತ್ತ ಜೋಗಿ ಯನ್ನು ಸತ್ಕರಿಸುವದನ್ನು ಮರೆತು ಹೋದದ್ದು ಥಟ್ಟನೆ ನೆನಪಾದವನ ಹಾಗೆ—

"ಬಂದೆ ಜೋಗಿ ಬಾ, ಬಾರೊ ಜೋಗಿ ಬಾ, ಏನು ಹೊತ್ತು ಬಂದಿ
ನೀನೆ ಹೇಳಿದ ನಾಮ ಜಪಿಸುವಾಗ ಬಂತೋ ಸುಗ್ಗಿಸಂಧಿ.
ತಲೆಯ ಯಾವುದೋ ನಾಡಿಯೊಳಗ ಸುರುವಾತು ಸುಗ್ಗಿಸೊಲ್ಲು
ಮುಂದೆ ಕೇಳಿದರ ಅದ್ಹ ತುಂಬಿತೋ ಮೂಲೆಮೂಲೆಯಲ್ಲೂ."

ಎನ್ನುತ್ತಾನೆ. ಈ ನುಡಿಯಲ್ಲಿ ಜೋಗಿ ಮತ್ತು ನಾಯಕನ ಸಂಬಂಧ ಗುರು-

ಶಿಷ್ಯರದೆಂಬ ಹೆಚ್ಚಿನ ಮಾಹಿತಿ ದೊರೆಯುತ್ತದೆ. ಈ ಜೋಗಿ ನಾಯಕನಿಗೆ 'ನಾಮ' ವೊಂದನ್ನು ಉಪದೇಶಿಸಿದ್ದನ್ನು ನಾಯಕ ಜಪಿಸುತ್ತಿದ್ದಾಗ ಯೋಗಾಯೋಗವೆಂಬಂತೆ ಸುಗ್ಗಿಯೂ ಬಂದಿರುತ್ತದೆ. ಈ ಸುಗ್ಗಿ ಜೋಗಿಯ ಉಪದೇಶದ ಪ್ರಭಾವದಿಂದ ಮೂಡಿದ ಆಧ್ಯಾತ್ಮ ಸುಗ್ಗಿಯಿದ್ದರೂ ಇರಬಹುದೆನ್ನುವ ಅನುಮಾನದ ಧಾಟಿ ಇಲ್ಲಿ ಅಂತರ್ಗತವಾಗಿದೆ. ಕೋಗಿಲೆಯ ಹಾಡು ಸುಗ್ಗಿಯ ಸೊಲ್ಲಾಗಿ ನಾಯಕನನ್ನು ತುಂಬಿಬಿಡುತ್ತದೆ. ಅವನು ಜೋಗಿಗೆ ಈ ಕೋಗಿಲೆಯ ಪ್ರಭಾವವನ್ನು ವಿವರಿ-ಸುತ್ತಾನೆ :

> ಗುಡಿಗೆ ನಾನು ಹೊರಟಾಗ ಕರೀತದ ಕುಹುಕ್ಕುಹೂ ಎಂದು
> ಮನದ ಜಪದ ನಡುನಡುವೆ ನಡೀತ್ತದ ಓಂ ಕುಹೂ ಎಂದು
> ಕನಸಿನೊಳಗ ನಾ ಸ್ವರಾ ಕೇಳಿ ಮಾಮರಾ ಆಗತೇನೋ
> ಅಂತ ಭ್ರಮಾ ಆಗ್ಯದ ಮನಕ ನೀ ಬಂದೆ ಜೋಗಿ ಏನೊ !

ಈ ನುಡಿಯಿಂದ ನಾಯಕನ ಅನುಭವ ಒಂದು ಮುಹೂರ್ತದಲ್ಲಿ ನಿರೂಪಿತವಾಗಿ-ದ್ದರೂ, ಒಮ್ಮೆ ಮಾತ್ರ ಆದದ್ದಲ್ಲವೆನ್ನುವುದರ ವಿವರಣೆಯಿದೆ. ಹೀಗೆ ಹಲವಾರು ಬಾರಿ ಸುಗ್ಗಿಯ ಮತ್ತು ಕೋಗಿಲೆಯ ಅನುಭವವಾಗಿರುವದರಿಂದ, ಮಾಮರವಾಗು ತ್ತೇನೋ ಎಂದು ಕನಸಿನಲ್ಲಿ ಭ್ರಮೆಯಾಗುವದರಿಂದ, ಈ ಭ್ರಮೆ ಹಗಲಿಗೂ ಚಾಚುವದರಿಂದ, ಈ ಭ್ರಮೆಯನ್ನು ಕಳೆಯಲಿಕ್ಕೇ ಜೋಗಿಯ ಆಗಮನವಾಯಿ-ತೇನೋ ಎಂದು ಆಶ್ಚರ್ಯಮಿಶ್ರಿತ ಪ್ರಶ್ನೆಯಲ್ಲಿ, ತನ್ನ ಅನುಭವಸಾಮಾನ್ಯವಾದ ಐಂದ್ರಿಯಿಕ ಅನುಭವವೋ, ಅಥವಾ ಆಧ್ಯಾತ್ಮಿಕ ಅನುಭವವೋ ಎನ್ನುವ ಸಂಶಯ ವಿದೆ. ನಾಯಕ ಮಾಮರವಾದರೆ, ಕೋಗಿಲೆಯಾಗದೆ ಹೋಗುವ, ಅದಾದರೂ ಅದು ಪ್ರತಿನಿಧಿಸುವ ಆದಿ-ವಾಸ್ತವವಾಗದ, ಅದೆಲ್ಲ ಆದರೂ ತಾನು ತಾನಾಗಿ ಉಳಿಯದ ಹೆದರಿಕೆ ಅವನಲ್ಲಿ ಕಂಡುಬರುತ್ತದೆ. 'ಭ್ರಮಾ ಆಗ್ಯದ ಮನಕ' ಎಂದು ಓದಿಕೊಂಡರೆ ಜೋಗಿ ಪ್ರತ್ಯೇಕ ವ್ಯಕ್ತಿಯಾಗಿ ಉಳಿಯುತ್ತಾನೆ. 'ಮನಕ ನೀ ಬಂದೆ ಜೋಗಿ ಏನೋ' ಎಂದು ಅನ್ವಯಿಸಿಕೊಂಡರೆ— 'ಜೋಗಿ' ನಾಯಕನ ಮನಸ್ಸಿನಲ್ಲಿ ಒಂದು ಅರಿವಿನ ಮಟ್ಟಕ್ಕೆ ಸಂಕೇತವಾಗುತ್ತಾನೆ. ಮೊದಲನೆಯ ರೀತಿಯಲ್ಲಿ ನಾಟಕ ಬಹಿರಂಗವಾದದ್ದಾಗುತ್ತದೆ; ಎರಡನೆಯ ರೀತಿಯಲ್ಲಿ ಅಂತ-ರಂಗದ್ದಾಗುತ್ತದೆ. ಅಷ್ಟೇ ಅಲ್ಲದೆ ಈ ನುಡಿ ಜೋಗಿ ಉಪದೇಶಿಸಿದ ಜಪಕ್ಕೂ, ಕೋಗಿಲೆಯ ಕೂಗಿಗೂ ಘರ್ಷಣೆ, ನಾಯಕನ ಮನಸ್ಸಿನಲ್ಲಿ ಕಂಡುಬರುತ್ತದೆ :

> " ಮನದ ಜಪದ ನಡುನಡುವೆ ನಡೀತ್ತದ ಓಂ ಕುಹೂ ಎಂದು. "

ಇಲ್ಲಿ 'ನಡುನಡುವೆ' ಎನ್ನುವ ದ್ವಿರುಕ್ತಿ ಸಂಖ್ಯಾಧಿಕ್ಯವನ್ನು ಸೂಚಿಸುತ್ತದೆ

ಮತ್ತು 'ಓಂ ಕುಹೂ' ಎನ್ನುವ ಸ್ವರಾನುಕರಣೆಗಳು ಕೋಗಿಲೆಯು ಕೂಗು ಜಪವನ್ನು ಕೆಡಿಸುವುದನ್ನು ಭಾವಾಭಿನಯಿಸುತ್ತವೆ. ಒಂದು ಓಂಕಾರಕ್ಕೂ, ಇನ್ನೊಂದು ಓಂಕಾರಕ್ಕೂ ನಡುವೆ ಕುಹೂ ಧ್ವನಿ ಅಲವತ್ತು ಕೇಳಿಸುತ್ತದೆ. ಈ ರೀತಿಯ ಆಧ್ಯಾತ್ಮಿಕ ಬಿಕ್ಕಟ್ಟು ಇರುವುದರಿಂದಲೇ ಜೋಗಿಯ ಸನ್ನಿಧಿಯ ಆವಶ್ಯಕತೆ ಕಾಣುತ್ತದೆ. ಇದಾದ ಮೇಲೆ ನಾಯಕ ಜೋಗಿಯನ್ನು ಕುರಿತು :

> "ಯಾವ ಸ್ವರಾ ಇದು ಯಾವ ಕೋಗಿಲಾ ಯಾವ ಮರವೋ ಏನೋ
> ಯಾಕ ಹೀಗ ಅಸರಂತ ಕೂಗತದ ಏನು ಇದಕೆ ಬ್ಯಾನ್ಯೋ
> ಸುತ್ತ ಗುಡ್ಡ ನುಗ್ಗಾಗಿ ಹೋದವೋ ಓಗೊಟ್ಟು ಇದಕ್ಕ
> ಬಿಸಿಲು ಕುಣಿದು ಬಿವತ್ತsದ ಈಗ ಬಂದ್ಹsದ ಮಳಿಯು ಹದಕ್ಕ,"

ಎಂದು ಹೇಳುತ್ತಾನೆ. ನಾಯಕನ ಮನಸ್ಸಿನಲ್ಲಿ ಕೋಗಿಲೆಯ ಕೂಗಿಗೆ ಯಾವ ಅರ್ಥ ಹಚ್ಚಬೇಕೆನ್ನುವ, ಅದಕ್ಕೂ ಜೋಗಿ ಉಪದೇಶಿಸಿದ ಜಪದ ಫಲಕ್ಕೂ ಏನಾದರೂ ಸಂಬಂಧವಿದೆಯೇನೋ ಎಂದು ತಿಳಿದುಕೊಳ್ಳುವ ಕಾತರತೆ ಇದೆ. ಅದರ ಜೊತೆಯಲ್ಲೇ ಒಂದೇ ಸಮನೆ ಕೂಗುತ್ತ ತನ್ನನ್ನು ಜೀವನದ ಆಸಕ್ತಿಗಳಿಂದ ದೂರವಾಗಿಸುವ (ಬೇರೆ ಕೆಲಸದಾಗ ಮನಸು ತೊಡಗದೊ) ಕೋಗಿಲೆಯ ಒಗ್ಗೆ ಬೇಸರವನ್ನೂ ವ್ಯಕ್ತಪಡಿಸುತ್ತಾನೆ. ಆದರೆ ಕೋಗಿಲೆಯ ಪ್ರಭಾವಶಾಲಿ ಕೂಗಿಗೆ ಸುತ್ತಲಿನ ಗುಡ್ಡಗಳು ನುಗ್ಗಾಗಿ ಹೋದದ್ದು, ಬಿಸಿಲುಕಾಲ ಮುಗಿದು ಮಳೆಗಾಲ ಆರಂಭವಾಗುವ ಪ್ರಕೃತಿ-ಲಯಗಳು, ಅವನ ಅನುಭವಕ್ಕೆ ಬರುತ್ತವೆ. ಇಲ್ಲಿಗೆ ಕವನ ಮುಕ್ತಾಯವಾಗುತ್ತದೆ.

ಬೇಂದ್ರೆಯವರ ಆಧ್ಯಾತ್ಮಿಕ ನಂಬಿಕೆ ಸರಳವಾದದ್ದಲ್ಲ. ಅಂದರೆ ತಮ್ಮ ಗಳಿಕೆಯಲ್ಲದ ಇನ್ನೊಬ್ಬರ ನಂಬಿಕೆಗಳನ್ನು, ವಿವೇಚನೆಯಿಲ್ಲದೆ, ಸ್ವಾನುಭವದ ಪ್ರಮಾಣವಿಲ್ಲದೆ ಒಪ್ಪಿಕೊಳ್ಳುವಂಥದಲ್ಲ; ತನಗೇ ಅನುಭವವಾದರೂ ಅದು ಭ್ರಮೆಯೋ ಅಲ್ಲವೋ ಎಂದು ಇನ್ನೊಬ್ಬರ ಅನುಭವಕ್ಕೆ ತೂಗಿ ಬೆಲೆ ಕಟ್ಟುವ ರೀತಿಯದು. ಆದ್ದರಿಂದಲೇ—

> "ಕನಸಿನಲ್ಲಿ ನಾ ಸ್ವರಾ ಕೇಳಿ ಮಾಮಾರ ಆಗತೇನೋ
> ಅಂತ ಭ್ರಮಾ ಆಗ್ಯsದ ಮನಕ ನೀ ಬಂದೆ ಜೋಗಿ ಏನೋ !"

ಎನ್ನುವ ಸಾಲುಗಳು ತನ್ನ ಅನುಭವದ ಘಟ್ಟ ನೆಲದ ಮೇಲೆ ನಿಲ್ಲುವುದು ಕವಿಯ ವ್ಯಕ್ತಿತ್ವವನ್ನು ಬೆಳಗುವುದಲ್ಲದೆ, ಅದರ ಒಗ್ಗೆ ತಳೆದ ಧೋರಣೆಯ ಬಗ್ಗೆ ತಾತ್ಕಾಲಿಕತೆಯನ್ನು ತೋರುವುದು ಪ್ರಬುದ್ಧತೆಯ ಲಕ್ಷಣವೂ ಆಗಿದೆ. ಸಂಶಯಪೂರಿತ-

ವಾದ ಅನುಭಾವದ ಗ್ರಹಿಕೆ ಈ ಕವನದಲ್ಲಿರುವುದು ಕವಿ ತನ್ನ ಅನುಭವಕ್ಕೆ ಎಷ್ಟು ಪ್ರಾಮಾಣಿಕನಾಗಿದ್ದಾರೆನ್ನುವುದನ್ನೂ ತೋರಿಸುತ್ತದೆ. ಕೋಗಿಲೆಯ ಕೂಗಿನಿಂದ ನಾಯಕ ಆಕರ್ಷಿತನಾಗಿದ್ದರೂ, ಅದು ಕೇವಲ ಕೋಗಿಲೆಯಾಗಿ ಕೊಡುವ ಐಂದ್ರಿಯಿಕ ಸುಖದ ಮೇಲ್ಮೆಯ ವರ್ಣನೆ ಇಲ್ಲಿಲ್ಲ. ಈ ಕೋಗಿಲೆ ಯಾವುದಿದು, ಯಾಕೆ ಕೂಗುತ್ತದೆ ಎಂದು ಅದು ನಿರ್ದೇಶಿಸುವ ಇಂದ್ರಿಯಾತೀತದ ಕಡೆಗೂ ಕವಿತೆ ಅರಿವನ್ನು ಜಗ್ಗುತ್ತದೆ. ಕವಿತೆಯಲ್ಲಿ ಒತ್ತು ಬೀಳುವುದು ನಾಯಕನಿಗಾಗುವ ಅನುಭವದ ಕಡೆಗೇ ಹೊರತು, ಅದರ ಬಗ್ಗೆ ತಳೆಯುವ ಧೋರಣೆಯ ಮೇಲಲ್ಲ. ಈ ಅನುಭವ ಕೊಡುವ ಒಳದೃಷ್ಟಿಯಲ್ಲಿ ಬದುಕಿನ ಕಡೆಗೇ ವಾಲುವಿಕೆ ಕಂಡುಬರುತ್ತದೆ. ಕೋಗಿಲೆಯ ಕೂಗಿನ ಲಯಕ್ಕೆ ತೂಗುತ್ತದೆ ಪ್ರಕೃತಿ. ಅದಕ್ಕೆ ಹೊಂದಿ ನಡೆಯುವುದೇ ಸಾರ್ಥಕತೆಯೆನ್ನುವುದು ಈ ಕವನದ ಒಂದು ಮುಖ್ಯವಾದ ಗ್ರಹಿಕೆಯಾಗುತ್ತದೆ. ಈ ರೀತಿಯ ವಿಚಾರ ಬೇಂದ್ರೆಯವರ ಬೇರೆ ಕೆಲವು ಕವಿತೆಗಳಲ್ಲೂ ಕಾಣುತ್ತದೆ. ಉದಾಹರಣೆಗೆ 'ಕುಣಿಯೋಣ ಬಾರs' ಕವಿತೆಯಲ್ಲಿ—

ಹಗಲಿರುಳ ತಾಳಕ್ಕ
ಮುಗಿಯದ ಕಾಳಕ್ಕ
ಜನುಮಗಳ ಮ್ಯಾಳಕ್ಕ। ಕುಣಿಯೋಣ ಬಾರs

ಎನ್ನುತ್ತಾರೆ.

ಆಧ್ಯಾತ್ಮಿಕ ಅನುಭವ ಅನಿರ್ವಚನೀಯವಾದದ್ದೆಂದು ಹೇಳುವುದುಂಟು. ಆದರೆ ಅನಿರ್ವಚನೀಯವಾದದ್ದನ್ನು ವಚನಿಸುವುದೇ ಕವಿಯ ಕಸಬಾಗುತ್ತದೆ. ಒರೆ ಬಿಡುವುದು ಚಿನ್ನವೇ ಹೊರತು, ಮನಸ್ಸಿನಲ್ಲಿತುವ ಘಟ್ಟಿಯಲ್ಲ. ಹಾಗೆಯೇ ಬೇಂದ್ರೆಯವರ ಕಾವ್ಯನಿಕಷಕ್ಕೆ ಮೂರ್ತವಾದದ್ದು ಒರೆ ಬಿಡುತ್ತದೆಯೇ ಹೊರತು ಅಮೂರ್ತವಾದದ್ದಲ್ಲ. ಅನುಭವವೂ ಐಂದ್ರಿಯಿಕವಾಗಿ ಸಹೃದಯನಿಗೆ ಸಂವಹನಿಸಬೇಕಾದ್ದರಿಂದ, ಕವಿತೆ 'ನನಗೆ ಹೀಗಾಯಿತು' ಎಂದು ಕೇವಲ ಹೇಳಿಕೆಗಳನ್ನು ಪೇರಿಸದೆ, ಅಥವಾ ಕೇವಲ ಬುದ್ಧಿಗೆ ಸರ್ಕಸ್ಸು ಮಾಡಿಸುವ ಬೆಡಗಿನ ವಚನಗಳನ್ನು ಜೋಡಿಸದೆ, ಭಾಷೆಯ ಸರ್ವಶಕ್ತಿಗಳನ್ನು ದುಡಿಸಿಕೊಂಡು ಉದ್ದೀಪನ ಕ್ರಿಯೆಯಲ್ಲಿ ತೊಡಗಬೇಕಾಗುತ್ತದೆ. ಅಂತಹ ಅವತಾರವೆಂದು 'ಜೋಗಿ'ಯನ್ನು ಕರೆಯಬಹುದು.

ಈ ಕವನ ಜಾನಪದ ಕತೆಗಳ ಮತ್ತು ಆಧ್ಯಾತ್ಮಸಂಪ್ರದಾಯದ ಅಂಶಗಳನ್ನು ಪ್ರಭಾವಶಾಲಿಯಾಗಿ ಉಪಯೋಗಿಸಿಕೊಳ್ಳುತ್ತದೆ. ಒಂದಾನೊಂದು ಊರಿನ ರಾಜಕುಮಾರನೊಬ್ಬ ಅನೇಕ ಕಷ್ಟಗಳನ್ನು ತನ್ನ ಸಾಹಸದಿಂದ ಎದುರಿಸಿ, ರಾಕ್ಷಸನೊಬ್ಬನನ್ನು ಕೊಂದು, ರಾಜಕುಮಾರಿಯನ್ನು ಋಷಿಯೊಬ್ಬನ ಸಹಾಯದಿಂದ ಬಿಡಿಸಿ ತಂದ ಕತೆಯ ಅದ್ಭುತರಮ್ಯತೆಯ ರೀತಿ ಈ ಕವನದಲ್ಲೂ ಇದೆ. ಆಧ್ಯಾತ್ಮಿಕ

ಸಂಪ್ರದಾಯದ ಪರತತ್ತ್ವದ ಹೊಳಹು ಇಲ್ಲಿ ಕೋಗಿಲೆಯ ಕೂಗಾಗಿ ಕೇಳಿಬರು-ತ್ತದೆ. ಆಧ್ಯಾತ್ಮಿಕ ಕರೆ ಒಮ್ಮೆ ಪ್ರಾರಂಭವಾದರೆ ನಿಲ್ಲುವಂಥದಲ್ಲ. ಫ್ರಾನ್ಸಿಸ್ ಥಾಮ್ಸನ್ನನ 'ದಿ ಹೌಂಡ್ ಆಫ್ ಹೆವೆನ್' ಎನ್ನುವ ಕವಿತೆಯಲ್ಲಿ ಅದರ ನಾಯಕ ಸ್ವರ್ಗದ ಬೇಟೆ ನಾಯಿಯಿಂದ ತಪ್ಪಿಸಿಕೊಳ್ಳಲು ಎಲ್ಲಿಗೆ ಓಡಿದರೂ, ಅದು ಅವನ ಬೆನ್ನುಹತ್ತಿ ಶರಣಾಗುವ ವರೆಗೂ ಬಿಡುವುದಿಲ್ಲ. ಹಾಗೆಯೇ ಅಡಿಗರ 'ಹಿಮಗಿರಿಯ ಕಂದರ'ದಲ್ಲಿ ಅಲ್ಲಿಯ ನಾಯಕನನ್ನೂ ಹಿಮಗಿರಿಯ ಕಂದರ ಒಂದೇ ಸಮನಾಗಿ ಕಾಡುತ್ತದೆ. ಅದಕ್ಕೆ ಬೇಸತ್ತ ನಾಯಕ 'ಬರುವೆನು ನಾಳೆ; ಆಗದೆ? ಮುಗಿ-ಯದೇ ನಿನ್ನ ರಗಳೆ?" ಎನ್ನುತ್ತಾನೆ. 'ಜೋಗಿ'ಯಲ್ಲಿನ ನಾಯಕ 'ಯಾಕ ಹೀಂಗ ಅಸರಂತ ಕೂಗತದ ಏನು ಇದಕೆ ಬ್ಯಾನ್ಯೋ' ಎನ್ನುತ್ತಾನೆ. ಈ ರೀತಿಯ ಬೇಸರ ಆಧ್ಯಾತ್ಮ ಕರೆಗೆ ಓಗೊಟ್ಟು ಬದುಕನ್ನು ಬಿಟ್ಟು ಹೋಗಬೇಕಾದ ನೋವಿನ ಇನ್ನೊಂದು ರೂಪವಾಗಿದೆ. ಅಲ್ಲದೆ ಗುರುವಿನ ಸ್ಥಾನದಲ್ಲಿರುವ ಜೋಗಿ ಕೂಡ ಆಧ್ಯಾತ್ಮಿಕತೆಯ ಸಂಕೇತವಾಗಿದ್ದಾನೆ.

ಈ ಒಂದು ಅನುಭವವನ್ನು ನೋಡುವಾಗ ಅದನ್ನು ಸಾಧ್ಯವಾದಷ್ಟು ಕಡೆ-ಯಿಂದ ಗಮನಿಸುವುದರಿಂದ ಈ ಕವಿತೆಗೆ ಸಮಗ್ರತೆ ಬಂದಿದೆ. ಜೋಗಿ ಪ್ರತಿನಿಧಿ-ಸುವ ವಾಸ್ತವತೆಗೂ, ಕೋಗಿಲೆ ಪ್ರತಿನಿಧಿಸುವ ವಾಸ್ತವತೆಗೂ ಇರುವ ಘರ್ಷಣೆ ಕವನದ ಸಾಮಗ್ರಿಯಾಗಿದೆ. ಇದರ ತೀರ್ಮಾನ ಈ ಎರಡು ವಾಸ್ತವತೆಗೂ ವಿರೋಧವಿಲ್ಲದಿರಬಹುದು ಎನ್ನುವುದು. ಆದರೆ ನಾಯಕನ ಅನುಭವನಿರೂಪಣೆ ಯಲ್ಲಿ ಭ್ರಮೆ, ಕಾಳಜಿ, ಅಭಿಮಾನ ಸ್ಪರ್ಧೆಯೂ ವ್ಯಕ್ತವಾಗುತ್ತದೆ. ಹಾಗೆಯೇ ಕೋಗಿಲೆಯ ಬಗ್ಗೆ ಆಸಕ್ತಿ, ಸಂಶಯ ಮತ್ತು ಬೇಸರವೂ ಸೇರಿಕೊಳ್ಳುತ್ತದೆ. ಈ ರೀತಿಯ ಸಂಕೀರ್ಣತೆಯೊಂದೇ ಅಲ್ಲದೆ, ರಚನೆಯ ವೈವಿಧ್ಯದಲ್ಲೂ ಸಂಕೀರ್ಣತೆಯಿದೆ. ಉದಾಹರಣೆಗೆ :

೧. ಅದರ ಮುಂದ ಗವಿಗುಡ್ಡ ಬರತ್ವದ ನಮ್ಮ ಬಲಕ.

೨. ಜೇನು ತುಂಬಿ ತೊಟಗುಟ್ಟತಾವ ಅದ ಬಯಸತಾವ ಕಣ್ಣು.

೩. ಕೂಗೇ ಕೂಗತದ ಕೂಗೇ ಕೂಗತದ ಗಿರಣಿ ಕರೆಯೊ ಹಾಂಗ.

೪. ಬಂತು ಸುಗ್ಗಿ ಬಂದ್ವದ ಸುಗ್ಗಿ ಬರತ್ವದ ಸುಗ್ಗಿಯೆಂದು.

೫. ಬೇರೆ ಕೆಲಸದಾಗ ಮನಸು ತೊಡಗದೊ ನಾ ನೋಡಲೇನು ಹೋಗಿ.

೬. ಅಂತ ಭ್ರಮಾ ಆಗ್ಯದ ಮನಕ ನೀ ಬಂದೆ ಜೋಗಿ ಏನೊ!

೭. ಯಾಕ ಹೀಂಗ ಅಸರಂತ ಕೂಗತದ ಏನು ಇದಕ ಬ್ಯಾನ್ಯೋ.

ಈ ಅಲ್ಲಿ ಇಲ್ಲಿ ಎತ್ತಿದ್ದ ಸಾಲುಗಳನ್ನು ನೋಡಿದಾಗ ಕೇವಲ ವಿವರಣೆ, ಬಯಕೆ, ಕರ್ತವ್ಯದ ಭಾರ, ಸಂತೋಷ ಸುದ್ದಿ ಕೊಡುವ ರೀತಿ, ವಿನಯ, ನಂಬಿಕೆ, ಬೇಸರ

ಹೀಗೆ ಅನೇಕ ಧಾಟಿಗಳನ್ನೂ ಅವು ಸೂಚಿಸುವ ಧೋರಣೆಗಳನ್ನೂ ಈ ಕವಿತೆ ಒಳ-ಗೊಳ್ಳುತ್ತದೆ. ಆದ್ದರಿಂದಲೇ ಈ ಕವಿತೆ 'ಗರಿ'ಯಲ್ಲಿ ೧೯೩೧ ರಲ್ಲಿ ಪ್ರಕಟವಾದ 'ಕೋಗಿಲೆ'ಗಿಂತ ಉತ್ತಮವಾಗಿದೆ. 'ಕೋಗಿಲೆ'ಯಲ್ಲಿ—

> ತನುವೆಂಬ ವನದಲ್ಲಿ ಮನದ ಮಾಮರದಲ್ಲಿ
> ಕೊನರೆಲೆಯಲ್ಲಿ ಕುಳಿತು ಕೋಗಿಲೇ!
> ದಿನವಿಲ್ಲ ನಿಶೆಯಿಲ್ಲ ದನಿಗೈಯುತಿರುವಿ ನೀ-
> ನಾವ ಬಸಂತನ ಕೋಗಿಲೆ"

ಎನ್ನುವಲ್ಲಿ ಮತ್ತು 'ಜೋಗಿ'ಯಲ್ಲಿ ಕೋಗಿಲೆ ವಹಿಸುವ ಪಾತ್ರ ಒಂದೇ ಆದರೂ 'ಗರಿ' ಕೋಗಿಲೆ ವಾಚ್ಯವಾಗುತ್ತದೆ. ಅಲ್ಲಿನ ರಚನೆಯಲ್ಲಿ ಅನುಪ್ರಾಸಗಳನ್ನು ಸೇರಿಸುವ ಆಸಕ್ತಿಯೇ ದೊಡ್ಡದಾಗಿ ಕಾಣುತ್ತದೆ. ಆದರೆ 'ಜೋಗಿ' ಅಂಥ ದೋಷಗಳಿಗೆ ಅಪವಾದವಾಗಿದೆ.

§ § § §

೪೧

# ಬೇಂದ್ರೆಯವರ 'ಮನದನ್ನೆ'

**ಕೆ. ಎಸ್. ನಿಸಾರ್ ಅಹಮದ್**

ಕೌಟುಂಬಿಕ ಜೀವನದ ವಿವಿಧ ಮುಖಗಳನ್ನು ತಮ್ಮ ಬೇರೆ ಬೇರೆ ಕವನ ಸಂಗ್ರಹಗಳ ಬಿಡಿ ಬಿಡಿ ಪದ್ಯಗಳಲ್ಲಿ ಬೇಂದ್ರೆಯವರು ಮನಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. 'ನಾದಲೀಲೆ'ಯ 'ಮನದನ್ನೆ' ಅದೇ ಸಂಗ್ರಹದ 'ನಾನು ಬಡವಿ', 'ಅಷ್ಟು ಪ್ರೀತಿ', 'ಪೋರಿಪೋರ'ಗಳಿಗಿಂತ ಭಿನ್ನವಾಗಿದೆ. ಈ ಪದ್ಯಗಳಲ್ಲಿ ಒಲವಿನ ಹಿರಿಮೆಯನ್ನು, ನಯವಂತಿಕೆಯನ್ನು ಕವಿ ಸಾರಿದ್ದರೆ 'ಮನದನ್ನೆ'ಯಲ್ಲಿ ಗಂಡ-ಹೆಂಡಿರ ಅಪಾರ್ಥತೆ, ವೈಮನಸ್ಯಗಳನ್ನು ಕಾಣಿಸಿ, ಭಾವಸಂಶುದ್ಧಿಯಾಗದೆ, ಹೃದಯ ಸಂವಾದಕ್ಕೆ ಪುಷ್ಟಿ ದೊರಕದೆ, ಪ್ರೇಮದ ಜಗತ್ತು ಪ್ರಕಟವಾಗದೆಂಬ ತಾತ್ತ್ವಿಕ ಧೋರಣೆಯನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸಿದ್ದಾರೆ.

ಗಂಡು ಆಚೆ ದುಡಿದು. ಭಿನ್ನ ಮನೋಭಾವದ ಜನರೊಂದಿಗೆ ವ್ಯವಹರಿಸುವಾಗ ಚರ್ಚೆ ನಡೆಸಿಯೋ, ಮಾತು ಬೆಳೆದೊ ತಲೆ ಬಿಸಿಯಾಗಿ ಎಲ್ಲವನ್ನೂ ಮರೆತು ಸ್ವಾಸ್ಥ್ಯಪಡೆಯಲು ಮನೆಗೆ ಬರುತ್ತಾನೆ. ಮನೆಯಲ್ಲೂ ಅದೇ ಪಾಡಾದರೆ? ಗಂಡಿಗೆ ಹೆಣ್ಣಿನ ನಗೆ, ಆರೈಕೆ, ಸಂತೈಕೆಗಳ ರಕ್ಷೆಯಿರದಿದ್ದರೆ ದಾಂಪತ್ಯ ಶ್ರುತಿಗೆಡುತ್ತದೆ; ಇದರಿಂದ ಉಭಯತರಿಗೂ ನರಕವೇ. ಇಂಥ ಸನ್ನಿವೇಶಗಳು ಪ್ರತಿ ಸಂಸಾರಿಯ ಬಾಳಿನಲ್ಲೂ ಸಾಮಾನ್ಯ. ಈ ಪದ್ಯದ ನಾಯಕ ಇಂಥ ಅವಸ್ಥೆಯಲ್ಲಿದ್ದು, ತನ್ನನ್ನು ಅರ್ಥಮಾಡಿಕೊಳ್ಳಲು ಮಡದಿಯನ್ನು ವಿಧವಿಧವಾಗಿ ಪ್ರೇರೇಪಿಸುವುದೇ ಇಲ್ಲಿನ ವಸ್ತು.

ಪದ್ಯದ ಹೆಸರು ಮಾರ್ಮಿಕವಾಗಿದೆ. 'ಹೆಂಡತಿ', 'ಮಡದಿ', 'ಅರ್ಧಾಂಗಿ' ಎನ್ನದೆ 'ಮನದನ್ನೆ' ಎಂದಿರುವುದು (ಮನಸ್ಸಿಗೆ ತಕ್ಕವಳು), ಇಲ್ಲಿನ ವಸ್ತುವಿನೊಂದಿಗೆ ವೈದೃಶ್ಯ ಸ್ಥಾಪಿಸಿಕೊಂಡು ಅರ್ಥಪೂರ್ಣವಾಗುತ್ತದೆ. ಇಡೀ ಪದ್ಯದಲ್ಲಿ ವಿರಸದ ಛಾಯೆ ಕವಿದಿರುವುದರಿಂದ ಪದ್ಯದ ಹೆಸರಿನ ವಿರೋಧಾಭಾಸದಿಂದ ವ್ಯಂಗ್ಯಾರ್ಥ ತನಗೆ ತಾನೇ ವ್ಯಕ್ತವಾಗುತ್ತದೆ. ಗಂಡನ ಮನಸ್ಸಿಗೆ ನೆಮ್ಮದಿಯನ್ನೂ,

ಜರ್ಜರಿತ ಜೀವನಕ್ಕೆ ಆಹ್ಲಾದ, ಅರ್ಥವನ್ನು ನೀಡಬೇಕಾದವಳು ಅವನನ್ನು, ಅವನ ಸಂದರ್ಭವನ್ನು ಅರ್ಥಮಾಡಿಕೊಳ್ಳದಿದ್ದರೆ ಅವನ ಮನಸ್ಸಿನೊಂದಿಗೆ ತನ್ನ ಮನಸ್ಸನ್ನು ಸಮಾನ ತರಂಗಾಂತರಗಳೊಂದಿಗೆ ಶ್ರುತಿಗೊಳಿಸಲಾರಳು.

ಸುತ್ತೂ ಬಳಸೂ ಇಲ್ಲದೆ ಪದ್ಯ ಶುರುವಾಗಿ ವಿಷಯಕ್ಕೇ ನೇರತೊಡಗುವುದ-ರಿಂದ ಕವಿಗೆ ತಾನು ಅಭಿವ್ಯಕ್ತಿಸಲಿರುವ ವಿಚಾರ ತುಂಬಾ ಅವಸರದ್ದೂ, ತೀವ್ರ-ವಾದದ್ದೂ ಎನ್ನುವ ಕಲ್ಪನೆ ನಮಗೆ ಸಹಜವಾಗಿಯೇ ಮೂಡುತ್ತದೆ. ಇಂಥ ನೇರ ತೊಡಗುವಿಕೆಯಿಂದ ಆತ್ಮೀಯತೆ ನಿರಾಯಾಸವಾಗಿ ಒಡಮೂಡುತ್ತದೆ. ಒಬ್ಬ ಕವಿ ತನ್ನ ಪದ್ಯದ ಕಾಳಜಿಯಲ್ಲಿ ಎಷ್ಟೆಷ್ಟು ತನ್ಮಯನಾಗಿರುತ್ತಾನೋ, ಎಷ್ಟೆಷ್ಟು ಅದನ್ನು ತನ್ನ ಪ್ರಜ್ಞೆಯಲ್ಲಿ ಹಾಯಿಸಿಕೊಂಡಿರುತ್ತಾನೋ, ಅಷ್ಟಷ್ಟು ಅವನ ಪದ್ಯ ಆಡಂಬರಗಳನ್ನು ಬಿಟ್ಟುಕೊಡುತ್ತದೆ. ವಸ್ತುಮಗ್ನತೆಯಿಂದ ಪದ್ಯಕ್ಕೆ ಒದಗುವ ಸರಳತೆ, ಋಜುತ್ವ, ಅನುಭವ ಬಡಕಲಾದವನ ಗಪದ್ಯಕ್ಕಿಂತ ಭಿನ್ನ. ಮೊದಲನೆ-ಯದರಲ್ಲಿ ನಮಗೆ ದಟ್ಟವಾದ ಅನುಭವದ ನಿರಿಗೆಗಳು ತನಗೆ ತಾವೇ ಬಿಚ್ಚಿ-ಕೊಳ್ಳುತ್ತ ಹೋಗುವಂತೆ, ಗಾಢವಾದದ್ದು, ಕೇಂದ್ರೀಕೃತವಾದದ್ದು ನಮಗೆ ದಕ್ಕಿ ದಂತೆ ಅನ್ನಿಸಿದರೆ; ವಿಶದತೆಯಿಂದಷ್ಟೇ ಅಂಥ ಅನುಭವದ ಅನೇಕ ಮಗ್ಗುಲುಗಳು ನಮ್ಮ ಎಟುಕಿಗೆ ನಿಲುಕಿದಂತೆ ಭಾಸವಾದರೆ— ಎರಡನೆಯದರಲ್ಲಿ ತೆಳುವಾದದ್ದು ತನ್ನ ಆಡಂಬರದಿಂದ, Obscurityಯಿಂದ ತನ್ನನ್ನು ಮರೆಮಾಡಿಕೊಂಡು ನಮ್ಮನ್ನೊಲಿಸಲು ಆಟ ಹೂಡಿದಂತೆ ತತ್‌ಕ್ಷಣ ಅರಿವಿಗೆ ಬರುತ್ತದೆ. ಇಂಥಲ್ಲಿ ಪದ್ಯ ಸರಳವಾಗುವುದು ತನ್ನ ವಿಶದತೆಯಿಂದಲ್ಲ, ಅಭಾವದಿಂದ. ಏನು ಹೇಳಿದರೂ ನಡೆದೀತು ಎನ್ನುವ 'ಮಾಮೂಲುತನ' ಎರಡನೆಯ ಜಾತಿಯ ಕವಿಗೆ ಸಹಜ; ಏಕೆಂ-ದರೆ ಅವನಿಗೆ ಅನುಭವದ ತೆಳುವುತನದ ಹಾಗೂ ಅದರ ಬಗೆಗಿನ ತನ್ನ (frigid) ಸಂವೇದನೆಯ ಅರಿವು ತನಗೇ ಆಗಿರುತ್ತದೆ. ಅಂಥ ಅನುಭವದ ತೋಡಿಕೆಗೆ ಎಂಥ ಮಾತಾದರೂ ಸರಿಯೇ. ಆದರೆ 'ಅನುಭವ ಮಗ್ನ' ಕವಿಗೆ ತನ್ನ ಅನುಭವಕ್ಕೆ ತಕ್ಕ ಭಾಷೆ, ಪದಗಳ ಅನ್ವೇಷಣೆ ಮುಖ್ಯವಾಗುತ್ತದೆ. ಹೇಗೆ ಹೇಳಿದರೆ ಅದು ತನ-ಗಾಗಿರುವಂಥ ಅಥವಾ ಅದಕ್ಕೆ ಆದಷ್ಟು ಸಮೀಪವರ್ತಿಯಾಗಿರುವಂಥ ಮನಃಸ್ಥಿತಿ ಯನ್ನು ಇತರರಲ್ಲಿ ಸೃಷ್ಟಿಸಬಹುದೆಂಬ ಚಿಂತನೆ ಕವಿಗೆ ಮೂಡಿದಾಗ, ಒಂದೊಂದು ಪದ್ಯದ ಸಂದರ್ಭಕ್ಕೆ ತಕ್ಕಂತೆ, ಮಾರ್ಮಿಕತೆ, ಸೂಚ್ಯತ್ವಗಳನ್ನೊಳಿಸಿಕೊಂಡೂ, ನೇರತನ ಅನಿವಾರ್ಯವಾಗುತ್ತದೆ. ಇಂಥ ನೇರತನದಿಂದಷ್ಟೇ ನಮಗೆ ಕವಿಯ Authenticityಯ ಬಗ್ಗೆ ಪಕ್ಕಾ ಸಾಕ್ಷ್ಯಗಳು ದೊರಕುವುದು.

ಪ್ರಸ್ತುತ ಪದ್ಯದ ಪರಿಣಾಮಕಾರಿತೆಗೆ ಈ ಮೇಲೆ ಹೇಳಿದ ಮಾತುಗಳೇ ಕಾರಣ. ಶುರುವಿನಲ್ಲೇ, ಹಠಾತ್ತನೆ ನಾಯಕನ ಮನಃಸ್ಥಿತಿಗೆ ಪ್ರವೇಶ ದೊರಕಿ,

ಪದ್ಯದ ಮುಖ್ಯಧಾಟಿಯ ಬಗ್ಗೆ ನಮ್ಮ ಅರಿವು ಜಾಗೃತವಾಗುತ್ತದೆ.

“ಆಡದಿರು ಮನದನ್ನೆ
ಎನಗೆ ಇದಿರಾಡದಿರು
ವಾದಕ್ಕೆ ಬೇಸತ್ತು
ಮರ್ಮಘಾತಕೆ ಸತ್ತು
ಉಳಿದು ಬಂದೆ;
‘ಎಲ್ಲಿಹುದು ತಿಳಿವಳಿಕೆ
ಜೀವನದ ಸಲುವಲಿಕೆ’
ಎಂದು ತಳಮಳಿಸಿ ನೀರಡಿಸಿ ಬಂದೆ”

ಇಲ್ಲಿ ಗಂಡನ ವಿಷಣ್ಣತೆಯೊಂದಿಗೆ ಹೆಂಡತಿಯ ಜಂಡಿತನವೂ ವ್ಯಕ್ತವಾಗುತ್ತದೆ. ‘ಸತ್ತು’ ‘ಉಳಿದು ಬಂದೆ’ ‘ನೀರಡಿಸಿ ಬಂದೆ’ ಪದಗಳು ನಾಯಕನ ಭಾವನೆಗಳ ಉತ್ಕಟಸ್ಥಿತಿಯನ್ನು ಸೂಚಿಸುತ್ತವೆ. ಇಂಥ ಸಂದರ್ಭದಲ್ಲಿ ಮಡದಿಯಿಂದ ಆತ ಬಯಸುವುದು ಹೇಳಿದ್ದಕ್ಕೆಲ್ಲ ಸಿಡಿಮಿಡಿತನ, ‘ಹೂಂಕಾರ’ವಲ್ಲ; ‘ಹೂಂ’ಗುಟ್ಟು-ವಿಕೆಯನ್ನು. ಇಡೀ ಪದ್ಯದಲ್ಲಿ ನಾಯಕನ ದೈನ್ಯ, ಆರ್ತತೆ, ಅಸಹಾಯಕತೆಗಳು ಕಣ್ಣಿಗೆ ಹೊಡೆದಷ್ಟು ಸ್ಫುಟವಾಗಿ ಚಿತ್ರಿಸಲ್ಪಟ್ಟವೆ. ಮುಂದೆ ‘ನಿನ್ನ ತಿಳಿವನು ಹಣಿಸು’ ಎಂದಾಗ, ದಾರಿಗಾಣದೆ ‘ನೀನೇ ದಿಕ್ಕು’ ಎನ್ನುವಂಥ ಶರಣಾಗತ ಭಾವವೂ, ಮಡದಿಯ ತಿಳಿವಿನಲ್ಲಿ ನಂಬಿಕೆಯೂ ಒಟ್ಟಿಗೆ ವ್ಯಕ್ತವಾಗುತ್ತವೆ. ಈ ಪದ್ಯದ ಎಂಟನೆಯ ಸಾಲಿನ ‘ನೀರಡಿಸಿ ಬಂದೆ’ಗೂ, ಇಪ್ಪತ್ತಮೂರನೆಯ ಸಾಲಿನ ‘ಹಸಿದು ಬಂದೆ’ಗೂ ಅಪ್ರಜ್ಞಾಪೂರ್ವಕ ಆದರೆ ತಾರ್ಕಿಕವಾದ ಸಂಬಂಧವೇರ್ಪಡು-ವುದನ್ನು ಗಮನಿಸಬೇಕು. ಉತ್ಕಟವಾದದ್ದನ್ನು ಕಲಾಪೂರ್ಣವಾಗಿ ಹೇಳುವಂಥ ಪರಿಸ್ಥಿತಿಯೊದಗಿದಾಗ ಅದನ್ನು ಬಗೆಗೆ ನಾಟುವಂತೆ ಹೇಳುವುದರ ಜೊತೆಗೆ ಅದನ್ನು ಒಂದು‘ಬಗೆ’ಯಲ್ಲಿ–ಪೂರ್ವಾಪರ ಪ್ರಜ್ಞೆಯೊಂದಿಗೆ–ಹೇಳಬೇಕಾಗುತ್ತದೆ. ಎಂದೇ ‘ನೀರಡಿಸಿ ಬಂದೆ’ ಎನ್ನುವುದು ‘ಹಸಿದು ಬಂದೆ’ಗೆ ಪೋಷಕವಾಗಿ, ಲೋಕಾನು-ಭವದ ದೃಷ್ಟಿಯಿಂದ ಕ್ರಮಬದ್ಧವಾಗಿ ಆಲೋಚನೆಯ Logicalityಗೆ ಹೆಚ್ಚು ಪುಷ್ಟಿ ಕೊಡುತ್ತದೆ.

ಯಾವುದೋ ಒಂದು ಸಣ್ಣ ಮಾತಿಗೆ ವಿರಸತೆ ಹುಟ್ಟುವುದಿಲ್ಲ. ಹಿಂದಿನ ಕಹಿಗಳ ಬಿಡುಗಡೆಗೆ ಅಂಥ ಉಪೇಕ್ಷಿತ ಮಾತು ಕಾಲುವೆಯಾಗುತ್ತದೆ, ಅಷ್ಟೆ. ಇಲ್ಲಿ ನಿಮಿತ್ತದ ಯಥಾರ್ಥತೆಯನ್ನಾಗಲಿ, ಕಾರ್ಯ--ಕಾರಣ ಸಂಬಂಧದ ತರ್ಕ-ವನ್ನಾಗಲಿ ಕಾಣಲಾಗದು. ಆ ನಿಮಿತ್ತದ ಮುಖೇನ ಪ್ರವಿಸುವ ವೈಷಮ್ಯದ ವಿಷದ

intensity ಮುಖ್ಯವಾಗುತ್ತದೆ. ಏಕೆ ಎಂದರೆ ಪ್ರೀತಿ ಎನ್ನುವಂಥ ಸನ್ನಿ-ವೇಶಗಳಲ್ಲಿ ಬದುಕಿನ ಸಮತೋಲವನ್ನು ಪುನಃ ಸ್ಥಾಪಿಸಲು ಉಳಿದ ಮಾರ್ಗ ಪರ-ಸ್ಪರರ ತಿಳುವಳಿಕೆ. ಕ್ಷಣ ಮಾತ್ರವಾದರೂ ತಮ್ಮ ಸದ್ಯದ ಪ್ರಕ್ಷುಬ್ಧ ಮನಸ್ಥಿತಿಯನ್ನು ಮರೆತು, ಸ್ವವಿವೇಚನೆಗೆ ಬುದ್ಧಿಯನ್ನು ತೊಡಗಿಸುವುದರಿಂದ, ತನ್ನ ಸರಿ ತಪ್ಪುಗಳ ನ್ಯಾಯನಿರ್ದೇಶನದಿಂದ ಮಾತ್ರ ಅರ್ಥ ಮಾಡಿಕೊಳ್ಳುವ ಅರಿವು ಎಚ್ಚರಗೊಳ್ಳುತ್ತದೆ. ಈ ಗೊಂದಲದ ಸ್ಥಿತಿಯಲ್ಲಿ ನಾಯಕ ತನ್ನ ಪತ್ನಿಯಿಂದ ಬೇಡು-ವುದು ಇಂಥ ಒಂದು ನಿರ್ವಿಕಾರ ಬುದ್ಧಿಯನ್ನು. ಇದು ಆಕೆಯಲ್ಲಿ ಮೂಡಿದರೆ, ಭಾವ ಭಾರಗಳ ಮಧ್ಯೆಯೂ ಅನ್ಯೋನ್ಯತೆಯ ಕಿರಣ ಸ್ಫುರಿಸಬಹುದು.

"ಜೀವ ಜೀವಾಳದಲಿ ಹೃದಯಾಂತರಾಳದಲಿ ಇಳಿದು ನೋಡು" ಎಂದು ಪ್ರಾರಂಭವಾಗುವ ಸಾಲಿನಿಂದ "ನೆಲೆಯುರದ ನೆಲವನ್ನು ಬಗೆದು ನೋಡು" ಎನ್ನುವವರೆಗೆ ಕವಿಯ ಮನಸ್ಸು ಸಾಮಾನ್ಯವಾದ ಮಾತುಗಳ ಧಾಟಿಯನ್ನು ಬಿಟ್ಟು ತಾತ್ತ್ವಿಕ ಚಿಂತನೆಯ ಗಾಂಭೀರ್ಯದ ಭಂಗಿಯನ್ನು ತಾಳುತ್ತದೆ. ಅಂಥ ಚಿಂತನೆಗೆ ಸಹಜವಾಗಿಯೇ— ಬಹುಬಳಕೆಯಾದ ಆದರೆ ಪುಸ್ತಕ ಪದ್ಯದ ಧೋರಣೆಗೆ ಸಮಂಜಸವೆನ್ನುವಂತೆ ಕಾಣುವ-ಆಕಾಶ ಹಾಗೂ ಸಾಗರದ ಚಿತ್ರಗಳು ವಿಸ್ತಾರವನ್ನು ನೀಡುತ್ತವೆ. ಇವೆರಡೂ ಕೇವಲ ಪ್ರಾಕೃತಿಕ ಸತ್ಯಗಳಾಗಿರದೆ, ಸದ್ಯದ ನಾಯಕನ ಮನಃಸ್ಥಿತಿಗೆ ತಾಳೆಯಾಗುವಂತೆ ಪ್ರಸನ್ನತೆ-ಶಾಂತಿಗಳ ಕಾತರವನ್ನೂ, ಪ್ರಕ್ಷೋಭೆ ಹಾಗೂ ಅಲ್ಲಕಲ್ಲೋಲಗಳನ್ನೂ ಸೂಚಿಸುವಂಥ ಪ್ರತಿಮೆಗಳಾಗುತ್ತವೆ. ಜೊತೆಗೆ ಆಕಾಶ ಹಾಗೂ ಕಡಲು ಅನೂಹ್ಯತೆ ಗಹನತೆಗಳಿಗೂ ಸಂಕೇತಗಳಾಗುವುದರಿಂದ ಮನಸ್ಸಿನ ಆಳಗಳ ವೈಚಿತ್ರ್ಯ, ದುರೂಹ್ಯತೆಗಳನ್ನೂ ಮನದಟ್ಟಾಗಿಸುತ್ತವೆ. ಮೇಲುನೋಟಕ್ಕೆ ಅತಿ ಸಾಮಾನ್ಯವೆಂದು ಕಾಣುವಂಥ ಈ ಗಂಡು-ಹೆಣ್ಣಿನ ವಿರಸದ ನೇಪಥ್ಯದಲ್ಲಿ ಬುದ್ಧಿಗೆಟುಕದ ಅತಿ ಜಟಿಲವಾದ ಕಾರಣ ಪರಂಪರೆಯಿದೆ ಎನ್ನಿಸುತ್ತದೆ. ಅದರ ಮೂಲ ಬಹುಶಃ ಅಡಗಿರುವುದು ಗಂಡು-ಹೆಣ್ಣಿನ ಪ್ರಾಕೃತಿಕವಾದ ವಿರುದ್ಧಗಳಲ್ಲಿ. ಇವರಿಬ್ಬರೂ ಭಿನ್ನ 'ಸ್ವಭಾವಧಾತು'ಗಳಿಂದ ಕೂಡಿದ್ದರೂ, ಬಾಳಿನಲ್ಲಿ ಒಬ್ಬರ ಹಂಗಿಲ್ಲದೆ ಮತ್ತೊಬ್ಬರು ಬದುಕಲಾರ-ರಾದ್ದರಿಂದ, ಒಂದು ಬಗೆಯ Paradoxನ ಆವರಣವನ್ನು ಸೃಷ್ಟಿಸಿಕೊಳ್ಳ-ಬೇಕಾಗುತ್ತದೆ. ಇಂಥ ಆವರಣದಲ್ಲಿ ಅನ್ಯೋನ್ಯತೆಯ ನಡುವೆಯೂ ತಪ್ಪು ಮೂಲ ಪ್ರವೃತ್ತಿಗಳು ವ್ಯಕ್ತವಾಗುವುದರಿಂದ, ಅವರ ಅರಿವಿಗೂ ಮೀರಿದ ಅಪರಿಹಾರ್ಯ-ವೆನಿಸುವಂಥ ವಿರಸ, ವಿಗಾನತೆಗಳು ಆಗಾಗ್ಗೆ ಸುಳಿಯುತ್ತವೆ. ಇಂಥವುಗಳ ಉಗಮ ಯಾವುದೋ ಒಂದು ಕ್ಷುದ್ರ ಮಾತಿನಲ್ಲಿರದೆ, ಅದು ಜೀವಜೀವಾಳಗಳಲ್ಲಿ ನೆಲೆಗೊಂಡಿರುವುದನ್ನು ಕವಿ ತಾತ್ತ್ವಿಕವಾಗಿಯೇ ಚಿಂತಿಸಿ ಅರಿಯಬೇಕಾದದ್ದರಿಂದ, ಇಲ್ಲಿ ಬರುವ ಆಕಾಶ ಮತ್ತು ಸಾಗರದ ಚಿತ್ರಗಳು ಅತ್ಯಂತ ಅರ್ಥಪೂರ್ಣವಾಗು-

ತ್ತವೆ. ಹೀಗೆ, ಸಾಮಾನ್ಯವಾದದ್ದನ್ನು ಹೇಳುತ್ತಲೇ, ಅಸಾಮಾನ್ಯತೆಯ ಕಡೆಗೆ ಚಿಂತನೆಯನ್ನು ಹರಿಯಬಿಡುವ, ನೆಲದ ವಾಸ್ತವಿಕಾನುಭವಗಳಲ್ಲಿ ದೃಷ್ಟಿ ಕೇಂದ್ರಿತವಾಗಿದ್ದರೂ ಆಕಾಶದ ಅಚಿಂತ್ಯದ ಹಂಬಲವಿರುವ ಕವಿಯ ಧಾಟಿಗೆ ತಾತ್ತ್ವಿಕತೆಯ ಬೆನ್ನೆಲುಬು ತುಂಬಾ ಸಹಜವಾಗಿಯೇ ಕೂಡಿಕೊಳ್ಳುತ್ತದೆ. ಅವನು ದಿನನಿತ್ಯದ ವ್ಯವಹಾರಗಳಿಗೆ ಕಾರಣ ಪರಂಪರೆಯನ್ನು ತಾತ್ ಕ್ಷಣಿಕ ಸಂದರ್ಭಗಳಲ್ಲಿ ಗುರುತಿಸದೆ ಜೀವನದ ಮೂಲಕ್ಕೇ ದೃಷ್ಟಿ ಹಾಯಿಸುವುದರಿಂದ ಅವನಲ್ಲಿ ಯಥಾರ್ಥತೆಗಿಂತ ಸತ್ಯವೂ, ಮೇಲಿನ ಮೆರುಗಿಗಿಂತ ಆಳಗಳ ತಳದಲ್ಲಿನ ಗಟ್ಟಿಯೂ ಮಹತ್ವ ಪಡೆ-ಯುತ್ತವೆ. ಸಾಮಾನ್ಯ ಕವಿಗೂ, ಅಸಾಮಾನ್ಯನಿಗೂ ಭೇದವಿರುವುದು ಇಲ್ಲೇ. ತನ್ನ ಸಂದರ್ಭಕ್ಕೆ ಉಡದಂತೆ ಕಚ್ಚಿಕೊಂಡು ಕಣ್ಣೆದುರಿನದನ್ನು, ಮಿನುಗಿದ್ದನ್ನು ಮಾತ್ರ ಆಕರ್ಷಕವಾಗಿ ಆತ ವ್ಯಕ್ತಪಡಿಸಬಲ್ಲ; ಅಸಾಮಾನ್ಯ ಕವಿ ತನ್ನ ಪ್ರಸ್ತುತ ಸನ್ನಿವೇಶಗಳಲ್ಲಿದ್ದರೂ ಅವನು ಕಣ್ಣಿನ ಮರೆಗಿರುವುದನ್ನು, ಆಳದಲ್ಲಿ ಅವ್ಯಕ್ತ-ವಾಗಿರುವುದನ್ನು 'ದರ್ಶಿಸಲು' ಮತ್ತು ತನ್ನ ಸದ್ಯದ ಸನ್ನಿವೇಶಗಳಿಗೆ ಅವುಗಳನ್ನು ಹೊಂದಿಸಲು ಹೆಣಗಾಡುತ್ತಾನೆ. ಅವನ ಇಂಥ ಕಾಯಕದಿಂದ ತನ್ನ ಕೃತಿಗೆ ಸಾರ್ವತ್ರಿಕತೆ ಸಹಜವಾಗಿಯೇ ಪ್ರಾಪ್ತವಾಗುತ್ತದೆ. ಬೇಂದ್ರೆಯವರ ದೃಷ್ಟಿ ಈ ತೆರದ್ದು.

ಅಸಮವಾದ ಜೀವನದಲ್ಲಿ ಮತ್ತೆ ಸಹಿತತೆ, ಸಾಂಗತ್ಯಗಳು ಕೂಡಲೆಂದು ಈ ಕವನದ ನಾಯಕ ಪರಿತಪಿಸುತ್ತಾನೆ. ತನ್ನ ಮಡದಿಗೆ-ಅವಳಿಗೆ ಅರ್ಥವಾಗುವ, ಅತಾತ್ತ್ವಿಕವಾದ ಧಾಟಿಯಲ್ಲಿ-ಈ ಪರಿತಾಪವನ್ನು ಸೂಚಿಸುತ್ತಾನೆ:

> "ನನ್ನದಿದು, ನಿನ್ನದಿದು
> ಎಂದು ಎರಡನು ಬಗೆದು
> ಪಾಲುಗಾರಿಕೆಗಾಗಿ ಹೆಣಗಬೇಡ
> ನಿನಗೆ ನೀರಿಲ್ಲೆಂದು ಒಣಗಬೇಡ."

ಕೊನೆಯ ಸಾಲಿನ ಧ್ವನ್ಯರ್ಥದ ಸಾಧ್ಯತೆ ಆಶ್ಚರ್ಯಕರವಾದದ್ದು. ವ್ಯಕ್ತಿಗಳ ಗುಣಧರ್ಮ ವಿರುದ್ಧವಾಗಿದ್ದರೂ, ದಾಂಪತ್ಯ ಎರಡು ಪ್ರತ್ಯೇಕ ಘಟಕಗಳ ಪಾರ-ಸ್ಪರ್ಯವಲ್ಲ; ಒಂದೇ ಪಾತಿಯಲ್ಲಿ ಬೆಳೆದು ಬೇರು ಹೆಣೆದುಕೊಂಡು ಒಂದಾದಂತೆ ತೋರುವ ಎರಡು ಬಳ್ಳಿಗಳಂತೆ ಸಮ'ರಸ' ಸ್ವರೂಪಿ. ಇಲ್ಲಿ ಪಾಲುಗಾರಿಕೆಗಾಗಲಿ, 'ನನಗಿಷ್ಟು, ನಿನಗಿಷ್ಟು' ಎನ್ನುವ ವ್ಯಾಪಾರೀ ಮನೋಭಾವಕ್ಕಾಗಲಿ ಆಸ್ಪದವಿಲ್ಲ. ಶ್ಲೇಷೆಯಲ್ಲೇ ಹೇಳುವುದಾದರೆ ದೇಹಕ್ಕೆ ಎರಡು ಕಣ್ಣಿದ್ದಂತೆ—ಬದುಕಿಗೆ ಹೆಣ್ಣು, ಗಂಡು; ಒಂದಕ್ಕೆ ಸಲ್ಲುವುದು, ಬೇಕಾಗುವುದು ಮತ್ತೊಂದಕ್ಕೂ ಸಲ್ಲುತ್ತದೆ, ಬೇಕಾ-

ಗುತ್ತದೆ ಎಂದೇ ಇಲ್ಲಿ ಅನ್ಯೋನ್ಯತೆ, ಅಪ್ರತ್ಯೇಕತೆಗಳು "ನಿನಗೆ ನೀರಿಲ್ಲೆಂದು ಒಣಗಬೇಡ" ಎನ್ನುವುದರಲ್ಲಿ ಯಶಸ್ವಿಯಾಗಿ ಧ್ವನಿತವಾಗುತ್ತವೆ. ಇಂಥ ಅಪ್ರತ್ಯೇಕತೆಯನ್ನು ಇನ್ನೊಂದು ಕಡೆ:

"ಒಂದುಸಿರೆ ತಾನಾಡಿದಂತೆ ಇಹುದು
ಹೀಗಿರಲು ಬಾಳುದ್ದ ಬದುಕಬಹುದು"

—ಕವಿ ಹೀಗೆ ವ್ಯಕ್ತಪಡಿಸಿದ್ದಾರೆ. ಉಸಿರಾಡುವುದು ಎರಡು ಶ್ವಾಸಕೋಶಗಳಾದರೂ ಉಸಿರೊಂದೇ ಆಗಿರುವಂತೆ ದಾಂಪತ್ಯದಲ್ಲಿ ಇಬ್ಬರಿದ್ದರೂ, ಒಂದೇ ಶ್ರುತಿಯಲ್ಲಿ ಅವರ ಮನಸ್ಸುಗಳು ತೊಡಗದಿದ್ದರೆ ಬಾಳುದ್ದ 'ಬದುಕುವುದು' ಕಷ್ಟ. ಗಂಡನ ಕ್ರಿಯೆಗಳಲ್ಲಿ ಹೆಂಡತಿ, ಆಕೆಯ ಆರ್ಗಳಲ್ಲಿ ಗಂಡ–ಕೇವಲ ಸ್ಪರ್ಧೆಯ ಸ್ವಹಿತದ ಜಾಡನ್ನೇ ಪತ್ತೆಹಚ್ಚುತ್ತ ಹೋದರೆ ಇಬ್ಬರಿಗೂ ಬದುಕು ನರಕ ಸದೃಶವಾಗುತ್ತದೆ. ಪದ್ಯದ ಕೊನೆಯಲ್ಲಿ ಬರುವ—

ಇದಿರಾಡದಿರು ಮತ್ತೆ
ಎದಿರಾಡದಿರು ಇತ್ತ
ಮಾಡದಿರು ಬಾಳನ್ನು ಬೇಳೆಯಂತೆ
ಕೂಡಿರಲಿ ಬಾಳು ಇಡಿಗಾಳಿನಂತೆ"

—ಈ ಸಾಲುಗಳಲ್ಲಿ ಪೂರ್ವೋಕ್ತ ಅಪ್ರತ್ಯೇಕತೆಯ ಒತ್ತನ್ನೇ ನಾವು ಕಂಡರೂ, ಇಲ್ಲಿ ಅದು ಜೀವನದ ಸಾಮಾನ್ಯ ಸಾದೃಶ್ಯವೊಂದರಿಂದ ಆತ್ಮೀಯವಾಗುತ್ತದೆ; ಮೂರ್ತತ್ವವನ್ನು ದಕ್ಕಿಸಿಕೊಳ್ಳುತ್ತದೆ. "ಬೇಳೆ" ಅರೆಯನ್ನೂ, ಪ್ರತ್ಯೇಕತೆಯನ್ನೂ ಸಂಕೇತಿಸುವಂತೆ " ಇಡಿಗಾಳು " ಸಂಪೂರ್ಣತೆ ಹಾಗು ಐಕ್ಯವನ್ನೂ ಧ್ವನಿಸುತ್ತದೆ. ದಂಪತಿಗಳ ಸಹಯೋಗಕ್ಕೆ ಇದಕ್ಕಿಂತ ಸಾರ್ಥಕವಾದ ಸಾದೃಶ್ಯವನ್ನು ನಾವು ನಮ್ಮ ಇತರ ಕವಿಗಳಲ್ಲಿ (ಯಾಕೆ, ಬೇಂದ್ರೆಯವರ ಬೇರೆ ಕವಿತೆಗಳಲ್ಲೇ) ಕಾಣುವುದಿಲ್ಲ.

ಒಂದು ಭಾವನೆ ಇಲ್ಲವೆ ಕ್ರಿಯೆ ನಮಗೆ ಕಾವ್ಯದಲ್ಲಾಗಲಿ, ಕಲೆಯಲ್ಲಾಗಲಿ ಸಂಭಾವ್ಯವೆನಿಸುವುದು ಅದರ ವಿವರಗಳಲ್ಲಿ ಕವಿಯ ಅಥವಾ ಕಲೆಗಾರನ ಏಕಾಗ್ರತೆ ತಲ್ಲೀನವಾಗಿ ದುಡಿದಾಗ ಮತ್ತು ಅವುಗಳ ಅರ್ಥಪೂರ್ಣತೆಗಾಗಿ ಅವನ ಚಿಂತನೆ ಅನ್ವೇಷಣೆಯಲ್ಲಿ ತೊಡಗಿದಾಗ. ಇದರಿಂದ ಸರ್ವಾಂಗ ಸಂಬಂಧವೇರ್ಪಡಲು ಒಂದು ಕಡೆ ಅನುವು ದೊರೆತರೆ, ಮತ್ತೊಂದು ಕಡೆ ಪ್ರಬಂಧ ಧ್ವನಿಯೊಂದು ಸೃಷ್ಟಿಯಾಗುವುದಕ್ಕೆ ತಕ್ಕ ಸಂದರ್ಭ ಏರ್ಪಡುತ್ತದೆ. ವಸ್ತುವಿನ ಬೆಳವಣಿಗೆಯ ದೃಷ್ಟಿಯಿಂದಲೂ ಈ ತತ್ತ್ವಕ್ಕೇ ಪ್ರಾಧಾನ್ಯ ಒದಗುತ್ತದೆ. ಈಗ ವಿಮರ್ಶಿಸುತ್ತಿರುವ ಪದ್ಯದ ಉದಾಹರಣೆಯನ್ನೇ ತೆಗೆದುಕೊಂಡರೆ ಇಲ್ಲಿ ನಾಯಕನ ಆರ್ತಸ್ಥಿತಿಯನ್ನಾಗಲಿ, ಅವನ ಮಡದಿಯ ಅಸಹಿ

ಷ್ಣುತೆಯನ್ನಾಗಲಿ ಕವಿ ಯಶಸ್ವಿಯಾಗಿ ಚಿತ್ರಿಸಿರುವುದು ಈ ಎರಡೂ ಅಂಶಗಳನ್ನು ಆದರ್ಶೀಕರಿಸದಿರುವುದರಿಂದ ಮತ್ತು ಈ ಇಬ್ಬರ ವಿರಸತೆಗೆ ಕಾರಣವಾದ ವಿವರಗಳನ್ನು ಯಥಾವತ್ತಾಗಿ ಪದ್ಯದಲ್ಲಿ ಮೂಡಿಸಿರುವುದರಿಂದ. ಹೀಗೆ, ವಿವರಗಳನ್ನು ದುಡಿಸಿಕೊಳ್ಳುವ ಕವಿಯ ಮನಸ್ಸು ಪಕ್ಷಪಾತಿಯಾಗದೆ, ಎರಡೂ ಕಡೆಯ ಸರಿ ತಪ್ಪುಗಳನ್ನು ಕಾಣಲು, ಚಿತ್ರಿಸಲು ಸಿದ್ಧವಾಗುತ್ತದೆ. ಇದರಿಂದ ವಸ್ತುವಿಗೆ ಸರ್ವಾಂಗಪೂರ್ಣತೆ ಸಾಧಿತವಾಗುತ್ತದೆ. ಕೇವಲ ನಾಯಕನ ನಿಸ್ಸಹಾಯಕತೆಯನ್ನೇ ನಮ್ಮ ಸಹಾನುಭೂತಿಗೆ ಕೇಂದ್ರಲಕ್ಷಣವಾಗಿ ಈ ಕವಿ ಮಾಡಬಹುದಿದ್ದದ್ದು ಯಾವಾಗೆಂದರೆ ಅವನ ದೃಷ್ಟಿ ಭಾವೋದ್ವೇಗದಿಂದ ಮುಸುಕಿ, ವಿವರಗಳನ್ನು ನಿರ್ಲಕ್ಷಿಸುವ ಸ್ಥಿತಿಯಲ್ಲಿದ್ದಾಗ. ಇಂಥದ್ದರಿಂದ ಪದ್ಯಕ್ಕೆ ಒಟ್ಟಾರೆ ಸಂಬಂಧವಾಗಲಿ, ಅರ್ಥವಂತಿಕೆಯಾಗಲಿ ಲಭ್ಯವಾಗುತ್ತಿರಲಿಲ್ಲ. ಅದು ಕೇವಲ ಅವನ ಪಾಕ್ಷಿಕ ಧೋರಣೆಯ ಇಕ್ಕಟ್ಟಿನಲ್ಲೇ ಬೆಳೆದು ಎಂಥದೋ 'ಅರೆ'ಯ ಭಾವನೆಯನ್ನು ನಮ್ಮಲ್ಲಿ ಮೂಡಿಸುತ್ತಿತ್ತು. ಈ ಪದ್ಯದಲ್ಲಿ ಗಂಡ, ತನ್ನ ಹೆಂಡತಿಯನ್ನು ಕಾಣುವ ರೀತಿಯಲ್ಲೇ ಅವನ ಸ್ವಭಾವ, ಸಂಸ್ಕಾರಗಳ ಪರಿಚಯವಾಗುತ್ತದೆ. ಆತ ಹಿತೋಪದೇಶಗಳ ಸಂದೇಶಗಳನ್ನೇ ಪಾಚಿಸುತ್ತ ಹೋಗಿದ್ದರೆ ಅವನ ಪ್ರಾಮಾಣಿಕತೆಯ ಬಗ್ಗೆ ಶಂಕೆಯಾಗುತ್ತಿತ್ತು; ತನ್ನ ತಪ್ಪಿನ ಅರಿವನ್ನೂ, ಶರಣಾಗತ ಭಾವವನ್ನೂ ವ್ಯಕ್ತಪಡಿಸುವುದರಿಂದ ಇಲ್ಲಿನ ಅನುಭವದ ಕಾವು-ನೋವುಗಳು ನಿಜವೆನಿಸುತ್ತವೆ. ಪದ್ಯದ ಅವಯವಗಳ ಜೈವಿಕ ಸಂಬಂಧವೂ ಗೋಚರಿಸುತ್ತದೆ. ಭಾವೋದ್ವೇಗರಹಿತ ಸ್ಥಿತಿಯಿಂದ, ಯುಕ್ತಾಯುಕ್ತತೆಯ ಅರಿವಿನಿಂದ ನಾಯಕ ಈ ಮಾತುಗಳನ್ನು ಹೇಳಲು ಸಮರ್ಥನಾಗುತ್ತಾನೆ:

"ಗಂಡು ದರ್ಪವ ಹರಿದು
ಬಿರುಸು ಬಿಂಕವ ತೊರೆದು
ತೋಳತೊಟ್ಟಿಲ ಮಗುವು ಆಗಿ ಬಂದೆ
ಗೊಂಬೆಯಾಡಿಸಿದಂತೆ ಆಡಿಸೆಂದೆ"

ಈ ಸಾಲುಗಳನ್ನು ಗಮನವಿಟ್ಟು ನೋಡಿದಾಗ ಇಲ್ಲಿನ ಶಬ್ದಚಿತ್ರಗಳಲ್ಲಿ ಅಂತರ್ಗತವಾದ ಧ್ವನಿ ಅಚ್ಚರಿಗೊಳಿಸುತ್ತದೆ. 'ದರ್ಪ' 'ಬಿರುಸುಬಿಂಕ'ಗಳನ್ನು 'ಮಗು' 'ಗೊಂಬೆ'ಗಳ ಜೊತೆ ಹೋಲಿಸಿ ನೋಡಿದಾಗ ಮೊದಲಿನೆರಡು ಪದಗಳು ಗರ್ವ, ಅಹಂಕಾರ, ಸ್ವೈರತೆಗಳಿಗೆ ಸೂಚಿಯಾದರೆ, "ಯಾರ ಹಂಗೂ ಬೇಕಾಗಿಲ್ಲ"ವೆನ್ನುವ ನಿರಂಕುಶತೆಯನ್ನು ಸಂಕೇತಿಸಿದರೆ 'ಮಗು', 'ಗೊಂಬೆ'ಗಳು ದೀನತೆ, ಪರಾಶ್ರಯ, ಶರಣತೆಯನ್ನು ವ್ಯಕ್ತಪಡಿಸುತ್ತವೆ. 'ದರ್ಪ' ಬೆಳೆದವನ ಗುಣವಾದದ್ದರಿಂದ, ತನ್ನ ಸಾಮರ್ಥ್ಯದ ಅತಿಯಾದ ಅರಿವಿನಿಂದ ಮೂಡುವ ಸ್ಥಿತಿಯಾದದ್ದರಿಂದ, ಆ

ಪ್ರವೃತ್ತಿಯವನು "ಮಗು"ವಾಗಿ "ತಾಯ್ತನದ ಸೈರಣೆಯ ವಿತರಣೆ"ಗೆ ಯಾಚಿಸಿದ್ದರೆ ಅವನ ಮರ್ಮಘಾತ, ಗರ್ವಭಂಗ ಯಾವ ತೆರದ್ದು ಎನ್ನುವುದು ನಮಗೆ ಅರಿವಾಗಿ ಅವನ ದಾರುಣಾವಸ್ಥೆಯ ಬಗ್ಗೆ ಕರುಣೆ ಮೂಡುತ್ತದೆ; ಅವನ ತೀವ್ರತೆ ಅರ್ಥಪೂರ್ಣವಾಗುತ್ತದೆ. ಅವನ ವಿವೇಕೋದಯಕ್ಕೆ ಇಲ್ಲಿ ಮೊದಲ ಪುಟ ಒದಗುತ್ತದೆ. ಹೆಂಡತಿ ಕೇವಲ ಭೋಗ್ಯವಸ್ತುವೆಂಬ ಭಾವನೆಯ 'ಗಂಡು ದರ್ಪ' ಕ್ರಮೇಣ ಮಾಗಿ, ಆಕೆಯಲ್ಲಿ ಅರೈಕೆಯ, ವಾತ್ಸಲ್ಯದ 'ತಾಯ್ತನ'ವನ್ನು ಕಾಣಬಯಸುವ ಗಂಡಿನ ಪರಿಪೂರ್ಣತೆ ಇಲ್ಲಿ ಚಿತ್ರಿತವಾಗಿದೆ. "ನಾನೆಂದರೂ ಒಂದೇ, ನೀನೆಂದರೂ ಒಂದೇ' ಎನ್ನುವ ಸಾಯುಜ್ಯ ಕಲ್ಪನೆಯ ಕಡೆ ಗಂಡನ ಮನಸ್ಸು ವಾಲಿದೆ.

'ಮನದನ್ನೆ'ಯ ತುಂಬ ವಿರಸತೆಯ ಪರಿಣಾಮದ ಚಿತ್ರಣ ನಿರಾಶೆಯನ್ನು, ಅಧೀರತೆಯನ್ನು ವ್ಯಕ್ತಗೊಳಿಸುವಂತೆ ತೋರಿದರೂ ಕೊನೆಯಲ್ಲಿ ಬರುವ ಆಶಾವಾದ, ಧೈರ್ಯ ದಟ್ಟವಾದ ಕತ್ತಲಲ್ಲಿ ಧಟಾತ್ತನೆ ಮಿಂಚಿದಂತಾಗಿ ಪದ್ಯದ ಮಡಿಕೆ ಮಗ್ಗಲುಗಳನ್ನು ಬಿಚ್ಚಿತೋರಿಸಿ ಹೊಸ ಅರ್ಥವನ್ನು ಸ್ಫುರಿಸುತ್ತದೆ :

> "ಹೊಸ ಹುಟ್ಟು ಬರುವುದಿದೆ ಇನ್ನು ಮುಂದೆ
> ಆಗೋಣ ಆ ಜಗದ ತಾಯಿತಂದೆ."

ನಾಯಕನ ಆರ್ತತೆಯ ಮೂಲಕವೇ ಹೊಸ ಆಸೆಯ ಹಾರೈಕೆ ಹೊಮ್ಮುವುದು ಈ ಪದ್ಯದ ವೈಶಿಷ್ಟ್ಯ. ಮೇಲಿನ ಸಾಲುಗಳಲ್ಲಿ ವೈಮನಸ್ಯ, ಸಂಘರ್ಷಗಳು ದಂಪತಿಗಳ ಬದುಕಿನಿಂದ ಕರಗಿ ಮುಂದಿನ ಜೀವನ ತಿಳಿಯಾಗಬಹುದೆಂಬ ಲೋಕಾಭಿರಾಮದ ಅರ್ಥದ ಜೊತೆಗೇ ಮತ್ತೊಂದು ಇಂಗಿತಾರ್ಥವೂ ಅಡಗಿದೆ. 'ಹೊಸ ಹುಟ್ಟು' ದಾಂಪತ್ಯದ ಸಾಫಲ್ಯಕ್ಕೆ ತೋರುಬೆರಳಾಗಿದೆ. ಮಗುವಿನ ಆಗಮನದಿಂದ ಈ ಎಳೆಯ ದಂಪತಿಗಳ ನಿರರ್ಥಕ ಜಗಳ ಕಳೆದು ಅವರು ಆ ಮಗುವಿನ ಲಾಲನೆ-ಪಾಲನೆಗಳಲ್ಲಿ ತೊಡಗಿ ಹೊಸ ಹೊಣೆಗಾರಿಯನ್ನು ಪಡೆಯುವುದಿದೆ. ಈ ತನಕ ಇವರು ತಾವೇ ಮುಖ್ಯ ಕೇಂದ್ರಗಳಾಗಿ ಎಲ್ಲವನ್ನೂ ತಮ್ಮ ಹಿತಾಹಿತಗಳ ಮಾನದಿಂದ ಅಳೆಯುತ್ತಿದ್ದ ದೃಷ್ಟಿ ಬದಲಾಗಿ "ಹೊಸಹುಟ್ಟ"ನಲ್ಲಿ ತಮ್ಮ ಆಸಕ್ತಿ, ವಾತ್ಸಲ್ಯ, ಸಾಫಲ್ಯಗಳನ್ನು ಗುರುತಿಸಿಕೊಳ್ಳುವುದು ಪರಿಪಕ್ವತೆಯ ಸೂಚನೆಯಾಗಿದೆ. ಬರೀ ಗಂಡು-ಹೆಂಡಿರಾಗದೆ "ತಾಯಿ-ತಂದೆ" ಗಳಾಗಬೇಕಾಗಿದೆ. ಈ ಪದದಲ್ಲಿ ಜವಾಬ್ದಾರಿಯ ಜೊತೆಗೆ ಬೇಕು-ಬೇಡಗಳನ್ನು ಮೀರಿದ ತ್ಯಾಗಮಯತೆ ಧ್ವನಿತವಾಗುತ್ತದೆ. ಇಂಥ ಹೊಸಹುಟ್ಟಿನ ಉಲ್ಲೇಖದಿಂದ ಪದ್ಯಕ್ಕೆ ಹೊಸ ತಿರುವು ಮೂಡುತ್ತದೆ.

ಸ್ವಾರ್ಥಪರವಾದ ಪ್ರಣಯದ ಹಿಳಿಗೇಡಿತನದ ಒಗರು,ಹುಳಿಗಳ ಭಾವನೆ ಮೊದಲಿ-
ನಿಂದ ಘನವಾಗಿ ಅರಿವಿಗೆ ಬಂದು ಅಂತ್ಯದಲ್ಲಿ ಸ್ವಹಿತನಿರಪೇಕ್ಷವೂ, ಕಲ್ಯಾಣ-
ಕರವೂ, ಗಂಭೀರವೂ ಆದ ಪ್ರೇಮದಲ್ಲಿ ಹಠಾತ್ತನೆ ಪರ್ಯವಸಾಯಿಯಾಗಿ
ಸಾರ್ಥಕ್ಯ ಹಾಗೂ ಪೂರ್ಣತೆಯ ಪ್ರಜ್ಞೆಯನ್ನು ಹುಟ್ಟಿಸುವ ಪವಾಡ ಈ ಪದ್ಯ
ದಲ್ಲಿ ಕಾಣುತ್ತದೆ. ಒಟ್ಟಾರೆ ಪರಿಣಾಮಕಾರಿತೆಗೆ ಈ ತಿರುವು ಸಹಾಯಕವಾಗಿದೆ.

ಜೇಂದ್ರೆಯವರ 'ಮನದನ್ನೆ' ಅವರ ಪರಿಣತ ಹಾಗು ಪರಿಪಕ್ವ ದೃಷ್ಟಿಗೆ
ಒಂದು ಒಳ್ಳೆಯ ನಿದರ್ಶನ.

§ § § §

೪೨

# ಓ ತಾಯಿ ಮಾಯಿ [1]

**ಶಂಕರ ಮೊಕಾಶಿ ಪುಣೇಕರ**

೧೯೫೬ ರಲ್ಲಿ ಪ್ರಕಟವಾದ ‘ಹೃದಯಸಮುದ್ರ’ ಸಂಗ್ರಹದಲ್ಲಿ ‘ಓ ತಾಯಿ ಮಾಯಿ’ ಯೆಂಬ ಕವನವು ಬರುತ್ತದೆ. ಶ್ರೀ ಬೇಂದ್ರೆಯವರ ಇತ್ತೀಚಿಗಿನ ಕವನಗಳಲ್ಲಿ ಇದೊಂದು ಶ್ರೇಷ್ಠವಾದ ಕವನ. ಇತ್ತಿಚಿಗಿನ ಎಂದು ಈ ಕವನಗಳನ್ನು ಕರೆಯಲಿಕ್ಕೂ ಒಂದು ಕಾರಣವುಂಟು. W. B. Yeats ಕವಿಯು ವಯಸ್ಕನಾದಂತೆ, ‘I have done with personal poetry’ ಎಂದು ತನ್ನ ಪತ್ರವೊಂದರಲ್ಲಿ ಹೇಳಿದ್ದಾನೆ. ಕನ್ನಡ ಕಾವ್ಯದ ಪುನರ್ಜನ್ಮವು ಈ ಶತಮಾನದಲ್ಲಿ ೧೯೩೫-೩೬ ರಲ್ಲಿ ಆದಾಗ ಅದರ ಲಕ್ಷಣಗಳು ೧೯ನೆಯ ಶತಮಾನದ ರೋಮ್ಯಾಂಟಿಕ್ ಸಂಪ್ರದಾಯದ ಕವನಗಳ ರೀತಿಯಲ್ಲಿ ಪರಿಸ್ಫುಟಗೊಂಡಿತು. ಬಿ. ಎಂ. ಶ್ರೀ, ಬೇಂದ್ರೆ, ಪುಟ್ಟಪ್ಪನವರ ಕೃತಿಗಳು ಹೊಸ ವೃತ್ತಗಳೊಂದಿಗೆ ಇನ್ನೊಂದು ಹೊಸಗುಣವನ್ನು ಅಂಗೀಕರಿಸಿದ್ದವು. ಅದಾವುದೆಂದರೆ ‘ವ್ಯಕ್ತಿದರ್ಶನ’; Personal expression. ಈ ಶಬ್ದವು ಪಾಶ್ಚಾತ್ಯ (ಅದರಲ್ಲಿಯೂ ಇಂಗ್ಲೀಷ) ಕಾವ್ಯ ಹಾಗೂ ವಿಮರ್ಶೆಗಳಲ್ಲಿ ಎಬ್ಬಿಸಿದಷ್ಟು ಧೂಳನ್ನು ಇನ್ನಾವ ಶಬ್ದವೂ ಎಬ್ಬಿಸಿರಲಿಕ್ಕಿಲ್ಲ. ಕೀಟ್ಸ್ ಕವಿಯ ‘Ode to a nightingale’ ಕವನವು ವ್ಯಕ್ತಿದರ್ಶನ; ಅವನ ‘To Autumn’ ಕವನವೂ ವ್ಯಕ್ತಿದರ್ಶನವೇ! ಅದೇಕೆಂದರೆ ಕಾವ್ಯದ ಮುಖ್ಯಲಕ್ಷಣವು ವ್ಯಕ್ತಿದರ್ಶನವೆಂದು ದೇವರಾಣೆ ತೊಟ್ಟ ಮೇಲೆ ಎಲ್ಲ ದೊಡ್ಡ ಕವಿಗಳ ಉತ್ತಮ ಕಾವ್ಯಕ್ಕೂ ವ್ಯಕ್ತಿದರ್ಶನವೆಂದು ಕರೆಯದೆ

---

1 ಎರಡನೆಯ ಮಹಾಯುದ್ಧದ ಅಸ್ಥಿರತೆಗೆ ಬೇಸತ್ತು Richard Aldington ಕವಿಯು ‘A wreath for San Gemignano’ ಕವನವನ್ನು ಬರೆದನು. ಇದು ಹಳೆಯ ಇಟ್ಯಾಲಿಯನ್ ಕವಿತೆಯೊಂದರ ಅನುವಾದವಾಗಿದ್ದು ಕಾಳಿದಾಸನ ಋತುಸಂಹಾರದಂತೆಯೇ ಇದೆ. ಬೇರೆ ಬೇರೆ ತಿಂಗಳುಗಳು ತರುವ ಸಾಮಾನ್ಯ ಸುಖೋಪಭೋಗಗಳು, ಜನರಿಗೆ ಸುಖಿಸಲು ಔತಣ, ತಿಂಗಳುಗಳ ಪೌನಃಪುನ್ಯದ ದರ್ಶನ, ಇವು ಈ ಹಳೆಯ ಕಾವ್ಯರಚನಾಪದ್ಧತಿಗೆ ಇರುವ ಮೂಲಸ್ಫೂರ್ತಿ.

ಇನ್ನಾವ ಉಪಾಯವೇ ಇಲ್ಲವಲ್ಲ ! — ಇಂಥ ಈ Priori ವಾದಗಳಿಗೆ Yeats ಕವಿಯು ತನ್ನ ಕೊನೆಯ ದಿನಗಳಲ್ಲಿ ಬರೆದ ಕೃತಿ–ಪತ್ರಗಳಲ್ಲಿ ಚೆನ್ನಾಗಿ ಉತ್ತರ ಕೊಟ್ಟಿದ್ದಾನೆ. ಜಗತ್ತಿನ ಹಳೆಯ ಕಾವ್ಯದಲ್ಲೆಲ್ಲ ವ್ಯಕ್ತಿ ವಿಶಿಷ್ಟತೆಗಿಂತ (Personality) ವ್ಯಕ್ತಿಸಾಮಾನ್ಯತೆ (Impersonality) ಯೇ ಹೆಚ್ಚು ಬಹುಲವಾಗಿದೆ. Homer ಇಲ್ಲವೆ Vergilರನ್ನಂತೂ ಬಿಟ್ಟು ಬಿಡೋಣ. ಸ್ಪೆನ್ಸರ್, ಮಿಲ್ಟನ್‌ರಂತಹ ಕವಿಗಳನ್ನು ಈ ವ್ಯಕ್ತಿವಿಶಿಷ್ಟತೆಯಸಂಪ್ರದಾಯದಲ್ಲಿ ಎಲ್ಲಿ ಸೇರಿಸಲಿಕ್ಕೆ ಆದೀತು ? ಅವರು ಮನುಷ್ಯಸಾಮಾನ್ಯನ (The General Man) ಸಾಮಾನ್ಯ ಭವಿತವ್ಯ, ಸ್ವಭಾವಗಳ ಬಗ್ಗೆ ಕಾವ್ಯ ರಚಿಸಿದರು. ಏಕೆಂದರೆ ಧರ್ಮದ, ಸಂಪ್ರದಾಯದ ಪ್ರಾಮುಖ್ಯತೆಯುಳ್ಳ ಯುಗದಲ್ಲಿ ಅದೇ ವ್ಯಕ್ತಿತ್ವವು ಕಣ್ತೆರೆಯುತ್ತಿದ್ದರೂ ಕೂಡ ಕವಿಗೆ ವ್ಯಕ್ತಿಸಾಮಾನ್ಯತೆಯ ದರ್ಶನವು ಶಕ್ಯವಾಗಿತ್ತು. ಕೆಲವು ದಿನಗಳ ವರೆಗೆ Romanticism, Liberalism, Revolutionary Idealism ಗಳ ಪರಿಣಾಮವಾಗಿ ವ್ಯಕ್ತಿವಿಶಿಷ್ಟತೆಗೆ ಅತೀವ ಮಹತ್ವವು ಬಂದಂತಾಗಿತ್ತು. ಈ ಬಗೆಯ ವ್ಯಕ್ತಿವಾದವು ಸಮಾಜ ಜೀವನದ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರದಿದ್ದರೂ ಕೂಡ ಬುದ್ಧಿ ಜೀವಿಗಳಾದ ಕವಿ–ವಿಮರ್ಶಕರ ಮೇಲೆ ಸಾಕಷ್ಟು ಪರಿಣಾಮ ಬೀರಿ ಲಲಿತ ಕಲೆಗಳಲ್ಲಿ ಮೂಲತತ್ವವಾಗಿ ಮರ್ಯಾದಿಸಲ್ಪಟ್ಟಿತು. ಆದರೆ ಇತ್ತೀಚೆಗಿನ ಮಹಾಯುದ್ಧಗಳ ಪರಿಣಾಮವಾಗಿಯೋ, ಫ್ರಾಯಿಡ, ಜುಂಗರಂಥ ಮನಃಶಾಸ್ತ್ರಜ್ಞರ ಪ್ರಭಾವದ ಮೂಲಕವೊ, ಮಾರ್ಕ್ಸನಂಥ ಸಮಾಜಶಾಸ್ತ್ರಜ್ಞರ ವಿಚಾರಪ್ರಘಾತಗಳ ಮೂಲಕವೋ ಮತ್ತೆ ಬುದ್ಧಿಜೀವಿಯು ವ್ಯಕ್ತಿ–ವಿಶಿಷ್ಟತೆಯ ಬಗ್ಗೆ ಸಾಶಂಕನಾಗಿದ್ದಾನೆ. ಅವನಿಗೆ ಮತ್ತೆ ವ್ಯಕ್ತಿಸಾಮಾನ್ಯತೆಯ ದರ್ಶನವು ಶಕ್ಯವಾಗ ತೊಡಗಿದೆ.

ವ್ಯಕ್ತಿವಿಶಿಷ್ಟತೆಯ ಅನುಭವವೂ, ಅದಕ್ಕೆ ಕಲಾವಿಮರ್ಶೆಯಲ್ಲಿ ಕೆಲಕಾಲ ತೋರಿದ ಗೌರವವೂ ಕಾವ್ಯದಲ್ಲಿ ಭಾವನೆಗಳ ಆಟಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ತಂದಿತು. ಇದರಿಂದ ಕಾವ್ಯದ ಉತ್ಕಟಗುಣಗಳು ಹೆಚ್ಚು ಪರಿಸ್ಫುಟಗೊಂಡವು. ಇಂಥ ಭಾವಕಾವ್ಯವು ರಮ್ಯವಾಗುವದೂ ನಿಜ. ಆದರೆ ವ್ಯಕ್ತಿವಿಶಿಷ್ಟತೆಯೊಂದನ್ನೇ ಕಾವ್ಯದ ಪ್ರಧಾನ ಲಕ್ಷಣವನ್ನಾಗಿ ಮಾಡಿ, ಅದನ್ನು ಕವಿಯ ಮೇಲಿನ ಬಂಧನವನ್ನಾಗಿ ಮಾಡಿ, ಅದರ ಹಿಂದೆ ಕುಂಟುಕಾವ್ಯ ವಿಮರ್ಶೆಯನ್ನು ಛೂ ಬಿಡುವುದು ಕವಿಯ ಸಮಗ್ರ ವ್ಯಕ್ತಿತ್ವಕ್ಕೆ ಅನ್ಯಾಯ ಮಾಡಿದಂತೆಯೇ ಸರಿ. ರೋಮ್ಯಾಂಟಿಕ್ ವಿಮರ್ಶಾಸಂಪ್ರದಾಯದ ಅನೇಕ ನ್ಯೂನಗಳಿಗೆ ಈ ದೋಷವೇ ತಾಯಿ ಈ ಪದ್ಧತಿಯು ಬೇರೆ ಬಗೆಯ ಕಾವ್ಯರೀತಿಗಳ ಬಗ್ಗೆ ಒಂದು ಬಗೆಯ ಅಸಹನೆ (Intolerance) ಯನ್ನು ಮೂಲತಃ ಉತ್ಪನ್ನಮಾಡಿತು. ತತ್ಪರಿಣಾಮವಾಗಿ ಮಾರ್ಗಕಾವ್ಯವನ್ನೆಲ್ಲ ಹಳಿಯುವದು ಬಲು ಸುಲಭವಾಗಿ ಬಿಟ್ಟಿತು.

ಎಲ್ಲ ಕವಿಗಳೂ (ಇದರಲ್ಲಿ ರೋಮ್ಯಾಂಟಿಕ್ ಕವಿಗಳೂ ಬಂದರು) ವ್ಯಕ್ತಿ-ವಿಶಿಷ್ಟತೆಯಿಂದ ವ್ಯಕ್ತಿಸಾಮಾನ್ಯತೆಯತ್ತ ಬೆಳೆಯುತ್ತಿರುತ್ತಾರೆ. ವ್ಯಕ್ತಿ-ವಿಶಿಷ್ಟತೆಯು ಅವನಿಗೆ ರಮ್ಯಕಾವ್ಯವನ್ನು ರಚಿಸಲು ಸಹಾಯ ಮಾಡಿರಬಹುದು. ಆದರೆ :Mr. Keatsತನವನ್ನು ಮರೆತು The Manತನವನ್ನು ಅನುಭವಿಸುವದು, ತನ್ನ ವ್ಯಕ್ತಿತ್ವಾನುಭವದಲ್ಲಿ ಸರ್ವಸಾಮಾನ್ಯ ಜೀವನದ ಕಷ್ಟನಷ್ಟಗಳನ್ನು. ಸಂಕೇತಗಳನ್ನು ಗುರುತಿಸುವದು, ತನ್ನ ಪಾತ್ರವನ್ನು ಆಡುತ್ತಿರುವಾಗಲೇ ಇನ್ನೊಂದು ವಿಶ್ವನಾಟಕವನ್ನು ನೋಡುತ್ತಿರುವದು. ಇವೆಲ್ಲ ಉತ್ಕಟಕವಿಯ ನೈಸರ್ಗಿಕ ವಿಕಾಸದ ಲಕ್ಷಣವಾಗಿವೆ. ಆದರೆ ನೂರು ವರ್ಷಗಳ ವರೆಗೆ ಒಂದೇ ವಿಚಾರಸರಣಿಯ ಭಾರದ ಕೆಳಗೆ ಅಧೋಮುಖನಾದ ವಿಮರ್ಶಕನು ಕವಿಯ ಈ ಬೆಳವಣಿಗೆಯ ಬಗ್ಗೆ ಒಮ್ಮೆಲೇ ಸಾಶಂಕನಾಗುವದು ಸ್ವಾಭಾವಿಕವಾಗಿದೆ. ರೊಮ್ಯಾಂಟಿಕ್ ವಿಮರ್ಶೆಯ ದುಷ್ಟ ಪ್ರಭಾವವು ಹುಟ್ಟಿಸಿದ ಏಕಮುಖವಾದ ವಿಚಾರಸರಣಿಯಿದು. ನಿಜವಾಗಿ ನೋಡಿದರೆ ಹ್ಯಾಮ್ಲೆಟ್-ಮ್ಯಾಕ್‌ಬೆಥ್-ಮೆಝುರ ಟು ಮೆಝುರ್‌ಗಳನ್ನು ಬರೆದ ಮೇಲೆ ಶೆಕ್ಸಪಿಯರನಿಗೆ ಟೆಂಪೆಸ್ಟ್ ಬರೆಯದೆ ಇನ್ನೊಂದು ಉಪಾಯವಿದ್ದಿಲ್ಲ; ಅದು ಅವನ ನೈಸರ್ಗಿಕ ಬೆಳವಣಿಗೆ. ಟೆಂಪೆಸ್ಟದಲ್ಲಿ ಹ್ಯಾಮ್ಲೆಟ್‌ದಲ್ಲಿರುವ ಮಾನವೀಯ ತಿಕ್ಕಾಟವನ್ನು ಹುಡುಕಹೋಗಿ ನಿರಾಶರಾಗುವದು ನಮ್ಮ ಹುಂಬತನ. ಬೇಂದ್ರೆಯವರ ಇತ್ತೀಚೆಗಿನ ಕವನಗಳಲ್ಲಿ ಅವರ ಮೊದಲಿನ ಕವಿತೆಯಲ್ಲಿರುವ ಎಲ್ಲ ಗುಣಗಳನ್ನು ಹುಡುಕಿ, ಕೆಲವನ್ನು ಕಾಣದೆ, ಅವರು ವೃದ್ಧರಾದರೆಂದೂ ಕಾವ್ಯದ ಮೇಲಿನ ಅವರ ಹಿಡಿತ ಸಡಿಲಾಯಿತೆಂದೂ ಹೇಳುವದಕ್ಕಿಂತ ಮೊದಲು, ನಾವು ಏನನ್ನು ಹುಡುಕ ಹೋದೆವೆಂಬುದನ್ನು ಆಲೋಚಿಸುವದು ವಿವೇಕದ ಲಕ್ಷಣ.

ಚಮತ್ಕಾರವೇನೆಂದರೆ ಕೆಲವು ಬೇಂದ್ರೇ ಪ್ರೇಮಿಗಳಲ್ಲದೆ ಕೆಲವು ನವ್ಯರೂ ಕೂಡ ಇಂಥ ಆರೋಪವನ್ನು ಮಾಡುವದನ್ನು ಕೇಳಿದ್ದೇನೆ. ಇಂಗ್ಲಂಡಿನಲ್ಲಿ ಈ ಶತಮಾನದ ತುಂಬೆಲ್ಲ ಬೇರೆ ಬೇರೆ ರೂಪಗಳಲ್ಲಿ ತಾತ್ವಿಕವಾಗಿ ವ್ಯಕ್ತಿವಿಶಿಷ್ಟತೆಯ ತತ್ವವು ಖಂಡಿಸಲ್ಪಟ್ಟು ವ್ಯಕ್ತಿಸಾಮಾನ್ಯತೆಯತ್ತ ವಿಚಾರವಂತರ ಮನಸ್ಸು ಹರಿಯತೊಡಗಿದ್ದು ಕಂಡು ಬರುತ್ತದೆ. ಇಲಿಯಟ್ಟನ 'The Suppression of personality' ತತ್ವ, ಎಝ್ರಾ ಪೌಂಡನ Classicism, Hulme ವಿಂಡ್ಹ್ಯಾಮ ಲ್ಯೂಯಿಸರ ವಿಚಾರಗಳು, Imagism, ಡಿ. ಎಚ್. ಲಾರೆನ್ಸನ Irrationalism, ಸ್ಪೆಂಡರನ, ರಾಯಕ್ಯಾಂಬೆಲನ ರಾಜಕಾರಣ, ಸಿ. ಡೇ. ಲ್ಯೂಯಿಸನಲ್ಲಿ ಹಾಗೂ ಎಡ್ವಿನ್ ಮೂರರ ಸೂಕ್ಷ್ಮ ಅರ್ಥಾಂತರನ್ಯಾಸಗಳು, ಆಡೆನನ ಮೊದಲಿನ ಮಾನಸಶಾಸ್ತ್ರ, ಇತ್ತೀಚೆಗಿನ ಅನುಭಾವ, ಐರಿಶ್ ಕವಿಗಳ ಹಾಗೂ ಚಾರ್ಲಸ್ ವಿಲಿಯಮ್ಸ್‌ರು ತೋರಿದ ಪ್ರಾಚೀನ ಅನುಭಾವ ಪದ್ಧತಿಗಳ

ಬಗ್ಗೆ ವಿಶ್ವಾಸ, .... ಒಂದೇ, ಎರಡೇ .... ಇವರಲ್ಲಿ ಅನೇಕರು ವ್ಯಕ್ತಿವಿಶಿಷ್ಟತೆಯ ಸಂಪ್ರದಾಯವನ್ನು ತಮ್ಮತಮ್ಮ ಕಾರಣಗಳಿಗಾಗಿ ಎದುರಾ ಎದುರಾ ಖಂಡಿಸಿದ್ದಾರೆ. ಆದರೆ ಇದರ ಅರ್ಥ ವ್ಯಕ್ತಿಸಾಮಾನ್ಯತೆಯು ಪುನಃ ಪ್ರಸ್ಥಾಪಿಸಲ್ಪಟ್ಟಿದೆಯೆಂದೂ, Revival of classicism ನಿಜವಾಗಿಯೂ ಪೂರ್ಣವಾಗಿದೆಯೆಂದೂ ಅರ್ಥವಲ್ಲ. ಅದು ಆಗಬೇಕು ಎಂತಲೂ ಅಲ್ಲ. ವ್ಯಕ್ತಿವಿಶಿಷ್ಟತೆಯ ಸಂಪ್ರದಾಯವು ಪೂರ್ಣ ಅಳಿಯಬೇಕು ಎಂದೂ ಅಲ್ಲ. ಆದರೆ ತೋರಿಕೆಗೆ ವಿರುದ್ಧವಾಗಿ ಕಾಣುವ ಈ ತತ್ವಗಳು ಒಂದಕ್ಕೊಂದು ಸಮ್ಮಿಳಿತವಾಗಿ ಹೆಚ್ಚು ಸಹನಗುಣವುಳ್ಳ ಇನ್ನೊಂದು ಬಗೆಯ ಪ್ರಜ್ಞೆ ಇಂದಿಲ್ಲ ನಾಳೆ ಹುಟ್ಟೀತೆಂದೂ, ಮಿಲ್ಟನ್‌ನಲ್ಲಿ Humanism ಹುಡುಕುವ, ಶೆಲ್ಲಿಯಲ್ಲಿ ಶೇಕ್ಸಪಿಯರನ ನಾಟಕೀಯತೆಯನ್ನು ಹುಡುಕುವ, ಬ್ರೌನಿಂಗ್‌ನಲ್ಲಿ ಕೀಟ್ಸನ ಸಲೀಲತೆಯನ್ನು ಹುಡುಕುವ ಅವಿವೇಕತನವು ತೊಲಗೀತೆಂದೂ ಆಶೋತ್ತರಗಳನ್ನು ಹುಟ್ಟಿಸಿದೆ. Warren and Wellekರು ಈ ಹೊಸ ಸಮನ್ವಯರೀತಿಗೆ Perspectivism ಎಂದು ಕರೆದಿದ್ದಾರೆ.

ದುರ್ದೈವದಿಂದ ಇನ್ನೂ ಆ ಸಮನ್ವಯವು ಸ್ಫುಟಗೊಂಡಿಲ್ಲ. ನಾವಿನ್ನೂ ಲೀ ಹಂಟನಿಂದ ಸುರುವಾಗಿ ಆಸ್ಕರವಾಯಿಲ್ಡ್‌ನಿಂದ ಬಲಿಷ್ಠಗೊಳಿಸಲ್ಪಟ್ಟ ಕಾವ್ಯ ನೀತಿಯನ್ನೂ ಅದರ ಘಾತಕ ಮೋಹವನ್ನು ಮೀರಲು ಸಮರ್ಥರಾಗಿಲ್ಲ. ಈ ಸಂಧಿಕಾಲದಲ್ಲಿ ನಮ್ಮಲ್ಲಿ ಅದರ ಹೆಸರಿನಲ್ಲಿ ಇದನ್ನು ಬೈಯುವ, ಇದರ ಹೆಸರಿನಲ್ಲಿ ಅದನ್ನು ಬೈಯುವ ಚಟವು ನಮ್ಮ ಬೌದ್ಧಿಕಗೊಂದಲದಿಂದ ಸ್ವಾಭಾವಿಕವಾಗಿ ಹುಟ್ಟಿ ಬಂದಿದೆ. ಅಲ್ಲದೆ ಸ್ವಪ್ರತ್ಯಯಶಾಲಿಯಾದ ಕವಿಯು ಹೇಳುವ ಮಾತನ್ನು ಕಿವುಡ ವಿಮರ್ಶಕನು ತನ್ನದೇ ಅರ್ಥದಲ್ಲಿ ಗ್ರಹಿಸಿ, ನಂತರ ತನ್ನ ಮೊದಲಿನ ದೈವ-ಗಳಿಂದ ಸ್ವತಂತ್ರನಾಗಲು ಸಮರ್ಥನಾಗದೇ ದ್ವೈಧೀಭಾವಕ್ಕೆ ಒಳಗಾಗಿ, ಕೊನೆಗೆ ಪ್ರತಿಕ್ರಿಯೆಯನ್ನು ಹುಟ್ಟಿಸಿಕೊಂಡು ಈ ಪ್ರತಿಕ್ರಿಯೆಯನ್ನೇ ಅತ್ಯಾಧುನಿಕ ವಿಚಾರ ಸರಣಿಯ ಕೊನೆಯ ಮೆಟ್ಟಿಲೆಂದು ಹೊಗಳುವದು ವಿಮರ್ಶಾಶಾಸ್ತ್ರದ ಗುಣವಾಗಿ ಈಗ ಬಹುದಿನಗಳಾದವು. ಈ ಬೌದ್ಧಿಕ ಅವಿವೇಕವನ್ನು ನಿರ್ಲಜ್ಜತನದಿಂದ ವಿಮರ್ಶಕನ ಸ್ವಾತಂತ್ರ್ಯದ ಲಕ್ಷಣವೆಂದೂ, ಹೀಗಾಗುವದು ಸಮಾಜದ Liberal Pluralism ದ ಲಕ್ಷಣವೆಂದೂ ಸ್ವಂತದ ಬೆನ್ನು ತಟ್ಟಿಕೊಂಡು, ಕಮ್ಯುನಿಸ್ಟ ರಾಷ್ಟ್ರಗಳಲ್ಲಿ ಇದು ಇಲ್ಲದಿದ್ದುದಕ್ಕೆ ಅವನ್ನು ತೆಗಳಿ ಆತ್ಮಪೌರುಷವನ್ನು ಕೊಚ್ಚುವದು ಇಂಗ್ಲೀಷ್ ವಿಮರ್ಶೆಗೆ ಇತ್ತಿತ್ತ ಹತ್ತಿದ ಕುಷ್ಠರೋಗ ಎಂದು ಹೇಳ ಬಹುದು. ಬೌದ್ಧಿಕ ಶೀತಯುದ್ಧದ ಈ ಭಾಷೆಯನ್ನು ಭಾರತದ ಹಲವಾರು ಬುದ್ಧಿ ಜೀವಿಗಳು ಅನುಕರಿಸುವದನ್ನು ನೋಡಿದರೆ ಕನಿಕರ ಬರುತ್ತದೆ. ಇದು ಗಾಳಿ ಯೊಡನೆ ಗುದ್ದಾಟವಲ್ಲ; ಸುಳ್ಳು-ಗುದ್ದಾಟದಲ್ಲಿರುವ ಶೌರ್ಯ-ಶ್ರಮಗಳೂ

ಇದರಲ್ಲಿ ಇಲ್ಲ. ಇದು ಗಾಳಿಯೊಡನೆ ಒದ್ದಾಟ; [1] ಬರಿ ನಗೆಗೀಡು. ಇಂಗ್ಲಂಡಿನಲ್ಲಿ ಇದೇ ಶತಮಾನದಲ್ಲಿ ಮಿಲ್ಟನ್ ಕವಿ ಎರಡು ಬಾರಿ ಬದುಕಿ ಮತ್ತೆ ಸತ್ತನು; ಇಲಿಯಟ್‌ನು ಡ್ರಾಯಡನ್‌ನನ್ನು ಹೊಗಳಿದುದಕ್ಕೂ ಅವನ ಜೊತೆಗೆ ಪೋಪ-ವ್ಹಾರ್ಜಿಲ್‌ರ ಪುನರುಜ್ಜೀವನವಾಗಿ ಅವರು ಮತ್ತೆ ಅಡಗಿದರಲ್ಲದೆ, ಇತ್ತಿತ್ತ ಈ ಲಾಗಾ ಒಗೆಸುವ ಚಕ್ರವು ಇಲಿಯಟ್ಟನ ಕೊರಳಿಗೇ ಬಿದ್ದಂತೆ ತೋರುತ್ತದೆ. ಇಲಿಯಟ್‌ನು 'The Suppression of Personality' (ಕಾವ್ಯವು ವ್ಯಕ್ತಿತ್ವದ ಅಭಿವ್ಯಕ್ತಿಯಲ್ಲಿ ಅವಗುಂಠನ) ಯ ಅಮೋಘ ತತ್ತ್ವವನ್ನು ಪ್ರತಿಪಾದಿಸಿದಾಗ-ಅದನ್ನು ಚೆನ್ನಾಗಿ ಅರಿಯದೆ, ಅದರ ನಾವಿನ್ಯಕ್ಕೆ ಮನಸೋತು ಹೇಗೊ ಒಪ್ಪಿಕೊಂಡು, ದಿನಕಳೆದಂತೆ ಅವನ ಇತ್ತೀಚೆಗಿನ ಕಾವ್ಯನಾಟಕಗಳಲ್ಲಿ ತಮಗೆ ಬೇಕಾದ ಗುಣಗಳು ಸಿಕ್ಕದಿದ್ದುದಕ್ಕಾಗಿ — ಅವನನ್ನು ತೆಗಳುವವರು ಅನೇಕರು ಇಂಗ್ಲಂಡಿನಲ್ಲಿ ಇದ್ದಾರೆ. ಬೇಂದ್ರೆಯವರನ್ನು ತೆಗಳುವಾಗಿನ ಭಾಷೆಯೇ ಅಲ್ಲಿಯೂ ಉಪಯೋಗಿಸಲ್ಪಡುತ್ತದೆ — ಇಲಿಯಟ್ ಮುದುಕನಾದನೆಂದು; ಈ ಪ್ರಪಂಚದಲ್ಲಿ ಅವನ ಅಭಿರುಚಿ ಕಡಿಮೆಯಾಯಿತೆಂದು; ಪಾರಲೌಕಿಕ ಅಭಿರುಚಿ ಹೆಚ್ಚಾಯಿತೆಂದು. ಆದರೆ ಹೀಗೆ ಅನ್ನುವವರು ತಾವೇ ಮೊದಲು ಯಾವುದಕ್ಕೆ ಹೂಂಗುಟ್ಟಿದರೋ ಆ ವ್ಯಕ್ತಿಸಾಮಾನ್ಯತೆಯ ತತ್ವದ ಸ್ವಾಭಾವಿಕ ಬೆಳವಣಿಗೆಯೇ ಇಲಿಯಟ್ಟನ ಇತ್ತೀಚೆಗಿನ ಕಾವ್ಯ ಎಂಬುದನ್ನು ಮರೆಯುತ್ತಾರೆ. ಇಂಥವರಿಗೆ Wasteland ಅರ್ಥವಾಗುತ್ತದೆಯೇ ಹೊರತು,

> My life is light, waiting for the death wind
> Like a feather on the back of my hand.

1 ಪ್ರಸಿದ್ಧ ನರ್ತಕಿ ಯಾಮಿನಿ ಕೃಷ್ಣಮೂರ್ತಿಯವರಿಗೆ ಮುಂಬೈಯ ಪತ್ರಿಕೋದ್ಯಮಿಯೊಬ್ಬನು, 'ಭರತನಾಟ್ಯದ ಅದೇ ಅದೇ ಮುದ್ರೆಗಳನ್ನು ಕುಣಿಯಬೇಕಾದರೆ ನಿಮ್ಮ ವ್ಯಕ್ತಿತ್ವಕ್ಕೆ Cramping ಆಗುವದಿಲ್ಲವೆ ?' ಎಂದು ಕೇಳಿದನು. ಅದಕ್ಕೆ ಅವಳು ಉತ್ತರ ಕೊಡಲಾರದಾದಾಗ— ಅದು ಕಲಾವಿದರ 'Usual reticence' ಎಂದು ಬರೆದನು. ಮೂಲತಃ ಪ್ರಶ್ನೆಯು ವ್ಯಕ್ತಿವಿಶಿಷ್ಟತೆಯಿಂದ ಉತ್ಪನ್ನವಾದದ್ದು. ಭರತನಾಟ್ಯವಾದರೋ ಇನ್ನೊಂದು ಬಗೆಯ ಕಲೆ. ಆದರೆ ಕಲಾವಿದೆ ಉತ್ತರ ಕೊಡಲಾರದಾದೊಡನೆ,— ಅದು ಕಲಾವಿದರ ಗುರುಗುಂಭವೆಂದೋ, ವಿನಯವೆಂದೋ ಹೇಳಿ, ತಮ್ಮ ತತ್ವವನ್ನು ಇಂಥ ವಿಮರ್ಶಕರು ಉಳಿಸಿಕೊಳ್ಳುತ್ತಾರೆ. ತಮ್ಮ ಮೂಲತತ್ವವೇ ಸಂಶಯಾಸ್ಪದವಾಗಿರಬಹುದೆಂಬ ವಿಚಾರವೇ ಇವರಿಗೆ ಹೊಳೆಯುವದಿಲ್ಲ. ಯಾಮಿನಿಯ ತಂದೆ 'It is better it remains a traditional art' ಎಂದು ಹೇಳಿದುದು ಸಮರ್ಪಕವಾಗಿದೆ. ಚಿತ್ರಕಲೆಯಲ್ಲಂತೂ ವ್ಯಕ್ತಿ-ವಿಶಿಷ್ಟತೆಯ ತತ್ವವು ಹುಟ್ಟಿಸಿದ ಕುರೂಪಕ್ಕೆ ಎಣೆಯೇ ಇಲ್ಲ. ಹೆಚ್ಚು ಕಡಿಮೆ ಮಾತಾಡಿದರೆ ಈ ಕೋಳಿಯೆಲ್ಲ ನನ್ನ Subconscious ದಲ್ಲಿ ಹುಟ್ಟಿದ್ದು; ನಿಮಗೆ ತಿಳಿಯದಿದ್ದದ್ದು ನಿಮ್ಮ ಬುದ್ಧಿಗೇಡಿತನ— ಎಂದು ಉತ್ತರ ಬರುತ್ತದೆ.

ಇಂಥ ಸಾಲುಗಳಲ್ಲಿಯ ಉತ್ಕಟತೆಯೂ ಅರ್ಥವಾಗುವದಿಲ್ಲ.

ಕೇವಲ ಕಿರಿಯಾಳ ಬುದ್ಧಿಯವರು ಕೊನೆವರೆಗೆ ವ್ಯಕ್ತಿವಿಶಿಷ್ಟತೆಯನ್ನು ಸವಿಯುವರು. ಅನುಭವ ಹೆಚ್ಚಾದಂತೆ ಸ್ವಕೇಂದ್ರಿತ ಮನೋವೃತ್ತಿಗಳ ಅಸತ್ಯ-ರಮ್ಯತೆಗೆ, ಮಾಯಾಜಾಲಕ್ಕೆ ಬೇಸತ್ತು ಕವಿ ತನ್ನ ಚಿರ ಆತ್ಮವಂತಿಕೆಯನ್ನು ತನ್ನದೇ ಮನಸ್ಸಿನ ಆಳದಲ್ಲಿಯೂ ತನ್ನ ಸಮಾಜ-ಸಂಸ್ಕೃತಿಗಳಲ್ಲಿಯೂ ಹುಡುಕಾಡ ತೊಡಗುತ್ತಾನೆ.

ತನ್ನ ಹರಕು ಚಿತ್ತವೃತ್ತಿಗಳ ಮೂಲಕ್ಕೆ ಕುಳಿತು ತನ್ನ ವ್ಯಕ್ತಿತ್ವಕ್ಕೆ ಸ್ಥೈರ್ಯಕೊಡುವ ಅವ್ಯೈಯಕ್ತಿಕ ( Extra-personal ) ಸಂಕೇತಗಳನ್ನು ಮುಖಾ ಮುಖಿ ಕಾಣಲು ಯತ್ನಿಸಿ, ‘ ಮಲಗಿರುವ ತಾಯಿ ಪೃಥಿವಿ ’ ಯೆಂದೋ, ರಾಜಕೀಯ ತ್ರೋಟಕಗಳಿಗೆ ಸಿಲುಕದ ಆಂತರಿಕ ಕರ್ನಾಟಕವೆಂದೋ, ಹೃದಯ ದಲ್ಲಿ ಅಡಗಿದ ಗುರುವೆಂದೊ, ಇನ್ನಾವ ರೀತಿಯಿಂದೋ ತನ್ನ ಜಾತಿಮನ-( Species-Mind )ದತ್ತ ಮುಖಹೊರಳಿಸುತ್ತಾನೆ. ಆದರೆ ವ್ಯಕ್ತಿ-ಸಾಮಾನ್ಯತ್ವದತ್ತ ಹೊರಳುವ ಈ ಗುಣವು ಕೇವಲ ವೃದ್ಧಾಪ್ಯದ ಲಕ್ಷಣವಲ್ಲ ವೆಂಬುದನ್ನೂ ನೆನಪಿಡಬೇಕು. ಸಮಾಜಕ್ಕೆ ಪ್ರಸ್ಥಾಪಿತ ಜೀವನ ಮೌಲ್ಯಗಳಿರು-ವಾಗ ಹುಟ್ಟುವ ಬಹ್ವಂಶ ಕಾವ್ಯವು ವ್ಯಕ್ತಿಸಾಮಾನ್ಯತೆಯ ರೀತಿಯದು. ಆದಮನ ಚ್ಯುತಿಯನ್ನು ತಮ್ಮ ತಮ್ಮ ಜೀವನದಲ್ಲಿ ಪ್ರತಿಬಿಂಬಿಸಿದುದನ್ನು ಕಾಣುವದು, ಶ್ರೀರಾಮಚಂದ್ರನ ವಿರಹವನ್ನು ತಮ್ಮ ವಿರಹದಲ್ಲಿ ಸವಿಯುವದು, ದೇವರಿಗೂ ದುಃಖ ತಪ್ಪಲಿಲ್ಲವೆಂದು ಸಮಾಧಾನ ಪಡೆಯುವದು, ಇವೆಲ್ಲ ಆ ಹಳೆಯ ಸಮಾಜದ ಅನುಭವ ಪದ್ಧತಿ. ಇಂತಹ ಪರಿಸ್ಥಿತಿಯಲ್ಲಿ ಮರ್ಯಾದಾಪುರುಷರ ಜೀವನವನ್ನು ಮೇಲಿಂದಮೇಲೆ ನೆನೆದು, ಅವರ ಜೀವನದಲ್ಲಿ-ಸಾಮಾನ್ಯ ಜೀವನದ ದರ್ಶನವನ್ನು ಪಡೆಯುವದು, ರಸವಂತಿಕೆಯ ಲಕ್ಷಣವಾಗಿತ್ತು. ಈ ಗುಣವನ್ನು ನಾವು ಇತ್ತೀಚೆಗೆ ಕಳೆದುಕೊಂಡಿದ್ದೇವೆ. ಐಸೆನ್-ಹಾವರ ಹಂದಿ ಸಾಕುವದು, ನೆಹರೂಗೆ ನೆಗಡಿಯಾಗುವದು, ಚರ್ಚಿಲ್ ಚಿರೂಟ ಸೇದುವದು, ಇವು ಅವರವರ ವ್ಯಕ್ತಿತ್ವದ ಲಕ್ಷಣಗಳಾಗಿ ಇಂದಿಗೆ ಕುಳಿತಿವೆ.

ಅದರಂತೆ ಜೀವನದ ಪೌನಃಪುನ್ಯದ ದರ್ಶನವೂ ವ್ಯಕ್ತಿಸಾಮಾನ್ಯತೆಯ ಇನ್ನೊಂದು ರೀತಿ. ಪ್ರತಿಯೊಬ್ಬನ ವ್ಯಕ್ತಿತ್ವದಲ್ಲಿ ಕೆಲವು ಸಂಗತಿಗಳು ವಿಶಿಷ್ಟ ವಾಗಿದ್ದರೂ ಒಟ್ಟಂದದ ಜೀವನದಲ್ಲಿ ಬಾಲ್ಯ-ಯೌವನ-ವೃದ್ಧಾಪ್ಯಗಳ ಚಕ್ರವು (Cycle) ಕಂಡು ಬರುತ್ತದೆ. ಪುತ್ರಜನ್ಮದ ಬಗ್ಗೆ ಸಂತಸ, ಬಾಲ್ಯದ ಬಗ್ಗೆ ಅಂತಃ-ಕರಣ, ಯೌವನದ ಬಗ್ಗೆ ಉತ್ಸಾಹ, ವೃದ್ಧಾಪ್ಯದ ಬಗ್ಗೆ ಗೌರವ ಈ ಅನುಭವ ಗಳನ್ನು ಜನಮನದ ಸಂಸ್ಕಾರವಾಗಿ ಪುನಃ ಪುನಃ ಉಚ್ಚರಿಸುವದು, ಆಶ್ವಿನ

ಮುಗಿಯುವಾಗ ಕಾರ್ತೀಕಕ್ಕೆ ಕಾಯುವದು, ವಸಂತ ಬಂದೊಡನೆ ಪ್ರಥಮ ಕೋಗಿಲೆಯ ಕುಕಿಲನ್ನು ಕೇಳಲು ಹಾತೊರೆಯುವದು, ಇವೆಲ್ಲ ಸೌಮ್ಯ ಜೀವನದಲ್ಲಿ ಉತ್ಪನ್ನವಾಗುವ ಸಾತ್ವಿಕ ಅನುಕಂಪಗಳು. ವಸಂತಮಾಸ ಬಂದೊಡನೆ ದಂಪತಿಗಳು ಕಾಮೋತ್ಸುಕರಾಗುವದು, ಗರ್ಭಿಣಿಯ ಗರ್ಭ ಬೆಳೆದಂತೆ ತಿವಳಿಗಳು ಅಳಿಯುವದು, ರಾಮನವಮಿಯಲ್ಲಿ ಕೋಸಂಬರಿ-ಪಾನಕವನ್ನು ಬಯಸುವದು, ಇಂಥ ಸಂಸ್ಕಾರಗಮ್ಯ ಸಾಮಾನ್ಯ ಸೌಂದರ್ಯಸ್ಥಾನಗಳಲ್ಲಿ ರೋಮ್ಯಾಂಟಿಕನು ಆಸಕ್ತಿ ವಹಿಸಲಾರನು. ಜೀವನದ ಒಟ್ಟನ ಉಕ್ಕಂದಗಳಲ್ಲಿ ವ್ಯಕ್ತಿತ್ವ ತನ್ನನ್ನು ತಾನು ಮರೆತು ಭಾಗವಹಿಸುವ 'ಹಗಲಿರುಳಿನ ತೆರೆಮರೆ-ತೆರೆದಾಟದ ಸಮತೂಕ'ದ ಸೌಮ್ಯ ರಸೋತ್ಕಟತೆಗೆ ರೋಮ್ಯಾಂಟಿಕನೂ ಅವನ ಗಡಸುಧನಿಯ ಚಿಕ್ಕಪ್ಪನಾದ ನವ್ಯನೂ ತಮ್ಮ ವ್ಯಕ್ತಿತ್ವಪ್ರಧಾನತೆಯ ಮೂಲಕ ತತ್ವಶಃ ಎರವಾಗಿರುತ್ತಾರೆ. ಸುವ್ಯವಸ್ಥಿತ ಜೀವನಪದ್ಧತಿ, ಸಾತ್ವಿಕ ಅಸಂದಿಗ್ಧ ಸಂಸ್ಕೃತಿ, ಸಂಸ್ಥೆ-ರೀತಿಗಳು ಸಮಾಜದಲ್ಲಿ ಇದ್ದಾಗ ವ್ಯಕ್ತಿಯ ಉದ್ದಾಮತನ ( Radicalism ) ನೈಸರ್ಗಿಕ ವಾಗಿ ಕಡಿಮೆಯಾಗಿ ಸಾಮಾನ್ಯತೆಯ ಅನುಭವವು ಸುಲಭವಾಗುತ್ತದೆ. ಜೀವನ ದಲ್ಲಿಯ Cyclic pattern ಗಳನ್ನು ಶೋಧಿಸುವ ಕಡೆಗೆ ಹೆಚ್ಚು ಲಕ್ಷ್ಯ ಹೋಗುತ್ತದೆ. ಇಂಥ ಸಮಯದಲ್ಲಿ ವ್ಯಕ್ತಿತ್ವವು ಹತ್ತಿಕ್ಕಲ್ಪಟ್ಟಿರುವದಿಲ್ಲ. ಆದರೆ ವ್ಯಕ್ತಿ ಊಲಕೋಚಿತನ ಮಾಡಿದರೆ 'ಧಿಕ್‌ಕೃತಂ ಬಟುಚಾಪಲಂ,'— ಹುಡುಗಬುದ್ಧಿಯೆಂದು ಸಹಿಸಲ್ಪಡುತ್ತದೆ; ಮರೆಯಲ್ಪಡುತ್ತದೆ. ಇಂದಿನ Pluralist Individualism ದಿನಗಳಲ್ಲಿಯಂತೆ ತಲೆತಿರುಕತನಕ್ಕೇ ( Eccentricity ) ಜನಗೌರವದ ಪಟ್ಟ ದೊರಕುವದಿಲ್ಲ.

ಪ್ರಾಚೀನ ಕಾವ್ಯದಲ್ಲಿ ಬರುವ ಋತುವರ್ಣನೆಗಳು ಈ ಬಗೆಯ ವಿಪುಲ ಸಮಾಧಾನ ಜೀನನದ Generalised Patterns of Experience. ಇಂಗ್ಲೀಷ ಭಾಷೆಯಲ್ಲಿ ಮಿಲ್ಟನ್‌ನ L' Allegro ಹಾಗೂ Il Pensoloso ಗಳಲ್ಲಿ ಕೊನೆಯ ಬಾರಿ ಇಂಥ ಸಾಮಾನ್ಯತೆ ವ್ಯಕ್ತವಾಯಿತು. ( Thomson ನ The Seasons ದಲ್ಲಿ ಆಗಲೆ ಬೇರೆ ವಾತಾವರಣವಿದೆ. ) ಇನ್ನು ಕುಕವಿಗಳಲ್ಲಿ ಈ ಜಾತಿಯ ಅನುಭವವು ಮಾಯವಾಗಿ ಯಾಂತ್ರಿಕ ಅನುಕರಣಶೀಲತೆಯು ಉತ್ಪನ್ನವಾದದ್ದು ನಿಜ. ಆದರೆ ಯಾವ ಕಾವ್ಯರೀತಿಯಲ್ಲಿಯೇ ಆಗಲಿ ಕುಕವಿ ಗಳಿದ್ದೇ ಇರುವರು. ಅದರಿಂದ ಮೂಲ ಅನುಭವವು ಸುಳ್ಳೆಂದು ಅನ್ನುವದು ಸರಿಯಲ್ಲ. ರೋಮ್ಯಾಂಟಿಕ ರೀತಿಯಲ್ಲೂ, ನವ್ಯರೀತಿಯಲ್ಲೂ ಕುಕವಿಗಳು ಆಗಿಲ್ಲವೆ ? —ಅದಕ್ಕೆಂದು ಸುಕವಿಗಳನ್ನು ಮರೆತುಬಿಟ್ಟು ಆಯಾ ಅನುಭವವನ್ನೇ ತೆಗಳೋಣವೆ ? ಪ್ರಾಚೀನ ಕಾವ್ಯಪದ್ಧತಿಯಲ್ಲಿ ವ್ಯಕ್ತವಾದ ವ್ಯಕ್ತ್ಯತೀತ ಸಾಮಾನ್ಯತಾದರ್ಶನವು ಕಾವ್ಯಾನುಭವವೇ ಅಲ್ಲವೆಂದು ನಾವು ಈಗ ಹೇಳಿದರೆ

ನಮ್ಮ ದೃಷ್ಟಿಯನ್ನು ನಾವೇ ಸಂಕುಚಿತ ಮಾಡಿಕೊಂಡಂತೆ; ಎದುರು ಅನ್ನವಿದ್ದೂ ಅರೆಹೊಟ್ಟೆ ಉಣ್ಣುವ, ಇದ್ದು ದಾರಿದ್ರ್ಯವನ್ನು ಕಟ್ಟಿಕೊಂಡಂತೆ; ನಮ್ಮ ಬೆಳವಣಿಗೆಗೆ ನಾವೇ ಕಲ್ಲು ಹಾಕಿಕೊಂಡಂತೆ. ಹೀಗೆ ನಮಗೆ ತೋರಲಿಕ್ಕೆ ಕಾರಣವೇನಂದರೆ ರೋಮ್ಯಾಂಟಿಕ್ ವಿಮರ್ಶಾಪದ್ಧತಿಯು ವ್ಯಕ್ತಿವಿಶಿಷ್ಟತೆಗೆ ಕೊಟ್ಟ ಅವಾಸ್ತವ ಮಹತ್ವದ ಪಡಿನೆರಳಿನಿಂದ ನಾವಿನ್ನೂ ಹೊರಗೆ ಬರಲು ಅಸಮರ್ಥರಾಗಿದ್ದ ಮೂಲಕ. ಪೂರ್ವರೀತಿಗಳ ವಿರುದ್ಧ ಬಂಡಾಯ ಹೂಡಿ ಹುಟ್ಟಿದ ರೋಮ್ಯಾಂಟಿಸಿಝಂ ನಮ್ಮಲ್ಲಿ ಬಿತ್ತಿದ ತೀವ್ರ ಅಸಹನೆ (Intolerance). ಇಂದು ನಾವು Anti-Romanticರೆಂದು ಸಾರಿಕೊಂಡರೂ Classicistರೆಂದುಕೊಂಡರೂ, ಹೋಗಿಲ್ಲ. ವ್ಯಕ್ತಿತ್ವದ ಅಭಿವ್ಯಕ್ತಿಯನ್ನೇ ಕಾವ್ಯದ ಮೂಲ ಲಕ್ಷಣವನ್ನು ಮಾಡಿದ ಮೇಲೆ ಇತರ ಕಾವ್ಯಾನುಭವಗಳ ಬಗ್ಗೆ ಅಸಹನೆ ಸ್ವಾಭಾವಿಕವಾಗಿ ಹುಟ್ಟುತ್ತದೆ. ದುರ್ದೈವದಿಂದ ನಾವು ಭಾರತೀಯರಾದರೂ, ನಮ್ಮ ರೋಮಾಂಟಿಸಿಝಂ ಬಂಡಾಯರೂಪವಾಗಿ ಬರಲಿಲ್ಲವಾದರೂ, ಪರಪ್ರತ್ಯಯನೇಯವಾದ ನಮ್ಮ ಶಿಕ್ಷಣದ ಮೂಲಕ ಈ ಅಸಹನೆಯನ್ನು ಕಳೆದುಕೊಳ್ಳಲು ಅಸಮರ್ಥರಾಗಿದ್ದೇವೆ.

ಉದಾಹರಣೆ ಬೇಕೇ? —ನಾವೆಲ್ಲರೂ ಉದಾಹರಣೆಗಳೇ. ಪಾಶ್ಚಾತ್ಯ ಶಿಕ್ಷಣ ಪಡೆದ ಎಲ್ಲರೂ— ಇನ್ನೊಂದು ನವರಸಿಕತೆಯನ್ನು ಪಡೆಯಲು ಪ್ರಯತ್ನಪಡದೆ ಹೋದರೆ ನಮ್ಮ ಪ್ರಾಚೀನ ಕಾವ್ಯವನ್ನು ಎಲ್ಲವನ್ನೂ ನಮ್ಮ ಕಾವ್ಯಾನುಭವಸಂಗ್ರಹಕ್ಕೆ ಜೋಡಿಸಲು ಅಸಮರ್ಥರಾಗುವ ಘೋರ ಬೆಲೆಯನ್ನು ತೆರಬೇಕಾಗುವದು. ಇಂಥ ಆತ್ಮಘಾತಕತನವು (Self-alienation) ಇಂದಿನ ತರುಣ ಪೀಳಿಗೆಯಲ್ಲಿ ಆಳವಾಗಿ ಬೇರೂರಿದೆ. ಕವಿವರ ಗೋಪಾಲಕೃಷ್ಣ ಅಡಿಗರು ತಮ್ಮ ಭಾಷಣವೊಂದರಲ್ಲಿ ಹೀಗೆ ಹೇಳಿದುದು ಬಲು ಕ್ರಾಂತಿಕಾರಕ ಮಾತೇನೂ ಅಲ್ಲ.[1] "The classics of old like the works of Pampa or Naranappa could make their appeal inspite of their poetry, as they tell a powerful story like that of the Mahabharata, or one having a religious or a sectarian significance ... Therefore it is only with the dawn of this century, especially during the twenties and the thirties, that poetry in Kannada began to break new ground. The accent shifted from the

---

1 All India Writers Conference, Bombay 1963 P. 37-8.

story to the expression of one's feelings. This is certainly a move in the right directon to make poetry a true testament of the inner life." ಪಂಪ—ನಾರಣಪ್ಪರನ್ನು ಹೆಸರೆತ್ತಿ ಕುಕವಿಗಳೆಂದು ಹೇಳಿದುದು ಈ ಅವತರಣಿಕೆಯಲ್ಲಿ ವಿಕ್ಷಿಪ್ತವಾಗಿ ತೋರಬಹುದು. ಆದರೆ ಕ್ಲಾಸಿನಲ್ಲಿ ಅಧ್ಯಾಪಕರು ಹಿಂದಿನ ಕಾವ್ಯ ರಾಜಮಹಾರಾಜರ ಕೈಗೊಂಬೆಯಾಗಿತ್ತೆಂದೂ, ಇಂದಿನ ಕಾವ್ಯ ಜನಸಾಮಾನ್ಯರ ಆಶೆ-ಆಕಾಂಕ್ಷೆಗಳನ್ನು ವ್ಯಕ್ತಪಡಿಸುತ್ತದೆಂದೂ ನಾರ್ಸ್ಲೋಕಿನಿಂದ ಹೇಳುವ ಮಾತನ್ನೇ ಅಡಿಗರು ಹೆಚ್ಚು ಪ್ರಾಮಾಣಿಕವಾಗಿ ಹೇಳಿದ್ದಾರೆ ಇಷ್ಟೇ. ಆದರೆ ಯಾವ ರೋಗವು ಪಂಪ — ನಾರಣಪ್ಪರನ್ನೂ ಕುಕವಿಗಳೆಂದಾಗಿ ಪ್ರಾಮಾಣಿಕವಾಗಿ ತೋರುವಂತೆ ಮಾಡಿದೆಯೋ ಆ ರೋಗವನ್ನು ನಾವು ಕಳೆದುಕೊಳ್ಳಬಹು-ದಾದರೆ ಮತ್ತೆ ಪ್ರಾಮಾಣಿಕವಾಗಿಯೇ ಪಂಪ—ನಾರಣಪ್ಪರನ್ನು ಸವಿಯುವ ಸಾಮರ್ಥ್ಯ ನಮ್ಮಲ್ಲಿ ಬರದೆ ಇರಲಾರದು. ಆ ರೋಗವೇ ವ್ಯಕ್ತಿವಿಶಿಷ್ಟತೆಯ Exclusionist tyranny. ಇದು Deficiency Disease. ವ್ಯಕ್ತಿ-ವಿಶಿಷ್ಟತೆಯನ್ನು ಸವಿಯಲು ನಾವು ಪಡೆದ ಸಾಮರ್ಥ್ಯವನ್ನು ಕಳೆದುಕೊಳ್ಳದೆ ವ್ಯಕ್ತಿ ಸಾಮಾನ್ಯತೆಯ ಅನುಭವವನ್ನೂ ಪಡೆಯಲು ಕಲಿಯಬಹುದಾದರೆ ಈ ಬಗೆಯ ಆತ್ಮವಿಭಜನೆಯಿಂದ ಪಾರಾಗಿ ಹೊಳೆಯ ನೀರು ಹೊಳೆಗೆ ಕೂಡಲು ಶಕ್ಯವಾಗಬಹುದು. ಇಲ್ಲವಾದರೆ ಅಡಿಗರ ವಾಕ್ಯದಲ್ಲಿ ಸೂಚಿತವಾಗುವಂತೆ ಕನ್ನಡದಲ್ಲಿ ಕಾವ್ಯವೇ ಇರಲಿಲ್ಲವೆಂದೂ ಅದು ಇದೇ ಶತಮಾನದಲ್ಲಿ ಇಂಗ್ಲೀಷ ರೋಮ್ಯಾಂಟಿಕರ Illegitimate Child ಆಗಿ ಕನ್ನಡದಲ್ಲಿ ಹುಟ್ಟಿತೆಂದೂ ಒಪ್ಪಬೇಕಾಗುವದು. ಒಪ್ಪಿದರೂ ಅಡ್ಡಿಯಿಲ್ಲ. ಆದರೆ ಹೊಸತಾಗಿ ನಾವು ಒಪ್ಪಿಕೊಂಡ ತಂದೆಗೆ loyalty ಹೆಚ್ಚು ತೋರಿಸಬೇಕಾಗಿ ನಮ್ಮ ಕಾವ್ಯದ ಸ್ವತಂತ್ರತೆಯನ್ನು ಕಳೆದುಕೊಳ್ಳಬೇಕಾಗುವದು. ಕನ್ನಡ ಭಾಷೆ ಸಾವಿರಾರು ವರ್ಷ ಪಡೆದ ಸಂಸ್ಕಾರಗಳ ಅಮೌಲ್ಯ ಸಂಗ್ರಹದ ಲಾಭವು ನಮಗೆ ದೊರಕದೆ ಹೋದೀತು. ಅಲ್ಲದೆ ಈ ಎರಡೂ ಬಗೆಯ ಅನುಭವಗಳನ್ನು ಒಂದುಗೂಡಿಸುವದು ಕೈಯಳತೆಯಲ್ಲಿಯೇ ಇದ್ದಾಗ ನಾವೇ ಒಂದೇ ಬಗೆಯ ರಸಜ್ಞತೆಯನ್ನು ಸ್ವೀಕರಿಸಿ ಇನ್ನೊಂದು ರಸಜ್ಞತೆಯನ್ನು ತ್ಯಜಿಸುವ ವೈಪರೀತ್ಯಕ್ಕೆ ಒಳಗಾದಂತಾಗುವದು. ಕೊನೆಯದಾಗಿ, ನವ್ಯ ಕವಿಗಳಾದ ಅಡಿಗರು; ರೋಮ್ಯಾಂಟಿಕ ಕಾವ್ಯದಿಂದ ಸ್ವತಂತ್ರರಾಗಲು ಯತ್ನಿಸಿದವರು; ರೋಮ್ಯಾಂಟಿಕ್ ವಿಮರ್ಶೆಯಿಂದ ಸ್ವತಂತ್ರವಾಗಲು ಯತ್ನಿಸಲಿಲ್ಲವೆಂಬ ಅತಿ ಕಟುವಾದ ಆರೋಪಕ್ಕೆ ಗುರಿಯಾಗುವರು.

ಯಾರ ಕಾವ್ಯರಚನೆಯ ಮೇಲೆ ರೋಮ್ಯಾಂಟಿಕ್ ವಿಮರ್ಶಾಸರಣಿ ಹುಟ್ಟಿತೆಂದು ತಿಳಿಯಲಾಗುತ್ತದೆಯೋ ಅಂಥ ರೋಮ್ಯಾಂಟಿಕ್ ಕವಿಗಳು ಕೂಡ ಎಲ್ಲ

ಸಮಯದಲ್ಲಿ ವ್ಯಕ್ತಿವಿಶಿಷ್ಟತೆಯ ಕಾವ್ಯವನ್ನು ರಚಿಸಲಿಲ್ಲ. ಅವರೆಲ್ಲರ ಗತಿ ಸಾಮಾನ್ಯತೆಯತ್ತ ಹರಿದಿತ್ತು. ತಮ್ಮ ತಮ್ಮ ಭಾವನಾತ್ಮಕ ರೀತಿಯಲ್ಲಿ ಶೆಲ್ಲಿ The Triumph of Life ದಲ್ಲಿಯಂತೆ, ಕೀಟ್ಸ್ Hyperion ದಲ್ಲಿಯಂತೆ ಜೀವನದ ಸಾಮಾನ್ಯ ಚಕ್ರಾರಪಂಕ್ತಿಯನ್ನು ಕಾಣುವತ್ತ ಯತ್ನಿಸುತ್ತಿದ್ದರು. ಬಾಯರನ್ ನೊಬ್ಬನೇ ಹಾಗೆ ಸಂಪೂರ್ಣ ವ್ಯಕ್ತಿವಿಶಿಷ್ಟತೆಯ ಕವಿ. ಅಂತೆಯೇ ಅವನ ತ್ವೇಷ— ಬಂಡಾಯಗಳಲ್ಲಿ ಯಾವುದೋ ಒಂದು ಕೊರತೆ ತೋರುತ್ತದೆ. ಇದು ರೋಮ್ಯಾಂಟಿಕರದೇ ಇರುವಾಗ ಪ್ರತಿರೋಮ್ಯಾಂಟಿಕರಾದ ನವ್ಯರು ರೋಮ್ಯಾಂ- ಟಿಕ್ ವಿಮರ್ಶೆಯ ಭಾಷೆಯನ್ನೇ ಇನ್ನೂ ಬಳಸುವದು ವಿಷಾದಕರ.

ಇದೇ ಕಾರಣಕ್ಕಾಗಿಯೇ ಅನೇಕ ಇಂಗ್ಲೀಷ ಪ್ರಜ್ಞರಿಗೆ ಅನಿಸಿದಂತೆ ಬೇಂದ್ರೆ ಯವರ ಇತ್ತೀಚಿಗಿನ ಕಾವ್ಯವು ಅಡಿಗರಿಗೂ ನಿರ್ಬಲವಾದಂತೆ ಕಂಡರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಅಡಿಗರು ಇದನ್ನು ತಾತ್ವಿಕವಾಗಿ ಸಿದ್ಧಮಾಡಹೋಗಿ ಹಿಂಸೆಪಟ್ಟುಕೊಂಡಿದ್ದಾರೆ. ಮೊದಲು ಬೇಂದ್ರೆಯವರಿಗೆ "Easily the greatest poet of the age" ಎಂದು ಹೇಳಿ, ಅವರ ಭಾಷಾಪ್ರಜ್ಞೆ ಯನ್ನು ಹೊಗಳಿ ನಂತರ ಅವರ 'ಅಯಶಸ್ಸಿ'ನ ಕಾರಣ ಕೊಡುವದು ಹೀಗೆ: "He did much to evolve a Kannada capable of presenting his individual vision. but could not beat out a language rich and flexible enough to bear the various nuances of thought and feeling that arise in a modern consciousness. **Therefore** he **had to** go in for a dialect of Kannada, adopt old folk metres and modes and thus delimit the range and depth of his poetry to simple age-old sentiments which the folk-dialect could bear" ಮೊದಲಿನ ವಾಕ್ಯದಲ್ಲಿ ಬರುವ ವಿರೋಧಾ ಭಾಸಗಳನ್ನು ಬಿಟ್ಟುಕೊಟ್ಟರೂ, Therefore ಎಂದು ಹೇಳಿ ಕಾರ್ಯಕಾರಣ ಸಂಬಂಧವನ್ನು ಕವಿಯ ಮೇಲೆ ಆರೋಪಿಸುವದು ಇನ್ನೊಬ್ಬ ಕವಿಯ ನಿರಂಕುಶ- ತ್ವದ ಲಕ್ಷಣ. (ನಾವು ದಪ್ಪಕ್ಷರದಲ್ಲಿ ಕೊಟ್ಟ ಶಬ್ದಗಳನ್ನು ಅನುಲಕ್ಷಿಸಿರಿ) ಅಲ್ಲದೇ ಕನ್ನಡ ಜಾನಪದ ಕಾವ್ಯಕ್ಕೆ simple age-old sentiments ಗಳ ವಾಹಕವೆಂದು ಕರೆಯುವಾಗ ಅಡಿಗರ ಮನಸ್ಸಿನಲ್ಲಿ ಸ್ಕಾಟ್ಲಂಡದ Border Ballads ಹಾಗೂ ಅವುಗಳ ಬಗ್ಗೆ ಬರೆಯಲ್ಪಟ್ಟ ರೋಮ್ಯಾಂಟಿಕ್ ವಿಮರ್ಶೆ- ಇವುಗಳ ಪ್ರಭಾವವು ಹೆಚ್ಚು ಇದ್ದಿತೆಂದು ಸಂಶಯ ಬರುತ್ತದೆ. ಇದರರ್ಥ ಕನ್ನಡ ಜಾನಪದ ಕಾವ್ಯದಲ್ಲಿ ನವ್ಯರಿಗೆ ಬೇಕಾಗುವ nuances ಇವೆಯೆಂದು ಅರ್ಥವಲ್ಲ.

ಆದರೆ ಜಾನಪದ ರೀತಿಗಳು ಬೇಂದ್ರೆಯವರಲ್ಲಿ ಹುಟ್ಟಿದ nuances ಗಳನ್ನು delimit ಮಾಡಿದವೆಂದು ಹೇಳುವ ತಾತ್ವಿಕ ( a priori )ವಾದವು ಸದೋಷವಾಗಿದೆಯನ್ನುವದನ್ನು ತಿಳಿಯಲು ಅಡಿಗರ ಮೇಲಿನ ಎರಡು ಅವತರಣಿಕೆಗಳೇ ಸಾಕು. ಪಂಪ-ನಾರಣಪ್ಪರವರನ್ನು ಪ್ರಾಮಾಣಿಕವಾಗಿ ಕುಕವಿಗಳೆಂದು ಹೇಳಿದಾಗ ಯಾವ ರೋಗವು ಸ್ಫುಟಗೊಂಡಿತ್ತೋ, ಅದೇ ರೋಗವು ಬೇಂದ್ರೆಯವರ ಬಗ್ಗೆ ಆಡಿದ ಪ್ರಾಮಾಣಿಕ ಅಭಿಪ್ರಾಯದಲ್ಲಿಯೂ ಸ್ಫುಟಗೊಂಡಿದೆಯೆಂಬುದಕ್ಕೆ ದೂರದ ಆಧಾರ ಬೇಕಿಲ್ಲ.

ಬೇಂದ್ರೆಯವರ ಸುದೈವವೇನೆಂದರೆ (ಅದು ಕನ್ನಡದ ಸುದೈವವೂ ಹೌದು) ಅವರು ತಮ್ಮ ಇತ್ತೀಚೆಗಿನ ಕಾವ್ಯದಲ್ಲಿ ಅರವಿಂದತತ್ವಜ್ಞಾನದ ಮುಖಾಂತರ ವ್ಯಕ್ತಿಸಾಮಾನ್ಯತೆಯ ಅನುಭವದತ್ತ ಹಬ್ಬುಗೆಗೊಂಡಿದ್ದಾರೆ. ಕದಾಚಿತ್ ಅವರು ಫ್ರಾಯಿಡನ, ಜುಂಗನ, ಮಾರ್ಕ್ಸನ ಮುಖಾಂತರ ಈ ದರ್ಶನದತ್ತ ಹೊರಳಿದ್ದರೆ ಇಷ್ಟೊಂದು ಸೌಮ್ಯವಾದ, ಆಳವಾದ, ಸಹಿಷ್ಣುವಾದ, ಏತದ್ದೇಶೀಯವಾದ ಕಾವ್ಯವನ್ನು ಬರೆಯುವದು ಶಕ್ಯವಾಗುತ್ತಿರಲಿಲ್ಲವೆಂಬುದು ಸ್ಪಷ್ಟ. ಫ್ರಾಯಿಡನ ಮುಖಾಂತರ ಹೀಗೆ ಹಬ್ಬಲು ಹೋದ ಆಡೆನ್ ನಂಥವರು, ಮಾರ್ಕ್ಸನ ಮುಖಾಂತರ ಹಬ್ಬಲು ಹೋದ ಸಿ. ಡೇ. ಲ್ಯೂಯಿಸನಂತಹರು ಇಂಗ್ಲೀಷದಲ್ಲಿಯೇ ಪೂರ್ಣ ಯಶಸ್ವಿಯಾಗದೇ ಬೇರೆ ಕಾವ್ಯರೀತಿಗಳತ್ತ ಹೊರಳಿದರು. ಅರವಿಂದ ತತ್ತ್ವಜ್ಞಾನವು ಬುದ್ಧಿ-ಭಾವನೆಗಳೆರಡನ್ನೂ ಒಳಗೊಂಡಿದ್ದಲ್ಲದೇ ಕವಿಗೆ ಬೇಕಾಗುವ world-view, a sense of destiny ಇವುಗಳನ್ನು ಆಧುನಿಕ ಪ್ರಜ್ಞೆಯ ಅರಿವಿನಲ್ಲಿಯೇ ಹುಟ್ಟಿಸುತ್ತದೆ.[1] ಇನ್ನೊಂದು ಬಗೆಯ ಶಾಂತ ಉತ್ಕಟತೆಯನ್ನು, ಉದಾತ್ತತೆಯನ್ನು ಪಡೆದಿವೆ. ' ಗರಿ ', ' ನಾದಲೀಲೆ 'ಗಳಲ್ಲಿ ಬರುವ ಉದ್ವಿಗ್ನತೆ, ಉತ್ಕಟತೆಗಳು ತೋರಿಸುವ ಕಲಕು-ಮುಲಕು ಇಲ್ಲಿಲ್ಲ. ಆದರೆ ಈ ಆರ್ಷ ಉತ್ಕಟತೆಯನ್ನು ಪಡೆಯಲು ನಮ್ಮ ಇನ್ನೊಂದು ರಸೇಂದ್ರಿಯವು ಜಾಗೃತವಾಗಬೇಕು. ' A song for Simeon', ' Ash-Wednesday ' ಗಳಲ್ಲಿ ಇಲಿಯಟ್‌ನು ತೋರಿದ ಉತ್ಕಟತೆಯ ರೀತಿಯಿದು. ಉದಾಹರಣೆಗೆ ' ಹೃದಯ ಸಮುದ್ರ ' ಸಂಗ್ರಹದಲ್ಲಿ ಪ್ರಕಟವಾದ ' ಪ್ರಾರ್ಥನೆ 'ಯೆಂಬ ಕವನದ ಶಾಂತಸಹಿಷ್ಣುಉತ್ಕಟತೆಯು ಕವನರೂಪಕ್ಕೆ ಇಳಿಯದೆ ಗದ್ಯರೂಪದಲ್ಲಿಯೇ ಪಾರದರ್ಶಕವಾಗಿ ಹಳಕುಗೊಂಡಿದೆ. ಕಾವ್ಯವೇ ಕಾವ್ಯಕ್ಕೆ ಸೋತಂತಿದೆ ಅದರ ನಿಲುವು.

---

1 ಉದಾಹರಣೆಗೆ ಶ್ರೀ ಅರವಿಂದರ ' The Cycle of Ages ' ಗ್ರಂಥವು ಇತಿಹಾಸದ ಪುನರವಲೋಕನವಾಗಿದ್ದರೂ ಸಾಮೂಹಿಕ-ಪ್ರಜ್ಞೆಯ ಭೂತಭವಿಷ್ಯತ್ತಿನ ಬಗ್ಗೆ ಅಧಿಕಾರಯುತವಾಗಿ ಹೇಳುತ್ತದೆ.

ಆಗಬೇಕಾದ ಕಾರ್ಯ ಅನಂತವಾಗಿದೆ;
ಅದನ್ನು ಮಾಡಲು ಬಂದ ಜೀವಗಳೂ ಅನಂತವಾಗಿವೆ;
ನಾನೊಬ್ಬನೇ ಅಲ್ಲ, ನನ್ನ ಜೀವಮಾನದೊಳಗಾಗಿಯೇ ಎಲ್ಲವೂ ಆಗಬೇಕಾಗಿಲ್ಲ.

ಇಂಥ ಭರತವಾಕ್ಯವನ್ನು ಗದ್ಯರೂಪವಾಗಿ ಉಚ್ಚರಿಸಿ ಹೃದಯದ ತಳಮಳವನ್ನೂ, ಬೌದ್ಧಿಕಸಮಾಧಾನದ ಆಜ್ಞಾಶಕ್ತಿಯನ್ನೂ ಸಮಾಂತರವಾಗಿ ಮಿಥಃಕರ್ಷಕವಾಗಿ ಹರಿಯಬಿಡುವದು ಬೇಂದ್ರೆಯವರ ಭಾವವಿಸ್ತಾರದ ಲಕ್ಷಣವಲ್ಲದೆ ನಿರ್ಬಲತೆಯ ಲಕ್ಷಣವಾಗಲಾರದು.

ಇನ್ನು ಬೇಂದ್ರೆ ಪ್ರೇಮಿಗಳಾಗಿದ್ದರೂ ಕೆಲವು ಬುದ್ಧಿಜೀವಿಗಳು ಅವರ ಇತ್ತೀಚಿಗಿನ ಕವನಗಳ ಬಗ್ಗೆ ಇನ್ನೊಂದು ಬಗೆಯ ಆಕ್ಷೇಪವನ್ನು ಎತ್ತುತ್ತಾರೆ. ಅರವಿಂದರ ತತ್ವಜ್ಞಾನದ ಅಭ್ಯಾಸದಿಂದ ಬೇಂದ್ರೆಯವರಲ್ಲಿ ಭವಿತವ್ಯದ ಬಗ್ಗೆ ಒಂದು ಬಗೆಯ ನಿಶ್ಚಯಾತ್ಮಕ ( Determinist ) ಆಶಾವಾದವು ಬಂದದ್ದು ನಿಜ. ಅದಕ್ಕಾಗಿ ಅವರ ಇತ್ತೀಚಿಗಿನ ಅನೇಕ ಕವನಗಳು ಜೀವನದ ವಿಷಮತೆಯನ್ನು ಚಿತ್ರಿಸಿದರೂ ಕೂಡ ಮುಗಿತಾಯದಲ್ಲಿ, " ಇದೇನೇ ಆಗಿರಲಿ. ಅಂತೂ ಒಟ್ಟಿನಮೇಲೆ ಒಳಿತೇ ಆಗುವದು; ಕಾಯುವ ಶಕ್ತಿಗಳು ಕಾಯ್ದೇ ಕಾಯುವವು " ಎಂಬ ಧ್ವನಿಯಲ್ಲಿ ಕೊನೆಗಾಣುತ್ತವೆ. ಈ ನಿಶ್ಚಯಾತ್ಮಕತೆಯ ಮೂಲಕ ಬೇಂದ್ರೆಯವರಲ್ಲಿ ಮೊದಲಿಗಿದ್ದ ತಿಕ್ಕಾಟ, ಸಂಕಟ, ಉದ್ವಿಗ್ನತೆಗಳು ಕಡಿಮೆಯಾಗಿ, ಅದರಿಂದ ಕಾವ್ಯಗುಣ ಕಡಿಮೆಯಾದಂತೆ ಭಾಸವಾಗುತ್ತದೆಯೆಂದು ಇವರ ಅಭಿಪ್ರಾಯ. ದುರ್ದೈವದಿಂದ ಬೇಂದ್ರೆಯವರೇ ತಮ್ಮ ಇತ್ತೀಚಿಗಿನ ಕೆಲವು ಸಂಗ್ರಹಗಳಲ್ಲಿ ತಾವು ಬಹು ಹಿಂದೆ ಬರೆದ ಕವನಗಳನ್ನೂ, ಇತ್ತೀಚಿಗೆ ಬರೆದ ಕವನಗಳನ್ನೂ ಮುನ್ಸೂಚನೆಯಿಲ್ಲದೇ ಒಟ್ಟುಗೂಡಿಸಿ ಅಭ್ಯಾಸಿಯ ಕೆಲಸವನ್ನು ಹೆಚ್ಚು ಕಠಿಣಗೊಳಿದ್ದಾರೆ. ಎಲ್ಲ ಕವನಗಳ ರಚನೆಯ ಸಾಧಾರಣ ಕಾಲವನ್ನು ನಿರ್ಣಯಿಸುವದು ಬೇಂದ್ರೆಯವರ ಸಮೀಪವರ್ತಿಗಳು ಮಾಡಬೇಕಾದ ದೊಡ್ಡ ಕಾರ್ಯ. ಇದನ್ನು ಒತ್ತಟ್ಟಿಗಿಡೋಣ. ಇನ್ನೊಂದು ಮಹತ್ವದ ವಿಷಯವೇನೆಂದರೆ ಪಾಶ್ಚಾತ್ಯರ ಹಲವಾರು ವಿಮರ್ಶಾಭಾಸಗಳಿಂದ ಭಾರತೀಯ ವಿಮರ್ಶಕನು ಮುಕ್ತನಾಗಬೇಕು. ಇಷ್ಟದೇವತೆಯ, ಪರಮಾತ್ಮನ, ತಾಯಿಯ, ತಾಯ್ನಾಡಿನ ಹೆಸರನ್ನು ತೆಗೆದುಕೊಂಡೊಡನೆ ಕವಿಯ ಭೂಮಿಜೀವನ ಮರೆಯಾಯಿತೆಂದೂ, ಅದರಿಂದ ಕಾವ್ಯಕ್ಕೆ ಬಾಧೆ ಬಂದಿತೆಂದೂ ತಿಳಿಯುವದು ಇಂಥ ಆಭಾಸಗಳಲ್ಲಿ ಒಂದಾಗಿದೆ. ಇದೇ ಕಾರಣಕ್ಕಾಗಿ ವ್ಹಿಕ್ಟೋರಿಯನ್ ವಿಮರ್ಶೆಯಲ್ಲಿ ಮಿಲ್ಟನ್ ಕವಿಯನ್ನು ಹೊಗಳುವ ವಿಮರ್ಶಕರು ' ಪ್ಯಾರಡಾಯಿಜ್ ಲಾಸ್ಟ್ ' ಕಾವ್ಯದಲ್ಲಿ ಮಿಲ್ಟನ್‌ನ ಕಾವ್ಯಪ್ರತಿಭೆ ಕೇವಲ ಎರಡು, ನಾಲ್ಕು, ಹಾಗು ಹತ್ತು ಈ ಅಧ್ಯಾಯಗಳಲ್ಲಿ ವ್ಯಕ್ತವಾಗಿದೆಯೆಂದೂ, ಉಳಿದುದೆಲ್ಲ ವ್ಯರ್ಥವೆಂದೂ ತಿಳಿಯುತ್ತಿದ್ದರು. ಇದ್ದಕ್ಕೆ ಕಾರಣ, ಎರಡನೆಯ ಅಧ್ಯಾಯದಲ್ಲಿ ತಮ್ಮ ಪಾರ್ಲಿಮೆಂಟಿನಂತಹದೇ ಒಂದು ಪಾರ್ಲಿ-

ಮೆಂಟ್ ರಾಕ್ಷಸಭವನದಲ್ಲಿ ಜರಗುತ್ತದೆ; ನಾಲ್ಕನೆಯ ಅಧ್ಯಾಯದಲ್ಲಿ ತಮ್ಮಂತಹ ಗೃಹ್ಯಜೀವನವನ್ನು ಮಾನವರಾದ ಆ್ಯಡಂ-ಈವ್ಹರು ನಡೆಸುತ್ತಾರೆ; ಹತ್ತರಲ್ಲಿ ಭಾವನೆಗಳ ಆಟವಾದ ಪತನದ ಚಿತ್ರಣವು ಬರುತ್ತದೆ. ಇತರ ಅಧ್ಯಾಯಗಳಲ್ಲಿ ದೇವದಾನವರ ತಿಕ್ಕಾಟವು ಈ ವಿಮರ್ಶಕರಿಗೆ ಕಾವ್ಯವೆಂದೇ ತೋರಲಿಲ್ಲ, ಇದು ಪಾಶ್ಚಾತ್ಯರಾಷ್ಟ್ರಗಳಲ್ಲಿ ರಿನೆಝಾನ್ಸದಿಂದ ಹಿಡಿದು ಬಲಿಯುತ್ತ ಬಂದ Humanismದ ಪ್ರತಿಕ್ರಿಯೆಯ ಅತಿರೇಕದ ಲಕ್ಷಣ. ಭಾರತೀಯ ವಿಮರ್ಶಕ-ನಲ್ಲಿ ಈ Humanist fallacyಯ ಪುಕ್ಕತನವಿರುವ ಆವಶ್ಯಕತೆಯಿಲ್ಲ.

ಈ ಎರಡು ಎಚ್ಚರಗಳನ್ನು ವಹಿಸಿದ ಮೇಲೆ ನಾವು ಮೇಲಿನ ಆಕ್ಷೇಪವನ್ನು ವಿಚಾರಿಸಬಹುದು. 'ಓ ತಾಯಿ-ಮಾಯಿ' ಯೆಂಬ ಕವನದ ಅಭ್ಯಾಸವು ಈ ಚರ್ಚೆಗೆ ಒಳ್ಳೆಯ ಉದಾಹರಣೆ ಆಗಬಲ್ಲದು. 'ಓ ತಾಯಿ-ಮಾಯಿ' ಕವನವು ಅರವಿಂದ-ಭಕ್ತಿಯ ಸೆಲೆಯಿಂದಲೇ ಹುಟ್ಟಿ ಬಂದ ಕವನವೆಂದು ಹೇಳಿದರೆ ಯಾರೂ ಸಂಶಯಪಡಲಾರರು. ಜೊತೆಗೆ ಈ ಕವನವು ಮೇಲೆ ಹೇಳಿದ ನಿಶ್ಚಯಾತ್ಮಕ ಆಶಾವಾದದಲ್ಲಿಯೇ ಕೊನೆಗೊಳ್ಳುತ್ತದೆ :

ನಿನ ಕಾಲ ನೂತು ಬರುವಾಗ ಬಾರೊ ನನಗೊಂದು ಹಾದ್ಯೊ ಮಗನ<br>
ನನ ಬಣ್ಣ ನಿನ್ನ ಕಣ್ ಮ್ಯಾಲೆ ಎರಚಿ ಕಟ್ಟೇನೊ ಎಲ್ಲ ಹಾದಿ<br>
ನಿನ ಕಿವಿಗೆ ನನ್ನ ಸಿವಿದನೀ ಕಟ್ಟಿಬಿಟ್ಟೇನೊ ಎಲ್ಲಿ ಹೋದೀ ! [1]

ಕವಿ ತನ್ನ ವ್ರಾತ್ಯತನಕ್ಕೆ ತಾನೇ ಗಾಬರಿಗೊಂಡು ತಾಯಿ ಮಾಯೆಯನ್ನು ಅಂಗ-ಲಾಚಿ ಕರೆದಾಗ ಮಾಯೆಕೊಡುವ ಅಭಯವಿದು : 'ಮಗೂ ನಿನ್ನ ಬಂಡಾಯ ಎಷ್ಟಕ್ಕೆ ಬಂದೀತು ? ನಿನ್ನ ಬಂಡಾಯಕ್ಕೆ ಬಂಡುಗಾರಳಾಗಿ ಬಂದವಳೂ ನಾನೆ; ನಿನ್ನಲ್ಲಿ ಅದರ ಬಗ್ಗೆ ಭಯಹುಟ್ಟಿಸಿದವಳೂ ನಾನೆ. ನನ್ನನ್ನು ನೆನೆಯಲಿಕ್ಕೆ ಹಚ್ಚಿ-ದವಳೂ ನಾನೆ.' ಆಹಾ ! ಮಾಯೆ ಕೊಡುವ ಸಮಾಧಾನಕ್ಕಿಂತ ರೌದ್ರವಾದ ಸಮಾಧಾನವುಂಟೆ ? ಅದಕ್ಕಿಂತ ಶಮುದಾಯಿಯಾದ ವಚನವುಂಟೆ ? ಕವಿ, ತನ್ನ ಭಯವನ್ನು ತೋಡಿಕೊಳ್ಳುವಾಗ ಮಾಯೆಗೆ 'ಶಿವಜಾಯೆ'ಯೆಂದು ಕರೆದಿದ್ದಾನೆ. ನಮ್ಮೊಡನೆ ಆಟವಾಡಿ, ನಮಗೆ ಇಚ್ಛೆ ಬಂದಾಗ ಮಂಗಾಟವಾಡಲು ಕೊಟ್ಟು,

---

[1] ಡಾ. ಅಡಿಗರು ಮೊದಲು ಉದ್ಧರಿಸಿದ ಲೇಖನದಲ್ಲಿ ಬೇಂದ್ರೆಯವರ ದೇಸಿ ಸರಳ-ಪುರಾತನ ಭಾವನೆಗಳ ಅಭಿವ್ಯಕ್ತಿಗಾಗಿ ಸರಿಹೋಯಿತೆಂದೂ ಆಧುನಿಕ ಭಾವನೆಗಳ nuances ಗಳನ್ನು ವ್ಯಕ್ತಗೊಳಿಸಲು ಹದವಾಗಿರಲಿಲ್ಲವೆಂದೂ— ಆರೋಪಿಸಿದ್ದಾರೆ. 'ಓ ತಾಯಿ ಮಾಯಿ'ಯ ದೇಸಿ 'ಕಲ್ಪವೃಕ್ಷ ವೃಂದಾವನಂಗಳಲಿ' ಕವನದ ಸೂಕ್ಷ್ಮವೇದಿತ್ವಕ್ಕೆ ಸಮಾನವಾಗಿ ಸೂಕ್ಷ್ಮವಾಗಿದೆ. ಇನ್ನು ಇದಕ್ಕೂ ಹೆಚ್ಚಿನ ಸೂಕ್ಷ್ಮತೆಯ ಅನುಭವವು ನಮ್ಮ ಕವಿಗಳಲ್ಲಿ ಇದೆಯಾಗಿದ್ದರೆ ತುಂಬ ಸಂತೋಷ !

ನಮ್ಮ ಗಣಿವು–ದುಃಖ–ಭಯಗಳಿಂದಲೇ ನಮ್ಮನ್ನು ಕಾಡಿ ಬಲಿಗೆಳೆದಂತೆ ಮಾಡಿ ಗೂಡಿಗೆ ಕಾಣಿಸುವವಳು ಈ ಮಾಯೆ. ಇವಳ ಲೀಲೆಗೆ ಭಯಪಟ್ಟು ಕವಿ ಅಂಗ–ಲಾಚುತ್ತಾನೆ.

“ ಓ ತಾಯಿ, ಮಾಯಿ, ಶಿವಜಾಯಿ, ಕಾಯಿನನ ! ಯಾಕ ತೆರೆವೆ ಬಾಯಿ?
ಯಾ ಹಾದಿಲಿಂದ ನಾ ಹೋದರೇನು ಆಗ್ತೇನ ಅಲ್ಲೆ ನಾಯಿ.
ಪ್ರತಿ ರೋಮಕೂಪದಾಗ ಕಾಮ ತುಂಬಿ ತುಳಕ್ಯಾಡತ್ತದ ಇಲ್ಲಿ.
ನೀ ಜಪ್ಪಿಸಿರಲು ನಿನ ತಪ್ಪಿಸ್ಯಾರೆ ನಾ ಹೋಗಬಲ್ಲೆನೆಲ್ಲಿ ? ”

ನನ್ನ ಮಿತ್ರ ಪ್ರೊ. ಮಿಣಜಗಿಯವರು ಸುಂದರವಾಗಿ ಹೇಳಿದಂತೆ ಮೂಲತಃ ಬೇಂದ್ರೆಯವರದು ಕಾಮಪ್ರಕೃತಿ. ಆದರೆ ಮನೋವೇಗಗಳನ್ನು ಎದುರಿಸುವ ಪಣವೂ ಅವರ ಬೌದ್ಧಿಕ ಜೀವನದ ಇನ್ನೊಂದು ಸ್ವಭಾವ. ಅಂತೆಯೇ ಈ ಎರಡು ಶಕ್ತಿಗಳ ತಿಕ್ಕಾಟದಿಂದ ‘ ಏಳು ಕನ್ನಿಕೆಯರು ’ದಂಥ ಪ್ರಾತ್ಯಸುಂದರ ಕವನವು ಹುಟ್ಟು–ವದು ಅವರ ಮೊದಲಿನ ಕಾವ್ಯಜೀವನದಲ್ಲಿ ಸಾಧ್ಯವಾಯಿತು. ಶ್ರೀ ಅರವಿಂದರ ತತ್ತ್ವಜ್ಞಾನದಿಂದ ಈ ತಿಕ್ಕಾಟ ಮಾಯವಾಯಿತೇ ? ಇಲ್ಲ. ಆದರೆ ಆ ಪ್ರಕೃತಿಗೆ ದೇವತ್ವದ ಪಟ್ಟಗಟ್ಟುವದು ಅವರ ಪ್ರತಿಭೆಯ ಸ್ವಾಭಾವಿಕ ಪರಿಪಾಕವೆಂಬುದಕ್ಕೆ ‘ ಓ ತಾಯಿ–ಮಾಯಿ ’ ಕವನವು ಸಾಕ್ಷಿ. ‘ ಬಂತು ಪೂರ್ವದಲಿ ದೇವಕಾಮವೇ ಕಾಮದೇವನಾಗಿ ’ ಕಾಮದೇವನನ್ನು ದೇವಕಾಮನನ್ನಾಗಿ ಪುನಃ ಮಾಡುವದು, ಕವಿಯ ಪ್ರತಿಭೆಗೆ ಸಿಲುಕದ ಯತ್ನವಲ್ಲ. ಆದರೆ ಭೂಮಿಜೀವಿಯಾದ ಕವಿ ಭೂಮಿ ಜೀವನದ ಉಮ್ಮಳಿಕೆ–ಭಯ–ಸಂಕಟಗಳನ್ನು ಜೊತೆಗಿಟ್ಟುಕೊಂಡೇ ಶಿವಜಾಯಿ ಮಾಯೆಗೆ ಎದುರಾಗುತ್ತಾನೆ. ಅದಕ್ಕೆ ಅವಳು ಕೊಡುವ ಉತ್ತರವಾದರೂ ಎಂಥದು ?

ಹಾಂಗಲ್ಲೊ ಮಗನ ನೀ ಭೋಗ ಬೇಡಿದಲ್ಲಲ್ಲು ಬಾಗಿಲಾಗಿ
ತೆರಿತಾವ ಹಾದಿ, ಅದಕಂತ ಕಾದಿ, ನಿನ ಮನಸೆ ಕನಸು ಆಗಿ.

ಇದೇ ಮಾಯೆಯ ‘ ಕಾರಣಂ ಬಂಧ ಮೋಕ್ಷಯೋಃ ’ ಬಲೆ ! – ನಮ್ಮ ಇಚ್ಛೆಯೇ ನಮ್ಮ ಜಗತ್ತಾಗಿ ನಮ್ಮತ್ತ ಬಂದು ಅಣಕಿಸುತ್ತದೆ. ಈ ಸಮಸ್ಯೆಯನ್ನು ನವ್ಯರೂ ಅರಿತಿದ್ದಾರೆ. ಶ್ರೀ ಅಡಿಗರ ‘ ಭೂಮಿಗೀತ ’ವು ಸುಂದರವಾಗಿ ಈ ಸಮಸ್ಯೆಯ ಬಹಿರಂಗ ದರ್ಶನವನ್ನು ಕೊಟ್ಟು ಸಿರಾಸಿಯ ಕೆಚ್ಚಿನಲ್ಲಿ ಕೊನೆಗೊಂಡು ಕಾವ್ಯಧರ್ಮವನ್ನು ಎಸಗುತ್ತದೆ. ಸಮಸ್ಯೆಯ ಎದೆಯನ್ನೇ ಸೀಳಿ ಹಿಂತಿರುಗಿ ಬರುವಾಗ ಕೆಚ್ಚಿನೊಡನೆ ಕೆಚ್ಚು, ಸಮಾಧಾನದೊಡನೆ ಸಮಾಧಾನ, ಇಂಥ ಜೀವನಧರ್ಮವನ್ನು ಪಡೆದು ‘ ಓ ತಾಯಿ–ಮಾಯಿ ’ ಬರುತ್ತದೆ. ಭಾರತೀಯ

ತತ್ವಜ್ಞಾನದ ಸೂಕ್ಷ್ಮತೆಯನ್ನು ಅರಿಯದ ಹಲವು ಪಾಶ್ಚಾತ್ಯವಿಚಾರಜಡರು ಸಮಸ್ಯೆಯ ಭೇದವಾಯಿತೆಂದೊಡನೆ, ಸಮಸ್ಯೆ ಅಳಿದೇ ಹೋಯಿತು, ಅದಕ್ಕಾಗಿ ತಿಕ್ಕಾಟ ಅಳಿಯಿತು, ಅದಕ್ಕಾಗಿ ಕಾವ್ಯಮಯತೆ ಕಡಿಮೆಯಾಯಿತು, ಎಂದು ವಾದ ಹೂಡುತ್ತಾರೆ. ‘ ಅನುಭಾವ ’ ಎಂದೊಡನೆ, ‘ ಓ, ಅದು ಪಾರಲೌಕಿಕ-ವಾದದ್ದು; other worldly; too high for me; ನನಗೆ ಬೇಕಾದದ್ದು ಐಹಿಕ ಭಾವನೆ ’ ಎಂದು ಕೈ ತಿರುವುತ್ತಾರೆ. ಅನುಭಾವವು ಐಹಿಕಭಾವನೆಗಳನ್ನು ಅಳಿಯಿಸಿ ಬಿಡುವದೇ ನಿಜವಾಗಿದ್ದರೆ ಅಕ್ಕಮಹಾದೇವಿಯು ‘ ಬಿಟ್ಟೆನೆಂದರು ಬಿಡದೀ ಮಾಯೆ; ಯೋಗಿಗೆ ಯೋಗಿನಿಯಾಯಿತು ಮಾಯೆ ’ ಎಂದು ಹಾಡುತ್ತಿರಲಿಲ್ಲ. ಮತ್ತೆ ಕೆಲವರು ಅನುಭಾವವೆಂದರೆ ಈ ಜಗತ್ತಿನಲ್ಲಿ ಪಾತ್ರ-ವಹಿಸಲು ಅಸಮರ್ಥರಾದವರು ಪಲಾಯನಕ್ಕಾಗಿ ಕಟ್ಟಿಕೊಂಡ ಕಲ್ಪನಾ ಜಗತ್ತು, ಎಂದು ಬಲು ಸುಲಭವಾಗಿ ಹೇಳುತ್ತಾರೆ. ಕಾಮದ, ಭಾವನೆಗಳ, ಮನೋ-ವೇಗಗಳ ಆವೇಗವನ್ನು ತೀವ್ರತರವಾಗಿ ಅನುಭವಿಸಿದ ಸೂಕ್ಷ್ಮಮತಿಗಳು. ಅವು ಗಳನ್ನು ಸಹಿಸಲು, ಗೆಲ್ಲಲು, ಪರಾವರ್ತಿಸಲು ಧರ್ಮ, ಸೇವೆ, ಅನುಭಾವಗಳತ್ತ ಹೊರಳುತ್ತಾರೆ. ಆ ಆವೇಗದ ಅನುಭವವೇ ಕಡಿಮೆ ಇದ್ದ ಹುಂಬ ತೊಗಲಿನವ-ರಿಗೆ ಶಮ-ಪುಷ್ಟಿ-ಅನುಭಾವಗಳ ಆವಶ್ಯಕತೆಯೇ ಅನಿಸುವದಿಲ್ಲ. ಸೂಕ್ಷ್ಮಜೀವಿಯಾದ ಕವಿ ತನ್ನ ಭಾವಾವೇಗಕ್ಕೆ ಪರಿಹಾರ-ಶಮಗಳನ್ನು ಸಂಕಟಗರೆದು ಹುಡುಕುತ್ತಿರುವಾಗ ಈ ಮಹಾಶಯರು, ನಮಗೆ ತುಸು ಪ್ರಿಯತಮೆಯೊಡನೆ ಜಗಳಾಡಿ ತೋರಿಸಿರಿ, ’ ಎಂದು ಕೇಳುತ್ತಾರೆ. ಕಾವ್ಯವು ಇಂಥ ಭಾವನೆಗಳ ತುಟಾಗ್ರತೆಯುಳ್ಳವರಿಗಾಗಿ ಭಾವಾವೇಗಗಳನ್ನು supply ಮಾಡುವ ಹಟವನ್ನು ತೊಟ್ಟಿಲ್ಲ. ಕವಿ ತನ್ನ ಶಮವನ್ನು ಅರಸುವಾಗ, ತನ್ನ ನಂಬುಗೆಯ ಶಕ್ತಿಗಳಿಗೆ ಮೊರೆ ಹೋಗುವಾಗ, ಬೌದ್ಧಿಕ ಆಸೆಯ ಒಂದು ಕಿರಣದ ಮೇಲೆ ತನ್ನ ಭವಿತವ್ಯದ ಬಗ್ಗೆ ವಿಶ್ವಾಸವನ್ನು ನಿರ್ಮಿಸಿಕೊಳ್ಳುತ್ತಿರುವಾಗ ಉತ್ಪನ್ನವಾಗುವ ಭಾವನೆಗಳು ಭಾವನೆಗಳೇ ಅಲ್ಲವೆ ? ಅವು ಈ ಲೋಕದ ಸಂಕಟಗಳಿಗೆ ಪರಿಹಾರವನ್ನು ಹುಡುಕುವಾಗ ಹುಟ್ಟಿದವು, ಅಂದಮೇಲೆ ಅವು ಪಾರಲೌಕಿಕ ಹೇಗೆ ಆದಾವು ? — ಅನುಭಾವದ ಅನುಭವವೆಂದರೆ, ಪರಿಹಾರದ ಪಡೆಯುವಿಕೆಯೆಂದರೆ ಬಾಯಲ್ಲಿ ಹಾಕಿದೊಡನೆ ಮಟಾಮಾಯವಾಗುವ ಪೇಢೆಯಲ್ಲ ಉತ್ತರದಿಂದ ಸಮಸ್ಯೆ, ಮುಗಿಯುವದಿಲ್ಲ. ಅನುಭಾವವನ್ನು ವರ್ಣಿಸುವಾಗ Yeats ಕವಿ A moment perpetually renewed in choice ’, ಎಂದು ಹೇಳುತ್ತಾನೆ. ಉತ್ತರವನ್ನು ಮೇಲಿಂದ ಮೇಲೆ ಪ್ರಶ್ನೆಗೆ ಎದುರುಬದುರು ನಿಲ್ಲಿಸಿ ಪ್ರಶ್ನೆಯನ್ನೂ ಉತ್ತರವನ್ನೂ ಕೂಡಿಯೇ ಪರಿಪಾಕಗೊಳಿಸಬೇಕಾಗುತ್ತದೆ ಜೀವನಾನುಭವದಲ್ಲಿ !

ಅತ್ಯಂತ ಮಹತ್ವದ ಮಾತೆಂದರೆ, ಮಾಯಿ ಅಭಯಕೊಟ್ಟ ಮೇಲೆ, ಕವಿ ‘ ಬಂದೆ ’ ನೆಂದು ತನ್ನ Choice ನ್ನು ಘೋಷಿಸಿದ ಮೇಲೆ ಕೂಡ ಜೀವನದ

ಕಸುಕು ಮುಳ್ಳುಗಳು ಇದ್ದಂತೆ ಉಳಿಯುತ್ತವೆ; ಅವನ್ನು ಪರಿಪಾಕಗೊಳಿಸುವ ಬೌದ್ಧಿಕ ಸರಣಿ ಕವಿಯಲ್ಲಿ ಬಂದಿರುತ್ತದೆ; ಅದಕ್ಕಾಗಿ, ಅವೂ ಇರಲಿ, ನಿನ್ನ ಕೃಪೆಯೂ ಇರಲಿ, ಎಂದು ಅವನ್ನು ಸಹಿಸಬಲ್ಲನು.

> ಕೈ ತುತ್ತಮಾಡಿ ತುತ್ತುತ್ತ ಉಣಿಸುವಾಗ ಸುತ್ತು ಆಡಬೇಕs....
> ನೀನು ಕೂಡ ಕೈ ಮರಿಗೆ ನಕ್ಕು ಕಣ್ ಕೆಂಪು ಮಾಡಬೇಕು.
> ಏ ಸುಳ್ಳು ಅಂತ ಅಪ್ಪಿದರ ತೊರಿದು ನನ ತಂಪು ಮಾಡಬೇಕು.

ಇದು ಬೇಂದ್ರೆಯವರಲ್ಲಿ ಅರವಿಂದರು ತಂದ ಐಹಿಕ ಘನತೆ, ಇದು ಅತ್ಯಂತ ಮಹತ್ವದ ಮಾತು. ಮಾಯಿ ಕಾಯುವವಳು; ಕವಿ ಆಕೆಗೆ ಹೇಳುವದು ಮಾತ್ರ, "ಕಾಡು; ಇನ್ನೂ ಕಾಡಿ ಆಟವಾಡು; ನನ್ನ ಸಂಕಟಗಳು ನನ್ನವೇ; ಅದರಿಂದ ನಾನು ಪಲಾಯನ ಬಯಸುವದಿಲ್ಲ; ಆದರೆ ಸಂಕಟದಲ್ಲಿಯೂ— ಅಭಯ ವ್ಯಕ್ತವಾಗಲಿ. ಕಷ್ಟವು ಪರಿಪಾಕವಾಗಲಿ." ಈ ಮಾತು ಪಾರಲೌಕಿಕವಲ್ಲ. ಜೀವನ ಕಲೆಯ ಭಾಗ. ಪ್ರೊಸ್ಪೆರೋ ಇರುವಾಗಲೂ ಫರ್ಡಿನಂಡ್ ಮಿರಾಂಡಾರಲ್ಲಿ ಹುಟ್ಟುವ ಜೀವನ ಔತ್ಸುಕ್ಯಗಳು ಚಿಂತೆ-ಸಂಕಟಗಳು ಅವರವೇ. ಜೀವನನಾಟಕದ ಸೂತ್ರಧಾರನಿಂದಲೇ ಎಲ್ಲ ಕತೆಯನ್ನು ಕೇಳಿಕೊಂಡರೂ ಮತ್ತೆ ನಾಟಕ ಸುರುವಾದ ಮೇಲೆ ಆಯಾ ಕ್ಷಣದ ಔತ್ಸುಕ್ಯ, ಅದರ ಕಷ್ಟ, ಅದರ ಭಯ, ಇವೆಲ್ಲ ಯಾರಿಗೂ ತಪ್ಪಿಲ್ಲ; ಭೂಮಿಜೀವಿಯಾದ ಕವಿಗಂತೂ- ತಪ್ಪುವದೇ ಸಾಧ್ಯವಿಲ್ಲ.

ಅನುಭಾವ, ದೇವತಾಭಕ್ತಿ, ಯೋಗಗಳ ಉಸಿರೆತ್ತಿದೊಡನೆ ಮನುಷ್ಯನಿಗೆ Dead perfection ಬಂದೇ ಬಿಟ್ಟಿತೆಂದೂ ಜೀವಂತತನದ ತಿಕ್ಕಾಟಗಳೇ ಅಳಿದವೆಂದೂ— ಹೇಳುವದು ಅಪರಿಪಕ್ವ ಸುಶಿಕ್ಷಿತರಲ್ಲಿ ಪಾಶ್ಚಾತ್ಯ Humanist Dogma ಹುಟ್ಟಿಸಿದ ಪುಕ್ಕತನದ ಪರಿಣಾಮ. ಆಧುನಿಕ ಕವಿಯೊಬ್ಬನು ಅನುಭಾವದ ಮಾತನ್ನು ಆಡುವದೇ ಅಪ್ರಾಮಾಣಿಕವೆಂದು ತಿಳಿಯುವ ವಿಕೃತ ಮನಸ್ಸಂತೂ ನಮ್ಮ ರಸಾನುಭವದ ಒಂದು ಇಂದ್ರಿಯವನ್ನೇ ಊನಗೊಳಿಸಿದೆ. ಬೇಂದ್ರೆಯವರ ಈ ಕವನವು ಇಂತಹ ವಿಕೃತಮತಿಗಳು ತುಸು ಕಣ್ದೆರೆದರೆ ವಸ್ತುಸ್ಥಿತಿ ಹಾಗಿಲ್ಲವೆಂಬುದನ್ನು ತೋರಿಸಬಲ್ಲದು. ಜೀವನವನ್ನು ಅಲ್ಲಗಳೆಯುವದಲ್ಲ, ಪಲಾಯನ ಬೇಡುವದಲ್ಲ; ಆದರೆ ಜೀವನಾನುಭವದ ಕಹಿಯನ್ನೇ ರಸಾನುಭವವನ್ನಾಗಿ ಮಾಡಿ ಜೀವನವನ್ನೇ ಕವನವನ್ನಾಗಿ ಮಾಡುವದು, ಇವೇ ಅರವಿಂದರ ತತ್ವಜ್ಞಾನವು ಬೇಂದ್ರೆಯವರಲ್ಲಿ ಮಾಡಿದ ಆಂತಿಕ ಪರಿಣಾಮ.

"Why is he afraid of Demogorgon as a Victorian child ?" ಎಂದು ಯೇಟ್ಸನು ಶೆಲ್ಲಿಯ ಒಗ್ಗೆ ಪ್ರಶ್ನಿಸುತ್ತಾನೆ. ಡೆಮೊಗೋರ್ಗನ್ ಶೆಲ್ಲಿಯ ನಾಟಕದ ಕೊನೆಯ ಅಂಕಿನ ಮೇರೆಗೆ ಪೂರ್ಣ-

ಜೀವನದ ಪ್ರತೀಕ. ಆದರೆ ಮೊದಲಿನ ಅಂಕುಗಳಲ್ಲಿ ಅವನು ಭಯಂಕರನೆಂದಾಗಿ ವರ್ಣಿಸಲ್ಪಟ್ಟಿದ್ದಾನೆ. ಯೇಟ್ಸ್‌ನಿಗಿಂತ ಮೊದಲು ಈ ಪ್ರಶ್ನೆಯನ್ನೇ ಯಾರೂ ಕೇಳಿ. ರಲಿಲ್ಲ. ಅವನು ಕೊಡುವ ವಿವರಣೆಯೇನಂದರೆ ಶೆಲ್ಲಿಗೆ ಅನುಭಾವಪದ್ಧತಿಯ ಜ್ಞಾನ ಸಾಕಷ್ಟು ಇರಲಿಲ್ಲವೆಂದು. ಪರಂಪರೆಯ ಸಹಾಯವಿಲ್ಲದೆ ತಾನೆ ಸ್ವತಃ ಹುಟ್ಟಿಸಿ ಕೊಂಡ ವೈಯಕ್ತಿಕ ಧರ್ಮವು ಅದು. ತನ್ನ Reformism ವನ್ನು ಧರ್ಮದ, ಸಾಂಸ್ಕೃತಿಕ ಮೌಲ್ಯಗಳ ಮಟ್ಟಕ್ಕೆ ಏರಿಸಿದುದಕ್ಕಾಗಿ ಅವನ ಜೀವನದರ್ಶನವು ಭಯ ರೂಪವಾಗಬೇಕಾಯಿತು. ಭಯಂಕರ ಝೀಯಸನಿಗೆ ಉತ್ತರರೂಪವಾಗಿ ಹುಟ್ಟ ಬೇಕಾದ ನವಧರ್ಮವು ಅವನಿಗಿಂತ ಭಯಂಕರವಾಗದೆ, ಕವಿಯಲ್ಲೂ ನೈಜಭಯ ಹುಟ್ಟಿಸದೆ; ಹೇಗೆ ಜನಿಸಬಲ್ಲದು ? ಸಾಂಪ್ರದಾಯಿಕ ಸಂಕೇತಗಳ ಸಹಾಯವಿಲ್ಲದೆ ಹುಟ್ಟಿದ ವ್ಯಕ್ತಿಸಂಕೇತಗಳಲ್ಲಿ ಹುಟ್ಟುವ ದರ್ಶನವಿಕೃತಿಯ ಉದಾಹರಣೆ ಇದು. ಅದರಂತೆಯೆ Francis Thompson ನ 'The Hound of Heaven' ಕವನವು 'ಓ ತಾಯಿ ಮಾಯಿ' ಯಂಥ ಅನುಭವದಿಂದಲೆ ಹುಟ್ಟಿದ್ದರೂ ಕೂಡ ಇನ್ನೊಂದು ಕಾರಣಕ್ಕಾಗಿ ಭಯೈಕರಸವಾಗಿದೆ; ಕ್ಯಾಥೊಲಿಕ್ ಧರ್ಮದ 'The Terrible God'ನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಹುಟ್ಟಿದ ಕವನವದು. ಅಂತೆಯೇ ಭಯದಲ್ಲಿಯೇ ಕೊನೆಗಾಣುತ್ತದೆ; ಭಯಸಂರಕ್ಷಣೆಯ ಭಾಷೆಯಲ್ಲಿಯೇ ತನ್ನ ಪರಿಹಾರ ಕಾಣುತ್ತದೆ. ಆದರೆ ಬೇಂದ್ರೆಯವರಲ್ಲಿ ಮಾತ್ರ ಭಯದಿಂದ ಕವನ ಸುರುವಾದರೂ ಭಯಾನಕ ರಸದಲ್ಲಿಯೇ ತನ್ನ ಮುಕ್ತಿಯನ್ನು ಕಾಣುವದಿಲ್ಲ. ತಾಯಿ ಸೆರಗು ಮುಚ್ಚಿಕೊಂಡು ಭಯದೋರಿ, ಭಯಪಟ್ಟ ಮಗುವನ್ನು ಎದೆಗವಚಿ ಕೊಳ್ಳುವ ಲೀಲೆಯಾಗಿ ಕಂಡಿದೆ. ಆಡಿಸುತ್ತ, ಕಾಡಿಸುತ್ತ, ಕಣ್ಣುಕೆಂಪು ಮಾಡುತ್ತ, ಕೈಮರೆ ಮಾಡಿ ಮುಗುಳುನಗೆ ನಗುತ್ತ, ಕೈತುತ್ತು ಉಣ್ಣಿಸುವ ಪೋಷಕಲೀಲೆಯದು. ಹೆದರಿಸಿದಾಗ ಮಗು ಹೆದರದಿರಲಾರದು; ಮೋಸಕ್ಕೆ ಮುನಿಸದಿರಲಾರದು; ಅವೆಲ್ಲವುಗಳಲ್ಲಿಯೂ ತಾಯಿಯ ಮೇಲಿನ ವಿಶ್ವಾಸವು ದುಃಖ ವನ್ನು ರಸವನ್ನಾಗಿಸುವ ಮಾಯಾಯಂತ್ರ; ಅದು ದುಃಖವನ್ನು ಕಳೆದುಬಿಡುವದಿಲ್ಲ; ಪಲಾಯನವನ್ನೂ ಕಲಿಸುವದಿಲ್ಲ; ರಸಕ್ಕೆ ಪರಾವರ್ತಿಸುವ ಶಕ್ತಿಯನ್ನೊಂದು ಕೊಟ್ಟು, ಅನುಭವದ ತನ್ನತನವನ್ನು ಅಳಿಸದೆ ರಸಘಟ್ಟಿಯನ್ನು ಮಾಡುತ್ತದೆ. Those are pearls that were his eyes· ಭೋಗದಲ್ಲಿಯೇ ಯೋಗ ಕಣ್ತೆರೆಯುವದಕ್ಕಾಗಿ ದಾರಿಕಾಯುವ ಸದಃ ಫಲ ಆಶಾವಾದ; ದುರ್ದಮ್ಯ ಜೀವನೋತ್ಸಾಹ.

§ § § §

೪೩

# ಬೇಂದ್ರೆಯವರ 'ವಿಡಂಬನ ಕವಿತೆಗಳು'

**ವೇಣುಗೋಪಾಲ ಸೊರಬ**

ಬೇಂದ್ರೆಯವರ ಕಾವ್ಯದಲ್ಲಿ ಮೊದಲಿನಿಂದಲೂ ವ್ಯಂಗ್ಯ-ವಿಡಂಬನಗಳಿಗೆ
ಪ್ರಮುಖ ಸ್ಥಾನವಿದೆ. ಕಟಕಿ-ಕೊಂಕುಗಳನ್ನು ಅವರು ಸಾಧಿಸುವುದು, ಅವರಿ-
ಗಿರುವ ಭಾಷೆಯ ಮೇಲಿನ ಪ್ರಭುತ್ವದಿಂದ. ಚತುರ ಸಂಭಾಷಣಾಕಾರರಾದ
ಬೇಂದ್ರೆಯವರು ಕಾವ್ಯದಲ್ಲಿಯೂ ಮಾತಿನ ಚಮತ್ಕೃತಿಗಳನ್ನು ಹಲವಾರು ವಿಧ-
ವಾಗಿ ನಡೆಸಿರುವುದು, ಅವರ ಕವಿತೆಗಳ ಮೆರವಣಿಗೆಯನ್ನು ನೋಡಿದವರಿಗೆ ಚೆನ್ನಾಗಿ
ತಿಳಿದ ವಿಷಯವೇ. ಆದರೆ ವ್ಯಂಗ್ಯ-ವಿಡಂಬನೆಗಳಲ್ಲಿ ಅವರಿಗೆ ಅವರ ಭಾಷೆ- ಆಡು
ಭಾಷೆ-ಸಹಕಾರಿಯಾಗುವಷ್ಟು ಬೇರೆ ಕಡೆಗಳಲ್ಲಿ - ಅವರ ಗೀತಗಳ ರಚನೆಗಳಲ್ಲಿ,
ಗಂಭೀರ ಅಥವಾ ತಾತ್ತ್ವಿಕ ಕೃತಿರಚನೆಯಲ್ಲಿ ತೊಡಗಿದಾಗ ಉಂಟಾಗುವುದಿಲ್ಲ.
ಹಾಗೆನ್ನುವುದಕ್ಕಿಂತ, ಅವರ ಅನೇಕ ಗಂಭೀರ ರಚನೆಗಳು, ಅನೇಕ ವೇಳೆ ಹರಳುಗಟ್ಟದೆ
(Crystallize) ಇರುವುದಕ್ಕೆ ಅವರು, ತಮ್ಮ ಭಾಷೆಯ ಚಮತ್ಕೃತಿಗೆ ತಾವೇ
ಮರುಳಾಗುವುದರಿಂದ ಎಂದೇ ಹೇಳಬೇಕು.

'ಗರಿ'ಯಲ್ಲಿನ 'ಕರಿಮರಿನಾಯಿ'ಯಿಂದ ಹಿಡಿದು 'ಅವರ್ಣನೀಯ ಅರ್ವಾ-
ಚೀನ ಸೌಂದರ್ಯ', 'ಕರಡಿ-ಕುಣಿತ', 'ದರಿದ್ರ ನಾರಾಯಣ', 'ಶೂನ್ಯ', 'ಅನ್ನ
ಬಕಾಸುರ ರಾಜ್ಯದಲ್ಲಿ' ಕವನದ ವರೆಗೆ, ಬೇಂದ್ರೆಯವರ ವ್ಯಂಗ್ಯದೃಷ್ಟಿ ತೀಕ್ಷ್ಣ-
ವಾಗಿ ಬೆಳೆದಿರುವುದನ್ನು ಕಾಣಬಹುದು. ಇವುಗಳೇ ಅಲ್ಲದೆ, ಬೇಂದ್ರೆ ತಮ್ಮ
ಕೈಯನ್ನು ಅಣಕವಾಡಿನಲ್ಲಿಯೂ ಆಡಿಸಿದ್ದಾರೆ. ತಮ್ಮ ಪ್ರಸಿದ್ಧ ಕವನವೊಂದಕ್ಕೆ
ತಾವೇ ಅಣಕವಾಡು ಬರೆದುಕೊಂಡು, ತಮ್ಮ ಕಾವ್ಯಕ್ಕೆ ಒಂದು ಹೊಸ ಆಯಾಮ
ವನ್ನು ಅವರು ತಂದುಕೊಂಡಿದ್ದಾರೆ.

ಪ್ರಸ್ತುತ, ಅವರ ವಿಡಂಬನಾತ್ಮಕ ಕೃತಿಗಳಲ್ಲಿ 'ಶೂನ್ಯ' ಮತ್ತು 'ಅನ್ನ-
ಬಕಾಸುರ ರಾಜ್ಯದಲ್ಲಿ' ಕವನಗಳು ಅತ್ಯುತ್ತಮ ಎಂದು ಹೇಳಬೇಕು. 'ಕರಡಿ-
ಕುಣಿತ' ಮತ್ತು 'ದರಿದ್ರ ನಾರಾಯಣ' ಆ ಮಟ್ಟಕ್ಕೆ-ಶುದ್ಧ ವಿಡಂಬನಾತ್ಮಕ

ಕವಿತೆಗಳಾಗಿ ಏರದಿದ್ದರೂ, ಅವುಗಳಲ್ಲಿನ ಚಿಕಿತ್ಸಕದೃಷ್ಟಿ, ಅವು ಮುಖ್ಯತಃ ವಿಡಂಬನಾತ್ಮಕ ಕೃತಿಗಳು ಎಂಬುದನ್ನು ತೋರಿಸುತ್ತವೆ.

ಕನ್ನಡದಲ್ಲಿ ವಿಡಂಬನಾತ್ಮಕ ಸಾಹಿತ್ಯ ಬಹಳ ಹಿಂದೆಯೇ ಬೆಳೆದು ಬಂದು-ದಕ್ಕೆ ಅನೇಕ ಒಳ್ಳೆಯ ಉದಾಹರಣೆಗಳಿವೆ. ನವೋದಯ ಸಾಹಿತ್ಯದಲ್ಲಿಯಂತೂ 'ಮಹಾಕವಿ ಪುರುಷ ಸರಸ್ವತಿ' ಒಂದು ಮೈಲಿಗಲ್ಲೇ ಆಗಿದೆ. ಗದ್ಯ-ಪದ್ಯ ಮಿಶ್ರಿತ ಬರವಣಿಗೆಯಾದ ಈ ಕೃತಿ, ಯಾವುದೇ ಒಬ್ಬ ವ್ಯಕ್ತಿಯನ್ನು ದೂಷಿಸುವುದಿಲ್ಲ. ಆದರೆ ಸಮಕಾಲೀನ ಸಾಹಿತ್ಯ ರಚನಾಕಾರರ, ಪರಸ್ಪರ ದ್ವೇಷ, ದೂಷಣೆಗಳನ್ನು ಸಮಗ್ರವಾಗಿ ಚಿತ್ರಿಸುತ್ತದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ರಾಜ-ರತ್ನಂ, ಪುರುಷ ಸರಸ್ವತಿಯನ್ನು ಕೇವಲ ಕಲ್ಪನಾಲೋಕಕ್ಕೇ ಏರಿಸಿಬಿಡುತ್ತಾರೆ. ಇದರಿಂದಾಗಿ ಈ ಕೃತಿಯಲ್ಲಿ ತಕ್ಕಷ್ಟು 'ಮಣ್ಣಿನ ವಾಸನೆ' ಹೊಡೆಯುವುದಿಲ್ಲ ಎಂದೇ ಹೇಳಬೇಕು. 'ಪುರುಷ ಸರಸ್ವತಿ'ಯನ್ನು ಬಿಟ್ಟರೆ, ನಾ. ಕಸ್ತೂರಿಯವರ 'ಅನರ್ಥಕೋಶ' ಇತ್ಯಾದಿ ಬರವಣಿಗೆಗಳು ಈ ಕ್ಷೇತ್ರದಲ್ಲಿ ನಡೆದ ಕೃಷಿಗೆ ಆಧಾರ-ವಾಗಿವೆ. ಬೇಂದ್ರೆಯವರು ಈ ಕ್ಷೇತ್ರಕ್ಕೆ ಕೊಡಮಾಡಿರುವ ಕೆಲವು ಬಿಡಿಕವಿತೆಗಳನ್ನು ಈಗ ತೆಗೆದುಕೊಳ್ಳಬಹುದು.

'ಕರಿಮರಿ ನಾಯಿ'ಯಲ್ಲಿ, ಭಟ್ಟರು ತಮ್ಮ ಅಂಧಶ್ರದ್ಧೆಯಿಂದ, ನಾಯಿಗೆ ಕ್ರೂರವಾಗಿ ವರ್ತಿಸುವುದರ ಚಿತ್ರವಿದೆ.

ಸರಭರ ಮಳೆಯು ಸುರಿಯುತಲಿತ್ತು
ಕಾಲುವೆ ನೀರದು ಹರಿಯುತಲಿತ್ತು.

ಭೋರೆನೆ ಗಾಳಿಯು ಬೀಸುತಲಿತ್ತು
ತಬ್ಬಲಿ ಕುನ್ನಿಯು ಈಸುತಲಿತ್ತು.

ಬೆಚ್ಚನೆ ಮನೆಯಾ ಹೊಚ್ಚಲದೊಳಗೆ
ನಿಂತರು ಭಟ್ಟರು ಹಣಕುತ ಹೊರಗೆ.

ಮೆಟ್ಟಿಲನೇರಲು ಕುನ್ನಿಯು ಅತ್ತ
ಹವಣಿಸೆ, ಬಾಗಿಲು ಮುಚ್ಚಿತು ಇತ್ತ.

ಈ ಚಿತ್ರಕ್ಕೆ ಪೂರಕವಾಗಿ, ಕವಿ, ಕೆಳಗಿನ ಮಾತುಗಳನ್ನು ಹೇಳುತ್ತಾರೆ—

'ಭಪ್ಪರೆ ಭಪ್ಪರೆ ಭಲರೆ! ಭಟ್ಟರೋ
ಕಾಯ್ದರು ಮನೆಯನು ಏನು ದಿಟ್ಟರೋ!'

ಇಲ್ಲಿನ ಹೊಗಳುಭಟರ ಬಾಯಿಯಲ್ಲಿ ಜಯಜಯಕಾರವಾಗಿ ಬರುವ ಭಪ್ಪರೆ, ಭಪ್ಪರಿ ಎಂಬುದರ ಕಡೆ ನಮ್ಮ ಗಮನ ಹರಿಸಬಹುದು. ಭಟ್ಟರು ನಿಜ-ವಾಗಿಯೂ ಅಪೂರ್ವವಾದದ್ದೇನೋ ಸಾಧಿಸಿದ್ದಾರೆ. ಇಡೀ ಕವನ, ಯಾವ ಹೆಚ್ಚಿನ ವಿವರಗಳೂ ಇಲ್ಲದೆ ಬಿಟ್ಟ ಬಾಣದಂತೆ, ನೇರವಾಗಿ ಓದುಗನ ಮನಸ್ಸನ್ನು ಹೊಗುತ್ತದೆ. ಆದರೆ ಓದುಗನ ಮರ್ಮ ಭೇದಿಸುವುದು ಮೇಲಿನ ಎರಡು ಸಾಲು ಗಳು ಮಾತ್ರವೇ. ಭಟ್ಟರು ತಮ್ಮ ಮೌಢ್ಯವನ್ನು ಕಾಯ್ದುಕೊಂಡುದರ ಚಿತ್ರ ಇನ್ನೂ ಹೆಚ್ಚು ಪ್ರಭಾವಕಾರಿಯಾಗಿ ಮೂಡಲು ಸಾಧ್ಯವಿಲ್ಲ.

'ಅವರ್ಣನೀಯ ಅರ್ವಾಚೀನ ಸೌಂದರ್ಯ'– ಹೆಸರೇ ಸೂಚಿಸುವಂತೆ, ವರ್ಣನಾ ಪ್ರಧಾನವಾಗಿದೆ. ಮೊದಲ ಮೂರು ಪದ್ಯಗಳಲ್ಲಿ ದೈಹಿಕವಾದ ವಿವಿಧ ಅಂಗಾಂಗ ಗಳ ವಿವರವನ್ನು ದಾಟಿದ ಮೇಲೆ ಕವಿ, ಕೊನೆಯಲ್ಲಿ ಈ ಅಭಿಪ್ರಾಯಕ್ಕೆ ಬರುತ್ತಾರೆ—

'ಅಂಗಾಂಗ ವ್ಯಂಗ್ಯವಿರಬಹುದು ಇರದಿರಬಹುದು;
ವ್ಯಂಗ್ಯ ಕಾವ್ಯದ ಹಾಗೆ ನಿನ್ನ ಮಾಟ.
ನಿನ್ನ ಮೈಯನ್ನೆಲ್ಲ ನೀನೆ ಬಣ್ಣಿಸಿಕೊಂಡೆ,
ಬೇರೆ ಬಣ್ಣನೆ ಬರಿಯ ಬಣ್ಣದಾಟ.'

ಸೌಂದರ್ಯ – ಪ್ರಾಚೀನವಾಗಿರಲಿ, ಅರ್ವಾಚೀನವಾಗಿರಲಿ, ಅದನ್ನು ವರ್ಣಿ ಸುವುದು ಕಷ್ಟಸಾಧ್ಯ. ಹಾಗೆಯೇ ವಕ್ರತೆಯಿಂದ ಸೌಂದರ್ಯವೃದ್ಧಿ ಆಗುತ್ತದೆ; ಅಥವಾ ಇಲ್ಲ ಎನ್ನುವುದೂ ಅಭಿಪ್ರಾಯದ ಮಾತು. ಆದರೆ 'ವ್ಯಂಗ್ಯಕಾವ್ಯದ ಹಾಗೆ ನಿನ್ನ ಮಾಟ' ಎಂದು ಹೇಳುವಲ್ಲಿ ಕವಿ, ವಕ್ರತೆಯನ್ನು ಅಲ್ಲಗಳೆಯದೆಯೆ, ಅದರ ಸರಿಯಾದ ಸ್ಥಾನವನ್ನು ನಿರ್ದೇಶಿಸಿದ್ದಾರೆ. ಇಲ್ಲಿ, ಕಾವ್ಯದ ಸಾರ್ಥಕತೆ ಕಾಣುತ್ತದೆ. ಇಲ್ಲದೆ ಇರುವ ವಕ್ರತೆಯನ್ನು ಆರೋಪಿಸಿಕೊಂಡು, ಅದರಿಂದ ತಮ್ಮ ಸೌಂದರ್ಯವನ್ನು ವರ್ಧಿಸಿಕೊಳ್ಳುವುದು ಆಧುನಿಕರ ಚಪಲವೇ ಸರಿ. ಆದರೆ ಹಾಗೆ ಮಾಡುವುದರಿಂದ, ಉಂಟಾಗುವ ಸ್ವಂತ ಕುಂದುಗಳ ಪ್ರದರ್ಶನ, ಅವರಿಗೆ ಅರ್ಥವಾಗುವುದಿಲ್ಲ ಎನ್ನುವುದೂ ಸತ್ಯವೇ. ಮೇಲಿನ ಎಲ್ಲ ಅಭಿಪ್ರಾಯವೂ 'ವ್ಯಂಗ್ಯಕಾವ್ಯದ ಹಾಗೆ ನಿನ್ನ ಮಾಟ' ಎಂಬ ಒಂದೇ ಸಾಲಿನಲ್ಲಿ ಸಾರ್ಥಕವಾದ ರೀತಿಯಲ್ಲಿ ಚಿತ್ರಿತವಾಗಿದೆ. ಏಕೆಂದರೆ, ವ್ಯಂಗ್ಯಕಾವ್ಯವು ವ್ಯಂಗ್ಯ ಶಬ್ದಗಳಿಂದ ಆಗು ವುದಿಲ್ಲ. ಆದರೆ ನೇರವಾದ, ಗಂಭೀರವಾಗಿ ಕಾಣುವ ಪದಗಳಿಂದಲೇ, ವ್ಯಂಗ್ಯ ವನ್ನು ಹೊರಡಿಸುವುದು ವ್ಯಂಗ್ಯಕಾವ್ಯದ ಶ್ರೇಷ್ಠ ಲಕ್ಷಣ. ಅದೇ ರೀತಿಯಲ್ಲಿ ಅರ್ವಾಚೀನ ಸೌಂದರ್ಯವೂ, ವಕ್ರತೆಯನ್ನು ಹೊರಗೆಡಹುವುದು, ಎಂಬುದು

ಆಲೋಚಿಸಬೇಕಾದ ವಿಷಯ. ಈ ಸಂಬಂಧದಲ್ಲಿ ವಿಡಂಬನಕಾವ್ಯ (Satire)ದ ಬಗ್ಗೆ John Dryden ಹೇಳಿದ ಮಾತುಗಳನ್ನು ಸ್ಮರಿಸಬಹುದು :

"....How easy it is to call rogue and villain, and that wittily! But how hard to make a man appear a fool, a blockhead, or a knave, without using any of those opprobrious terms!....Neither is it true. that this fineness of raillery is offensive."

'ಕರಡಿ-ಕುಣಿತ'ದಲ್ಲೂ ಇಂತಹುದೇ ನಯಗಾರಿಕೆಯನ್ನು ಕಾಣಬಹು-ದಾದರೂ, ಇಲ್ಲಿ ಕೊನೆಯ ಸಾಲುಗಳಲ್ಲಿ ಕವಿ ಸಮಾಜವನ್ನು ಕುರಿತು ನೇರವಾಗಿ ಹೇಳುವುದರಿಂದ, ಇಲ್ಲಿಯ ವ್ಯಂಗ್ಯ ತನ್ನ ಮೊನಚನ್ನು ಕಳೆದುಕೊಳ್ಳುತ್ತದೆ. ಏಳ-ನೆಯ ಈ ಪದ್ಯದಿಂದಲೇ ಕವಿತೆ ಮುಕ್ತಾಯವಾಗಿದ್ದರೆ, ಹೆಚ್ಚು ಪರಿಣಾಮಕಾರಿ ಯಾಗುತ್ತಿತ್ತು—

'ಮನಬಲ್ಲ ಮಾನವ ಕುಣಿದಾನ ಕುಣಿಸ್ಯಾನ<br>ಪ್ರಾಣದ ಈ ಪ್ರಾಣಿ ಹಿಂದಾಽನ;<br>ಕರಡಿಯ ಹೆಸರೀಲೆ ಚರಿತಾರ್ಥ ನಡಿಸ್ಯಾನ<br>ಪರಮಾರ್ಥ ಎಂಬಂತೆ ಬಂದಾನ.

ಆದರೆ ಕರಡಿ ಕುಣಿತದ ಪ್ರತೀಕವೇ ಒಂದು ಬಗೆಯ ಆಕರ್ಷಣೆಯನ್ನು ಹೊಂದಿದೆ. 'ತ್ರೇತಾಯುಗದ ರಾಮ, ದ್ವಾಪರದ ಕೃಷ್ಣ' ಇವರುಗಳನ್ನು ಹೆಸ-ರಿಸಿ, ಕವಿತೆಗೆ ವಿಶಾಲವಾದ ಹರವನ್ನು ಕೊಟ್ಟಿದ್ದಾರೆ ಬೇಂದ್ರೆಯವರು. ಅಷ್ಟೇ ಅಲ್ಲದೆ, ಈ ಕವಿತೆ ಒಂದು ಸಮಾಜದ ನಂಬಿಕೆಗಳನ್ನು ವಿಮರ್ಶಕದೃಷ್ಟಿಗೆ ಒಳ ಪಡಿಸುವುದನ್ನೂ ಕೂಡ, ಈ ಸಾಲುಗಳಲ್ಲಿ ನಾವು ಕಾಣಬಹುದು—

'ರೋಮ ರೋಮಗಳಲ್ಲಿ ಭೀಮರಕ್ಷೆಯ ಬಲ<br>ಕೊರಳಾಗ ಕಟ್ಟರಿ ಬಂದಾನ.'

ಮತ್ತು 'ಕುಣಿಸುವವರ ಹೊಟ್ಟೆ ತಣ್ಣಗಾಗಲಿ ಎಂದು<br>ಮುಗಿಲಿಗೆ ಕೈಮುಗಿದು ನಿಂದಾನ.'

ಕೊನೆಯ ಎರಡು ಸಾಲುಗಳಲ್ಲಿ ಪ್ರಕಟವಾಗಿರುವ ವ್ಯಂಗ್ಯವಂತೂ, ದಲಿತರ ಮತ್ತು ತುಳಿತಕ್ಕೆ ಒಳಗಾದವರ ಪರಿಸ್ಥಿತಿಯನ್ನು ಚಿತ್ರಿಸುವಲ್ಲಿ ತೀಕ್ಷ್ಣವಾಗಿಯೇ ಇದೆ.

'ಶೂನ್ಯ' ಪದ್ಯವನ್ನು ವಿಮರ್ಶಿಸುವಾಗ, ಅದನ್ನು ಬರೆದ ಸಂದರ್ಭವನ್ನು ಮರೆಯುವಂತಿಲ್ಲ. ಈ ಪದ್ಯದಲ್ಲಿನ ಶುದ್ಧ ವಿಡಂಬನೆ, ಯಾರ ಮನಸ್ಸನ್ನೂ ನೋಯಿಸಬಾರದೆಂಬುವ ಸೂತ್ರವನ್ನು ಚೆನ್ನಾಗಿ ತೆರೆದು ತೋರಿಸುತ್ತದೆ. ಆದರೆ ಅಷ್ಟೇ ಮಟ್ಟಿಗೆ, ಮಾರ್ಮಿಕವೂ, ಕವನದ ವಸ್ತುವಾದ ಚಕ್ರಗೋಷ್ಠಿಯ (Round table conference) ಹಿನ್ನೆಲೆಯಲ್ಲಿ ತೀಕ್ಷ್ಣವೂ ಆಗಿದೆ. ಚಕ್ರ-ಗೋಷ್ಠಿಯ ವೈಫಲ್ಯ, ಅದರಲ್ಲಿ ನಡೆದ ವಿವಿಧ ಬಣಗಳ ಶಕ್ತಿಪ್ರದರ್ಶನ ವಿಶಿಷ್ಟ ರೀತಿಯಲ್ಲಿ ಪ್ರಕಟಗೊಂಡಿವೆ, ಈ ಕವನದಲ್ಲಿ.—

'ಬಂಡೀಗಾಲೀ ಹೊಟ್ಟೆಗೆ
ಗುಂಡುಕಲ್ಲ ತಲೆಯು,
ಗುಂಡುಕಲ್ಲಿನ ತಲೆಗೆ
ಸೊನ್ನೆ ಸುತ್ತಿದ ಮಿದುಳು'

ದುಂಡುಮೇಜಿನ ಸುತ್ತ ಕುಳಿತ ದುಂಡು ದುಂಡು ಮಂದಿಯನ್ನು ಮೇಲಿನ ರೀತಿಯಲ್ಲಿ ವರ್ಣಿಸಿರುವುದು ಕವಿಗಳ ಧಾಷ್ಟ್ರ್ಯತೆಗೆ ಸಾಕ್ಷಿ. ಅಂತಾರಾಷ್ಟ್ರೀಯ ಮಟ್ಟದ ಒಂದು ಗಂಭೀರ ಘಟನೆ ಈ ರೀತಿಯ ಚುಚ್ಚುಮಾತಿಗೆ ಒಳಗಾದದ್ದು ಕೂಡ ದೊಡ್ಡ ವಿಷಯವೇ. 'ಶೂನ್ಯ' ಎಂಬ ತಲೆಬರಹದಿಂದ ಕೂಡಿ, 'ದುಂಡು' 'ಬಂಡೀಗಾಲಿ', 'ಗುಂಡುಕಲ್ಲು' 'ಪ್ರೂಜಿ', 'ಗೊರಟ'-ಈ ಪ್ರತಿಯೊಂದು ಮಾತೂ, ವೈಫಲ್ಯವನ್ನೂ, ನಿಷ್ಫಲತೆಯನ್ನೂ, ನಿಷೇಧಾತ್ಮಕ ಮೌಲ್ಯವನ್ನೂ ಅತ್ಯಂತ ಪ್ರಭಾವಕಾರಿಯಾಗಿ ಚಿತ್ರಿಸುತ್ತದೆ. ಇಷ್ಟೇ ಅಲ್ಲದೆ, ಕವನ ಮುಕ್ತಾಯವಾಗುವ ರೀತಿ, ಉದ್ದಕ್ಕೂ ಅಂತರ್ಗತವಾಗಿರುವ ಹುಡುಗಾಟದ ಧ್ವನಿಯನ್ನು ಸ್ಪಷ್ಟವಾಗಿ ವ್ಯಕ್ತಗೊಳಿಸುತ್ತದೆ—

'ಬೆಳ್ಳನ್ನವರಿಗಾಟ-
ಕಪ್ಪನ್ನವರಿಗೆ ಕಾಟ-

ತಂತಮ್ಮನೆಗೋಟ-
ಮುದುಕನದಿದು ಬ್ಯಾಟ'

ಕವನದ ಸಾರ್ಥಕತೆ ಇರುವುದು ಇಲ್ಲಿಯೇ. ಇಡೀ ಚಕ್ರಗೋಷ್ಠಿಯನ್ನು ಹುಡುಗಾಟವಾಗಿ ಚಿತ್ರಿಸುವುದರ ಮೂಲಕ, ಚಕ್ರಗೋಷ್ಠಿಯ ಉದ್ದೇಶದ ಗಂಭೀ-ರತೆಯನ್ನೇ ಪ್ರಶ್ನಿಸಿದಂತಾಗಿದೆ. ಶಕ್ತರಾಷ್ಟ್ರವಾದ ಬ್ರಿಟನ್ನಿಗೆ, ಭಾರತಕ್ಕೆ ಸ್ವಾತಂತ್ರ್ಯ ಕೊಡಬೇಕೆನ್ನುವುದು, ನಿಜವಾಗಿಯೂ ಗಂಭೀರವಾದ ವಿಷಯ-

ವಾಗಿತ್ತೊ ಅಥವಾ ಹುಡುಗಾಟಕೆಯಾಗಿತ್ತೊ ? ಬ್ರಿಟನ್ನಿನ ದೃಷ್ಟಿಕೋನ ಇಲ್ಲಿ ಸರಿಯಾಗಿಯೇ ಬಿಂಬಿತವಾಗಿದೆ.

ಕೊನೆಯದಾಗಿ, 'ಅನ್ನಬಕಾಸುರ ರಾಜ್ಯದಲ್ಲಿ' ಕವಿತೆಯಲ್ಲಿ ಗಣರಾಜ್ಯದ ವಿಡಂಬನೆ ಹೇಗೆ ಮೂಡಿದೆ ಎಂದು ನೋಡಬಹುದು. ಕವನದ ಐದು ಪದ್ಯಗಳು, ಐದು ಬೇರೆ ಬೇರೆ ರಾಜ್ಯಗಳನ್ನು ಕುರಿತಿಲ್ಲ. ಅದು ಮೂಲತಃ ಅವನತಿಗೊಂಡ ಪ್ರಜಾರಾಜ್ಯವನ್ನೇ ಕುರಿತಿದೆ. 'ಅನ್ನ ಬಕಾಸುರ' ಎನ್ನುವಲ್ಲಿ ಅನ್ನವನ್ನೇ ಪ್ರಧಾನ ವಾಗಿ ಮಾಡಿಕೊಂಡು, ಬಕಾಸುರರಂತೆ ಹಾತೊರೆಯುವವರ ರಾಜ್ಯ ಎಂದೂ, 'ಪ್ರಾಣಭಯಂಕರ', 'ಮನಮಂಗಾಸುರ' ಎನ್ನುವಲ್ಲಿ ಪ್ರಿಯವಾದ ಪ್ರಾಣಗಳೇ ಭಯಂಕರವಾದ ಹಾಗೂ ಮನಸ್ಸೇ ಮಂಗವಾದ ಪ್ರಜೆಗಳನ್ನುಳ್ಳ ರಾಜ್ಯಗಳನ್ನು ಕವಿ ನಿರ್ದೇಶಿಸುತ್ತಾರೆ. ಭಾರತೀಯ ದೃಷ್ಟಿಗೆ ಅನ್ನ-ಪ್ರಾಣ ಹಾಗೂ ಮನಸ್ಸಿನ ಪರಸ್ಪರ ಸಂಪರ್ಕ ಮತ್ತು ಸಂಬಂಧಗಳನ್ನು ಕುರಿತು ಹೇಳಬೇಕಾಗಿಲ್ಲ. ಆದರೆ ಇವುಗಳಲ್ಲಿ ಯಾವುದೇ ಒಂದು ಪ್ರಮುಖವಾದರೂ, ಉಂಟಾಗುವ ಗೊಂದಲ ಹೇಳ ತೀರದು. ಪ್ರಾಣದ ವಿಷಯದಲ್ಲಿ ಅದು ಪ್ರಮುಖವಲ್ಲದೆ ಇನ್ನೇನಾಗಬೇಕು ? ಎಂಬ ಪ್ರಶ್ನೆ ಏಳುತ್ತದೆ. ಆದರೆ ಪ್ರಾಣತಳೆಯುವುದೇ ಭಯಂಕರವಾದ ಸ್ಥಿತಿ ಎನ್ನುವಂತಾದರೆ, ಆಗ ಮಾಡುವುದೇನು ?

ಒಟ್ಟಿನಲ್ಲಿ ಯಾವುದೇ ರಾಜ್ಯದ ಮೂರು ಮುಖ್ಯ ಅಂಶಗಳಾದ, ಅನ್ನ-ಪ್ರಾಣ ಮತ್ತು ಮನಸ್ಸುಗಳು ಸ್ಥಿತ್ಯಂತರಗೊಂಡಾಗ, ಉಂಟಾಗುವ ಸ್ಥಿತಿಯನ್ನು ಈ ಕವನ ಚಿತ್ರಿಸುತ್ತದೆ. ಮುಂದೆ ಇದೇ ರಾಜ್ಯವನ್ನು 'ಲಂಡೋಭಂಡೋ ರಾಜ್ಯ' ಮತ್ತು 'ಕುರುಡರ-ಕುಂಟರ ರಾಜ್ಯ' ಎಂದೂ ಚಿತ್ರಿಸಲಾಗಿದೆ.

ಈಗ ಮತ್ತೊಮ್ಮೆ ಇಡೀ ಕವನದ ಕಡೆಗೆ ಕಣ್ಣು ಹಾಯಿಸೋಣ. ಅನ್ನ ಬಕಾಸುರನ ರಾಜ್ಯದಲ್ಲಿ ಅನ್ನಕ್ಕೇನೂ ಕೊರತೆಯಿಲ್ಲ. ಆದರೆ ಈ ಅನ್ನ ಫಲ ಕೊಡುವಂತಹುದಲ್ಲ—

'ಎಷ್ಟು ತಿಂದರೂ ಏನು ತಿಂದರೂ
ಕೊನೆಗೂ ಬುದ್ಧಿಯು ಬರಲಿಲ್ಲ,
ಮೊದಲೇ ಬುದ್ಧಿಯು ಇರಲಿಲ್ಲ.'

ಅನ್ನ ಇದ್ದ ಮಾತ್ರಕ್ಕೆ ಪುಷ್ಟಿ ದೊರೆತಂತೆ ಆಗಲಿಲ್ಲ. ಅನ್ನವೂ ಬರಡಾಗುವ ಸಂದರ್ಭಗಳು ಇವೆ.

ಪ್ರಾಣಭಯಂಕರ ರಾಜ್ಯದಲ್ಲಿ ಆಸೆಗಳು ಹೇರಳ. ಆಸೆಗಳನ್ನು ಎಲ್ಲಿಯ ವರೆಗೂ ಹತ್ತಿಕ್ಕಲಾಗುವುದಿಲ್ಲವೊ, ಅಲ್ಲಿಯ ವರೆವಿಗೂ ಅದು ಕಾಡುಗಿಚ್ಚಿನಂತೆ.

ಅಲ್ಲದೆ ಪ್ರಾಣದಲ್ಲಿಯೇ ಮೊಳೆತ ಆಸೆ ಪ್ರಾಣಕ್ಕೇ ಗಂಡಾಂತರ ತರುತ್ತದೆ—

‘ಒಬ್ಬರನೊಬ್ಬರು ನೆಕ್ಕಿಯು ಮುಕ್ಕಿಯು
ವಾಸನೆ ತೃಪ್ತಿಯು ತರಲಿಲ್ಲ
ಮೂಗಿಗೆ ಮೂಗೇ ಇರಲಿಲ್ಲ.’

ಮೂಗಿದ್ದರೆ—ಹ್ಯಾವ, ನಾಚಿಕೆ, ಪ್ರತಿಷ್ಠೆ; ತನ್ನ-ಇತರರ ಭೇದಭಾವ, ವಿವೇಕ. ಅದೇ ಇಲ್ಲದೆ, ವಾಸನೆ ತೃಪ್ತಿಯನ್ನು ತರುವುದಾದರೂ ಹೇಗೆ? ಈ ಮೂಗಿಲ್ಲದ ಸ್ಥಿತಿ ಆ ರಾಜ್ಯದ ಅನ್ನ ಬಕಾಸುರ ರಾಜ್ಯದಕ್ಕಿಂತ ಹೆಚ್ಚಿನ ದುಸ್ಥಿತಿಯನ್ನು ತೋರಿಸುತ್ತದೆ. ( ಇಡೀ ಕವನದಲ್ಲಿ ನೈತಿಕ ಅಧಃಪತನವನ್ನೇ ಹೆಜ್ಜೆ ಹೆಜ್ಜೆಯಾಗಿ ಚಿತ್ರಿಸಿರುವುದನ್ನು ಇಲ್ಲಿ ಪರಿಗಣಿಸಬಹುದು. )

‘ಮನಮಂಗಾಸುರ’ನನ್ನು ಕುರಿತು ಹೇಳುವ ಮಾತುಗಳು, ಸಮಕಾಲೀನ ಶಬ್ದಗಳಾದ್ದರಿಂದ ಇನ್ನೂ ಹೆಚ್ಚು ಮಾರ್ಮಿಕವಾಗುತ್ತವೆ—

‘ಮನ ಮಂಗಾಸುರ ರಾಜ್ಯದಲ್ಲಿ
ಮತಕ್ಕೆ ಮೂಲವೆ ಇರಲಿಲ್ಲ
ಕೊಟ್ಟವ ಕೊಟ್ಟ ಬಿಟ್ಟವ ಬಿಟ್ಟ
ಬಂದವಗೂ ಮತಿ ಬರಲಿಲ್ಲ
ಬಾರದವಗೆ ಮತ ಇರಲಿಲ್ಲ.’

ಸಮಕಾಲೀನ ಪ್ರಜಾಸತ್ತೆಯನ್ನು ಕುರಿತು ಇದಕ್ಕಿಂತಲೂ ತೀಕ್ಷ್ಣವಾದ ವಿಮರ್ಶೆ ಬೇರೆ ಬಂದಿಲ್ಲ. ಇನ್ನು ಇಲ್ಲಿ ವಿಡಂಬನೆ ಹೇಗೆ ಸಾಧಿತವಾಗಿದೆ ಎಂದು ನೋಡಬಹುದು. ‘ಮತ’ಕ್ಕೆ ಇರುವ ವಿವಿಧ ಅರ್ಥಗಳನ್ನು ಅನುಲಕ್ಷಿಸಿದರೆ, ಇಲ್ಲಿಯ ವಿಡಂಬನೆಯ ಮೊನೆ ಹೇಗೆ ನಾಟುತ್ತದೆ ಎಂದು ತಿಳಿಯುತ್ತದೆ.

ಇನ್ನು ಲಂಡೋ ಭಂಡೋ ರಾಜ್ಯದಲ್ಲಿ,
‘ಇದ್ದವ ಬಿದ್ದ ಸತ್ತವ ಗೆದ್ದ
ಹೊತ್ತವರೂ ಸರಿ ಹೊರಲಿಲ್ಲ
ಅವರಿಗು ಜೀವವೆ ಇರಲಿಲ್ಲ.’

ಭಂಡತನ ತಂದೊಡ್ಡುವ ಬರಡುತನ ಇಲ್ಲಿ ಸ್ಫುಟವಾಗಿದೆ. ಹಾಗೆಯೇ ಕುರುಡರ ಕುಂಟರ ರಾಜ್ಯದಲ್ಲಿ ‘ಒಗೆತನ-ಹಗೆತನ’ ಬಾಳುವುದೆಂತು? ಎಂಬ ಪ್ರಶ್ನೆ ಮುಂದಿನ ಪದ್ಯದಲ್ಲಿ ಕಾಣಬರುತ್ತದೆ. ಇಲ್ಲಿ ಕೂಡ ಬಂಜೆತನವನ್ನು ಚಿತ್ರಿಸುವ ಸಾಲುಗಳಿಂದ ಕವನ ಮುಕ್ತಾಯವಾಗುತ್ತದೆ—

'ಹೆತ್ತವರೂ ಅದ ಹೆರಲಿಲ್ಲ
ಹುಡುಗರಿಗೂ ಅದು ಬರಲಿಲ್ಲ.'

* * *

ಈ ಕವನಗಳು ಬೇಂದ್ರೆಯವರ ವಿಡಂಬನ ದೃಷ್ಟಿಯನ್ನು ತೋರಿಸುವುದರ ಜತೆಗೆ, ಅವರ ಪ್ರಮುಖ ಕವಿತೆಗಳ ಅಧ್ಯಯನಕ್ಕೂ ಕೂಡ, ಒಂದು ಒಳ್ಳೆಯ ಅಂಶವನ್ನೂ ಹೊರಗೆಡುಹುತ್ತದೆ, ಅದೆಂದರೆ ಅವರ ವಿಡಂಬನಕವಿತೆಗಳಲ್ಲಿನ ಭಾಷೆಯ ಬಳಕೆಗೂ, ಬೇರೆ ಕವನಗಳಲ್ಲಿನ ಭಾಷೆಯ ಬಳಕೆಗೂ ಇರುವ ಸಾಮ್ಯ-ವೈಷಮ್ಯಗಳು. ಈ ದೃಷ್ಟಿಯಿಂದ ಅವರ ಕವಿತೆಗಳ ಅಭ್ಯಾಸ ಮಾಡಿದಾಗ, ಅವರ ಕಾವ್ಯದಲ್ಲಿನ ಒಂದು ಪ್ರಮುಖ ಅಂಶದ ಕಡೆಗೂ ಗಮನ ಹರಿಸಬಹುದು; ಬೇಂದ್ರೆ-ಯವರ ಸಾಮಾಜಿಕ ಕವಿತೆಗಳು, ಅವರ ಆಧ್ಯಾತ್ಮಿಕ ಕವಿತೆಗಳಿಗಿಂತ ಸಫಲವಾಗುವಲ್ಲಿ, ಭಾಷೆಯ ಪಾತ್ರವೇನು ? ಎಂದು.

ಶಬ್ದದ ಗಾರುಡಿಗೆ ಒಳಗಾದ ಬೇಂದ್ರೆಯವರು ವಿಡಂಬನೆಗಳಲ್ಲಿ, ಸಹಜವಾದ ಅತ್ಯುಕ್ತಿ, ವಕ್ರೋಕ್ತಿ, ಶ್ಲೇಷೆಗಳಿಂದ ಸಾಫಲ್ಯತೆ ಪಡೆಯುತ್ತಾರೆ. ಬೇಂದ್ರೆ ದೃಷ್ಟಿಯ ಒಂದು ಮುಖ್ಯ ಎಳೆಯಾದ ವಿಡಂಬನೆ ಅವರ ಕಾವ್ಯದ ಸಮಗ್ರತೆಗೆ ವಿಶೇಷ ಕಸುವು ಕೊಡುತ್ತದೆ. ಆ ವಿಶೇಷ ಕಸುವಿನಿಂದಲೇ ಅವರ ಹಲವಾರು ಯಶಸ್ವೀ ಭಾವಗೀತೆಗಳು, ಗಂಭೀರ ಕವಿತೆಗಳು ವಿಜೃಂಭಿಸುತ್ತವೆ.

§ § § §

೪೪

# ‘ಸಖೀಗೀತ’ದ ಒಂದು ವಿವೇಚನೆ

ಚೆನ್ನಣ್ಣ ವಾಲೀಕಾರ

೧

ಸಖೀಗೀತ–ಗೀತದ ವಿವೇಚನೆಗೆ ಬರುವ ಮೊದಲು, ಗರಿಯಲ್ಲಿಯ ‘ನನ್ನ ಕೈ ಹಿಡಿದಾಕೆ’, ‘ಕುಣಿಯೋಣು ಬಾರs’, ನಾದಲೀಲೆಯೊಳಗಿನ ‘ನಾದಲೀಲೆ’, ‘ಎಲ್ಲಿ-ರುವೆ ರಾಜಗಂಭೀರಾ’, ‘ಸೀ ಹೀಂಗ ನೋಡಬ್ಯಾಡ ನನ್ನ’, ಗಂಗಾವತರಣದ ‘ಕೊಡುವದೇನೂs ? ಕೊಂಬೂದೇನು ?’ ಈ ಎಲ್ಲ ಕವನಗಳ ಪ್ರೌಢಿಮೆ ಕಾಣುವದು ಸಖೀಗೀತದಲ್ಲಿ. ಆದುದರಿಂದ ಅವುಗಳ ಅಧ್ಯಯನ ಸಖೀಗೀತದಷ್ಟೇ ಜರೂರಿನದು. ಆದಿಯಿಂದ ಇಂದಿನ ವರೆಗೆ ಕಾವ್ಯ ಹುಟ್ಟಲು-ಮೊದಲು ಹೆಣ್ಣೇ ಕೇಂದ್ರ ಬಿಂದು. ಹಾಗೆ ಬರೆದಾಗ ಅದನ್ನು ‘ ಸೆಂಟಿಮೆಂಟಲ್ ’ ಎಂದು ಕರೆಯುವದು ತಪ್ಪು. (ಆದರೆ ಮುಂದೆ ಕವಿ ಪ್ರೀತಿ–ಪ್ರೇಮದಲ್ಲಿ ನಿಲ್ಲದೆ, ಜೀವನದ ಹೊಯ್ದಾಟವನ್ನು ತನ್ನದನ್ನಾಗಿ ಮಾಡಿಕೊಳ್ಳುವುದು ಆವಶ್ಯಕ) ಅದು ಆ ವಯಸ್ಸಿನ ಅನ್ನಿ-ಸಿಕೆ, ಸ್ವಂತಿಕೆ, ಪ್ರಾಮಾಣಿಕತೆ. ಇಷ್ಟೇ—ಹೇಳುವ ವಿಧಾನ, ಕಾಣುವ ದೃಷ್ಟಿ ಬೇರೆ ಇದ್ದರೂ ಒಳಗಿನ ಘರ್ಷಣೆ, ಕಾವು ಒಂದೇ. (ಆಗ ಅನುಭವವನ್ನು ನೇರವಾಗಿ ಹೇಳುವ ರೀತಿ–ವಿಜ್ಞಾನಪ್ರಪಂಚದ ಸಂಪರ್ಕದಿಂದ ಈಗ ಸಂಕೀರ್ಣವಾಗಿದೆ) ಬೇಂದ್ರೆಯವರ ಪ್ರಣಯ–ಪ್ರೇಮ, ಪ್ರೀತಿ–ಗೀತಗಳ ಪರಂಪರೆಯಲ್ಲಿ; ಇಂದಿನ ನವ್ಯಕವಿಗಳಾದ ಸಿದ್ಧಲಿಂಗ ಪಟ್ಟಣಶೆಟ್ಟಿಯವರ ‘ನಿನ್ನ ಮರೆಯೂ ಮಾತು’, ನಾಡಿ-ಗರ ‘ಪುಲಲೂಪಿ’; ಲಂಕೇಶರ ‘ಬರೆಯಕೂಡದು ಅಂತ ಮೊಂಡ ಕೂತೆ ಸರೋಜ’ ‘ಕಾಡ-ಬೇಡ ಸರೋಜ’; ಕಣವಿಯವರ ‘ರಂಜನಾ’, ಎಸ್.ಎಸ್. ಲಕ್ಷ್ಮೀನಾರಾಯಣಭಟ್ಟರ ‘ಸಖಿಯೇನೇ ದೀಪಿಕಾ’, ವಾಲೀಕಾರರ ‘ವಸು’, ಜೋಶ್ಯಾಡಿಯವರ ‘ವಿಶಾಲಿ ಅಪ್ಟೇ-ಷನ್’ಗಳು ಬಂದಿದ್ದರೂ ಸಂವೇದನೆ, ಸಂಕೀರ್ಣತೆಯ ದೃಷ್ಟಿಯಿಂದ ಬೇರೆಯಾದವು-ಗಳು. (ಭಾವಗೀತೆಗೆ ಬೇಂದ್ರೆ-ಒಂದು ಯುಗದ ಕವಿಯಾದರೇನಾಯಿತು? ವಿಮರ್ಶೆ ಎದುರು ಎಲ್ಲರೂ ಸಮ.)

೨

‘ಕಾಮಕಸ್ತೂರಿ’ಯಲ್ಲಿ ತೋರಿದ ಶೃಂಗಾರ ‘ಗರಿ’ ‘ನಾದಲೀಲೆ’ ‘ಗಂಗಾವತರಣ’ ದಲ್ಲಿಯ ಪ್ರೀತಿಗೆ ಗೌರವ ಭಾವ ಬಂದದ್ದು ಸಖೀಗೀತದಲ್ಲಿ. ಕಾಮಕಸ್ತೂರಿ, ನಾದ ಲೀಲೆಯಲ್ಲಿ ಹೆಣ್ಣು, ಬೇಂದ್ರೆಯವರ ಕಣ್ಣಿಗೆ ಪ್ರಣಯಿನಿಯಾಗಿ, ಚಂಚಲಳಾಗಿ ಕಂಡಳು. ಸಖೀಗೀತದಲ್ಲಿ ಪ್ರಣಯ ಸ್ನೇಹಕ್ಕೆ ತಿರುಗಿಕೊಂಡಿತು. ಹೃದಯಕ್ಕೆ ಸೇರಿಕೊಂಡಿತು. ಮುಂದಿನ ಕವನಗಳಲ್ಲಿ ಆ ಸಖ್ಯ–ಮಾತೃತ್ವವನ್ನು ಹೊಂದಿತು.

ಕವಿ, ತಮ್ಮ ಸಂದರ್ಭಸೂಚಿಯಲ್ಲಿ ತಿಳಿಸಿದಂತೆ ತಮ್ಮ ಜೀವನಕಥೆಯ ಹಂದ-ರದ ಮೇಲೆ ಸಾಮಾನ್ಯ ಸಂಸಾರದ ಸುಖ–ದುಃಖದ ಹಂಬನ್ನು ಹಬ್ಬಿಬಿಟ್ಟಿದ್ದಾರೆ. ಅಗ್ನಿಸಾಕ್ಷಿಯಾಗಿ ಬಂದ ಹೆಣ್ಣಿನ ಸ್ನೇಹದ ವಿವಿಧ ರೂಪಗಳನ್ನು ತೋರಿಸಿದ್ದಾರೆ. ಕವಿಜೀವನದ ಹಿನ್ನೆಲೆಯಲ್ಲಿ ನಾವು ಈ ಸಖೀಗೀತವನ್ನು ಓದುತ್ತ ಹೋದಂತೆಲ್ಲ–ಅದರಲ್ಲಿ ಒಂದಾಗದೆ ಇರಲಾರೆವು.

ಶೃಂಗಾರ ಸುಖಜೀವನಕ್ಕೆ ಹಾದಿ. ಗಂಡ–ಹೆಂಡಿರ ಪ್ರಣಯ ಜೀವನದಲ್ಲಿ ಸಖ್ಯ ಕೇಂದ್ರಬಿಂದು. ಜೀವನವನ್ನು ರಮ್ಯವಾಗಿ ಸಾಗಿಸಿಕೊಂಡು ಹೋಗು-ವದೇ ಸಖೀಗೀತದ ನಾಯಕನ ಉದ್ದೇಶ. ಈ ಉದ್ದೇಶದಲ್ಲಿ ಬೇಂದ್ರೆಯವರು ಹೆಣ್ಣನ್ನು ಕಾಣುವ ರೀತಿ ಗೊತ್ತಾಗುವದು. ‘Love is a divine senti-ment’ ‘O woman, you are not merely the hand work of God, but also of man’ ಈ ವಿಚಾರದ ಸ್ಪರ್ಶ ಸಖೀಗೀತದ ತುಂಬ ಹತ್ತಿಕೊಂಡದ್ದು ಗೋಚರಿಸುವದು. ಬೇಂದ್ರೆಯವರ ಹಿಂದೆ ಶೆಲ್ಲಿ, ಕೀಟ್ಸ್ ನಿಂತಿ-ದ್ದರೂ ಅವರಿಂದ ಬಿಡಿಸಿಕೊಂಡು ಕನ್ನಡದ ನೆಲದಲ್ಲಿ ನಿಂತದ್ದು ಮುಖ್ಯ. (ಅದೇ ನವ್ಯರು ಹೇಳುವ ಮಣ್ಣಿನಗುಣ–ವಾಸನೆ ಎಂಬುವದು).

೩

ಹಿಪ್ಪಿ, ಕ್ರೇಜಿಗಳ ಕಾಲದವರಾದ ನಾವು ಸಖೀಗೀತವನ್ನು ಭಾರತೀಯ ಕುಟುಂಬದ ಪರಂಪರೆಯ ಮೇಲೆ ನೋಡಬೇಕು. ಇಲ್ಲಿಯದು ಮದುವೆಯ ನಂತರದ ಪ್ರಣಯ–ಪ್ರೀತಿ. ಇಲ್ಲಿ ಉದ್ರೇಕ, ಉನ್ಮಾದಕ್ಕೆ ಎಡೆಯಿಲ್ಲ. ಸಖೀಗೀತದಲ್ಲಿ ಕೌಟುಂಬಿಕಜೀವನದ ಜೊತೆಗೆ ಸಾಮಾಜಿಕ, ರಾಷ್ಟ್ರೀಯ ಜೀವನ ಸುಳಿದು-ಹೋಗುವುದು. ನಾಯಕನ ಪಾತ್ರಕ್ಕೆ ಕಳೆತರುವದು. ಈ ಗೀತದ ಕೇಂದ್ರ ವಸ್ತು ‘ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೆ’ – ಓದುಗನನ್ನು ಕ್ರಮೇಣ ಆಳಕ್ಕೊಯ್ದು ಯೋಚಿಸಲು ಹಚ್ಚುವದು.

ಸಖಿ ! ನಮ್ಮ ಸಖ್ಯದ ಆಖ್ಯಾನ ಕಟುಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ

ಎಂದು ಪ್ರಾರಂಭಿಸಿದ ನಾಯಕ ತನ್ನ ಜೊತೆಗಾರ್ತಿಯನ್ನು ಸುಖದುಃಖ-ಸಂಗಮವಾದ ಹೃದ್ರಂಗದಲ್ಲಿ ಮೀಯಲಿಕ್ಕೆ ಕರೆಯುವನು. ಮದುವೆಯ ದಿನದ ಸಂಜೆಯನ್ನು ನೆನೆಸಿಕೊಳ್ಳುವನು.

ಅಂತಃಪಟದಾಚೆ ವಿಧಿ ತಂದ ವಧು ನೀನು
ಮಾಲೆಯ ಸಾವರಿಸಿ ನಿಂತಿದ್ದೀಯೆ........

* * * *

ಆಟದ ಕನ್ನಿಕೆ ಮಂಗಳ ಲಗ್ನಕೆ
ಮಾಲೆಯನಿಕ್ಕುತ ಮಡದಿಯಾದೆ........

* * * *

ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ
ಏಕಾಂತಕೆಳಸಿದೆ ಎಲೆ-ಕೆಳದಿಯೆ........

* * * *

ಸವಿಬಂತು ಮುನಿಸಿಗು ಕಳೆಬಂತು ಕನಸಿಗು
ಮೋಹದ ಮಾಟವನೆಸಗುತಿರೆ

ನಾಯಕಿ ಚೊಚ್ಚಿಲು ಬಸುರಿಯಾಗುವಳು. ಮುಂದೆ ಚೊಚ್ಚಿಲು ಬಸಿರು ಕಳೆದುದರಿಂದ ಮೊದಲಿನ ಹುಮ್ಮಸು ಮನೆಯಲ್ಲಿ-ಹುದುಗಿಹೋಯಿತು. ಇಲ್ಲಿಂ-ದಲೇ ಜೀವನದಲ್ಲಿಯ ಏರಿಳಿವುಗಳಿಗೆ ಆರಂಭಿಸಿತು. ಸೊಸೆಯ ಮರುಚಲು ಮಗು ಕಾಣದ ಮೊದಲೇ ನಾಯಕನ ತಾಯಿಯ ಸಾವಾದದ್ದು ವಿರಹಕ್ಕೆ ಹಾದಿ ಮಾಡಿ-ಕೊಟ್ಟಿತು. ಮತ್ತೆ ಮಗುವಿನ ಬರವಿನಿಂದ ಹರುಷ ಹರಿದುಬಂತು.

ಹುಡುಗನ ಒಡ ನಾವು ಹುಡುಗಾಟ ಮಾಡಿದೆವು
ಹುಡುತಗನವು ಮರಳಿ ಬಂದಿತೆನೆ
ಒಡಕು ಕಣ್ಮರೆಯಾಗಿ ಮಿಡುಕು ಮರೆತಂತಾಗಿ
ಹುಡುಕಿದೆವು ಇನ್ನೊಂದು ಲೋಕವನೆ

ಎಂದರೂ ಬೇಸರ ಅಲ್ಲಲ್ಲಿ ಕಾಣಿಸಿಕೊಳ್ಳುವದು. ಕಥೆ-ಕಾದಂಬರಿಗಳಿಂದ ಆಗಾಗ ತೋರುವ ಬೇಜಾರು ದೂರಾಗುವದಿಲ್ಲ. ಮಕ್ಕಳ ಯೋಗಕ್ಷೇಮದಲ್ಲಿ

ಸುಖದುಃಖದ ದಿನಗಳು ಉರುಳಿ ಹೋಗುವವು. ಒಮ್ಮೆಲೆ ಪ್ರವಾಹ ಬಂದಂತೆ ಸುಖ ಬರುವುದು. ಮುಂದೆ ಗಾಂಧೀಜಿಯವರ ಪ್ರಭಾವದಿಂದ ನಾಯಕ-ನಾಯಕಿಯರ ಜೀವನದಲ್ಲಿ ರಾಷ್ಟ್ರೀಯ ಜೀವನ ಪ್ರವೇಶಿಸುವದು. ಜಯಕರ್ನಾಟಕ ಕಟ್ಟಿದ ಕೈ 'ನರಬಲಿ' ಬರೆಯಿತು.

ನರಬಲಿ ಕವನವು ಬಲಿಮಾಡಿತೆನ್ನನು
ಹೆಳವನಿದ್ದಲ್ಲಿಗೆ ಹೊಳೆ ಬಂದಿತು

'ನರಬಲಿ' ಬರೆದುದಕ್ಕಾಗಿ ಸೆರೆಮನೆಗೆ ಹೋಗಿ ಬರಬೇಕಾಯಿತು. ಕೆಲವು ದಿನ ಕನ್ನಡಕ್ಕೆ ನಾಯಕತ್ವ ಬಂತು. ಮತ್ತೆ ಸುಖ ಸಂಸಾರ.

ಕಲ್ಯಾಣ-ಶಕ್ತಿಯ ಕೈಯ ಕುಶಲತೆಯಿಂದ
ಪಾಕವಾಗಲಿ ಪ್ರೇಮ ಎನ್ನುವೆನೇ

ಎಂದ ನಾಯಕ (ಕವಿ) ಕೊನೆಗೆ 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೆ' ಎಂದು ಹೇಳಿ ನಮ್ಮನ್ನು ಮತ್ತಷ್ಟು ಯೋಚನೆಯ ಆಳಕ್ಕಿಳಿಸುವನು.

೪

ಬೇಂದ್ರೆಯವರ ಸಖೀಗೀತ-ದಾಂಪತ್ಯ ಜೀವನದ ಕೈಗನ್ನಡಿ. ಭಾರತೀಯ ಸಂಸ್ಕೃತಿ-ಚಿತ್ರಣ. ಮಣ್ಣಿನ ಗುಣ, ವಾಸನೆಯಿಂದ ಮೂಡಿಬಂದದ್ದು. (ಆಗಿನ ಕಾಲಕ್ಕೆ ತಕ್ಕಂತೆ) ಇಲ್ಲಿ ಕಾಣುವ ಹೆಣ್ಣು ಗರತಿ ಗಂಗವ್ವನ ಕುಲದವಳು,

ನಿಮ್ಮೆದೆ ಎತ್ತರಕೆ ನಾವೇನು ಬಂದೇವು
ಕಲಿತವರ ಜೆಡಗಿಲ್ಲ ನಮ್ಮ ಕಡೆ
ನಿಮ್ಮ ಕಣ್ಮುಂದೆಯೇ ಕಣ್ಮುಚ್ಚಿದರೆ ಸಾಕು
ಗೆದ್ದೆವು......................

ಎನ್ನುವ ಸ್ವಭಾವದವಳು.

ಆಗೀಗ ಸಖಿ ನೀನು ನಸುನಕ್ಕು ದುಃಖದಿ
ದುಃಖವ ಹಗುರಾಗಿ ಮಾಡದಿರೆ

ಕಾಯುವ ಕರುಳೊಂದು ಬೆಂಗಾವಲಿರದೆಯೆ
ದೇಶಾಂತರದಲ್ಲಿ ಬದುಕಿದೆನೇ

ಎಂದು–ನಾಯಕನಿಂದ ಹೊಗಳಿಸಿಕೊಂಡವಳು. ಕವಿ 'ನನ್ನ ಪಾಲಿಗೆ ಮಾತ್ರ ಹೇ ಪ್ರೇಮದೇವತೆ'— ಎನ್ನುವ ಹಂತಕ್ಕೆ ಬೆಳೆದುಕೊಂಡವಳು. ರಸ-ಭಾವಗಳಿಂದ ಮೂರ್ತಗೊಂಡವಳು.

ಸಖೀಗೀತದ ದಾಂಪತ್ಯಜೀವನದೊಳಗಡೆ ಎಷ್ಟೋ ಚರ್ಚಿಸಬೇಕಾದ ವಿಷಯಗಳು ಅಡಗಿಕೊಂಡದ್ದು ಗೀತ ಓದುತ್ತಿದ್ದಂತೆ ಗೊತ್ತಾಗುವದು.

ಗಾಣಿಗಗೆ ಸಿಟ್ಟಾಗಿ ಒಣರೊಟ್ಟಿ ತಿಂದಂತೆ

* * * *

ಹಾದಿಯ ದೆವ್ವ ಮನೆಯೊಳಗೆ ಕರೆದಂತೆ

* * * *

ಎಂಬ ಗಾದೆಯ ಮಾತುಗಳು

ಹೊಸ ಪಟ್ಟಣವ ಹೊಕ್ಕು ಹಾದಿ ತಪ್ಪಿಸಿಕೊಂಡ
ಎಬಡ ಹಳ್ಳಿಗನಂತೆ...........

* * * *

ಜೋಡಿ ಇಲ್ಲದ ಎತ್ತು ಎಳೆದಾಡುವ ಗಾಡಿ
ನಡೆದಂತೆ...............

* * * *

ಮಿಡಿತೆಯ ಉಪಟಳ ಹೊಲದುದ್ದ ಬರುವಂತೆ

ಎಂಬ ಶಬ್ದಚಿತ್ರಣಗಳು.

ಬಂದಿತು ಶ್ರಾವಣ ಹೃದಯ ವಿದ್ರಾವಣ

ಎಂದು ಶ್ರಾವಣದ ಚಿತ್ರ.

ಬಡವರ ಅಲೆದಾಟ, ಹೊಟ್ಟೆಯ ಬೆಂಬತ್ತಿ
ಗುಳೆಯೆತ್ತಿ ಹೊರಟವರ ಹೋರಾಟವು
ದುಡಿವರ ತಿರುಕರ ಕೂಲಿಕುಂಬಳಿಯವರ
ಜೀವನ ಮೂಡಿರೆ ಹಾದಿಯೊಳೆ

ಎನ್ನುವಲ್ಲಿ ಕೊಟ್ಟಿರುವ ಸಾಮಾಜಿಕ ಚಿತ್ರಣಗಳು ಓದಿ ನೆನಪಿನಲ್ಲಿಡು-ವಂಥವು. ಇದು ಸಖೀಗೀತವಾದ್ದರಿಂದ (ದೇಸಿಗೆ ಬೇಂದ್ರೆ ಎನ್ನುವದು—ಸಖೀಗೀತದಲ್ಲಿ ಕಡಿಮೆ) ಗ್ರಂಥಸ್ಥ ಸುಸಂಸ್ಕೃತ ಭಾಷೆ ಬಂದರೂ 'ಹಿಂಗೊಬ್ಬ ಅರಸಿದ್ದ' 'ಗುಜು ಗುಜು ಮಾಪುರೆ' 'ಅಡಿ ಬಾ ಎನ ಕಂದ' 'ತಾಯಿ ಕಾಣದ ಜೀವ

ತಾವೂರಿ ಬಾವೂರಿ', 'ಕಿಂ ಖೀಲಿ ಲಿಲಿಲೀಲಿ', 'ಏ ಹುಡುಗ, ಎಲೆ ಹುಡುಗಿ', 'ಹೋ', 'ಅಯ್ಯೋ ದೇವರೆ' ಎನ್ನುವ ಜನಸಾಮಾನ್ಯರ ಪದಪ್ರಯೋಗವಾದದ್ದು ಗಮನಿಸುವಂಥದ್ದು.

ಇದು ಸಖೀಗೀತ — ಖಂಡ ಕಾವ್ಯ. ನವ್ಯ ಸಂವೇದನೆಯನ್ನರಸುವ ದೃಷ್ಟಿಯಿಂದ ಇದನ್ನು ಓದಿದರೆ ಬಿಳಿಹಾಳೆಯ ಮೇಲೆ ಸುಮ್ಮನೆ ಟೈಪ್ ಹೊಡೆದ ಅಕ್ಷರಗಳಾಗಿ ಕಾಣಿಸುವವು. ಈ ವಿಚಾರ ಕಾಳಿದಾಸ, ರವೀಂದ್ರನಾಥರ ಕಾವ್ಯಕ್ಕೂ ಅನ್ವಯಿಸುವದು.

§ § § §

೪೫

# ಅಂಬಿಕಾತನಯದತ್ತರ 'ಚೈತನ್ಯದ ಪೂಜೆ'

**ದೇವೇಂದ್ರಕುಮಾರ ಹಕಾರಿ**

ಚೈತನ್ಯ ಎನ್ನುವುದು ಒಂದು ಅಮೂರ್ತ ಕಲ್ಪನೆ. ವಾಸ್ತವ ಜೀವನದ ಅನುಭವಗಳ ಒಡಲಿಂದ ರೂಪುಗೊಂಡು ಅಂತರಂಗದ ಆಳದಿಂದ ಸುಳಿದಿರುಗಿ ಮೇಲೆಳುವ ಒಂದು ಅಪ್ರತಿಮ ತೇಜಸ್ಸಿನ ಹೊಮ್ಮುಗೆ. ಅಪರಿಮಿತವಾದ ಪ್ರಪಂಚ ವನ್ನು ಸೃಷ್ಟಿಸಿ, ಆಕಾಶಕಾಯಗಳನ್ನು ಸೃಜಿಸಿ, ಅದರಲ್ಲಿ ಅಖಂಡ ಜೀವಕೋಟಿ-ಗಳನ್ನು ನೆಲೆಗೊಳಿಸಿ, ಈ ಎಲ್ಲ ವಿಭಿನ್ನಾಂಶಗಳನ್ನು ಒಂದು ನಿಯತಗತಿಯಲ್ಲಿ ಸೂತ್ರಿಸುವ ಮಹಾಶಕ್ತಿಯ ಪ್ರಜ್ಞೆ, ಎಚ್ಚರದಲ್ಲಿಯೇ ಚೈತನ್ಯದ ಆವಿಷ್ಕಾರ. ಭೌತದೃಷ್ಟಿಗೆ ಅದು ಅಮೂರ್ತವಾದರೂ ಇಂದ್ರಿಯಾತೀತ ಅನುಭಾವಕ್ಕೆ ಅದು ಮೂರ್ತರೂಪ. ಇಂಥ ಚೈತನ್ಯ ಅದು ಅನಾದಿಕಾಲದಿಂದ ಅಗಣಿತ ರೂಪಗಳಲ್ಲಿ ಪೂಜೆಗೊಳ್ಳುತ್ತ ಬಂದಿದೆ-ಇಂದೂ ಪೂಜೆಗೊಳ್ಳುತ್ತಿದೆ. 'ನಾನು', 'ತಾನು' ಎನ್ನುವ ಸ್ಥಿತಿ ಹೊಂದಿ-ದಾಗ ಚೈತನ್ಯ ಮಾತ್ರ ಅಸ್ತಿತ್ವದ ಕಣ್ಣು. ಆಗ ಸಿಪ್ಪೆರಗಿನಿಂದ ಜೀವ ಚೈತನ್ಯ ಸ್ವರೂಪ ಹೊಂದಿ ಚೈತನ್ಯದ ಪೂಜೆ ಕೈಕೊಳ್ಳುತ್ತದೆ. ಬಹಿರಂಗದ ಆರಾಧನೆಯ ವಿವಿಧರೂಪಗಳನ್ನು, ನಾಮರೂಪಕ್ರಿಯೆಗಳನ್ನು ಮೀರಿ, ಅಂತರಂಗದ ಅರಿವಿನ ಬಯು-ಲಲ್ಲಿ ಈ ಪೂಜೆ ಉಸಿರುಸಿರಿನ ಕುಸುರಾಗಿ ಚಿಮ್ಮುತ್ತದೆ. ಈ ಹಂತದಲ್ಲಿ ವ್ಯಕ್ತಿ ಆ ಪೂಜೆಗೆ ತಾನು ಕೇವಲ 'ಸಾಕ್ಷಿ'ಯಾಗಿ ನಿರುಕಿಸಿ, ಆ ಅನುಭಾವದ ನಿಲುಗಡೆಯನ್ನು ವಿವರಿಸುತ್ತಾನೆ. ತನ್ನ ಒಳಗೇ—ತನ್ನ ಕಣ್ಣೆದುರಿಗೇ ನಡೆಯುವ ಈ ಪೂಜೆಯನ್ನು ಕವಿ ಅಂಬಿಕಾತನಯದತ್ತರು ಅಭಿವ್ಯಕ್ತಿಸುವ ರೀತಿ :

> 'ಚೈತನ್ಯದ ಪೂಜೆ ನಡೆದ್ಽದ
> ನೋಡಽ ತಂಗಿ || ಅಭಂಗದ ಭಂಗಿ ||'

ಇದಕ್ಕೆ ಭಂಗವಿಲ್ಲ. ಅನಂತಕಾಲದಿಂದಲೂ ನಿರಂತರವಾಗಿ ನಡೆದಿದೆ.[1]

---

1. ಹೋಲಿಸಿ : ಆಡುತೈದಾಳೆ ಮಾಯೆಯೆಂಬ ಕಾಮಿನಿ ಬಿಡದೆ ನೋಡಿ ಬಲ್ಲವರು-ಸಂಸಾರ ನಾಟಕವಾ'. — ನಿಜಗುಣ ಶಿವಯೋಗಿ

ಕನ್ನಡ ಸಾಹಿತ್ಯದ ಹಾಡುಗಬ್ಬಗಳ ಪರಂಪರೆಯಲ್ಲಿ ನಿಜಗುಣ ಶಿವಯೋಗಿ, ಪುರಂದರದಾಸರು, ಮುಪ್ಪಿನ ಷಡಕ್ಷರಿ ಮುಂತಾದವರ ಕೆಲವು ರಚನೆಗಳಲ್ಲಿ ಇಂಥ ಪೂಜಾ ಕಲ್ಪನೆ ಅಲ್ಲಲ್ಲಿ ಮೂಡಿದ್ದು, ಅವು ಆಯಾ ಧರ್ಮದ ಮತ್ತು ಅಂದಿನ ಕಾಲದ ಸಂವೇದನೆಗಳನ್ನು ಸಮನ್ವಯಗೊಳಿಸಿ ರೂಪು ತಾಳಿವೆ.

ಮುಪ್ಪಿನ ಷಡಕ್ಷರಿಗಳ ಒಂದು ರಚನೆಯಲ್ಲಿ:

ಲಿಂಗಪೂಜೆಯ ಮಾಡಿರೋ| ನಿಮ್ಮೊಳಿ ಪ್ರಾಣ
ಲಿಂಗಪೂಜೆಯ ಮಾಡಿರೋ...........

ಎನ್ನುವ ಮಾತು ಬೋಧಾರೂಪದಲ್ಲಿ ಬರುತ್ತವೆ. ಅವರ ಈ ರಚನೆಯಲ್ಲಿ 'ಗಂಗೆ ಯಮುನೆಗಳ ಸಂಗಮದಲ್ಲಿ' ಮೀಯುವುದು ಕೋಮಲಭಾವ ಕುಸುಮಗಳನ್ನು 'ಕರಣೇಂದ್ರಿಯಗಳೆ'ಂಬ ಮಿನುಗುವ ಅಕ್ಷತೆಗಳನ್ನು ಸಮರ್ಪಿಸುವುದು–ಈ ಎಲ್ಲ ಮಾತುಗಳು ಸಾಂಕೇತಿಕವಾಗಿ ಮೂಡಿದರೂ, ಈ ರಚನೆ ಬೋಧೆಯ ಹಂತದಲ್ಲಿ ಅರಳಿ ನಿಲ್ಲುತ್ತದೆ.

ಅಂಬಿಕಾತನಯರ 'ಚೈತನ್ಯಪೂಜೆ' ಬೋಧೆಯಾಗಿರದೆ ಸ್ವಾನುಭವದ ನೆಲೆಗಟ್ಟಿನ ನಿಸ್ಸೀಮ ಸ್ತರದಲ್ಲಿ ಸಮನಿಸುವ ಚೈತನ್ಯ ಪೂಜಾನುಸಂಧಾನದ ವಿವರಣೆ ಯಾಗಿದೆ. ಇದರಿಂದ ಈ ರಚನೆಯ ದೃಷ್ಟಿ ದಾರ್ಶನಿಕ ಕ್ಷಿತಿಜದ ಅಂಚನ್ನು ಸ್ಪರ್ಶಿಸುವ ಹವಣಿಕೆಯಲ್ಲಿರುವುದು ಗಮನಾರ್ಹ.

ಪೂಜೆಯ ಮೊದಲ ಹೂವು ಸೌಜನ್ಯವಾದರೆ ವ್ಯಕ್ತಿಯ ಬಿಡಿಯಾದ ದೃಷ್ಟಿಕೋನ ಇಡಿಯಾಗಿ ಅರಳಲು ಸಾಧ್ಯವಾಗುತ್ತದೆ. ಜೀವನವನ್ನು ಪರಿವೀಕ್ಷಿಸುವ ಈ ಅಖಂಡದೃಷ್ಟಿಯ ಹಂಬಲು 'ಅರಳೋಣ ನಾವೂ ನೀವೂ' ಎನ್ನುವ ಅಭಿವ್ಯಕ್ತಿಗಾಗಿ ತುಡಿಯುತ್ತದೆ. ಆಗ ಮಾನವನ ಉದಾತ್ತ ಗುಣಗಳು ಜೀವನದ ಮೌಲ್ಯಗಳಾಗಿ ರೂಪತಳೆದು ಅರ್ಚನೆಯ ವಿವಿಧ ವಸ್ತುಗಳಿಗೆ ಸಾಂಕೇತಿಕ ಸ್ವರೂಪಪ್ರಾಪ್ತವಾಗುತ್ತದೆ. ಸಾಮರ್ಥ್ಯ ಬೆಲಪತ್ರಿ, ಸತ್ಯ ನಿತ್ಯದ ದೀಪ, ಪ್ರೀತಿ-ನೈವೇದ್ಯ. ಲೌಕಿಕಸ್ತರದ ಮೇಲೆ ಆರಂಭಗೊಂಡ ಪೂಜೆ, ಅಂತರಂಗದ ಆಳದಲ್ಲಿ ಆವಿಷ್ಕಾರಗೊಳ್ಳುತ್ತದೆ. 'ಇದು ಎಲ್ಲರ ಹೃದಯಸಂವೇದ್ಯ'. ಪ್ರಾಂಜಲಮನದ ಆನಂದ ತರಂಗಗಳು – ಸಪ್ತಸರ ಸಂಯೋಜನೆಯಾಗಿ, ಗೀತವಾಗಿ, 'ಸಾಮವೇದ'ವಾಗಿ ಹೊಮ್ಮುತ್ತವೆ.

ಆಗ ವ್ಯಕ್ತಿಯು ನಿಸ್ಸೀಮ ಸ್ತರದಲ್ಲಿ ಅತೀತ ಚೈತನ್ಯದ ಆವಿಷ್ಕಾರ. ವ್ಯಕ್ತಿಯ

ಆತ್ಮ, ಅಂತರಂಗ-ಬಹಿರಂಗಗಳ ಗಡಿಗಳನ್ನು ದಾಟಿ 'ಪರಮಾತ್ಮ' ಸ್ವರೂಪ ಹೊಂದುತ್ತದೆ. ಅಲ್ಲಿ 'ಮನ' ಬರೀ ಮನವಲ್ಲ, 'ಘನವೋ ಘನ', 'ಘನಮನ', ಇದೊಂದು ಮಹಿಮೆ, ಲೀಲೆ.

ಅಂಬಿಕಾತನಯರ ಈ ಕವಿತೆ 'ಚೈತನ್ಯದ ಪೂಜೆ' ವ್ಯಕ್ತಿನಿಷ್ಠ ಸ್ತರ-ದಿಂದ ಮೊದಲುಗೊಂಡು, ಅದನ್ನು ಒಡಗೂಡಿಕೊಂಡೇ ವಸ್ತುನಿಷ್ಠ ಸ್ತರದ ದರ್ಶಕಧ್ವನಿಯ ಸಂಕೇತವಾಗಿದೆ.

§ § § §

೪೭

# 'ಬಾರೊ ಸಾಧನಕೇರಿಗೆ'

ವರದರಾಜ ಹುಯಿಲಗೋಳ

'ಬಾರೊ ಸಾಧನಕೇರಿಗೆ' ಕವನವು ಸರಳವಾದ, ಸಹಜ ಸುಂದರವಾದ ಭಾವ-ಗೀತೆ. ಈ ಕವನವು ತಮ್ಮ ಮನೆಯ ಸುತ್ತಲಿನ ನಿಸರ್ಗದ ಚಿತ್ರವಾಗಿದೆಯೆಂದೂ, ಇದೊಂದು ಕೌಟುಂಬಿಕ ಭಾವಗೀತೆಯೆಂದೂ ಭಾವಸಂದರ್ಭ ಸೂಚನೆಯಲ್ಲಿ ಅಂಬಿಕಾತನಯದತ್ತರು ಹೇಳಿರುವರು. 'ಕೌಟುಂಬಿಕ ಭಾವಗೀತೆ' ಎಂಬ ವರ್ಗೀಕರಣವು ನವೀನವಾದುದು; ಭಾವಗೀತೆಗಳನ್ನು ಹೀಗೆ ವರ್ಗೀಕರಿಸುವುದು ವಿರಳ.

ಅಂಬಿಕಾತನಯದತ್ತರು ಧಾರವಾಡ–ಗೋವಾ ರಹದಾರಿಯಲ್ಲಿರುವ ಸಾಧನ-ಕೇರಿಯ ಸ್ವಂತ ಮನೆಯಲ್ಲಿ ಅನೇಕ ವರುಷಗಳಿಂದ ವಾಸವಾಗಿರುವರು. ಆದುದ-ರಿಂದ ಸಾಧನಕೇರಿಯ ಬಗ್ಗೆ ಆತ್ಮೀಯತೆ ಮತ್ತು ಅಭಿಮಾನ ಯಥೇಚ್ಛವಾಗಿರು ವುದು ಅತ್ಯಂತ ಸಹಜವು. ಇಂಥ ಭಾವನೆಗಳು ಕವಿಯ ಹೃದಯದಲ್ಲಿ ಸ್ಫೂರ್ತಿಯ ಸೆಲೆಯಾಗಿ ಚಿಮ್ಮಿ ಹೇಗೆ ಅಭಿವ್ಯಕ್ತವಾಗಿವೆಯೆಂಬುದನ್ನು 'ಬಾರೊ ಸಾಧನಕೇರಿಗೆ' ಕವನದಲ್ಲಿ ನಿರೀಕ್ಷಿಸಬೇಕು.

ಕವಿಯ ಜೀವ ಸಾಧನಕೇರಿಯಲ್ಲಿಯೇ, ಸಾಧನಕೇರಿಯಲ್ಲಿಯ ನಿಸರ್ಗದ ಚೆಲುವಿನಲ್ಲಿಯೇ ಸೀಮಾತೀತವಾದ ಅಮಿತಾನಂದವನ್ನು ಪಡೆದಿದೆ. ದ. ರಾ. ಬೇಂದ್ರೆ ಅವರು ನೌಕರಿಗಾಗಿ ಪುಣೆ, ಸೊಲ್ಲಾಪೂರ, ಗದಗ ಹೀಗೆ ಬೇರೆ ಬೇರೆ ಊರುಗಳಿಗೆ ಹೋಗಿರಬಹುದು; ಉಪನ್ಯಾಸಗಳಿಗಾಗಲಿ ಅಥವಾ ಕನ್ನಡದ ಸೇವೆ ಗಾಗಲಿ ವಿವಿಧ ಸ್ಥಳಗಳಿಗೆ ಅಲೆದಾಡಿರಬಹುದು. ಆದರೆ ಗಾಳಿಪಟ ಆಕಾಶದಲ್ಲಿ ಹಾರಾಡುತ್ತಿದ್ದರೂ, ಅದರ ಸೂತ್ರದ ಎಳೆ ಕೈಯಲ್ಲಿಯೇ ಇರುವಂತೆ ಅಂಬಿಕಾ-ತನಯದತ್ತರಿಗೆ ಸಾಧನಕೇರಿ ಸ್ಥಳವಾಗಿದೆ. ಅವರ ಆತ್ಮಾನಂದದ ಕೇಂದ್ರ ಬಿಂದು ಎಂದಿಗೂ ಸಾಧನಕೇರಿ!

ಬಾರೊ ಸಾಧನಕೇರಿಗೆ
ಮರಳಿ ನಿನ್ನೀ ಊರಿಗೆ

—ಎಂದು ತಮ್ಮ ಜೀವಕ್ಕೆ ಕೇಳಿಕೊಂಡಿದ್ದಾರೆ. ಮನೆಯ ಸುತ್ತುಮುತ್ತಲಿನ ನೈಸರ್ಗಿಕ ಸೌಂದರ್ಯವೇ ಕವಿಯ ಊರು ಆಗಿದೆ. ಮತ್ತೆ ಮತ್ತೆ ಸಾಧನಕೇರಿಗೆ ಕವಿ ಮರಳಿ ಬಂದಂತೆ, ತನ್ನ ಮನೆಗೆ ಬಂದು ಆನಂದದ ತನ್ಮಯತೆಯನ್ನು ಹೊಂದಿದಂತೆ ಕವಿಗೆ ಅನುಭವವಾಗುತ್ತದೆ.

ಸಾಧನಕೇರಿಯ ಏರಿಯಲ್ಲಿ, ಮನೆಯ ಮುಂದಿನ ದಾರಿಯಲ್ಲಿ, ಎಲ್ಲ ಎಡೆಗಳಲ್ಲಿ ಹಚ್ಚಹಸಿರು ತುಂಬಿಕೊಂಡಿದೆ. ಅಲ್ಲಿ ಅಡವಿಹೂಗಳು ಕಂಗೊಳಿಸಿವೆ. ಮರಗಳು ಮುಗಿಲಿಗೆ ನೀಡಿವೆ. ಪಾತರಗಿತ್ತಿಗಳು ಗುಂಪಾಗಿ ಕುಣಿಯುತ್ತಿವೆ. ಕೋಗಿಲೆ-ಪಕ್ಷಿಗಳಿಗೆ ಸವಿ ಕೊರಳಿದೆ. ನಿಸರ್ಗರಮ್ಯತೆಯು ನೂರಾರು ತೆರನಾಗಿ ತನ್ನ ದರ್ಶನ ಮಾಡಿಕೊಟ್ಟಿದೆ ಕವಿಗೆ. ಇಂಥ ಚೆಲ್ವಿಕೆ ರಸವಂತಿಕೆಯಾಗಿ ರೂಪಗೊಂಡಿದೆ ಈ ಕೌಟುಂಬಿಕ ಭಾವಗೀತೆಯಲ್ಲಿ.

ಅಂಬಿಕಾತನಯದತ್ತರ ಕಾವ್ಯದ ಸೊಗಸು ಅವರ ಯಥೋಚಿತವಾದ ಸಮರ್ಥ-ಸುಂದರ ರೂಪಕಗಳಲ್ಲಿದೆ. ಅವರ ಕವನಗಳ ಸಾಲು-ಸಾಲುಗಳಲ್ಲಿಯೂ ಇಂಥ ರೂಪಕಗಳ ಸರಸವನ್ನು ಸವಿಯಬಹುದು. ಕವನದ ಪ್ರಾರಂಭದಲ್ಲಿಯೇ—"ಬಾರೊ ಸಾಧನಕೇರಿಗೆ, ಮಳೆಯು ಎಳೆಯುವ ತೇರಿಗೆ" ಎಂದು ಆ ಮಲೆನಾಡಿನ ಮಳೆಯ ಸೌಂದರ್ಯವನ್ನು ಬಹು ಸೊಗಸಾಗಿ ಅರ್ಥವತ್ತಾಗಿ ಚಿತ್ರಿಸಿದ್ದಾರೆ. ಕವಿಯ ದೃಷ್ಟಿಗೆ ಸೋನೆ ಸೋನೆಯಾಗಿ ಸುರಿಯುತ್ತಿರುವ ಮಳೆ ತೇರನ್ನೆಳೆಯುವ ಹಗ್ಗಗಳಂತೆ ಕಂಡಿದೆ. ಸಾಧನಕೇರಿಯೋ ದೇವರ ತೇರು! ಹೀಗೆ ಸಾಧನಕೇರಿಯನ್ನು ಚಿತ್ರಿಸುವಾಗ ಸಗ್ಗಸೊಗವೇ ಬುವಿಗಿಳಿದು ಬಂದಿರುವುದಲ್ಲದೆ, ನಿಸರ್ಗದ ರಮ್ಯತೆಯಲ್ಲಿ ಕವಿ ದಿವ್ಯತ್ವವನ್ನು ಮನಗಂಡಿರುವನು. ಅಂತೆಯೇ ಆ ನುಡಿಯ ಕೊನೆಗೆ 'ನಂದನದ ತುಣುಕೊಂದು ಬಿದ್ದಿದೆ' ಎಂದು ಕವಿ ತನ್ನ ಭಾವನೆಯನ್ನು ವ್ಯಕ್ತ ಮಾಡಿರುವುದು ಔಚಿತ್ಯಪೂರ್ಣವಾಗಿದೆ. ಈ ಸಂದರ್ಭದಲ್ಲಿ John Howard Payne ಕವಿ ಬರೆದ 'Home, Sweet Home' ಕವನದಲ್ಲಿಯ,

A charm from the skies seems to
hallow us there

—ಎಂಬ ಸಾಲುಗಳು ನೆನಪಾಗದೇ ಇರಲಾರವು.

'ಬೇಲಿಗೂ ಹೂ ಬೆರಳಿದೆ' ಎಂಬುದು ಮತ್ತೊಂದು ಬಹು ಸೊಗಸಾದ ಕಲ್ಪನೆ.

ಸಾಧನಕೇರಿಯ ಮನೆಗಳಿಗೆ ಆಗ ಹೇಸಿಗೆಯ ಹೂವಿನ ಕಂಟಿಗಳೇ ಬೇಲಿಗಳು. ಅವು ವಿಧವಿಧ ಬಣ್ಣದ ಲವಂಗದಂಥ ಪುಷ್ಪಗಳಿಂದ ಯಾವಾಗಲೂ ತುಂಬಿಕೊಂಡಿರುತ್ತಿದ್ದವು. ಬೇಲಿಯಲ್ಲಿರುವ ಈ ಹೂಗಳು ದಾರಿಕಾರರ ಮನವನ್ನು ಸೆಳೆಯು-ವುದು ಸಾಧನಕೇರಿಗೆ ಹೋದವರೆಲ್ಲರ ಅನುಭವ. ದಾರಿಕಾರರನ್ನು ಕೈಬೀಸಿ ಕರೆ-ಯುವಂತೆ ಈ ಹೂಗಳು. ಕವಿ, ಕಂಟಿಗೂ ಅಂಟಿಕೊಂಡಿರುವ ಚೈತನ್ಯವನ್ನು 'ಹೂ ಬೆರಳು' ಎಂಬಲ್ಲಿ ರಮ್ಯವಾಗಿ ಚಿತ್ರಿಸಿರುವನು. ಕವಿಯ ಸೌಂದರ್ಯ ಪ್ರಜ್ಞೆ ಅಗಾಧವಾದ ರೀತಿಯಲ್ಲಿ ಇಲ್ಲಿ ವ್ಯಕ್ತವಾಗಿದೆ.

ಅಂಬಿಕಾತನಯದತ್ತರ ಕಾವ್ಯದ ಕೆಚ್ಚು ಅವರ ಅರ್ಥವತ್ತಾದ ಆಡುಮಾತಿನ ಕನ್ನಡದ ನುಡಿಗಳ ಆಯ್ಕೆಯಲ್ಲಿದೆ. ಈ ಭಾವಗೀತೆಯಲ್ಲಿ ಬಂದಿರುವ 'ಹಸಿರು ಏರಿದೆ ಏರಿಗೆ' ಎಂಬಲ್ಲಿಯ 'ಏರಿದೆ' ಎಂಬ ಕ್ರಿಯಾಪದ ಪ್ರಯೋಗವನ್ನು ನಿರೀ-ಕ್ಷಿಸಬೇಕು. ದಿನ್ನೆಗಳಲ್ಲಿ ಎಲ್ಲ ಕಡೆಗೂ ಹಸಿರು ತುಂಬಿಕೊಂಡು ಕಂಗೊಳಿಸುತ್ತಿದೆ ಎಂಬುದನ್ನು 'ಏರಿದೆ ಏರಿಗೆ' ಎಂದು ಸಾಮಾನ್ಯ ಜನರ ಪದಪ್ರಯೋಗದಲ್ಲಿ ಅರ್ಥವತ್ತಾಗಿ ನಿರೂಪಿಸಿದಾಗ, ಕವಿಯ ಅಭಿವ್ಯಕ್ತಿಯನ್ನು ಕಂಡು ನಿಜವಾಗಿಯೂ ತಲೆ ದೂಗುವಂತಾಗುತ್ತದೆ.

ಜಾನಪದ ಶೈಲಿಯಲ್ಲಿಯ, ಕವಿ ಉಪಯೋಗಿಸುವ ಪದಗಳ ಭಾವ ಹೊಸ ಮೆರುಗನ್ನು ಕೊಡುತ್ತದೆ.

> ನೆಲಕೆ ಹರೆಯವು ಮರಳಿದೆ
> ಭೂಮಿತಾಯಿ ಒಡಮುರಿದು ಎದ್ದಳೋ
> ಶ್ರಾವಣದ ಸಿರಿ ಬರಲಿದೆ—

ಎಂಬ ಈ ಸಾಲುಗಳಲ್ಲಿ ಭೂಮಿತಾಯಿ ಒಡಮುರಿದು ಏಳುವುದು ನಿಸರ್ಗಕ್ಕೇನೆ ಕವಿ ಹೊಸ ಚೈತನ್ಯವನ್ನು ನೀಡಿದಂತೆ ಬಂದಿದೆ. ಈ ಪದಪ್ರಯೋಗದಲ್ಲಿ ಜೀವಂತ-ತನದ ಭಾವನೆ ತುಂಬಿಕೊಂಡಿದೆ. "ಕಾವ್ಯವೆಂದರೆ ವಿಷಯ ಚಿಂತನವಲ್ಲ, ಶಬ್ದಾರ್ಥದಲ್ಲಿ ಎತ್ತಿದ ವಿಷಯಾನಂದ" ಎಂದು ದ. ರಾ. ಬೇಂದ್ರೆ ಅವರು ಹೇಳಿದ್ದನ್ನೇ ಇಲ್ಲಿ ಕಾಣಬಹುದು.

ಸಾಧನಕೇರಿಯನ್ನು ವರ್ಣಿಸುವಾಗ ಕವಿಯ ಕಲ್ಪನಾವಿಲಾಸ ಲಾಸ್ಯವಾಡಿದೆ. ಇದರಿಂದ ವಾಸ್ತವಿಕತೆಗೆ ಹೆಚ್ಚು ಅವಕಾಶವು ದೊರಕಿಲ್ಲ. ಇದ್ದುದನ್ನು ಇದ್ದಂ-ತೆಯೆ ವಿವರಿಸುವ ನೈಜತೆ, ಈ ಭಾವಗೀತೆಗಿಂತ ಮೊದಲು ಪ್ರಕಟವಾದ 'ಸಖೀ-ಗೀತ'ದಲ್ಲಿಯ ಸಾಧನಕೇರಿಯ ಬಣ್ಣನೆಯಲ್ಲಿ ಕಂಡುಬರುತ್ತದೆ.

ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು
ಮಮತೆಯ ಕುರುಹಾಗಿ ತಾ ದೊರಕಿತು
ಅಲ್ಲಿ ಸಂಪಿಗೆಯಿತ್ತು ಪಾರಿಜಾತಕವಿತ್ತು
ಮಾವು ಮಲ್ಲಿಗೆಯಿತ್ತು ಮನೆಯಿದಿರು

* * * *

ಹೊಂಗೆಯ ಸಾಲಿತ್ತು ಕಣ್ಮುಂದೆ ಕೆರೆಯಿತ್ತು
ಗುಡ್ಡದ ನೆರೆಯಿತ್ತು ಆದರಾಚೆಗೆ....

'ಬಾರೊ ಸಾಧನಕೇರಿಗೆ' ಕವನದಲ್ಲಿರುವ ನಿಸರ್ಗದ ಚೆಲ್ವಿಕೆಯ ವರ್ಣನೆಗೂ, 'ಸಖೀಗೀತ'ದಲ್ಲಿಯ ಈ ಸಾಲುಗಳಿಗೂ ಸ್ಪಷ್ಟವಾದ ಭೇದವಿದೆ. ತಾಳಗಳಲ್ಲಿ ಸೆರೆ-ಹಿಡಿದ ಶಬ್ದಗಳೇ 'ಸಖೀಗೀತ'ದ ಕಾವ್ಯದ ಸೊಬಗನ್ನು ಹೆಚ್ಚಿಸಿವೆ.

ಅಂಬಿಕಾತನಯದತ್ತರ ಅತ್ಯುತ್ತಮ ಕವನಸಂಗ್ರಹಗಳಾದ 'ಗರಿ', 'ಸಖೀ ಗೀತ', 'ನಾದಲೀಲೆ' ಮೊದಲಾದವು ಪ್ರಕಟಗೊಂಡ ಅನಂತರ 'ಬಾರೊ ಸಾಧನ-ಕೇರಿಗೆ' ಭಾವಗೀತೆಯಿರುವ 'ಗಂಗಾವತರಣ' ಕವನ ಸಂಗ್ರಹವು ಪ್ರಸಿದ್ಧವಾಗಿದೆ. ಆದುದರಿಂದ ಸಾಧನಕೇರಿಯಲ್ಲಿಯೆ ನೆಲಸಿದ ಅಂಬಿಕಾತನಯದತ್ತರು ಬರೆದ ಹಲವು ಕವನಗಳ ಧಾಮ 'ಬಾರೊ ಸಾಧನಕೇರಿಗೆ' ಭಾವಗೀತದಲ್ಲಿ ಮನಗಾಣಬಹುದೆಂದು ತೋರುತ್ತದೆ.

'ಸಖೀಗೀತ'ದಲ್ಲಿಯಂತೂ ಸಾಧನಕೇರಿಯ ಸಂದರ್ಭವೇ ಬಂದಿದೆ. ಅಂಬಿಕಾ ತನಯದತ್ತರು ಶ್ರಾವಣದ ಸೌಂದರ್ಯಕ್ಕೆ ಮನಸೋತು, ತಮ್ಮ ವಿವಿಧ ಭಾವನೆ ಗಳನ್ನು ವ್ಯಕ್ತಮಾಡಿ ಶ್ರಾವಣದ ಗೀತಗಳನ್ನು ರಚಿಸಿರುವರು. ಈ ಕವನದಲ್ಲಿಯೂ 'ಶ್ರಾವಣದ ಸಿರಿ ಬರಲಿದೆ' ಎಂಬ ವಾಕ್ಯವು ಬಂದಿದೆ. 'ಪಾತರಗಿತ್ತಿ ಪಕ್ಕಾ | ನೋಡಿದ್ದೇನ ಅಕ್ಕಾ' ಎಂಬ ಪಾತರಗಿತ್ತಿ ಕವನವು ಜನಪ್ರಿಯ ಮತ್ತು ಸುಪ್ರಸಿದ್ಧ. 'ಬಾರೊ ಸಾಧನಕೇರಿಗೆ' ಭಾವಗೀತೆಯಲ್ಲಿಯೂ—

ನೋಡು ಬಾ ಗುಂಪಾಗಿ ಪಾತರಗಿತ್ತಿ
ಕುಣಿಯುವ ತೋಟವು

—ಎಂಬ ಪಾತರಗಿತ್ತಿಗಳ ವರ್ಣನೆಯ ಸಾಲುಗಳು ಬಂದಿವೆ. ಈ ಕವನದಲ್ಲಿ ಇರುವ 'ಗಿಡದ ಹೊದರೊಳು ಹಾಡಿದೆ' ಎಂಬುದು 'ಬೆಳಗು' ಕವನದ—

ಗಿಡಗಂಟೆಯಾ ಕೊರಳೊಳಗಿಂದ
ಹೊರಟಿತು ಹಕ್ಕಿಗಳ ಹಾಡು

ಎಂಬ ಸಾಲುಗಳನ್ನು ನೆನಪಿಗೆ ತರುತ್ತವೆ. ಹೀಗೆ 'ಬಾರೊ ಸಾಧನಕೇರಿಗೆ' ಭಾವಗೀತೆಯು ಅಂಬಿಕಾತನಯದತ್ತರ ಹಲವು ಕವನಗಳ ಸವಿನೆನಪನ್ನು- ನೀಡುತ್ತದೆ.

ಅಂಬಿಕಾತನಯದತ್ತರಂತೆ ಧಾರವಾಡವನ್ನು ನಿಜವಾಗಿಯೂ ಮೆಚ್ಚಿ- ಕೊಂಡವರು, ಮೆಚ್ಚಿಕೊಂಡು ಆತ್ಮಾಭಿಮಾನದಿಂದ ಹಲವು ಕವನಗಳನ್ನು ರಚಿಸಿದವರು ವಿರಳವೆಂದೇ ತೋರುತ್ತದೆ. ದ. ರಾ. ಬೇಂದ್ರೆ ಅವರು ಜನಿಸಿದ್ದು ಧಾರವಾಡದಲ್ಲಿ, ಬೆಳೆದದ್ದು ಧಾರವಾಡದಲ್ಲಿ, ಕವಿಯಾಗಿ, ವರಕವಿಯಾಗಿ ವರ- ದಾನ ಪಡೆದದ್ದು ಧಾರವಾಡದ ನೆಲದಲ್ಲಿ. ಅವರ 'ಜೋಗಿ' ಎಂಬ ಕವನವು ಧಾರವಾಡದ ಸುತ್ತಲಿನ ನಿಸರ್ಗದ ಮಾಯ ಮತ್ತು ಕವಿಯ ಒಳಜೀವದೊಳಗಿನ ಕಾಳರಾತ್ರಿಯ ಭಯಾನಕ ಸಂಶಯಾಕುಲಿತ ಭಾವನೆ ಇವುಗಳಿಂದ ಕೂಡಿಕೊಂಡಿದೆ. ಧಾರವಾಡವನ್ನು ತನ್ನ ತಾಯಿಯೆಂದೇ ಕವಿ ಬಗೆದಿರುವನು.

'ನಿನ್ನ ಕಣ್ಣ ಕಡೆಗೋಲಿಂದ
ನನ್ನ ಹೃದಯ ಕಡಿಯೇ ತಾಯಿ'

—ಎಂದು 'ಧಾರವಾಡದ ತಾಯಿಗೆ' ಎಂಬ ಕವನದಲ್ಲಿ ಕವಿ ಮೊರೆಯಿಟ್ಟಿರು- ವನು. ಇಂಥ ತಾಯ್ತನವನ್ನು, ಮಾತೃಶಕ್ತಿಯನ್ನು ಕವಿ 'ಧಾರವಾಡದ ತಾಯಿ' ಯಲ್ಲಿ ಕಂಡುಕೊಂಡಿರುವನು. ಅಂತೆಯೇ ದ. ರಾ. ಬೇಂದ್ರೆಯವರು ಶ್ರೇಷ್ಠ ಕವಿಗಳಾಗಿ 'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಲ್ಲಿಯೇ ಕೀರ್ತಿವಂತರಾಗಿರುವರು. ಒಮ್ಮೆ ನೌಕರಿಯ ಸಲುವಾಗಿ ಧಾರವಾಡವನ್ನು ಅಗಲುವ ಪ್ರಸಂಗ ಬಂದಾಗ "ನಾವು ಬರ್ತೇವಿನ್ನ ನೆನಪಿರಲಿ ತಾಯಿ। ನಂ ನಮುಸ್ಕಾರ ನಿಮುಗ। ಕಾಯ್ದಿರಿ ಕೂಸಿನ್ಹಾಂಗ ನಮುಗ ॥" ಎಂದು ಧಾರವಾಡದ ತಾಯಿಗೆ ಕೇಳಿಕೊಂಡಿರುವರು.

ಅಂಬಿಕಾತನಯದತ್ತರ ಧಾರವಾಡದ ತಾಯಿಯು ನಿಜವಾದ ಮನೆ ಸಾಧನ- ಕೇರಿಯಲ್ಲಿ. ಕವಿ ಎಲ್ಲೆಲ್ಲೊ ಅಲೆದಾಡಿದರೂ ಸಾಧನಕೇರಿಗೆ ಮರಳಿ, ತಾಯ್ ತೊಡೆಯ ಮೇಲೆ ಮಲಗಿ, ನಿಸರ್ಗದ ಅಗಾಧಲೀಲೆಗೆ ಮರುಳಾಗಿ ಸರ್ವಸ್ವ- ವನ್ನೂ ಮರೆಯುವನು. ಕವಿಗೆ ಆಗ ಯಾವ ದುಃಖವೂ ಇಲ್ಲ—

‘ ಗಾಳಿ ಎಲ್ಲೂ ಆಡಿದೆ
ದುಗುಡ ಇಲ್ಲಿಂದೋಡಿದೆ ’

ಎಂದು ಕವಿ ಕವನದ ಕೊನೆಗೆ ಉದ್ಗಾರ ತೆಗೆದಿರುವನು.

‘ ಬಾರೊ ಸಾಧನಕೇರಿಗೆ ’ ಎಂದು ಕರೆಯುವ ಕವಿವಾಣಿಗೆ ಓಗೊಟ್ಟು, ಸಾಧನಕೇರಿಗೆ ಹೊರಟೇಬಿಡಬೇಕು ಎಂಬ ಮನಸ್ಸನ್ನು ನಿರ್ಮಿಸುವ ಸುಲಲಿತವಾದ ಕೌಟುಂಬಿಕ ಭಾವಗೀತೆ ‘ ಬಾರೊ ಸಾಧನಕೇರಿಗೆ ’.

§ § § §

೪೭

# ಬೇಂದ್ರೆಯವರ ಕೆಲವು ಪ್ರಣಯಗೀತಗಳು

ಮುರಳೀಧರ ಉಪಾಧ್ಯ ಹಿರಿಯಡಕ

'ಅಂಬಿಕಾತನಯದತ್ತ'ರ— ದ. ರಾ. ಬೇಂದ್ರೆಯವರ ಪ್ರಣಯಗೀತಗಳನ್ನು ಅವರ ಪ್ರಣಯದೃಷ್ಟಿಯ ಬೆಳವಣಿಗೆಯನ್ನು ಗುರುತಿಸಲಿಕ್ಕಾಗಿ, 'ಪ್ರಣಯದ ಆರಂಭವನ್ನು ಕುರಿತ ಕವನಗಳು', 'ಸರಸ ದಾಂಪತ್ಯವನ್ನು ಚಿತ್ರಿಸುವ ಕವನಗಳು', 'ವಿರಸ ದಾಂಪತ್ಯವನ್ನು ಚಿತ್ರಿಸುವ ಕವನಗಳು' ಎಂದು ವಿಭಾಗಿಸಬಹುದು. ವಿರಸ ದಾಂಪತ್ಯವನ್ನು ಚಿತ್ರಿಸುವ ಬೇಂದ್ರೆಯವರ ಪ್ರಣಯಗೀತಗಳ ಒಂದು ವಿಹಂಗಮನೋಟ ಈ ಲೇಖನದ ಉದ್ದೇಶ.

'ಅನಂತಪ್ರಣಯ' 'ವಾರಿನೋಟ' 'ಚಿರಂತನ' 'ಕಂಡತಪ್ಪು' 'ಕಾಮಕಸ್ತೂರಿ' 'ಒಡವರ ಮಗಳು' 'ರಸಿಕಾ ಪೇಳೊ' 'ಚೆಲುವ' 'ಹಿಂದs ನೋಡದs' 'ಪ್ರೇಲಿ-ಪ್ರೇರ' 'ನಲ್ಲ-ನಲ್ಲೆಯರ ಲಲ್ಲೆ'— ಈ ಕವನಗಳಲ್ಲಿ ಪ್ರಣಯದ ನಿಸರ್ಗ ಸಹಜವಾದ ಆಕರ್ಷಣೆ ಸೆಳೆತಗಳ ಆರಂಭ, ಬೆಳವಣಿಗೆಗಳ ಚಿತ್ರಣವಿದೆ. 'ಸಂಸಾರ', 'ಅಷ್ಟು-ಪ್ರೀತಿ-ಇಷ್ಟು ಪ್ರೀತಿ', 'ಮುಗ್ಧೆ', 'ನನ್ನ-ವಳು', 'ನಾನು ಬಡವಿ', 'ಗುಮ್ಮಾ ಗುಮ್ಮಿ', 'ಜನುಮದ ಜಾತ್ರಿ', 'ಒಲಿಮೆಯ ಕಿಚ್ಚು', 'ಗಮಗಮಾ ಗಮಾಡಸತಾವ ಮಲ್ಲಿಗಿ'-ಕವನಗಳಲ್ಲಿ ಸರಸದಾಂಪತ್ಯದ ಚೆಲುವು-ನಿಲುವುಗಳನ್ನು ಬೇಂದ್ರೆಯವರು ಚಿತ್ರಿಸಿದ್ದಾರೆ. ವಿರಸದಾಂಪತ್ಯವನ್ನು ಕುರಿತ ಬೇಂದ್ರೆಯವರ ಪ್ರಣಯಗೀತಗಳಲ್ಲಿ 'ಮನದನ್ನೆ', 'ನನ್ನ ಕೈಯ ಹಿಡಿದಾಕೆ', 'ಹುದುಗಲಾರದ ದುಃಖ', 'ನಗೀನವಿಲು', 'ಬಿಸಿಲುಗುದುರೆ', ನೀ ಹೀಂಗ ನೋಡಬ್ಯಾಡ ನನ್ನ'— ಇವು ಮುಖ್ಯವಾದುವುಗಳು.

'ಮನದನ್ನೆ' (ನಾದಲೀಲೆ) ಕವನದಲ್ಲಿ ಸಂವಾದಕ್ಕಿಂತಲೂ ವಾದದ ಹಾದಿ ಹಿಡಿದ ದಂಪತಿಗಳನ್ನು ಕಾಣುತ್ತೇವೆ. ಸಂಸಾರದಲ್ಲಿ ಸಮಗ್ರ ಸಾಮರಸ್ಯ ಹುಟ್ಟ

ದಿದ್ದರೆ ಬೇರೆಲ್ಲಿ ಹುಟ್ಟಬೇಕು ? — ಎಂದು ಬೇಂದ್ರೆಯವರು ಪ್ರಶ್ನಿಸುತ್ತಾರೆ. "ಆಡದಿರು ಮನದನ್ನೆ ಎನಗೆ ಇದಿರಾಡದಿರು" ಎಂಬ ಆರಂಭವೇ ಸಂಸಾರದಲ್ಲಿ ವಿರಸವನ್ನು ತಂದಿರುವ ನಲ್ಲೆಯಲ್ಲಿ ಪ್ರಾರ್ಥಿಸುತ್ತಿರುವ ನಲ್ಲನ ಚಿತ್ರವನ್ನು ನಮ್ಮ ಕಣ್ಮುಂದೆ ತರುತ್ತದೆ. ವಾದಕ್ಕೆ ಬೇಸತ್ತಿರುವ ಅವನ ಮಾತುಗಳು ಕರುಣಾ ಜನಕವಾಗಿವೆ. "ಹೀಗೆನಲು ಹಾಗೆಂದು ಬೆಂದ ಹೆಣವನೆ ಕೊಂದು, ಭೂತ ಲೀಲೆಯಲೀಗ ತೊಡಗಬೇಡ" "ಇದಿರಾಡದಿರು ಗೆಳತಿ ನೀನು ಕೂಡ ಹೃದಯ ವನು ರಣರಂಗ ಮಾಡಬೇಡ" ಎನ್ನುತ್ತಾನೆ. 'ನೀನು ಕೂಡ' ಎನ್ನುವಲ್ಲಿ ನಲ್ಲನ ಜೀವನಕ್ಕೆ ಸ್ಫೂರ್ತಿಯ ಸೆಲೆಯಾಗಬೇಕಾದ ನಲ್ಲೆಯೇ ಸಹಕರಿಸದಿದ್ದರೆ ಹೇಗೆ ಎಂಬ ಭಾವವಿದೆ. ಆರಂಭದ ತೀವ್ರತೆಯನ್ನು ಕವನ ಕೊನೆಯವರೆಗೂ ಉಳಿಸಿ ಕೊಳ್ಳುತ್ತದೆ—

"ವಾದಕ್ಕೆ ಪ್ರತಿವಾದ
ಸಾಕು ವಾದವಿವಾದ
ಜೀವ ಸಂವಾದಕ್ಕೆ ಹಸಿದು ಬಂದೆ
ನೀಡು ಸಿಪ್ಪೆಯ ಸುಲಿದು ತಿಳಲನೊಂದೆ."

'ಜೀವಸಂವಾದ' ಎಂಬ ಶಬ್ದದಲ್ಲಿ ಈ ಕವನದ ಸಂದೇಶವೆಲ್ಲ ತುಂಬಿಕೊಂಡಿದೆ ಅನ್ನಿಸುತ್ತದೆ. "ತೋಳ ತೊಟ್ಟಿಲ ಮಗುವು ಆಗಿಬಂದೆ, ಗೊಂಬೆಯಾಡಿಸಿದಂತೆ ಆಡಿಸೆಂದೆ" ಎನ್ನುವಲ್ಲಿ ಹೆಂಡತಿ ಗಂಡನ ಜೀವನದಲ್ಲಿ ತಾಯ್ತನದ ಸ್ಥೈರಣೆಯಿಂದ, ತಾಳ್ಮೆಯಿಂದ, ಕರುಣೆಯಿಂದ ನಿರ್ವಹಿಸಬೇಕಾದ ಕರ್ತವ್ಯದ ಎಚ್ಚರವಿದೆ. "ಸ್ವರ್ಗ–ನರಕಕ್ಕೆ ಕರೆದಲ್ಲಿ ಬರುವೆ" ಎನ್ನುವಲ್ಲಿ ನಲ್ಲನ ಶರಣಾಗತಿ ಕೊನೆಯ ಹಂತ ಮುಟ್ಟುತ್ತದೆ. ಆದರೆ ಈ ಶರಣಾಗತಿಯ ಉದ್ದೇಶ 'ಸಮರಸವೇ ಜೀವನ' ಎಂಬುದನ್ನು ಸಾಧಿಸುವುದೇ ಆಗಿದೆ. "ಮಾಡದಿರು ಬಾಳನ್ನು ಬೇಳೆಯಂತೆ, ಕೂಡಿರಲಿ ಬಾಳು ಇಡಿಗಾಳಿನಂತೆ" ಎಂಬಲ್ಲಿ ಈ ಭಾವವನ್ನು ಕಾಣುತ್ತೇವೆ. "ಹೊಸ ಹುಟ್ಟು ಬರುವದಿದೆ ಇನ್ನು ಮುಂದೆ, ಆಗೋಣ ಈ ಜಗದ ತಾಯಿ–ತಂದೆ" ಎಂಬ ಕೊನೆಯ ಪಂಕ್ತಿಗಳಲ್ಲಿ ದಂಪತಿಗಳು ತಾಯಿ–ತಂದೆಯರಾಗಿ ಹೊರಬೇಕಾದ ಜವಾಬ್ದಾರಿಯ ಪ್ರಜ್ಞೆ ಸೊಗಸಾಗಿ ಅಭಿವ್ಯಕ್ತಗೊಂಡಿದೆ. ಕವನ ಸಾಕಷ್ಟು ದೀರ್ಘ ವಾಗಿದ್ದರೂ, ಭಾವದ ತೀವ್ರತೆ ಮತ್ತು ಮನಕರಗಿಸುವ ಮಾತುಗಳು ಅದನ್ನು ಮರೆಸುತ್ತವೆ.

"ನನ್ನ ಕೈಯ ಹಿಡಿದಾಕೆ" (ಗರಿ) ಯಲ್ಲಿ ಬೇಂದ್ರೆಯವರೇ ಹೇಳಿರುವಂತೆ "ನಿರಾಶೆಯನ್ನು ನೀಗಿ ಆಶೆಯತ್ತ ಹೊರಳಿದ ಬಾಳಬಳ್ಳಿಯ ಅವಲಂಬನದ ಚಿತ್ರ ಇಲ್ಲಿದೆ. ವಾಸ್ತವ ಜೀವನವನ್ನು ಒಪ್ಪಿಕೊಂಡು ಬದುಕಿನಲ್ಲಿ ಶ್ರದ್ಧೆಯನ್ನು ಕಳೆದು

ಕೊಳ್ಳದಿರುವುದು ಮುಖ್ಯ ಎಂಬುದನ್ನು ಕವಿ ಇಲ್ಲಿ ಹೇಳುತ್ತಾರೆ. ಜೀವನದಲ್ಲಿ ಸುಖ-ದುಃಖಗಳು ಬಿಸಿಲು-ಕತ್ತಲಿನಂತೆ ಸಾಮಾನ್ಯ. ಅವುಗಳನ್ನು ಕವಿ ಒಪ್ಪಿ-ಕೊಳ್ಳುತ್ತಾರೆ. ಜೀವನವನ್ನು ಬೌದ್ಧಿಕವಾಗಿ ವಿಮರ್ಶಿಸಿ, ಅಳುವನ್ನು ನುಂಗಿ ನಗಬೇಕು ಎಂಬ ತೀರ್ಮಾನಕ್ಕೆ ಬರುತ್ತಾರೆ. ಇಲ್ಲಿನ ನಲ್ಲ ತನ್ನ ನಲ್ಲೆಯೊಡನೆ, " ನನ್ನ ಕೈಯ ಹಿಡಿದಾಕೆ ಅಳುನುಂಗಿ ನಗು ಒಮ್ಮೆ ನಾನೂನು ನಕ್ಕೇನ. " ಎನ್ನುತ್ತಾನೆ—

" ಹುಸಿನಗುತ ಬಂದೇವ ನಸುನಗುತ ಬಾಳೋಣ<br>
ತುಸುನಗುತ ತೆರಳೋಣ<br>
ಒಡನೂರು ವರುಷಾನ ಹರುಷಾದಿ ಕಳೆಯೋಣ<br>
ಯಾಕಾರೆ ಕೆರಳೋಣ. "

ಕವಿ ಇಲ್ಲಿ ಜೀವನವನ್ನು ಬಿಟ್ಟು ಓಡಿಹೋಗುವ ಪಲಾಯನವಾದಿಯಲ್ಲ. ನಿರಾಶ-ರಾದರೂ ಹತಾಶರಾಗದ ಆಶಾವಾದಿ (Optimist) ಯಾಗಿದ್ದಾರೆ. ಬೇಂದ್ರೆಯವರ ಜೀವನಪ್ರಜ್ಞೆ ಇಲ್ಲಿ ಎದ್ದು ಕಾಣುತ್ತದೆ. ಈ ಕವನದಲ್ಲಿರುವ ಜೀವನ ವಿಮರ್ಶೆ ತಾತ್ವಿಕ ಚರ್ಚೆಯಾಗಿಲ್ಲ, ಅನುಭವಗಳ ವಿಶ್ಲೇಷಣೆ, ಮೌಲ್ಯನಿರ್ಣಯ ವಾಗಿದೆ. ಜೀವನದ ಬಗೆಗೆ ವಿಶೇಷ ಕಾಳಜಿ ಇರುವ ಬೇಂದ್ರೆಯವರಿಗೆ ಈ ರೀತಿಯ ತುಲನಾತ್ಮಕ ಮೌಲ್ಯನಿರ್ಣಯ ಅನಿವಾರ್ಯವಾಗುತ್ತದೆ.

'ಹುದುಗಲಾರದ ದುಃಖ'ದಲ್ಲಿ ಹುದುಗಲಾರದ ದುಃಖ ಹುದುಗಿರಿಸಿ ನಗೆ-ಯಲ್ಲಿ ನಸುನಗುತ ಇದಿರು ಬರುವ ಇನಿಯೆಯನ್ನು ಕುರಿತು, " ನಿನ್ನ ನಗೆ ಸುಖದ ಹೂವೆಂದು ತಿಳಿಯಲಿ ಹೇಗೆ ? " ಎಂದು ನಲ್ಲ ಪ್ರಶ್ನಿಸುತ್ತಾನೆ—

" ಮುಗುಳುನಗೆಯರಳಿಸುತ ಕರಿಯಾಲಿ ಹೊರಳಿಸುತ<br>
ಸುಳ್ಳುಸುಖ ಮರೆಸಬಹುದೆ ?<br>
ಮಮತಾಜಳನು ಹುಗಿದು ತಾಜಮಹಲನು ಕಟ್ಟಿ<br>
ನಿಜ ದುಃಖ ಮರೆಸಬಹುದೆ ? "

" ಎಲೆಲೆ ಜೀವದ ಗೆಳತಿ " ಎಂಬ ಪ್ರಯೋಗ ನಸು ಕೃತಕತೆಯನ್ನು ತಂದಿದೆ.

'ನಾರೀ ನಿನ್ನ ಮಾರಿಮ್ಯಾಗ ನಗೀನವಿಲು ಆಡತಿತ್ತ' ಎಂದು ಆರಂಭ ವಾಗುವ 'ನಗೀನವಿಲು' ಕವನದಲ್ಲಿ ಹೆಣ್ಣೊಬ್ಬಳ ದುಃಖ-ಸುಖಗಳನ್ನು ಪ್ರತಿಮೆ ಗಳ ಮೂಲಕ ಹೇಳಿದ್ದಾರೆ. ಇಲ್ಲಿ ಕೋಗಿಲೆ ವಿರಹಕ್ಕೂ, ನವಿಲು ಉಲ್ಲಾಸಕ್ಕೂ ಪ್ರತಿಮೆಗಳಾಗಿವೆ. ಇಲ್ಲಿನ ಹೆಣ್ಣು ಹುದುಗಲಾರದ ದುಃಖವನ್ನು ಹುದುಗಿ

ಕೊಂಡಿದ್ದಾಳೆ. ಆದರೆ ನೋವಿನ ನೆನಪು ಮರುಕಳಿಸುತ್ತಿದೆ. ಆರಂಭದಲ್ಲಿ ಅವಳ ಮೋರೆಯ ಮೇಲೆ ‘ ಕಣ್ಣಿನ್ಯಾಗ ಬಣ್ಣದ ನೋಟ ’ದಲ್ಲಿ ತಕತಕ ಕುಣಿದಾಡುವ ನಗೀನವಿಲಿನ ಚಿತ್ರವಿದೆ. ಮುಂದಿನ ಭಾಗದಲ್ಲಿ ಅವಳ ‘ ಮನದ ಮಾಮರದ ’ ಕೊನೆಯಲ್ಲಿ ಕೂತು ಹಾಡುವುದನ್ನು ಬಿಟ್ಟು, ನೊಂದುಕೊಂಡು ಹಗಲಿರುಳು ಮಿಡುಕಾಡುತ್ತ, ಏನೋ ಒಂದನ್ನು ಹುಡುಕುತ್ತ ಕಣ್ಣೀರಿನ ಮಳೆಯೊಡನೆ ತನ್ನ ದುಃಖ ತೋಡಿಕೊಳ್ಳುತ್ತಿರುವ ಕೋಗಿಲೆಯ ಚಿತ್ರವಿದೆ. ಕವನದ ಹೆಸರು ‘ ನಗೀನವಿಲು ’ ಎಂದಿದ್ದರೂ ಅದಕ್ಕಿಂತ ಹೆಚ್ಚಾಗಿ ಅಳುವ ಕೋಗಿಲೆಯೇ ನಮ್ಮ ಮನಕರಗಿಸುತ್ತದೆ. ‘ ತುಂಬಿಬಂದಿತ್ತು ’ ಎಂಬ ಕವನದಲ್ಲಿಯಂತೆ ಇಲ್ಲಿಯೂ ಬೇಂದ್ರೆಯವರು ಭಾಷೆಯೊಡನೆ ಚಲ್ಲಾಟವಾಡುವುದನ್ನು ಕಾಣುತ್ತೇವೆ. ಮನಸ್ಸಿನಲ್ಲಿರುವ ಸುಖದುಃಖಗಳ ಒಳತೋಟಿಯನ್ನು ಪ್ರತಿಮೆಗಳ ಮೂಲಕ ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸಿರುವ ಈ ಕವನವನ್ನು ಬೇಂದ್ರೆಯವರು ೧೯೩೨ಕ್ಕಿಂತ ಹಿಂದೆಯೇ ಬರೆದರು ಎನ್ನುವುದು ಗಮನಾರ್ಹವಾದ ಸಂಗತಿಯಾಗಿದೆ.

ಬೇಂದ್ರೆಯವರ ಪ್ರಣಯಗೀತಗಳಲ್ಲಿ ‘ ಬಿಸಿಲುಗುದುರೆ ’ಗೊಂದು ವಿಶಿಷ್ಟ-ಸ್ಥಾನವಿದೆ. ಮದುವೆಯ ಮೊದಲದಿನಗಳಲ್ಲಿ, ಯೌವನದ ದಿನಗಳಲ್ಲಿ ಇದ್ದ ಉತ್ಸಾಹ ಆಸೆಗಳು ಮುಂದೆ ಕಡಿಮೆಯಾಗುತ್ತವೆ. ಇದು ಒಪ್ಪಿಕೊಳ್ಳಲೇಬೇಕಾದ ವಾಸ್ತವ. ‘ ಬಿಸಿಲುಗುದುರೆ ’ಯಲ್ಲಿನ ಯುವಕ ತನ್ನ ಚೆನ್ನಿಯನ್ನು ಮೊದಲಬಾರಿ ಕಂಡಾಗ ಮುಂಗಾರಿನ ಕಣ್ಣುಸನ್ನೆಯ ಮಿಂಚಿನಂತಿದ್ದ ಅವಳ ನಗೆ, ಇಂದು ಬಿಸಿಲುಗುದುರೆ ಏರಿ ಸವಾರಿ ಹೊರಟಿರುವುದನ್ನು ಕಂಡು ಮರುಗುತ್ತಿದ್ದಾನೆ—

“ ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತs
ಏನೊಂದು ನಗಿ ಇತ್ತ ಏನೊಂದು ನಗಿ ಇತ್ತ
ಏರಿಕಿ ನಗಿ ಇತ್ತs
ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಈಗೀಗ
ಹೊಗೇತಿ ಎತ್ತೆತ್ತ. ”

ಕವನದ ಆರಂಭದಲ್ಲಿ ಮಧುರಸ್ಮೃತಿಗಳ ಚಿತ್ರ ಸೊಗಸಾಗಿ ಮೂಡಿಬಂದಿದೆ. ಅಂದು ಚಿನ್ನಿಯಲ್ಲಿದ್ದ ಹುಡುಗಿಯ ಹುಡುಗಾಟ, ಕಣ್ಣಿನ ಬೆಳಕು, ತುಟಿಯ ಝುಳಕು, ತುಟಿಯ ಮಾಟ ಇಂದು ಕನಸಿನ ಸಂಗತಿಯಾಗಿವೆ. ಮುಂದಿನ ಪಂಕ್ತಿ-ಗಳಲ್ಲಿ ವಾಸ್ತವದ ನಗ್ನಸತ್ಯದ ಚಿತ್ರ ಒಮ್ಮೆಲೆ ನಮ್ಮ ಕಣ್ಣಿಗೆ ಕಟ್ಟುತ್ತದೆ—

“ ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವೆಯ ಬಲಿಯಾಗ

ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಪಾಂಗ
ಬಂತಂತ ಮುಪ್ಪುಬ್ಯಾಗ. ”

ಅವಳ ನಗೆ ಬದುಕಿನ ಒಲೆಯಲ್ಲಿ, ಬಡತನ ಬಲಿಯಲ್ಲಿ, ಕರುಳಿನ ಕಂದಮ್ಮಗಳ ಸಾಲಿನಲ್ಲಿ ಸುಟ್ಟುಹೋಯಿತು ಎಂಬ ಉಪಮೆ ಹಳ್ಳಿಯ ಯುವಕನ ಮಾತಿನಲ್ಲಿ ಬಂದಿರುವುದರಿಂದ ಅದರ ಸ್ವಾರಸ್ಯ ಇಮ್ಮಡಿಯಾಗಿದೆ. ಬೇಂದ್ರೆಯವರ ಪರಿಸರ ಪ್ರಜ್ಞೆಗೆ ಇದಕ್ಕಿಂತ ಉತ್ತಮ ಉದಾಹರಣೆ ಬೇರೊಂದು ಸಿಗಲಿಕ್ಕಿಲ್ಲ. ಇದು ಕಳೆದುಹೋದುದನ್ನು ಹಂಬಲಿಸುವ ರೀತಿಯ (Nostalgic) ಕವನ. ಆಡು ನುಡಿಯ ಬಳಕೆ, ನಿತ್ಯಜೀವನದ ಉಪಮೆ, ಭಾವದ ತೀವ್ರತೆಗೆ ತಕ್ಕ ಅಭಿವ್ಯಕ್ತಿ, ಕಳೆದು ಹೋದ ಸುಖದ ದಿನಗಳನ್ನು ಮತ್ತೆ ಪಡೆಯಬೇಕೆಂಬ ಹಂಬಲ, ವಾಸ್ತವ-ಪ್ರಜ್ಞೆ, ಇವುಗಳಿಂದಾಗಿ ‘ ಬಿಸಿಲುಗುದುರೆ ’ ಯಶಸ್ವಿಯಾಗಿದೆ. ‘ ಬಿಸಿಲುಗುದುರೆ ’ ಎಂಬ ಹೆಸರೂ ಔಚಿತ್ಯಪೂರ್ಣವಾಗಿದೆ.

‘ ನೀ ಹೀಂಗ ನೋಡಬ್ಯಾಡ ನನ್ನ ’ ಬೇಂದ್ರೆಯವರ ಅಮೂಲ್ಯ ಕೊಡುಗೆ. “ ಅಪತ್ಯಗಳನ್ನು ಕಳೆದುಕೊಂಡ ಸತಿಯೊಬ್ಬಳು ಆಸನ್ನಮರಣ ಶಿಶುವನ್ನು ನೋಡಲು ಬಂದ ಪತಿಯನ್ನು ಕುರಿತು ಅನಿರ್ವಚನೀಯ ದುಃಖದಿಂದ ಅರ್ಥ-ಪೂರ್ಣವಾಗಿ ನೋಡಿದಾಗ ಅವನ ಎದೆಯಲ್ಲಿ ಹುಟ್ಟಿದ ಹಾಡು. ” ಎಂದು ಕವಿ ಸಂದರ್ಭ ಸೂಚಿಸಿದ್ದಾರೆ. ಬೇಂದ್ರೆಯವರ ಜೀವನದಲ್ಲಿಯೂ ಇಂಥ ಒಂದು ಘಟನೆ ನಡೆದಿತ್ತು ಎಂದು ನಮಗೆ ತಿಳಿದಿರುವುದರಿಂದ ಈ ಕವನದ ಮಹತ್ವ ಹೆಚ್ಚುತ್ತದೆ. ಅದರ ಯಶಸ್ಸಿನ ಗುಟ್ಟು ತಿಳಿಯುತ್ತದೆ.

“ ನೀ ಹೀಂಗ ನೋಡಬ್ಯಾಡ ನನ್ನ
ನೀ ಹೀಂಗ ನೋಡಿದರ ನನ್ನ ತಿರುಗಿ ನಾ ಹ್ಯಾಂಗ ನೋಡಲೇ ನಿನ್ನ ”

ಎಂಬ ಆರಂಭದ ಸಾಲುಗಳಲ್ಲಿಯೇ ಸಂದರ್ಭದ ಗಂಭೀರತೆ ಕಣ್ಣಿಗೆ ಕಟ್ಟುವಂತಿದೆ. ಮಗುವನ್ನು ಕಳೆದುಕೊಂಡು ಕೆರಳಿನಿಂತಿರುವ ತಾಯಿಕರುಳನ್ನು ಪತಿ ಇಲ್ಲಿ ಎದುರಿಸಬೇಕಾಗಿದೆ. ಆಕೆಯನ್ನು ಸಮಾಧಾನ ಪಡಿಸಲು ಇಲ್ಲಿ ಕವಿ ಪ್ರಯತ್ನಿಸುತ್ತಿದ್ದಾರೆ. ಸಂಸಾರಸಾಗರದಲ್ಲಿ ದುಃಖ ಬೇಕಾದಷ್ಟಿದ್ದರೂ ಅದಕ್ಕೆ ಮತ್ತೊಂದು ದಡ ಇದೆ ಎನ್ನುತ್ತಾರೆ. ‘ ಮಲಗಿರುವ ಕೂಸು ಮಲಗಿರಲಿ ಅಲ್ಲಿ, ಮುಂದಿನದು ದೇವರ ಚಿತ್ತ ’ ಎನ್ನುವಲ್ಲಿ ವಾಸ್ತವವನ್ನು ಎದುರಿಸುವ ಸ್ಥಿತಪ್ರಜ್ಞ ದೃಷ್ಟಿಯನ್ನು ಕಾಣುತ್ತೇವೆ. ಮತ್ತೆ ಮತ್ತೆ ಪತಿಯನ್ನು ನೋಡುತ್ತಿರುವ ಮಡದಿಯ ನೋಟ ಭೀತಿ ಹುಟ್ಟಿಸುವಂತಿದೆ. ಮಡದಿಯ ಇಂದಿನ ಹೃದಯ ವಿದ್ರಾವಕ ಸ್ಥಿತಿಯನ್ನು ಮಾತ್ರ ಕವಿ ಚಿತ್ರಿಸುತ್ತಿಲ್ಲ. ಅವಳು ಹಿಂದೆ ಹೇಗಿದ್ದಳು ಎಂಬುದನ್ನು ‘ Flash back technique ’ ನೊಡನೆ, ಮನೋಹರವಾದ ಉಪಮೆಗಳ ಮೂಲಕ ಬಣ್ಣಿ-

ಸಿದ್ದಾರೆ. ಇದರಿಂದಾಗಿ ಅಂದಿಗೂ ಇಂದಿಗೂ ಇರುವ ವ್ಯತ್ಯಾಸವನ್ನು ಸಹೃದಯರೇ ಊಹಿಸಿಕೊಳ್ಳುವಂತಾಗುತ್ತದೆ. ಗಿಣಿಗಡಗ ಹಣ್ಣಿನ ಹಾಗೆ ಕೆಂಪಾಗಿದ್ದ ಅವಳ ತುಟಿಯ ಬಣ್ಣ ಇಂದು ಬದಲಾಗಿದೆ. ಗಲ್ಲ, ಹಣೆ, ಕಣ್ಣು ಎಲ್ಲ ಮೊದಲಿನಂತಿಲ್ಲದೆ 'ಮಾರೀಗೆ ಮಾರಿಯರೀತಿ' ಬಂದಿದೆ. ಸಾವೇ ತನ್ನ ಕೈಸವರಿದೆಯೊ ಅನ್ನಿಸುತ್ತದೆ. ಮುಂದಿನ ನಾಲ್ಕು ಸಾಲುಗಳಲ್ಲಿ ಕವಿ, ತನ್ನ ಬಾಳಗೆಳತಿ ತನಗಾಗಿ ಮಾಡಿದ ತ್ಯಾಗ-ವನ್ನು ನೆನಪಿಗೆ ತಂದುಕೊಳ್ಳುತ್ತಾರೆ. ಮದುವೆಯ ದಿನ, ಧಾರೆ ಎರೆದಾಗ ನೆನೆದ ಕೈ, ಎಂದೆಂದಿಗೂ ಹಾಗೆಯೆ ತಣ್ಣಗಾಗಿಯೇ ಇರುತ್ತದೆ ಎಂದು ಅವಳು ತಿಳಿದಿದ್ದಳು. ಬದುಕು ಬೂದಿ ಮುಚ್ಚಿದ ಕೆಂಡ ಎಂದು ಮುಂದೆ ಅವಳಿಗೆ ತಿಳಿಯಿತು. ಆದರೆ ಅವಳು, ಪತಿಯೇ ಪರದೈವ ಎಂದು ತಿಳಿದು ಅವನ ಕೈಬಿಡಲಿಲ್ಲ. ಮುಂದಿನ ಸಾಲುಗಳಲ್ಲಿ ಬೇಂದ್ರೆಯವರು ಉಪಮೆ-ರೂಪಕಗಳ ಮೂಲಕ ನೀಡುವ ಅರ್ಥ ಪರಂಪರೆಗೆ, ಅವರ ಚೈತನ್ಯಮಯವಾದ ಕಲ್ಪನಾಶಕ್ತಿಗೆ ನಾವು ಬೆರಗಾಗು ತ್ತೇವೆ.—

> "ಇಬ್ಬನ್ನಿ ತೊಳೆದರೂ ಹಾಲು ಮೆತ್ತಿದಾ ಕವಳಿ ಕಂಟಿಯಾ ಹಣ್ಣು
> ಹೊಳೆಹೊಳೆವ ಹಾಂಗ ಕಣ್ಣಿರುವ ಹೆಣ್ಣ, ಹೇಳು ನಿನ್ನವೇನ ಈ ಕಣ್ಣು ?
> ದಿಗಿಲಾಗಿ ಅನ್ನತದ ಜೀವ ನಿನ್ನ ಕಣ್ಣಾರೆ ಕಂಡು ಒಮ್ಮಿಗಿಲ
> ಹುಣ್ಣಿವೀ ಚಂದಿರನ ಹೆಣಾ ಬಂತೊ ಮುಗಿಲಾಗ ತೇಲುತ ಹಗಲ."

ಇಬ್ಬನ್ನಿ ತೊಳೆದರೂ ಹಾಲು ತುಂಬಿಕೊಂಡು ಹೊಳೆಹೊಳೆವ ಕವಳಿ ಕಂಟಿಯ ಹಣ್ಣಿನಂತಿದ್ದ ಅವಳ ಕಣ್ಣು ಇಂದು 'ನಿನ್ನವೇನ ಈ ಕಣ್ಣು ?' ಎಂದು ಪ್ರಶ್ನಿ-ಸುವಂತಾಗಿದೆ. ಮಡದಿಯ ನಿಸ್ತೇಜ ಮುಖವನ್ನು ಕಂಡು, "ಹುಣ್ಣಿವೀ ಚಂದಿರನ ಹೆಣಾ ಬಂತೊ ಮುಗಿಲಾಗ ತೇಲುತ ಹಗಲ" ಎನ್ನುವಲ್ಲಿ ಬೇಂದ್ರೆಯವರ ರೂಪ-ಕಶಕ್ತಿ ಮುಗಿಲು ಮುಟ್ಟಿದೆ. ಹುಣ್ಣಿಮೆಯ ಚಂದಿರ ಎಂದಷ್ಟೇ ಹೇಳದೆ 'ಚಂದಿರನ ಹೆಣಾ ಬಂತೊ' ಎಂದಿರುವುದು ರೂಪಕವನ್ನು ಇನ್ನಷ್ಟು ಜೀವಂತವನ್ನಾಗಿಸಿದೆ. ದುಃಖದ ಕಠೋರತೆಯಿಂದ ಮಡದಿಯ ಹೃದಯ ಕಲ್ಲಾಗಿದೆ. ಅವಳು ಅಳುತ್ತಿಲ್ಲ. 'ಹನಿ ಒಡೆಯಲಿಕ್ಕೆ ಬಂದಂಥ ಮೋಡ ತಡದಾಂಗ ಗಾಳಿಯ ನೆವಕ' ಅವಳ ಕಣ್ಣಿನಲ್ಲಿ ಕಣ್ಣೀರು ತಡೆದು ನಿಂತಿವೆ. ಹೀಗೆ ಹುದುಗಲಾರದ ದುಃಖವನ್ನು ಹುದುಗಿಸಲು ಯತ್ನಿಸುವುದು ಅಪಾಯಕಾರಿ ಎಂದು ತಿಳಿದ ಕವಿ "ಅತ್ತಾರೆ ಅತ್ತು ಬಿಡು, ಹೊನಲು ಬರಲಿ ನಕ್ಕ್ಯಾಕ ಮರಸತೀ ದುಕ್ಕ ?" ಎನ್ನುತ್ತಾರೆ.

ಈ ಕವನದಲ್ಲಿ ಆಡುಮಾತಿನ ಮೂಲಕ ತೀವ್ರವಾದ ಭಾವನೆಗಳನ್ನು ಅಭಿ-ವ್ಯಕ್ತಗೊಳಿಸುವುದರಲ್ಲಿ ಬೇಂದ್ರೆಯವರು ಪಡೆದಿರುವ ಯಶಸ್ಸು ಅದ್ಭುತವಾಗಿದೆ.

ಕವನ ಮುಂದುವರಿದಂತೆ ಮೊದಲಿದ್ದ ತೀವ್ರತೆ ಹೆಚ್ಚುತ್ತಾ ಹೋಗುತ್ತದೆ. ' ಗಿಣಿಗಡಕಹಣ್ಣು ' ' ಕವಳಿಕಂಟಿಯ ಹಣ್ಣು ' ' ಹುಣ್ಣಿಮೆಯ ಚಂದಿರನ ಹೆಣಾ ' ಮುಂತಾದ ಉಪಮೆ–ರೂಪಕಗಳು ಭೀಕರವಾದರೂ ಕರುಣಾಜನಕವಾದ, ಶಕ್ತಿಪೂರ್ಣವಾದ ಎಂದೆಂದಿಗೂ ಮರೆಯಲಾಗದ ಚಿತ್ರವೊಂದನ್ನು ನೀಡುವಲ್ಲಿ ಯಶಸ್ವಿಯಾಗಿವೆ. " ಯಾವ ಕವಿತೆಯಲ್ಲಿ ಕವಿ ತನ್ನ ಮನೋಧರ್ಮ ತನ್ನ ಒಲವು, ತನ್ನ ನಿಲವು, ತನ್ನ ಪ್ರವೃತ್ತಿ, ತನ್ನ ಉದ್ವೇಗ, ತನ್ನ ಸುಖ, ತನ್ನ ದುಃಖ, ತನ್ನ ಕಾತರ, ಕಳವಳ ಇತ್ಯಾದಿಗಳನ್ನು ಪ್ರಕಟಿಸಿರುತ್ತಾನೆಯೊ ಆ ಕವಿತೆಯೇ ಭಾವಗೀತೆ " (ಪ್ರೊ. ಎಸ್. ವಿ. ಪರಮೇಶ್ವರಭಟ್ಟ–ಭಾವಗೀತೆ.) ಎಂಬ ಭಾವ–ಗೀತೆಯ ವ್ಯಾಖ್ಯಾನಕ್ಕೆ ಈ ಕವನಕ್ಕಿಂತ ಶ್ರೇಷ್ಠವಾದ ಉದಾಹರಣೆ ಬೇರೊಂದು ಸಿಗಲಾರದು. ಭಾವಗೀತೆ " ಒಡಲನೂಲಿನಿಂದ ನೇಯುವಂತೆ ಜೇಡ ಜಾಲಾ " ಎಂದಿದ್ದಾರೆ ಬೇಂದ್ರೆ. ಅಂತೆಯೇ ವೈಯಕ್ತಿಕ ಅನುಭವಗಳ ಸತ್ವಪೂರ್ಣ ಅಭಿವ್ಯಕ್ತಿಯೇ ಈ ಕವನದ ಜೀವಾಳವಾಗಿದೆ. " ಬಹುಶಃ ಇದಕ್ಕೆ ಸರಿದೂಗುವ ಈ ಗುಂಪಿನ ಮತ್ತೊಂದು ಕವನ ನಮಲ್ಲಿಲ್ಲ ಎಂದೆನಿಸುತ್ತದೆ. " ಎಂಬ ಡಾ|| ಪ್ರಭು–ಶಂಕರರ ಅಭಿಪ್ರಾಯ ಅತಿಶಯೋಕ್ತಿಯಲ್ಲ.

ಬೇಂದ್ರೆಯವರ ಪ್ರಣಯಗೀತಗಳನ್ನು ಒಟ್ಟನಲ್ಲಿ ನೋಡಿದಾಗ, ಪ್ರಣಯದ ಆರಂಭವನ್ನು ಕುರಿತ ಕವನಗಳಲ್ಲಿ ಸುಕುಮಾರ ಭಾವನೆ ಹೆಚ್ಚೆಂದೂ, ಸಂಸಾರದ ವಿರಸ, ನೋವುಗಳನ್ನು ವಿವರಿಸುವ ಕವನಗಳು ತೀವ್ರತೆಯಿಂದ ಕೂಡಿವೆಯೆಂದೂ ಅನ್ನಿಸುತ್ತದೆ. ಬೇಂದ್ರೆಯವರ — ವಿರಹ, ದುಃಖ, ಕಳೆದುದನ್ನು ಪಡೆಯುವ ಹಂಬಲವನ್ನು ಕುರಿತ ಪ್ರಣಯಗೀತಗಳೇ ಹೆಚ್ಚು ಯಶಸ್ವಿಯಾಗಿರುವುದನ್ನು ನೋಡುವಾಗ, " Our sweetest songs are those that tell of saddest thoughts. " ಎಂಬ Shellyಯ ಮಾತು ನೆನಪಿಗೆ ಬರುತ್ತದೆ.

" ಬೇಂದ್ರೆಯವರ ಕಾವ್ಯಗಳನ್ನು ವಿಮರ್ಶಿಸುವ ಕಾಲ ಹೋಯಿತು; ಇನ್ನು ಅವು ವ್ಯಾಖ್ಯಾನಕ್ಕೆ ತಕ್ಕುವು " ಎಂಬ ಪು. ತಿ. ನರಸಿಂಹಾಚಾರ್ಯರ ಹೇಳಿಕೆ ಬೇಂದ್ರೆಯವರ ಪ್ರಣಯಗೀತಗಳ ಮಟ್ಟಿಗೆ ನೂರಕ್ಕೆ ನೂರು ಸತ್ಯವಾಗಿದೆ. ಬೇಂದ್ರೆಯವರ ಪ್ರಣಯಗೀತಗಳು ನವೋದಯ ಕನ್ನಡ ಸಾಹಿತ್ಯದ ಸ್ವತಂತ್ರ ಸಾರ್ಥಕ ಘಟಕಗಳಾಗಿ (Units of meaning) ಉಳಿಯುತ್ತವೆ. ಬೇಂದ್ರೆಯವರ ಆಧ್ಯಾತ್ಮಿಕ ಗೀತಗಳು ತಮ್ಮ ಮಹತ್ವವನ್ನು ಕಳೆದುಕೊಳ್ಳಬಹುದು. ಅವರ ಅನುಭಾವಗೀತಗಳು ಸಹೃದಯರಿಗೆ ನಿಲುಕದೆ ಹೋಗಬಹುದು. ಆದರೆ

ಈ ಚಿಂತನಕವಿಯ ಪ್ರಣಯಗೀತಗಳು ನಮ್ಮ-ನಾಡಿನಲ್ಲಿ ಪ್ರಣಯಿ-ಪ್ರಣಯಿನಿಯರು ಇರುವವರೆಗೆ ಉಳಿಯಬಲ್ಲುವು. ಬೇಂದ್ರೆಯವರು ಕನ್ನಡ ಸಾಹಿತ್ಯದ ಮುಖ್ಯ ಕವಿ, ಶ್ರೇಷ್ಠ ಕವಿ. 'ಮಹಾಕಾವ್ಯ'ವೊಂದನ್ನು ಬರೆಯದಿದ್ದರೂ ಭಾವಗೀತಕಾರರಾಗಿಯೇ ಅವರು ಮಹಾಕವಿಯಾಗಿದ್ದಾರೆ.

§ § § §

# ಬೇಂದ್ರೆ ಮನೆತನದ ನಕ್ಷೆ

## I

ಮೂರನೆಯ ತಲೆಮಾರಿನಿಂದ ಉಪಲಬ್ಧ.

೩) ಬಾಜಿ, ಪಿಲಾಜಿ, ಕೃಷ್ಣಾಜಿ.

೪) ವಿಶ್ವನಾಥ ರಾಮಜಿ

೫) ಬಲ್ಲಾಳ

೬) ನಾರಾಯಣ ಬಾಬುರಾವ ಪಾಂಡುರಂಗ ದಾದಿ ಗೋವಿಂದ

೭) ಬಜ್ಜಂಭಟ (ತ್ರ್ಯಂಬಕ)

೮) ಕೃಷ್ಣಭಟ ರಾಮಭಟ

೯) ಹರಿ ವಿನಾಯಕ ನಾರಾಯಣ ವಿಶ್ವನಾಥ ಅಪ್ಪಾಭಟ (ತ್ರ್ಯಂಬಕ)

೧೦) ನರಸಿಂಹ ಬಂಡೋಪಂತ ರಾಮಚಂದ್ರ (ತಾತಂಭಟ)

೧೧) ಚಿದಂಬರ ರಾಘು ಕೃಷ್ಣ ದತ್ತಾತ್ರೇಯ (ಅಂಬಿಕಾತನಯದತ್ತ)

## II

### ದತ್ತಾತ್ರೇಯ ಮತ್ತು ಲಕ್ಷ್ಮೀಬಾಯಿ ಬೇಂದ್ರೆ

೧) ಕ್ಷೇಮೇಂದ್ರ
ಜ. ೧೯೨೨–ಧಾರವಾಡ
ಮ. ೧೯೨೩

೨) ರಾಮ
ಜ ೧೯೨೪–ಹಾನಗಲ್ಲ
ಮ. ೧೯೪೪

೩) ಭಾಸ್ಕರ
ಜ. ೧೯೨೭–ಧಾರವಾಡ
ಮ. ೧೯೩೭

೪) ಪಾಂಡುರಂಗ
ಜ. ೧೯೨೮–ಧಾರವಾಡ

೫) ಲಲಿತಾ
ಜ. ೧೯೩೪–ಧಾರವಾಡ
ಮ. ೧೯೩೪

೬) ವಾಮನ
ಜ. ೧೯೩೫–ರಾಣೇಬೆನ್ನೂರ

೭) ಪ್ರೇಮಾ
ಜ. ೧೯೩೭–ಧಾರವಾಡ
ಮ. ೧೯೩೭

೮) ಮಂಗಲ
ಜ. ೧೯೩೯–ಧಾರವಾಡ

೯) ಆನಂದ
ಜ. ೧೯೪೪–ಧಾರವಾಡ
ಮ. ೧೯೪೪

೪೮

# ಮೂರು ಮುಖ

( ಬೇಂದ್ರೆಯವರ ಜೀವನ ಪರಿಚಯ )

**ವಾಮನ ಬೇಂದ್ರೆ**

ಜೀವನ ಎಂಬುದು ಅಖಂಡವಾಗಿ ಅರಳುವ ಹೂವಿನಬಳ್ಳಿ. ಬಳ್ಳಿಯಲ್ಲಿ ಕೆಲವು ಹೂ,ಮೊಗ್ಗೆ,ಅರೆಹೂ, ಬಿರಿದ ಹೂ, ಬಾಡಿದ ಹೂ ಎಂಬ ಅವಸ್ಥೆಗಳನ್ನು ಪಡೆದರೂ, ಬಳ್ಳಿಯ ಜೀವ ಇರುವ ವರೆಗೂ ಹೂಬಿಡುವ ಕ್ರಿಯೆ ನಡೆದಿರುತ್ತದೆ. ಬೇಂದ್ರೆಯವರ ಜೀವನಬಳ್ಳಿಗೆ ಇನ್ನೂ ಹೊಸ ಹೊಸ ಎಚ್ಚರದ ಹೂ ಬಿಡುತ್ತಲೆ ಇವೆ. ಆದುದರಿಂದ ನಾನು ಈಗ ಬರೆದದ್ದು ಅವರ ಜೀವನಚರಿತ್ರೆ ಅಲ್ಲ; ಜೀವನಪರಿಚಯ ಮಾತ್ರ.

ಈ ಜೀವನಪರಿಚಯಕ್ಕೆ ಮೂರು ಮುಖಗಳುಂಟು. ಆದುದರಿಂದ ಮೂರು-ಮುಖ ಎಂಬುದೆ ಈ ಲೇಖನದ ತಲೆಬರಹ. ಕೇಳಿದ ಮುಖ, ನೋಡಿದ ಮುಖ ಮತ್ತು ಅನುಭವಿಸಿದ ಮುಖ ಎಂದು ಮೂರು ಕಾಲಖಂಡಗಳನ್ನು ಮಾಡಿ-ಕೊಂಡಿರುವೆ.

೧೮೯೬ ರಿಂದ ೧೯೪೩ ರ ವರೆಗೆ ಕೇಳಿದ ಮುಖದ ಹರವು ಇದೆ. ೧೯೩೫ ರಲ್ಲಿ ಹುಟ್ಟಿದ ನನಗೆ ೧೯೪೩ ರ ವರೆಗಿನ ಬೇಂದ್ರೆಯವರ ಜೀವನಪರಿಚಯ-ಅವರ ಮುಖದಿಂದ, ತಾಯಿಯ ಮುಖದಿಂದ, ಸ್ನೇಹಿತರ ಮುಖದಿಂದ ತಿಳಿದಿದೆಯೆ ಹೊರತು, ನಾನು ಪ್ರತ್ಯಕ್ಷ ಪ್ರೇಕ್ಷಕನಲ್ಲ. ನನ್ನ ಸ್ಮರಣೆಯ ಗುಣ ಮತ್ತು ವಿಸ್ಮರಣೆಯ ದೋಷ, ಈ ಭಾಗದ ಚಿತ್ರಣದಲ್ಲಿ ಕೂಡಿರಲು ಸಾಕು. ಬೇಂದ್ರೆಯವರ ಜೀವನದ ಸತ್ಯಾಸತ್ಯ ಕಥನವು ಇಲ್ಲಿರದಿದ್ದರೂ ಅವರ ಜೀವನವು ನನ್ನಲ್ಲಿ ಮೂಡಿಸಿದ ಪ್ರತಿಬಿಂಬವನ್ನು ವಿವರಿಸಿರುವೆ. ೧೯೪೩ ರ ಕನ್ನಡ ಸಾಹಿತ್ಯಸಮ್ಮೇಳನಕ್ಕೆ ನಾನೂ ಹೋಗಿದ್ದೆ ಎಂಬ ಬಾಲ್ಯದ ನೆನಪು ನನಗಿದೆ.

೧೯೪೩ ರಿಂದ ೧೯೬೬ ರ ವರೆಗಿನ ಬೇಂದ್ರೆಯವರ ಜೀವನವನ್ನು ಎಚ್ಚರದ ಅರಿವಿನಿಂದ ನಾನು ನೋಡಿದ್ದೇನೆ. ನಾನು ಕೇಳಿದ್ದನ್ನು ನಾನು ನೋಡುವ ಮುಖಕ್ಕೆ ಹೋಲಿಸಿ ನೋಡುತ್ತ ಎರಡೂ ಒಂದೇನೋ ಬೇರೆಬೇರೆಯೋ ಎಂದು

ವಿಮರ್ಶಿಸಿ ನಿರ್ಣಯಕ್ಕೆ ಬರುತ್ತಿದ್ದೆ. ಹೊಯ್ದಾಟ ಇತ್ತು; ಬೆಳೆಯುವ ವಯಸ್ಸು ನನ್ನದು.

೧೯೬೭ ರಿಂದ ೧೯೮೧ ರ ವರೆಗೆ ಬೇಂದ್ರೆಯವರ ಜೀವನದ ಸವಿಯನ್ನು ನಾನು ಪ್ರತಿದಿವಸವೂ ಅನುಭವಿಸುತ್ತಿರುವೆ. ಇದು ಜೀವನಸರ್ವಸ್ವದ ಮೂರ-ನೆಯ ಮುಖ. ಕೇಳಿದ, ನೋಡಿದ ಮತ್ತು ಅನುಭವಿಸಿದ ಮುಖದಲ್ಲಿ ನಾನು ಕಂಡುಕೊಂಡ ಏಕಮುಖತೆಯ ಈ ಸಂಕ್ಷಿಪ್ತ ವರದಿಯನ್ನು ರಸಿಕರ ಮುಂದೆ ಸಾದರಪಡಿಸುತ್ತಿರುವೆ.

ಬೇಂದ್ರೆಯವರ ವಂಶಾವಳಿಯಲ್ಲಿಯ ಮೊದಲಿನ ಮೂರು ತಲೆಮಾರುಗಳ ಹೆಸರು ಇನ್ನೂ ಸಿಕ್ಕಿಲ್ಲ. ಈ ತಲೆಮಾರುಗಳ ಕಾಲಕ್ಕೆ ಬೇಂದ್ರೆ ಮನೆತನದವರ ಅಡ್ಡಹೆಸರು ಠೋಸರ ಎಂದು ಇದ್ದರೂ ಇರಬಹುದು. ಮೂರನೆಯ ತಲೆಮಾರಿ-ನವರಾದ ಬಾಲಾಜಿ, ಪಿಲಾಜಿ ಮತ್ತು ಕೃಷ್ಣಾಜಿಯವರಿಂದ ಹಿಡಿದು ೧೧ ನೆಯ ತಲೆಮಾರಿನ ವರೆಗೆ ವಂಶಾವಳಿಯನ್ನು ಕೊಟ್ಟಿರುವೆ. ಈ ವಂಶಾವಳಿಯ ಬಗ್ಗೆ ವಿಚಾರ ಮಾಡುವಾಗ— 'ಠೋಸರ ಕುಲವೃತ್ತಾಂತ' ಉಪಯೋಗಕ್ಕೆ ಬಂದಿತು. ಬೇಂದ್ರೆಯವರಿಗೆ ಠೋಸರ ಎಂದು ಅಡ್ಡೆಸರಿತ್ತು. ವೇದಕಾಲದಲ್ಲಿ ಪಶುವನ್ನು ಒಂದು ಠೋಸಾ-ಹೊಡೆತ-ಗುದುಕಿಯಿಂದ ಕೊಲ್ಲುವವರು ಎಂದು ಅರ್ಥವಿರ-ಬಹುದು. ಅನಂತರ ಅವರೇ ವೇದ-(ವೇಂದ್ರ)+ಪಾಠಕರಾಗಿ, ವೇಂದ್ರ → ಬೇಂದ್ರ → ಬೇಂದ್ರೆ ಆಗಿರಬಹುದು ಎಂದು ಊಹೆ. ಕೆಲವು ಬೇಂದ್ರೆ ಮನೆತನ-ದವರು ತಮ್ಮ ಅಡ್ಡಹೆಸರು ಖಾಡಿಲಕರ ಎಂದು ಬದಲು ಮಾಡಿಕೊಂಡ ಉದಾ-ಹರಣೆಗಳಿವೆ. ಬೇಂದ್ರೆಯವರ ಮನೆತನದ ಮಹಾದೇವ ಎಂಬ ಒಬ್ಬರ ಸಮಾಧಿ ಗಾಣಗಾಪುರದಲ್ಲಿತ್ತು ಎಂಬ ಮಾತು ಇತ್ತೀಚೆ ಲಕ್ಷ್ಯಕ್ಕೆ ಬಂದಿದೆ. ಈ ದಿಶೆಯಲ್ಲಿ ಇನ್ನೂ ಸಂಶೋಧನೆ ಮಾಡಬೇಕಾಗಿದೆ.

ಬೇಂದ್ರೆಯವರ ಜೀವನವನ್ನು ಒಂದುಬಳ್ಳಿಗೆ ಹೋಲಿಸಿರುವೆ. ಆ ಬಳ್ಳಿ ಬಹಳ ದೊಡ್ಡದು. ಬೇಂದ್ರೆಯವರ ಬಾಲ್ಯದ ಮಿತ್ರರು, ಗೆಳೆಯರು, ಸಹೋದ್ಯೋಗಿಗಳು, ಬೇಂದ್ರೆಯವರ ಮೇಲೆ ಪರಿಣಾಮ ಮಾಡಿದ ಗ್ರಂಥಗಳು, ಪ್ರಭಾವಬೀರಿದ ಗುರುಗಳು ಮೊದಲಾದ ಪ್ರಕರಣಗಳನ್ನು ಸ್ವತಂತ್ರವಾಗಿ ಬರೆಯಬೇಕಾಗುತ್ತದೆ. ಅದೆಲ್ಲ ಈಪುಟ್ಟ ಲೇಖನದಲ್ಲಿ ಸೇರಿಸ-ಲಾಗುತ್ತಿಲ್ಲ. ಆದುದರಿಂದ ಬೇಂದ್ರೆಯವರ ಜೀವನ ಪ್ರವಾಹ ದಲ್ಲಿ ಬರುವ ಅನೇಕರ ಹೆಸರುಗಳು ಇಲ್ಲಿ ಬರಲಿಕ್ಕಿಲ್ಲ, ಕೈತಪ್ಪಿ ಉಳಿದು ಹೋಗ ಬಹುದು. ಇಂಥ ರೀತಿಯ ಕೊರತೆಗಳನ್ನು ಮತ್ತು ವಿವರಗಳನ್ನು ವಾಚಕಮಹ-ನೀಯರು ತಿಳಿಸಿದಲ್ಲಿ ಉಪಕಾರವಾಗುವುದು. ಅವರ ಸೂಚನೆಗಳ ಉಪಯೋಗ ಮತ್ತೊಂದು ಲೇಖನದಲ್ಲಿ ಕೃತಜ್ಞತೆಯಿಂದ ಮಾಡುವೆ.

ಬೇಂದ್ರೆಯವರೇ ತಮ್ಮ ಜೀವನದ ಹಲವು ಮುಖಗಳನ್ನು ಲೇಖನ ರೂಪ-ವಾಗಿ, ಬಾನುಲಿ ಭಾಷಣಗಳ ರೂಪವಾಗಿ ಈ ಮೊದಲು ಪ್ರಕಟಪಡಿಸಿದ್ದಾರೆ. ಹೀಗಿದ್ದೂ ಈ ಸಂಭಾವನಾ ಸಂಪುಟದ ಸಂಪಾದಕರಾದ ಡಾ. ಬಿ. ಬಿ. ಹಿಂಗಮಿರೆ ಅವರು 'ತಂದೆ-ಬೇಂದ್ರೆ' ಎಂದು ಒಂದು ಪುಟ್ಟ ಲೇಖನ ಬರೆಯಲು ಹೇಳಿದರು. ಅನಂತರ ಪ್ರಿಯ ಮಿತ್ರ ಮನೋಹರ ಘಾಣೇಕರ ಅವರು — ಬೇಂದ್ರೆಯವರ ಸಂಪೂರ್ಣ ಜೀವನವು ಸ್ವಲ್ಪ ವಿಸ್ತಾರವಾಗಿರಬೇಕು – ಲೇಖನ ದೊಡ್ಡದಾದರೂ ಚಿಂತೆಯಿಲ್ಲ ಎಂದು ಸೂಚಿಸಿದರು. ಇಬ್ಬರ ಸೂಚನೆಗಳನ್ನೂ ಗ್ರಹಿಸಿ-ಚಿಕ್ಕದೂಅಲ್ಲ, ದೊಡ್ಡದೂ ಅಲ್ಲ ಎಂಬ ಮಧ್ಯಮ ಹರವಿನ ಲೇಖನ ಸಿದ್ಧಪಡಿಸಿರುವೆ.

ಬೇಂದ್ರೆ ಮನೆತನವು ರತ್ನಾಗಿರಿ ಜಿಲ್ಲೆಯೊಳಗಿನ **ಕೇಳಶಿ** ಎಂಬ ಒಂದು ಗ್ರಾಮದಲ್ಲಿ ವಾಸವಾಗಿತ್ತು. ಈ ಗ್ರಾಮ ಸಮುದ್ರದ ದಂಡೆಗಿದೆ. ಭಾರತದ ನಕ್ಷೆ ಇರುವ ಒಂದು ಬಂಡೆಗಲ್ಲು ಈ ಮನೆತನದವರ ಕುಲದೇವತೆ. ನನ್ನ ತಂದೆ, ತಾಯಿ, ಅಣ್ಣ ಮತ್ತು ಅವನ ಮಗಳು ಪ್ರತಿಮಾ ಇವರು ೧೯೬೦ ರ ಸುಮಾರು ಕುಲ-ದೇವತೆಯ ದರ್ಶನಕ್ಕೆ ಹೋಗಿದ್ದರು. ಎರಡು ವರ್ಷದ ಹುಡುಗಿ – ಪ್ರತಿಮಾ ಕುಲದೇವತೆಯ ಎದುರು ಕೈಯಲ್ಲಿ ಕೊಬ್ಬರಿ ಬಟ್ಟಲ ತೆಗೆದುಕೊಂಡು ಯಾವುದೋ ಒಂದು ಆವೇಶದಿಂದ ಕುಣಿಯುವುದನ್ನು ಕಂಡು ನನ್ನ ತಂದೆಯವರಿಗೆ ಕುಲ-ದೇವತೆಯ ಸ್ಪರ್ಶದ ಅರಿವಾಯಿತು. ಆ ಗ್ರಾಮದಲ್ಲಿ 'ಬೇಂದ್ರೆ ಮನೆತನದವರು ಇದ್ದ ಸ್ಥಳ ಇದು. ಇಲ್ಲಿಯ ಜನರು ಕರ್ನಾಟಕದತ್ತ ಹೋದರಂತೆ' ಎಂದು ಹೇಳುವ ಜನರು ಭೆಟ್ಟಿಯಾದದ್ದು ಒಂದು ಆಶ್ಚರ್ಯ. ಬೇಂದ್ರೆಯವರ ಹಿಂದಿನ ಹತ್ತು ತಲೆಮಾರುಗಳ ಕಥೆ ಇದು. ಕೇಳಶಿ ಗ್ರಾಮದ ಬೇಂದ್ರೆಮನೆತನ ಕೇಳಶಿಗೆ ಬಂದದ್ದು ಕುಂಭಾರು ಗ್ರಾಮದಿಂದ ಎಂದು ತಿಳಿಯಿತು. ಬಾಲಾಜಿ ಅವರಿಂದ ರಾಮಭಟರ ವರೆಗೆ ಬೇಂದ್ರೆ ಮನೆತನವು ಕುಂಭಾರು – ಕೇಳಶಿ – (ನಾಸೀಕ) ತಾಸಗಾಂವ – ಶಿರಹಟ್ಟಿಗೆ ಸ್ಥಳಾಂತರ ಮಾಡುತ್ತ ಬಂದಿದೆ.

ಈ ಕುಂಭಾರು ಎಲ್ಲಿ ಎಂದು ಬೇಂದ್ರೆಯವರ ಸಂಶೋಧನೆ ಪ್ರಾರಂಭ-ವಾಯಿತು. ಕುಲಾಬಾ ಜಿಲ್ಲೆಯಲ್ಲಿ ಶ್ರೀವರ್ಧನ ಎಂದು ಒಂದು ಪಟ್ಟಣ. ಇಲ್ಲಿಂದ ೧೫-೨೦ ಮೈಲಿನ ಮೇಲೆ ಸಮುದ್ರ ದಂಡೆ. ಅಲ್ಲಿ ಮಹಾರಾಷ್ಟ್ರ ಸರಕಾರದ ಕುಂಭಾರು ಎಂಬ ಬಂದರ ಈಗಿದೆ. ಆದರೆ ಅದಕ್ಕೆ ಈಗ ಆದಗಾಂವ ಎಂದು ಕರೆ-ಯುತ್ತಿದ್ದುದರಿಂದ ಮತ್ತು ಮುಂಬೈಯಿಂದ ಆದಗಾಂವ ವರೆಗೆ ಎಸ್. ಟಿ. ಬಸ್ಸು ಇದ್ದೂ ನಮಗೆ ಕುಂಭಾರು ಗ್ರಾಮದ ಪತ್ತೆ ಹತ್ತಲು ೧೯೬೨ ರಷ್ಟು ಕಾಲಾವಧಿ ಬೇಕಾಯಿತು.

೧೯೬೨ ರಲ್ಲಿ ನಾವೆಲ್ಲರೂ ಕುಂಭಾರು ಬಂದರಕ್ಕೆ ಹೋದೆವು. ಸಮುದ್ರದ

ದಂಡೆಗೆ ಒಂದು ಹಳ್ಳಿ. ಸಮುದ್ರದ ದಂಡೆಗುಂಟ ನಡೆಯುತ್ತ ಒಂದು ಗುಡ್ಡ ಏರಬೇಕು. ಅಲ್ಲಿ ಒಂದು ಗುಡಿ. ಅದೇ ಬೇಂದ್ರೆ ಮನೆತನದ 'ಕುಂಭಾರು ಕುಸುಮೇಶ್ವರಿ' ದೇವತೆಯ ಗುಡಿ. ಈ ಗುಡಿಗೆ ನಮ್ಮ ಈಗಿನ ಮನೆತನದವರು ಯಾರೂ ಹೋಗಿರಲಿಲ್ಲ. ಏಕೆಂದರೆ ಕುಲದೇವತೆಯ ಸ್ಥಳ ಎಲ್ಲಿದೆ ಎಂಬುದೇ ಯಾರಿಗೂ ಗೊತ್ತಿರಲಿಲ್ಲ. ೧೯೭೨ ರ ಅನಂತರದಲ್ಲಿ ಈಗ ನಮ್ಮ ಮನೆತನದ ಅನೇಕರು ಅಲ್ಲಿ ಹೋಗಿ ಬರುತ್ತಿದ್ದಾರೆ.

ಹಬಸಿ ಜನರು ದಾಳಿ ಮಾಡಿದಾಗ ಬೇಂದ್ರೆ ಮನೆತನದ ಪೂರ್ವಜರು ನಾಸಿಕ (ತ್ರ್ಯಂಬಕೇಶ್ವರ)ಕ್ಕೆ ಬಂದರು. ಅಲ್ಲಿ ಗಣಪತಿಯ ಉಪಾಸನೆಯನ್ನು ಪ್ರಾರಂಭಿಸಿದಾಗ, 'ನೀವು ಕರ್ನಾಟಕಕ್ಕೆ ಹೋಗಿರಿ, ಅಲ್ಲಿ ನಿಮ್ಮ ಮನೆತನದ ಉನ್ನತಿಯಾದೀತು' ಎಂಬ ಸ್ವಪ್ನದೃಷ್ಟಾಂತವಾಯಿತು. ಆ ದೃಷ್ಟಾಂತದ ಪ್ರಕಾರ ಬೇಂದ್ರೆ ಮನೆತನವು ಸಾಂಗಲಿಯ ಸಮೀಪದ ತಾಸಗಾಂವಕ್ಕೆ ಬಂದಿತು. ಶಿರಹಟ್ಟಿಯ ಲಾಗೂ ಮನೆತನದವರ ಪುರೋಹಿತರಾಗಿ ರಾಮಭಟ– ಬಚ್ಚಂಭಟ ಬೇಂದ್ರೆ (ಎಂಟನೆಯ ತಲೆಮಾರು) ಶಿರಹಟ್ಟಿಗೆ ಬಂದರು. ಬಚ್ಚಂಭಟರ ಹೆಸರು ತ್ರ್ಯಂಬಕ ಇರುವುದರಿಂದ ಇವರ ಕಾಲಕ್ಕೆ ಬೇಂದ್ರೆ ಮನೆತನವು ನಾಸೀಕಕ್ಕೆ ಬಂದಿರಬೇಕು. ಬಾಜಿಯವರಿಂದ ಬಚ್ಚಂಭಟ ಅವರ ವರೆಗಿನ ಕಥೆ ಕುಂಭಾರು ಮತ್ತು ಕೇಳಶೀ ಗ್ರಾಮದ್ದು. ಬಚ್ಚಂಭಟರಿಗೆ ಲಕ್ಷ್ಮಣ, ಕೃಷ್ಣಭಟ ಮತ್ತು ರಾಮಭಟ ಎಂದು ಮೂವರು ಮಕ್ಕಳು. ಲಕ್ಷ್ಮಣ ಇವರು ಲಕ್ಷ್ಮೇಶ್ವರದಲ್ಲಿ ಸ್ಥಿರವಾದರು. ರಾಮಭಟರು ಶಿರಹಟ್ಟಿಯಲ್ಲಿ ಸ್ಥಿರವಾದರು. ಲಕ್ಷ್ಮಣಭಟರ ಮನೆತನದವರಾದ ಲಕ್ಷ್ಮಣ ಜಿವಾಜಿ ಬೇಂದ್ರೆ ಮತ್ತು ರಾಮಭಟರ ಮನೆತನದವರಾದ ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಇಬ್ಬರೂ ಈಗ ಧಾರವಾಡದಲ್ಲಿಯೇ ಇದ್ದಾರೆ. ಕನ್ನಡ ಸಾಹಿತ್ಯಕ್ಕೆ ಇಬ್ಬರ ಹೆಸರೂ ಪರಿಚಿತ.

ಬೇಂದ್ರೆ ಮನೆತನ ವೈದಿಕರದು. ದಶಗ್ರಂಥಿಗಳು, ವೇದಪಾರಂಗತರು, ಉಪಾಸಕರು ಆದ ರಾಮಭಟರಿಗೆ ಹರಿ, ವಿನಾಯಕ, ನಾರಾಯಣ, ವಿಶ್ವನಾಥ ಮತ್ತು ತ್ರ್ಯಂಬಕ (ಅಪ್ಪಾ) ಎಂದು ಐದು ಜನ ಗಂಡುಮಕ್ಕಳು. ಶಿರಹಟ್ಟಿಯ ಲಾಗೂ ಅವರಲ್ಲಿ ಮಹಿಮಾಶಾಲಿಗಳಾದ ಚಿದಂಬರ ದೀಕ್ಷಿತರು ಬಂದಾಗ ಬೇಂದ್ರೆ ಮನೆತನದವರೂ ಅವರ ದರ್ಶನಭಾಗ್ಯ ಪಡೆದಿದ್ದರು. ರಾಮಭಟರು ಉಪಾಸನಾ ಮಾರ್ಗದಲ್ಲಿಯೇ ಇದ್ದು ಸಂನ್ಯಾಸವನ್ನು ಪಡೆದು ಸಮಾಧಿಸ್ಥರಾದರು. ಅವರ ಸಮಾಧಿ ಶಿರಹಟ್ಟಿಯಲ್ಲಿ ಇಂದಿಗೂ ಇದೆ. ಶಿರಹಟ್ಟಿಯ ಲಕ್ಷ್ಮೀ ನಾರಾಯಣ ಗುಡಿ, ಹನುಮಂತದೇವರ ಗುಡಿ ದಾಟಿ, ಊರ ಹೊರಗೆ ಒಂದು ಹಾಳು ಭಾವಿ[1], ಅದರ

1. 'ನಿರಾಭರಣ ಸುಂದರಿ'ಯಲ್ಲಿ ಪ್ರಕಟವಾದ 'ಮಗುವಿನ ಕರೆ'ಯಲ್ಲಿ ಚಿತ್ರಿತವಾದ ಭಾವಿ.

ಹತ್ತಿರ ಎರಡು ವಿಶಾಲವಾದ ಅಶ್ವತ್ಥ ವೃಕ್ಷಗಳು. ಅವುಗಳಲ್ಲಿ ಒಂದು ರಾಮಭಟ ಬಚ್ಚಂಭಟ ಬೇಂದ್ರೆಯವರ ಸಮಾಧಿ. ಇನ್ನೊಂದು ಫೈಸಾಸ ಮನೆತನದವರ ಸಮಾಧಿ. 'ಕರ್ನಾಟಕದಲ್ಲಿ ನಿಮ್ಮ ಮನೆತನದ ಉನ್ನತಿ ಇದೆ' ಎಂಬ ಸ್ವಪ್ನ ದೃಷ್ಟಾಂತದ ಮೊದಲನೆಯ ಗುರುತು — ಶಿರಹಟ್ಟಿಯಲ್ಲಿರುವ ರಾಮಭಟರ-ಸಮಾಧಿ.

ರಾಮಭಟರ ಜೊತೆಗೆ ಅವರ ಮಕ್ಕಳಲ್ಲಿ ತ್ರ್ಯಂಬಕ (ಅಪ್ಪಾಭಟ) ಅವರು ಇರುತ್ತಿದ್ದರು. ಇವರ ಜನ್ಮ ಸುಮಾರು ೧೮೪೦, ಮರಣ ಮೇ ೧೯೧೪. ರಾಮಭಟರ ಸಹವಾಸದಲ್ಲಿ ಬೆಳೆದ ಅಪ್ಪಾಭಟರು ವೇದಾದಿಗಳ ಪಠಣ, ಪುರಾಣ-ಪಾರಾಯಣ, ಕೀರ್ತನೆ ಮಾಡುವುದು ಮೊದಲಾದ ನಿತ್ಯಕರ್ಮದಲ್ಲಿ ತೊಡಗಿದ್ದರು. ಶಿರಹಟ್ಟಿಯ ಫಕೀರಸ್ವಾಮಿಗಳೊಂದಿಗೂ ಇವರ ಸಹವಾಸವಿತ್ತು. ಮುಳಗುಂದ, ಲಕ್ಷ್ಮೇಶ್ವರ, ಶಿರಹಟ್ಟಿ ಸುತ್ತುಮುತ್ತಲಿನ ಜನರಲ್ಲಿ ಅಪ್ಪಾಭಟರ ಬಗ್ಗೆ ಅಪಾರ ಗೌರವವಿತ್ತು. ವೇದಾಧ್ಯಯನ, ಸಂಸ್ಕೃತ ಪಾಠಪ್ರವಚನ ಹೇಳಿಸಿಕೊಳ್ಳಲು ಅನೇಕರು ಬರುತ್ತಿದ್ದರು. ಬೆಳಧಡಿಯ ಬ್ರಹ್ಮಾನಂದ ಮಹಾರಾಜರು (ಕಾಗವಾಡ-ನವಬಾಗದಲ್ಲಿ ಇವರ ಸಮಾಧಿ ಈಗ ಇದೆ) ಪೂರ್ವಾಶ್ರಮದಲ್ಲಿ ಅಪ್ಪಾಭಟರ ಕಡೆಗೆ ಯಾಜ್ಞಿಕ ಪಾಠ ಹೇಳಿಸಿಕೊಂಡಿದ್ದರು ಎಂದು ಹೇಳಲಾಗುತ್ತದೆ.

"ಕಡಿಗೆಯಾದ ಹೆಣ್ಣುಮಗಳು ಇಟ್ಟುಕೊಂಡ ನೀರನ್ನು, ಅವರ ನೆರೆಮನೆ-ಯವನೊಬ್ಬನು ತಿಳಿಯದೇ ಕುಡಿದುಬಿಟ್ಟ. ಅನಂತರ ಅವನಿಗೆ ತಾನು ಮಾಡಿದ್ದು ಪಾಪ ಎಂಬ ಭಾವನೆ ಕಾಡಹತ್ತಿತು. ಆ ಪಾಪಕ್ಕೆ ಪರಿಹಾರವೇನು ಎಂಬುದು ಅವನ ಪ್ರಶ್ನೆ. ಆಗ ಶಿರಹಟ್ಟಿಯ ಪಂಡಿತರು ಆ ಮನುಷ್ಯನನ್ನು ಕರೆದುಕೊಂಡು ಅಪ್ಪಾಭಟರ ಹತ್ತಿರ ಬಂದು, ನಡೆದುಹೋದ ಸಮಾಚಾರ ತಿಳಿಸಿದರು. ಪರಿ-ಹಾರವನ್ನು ಸೂಚಿಸಬೇಕು ಎಂದು ಪ್ರಾರ್ಥಿಸಿದರು. ಆಗ ಅಪ್ಪಾಭಟರು 'ನೀನು ನಿನ್ನ ಮನೆ ಬರುವವರೆಗೆ 'ನಾನು ಆ ನೀರು ಕುಡಿದದ್ದು ತಪ್ಪಾಯಿತು', ಎಂದು ನಿನಗೆ ನೀನೆ ಹೇಳಿಕೊಳ್ಳುತ್ತ ಮನೆಗೆ ಹೋಗು' ಎಂದು ಹೇಳಿದರಂತೆ. ಆ ಪ್ರಕಾರ ಆ ಮನುಷ್ಯ ಮಾಡಿದ. ಅವನ ಮನೆ ಬರುವಷ್ಟರಲ್ಲಿ ಅವನಿಗೆ ರಕ್ತದ ವಾಂತಿ ಆಗಿ ಅವನ ಮನಸ್ಸು ಹಗುರಾಯಿತು. ಅವನಿಗೆ ಸಮಾಧಾನ ಸಿಕ್ಕಿತು" ಎಂದು ಒಂದು ಕಥೆ ಮುಳಗುಂದದ ಜನರು ಇಂದಿಗೂ ಹೇಳುತ್ತಾರೆ. ಈ ಬಗೆಯ ಪರಿಹಾರೋ-ಪಾಯ ಸೂಚಿಸಿದ್ದು ಅಪ್ಪಾಭಟರ ಖ್ಯಾತಿಗೆ ಕಾರಣವಾಯಿತು.

ಅಪ್ಪಾಭಟರಿಗೆ ತಪೋಬಲವಿದ್ದಂತೆ ಕಾವ್ಯಶಕ್ತಿ, ಕಾವ್ಯಾಭ್ಯಾಸವಿತ್ತು. ಅವರು 'ಸತ್ಯನಾರಾಯಣ ಕಥಾ' 'ಓವಿ' ಛಂದಸ್ಸಿನಲ್ಲಿ ಮತ್ತು 'ಪಾರ್ವತಿ ಪರಿ-ಣಯ' ಎಂಬ ಕೀರ್ತನೆಯನ್ನು ರಚಿಸಿದ್ದರು. ಈ ಕೀರ್ತನೆಯನ್ನು ಮುಳಗುಂದದ

ರಾಮಾಶಾಸ್ತ್ರಿಗಳು ಮಾಡುತ್ತಿದ್ದರು. ಅವರು ಮಾಡಿದ ಮೊದಲನೆಯ ಕೀರ್ತನವೇ ಅದು. ಬೇಂದ್ರೆಯವರಿಗೆ 'ಪಾರ್ವತಿ ಪರಿಣಯ' ಕೀರ್ತನೆಯನ್ನು ರಾಮಾಶಾಸ್ತ್ರಿಗಳು ಮಾಡಿತೋರಿಸಿದ್ದು ಗೋಕರ್ಣದಲ್ಲಿ. ಈ ಎರಡೂ ಕೃತಿಗಳು ನಮಗೆ ಈ ವರೆಗೆ ಸಿಕ್ಕಿಲ್ಲ. ಅಪ್ಪಾಭಟರು ರಚಿಸಿದ 'ಛಂದೋದಾಹರಣ ರತ್ನಮಾಲಾ' ಎಂಬ ಕಾವ್ಯಶಾಸ್ತ್ರಗ್ರಂಥದ ಕೈಬರಹದ ಪ್ರತಿ ನಮಗೆ ಸಿಕ್ಕಿತು. ಅದನ್ನು ೧೯೫೮ ರಲ್ಲಿ ಡಾ|| ಪಂಡಿತ ಆವಳೀಕರ ಅವರ ಸಂಪಾದಕತ್ವದಲ್ಲಿ ಪ್ರಕಾಶನಗೊಳಿಸಿದ್ದೇವೆ. "ತ್ರ್ಯಂಬಕ ರಾಮಚಂದ್ರ ಬೇಂದ್ರೆ ಬರೆದ 'ಛಂದೋದಾಹರಣ ರತ್ನಮಾಲೆ'ಯಲ್ಲಿ ಆರ್ಯಾ ಛಂದಸ್ಸಿನ ೮೦ ಪ್ರಕಾರ ಕೊಟ್ಟಿದ್ದಾರೆ. 'ಆರ್ಯಾ' ಛಂದಸ್ಸಿನ ಇಷ್ಟು ಸೂಕ್ಷ್ಮ ವಿಚಾರವು ಇಂದಿನ ವರೆಗೆ ಮರಾಠಿ ಸಾಹಿತ್ಯದಲ್ಲಿ ಆಗಿಲ್ಲ." ಎಂದು ಡಾ|| ಆವಳೀಕರರು ಅಭಿಪ್ರಾಯಪಟ್ಟಿದ್ದಾರೆ.

ಅಪ್ಪಾಭಟರಿಗೆ ಇಬ್ಬರು ಮಕ್ಕಳು – ರಾಮಚಂದ್ರ ( ತಾತಂಭಟ ) ಮತ್ತು ಬಂಡೋಪಂತ. ತಾತಂಭಟರು ಅಪ್ಪಾಭಟರ ಮಾರ್ಗದರ್ಶನದಲ್ಲಿ ವೇದಾಧ್ಯಯನ ಮಾಡಿ ವೈದಿಕವೃತ್ತಿಯಲ್ಲಿ ಶಿರಹಟ್ಟಿಯಲ್ಲಿ ಉಳಿದುಕೊಂಡರು. ಬಂಡೋಪಂತರು ಮ್ಯಾಟ್ರಿಕ್ ವರೆಗೆ ವಿದ್ಯಾಭ್ಯಾಸ ಮುಗಿಸಿಕೊಂಡು ಪುಣೆಯಲ್ಲಿ ಮಿಲಿಟರಿ ಅಕೌಂಟ್ಸ ಖಾತೆಯಲ್ಲಿ ಕೆಲಸಕ್ಕೆ ಸೇರಿದರು. ಬಂಡೋಪಂತರಿಗೆ ಮಕ್ಕಳಾಗಲಿಲ್ಲ. ಅವರು ತಮ್ಮ ಸಂಪೂರ್ಣ ಜೀವನವನ್ನು ಪುಣೆಯಲ್ಲಿಯೇ ಕಳೆದರು. ತಾತಂಭಟರಿಗೆ ಶಿರಸಿಯ ಒಂದು ಹೆಣ್ಣು ತಂದು ಮದುವೆ ಮಾಡಿದರು. ಅವಳು ಬೇಗನೆ ತೀರಿ–ಕೊಂಡಳು. ಅನಂತರ ತಲವಾಯಿಯಲ್ಲಿ ಹುಟ್ಟಿ ಧಾರವಾಡದಲ್ಲಿ ತಾಯಿಯ ಮನೆಯಲ್ಲಿ ಬೆಳೆದ ಅಂಬವ್ವ (ಅಂಬಿಕಾ) ಮತ್ತು ತಾತಂಭಟರ ವಿವಾಹವಾಯಿತು. ಅಂಬಿಕಾ (ಪಾರ್ವತಿ) ಮತ್ತು ತಾತಂಭಟರಿಗೆ ನಾಲ್ಕು ಮಕ್ಕಳು—ದತ್ತಾತ್ರೇಯ, ಚಿದಂಬರ, ರಾಘು ಮತ್ತು ಕೃಷ್ಣಾ. ದತ್ತಾತ್ರೇಯ ರಾಮಚಂದ್ರ ಬೇಂದ್ರೆ (ಅಂಬಿಕಾತನಯ ದತ್ತ) ಧಾರವಾಡದಲ್ಲಿ ಮತ್ತು ಕೃಷ್ಣ ರಾಮಚಂದ್ರ ಬೇಂದ್ರೆ ಪುಣೆಯಲ್ಲಿ ಇದ್ದಾರೆ. ಚಿದಂಬರ ಮತ್ತು ರಾಘು ಬೇಗನೆ ತೀರಿಕೊಂಡರು.

ಅಂಬಿಕಾತನಯದತ್ತರ ತಾಯಿ ಹುಟ್ಟಿದ್ದು ಧಾರವಾಡ ತಾಲೂಕಿನ ಹೆಬ್ಬಳ್ಳಿ ಹತ್ತಿರದ ತಲವಾಯಿಯಲ್ಲಿ. ಅಂಬಿಕಾತನಯದತ್ತರ ಅಜ್ಜಿ (ತಾಯಿಯ ತಾಯಿ) ಗೋದೂಬಾಯಿ. ಇವರ ತವರು ಮನೆ ನರಗುಂದ; ಅತ್ತೆಯಮನೆ ಮುಳಗುಂದ. ಅಂಬಿಕಾತನಯದತ್ತರ ಮಲತಾಯಿ ಶಿರಸಿಯವಳು. ಅಂಬಿಕಾತನಯದತ್ತರ ಒಬ್ಬ ಅಬಚಿಯನ್ನು ನರಗುಂದಕ್ಕೆ ಮತ್ತು ಇನ್ನೊಬ್ಬಳನ್ನು ಛತಕುಣಕಿ (ಇಂಡೀ ತಾಲೂಕು) ಗೆ ಕೊಟ್ಟಿತ್ತು. ಅಂಬಿಕಾತನಯದತ್ತರ ಪತ್ನಿ — ಲಕ್ಷ್ಮೀಬಾಯಿ ಹುಟ್ಟಿದ್ದು ನರೇಗಲ್ಲದಲ್ಲಿ; ಬೆಳೆದದ್ದು ಹಾವೇರಿ, ಬ್ಯಾಡಗಿ, ರಾಣೇಬೆನ್ನೂರು, ನರ–

ಗುಂದ ಮೊದಲಾದ ಪರಿಸರದಲ್ಲಿ. ದತ್ತಾತ್ರೇಯ ಮತ್ತು ಲಕ್ಷ್ಮೀಬಾಯಿಯರ ವಿವಾಹ ನಡೆದದ್ದು ಹುಬ್ಬಳ್ಳಿಯಲ್ಲಿ. ಈ ರೀತಿ ಅಂಬಿಕಾತನಯದತ್ತರ ಸುತ್ತುಮುತ್ತು ಕರ್ನಾಟಕದ ಕರುಳುಬಳ್ಳಿ ಹಬ್ಬಿಕೊಂಡದ್ದನ್ನು ಕಾಣುತ್ತೇವೆ.

ಬೇಂದ್ರೆಯವರ ಅಜ್ಜಿ ಗೋದೂಬಾಯಿ ಪಟ್ಟ ಕಷ್ಟದ ಲೆಕ್ಕವಿಡಲು ಎಂಟೆದೆ ಬೇಕು. ಗೋದೂಬಾಯಿ ಅವರಿಗೆ ಹದಿನೇಳು ಜನ ಮಕ್ಕಳಾದರು. ಅವರಲ್ಲಿ ಒಬ್ಬ ಮಗ—ಗುರುನಾಥ ಸ್ವಲ್ಪ ಚೆನ್ನಾಗಿ ಬೆಳೆದು, ಕಲಗಡಗಿಯ ಕಲ್ಲಿನಲ್ಲಿ ಹನುಮಂತನನ್ನು ಕೊರೆದು ತಾಯಿಯ ಮನಸ್ಸಿಗೆ ಸಂತಸ ಕೊಟ್ಟನಂತೆ. ಆದರೆ ಅವನೂ ಬಹಳ ದಿವಸ ಬದುಕಲಿಲ್ಲ. ಅವನು ಕೊರೆದ ಹನುಮಂತ ಅಜ್ಜಿಯ ಸ್ಮೃತಿಯಾಗಿ ನಮ್ಮ ದೇವರ ಮನೆಯಲ್ಲಿ ಬಂದು ಸ್ಥಾನ ಪಡೆದಿದ್ದಾನೆ. ಬೇಂದ್ರೆಯವರ ಅಜ್ಜ (ತಾಯಿಯ ತಂದೆ) ಕೃಷ್ಣಾಜಿಪಂತ ನಾತು—ಅವರು ಹೆಬ್ಬಳ್ಳಿಯ ಜಹಾಗಿರದಾರರ ಹತ್ತಿರ ಕಾರಕೂನರಾಗಿದ್ದರು. ೧೮೭೮-೭೯ರ ಸುಮಾರು ಅವರು ತೀರಿಕೊಂಡಾಗ ಗೋದೂಬಾಯಿ ನಾಲ್ಕು ತಿಂಗಳ ಬಸುರಿ. ಹುಟ್ಟಿದ ಹದಿನಾರು ಮಕ್ಕಳಲ್ಲಿ ಇಬ್ಬರು ಹೆಣ್ಣುಮಕ್ಕಳು ಮಾತ್ರ ಬದುಕಿದ್ದರು. ಈಗ ಹುಟ್ಟುವ ಒಂದು ಮಗು ಗಂಡಾದರೆ ತಮ್ಮ ಜೀವನಕ್ಕೆ ಹಾದಿಯಾದೀತು ಎಂಬ ದೊಡ್ಡ ಆಸೆ ಅವರಿಗಿತ್ತು. ಹೆಬ್ಬಳ್ಳಿ ಹತ್ತಿರದ ತಲವಾಯಿಯಲ್ಲಿ ಒಬ್ಬ ಬಡಿಗರ ಮನೆಯಲ್ಲಿ ಗೋದಲೆಯಲ್ಲಿ ಗೋದೂಬಾಯಿ ಹಡೆದಳು. ಗೋದೂಬಾಯಿಗೆ ನಿರಾಶೆ ಆಯಿತು. ಈಗ ಹುಟ್ಟಿದ್ದೂ ಹುಡುಗಿ — ಅಂಬವ್ವ — ಬೇಂದ್ರೆಯವರ ತಾಯಿ. ತಮ್ಮ ತಾಯಿಗೆ ಅಂಬವ್ವ ಎಂದು ಹೆಸರು ಏಕೆ ಇಟ್ಟಿರಬೇಕು ಎಂಬ ಪ್ರಶ್ನೆ ಬಹಳ ದಿವಸದಿಂದ ಬೇಂದ್ರೆಯವರನ್ನು ಕಾಡುತ್ತಿತ್ತು.

ಇತ್ತೀಚೆ ಮೂರು-ನಾಲ್ಕು ವರ್ಷಗಳ ಹಿಂದೆ ಬೇಂದ್ರೆಯವರು ಮತ್ತು ನಾನು ಕೂಡಿ ಧಾರವಾಡದ ಅಮ್ಮಿನಭಾವಿಯ ಕಡೆಯಿಂದ ತಲವಾಯಿಗೆ ಹೋಗಿದ್ದೆವು. ಹಾದಿ ಇಂದಿಗೂ ಅಷ್ಟು ಸರಿಯಾಗಿಲ್ಲ. ಚಂದನಮಟ್ಟಿ-ಸೋಮ ಪ್ರಚಂಡ ದರೋಡೆ ಮಾಡುವವನೆಂದು ಪ್ರಖ್ಯಾತನಾಗಿದ್ದ—ಎಂಬುದು ಬೇಂದ್ರೆಯವರ ನೆನಪಿನಲ್ಲಿ ಇತ್ತು. ತಲವಾಯಿಗೆ ಹೋಗುವಾಗ ಚಂದನಮಟ್ಟಿ ಹತ್ತಿತು. ಅಲ್ಲಿ ಸೋಮ್ಯಾನ ವಿಷಯ ತಿಳಿದುಕೊಂಡು, ತಲವಾಯಿಯ ಬಡಿಗರ ಮನೆ ಶೋಧಿಸುತ್ತ ಹೋದೆವು. ಬಡಿಗರ ಮನೆ ಸಿಕ್ಕಿತು. ಅವರ ಮನೆಯ ಎದುರು ಒಂದು ಅಂಬವ್ವನ ಗುಡಿ ಇದೆ. ಇಂದಿಗೂ ಅದು ಜೀರ್ಣೋದ್ಧಾರದ ಹಾದಿ ಕಾಯುತ್ತಿದೆ. ಈ ಗುಡಿಯ ಮೂಲಕ ಗೋದೂಬಾಯಿ ತನ್ನ ಮಗಳಿಗೆ ಅಂಬವ್ವ ಎಂದು ಹೆಸರಿಟ್ಟಿರಲು ಸಾಕು ಎಂಬ ಅನಿಸಿಕೆಯೊಂದಿಗೆ ನಾವು ಧಾರವಾಡಕ್ಕೆ ಮರಳಿ ಬಂದೆವು.

ಕೃಷ್ಣಾಜಿಪಂತ ನಾತು ತೀರಿಕೊಂಡಾಗ ಅವರ ಬಳಗದವರು ಗೋದೂಬಾಯಿಯತ್ತ ದುರ್ಲಕ್ಷ್ಯಮಾಡಿದರು. ಇದರಿಂದ ಬೇಸತ್ತ ಗೋದೂಬಾಯಿ, ತಲ-

ವಾಯಿಯ ಋಣ ಮುಗಿಸಿ, ಮೂರೂ ಹೆಣ್ಣುಮಕ್ಕಳನ್ನು ಕಟ್ಟಿಕೊಂಡು ಧಾರವಾಡಕ್ಕೆ ಬಂದು ಒಂದು ಖಾನಾವಳಿ ತೆಗೆದಳು. ಗೋದೂಬಾಯಿ ಚಿದಂಬರಸ್ವಾಮಿಗಳ ಭಕ್ತಳು. ಅವಳು ತೆಗೆದ ಖಾನಾವಳಿಗೆ ಬರುವ ಜನರಲ್ಲಿ ಅನೇಕ ಜನರು ಗೋಂದವಲೇಕರ ಬ್ರಹ್ಮಚೈತನ್ಯಮಹಾರಾಜರ ಭಕ್ತರೆ ಹೆಚ್ಚು. ಗೋದೂಬಾಯಿ ಮೂರೂ ಹೆಣ್ಣು ಮಕ್ಕಳನ್ನು ಬಹು ಕಷ್ಟದಿಂದ ಸಾಕಿ, ಒಬ್ಬಳನ್ನು ನರಗುಂದದಲ್ಲಿಯ ಗೋಂದವಲೇಕರ ಮಹಾರಾಜರ ಶಿಷ್ಯರಿಗೆ, ಮತ್ತೊಬ್ಬಳನ್ನು ಭತಕುಣಕಿಯ ಛತ್ರೇ ಅವರಿಗೆ ಮತ್ತು ಅಂಬವ್ವನನ್ನು ಶಿರಹಟ್ಟಿಯ ರಾಮಚಂದ್ರ (ತಾತಂಭಟ) ಇವರಿಗೆ ಕೊಟ್ಟು ವಿವಾಹ ಮಾಡಿದಳು.

ಗೋಂದವಲೇಕರ ಮಹಾರಾಜರ ಭಾವಚಿತ್ರಗಳು ಕರ್ನಾಟಕದ ಅನೇಕ ಮನೆತನಗಳಲ್ಲಿ ಪೂಜೆಪಡೆಯುತ್ತಿದ್ದವು. ಗೋಂದವಲೇಕರ ಮಹಾರಾಜರ ಒಂದು ಭಾವಚಿತ್ರವನ್ನು ಅಂಬವ್ವನೂ ಪೂಜಿಸುತ್ತಿದ್ದಳು. ಪ್ರತಿದಿವಸ ಇಪ್ಪತ್ತೊಂದು-ನೂರು ಪ್ರದಕ್ಷಿಣೆ ಹಾಕುವ ನಿಯಮವಿತ್ತಂತೆ. ಒಂದಾನೊಂದು ದಿವಸ ಪ್ರದಕ್ಷಿಣೆ ಹಾಕುವಾಗ ತಲೆತಿರುಗಿದಂತಾಗಿ ಕೆಳಗೆ ಕುಳಿತಳು, ಕಣ್ಣು ಮುಚ್ಚಿದಳು. ಬ್ರಹ್ಮ-ಚೈತನ್ಯ ಸ್ವಾಮಿಗಳು ಪ್ರತ್ಯಕ್ಷ ಪ್ರಕಟವಾಗಿ ಆಶೀರ್ವದಿಸಿದರು, ಉಡಿಯಲ್ಲಿ ತೆಂಗಿನಕಾಯಿ ಹಾಕಿ, ಹಣೆಗೆ ಕುಂಕುಮ ಹಚ್ಚಿದರು. ಅಂಬವ್ವನಿಗೆ ಎಚ್ಚರಾದಾಗ ಎದುರಿಗೆ ಯಾರೂ ಇಲ್ಲ. ಆದರೆ ಉಡಿಯಲ್ಲಿ ತೆಂಗಿನಕಾಯಿ, ತುಳಸೀಪತ್ರವಿದೆ. ಈ ಆನಂದಾನುಭೂತಿಯನ್ನು ಅವರು ರಾಮಚಂದ್ರರಿಗೆ ತಿಳಿಸಿದರು. ಇಬ್ಬರೂ ಗೋಂದಾವಲಿಗೆ ಹೋಗಿ ಮಹಾರಾಜರ ದರ್ಶನ ಪಡೆದು, ರಾಮನಾಮೋಪಾಸನೆ ಪ್ರಾರಂಭಿಸಿದರು. ಅನಂತರವೇ ಅವರಿಗೆ ಚೊಚ್ಚಿಲು ಮಗ ದತ್ತಾತ್ರೇಯ ಬೇಂದ್ರೆ ಹುಟ್ಟಿದ್ದು.

ಚೊಚ್ಚಿಲ ಮಗುವಿನ ಸಂಭ್ರಮ ಒಂದು ಕಡೆ ಆದರೆ, ಅದೇ ಕಾಲಕ್ಕೆ ರಾಮಚಂದ್ರರಿಗೆ ಗಂಡಮಾಲಿಯ ರೋಗ ಪ್ರಾರಂಭವಾಯಿತು. ಮುಂದೆ ಅದು ಬೆಳೆಯುತ್ತ ಹೋಯಿತು. ಅವರು ವೈದಿಕವೃತ್ತಿಯಲ್ಲಿ ಲಕ್ಷ್ಯ ಹಾಕುವುದೂ ಕಡಿಮೆ ಆಗತೊಡಗಿತು. ಕೆಲವು ದಿವಸ ಶಿರಹಟ್ಟಿ, ಕೆಲವು ದಿವಸ ಧಾರವಾಡದಲ್ಲಿ ಅತ್ತೆ-ಗೋದೂಬಾಯಿಯವರ ಮನೆಯಲ್ಲಿ ರಾಮಚಂದ್ರರ ವಾಸ ಪ್ರಾರಂಭವಾಯಿತು. ಗೋದೂಬಾಯಿಯವರ ಎರಡೂ ಹಿರಿಯ ಮಡುಗಿಯರು ಅಕಾಲದಲ್ಲಿ ತೀರಿಕೊಂಡಿದ್ದರಿಂದ ಅವರ ಜೀವಿತದ ಆಸರೆ — ಅಂಬವ್ವ. ಹೀಗಾಗಿ ಗೋದೂಬಾಯಿ, ಅಂಬವ್ವ ಧಾರವಾಡದಲ್ಲಿಯೆ ಇರುವುದು ರೂಢಿ ಆಯಿತು. ರಾಮ-ಚಂದ್ರರು ಮನಸ್ಸು ಸರಿ ಇದ್ದಾಗ ಧಾರವಾಡದಲ್ಲಿ ಇರುತ್ತಿದ್ದರು, ದತ್ತಾತ್ರೇಯ ಗುಡಿಯ ಕಟ್ಟೆಯ ಮೇಲೆ ಕುಳಿತು ತಮ್ಮ ಜೀವಿತದ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಒಮ್ಮೆ ರೋಗ ಉಲ್ಬಣಗೊಂಡಾಗ ದತ್ತಾತ್ರೇಯ ಗುಡಿಯ

ಹಾಲಗೇರಿಯಲ್ಲಿ ಹಾರಿಕೊಂಡು ಪ್ರಾಣಕಳೆದುಕೊಳ್ಳುವ ಪ್ರಯತ್ನ ಮಾಡಿದರಂತೆ. ಅದು ಸಾಧ್ಯವಾಗದೆ ಮನೆಗೆ ಮರಳಿ ಬಂದರಂತೆ. ಗೋದೂಬಾಯಿ ಅವರಿಗೆ ತನ್ನ ಅಳಿಯನ ವಿದ್ವತ್ತೆಯ ಬಗ್ಗೆ ಅತಿ ಗೌರವವಿತ್ತು. ಆದರೆ ಅವರು ಈ ರೋಗಕ್ಕೆ ಬಲಿಯಾಗಿ ಸಂಸಾರ ಸರಿಯಾಗಿ ನಡೆಯದೆ ಇರುವುದನ್ನು ಕಂಡು ಗೋದೂಬಾಯಿ ವ್ಯಥಿತರಾಗುತ್ತಿದ್ದರು. ಇದ್ದೊಬ್ಬ ಮಗಳ ಸಂಸಾರ ತಾನೇ ನಡೆಸಿದರಾಯಿತು ಎಂಬ ನಿರ್ಣಯಕ್ಕೆ ಅವರು ಬಂದಿದ್ದರು.

**೧೮೯೬ ರಿಂದ ೧೯೧೩ :**

೧೮೯೬, ೩೧ ಜನೇವರಿ — ಮಾಘವದ್ಯ ಪ್ರತಿಪದಾ — ಗುರುಪ್ರತಿಪದಾ —ಮನ್ಮಥನಾಮಸಂವತ್ಸರ ಧಾರವಾಡದ ಪೋತನೀಸ ಓಣಿಯ ಗುಣಾರಿಯವರ ಮನೆಯಲ್ಲಿರುವ ಗೋದೂಬಾಯಿಗೆ ಸಂಭ್ರಮವೇ ಸಂಭ್ರಮ. ತನ್ನ ಮಗಳು — ಅಂಬವ್ವ ಚೊಚ್ಚಿಲು ಮಗನನ್ನು ಪಡೆದಳು. ಗೋಂದವಲೇಕರ ಮಹಾರಾಜರ ಹರಕೆಯ ಟೆಂಗಿನಕಾಯಿಯ ಫಲ ಇದು. ತನ್ನ ಮಗ — ಗುರುನಾಥ ತನಗೆ ಉಳೀಲಿಲ್ಲಾ. ತನ್ನ ಮಗಳಿಗೆ ಮಗನಾದನಲ್ಲಾ ಸಾಕು. ದೈವ ತನ್ನ ಬೆಂಬಲಕ್ಕಿದೆ ಎನಿಸಿತು ಗೋದೂಬಾಯಿಗೆ. ಗೋದೂಬಾಯಿ, ಅಂಬವ್ವ ಇವರ ಜೀವಜ್ಯೋತಿ ಈ ಚೊಚ್ಚಿಲು ಗಂಡುಮಗು. ಗುರುವಾರ, ನಿವೃತ್ತಿನಾಥರ ಜನ್ಮದಿನದಂದು ಹುಟ್ಟಿದ ಈ ಮಗುವಿಗೆ ದತ್ತಾತ್ರೇಯ ಎಂದು ನಾಮಕರಣ ಮಾಡಿದರು. ಕೆಲವು ವರ್ಷಗಳ ತರುವಾಯ ಒಮ್ಮೆ ಅಂಬವ್ವ, ಒಬ್ಬ ಸಾಧುಗಳಿಗೆ ಅನ್ನ ನೀಡಲು ಹೋದಾಗ, ಅಂಬವ್ವನ ಕಾಲುಬೆರಳು ನೋಡಿ, ಅವರು "ನಿನ್ನ ಮಗ ಕೀರ್ತಿವಂತನಾಗುತ್ತಾನೆ"–ಎಂದು ಭವಿಷ್ಯ ನುಡಿದಿದ್ದರಂತೆ. ಈ ಭವಿಷ್ಯವು ಅಂಬವ್ವ, ಮತ್ತು ಗೋದೂಬಾಯಿ ಇವರಿಗೆ ಸಾಕಷ್ಟು ಧೈರ್ಯ ಕೊಟ್ಟಿರಲು ಸಾಕು. ರಾಮಚಂದ್ರರು ತಮ್ಮ ರೋಗದೊಡನೆ ಹೋರಾಡುತ್ತ, ಹನ್ನೆರಡು ವರ್ಷ ಬಳಲಿ, ದತ್ತಾತ್ರೇಯ ಬೇಂದ್ರೆಯವರ ಉಪನಯನ ಮಾಡಿ, ಗಾಯತ್ರಿಮಂತ್ರೋಪದೇಶ ಕೊಟ್ಟರು. ದತ್ತಾತ್ರೇಯ ಅವರಿಗೆ ತಂದೆಯಿಂದ ಬಂದ ಮಹಾಕಾಣಿಕೆ–ಗಾಯತ್ರಿಮಂತ್ರೋಪದೇಶ. ದತ್ತಾತ್ರೇಯ ಬೇಂದ್ರೆಯವರ ಹನ್ನೆರಡನೆಯ ವರ್ಷಕ್ಕೆ ತಂದೆ ರಾಮಚಂದ್ರ ತೀರಿಕೊಂಡರು. ಅಂಬವ್ವ ಇವರ ಸಂಸಾರಕ್ಕೆ— ದತ್ತಾತ್ರೇಯ, ಮತ್ತು ಕೃಷ್ಣ ಎಂಬ ಎರಡೇ ಫಲಗಳು ಉಳಿದದ್ದು. ಗೋದುಬಾಯಿಯವರಿಗೆ ಇದೇ ಹೆಮ್ಮೆ — ತನಗೆ ಎರಡು ಮೊಮ್ಮಕ್ಕಳು—ಎರಡೂ ಗಂಡು ಎಂದು. ಮಕ್ಕಳೊಂದಿಗೆ ಅಂಬವ್ವ ಗೋದೂಬಾಯಿಯವರ ಹತ್ತಿರವೇ ಸಂಪೂರ್ಣವಾಗಿ ಧಾರವಾಡದಲ್ಲಿಯೆ ಇದ್ದುಬಿಟ್ಟರು. ದತ್ತಾತ್ರೇಯ ಬೇಂದ್ರೆಯವರ ಅಜ್ಜ ಅಪ್ಪಾಭಟ ಶಿರಹಟ್ಟಿಯಲ್ಲಿಯೆ ಇದ್ದುಬಿಟ್ಟರು. ಆಗಾಗ ಧಾರವಾಡಕ್ಕೆ ಅವರು ಬರುತ್ತಿದ್ದರು; ಬೇಂದ್ರೆಯವರೂ ಶಿರಹಟ್ಟಿಗೆ

ಹೋಗುತ್ತಿದ್ದರು. ಅಪ್ಪಾಭಟ ಮತ್ತು ದತ್ತಾತ್ರೇಯ ಇವರ ಸತತ ಸಹವಾಸ ಆಗದ್ದರಿಂದ ಅಪ್ಪಾಭಟರ ಕೈಕೆಳಗೆ ಅಭ್ಯಾಸ ಸಾಧ್ಯವಾಗಲಿಲ್ಲ.

ಬೇಂದ್ರೆಯವರ ಬಾಲ್ಯ, ತಾರುಣ್ಯ ಎಲ್ಲವೂ ಧಾರವಾಡದಲ್ಲಿಯೆ. ಅಜ್ಜಿ ಮಾಡುವ ಚಿದಂಬರಭಜನೆ, ತಾಯಿ ಮಾಡುವ ರಾಮಭಜನೆ, ತಾಯಿ-ಅಜ್ಜಿಗೆ ಮರಾಠಿ ಪುರಾಣಾದಿಗಳನ್ನು ಓದಿ ತೋರಿಸುವದು, ಮೊದಲಾದ ಭಕ್ತಿಪಥದ ಪರಿಸರದಲ್ಲಿ ಬೇಂದ್ರೆಯವರು ಬೆಳೆಯುತ್ತಿದ್ದರು. ಬೇಂದ್ರೆಯವರು ಚಿಕ್ಕವರಿದ್ದಾಗ ಗೋಂದವಲೇಕರ ಮಹಾರಾಜರು ಅವರನ್ನು ಎತ್ತಿಕೊಂಡು ಆಶೀರ್ವದಿಸಿದ್ದರಂತೆ. ಬೇಂದ್ರೆಯವರು ತಮ್ಮ ೬ನೆಯ ವಯಸ್ಸಿಗೆ ಮತ್ತು ೧೫ನೆಯ ವಯಸ್ಸಿಗೆ ಗೋಂದವಲೇಕರರ ದರ್ಶನ ಪಡೆದದ್ದು ಅವರ ನೆನಪಿನಲ್ಲಿದೆ. ೧೫ನೆಯ ವರ್ಷ ಪಡೆದ ದರ್ಶನ ವಿಶಿಷ್ಟ. ಬೇಂದ್ರೆಯವರು ಮಹಾರಾಜರ ದರ್ಶನಕ್ಕಾಗಿ ಪುಣೆಯ ಮುರಲೀಧರ ದೇವಸ್ಥಾನಕ್ಕೆ ಹೋಗಿದ್ದರು. ಅಷ್ಟರಲ್ಲಿ ಮಹಾರಾಜರು ಟಾಂಗಾದಲ್ಲಿ ಕುಳಿತು ಸ್ಟೇಶನ್ನಿಗೆ ಹೊರಟಿದ್ದರು. ಬೇಂದ್ರೆಯವರು ಒಂದು ಕೈಯಿಂದ ಟಾಂಗಾ, ಎರಡನೆಯ ಕೈಯಿಂದ ಮಹಾರಾಜರ ಪಾದ ಮುಟ್ಟುತ್ತ ಟಾಂಗಾದ ಹಿಂದಿನಿಂದ ಓಡಿಯೇ ಓಡಿದರು. ಮಹಾರಾಜರ ಆಶೀರ್ವಾದದ ಸಂಜ್ಞೆ ಪಡೆದು ಮನೆಗೆ ಮರಳಿದರು.

ಬೇಂದ್ರೆ ಮನೆತನ ವೈದಿಕರದು. ಜನರು ಊಟಕ್ಕೆ ಕರೆದರೆ ಹೋಗಬೇಕು. ಬೇಂದ್ರೆಯವರಿಗೆ ತಮ್ಮ ಮನೆಯ ಊಟ ಬಿಟ್ಟು ಬೇರೆ ಕಡೆಗೆ ಊಟ ಸೇರದು. ಅಜ್ಜಿ ಗೋದೂಬಾಯಿ ಮೊಮ್ಮಕ್ಕಳ ಊಟಉಪಚಾರ ಬಹಳೇ ಚೆನ್ನಾಗಿ ಇಟ್ಟಿದ್ದರು. ಬಡತನದಲ್ಲಿಯೂ ಊಟ ಶ್ರೀಮಂತವಾಗಿತ್ತು. ಭಕ್ಕರಿಯ ಜೊತೆಗೆ ಬೆಲ್ಲ ಸಿಗುವುದೇ ಚಿಕ್ಕವಯಸ್ಸಿನಲ್ಲಿ ಶ್ರೀಮಂತ ಊಟ. ಬೇಂದ್ರೆಯವರಿಗೆ ಇಷ್ಟೇ ಸಾಕಾಗಿತ್ತು. ಬೇರೆಯವರ ಮನೆಯ ಮೃಷ್ಟಾನ್ನಕ್ಕಿಂತ ಬೇಂದ್ರೆಯವರಿಗೆ ತಮ್ಮ ಮನೆಯ ಅರಳ್ಹಿಟ್ಟು ಹೆಚ್ಚು ರುಚಿಕರವಾಗಿ ತೋರುತ್ತಿತ್ತು. ಗೋದುಬಾಯಿಯವರ ಕಟ್ಟುನಿಟ್ಟಿನ ಜೀವನಮಾರ್ಗದರ್ಶನದಿಂದ ಬೇಂದ್ರೆಯವರ ಬಡತನದ ಜೀವನಕ್ಕೆ ಹುರಿಕಟ್ಟಾದ ಆತ್ಮಾಭಿಮಾನ ಬೆಳೆಯುತ್ತ ಹೊರಟಿತ್ತು.

ತಾಯಿ ಅಂಬಕ್ಕ ಬೇಂದ್ರೆಯವರಿಗೆ ವಿವಿಧ ಪುರಾಣಗಳನ್ನು, ಸಾಧುಸತ್ಪುರುಷರ ಚರಿತ್ರೆಗಳನ್ನು ಓದಿ ತೋರಿಸಲು ಹಚ್ಚಿ ದೈವಾವಲಂಬನದ ಬೀಜ ಬಿತ್ತಿದ್ದರು. ಬೇಂದ್ರೆಯವರು ವಾಸಿಸುತ್ತಿದ್ದುದು ಕಾಮನಕಟ್ಟಿಯ ಪರಿಸರದಲ್ಲಿ. ಸುತ್ತುಮುತ್ತು ಅನೇಕ ವೇಶ್ಯೆಯರು ಮಾನದಿಂದ ಬಾಳುತ್ತಿದ್ದರು. ಅಂಬಕ್ಕನವರ ಕಡೆಗೆ ಕೆಲವು ವೇಶ್ಯೆಯರು ಪುರಾಣ ಓದಿಸಿ ಕೇಳಲು ಬರುತ್ತಿದ್ದರು. ಆ ವೇಶ್ಯೆಯರು ದೇವರಲ್ಲಿ, ಪೂಜೆ-ಪುನಸ್ಕಾರಗಳಲ್ಲಿ ಭಕ್ತಿಭಾವ ಉಳ್ಳವರು. ಇಂಥವರ ಮನೆಗೆ ಬೇಂದ್ರೆಯವರು ಚಿಕ್ಕವರಿದ್ದಾಗ ಪೂಜೆಗೆ ಹೋಗಿದ್ದುಂಟು. 'ಹೆಣ್ಣು ಎನ್ನುವ

ಮಾತು, ತಾಯಿ ಎನ್ನುವ ಮಾತು ಎರಡಲ್ಲ ಒಂದು ' ಎಂದು ಬೇಂದ್ರೆಯವರಿಗೆ ತಿಳಿಸಿಕೊಟ್ಟವಳು ತಾಯಿ ಅಂಬಕ್ಕ. ಬೇಂದ್ರೆಯವರಿಗೆ ಅತ್ಯಂತ ಸಾಮಾನ್ಯ ಪ್ರಶ್ನೆಯಿಂದ ' ಸುತ್ತೆಲ್ಲ ಬೆಳಕಿದ್ದು ಒಳಗೆ ಕತ್ತಲೆ ಏಕೆ ' ಎಂಬ ಗಹನಪ್ರಶ್ನೆ ಬಂದರೂ ಅದಕ್ಕೆ ಉತ್ತರ ಕೊಡುತ್ತಿದ್ದರು ಅಂಬಕ್ಕ.

ಗೋದೂಬಾಯಿ ಮತ್ತು ಅಂಬಕ್ಕ ಇವರ ಸಂಪೂರ್ಣ ಜೀವದಾಸೆ ಬೇಂದ್ರೆಯವರು. ಇವನೊಬ್ಬನು ಚೆನ್ನಾಗಿ ಕಲಿತು ಮನೆಯ ಭಾರ ಹೊತ್ತರೆ ಸಾಕು ಎನ್ನುತ್ತಿತ್ತು ಅವರ ಅಂತರಂಗ. ಬೇಂದ್ರೆಯವರ ಚಿಕ್ಕವಯಸ್ಸು ಅವರನ್ನು ವಿವಿಧ ಆಟ-ಪಾಟ-ವಿನೋದಗಳತ್ತ ಎಳೆಯುತ್ತಿತ್ತು.

' ಹುಕುಂ ರಾಣೀದು ಇಂಗ್ರಜಿ ಅಮಲಾ
ಮಾರಕಿಟ ಕಟ್ಟಿಸಿದರಲ್ಲಾ '

' ಚಕ್ರವ್ಯೂಹದ ಕ್ವಾಟಿಯೊಳಗ
ಹೋಗಬ್ಯಾಡೋ ಮಗನೆ
ನೀರ ನೀರ ಎಂದು ಎಂದಿಯೊ ಬಾಲಾ
ಅಭಿಮನ್ಯು ಯಾ ತರುಣಾ '

' ಏ ಹುಸೇನಿ ಬಲೀದಲಿದೋ ಯಾಕೆ ಸುಲ್ತಾನ ಅಲ್ಬಿದಾ '

' ಮುಟ್ಟಾಕ ಬಾರೊ ಮೂಲಂಗಿಜಾಣಾ
ಮುಟ್ಟಾಕ ಬಾ ಅಂದರ ಮುಟ್ಟಾಕ ಬರವಲ್ಲಾ
ಕಾಳೀಸಿಂಗ್ಯಾನ ಮೊಮ್ಮಗನೋ '

( ಮೂಲಂಗಿಜಾಣಾ = ಮೂಲ್ಯಾಂಗ ಎಂಬ ಇಂಗ್ಲೀಷ್ ಅಧಿಕಾರಿ )

' ಬಸವಕ ಬಸವನಿರೆ
ಬಸವನ ಪಾದಕ ಶರಣನಿರೆ ॥ ಸೋ ಲಿಂಗಾಽ ॥ '

' ಗುಜುಗುಜು ಮಾಪುರೆ ಹೆಣ್ಣೈತೇ
ಗುಜ್ಜಾರಿ ಮಾಪುರೆ ಹೆಣ್ಣೈತೆ '

' ಕೋಲು ರನ್ನದ ಕೋಲು, ಕೋಲು ಚಿನ್ನದ ಕೋಲು
ಕೋಲು ಹವಳದಾ ಪವಳದಾ '

' ಗರುಡಾನೇರಿ ಬರುವಾ
ಇವನ್ಯಾರಮ್ಮಯ್ಯಾ ' ಮೊದಲಾದ ದಾಸರ ಪದ,

‘ ಜಳಕಾ ಮಾಡೋದೇ ಮತ್ತ
ಹೊಲಕ್ಕ ಹೋಗೋದೆ.
ಹೊಲದಾಗ ಆಕಿ ಗಂಡಾ ಹಸದಿದ್ದಾ
ಹಲ್ಲು ಕಿಸಿದಿದ್ದಾ.
ಸುರಗಿಯ ಹೋಳಗಿ ಮಾಡ್ಯಾಳೋ
ಹೆಡಗಿ ತುಂಬ್ಯಾಳೊ.
ದೂರಿಂದ ಗಂಡನ ಕಂಡಾಳೊ
ಮನದಾಗ ಅಂಜ್ಯಾಳೊ.
ಇಷ್ಟ್ಯಾಕ ಹೊತ್ತ ನಿನಅಕ್ಕನೆಂದಾ
ಹೊಡಿಯಲಿಕ್ಕೆ ಬಂದಾ.
ದೂರಿಂದ ಹೆಡಗಿ ಚಲ್ಲ್ಯಾಳೊ
ದೂರಕ್ಕ ಓಡ್ಯಾಳೊ.
ನರಗುಂದ ನಾಯಿ ಬಂದು ತಿಂದು ಹೋತು
ಕಥಿ ನಮ್ಮದು ಮುಗದ್ಹೋತು. ’

‘ ಮಡದಿ ಸೀತವ್ವಾ, ನಿನ್ನ
ಮದವಿ ಸಂಭ್ರಮಾ ಏನs
ಮಂಗಲಾರತಿಗೆ ಕರಸಲಿಲ್ಲ್ಯಾಕ ನಮ್ಮನ್ನ ? ’

‘ ಏನು ಮಾಡುತಿದ್ದಾಳಪ್ಪಾ ಗಂಗೀ ಒಳಗ
ಗ್ವಾಡಿ ಹತ್ತಿ ನೋಡಲೇನೋ ಕಿಡಿಕ್ಯಾಗ ’ (ಸಂಗ್ಯಾಬಾಳ್ಯಾನ ಆಟ)

ಸತ್ಯಭಾಮಾನ ಹಾಡು — ‘ ಹ್ಯಾಂಗ ಇರಲ್ಯವ್ವಾ ನಾನು ’ ( ಕೃಷ್ಣ ಪಾರಿಜಾತ ).

ಮೊದಲಾದ ನೂರಾರು ಹಾಡುಗಳತ್ತ ಬೇಂದ್ರೆಯವರ ಬಾಲಮನಸ್ಸು ಎಳೆಯಲ್ಪಡುತ್ತಿತ್ತು. ಇಂಥ ಹಾಡು ಹಾಡಿಕೊಳ್ಳುವುದರಲ್ಲಿ ಸುಖ ಪಡುತ್ತಿತ್ತು. ಶಾಲೆಗೆ ಒಯ್ಯುವ ಪಾಟೀಗಂಟಿನಲ್ಲಿ ಪುಸ್ತಕದ ಜೊತೆಗೆ ಚಾವಂಗ, ಕುಂಟ್ಬಿಲಪಿ, ಬುದ್ಧಿಬಳ, ಗಂಜೀಪು, ಹುಲಿಹಳ್ಳು ಮೊದಲಾದ ಆಟದ ಸಾಮಾನು ಹೆಚ್ಚಾಗಿ ಬೇಕು. ಶಾಲೆಗೆ ಹೋಗುವ ಹಾದಿಯಲ್ಲಿ ಮಂಗಾಟ, ಕರಡಿಕುಣಿತ, ಕೌಲೆತ್ತು, ಕಸರತ್ತು ನಡೆದಿದ್ದರೆ ಅದನ್ನು ನೋಡುವುದರಲ್ಲಿ ಬೇಂದ್ರೆಯವರ ಮನಸ್ಸು ಮೈಮರೆಯುತ್ತಿತ್ತು. ಶಾಲೆ ಬಿಡುವ ಹೊತ್ತಿಗೆ ಶಾಲೆಯ ಕಡೆಗೆ ಬೇಂದ್ರೆಯವರ ಸವಾರಿ ಹೊರಟದ್ದನ್ನು ಅವರ ಬಾಲ್ಯಸ್ನೇಹಿತರು ಇಂದಿಗೂ ಚೇಷ್ಟೆ ಮಾಡುತ್ತಾರೆ.

ಶಾಲೆಯ ಓದಿಗಿಂತ ತನ್ನ ಸುತ್ತುಮುತ್ತಲಿನ ಜೀವನ ನಿರೀಕ್ಷಣೆಯಲ್ಲಿ ಬೇಂದ್ರೆ ಯವರ ಮನಸ್ಸು ತೊಡಗಿತ್ತು. ಅಜ್ಜಿಯ ಖಾನಾವಳಿಗೆ ಅನೇಕ ಶಿಕ್ಷಕರು, ಗೋಂದವಲೇಕರರ ಭಕ್ತರು ಊಟಕ್ಕೆ ಬರುತ್ತಿದ್ದರು. ಅವರ ಬೌದ್ಧಿಕ ಮಾತು ಬೇಂದ್ರೆಯವರ ಕಿವಿಯ ಮೇಲೆ ಬೀಳುತ್ತಿದ್ದವು. ಆದರೆ ಅವರ ಮಾರ್ಗದರ್ಶನದಲ್ಲಿ ಸಾಗುವ ಇಚ್ಛೆ ಬೇಂದ್ರೆಯವರಿಗೆ ಆಗುತ್ತಿರಲಿಲ್ಲ. ಬೇಂದ್ರೆಯವರ ಬಾಲ್ಯದ ಬೆಳ-ವಣಿಗೆಯ ವಿಸ್ತಾರವನ್ನು ತಿಳಿದುಕೊಳ್ಳಬೇಕಾದರೆ ಅವರೇ ರಚಿಸಿದ ಬಾಲ್ಯಕಾಂಡ–'ಮತ್ತೆ ಶ್ರಾವಣಾ ಬಂತು' ಎಂಬ ಕವನಸಂಗ್ರಹದಲ್ಲಿ ಓದಬೇಕು. ಹುಡುಗಾಟದಲ್ಲಿ ಬೇಂದ್ರೆಯವರು ಬೆಳೆಯುತ್ತಿದ್ದರು. ದಿ. ಶ್ರೀಧರ ಖಾನೋಳಕರ ಜೊತೆ ಕೊಡುತ್ತಿದ್ದರು. ಆ ಕಾಲಕ್ಕೆ ಶ್ರೀಮಂತ ಮನೆತನದಲ್ಲಿ ಹುಟ್ಟಿದ ದಿ. ರಾಮು ದೀಕ್ಷಿತ ಬೇಂದ್ರೆಯವರಿಗೆ ಭೀಮಬಲವಾಗಿ ನಿಂತು ದುಷ್ಟಶಕ್ತಿಯಿಂದ ಕಾಯು-ತ್ತಿದ್ದರು.

೧೯೦೭ರಲ್ಲಿ ಬೇಂದ್ರೆಯವರ ತಂದೆ ತೀರಿಕೊಂಡರು. ಬಡತನದಲ್ಲಿ ಬರೆ ಕೊಟ್ಟಂತಾಯಿತು. ತಾಯಿ ಮತ್ತು ಅಜ್ಜಿ, ಬೇಂದ್ರೆಯವರು ವಿದ್ಯಾಭ್ಯಾಸದಲ್ಲಿ ಹೆಚ್ಚು ಲಕ್ಷ್ಯಕೊಡಬೇಕೆಂದು ಅಪೇಕ್ಷಿಸಿದರು. ಬೇಂದ್ರೆಯವರಿಗೆ ಸಿಗಬೇಕಾದ 'ವೆಂಕಾಸಾನಿ ಸ್ಕಾಲರಶಿಪ್' ಆಡಳಿತಗಾರರ ಚಾತುರ್ಯದಿಂದ ಸಿಕ್ಕಿರಲಿಲ್ಲ. ಬಡದಾಡಿ ಸಿಗುವಂತೆ ಮಾಡಬೇಕಾಯಿತು. ೫ ರೂಪಾಯಿಯ ಈ ಸ್ಕಾಲರಶಿಪ್ ಬೇಂದ್ರೆಯವರನ್ನು ಘಳಸಾಳಿಯನ್ನಾಗಿ ಮಾಡಿ ಬಡಸಂಸಾರದಲ್ಲಿ ಆಧಾರ ವಾಯಿತು.

ಬೇಂದ್ರೆಯವರಿಗೆ ತಮ್ಮ ತಮ್ಮನಾದ ರಾಘೂನ ಮೇಲೆ ಬಹಳ ಪ್ರೀತಿ. ರಾಘು ಅಣ್ಣನನ್ನು ಬಿಟ್ಟು ಇರುತ್ತಿರಲಿಲ್ಲ. ಅಣ್ಣ ಮನಸ್ಸಿನ ಗುಲಾಮ. ಗೆಳೆಯರು ಸಿಕ್ಕರೆ ಮನೆಯನ್ನೆ ಮರೆಯುವ ಸ್ವಭಾವ. ಅಣ್ಣ–ತಮ್ಮ ಇಬ್ಬರೂ ಒಂದು ದಿವಸ ಆಡಲು ಹೋದವರು ಮನೆಗೆ ಬರಲು ತಡಮಾಡಿದರು. ಮನೆಗೆ ಬಂದಾಗ ಅಜ್ಜಿ ಸಿಟ್ಟಿಗೆದ್ದು ಬೇಂದ್ರೆ ಮತ್ತು ರಾಘು ಇಬ್ಬರನ್ನೂ ಮನೆಯಿಂದ ಹೊರಗೆ ಹಾಕಿದಳು. ಊಟಕ್ಕೆ ಹಾಕಲಿಲ್ಲ. ಕಠೋರ ಶಿಕ್ಷೆ ವಿಧಿಸಿದಳು. ತಾಯಿ ಅಂಬಕ್ಕ ಇದಕ್ಕೆ ಅಡ್ಡಿಬರಲಿಲ್ಲ. ಬೇಂದ್ರೆಯವರು ರಾಘೂನ ಕೈ ಹಿಡಿದುಕೊಂಡು ಶಿಕ್ಷೆ ಅನುಭವಿಸಲು ಹೊರ ಹೊರಟರು. ರಾಘು ಹಸಿದಿದ್ದ. ಏನು ಮಾಡುವುದು? ನೀರು ಕುಡಿದು ಅಣ್ಣನ ಹಿಂದೆ ಹಿಂದೆ ಅಡ್ಡಾಡಿದ. ದಿ. ಆಲೂರ ವೆಂಕಟರಾಯರ ರಾಷ್ಟ್ರೀಯ ಶಾಲೆಯ ಆರಂಭೋತ್ಸವವಿತ್ತು. ಬೇಂದ್ರೆಯವರು ತಮ್ಮನನ್ನು ಕರೆದುಕೊಂಡು ಅಲ್ಲಿಗೆ ಹೋದರು. ಅಲ್ಲಿಯ ಭಾಷಣಕಾರರು ತಮ್ಮ ಭಾಷಣದಲ್ಲಿ ಒಂದು ದೇಶಭಕ್ತಿಯ ಕಥೆ ಹೇಳಿದರು. ಈ ಕಥೆಯನ್ನು ಹುಡುಗರಲ್ಲಿ ಯಾರು ಹೇಳುವರೊ ಅವರಿಗೆ ಎರಡು ದುಡ್ಡು ಇನಾಮು ಕೊಡುವುದಾಗಿ ಜಾಹೀರು ಮಾಡಿದರು.

ಬೇಂದ್ರೆಯವರು ಎದ್ದವರೆ ಆ ಕಥೆಯನ್ನು ಚೆನ್ನಾಗಿ ಹೇಳಿ, ಎರಡು ದುಡ್ಡು ಪಡೆದು, ತಮ್ಮನನ್ನು ಕರೆದುಕೊಂಡು ಹೊರಗೆ ಬಂದರು. ಎರಡು ದುಡ್ಡಿಗೆ ಬರುವ ಚುರಮುರಿ, ಖೊಬ್ಬರಿ, ಬೆಲ್ಲ ಕೊಂಡು ತಮ್ಮನಿಗೆ ತಿನಿಸಿದರು. ರಾತ್ರಿ ೧೦ ಘಂಟೆಯ ವರೆಗೂ ಹೊರಗೆ ತಿರುಗಾಡಿದರು. ರಾಘು ನಿದ್ದೆ ಎಂದ. ಮನೆಯ ಹತ್ತಿರದ ವೀರಭದ್ರದೇವರ ಗುಡಿಯಲ್ಲಿ ಹೋಗಿ ಕುಳಿತರು— ಅಣ್ಣ, ತಮ್ಮ. ನೆರೆ ಹೊರೆಯವರ ಹೇಳಿಕೆಯ ಪ್ರಕಾರ ಬೇಂದ್ರೆಯವರು ಅಜ್ಜಿಯಲ್ಲಿ ಕ್ಷಮಾಪಣೆ ಕೇಳಬೇಕು ಎಂದು ನಿರ್ಣಯವಾಯಿತು. ರಾಘು ಕ್ಷಮಾಪಣೆ ಕೇಳಲು ಮುಂದಾದ. ಅವನಿಗೆ ಅಜ್ಜಿಯ ಸಿಟ್ಟಿನ ಏಟು ಬಿತ್ತು. ಬೇಂದ್ರೆಯವರ ಸಾತ್ವಿಕ ಸಂತಾಪ ನೆತ್ತಿಗೇರಿತು; ಇಳಿಯಿತು. ಈ ಘಟನೆ ಬೇಂದ್ರೆಯವರ ಜೀವನಕ್ಕೆ ಒಂದು ರೂಪ ಕೊಟ್ಟಿತು ಎಂದು ಕಾಣುತ್ತದೆ. ಎಂಥ ಕಷ್ಟದಲ್ಲಿಯೂ ಯಾರ ಮುಂದೆಯೂ ಕೈ ಒಡ್ಡಬಾರದು. ತನಗೆ ಸಿಕ್ಕ ಹಣದಲ್ಲಿ ಚುರಮುರಿ ತಿಂದರಾಯಿತು, ಇಲ್ಲವೆ ಉಪ ವಾಸಬಿದ್ದರೂ ನಡೆದೀತು ಎಂಬ ಜೀವನದ ಗುರಿ ಅಂದಿನಿಂದ ಇಂದಿನವರೆಗೆ ಹುರಿ-ಗೊಂಡು ನಿಂತಿದೆ. ಕಷ್ಟಪರಿಹಾರಕ್ಕೆ ದೇವರನ್ನು ಕೇಳಿಕೊಳ್ಳಬೇಕೆ ಹೊರತು ಮಾನವರನ್ನಲ್ಲ ಎಂಬುದು ಬೇಂದ್ರೆಯವರ ಜೀವನದ ದೃಷ್ಟಿಕೋನ. ಬಡತನದಲ್ಲಿ ಹುಟ್ಟಿದವರಿಗೆ ಮೇಲೆ ಹೇಳಿದ ಜೀವನ ಗುರಿ, ದೃಷ್ಟಿಕೋನ ಇದ್ದರೆ ಲಾಭಕ್ಕಿಂತ ನಷ್ಟವೆ ಹೆಚ್ಚು.

ಬೇಂದ್ರೆಯವರಿಗೆ ಲಾಭ-ನಷ್ಟದ ಲೆಕ್ಕ ತಿಳಿಯಲೆ ಇಲ್ಲ. ಅವರು ತಮ್ಮ ಎರಡನೆಯ ವರ್ಷದಲ್ಲಿ ಅವರ ಬೆನ್ನಮೇಲಿನ ತಮ್ಮ-ಚಿದಂಬರನನ್ನು ಕಳೆದು ಕೊಂಡರು. ಚಿದಂಬರಸ್ವಾಮಿ ಗೋದುಬಾಯಿಯ ಅಂತರಂಗದ ಗುರು. ಅದರ ಪರಿಣಾಮವಾಗಿ ಮೊಮ್ಮಗನಿಗೆ ಚಿದಂಬರ ಎಂದು ಹೆಸರಿಡಲಾಯಿತು. ಆದರೆ ಅವನು ೧೮೯೮ರಲ್ಲಿ ಹುಟ್ಟಿದ, ಸತ್ತ. ಅವನು ಸತ್ತೊಡನೆ ಎರಡು ವರ್ಷದ ಬೇಂದ್ರೆ ಯವರಿಗೆ ತಮ್ಮನಾದ ಚಿದಂಬರನ ದೇಹದೊಳಗಿಂದ ಒಂದು ಜ್ಯೋತಿ ಹೊರ ಹೊರಟು ಹೋದದ್ದು ಕಂಡಿತು. ಈ ಜ್ಯೋತಿದರ್ಶನ ಬೇಂದ್ರೆಯವರ ಜೀವ-ನಕ್ಕೆ ಮಾರ್ಗದರ್ಶಕ ಶಕ್ತಿಯಾಯಿತು ಎಂದು ತೋರುತ್ತದೆ. ಇವರಿಗೆ ಯಾವ ಶಿಕ್ಷಕರ ಮಾರ್ಗದರ್ಶನಕ್ಕಿಂತ ಅಂತರಂಗಜ್ಯೋತಿಯ ಶಿಕ್ಷಣ ಬಾಲ್ಯದಲ್ಲಿಯೇ ಪ್ರಾರಂಭವಾಯಿತು. ಆದುದರಿಂದ ಇವರು ತಮ್ಮ ಅಂತರಂಗಕ್ಕೆ ತೋಚಿದ್ದನ್ನು ಮಾಡುವವರೇ ಹೊರತು ಬಾಹ್ಯದ ಒತ್ತಾಯಕ್ಕೆ ಬಗ್ಗದವರಾದರು.

ಶಾಲೆಯ ಅಭ್ಯಾಸ ಶಾಲೆಯ ಮಟ್ಟಿಗೆ. ಇನ್ನುಳಿದ ಹೊತ್ತು ಕೈಗೆ ಸಿಕ್ಕ ಕನ್ನಡ, ಮರಾಠಿ, ಇಂಗ್ಲೀಷ್, ಸಂಸ್ಕೃತ ಪುಸ್ತಕ ಓದುವುದು. ತಾಯಿಗೆ ಶ್ರೀಗೋಂದವಲೇಕರ ಮಹಾರಾಜ, ಶ್ರೀ ಅಕ್ಕಲಕೋಟಕರ ಮಹಾರಾಜರ ಚರಿತ್ರೆ, ಶಿವಲೀಲಾಮೃತ, ಜ್ಞಾನಸಿಂಧು, ಹರಿವಿಜಯ, ಪಾಂಡವಪ್ರತಾಪ

ಮೊದಲಾದ ಮರಾಠಿ ಗ್ರಂಥ ಓದಿ ತೋರಿಸುವುದು. ತಾಯಿಯ ಮಾತನ್ನು ಎಂಥ ಪ್ರಸಂಗದಲ್ಲಿಯೂ ಮೀರಬಾರದು ಎಂಬ ಗುಪ್ತಭಕ್ತಿಯ ಉಪಾಸನೆಯನ್ನು ಬೇಂದ್ರೆಯವರು ೧೯೧೭ ರಿಂದ ೧೯೧೩ ರ ವರೆಗೆ ಸಾಗಿಸಿಬಿಟ್ಟರು. ಅವರನ್ನು ಕೈಮಾಡಿ ಕರೆದ ವಾಚನಾಲಯಗಳನ್ನೇ ಓದಿ ಮುಗಿಸಿದರು. ಇದರಿಂದ ಬೇಂದ್ರೆಯವರ ಜ್ಞಾನೋಪಾಸನೆ ಭರದಿಂದ ಬೆಳೆಯಿತು. ಶಾಲೆಯಲ್ಲಿ ಮಾತ್ರ ಒಬ್ಬ ಸಾಮಾನ್ಯ ವಿದ್ಯಾರ್ಥಿಯಾಗಿಯೆ ಉಳಿದರು. ತಾಯಿ, ಅಜ್ಜಿ, ಮನೆಗೆ ಊಟಕ್ಕೆ ಬರುವ ಶಿಕ್ಷಕರಿಗೆ ಬೇಂದ್ರೆಯವರ ಭವಿತವ್ಯದ ಬಗ್ಗೆ ಚಿಂತೆ ಆಯಿತು; ಬೇಂದ್ರೆಯವರಿಗೆ ಯಾವ ಚಿಂತೆಯೂ ಇರಲಿಲ್ಲ. ೧೯೧೩ರಲ್ಲಿ ಮ್ಯಾಟ್ರಿಕ್ ಪಾಸಾದರು. ಆದರೆ ಮ್ಯಾಟ್ರಿಕ್ ಪರೀಕ್ಷೆ ಮುಗಿಸಿ ಬಂದ ಸಾಯಂಕಾಲವೆ ಅವರ ಜೀವನಕ್ಕೆ ಸಿಂಹ-ಕಾವಲು ನೀಡಿದ ಅಜ್ಜಿಯನ್ನು ಕಳೆದುಕೊಂಡಿದ್ದರು. ಮ್ಯಾಟ್ರಿಕ್ ಪಾಸಾದ ಸುಖದ ಜೊತೆಗೆ ಅಜ್ಜಿಯನ್ನು ಕಳೆದುಕೊಂಡ ದುಃಖ ಸೇರಿ— 'ಸುಖದುಃಖ ಸಂಗಮವಾದ ಹೃದ್ರಂಗವು ಪಾವನವೆಂಬೆನು ಯಾವಾಗಲೂ' ಎಂಬ ಸಿದ್ಧತೆಯತ್ತ ಬೇಂದ್ರೆಯವರನ್ನು ದೈವವು ಕರೆದೊಯ್ದಿತು.

ತಂದೆ ಇಲ್ಲ. ಚಿದಂಬರ, ರಾಘು ಎಂಬ ತಮ್ಮಂದಿರಿಲ್ಲ. ಬೇಂದ್ರೆಯವರ ಜೊತೆಗೆ ತಾಯಿ ಅಂಬಕ್ಕ, ತಮ್ಮ ಕೃಷ್ಣ. ಮ್ಯಾಟ್ರಿಕ್ ಮುಗಿಯಿತು. ಮುಂದೇನು ? ತಾಯಿಯ ಕಡೆಯ ಬೆಂಬಲ ಹೋಯಿತು. ತಂದೆಯ ಕಡೆಗೆ ಹೊರಳಿತು ಮನಸ್ಸು. ಅಜ್ಜ ಅಪ್ಪಾಭಟ ಶಿರಹಟ್ಟಿಯಲ್ಲಿ ವೃದ್ಧಾಪ್ಯದಲ್ಲಿದ್ದಾರೆ. ಅಲ್ಲಿ ಹೋಗುವಂತಿಲ್ಲ. ಕಕ್ಕ ಬಂಡೋಪಂತ ಬೇಂದ್ರೆ ಪುಣೆಯಲ್ಲಿ ದೊಡ್ಡ ಕೆಲಸದಲ್ಲಿದ್ದರು. ಹೃದಯ ವೈಶಾಲ್ಯ ಅವರಲ್ಲಿತ್ತು. ಅವರಿಗೆ ಮಕ್ಕಳಿರಲಿಲ್ಲ. ಅವರ ಆಶ್ರಯದಲ್ಲಿ ಅನೇಕ ಆಪ್ತೇಷ್ಟರು ಇದ್ದರು. ಅವರಿಗೆ, ಅಂಬಕ್ಕನ ಬಗ್ಗೆ ಅಪಾರ ಗೌರವವಿತ್ತು. ಬೇಂದ್ರೆಯವರು ಮ್ಯಾಟ್ರಿಕ್ ಪಾಸಾದ ಸುದ್ದಿ ' ಅವರಿಗೆ ಆನಂದ ಕೊಟ್ಟಿತ್ತು. ಕಕ್ಕನ ಕಡೆಗೆ ಪುಣೆಗೆ ಹೋಗಿ ಕಾಲೇಜ ಅಭ್ಯಾಸ ಮಾಡಬಹುದು ಎಂದು ಬೇಂದ್ರೆಯವರ ಅಂತರಂಗ ಹೇಳಿದ್ದರಿಂದ, ಬೇಂದ್ರೆಯವರು ತಮ್ಮ ಅಪೇಕ್ಷೆಯನ್ನು ಬಂಡೋಪಂತರಿಗೆ ತಿಳಿಸಿದರು. ಬಂಡೋಪಂತರು ಒಪ್ಪಿಗೆ ಕೊಟ್ಟರು. ಬೇಂದ್ರೆಯವರು ಧಾರವಾಡವನ್ನು,–ಮೊದಲನೆಯ ಸಲ—ಅವರ ವಯಸ್ಸಿನ ಹದಿನೇಳನೆಯ ವರ್ಷ ಬಿಟ್ಟರು. ಪ್ರಾರಂಭದ ಹದಿನೇಳು ವರ್ಷ ಬೇಂದ್ರೆಯವರು ಧಾರವಾಡದ ಅನ್ನ, ಧಾರವಾಡದ ಗಾಳಿ, ಧಾರವಾಡದ ಬೆಳಕು ಉಣ್ಣುತ್ತ, ಧಾರವಾಡದ ಕನ್ನಡವನ್ನೇ ನುರಿಸುತ್ತ, ಕನ್ನಡ ಭಾಷೆಯ ಭಕ್ತರಾಗಿ ಪುಣೆಗೆ ಹೋದರು.

೧೯೧೪ ರಿಂದ ೧೯೧೮ರ ವರೆಗೆ ನಾಲ್ಕೇ ವರ್ಷ, ಕೇವಲ ಕಾಲೇಜ ವಿದ್ಯಾ-ಭ್ಯಾಸದ ಮಟ್ಟಿಗೆ ಬೇಂದ್ರೆಯವರು ಪುಣೆಯಲ್ಲಿ ಇದ್ದದ್ದು. ಪುಣೆಯ ಕಕ್ಕನ ಮನೆಯಲ್ಲಿ ಮರಾಠಿ ವಾತಾವರಣ. ಪುಣೆ ಊರಲ್ಲಿ ಮರಾಠಿಗೆ ಪ್ರಾಧಾನ್ಯ. ಬೇಂದ್ರೆ

ಯವರು ಕಲಿತದ್ದು ಕನ್ನಡ. ಬೇಂದ್ರೆಯವರು ಮರಾಠಿಯನ್ನು ಶಾಲೆಗೆ ಹೋಗಿ, ಪಠ್ಯಪುಸ್ತಕ ಓದಿ ಕಲಿತವರಲ್ಲ. ತಾಯಿಗೆ ಸಾಧುಸತ್ಪುರುಷರ ಮರಾಠಿ ಗ್ರಂಥಗಳನ್ನು ಓದಿ ತೋರಿಸಿದ್ದರಿಂದ ಅವರ ಮರಾಠಿ ಸತ್ವಯುತ ಪ್ರಭುತ್ವವನ್ನು ಪಡೆದಿತ್ತು. ಸಂತವಾಣಿಯ ಸ್ಪರ್ಶದಿಂದ ಬೇಂದ್ರೆಯವರ ಹೃದಯ ಹದವಾಗಿತ್ತು. ಹದವಾದ ಹೃದಯಕ್ಕೆ ಯಾವ ಭಾಷೆಯೂ ಸಹಜ ವಾಹನವಾಗುತ್ತದೆ. ಬೇಂದ್ರೆಯವರು ತಮ್ಮ ತಿಳಿವಳಿಕೆಯನ್ನು ಮರಾಠಿಯಲ್ಲಿ ಮಾತನಾಡಲು ಪ್ರಾರಂಭಿಸಿದಾಗ ಮರಾಠಿ ಜನರು ಬೆರಗಾದರು. ಇಂಗ್ಲೀಷ ಕಲಿಸುವ ಪ್ರಾಧ್ಯಾಪಕ ಪಟ-ವರ್ಧನ ಅವರು ಬೇಂದ್ರೆಯವರನ್ನು ತಮ್ಮ ಅಂತರಂಗದ ಸ್ನೇಹಿತನಂತೆ ಸಮೀಪ ಮಾಡಿದರು. ಕಾಲೇಜಿನೊಳಗಿನ ಜಾಣವಿದ್ಯಾರ್ಥಿವೃಂದವು ಬೇಂದ್ರೆಯವರ ಸ್ನೇಹವನ್ನು ಬಯಸಿತು. ಪುಣೆಯಲ್ಲಿ ಸುಪ್ರಸಿದ್ಧರಾದ ಶ್ರೀ. ದತ್ತೋ ವಾಮನ ಪೋದ್ದಾರರಂಥ ಅನೇಕ ಹಿರಿಯರಿಗೆ ಬೇಂದ್ರೆಯವರ ಸುತ್ತುಮುತ್ತಲಿನ ಸ್ನೇಹಿತರ ಪರಿಸರ ಹಿತವಾಗಿ ಕಂಡಿತು. ದೇಶಭಕ್ತಿ, ರಾಷ್ಟ್ರಭಕ್ತಿ, ಭಾಷಾಪ್ರೀತಿ ಇವು ಎಲ್ಲವುಗಳಿಗಿಂತ ಜೀವನದಲ್ಲಿ ಸ್ನೇಹಕ್ಕೆ ಬೆಲೆ ಹೆಚ್ಚು ಎಂದು ಬೇಂದ್ರೆಯವರ ಅಂತರಂಗ ಕಂಡುಕೊಂಡಿತ್ತು. ಕರ್ನಾಟಕದ ಕಡೆಯಿಂದ ವಿದ್ಯಾಭ್ಯಾಸಕ್ಕಾಗಿ ಪುಣೆಗೆ ಬಂದವರು ಮತ್ತು ಪುಣೆಯಲ್ಲಿಯೆ ವಿದ್ಯಾಭ್ಯಾಸ ಮಾಡುವ ಮರಾಠಿ ವಿದ್ಯಾರ್ಥಿಗಳು ಬೇಂದ್ರೆಯವರ ವಿಚಾರಧಾರೆಗೆ, ವಾಕ್ ವಿಲಾಸಕ್ಕೆ ಮರುಳಾದರು. ಬೇಂದ್ರೆಯವರ ಬುದ್ಧಿ-ಭಾವವು ಶ್ರೀ ಅಕ್ಕಲಕೋಟಕರ ಮಹಾರಾಜರ ಕೃಪಾಶೀರ್ವಾದದಿಂದ ಪುಷ್ಟಗೊಂಡಿದ್ದರಿಂದ ಅವರಲ್ಲಿ ಒಂದು ಹೊಸ ತಿಳಿವಳಿಕೆ ಉದಯವಾಗಿತ್ತು. ಆ ತಿಳುವಳಿಕೆಯಿಂದ ಅವರು ಕಾಲಿದಾಸನ–ಶಾಕುಂತಲ, ಜಗನ್ನಾಥಪಂಡಿತನ—ಗಂಗಾಲಹರಿ, ಶಂಕರಾಚಾರ್ಯರ ಸೌಂದರ್ಯ ಲಹರಿ, ಜ್ಞಾನೇಶ್ವರರ ಜ್ಞಾನೇಶ್ವರಿ, ಶೆಕ್ಸಪಿಯರ್, ಶೆಲಿ, ಕೀಟ್ಸ್, ಎಮರ್ಸನ್, ಖಲೀಲ ಜಿಬ್ರಾನ್, ರವೀಂದ್ರನಾಥ ಟಾಗೋರ ಮೊದಲಾದ ಅನೇಕ ವಿದ್ವಾಂಸರ ವಿವಿಧ ಭಾಷೆಯ ಗ್ರಂಥಗಳನ್ನು ಸುಲಭವಾಗಿ ಓದಿ ತಿಳಿದುಕೊಳ್ಳಬಲ್ಲವರಾಗಿದ್ದರು. ಈ ಗ್ರಂಥಗಳ ವಾಚನ ಮಾಡುವಾಗ ಅವರಲ್ಲಿ ಗ್ರಂಥಗಳ ಕರ್ತೃಗಳ ಆವೇಶ ಸಂಚಾರ ಆಗುತ್ತಿದ್ದುದು ಅವರ ಭಾಗ್ಯ. ಕಾಲಿದಾಸನ ನಾಟಕಗಳನ್ನು ಓದುವಾಗ ಅವರು ಕಾಲಿದಾಸರಾಗುತ್ತಿದ್ದರು, ಕೀಟ್ಸನದು ಓದುವಾಗ ಕೀಟ್ಸ್ ಆಗುತ್ತಿದ್ದರು. ವಿದ್ಯಾರ್ಥಿ ಅವಸ್ಥೆಯಲ್ಲಿ ಹೀಗೆ ಆಗುವುದು ಅಪರೂಪ. ವಿದ್ಯಾರ್ಥಿದಶೆಯಲ್ಲಿ ಆಗುತ್ತಿದ್ದ ಆವೇಶ ಸಂಚಾರ-ಪ್ರವೃತ್ತಿ ಬೇಂದ್ರೆಯವರಲ್ಲಿ ಇಂದಿಗೂ ಇದೆ. ಕಾವ್ಯಶಾಸ್ತ್ರ ದೃಷ್ಟಿಯಿಂದ ಈ ರೂಪಕಾಲಂಕಾರ ಮನೋವೃತ್ತಿ ಬೇಂದ್ರೆಯವರದು ಎಂದು ಹೆಸರಿಸಬಹುದು.

ಈ ಮನೋವೃತ್ತಿಯವರಾದ ಬೇಂದ್ರೆಯವರು ವಿವರಿಸುವ ಕಾಲಿದಾಸ, ಮಿಲ್ಟನ್, ಶೆಕ್ಸಪಿಯರ್, ಜ್ಞಾನೇಶ್ವರ, ಪಂಪ, ಕುಮಾರವ್ಯಾಸ ಮತ್ತು ಲಕ್ಷ್ಮೀಶ

ಮೊದಲಾದ ಕವಿ ಮತ್ತು ಕೃತಿಗಳನ್ನು ಕುರಿತು ಬೇಂದ್ರೆಯವರು ಮಾತನಾಡಲು ತೊಡಗಿದಾಗ ಅವರ ಜೊತೆಗೆ ಅಭ್ಯಾಸ ಮಾಡುವ ವಿದ್ಯಾರ್ಥಿಮಿತ್ರರು ತನ್ಮಯ ರಾಗುತ್ತಿದ್ದರು. ಪುಣೆಯೊಳಗಿನ ಬೇಂದ್ರೆಯವರ ಮಿತ್ರರಾದ ಪ್ರಭಾಕರ ಹರಿ ಖಾಡಿಲಕರ, ರಾ. ವಿ. ಓತುರಕರ, ರಾಯರೀಕರ, ಪಾಳಂದೆ, ಮೊದಲಾದ ಅನೇಕ ಮಿತ್ರರು ಒಂದೆಡೆ ಕೂಡಿದರು. ಬೇಂದ್ರೆಯವರು ಕನ್ನಡ ಮತ್ತು ಮರಾಠಿ ಸಾಹಿತ್ಯದ ಮೇಲೆ ಪ್ರಭುತ್ವದಿಂದ ಮಾತನಾಡುವುದನ್ನು ಕೇಳಿ ಮಿತ್ರರ ಸಂಖ್ಯೆ ಬೆಳೆಯುತ್ತ ಹೋಯಿತು. ಇದರ ಪರಿಣಾಮವಾಗಿ ೧೯೧೫ರಲ್ಲಿ ಪುಣೆಯಲ್ಲಿ 'ಶಾರದಾಮಂಡಲ' ಎಂಬ ಒಂದು ಸ್ನೇಹಿತರ ಕೂಟದ ನಿರ್ಮಾಣವಾಯಿತು. ದಿ. ಸರಕಾರಿ ಕೃಷ್ಣ ಎಂಬ ಪ್ರಖ್ಯಾತ ಲೇಖಕರ ವಾಚನಾಲಯವನ್ನು 'ಶಾರದಾಮಂಡಲ'ದ ಬೇಂದ್ರೆ, ಖಾಡಿಲಕರ ಮತ್ತು ವಾಡೇದ ಅವರು ಮುಂದಾಗಿ ಕೊಂಡು ಕೊಂಡರು. ಈ ವಾಚ ನಾಲಯದ ಗ್ರಂಥಗಳೆಲ್ಲ ಶ್ರೀ ದತ್ತೋ ವಾಮನ ಪೋದ್ದಾರ ಅವರ ವಾಚನಾಲಯ ದಲ್ಲಿ ಈಗಿವೆ. ಏಕೆಂದರೆ 'ಶಾರದಾಮಂಡಲ'ದ ಸದಸ್ಯರು ಒಬ್ಬೊಬ್ಬರಾಗಿ ಪುಣೆ ಬಿಟ್ಟದ್ದರಿಂದ ಗ್ರಂಥಗಳ ಜವಾಬುದಾರಿ ದತ್ತೋ ವಾಮನ ಪೋದ್ದಾರರಿಗೆ ವಹಿಸಿ ಕೊಡಲಾಯಿತು. ಬೇಂದ್ರೆಯವರಿಗೆ ಪುಸ್ತಕ ಕೊಳ್ಳುವ ಮತ್ತು ಓದುವ ವ್ಯಸನವು ಈ ಕಾಲಾವಧಿಯಲ್ಲಿ ಬೆಳೆಯುತ್ತ ಹೋಯಿತು.

'ಶಾರದಾ ಮಂಡಲ'— ಸಂಪೂರ್ಣ ಬೇಂದ್ರೆಯವರ ಸೃಷ್ಟಿ. ಭಾವುಕಾಕಾ ಭಾತಖಂಡೆ, ಶಿವರಾಮ ಭಾತಖಂಡೆ, ಫೈಸಾಸ ಬೇಂದ್ರೆ ಮತ್ತು ಅವರ ತಮ್ಮ ಕೃಷ್ಣ ಇಷ್ಟು ಜನರು ಪ್ರಮುಖರು. ಇವರೆಲ್ಲ ಬಂಡೋಪಂತರ ಮನೆಯಲ್ಲಿಯೆ ಇರುವವರು. ಆದುದರಿಂದ ಮನೆಯಲ್ಲಿಯೆ 'ಶಾರದಾ ಮಂಡಲ'ದ ಸ್ಥಾಪನೆ. ಬಾಬು ಭಿಡೆ, ಏಕಬೋಟೆ, ಶೀನಪ್ಪಾ ಜೋಗ, ಮಾಮಾ ಜೋಶಿ, ಆಪಟೆ, ಖಾಡಿಲಕರ ಮೊದಲಾದ ಗೆಳೆಯರು ಸ್ನೇಹಿತರಾಗಿ ಪರಸ್ಪರರಲ್ಲಿ ಜ್ಞಾನದ ಆದಾನ-ಪ್ರದಾನ ನಡೆಸಿದರು. ನಾಟಕಕಾರ ಖಾಡಿಲಕರರ ನಾಟಕಗಳ ವಿಮರ್ಶೆ, ಲೋಕಮಾನ್ಯ ಟಿಳಕರ ಗೀತಾರಹಸ್ಯ, ರವೀಂದ್ರರ ಕಥೆ - ಕವನ ಮೊದಲಾದ ಅನೇಕ ವಿಷಯಗಳ ಮೇಲೆ ಚರ್ಚೆ ನಡೆಯುತ್ತಿತ್ತು. ಈ ಸಮಯದಲ್ಲಿ ದಿ. ಶ್ರೀಧರ ಖಾನೋಳಕರ, ಸೂರ್ಯವಂಶಿ ಮೊದಲಾದ ಧಾರವಾಡ ಕಡೆಯ ಬೇಂದ್ರೆಯವರ ಬಾಲ್ಯದ ಗೆಳೆಯರು ಪುಣೆಯಲ್ಲಿಯೆ ಇದ್ದರು. ಸೂರ್ಯವಂಶಿ ಅವರು ಅವರ ಕಾಲೇಜ ಗ್ರಂಥಾಲಯದಿಂದ ಲಕ್ಷ್ಮೀಶನ ಜೈಮಿನಿಭಾರತ ಮತ್ತು ಸರ್ವಜ್ಞ ವಚನ ಕಾವ್ಯಗಳನ್ನು ಬೇಂದ್ರೆಯವರಿಗೆ ತಂದುಕೊಟ್ಟರು. ಬೇಂದ್ರೆಯವರ ಜೀವಕ್ಕೆ ಲಕ್ಷ್ಮೀಶ ಮತ್ತು ಸರ್ವಜ್ಞ ಅತ್ಯಂತ ಸಮೀಪದವರಾದರು. ಲಕ್ಷ್ಮೀಶನ ನಾದಮಾಧುರ್ಯ ಮತ್ತು ಸರ್ವಜ್ಞನ ಮಾರ್ಮಿಕ ಮಾತು ಬೇಂದ್ರೆಯವರ ಕವಿತಾಶಕ್ತಿಗೆ ಹೊಸ ಕಾಂತಿಯನ್ನು ತಂದುಕೊಟ್ಟವು.

ಬಾಬುರಾವ ಭಿಡೆಯವರ ಸಹವಾಸದಿಂದ ಬೇಂದ್ರೆಯವರು ಹಿಂದಿ ಕಾವ್ಯ, ಹಿಂದೀ ಗ್ರಂಥಗಳನ್ನು ಓದಿ ತಿಳಿದುಕೊಳ್ಳುವುದನ್ನು ರೂಢಿಸಿಕೊಂಡರು. ಬಾಬುರಾವ ಭಿಡೆ ಜ್ಯೋತಿಷ್ಯಶಾಸ್ತ್ರದ ಅಭ್ಯಾಸ ಮಾಡಿದ್ದರು. ಅವರೇ ಬೇಂದ್ರೆಯವರ ಜನ್ಮಪತ್ರಿಕೆ ನಿರ್ಣಯ ಮಾಡಿಕೊಟ್ಟರು. ಈ ಸಹವಾಸದ ಫಲವಾಗಿ ಬೇಂದ್ರೆಯವರು ಜ್ಯೋತಿಷ್ಯಶಾಸ್ತ್ರವನ್ನೇ ಆಳವಾಗಿ ಅಭ್ಯಾಸ ಮಾಡಿದರು. ಈ ನಾಲ್ಕು ವರ್ಷಗಳಲ್ಲಿ ಬೇಂದ್ರೆಯವರು ಕಾವ್ಯ, ಶಾಸ್ತ್ರ, ವಿಜ್ಞಾನ, ರಾಜಕಾರಣ, ತತ್ತ್ವಜ್ಞಾನ ಯಾವುದೇ ವಿಷಯವಿರಲಿ; ಎಂಥ ಎಂಥ ಗೆಳೆಯರು ಸಿಗುತ್ತಾರೊ ಅವರ ಜೊತೆಗೂಡಿ ಆ, ಆ ವಿಷಯವನ್ನು ಆಳವಾಗಿ ಅಭ್ಯಾಸ ಮಾಡುವುದು, ಆ ವಿಷಯ ಕುರಿತು ನಿರರ್ಗಳವಾಗಿ ಮಾತನಾಡುವುದನ್ನು ರೂಢಿಸಿಕೊಂಡು ಬಿಟ್ಟರು. ಅದೇ ಇಂದಿಗೂ ಬೇಂದ್ರೆಯವರ ಸ್ಥಾಯೀ ಭಾವವಾಗಿದೆ. ಮಾತನಾಡುವುದರಿಂದಲೇ ರಸೋದ್ಭವ, ರಸಸೃಷ್ಟಿ ಮತ್ತು ಭಾವಕ್ಕೆ ಶಾಂತಿ.

ಯಾವುದೇ ಕಾವ್ಯದೊಳಗಿನ ಒಂದು ಪದ್ಯವನ್ನು ಕುರಿತು ತಾಸುಗಟ್ಟಲೆ ಬೇಂದ್ರೆಯವರು ಮಾತನಾಡುತ್ತಿದ್ದರು. ಇವರ ಜೊತೆಯ ಅಭ್ಯಾಸದ ವಿದ್ಯಾರ್ಥಿಗಳು ಬೇಂದ್ರೆಯವರನ್ನು ತಡೆಯುತ್ತಿದ್ದರು. ಇಷ್ಟು ವಿಸ್ತಾರ ಪರೀಕ್ಷೆಗೆ ಬೇಕಿಲ್ಲ. ಕಾವ್ಯಾಭ್ಯಾಸ ಬೇಗ ಬೇಗ ಮುಗಿಸೋಣ ಎನ್ನುತ್ತಿದ್ದರಂತೆ. ಜೊತೆಯ ಗೆಳೆಯರ ದೃಷ್ಟಿ—ಪರೀಕ್ಷಾ ದೃಷ್ಟಿಯಾದರೆ ಬೇಂದ್ರೆಯವರದು ಪಾತಾಳಗರಡಿಯ ದೃಷ್ಟಿ. ಈ ಕಾಲದಲ್ಲಿಯೆ ಬೇಂದ್ರೆಯವರು ಕನ್ನಡ, ಮರಾಠಿ, ಸಂಸ್ಕೃತ ಮತ್ತು ಇಂಗ್ಲೀಷನಲ್ಲಿ ಸಹಜವಾಗಿ ಕವನಗಳನ್ನು ರಚಿಸತೊಡಗಿದರು. ಪುಣೆಯೊಳಗಿನ ಬೇಂದ್ರೆಯವರ ಸ್ನೇಹಿತರಿಗೆ ಬೇಂದ್ರೆಯವರ ಬೆಳವಣಿಗೆ ಆಶ್ಚರ್ಯವನ್ನುಂಟುಮಾಡಿದರೆ, ಪುಣೆಯಲ್ಲಿಯ ಕನ್ನಡಿಗ ಸ್ನೇಹಿತರಿಗೆ ಬೇಂದ್ರೆಯವರ ಬಗ್ಗೆ ಹೆಮ್ಮೆ, ಅಭಿಮಾನ ಮೂಡಿತು. ನಮ್ಮ ಧಾರವಾಡದ ಬೇಂದ್ರೆ ಪುಣೆಯ ಜನರನ್ನು ಗೆದ್ದ ಎಂಬ ಅಭಿಮಾನ ಮೂಡುವುದು ಸಹಜವೂ ಆಗಿತ್ತು.

ಈ ಕಾಲದಲ್ಲಿ ಪುಣೆಯಲ್ಲಿ ಕರ್ನಾಟಕ ಸಂಘವಿತ್ತು. ಅಲ್ಲಿ ಬೇಂದ್ರೆಯವರ ಕವಿತಾವಾಚನವಾಯಿತು. ಮೋರೋಬಾದಾದಾ ವಾಡೆಯಲ್ಲಿ ಆದ ಬೇಂದ್ರೆಯವರ ಪ್ರಥಮ ಕವಿತಾವಾಚನದ ಪ್ರಭಾವವು ಬೇಂದ್ರೆಯವರ ಕಾವ್ಯಗುಣದ ಮೊದಲನೆಯ ವಿಜಯಪತಾಕೆ. ಪುಣೆಯ ಡೆಕ್ಕನ ಕಾಲೇಜಿನ ಕರ್ನಾಟಕ ಸಂಘದಲ್ಲಿ ೧೯೧೭ ರ ಸ್ನೇಹ ಸಮ್ಮೇಳನವಿತ್ತು. ಆ ಸಂಘದಲ್ಲಿ ರುಕ್ಮಾಂಗದರಾವ ದೇಶಪಾಂಡೆ, ಮೋಹರೆ, ದಾತಾರ, ಕರಮರಕರ, ಮಂಗಳವೇಢೆ, ಸಾಲಿ ರಾಮಚಂದ್ರರಾವ ಮೊದಲಾದ ಅನೇಕರು ಧಾರವಾಡದ ಕಡೆಯವರಾಗಿದ್ದರು. ಅವರೆಲ್ಲ ಸೇರಿ ಬೇಂದ್ರೆಯವರನ್ನು ಸ್ನೇಹಸಮ್ಮೇಲನದ ಮುಖ್ಯಅತಿಥಿಗಳಾಗಿ ಆಮಂತ್ರಿಸಿ, ಅವರಿಂದ

ಕವಿತಾವಾಚನವನ್ನು ಮಾಡಿಸಿದರು; ಕವಿತೆಗಳನ್ನು ಕೇಳಿ ಮೆಚ್ಚಿದರು. ಧಾರ-ವಾಡದತ್ತ ಬೇಂದ್ರೆಯವರ ಕಾವ್ಯವಾಚನದ ಸುದ್ದಿ ಹಬ್ಬತೊಡಗಿತು.

೧೯೧೪ ರಿಂದ ೧೯೧೮ರ ವರೆಗಿನ ಕಾಲ ಬೇಂದ್ರೆಯವರ ಜೀವನ—ಆಶ್ರಯ ಜೀವನ. ಕಕ್ಕನಿಗೆ ಆರ್ಥಿಕ ದೃಷ್ಟಿಯಿಂದ ಭಾರವಾಗಬಾರದು. ತಮ್ಮ ಪಾಲನೆ-ಪೋಷಣೆ ಕಕ್ಕ ಮಾಡಲು ಒಪ್ಪಿದ್ದೇ ದೊಡ್ಡದು ಎಂಬ ಮನೋಭಾವನೆ ಬೇಂದ್ರೆ ಯವರಿಗೆ ಇತ್ತು. ಆದುದರಿಂದ ಅವರು ಇನ್ನುಳಿದ ಸರಿಕರಾದ ವಿದ್ಯಾರ್ಥಿಗಳಂತೆ ಹಣವನ್ನು ವೆಚ್ಚ ಮಾಡುತ್ತಿರಲಿಲ್ಲ; ಎಂಥ ಚಟಕ್ಕೂ ಮನಗೊಡಲಿಲ್ಲ. ಹೀಗಾಗಿ ಬೇಂದ್ರೆಯವರ ವೈಯಕ್ತಿಕ ಖರ್ಚು ಶೂನ್ಯ, ಮನೋರಂಜನೆಗಾಗಿ ವೆಚ್ಚ ಶೂನ್ಯ. ಹಣವನ್ನು ಗಳಿಸುವದಿಲ್ಲ ಎಂದಮೇಲೆ ಹಣವನ್ನು ಖರ್ಚು ಮಾಡುವ ಅಧಿಕಾರ ತಮಗಿಲ್ಲ ಎಂದು ಅವರ ಮನಸ್ಸು ಹೇಳಿರಬೇಕು. ಅದಲ್ಲದೆ ಕೈಗೆ ಬಂದ ಹಣವನ್ನು ಉಳಿಸಿಕೊಳ್ಳುವುದೆ ಒಂದು ಅರ್ಥದಲ್ಲಿ ಹಣ ಗಳಿಸಿದಂತೆ ಎಂಬ ಸಿದ್ಧಾಂತಕ್ಕೆ ಅವರು ಬಂದಂತೆ ತೋರುತ್ತದೆ. ಹೀಗಾಗಿ ಅವರಿಗಾಗಿ ಯಾರಾದರೂ ಹಣ ಕೊಟ್ಟರೆ ಅದನ್ನು ಖರ್ಚು ಮಾಡದೆ ತಾಯಿಗೆ ಕೊಟ್ಟುಬಿಡುತ್ತಿದ್ದರು. ತಾರುಣ್ಯದಲ್ಲಿ ಇಂಥ ಮನೋವೃತ್ತಿ ಆಗುವುದು ಕಷ್ಟ.

ವೈಯಕ್ತಿಕವಾಗಿ ಹಣವನ್ನು ಮನೋರಂಜನೆಗಾಗಿ ಖರ್ಚು ಮಾಡದೆ ಇರು ವುದು ಹೇಗೆ ಎಂಬ ಪ್ರಶ್ನೆಗೆ ಬೇಂದ್ರೆಯವರ ಉತ್ತರ-- ಗೆಳೆಯರ ಸಹವಾಸದಲ್ಲಿ, ಗ್ರಂಥಗಳ ವಾಚನದಲ್ಲಿ, ಕವನಗಳ ರಚನೆಯಲ್ಲಿ-ಎಂದಿತ್ತು ಎಂದು ತೋರುತ್ತದೆ. ಆದುದರಿಂದ ಅವರು ಗೆಳೆಯರಿಂದ ಸುತ್ತುವರಿಯಲ್ಪಡುತ್ತಿದ್ದರು. ಸೂರ್ಯವಂಶಿ ಯವರು ಲಕ್ಷ್ಮೀಶ ಮತ್ತು ಸರ್ವಜ್ಞ ತಂದುಕೊಟ್ಟರೆ, ಶ್ರೀಧರ ಖಾನೋಳಕರ ಅವರು ಶ್ರೀ ಅರವಿಂದರ ಆರ್ಯಪತ್ರಿಕೆ ತಂದುಕೊಡುತ್ತಿದ್ದರು; ಇನ್ನುಳಿದ ಗೆಳೆಯರೂ ಗ್ರಂಥಗಳನ್ನು ಕೊಡುತ್ತಿದ್ದರು. ಈ ಗ್ರಂಥಸಹಾಯಕ್ಕೆ ಬೇಂದ್ರೆ ಯವರು ಕೊಡುತ್ತಿದ್ದ ಪ್ರತಿಫಲ ಯಾವುದೆಂದರೆ ಆ ಗ್ರಂಥವಾಚನದಿಂದ ತಮ ಗಾದ ಆನಂದವನ್ನು ಗೆಳೆಯರ ಮುಂದೆ ಅಭಿವ್ಯಕ್ತಪಡಿಸುವುದು. ಬೇಂದ್ರೆಯವರ ಗೆಳೆಯರೆಲ್ಲ ಪುಸ್ತಕ ಪ್ರಿಯರೆ. ಈ ಪುಸ್ತಕ ಪ್ರೀತಿಯ ಮೂಲಕ ಸರಕಾರಿ ಕೃಷ್ಣ ಅವರ ಗ್ರಂಥಾಲಯ ಕೊಳ್ಳುವ ಪ್ರೇರಣೆ ಆಯಿತು ಶಾರದಾಮಂಡಲ ದವರಿಗೆ.

೧೯೧೭ರ ಸೂಟಿಗೆ ಧಾರವಾಡಕ್ಕೆ ಬಂದಾಗ ಬೇಂದ್ರೆಯವರು ನರಗುಂದಕ್ಕೆ ಹೋಗಿ ವಧುಪರೀಕ್ಷೆ ಮಾಡಿದರು. ವಧುವಿನ ಜನ್ಮಪತ್ರಿಕೆಯನ್ನು ತಮ್ಮ ಜನ್ಮ-ಪತ್ರಿಕೆಯೊಂದಿಗೆ ತುಲನಾತ್ಮಕವಾಗಿ ನೋಡಿದರು. ತಮ್ಮ ರಾಶಿ ಸಿಂಹ.

ವಧುವಿನ — ಲಕ್ಷ್ಮೀಬಾಯಿಯ ರಾಶಿ ವೃಶ್ಚಿಕ. ಸಿಂಹ ಮತ್ತು ವೃಶ್ಚಿಕರಾಶಿ ಮಾನಸಿಕ ಸಂಬಂಧ ಅಷ್ಟು ಸರಿ ಹೋಗದು, ವಿಚಾರಗಳ ಜಗ್ಗಾಟವಾದೀತು ಎಂದುಕಂಡರು. ಆದರೆ ಈ ವಿಷಯುವಾಗಿ ತಾಯಿಯೊಂದಿಗೆ ಏನೂ ಚರ್ಚಿಸದೆ ತಮ್ಮ ಬಿ. ಎ. ಕೊನೆಯ ವರ್ಷದ ಅಭ್ಯಾಸದತ್ತ ಬೇಂದ್ರೆಯವರು ಸಂಪೂರ್ಣ ಲಕ್ಷ್ಯಕೊಟ್ಟರು.

೧೯೧೮ಕ್ಕೆ ಬಿ. ಎ. ಪರೀಕ್ಷೆ ಮುಗಿಯಿತು. ಬಿ. ಎ. ಪರೀಕ್ಷೆ ಮುಗಿದರೆ, ಒಂದು ಕೆಲಸ ಕೊಡಿಸಿದರೆ ತಮ್ಮ ಜವಾಬುದಾರಿ ಮುಗಿಯಿತು ಎಂಬ ಮನೋಭಾವ ಕಕ್ಕನದಾಗಿರಬಹುದು. ಬೇಂದ್ರೆಯವರ ಪುಣೆಯಲ್ಲಿಯ ಬೆಳವಣಿಗೆಯನ್ನು ಕಂಡು ಕಕ್ಕನವರಿಗೆ ಆನಂದವೂ ಆಗಿತ್ತು. ಬೇಂದ್ರೆಯವರಿಗೆ ಒಂದು ಸರಕಾರಿ ನೌಕರಿ ಸಿಕ್ಕುಬಿಟ್ಟರೆ ಸಾಕು ಎಂದು ಅಂಬಕ್ಕ ಬಯಸುತ್ತಿದ್ದರು. ಅಷ್ಟರಲ್ಲಿ ಬೇಂದ್ರೆ ಯವರಿಗೆ ಧಾರವಾಡದಲ್ಲಿ ಸಾಹಿತ್ಯಸಮ್ಮೇಲನ ನಡೆಯಲಿದೆ ಎಂದು ತಿಳಿಯಿತು. ಬಿ. ಎ. ಪರೀಕ್ಷೆ ಮುಗಿಯುವುದೊಂದೇ ತಡ ಬೇಂದ್ರೆಯವರು ಧಾರವಾಡಕ್ಕೆ ಬಂದರು. ಸಾಹಿತ್ಯಸಮ್ಮೇಲನವಾಯಿತು, ಬೇಂದ್ರೆಯವರ ಕವಿತಾವಾಚನ ಕೂಟಗಳಾದವು. ಧಾರವಾಡದಲ್ಲಿಯ ಮುದವೀಡು ಕೃಷ್ಣರಾವ, ಕಡಪಾ ರಾಘ-ವೇಂದ್ರರಾವ, ಆಲೂರ ವೆಂಕಟರಾವ ಮೊದಲಾದ ವಿದ್ಯಾವಂತ ಹಿರಿಯರನ್ನು ಬೇಂದ್ರೆ ಯವರ ಹೊಸ ಕಾವ್ಯರೀತಿ ಮೆಚ್ಚಿಸಿತು. ಧಾರವಾಡದ ದತ್ತಾತ್ರೇಯ ಗುಡಿಗೆ ದರ್ಶನಕ್ಕೆ ಹೋಗುವುದು ರೂಢಿ. ಹಾಗೆ ಬೇಂದ್ರೆಯವರು ದೇವರ ದರ್ಶನ ಪಡೆದು, ಗುಡಿಯ ಕಟ್ಟೆಯ ಮೇಲೆ ಕುಳಿತಿದ್ದರು. ಬೇಂದ್ರೆಯವರ ಶಾಲಾಭ್ಯಾಸದ ಕಾಲದ ಶಿಕ್ಷಕರಾದ ಗುತ್ತಲ ಮಾಸ್ತರರ ಭೆಟ್ಟಿ ಆಯಿತು. ಅವರು ಬೇಂದ್ರೆಯವರ ಕಾವ್ಯಪ್ರಭಾವ ಕೇಳಿ, ಬೇಂದ್ರೆಯವರು ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಶಿಕ್ಷಕ ರಾಗಿ ಬರಬೇಕೆಂದು ಆಮಂತ್ರಿಸಿದರು. ಬೇಂದ್ರೆಯವರಿಗೆ ಹಿಡಿಸಲಾರದಷ್ಟು ಆನಂದವಾಯಿತು. ‘ ಶಾರದಾಮಂಡಲ ’ದ ಗೆಳೆಯರು ಕೂಡಿಕೊಂಡು ಒಂದು ಅತ್ಯುತ್ತಮ ಶಾಲೆ ತೆಗೆಯಬೇಕು, ಆದರ್ಶ ಶಿಕ್ಷಕರಾಗಬೇಕು ಎಂದು ಕನಸು ಕಾಣುತ್ತಿದ್ದ ಬೇಂದ್ರೆಯವರಿಗೆ ವಿಕ್ಟೋರಿಯಾ ಹೈಸ್ಕೂಲಿನ ಶಿಕ್ಷಕವೃತ್ತಿ ಸಹಜ-ವಾಗಿ ಸಿಕ್ಕದ್ದು ದೈವಸಹಾಯದ ಅರಿವನ್ನುಂಟುಮಾಡಿತು. ಬಿ. ಎ. ಪರೀಕ್ಷೆಯ ಫಲಿತಾಂಶ ತಿಳಿಯುವ ಮೊದಲೆ ಬೇಂದ್ರೆಯವರು ಶಿಕ್ಷಕರಾಗಿ ನಿಯಮಿಸಲ್ಪಟ್ಟರು. ಬೇಂದ್ರೆಯವರು ಪುಣೆಗೆ ಹೋಗಿ ತಮ್ಮ ತಾಯಿ, ತಮ್ಮ ಇವರನ್ನು ಕರೆದುಕೊಂಡು ಬಂದು ಮತ್ತೆ ಧಾರವಾಡದಲ್ಲಿ ಕಾಮನಕಟ್ಟೆಯಲ್ಲಿ ಮನೆ ಮಾಡಿದರು.

ಶಾಂತಕವಿ, ವೆಂಕಟ ರಂಗೋ ಕಟ್ಟಿ, ಗರಗ ಸಿದ್ಧಲಿಂಗಪ್ಪ, ರಾವಸಾಹೇಬ ಮಾಳಾಪೂರ, ನೇಟಿವ್ಹ್ ಜನರಲ್ ಲೈಬ್ರರಿ, ವಿದ್ಯಾವರ್ಧಕ ಸಂಘ, ಆಲೂರ ವೆಂಕಟರಾವ ಅವರ ರಾಷ್ಟ್ರೀಯ ಚಳುವಳ, ರಾಜಪುರೋಹಿತರ ಇತಿಹಾಸ ಸಂಶೋ-

ಧನೆ, ಆಂಧ್ರ ಛಾಯೆಯಲ್ಲಿ ಬೆಳೆದು ಧಾರವಾಡಕ್ಕೆ ಬಂದ ಕಡಪಾ ರಾಘವೇಂದ್ರ-ರಾವ, ಮಹಾರಾಷ್ಟ್ರದಲ್ಲಿ ಬೆಳೆದು ಧಾರವಾಡಕ್ಕೆ ಬಂದ ನರಗುಂದಕರ ವಕೀಲ, ಮಧ್ವರಾವ ಕಟ್ಟಿ, ಕಾವ್ಯಾನಂದರು ನಡೆಸುವ 'ಕ್ಷೇಮಸಮಾಚಾರ' ಪತ್ರಿಕೆ ಮೊದಲಾದ ಅನೇಕ ವಿಷಯುಗಳು ಧಾರವಾಡದ ಸಾಮಾಜಿಕ ಜೀವನದ ಆಕರ್ಷಣೆಗಳಾಗಿದ್ದವು. ಬೇಂದ್ರೆಯವರು ಧಾರವಾಡಕ್ಕೆ ಕವಿಯಾಗಿ, ಶಿಕ್ಷಕರಾಗಿ ಆಗಮಿಸಿದ್ದು ಧಾರವಾಡದ ವಾತಾವರಣದಲ್ಲಿ ಒಂದು ಹೊಸತನವನ್ನು ತಂದಿತ್ತು. ಬೇಂದ್ರೆಯವರ ಕನ್ನಡ ಅಭಿಮಾನ, ಭಾರತ ಅಭಿಮಾನ ಹೆಡೆ ಎತ್ತಿತು. 'ಕನ್ನ-ಡವೂ, ಭಾರತವೂ, ಜಗವೆಲ್ಲವೂ ಒಂದೇ' ಎಂಬ ಭಾವನೆ ಬೇಂದ್ರೆಯವರಲ್ಲಿ ಗೂಡು ಕಟ್ಟಲಾರಂಭಿಸಿತು. 'ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ' ಎಂಬ ದರ್ಶನ ವನ್ನು ಬೇಂದ್ರೆಯವರು ಕಂಡರು. ಕನ್ನಡನಾಡಿನ, ಕನ್ನಡಭಾಷೆಯ ಆವೇಶ ಬೇಂದ್ರೆ ಯವರ ಮೈಹೊಕ್ಕಿತು.

### ೧೯೧೯ ರಿಂದ ೧೯೩೨

ಮದಿಹಾಳದ ದತ್ತ, ನರಸಿಂಹದೇವರ ಗುಡಿ, ಊರ ಹೊರಗಿನ ದುರ್ಗಾದೇವಿಯ ಗುಡಿ ಮತ್ತು ಊರ ಮಧ್ಯದ ದತ್ತಾತ್ರೇಯ ಗುಡಿ ಇವು ಬೇಂದ್ರೆಯವರ ಅಂಗ-ರಕ್ಷಕ ಶ್ರದ್ಧಾಸ್ಥಾನಗಳು. ಗೋಂದವಲೇಕರ ಮಹಾರಾಜ, ಅಕ್ಕಲಕೋಟಕರ ಮಹಾರಾಜ ಮತ್ತು ತಾಯಿ ಅಂಬಕ್ಕ ಇವರಿಗೆ ಮಾತ್ರ ಆಜ್ಞಾಧಾರಕರಾಗಿರಬೇಕು ಎಂದು ಬೇಂದ್ರೆಯವರ ಭಾವನೆ. ಗೋಂದವಲೇಕರ ಮಹಾರಾಜರ ಭಾವಚಿತ್ರದ ಪೂಜೆ, ಅಕ್ಕಲಕೋಟ ಮಹಾರಾಜರ ಜೀವನ ಚರಿತ್ರೆಯ ವಾಚನ ಪ್ರತಿದಿವಸ ಮನೆಯಲ್ಲಿ ನಡೆಯುತ್ತಿತ್ತು. ವ್ಯಾವಹಾರಿಕವಾಗಿ ಯಾವುದೇ ತೊಡಕು ಬಂದರೆ ತಾಯಿ ಅಂಬಕ್ಕ ಅಕ್ಕಲಕೋಟ ಮಹಾರಾಜರ ಜೀವನಚರಿತ್ರೆಗೆ ಶರಣು ಹೋಗಿ ಅಲ್ಲಿಂದ ಬಂದ ಪ್ರೇರಣೆಯಂತೆ ನಡೆಯುತ್ತಿದ್ದರು. ಶ್ರೀ ಅರವಿಂದ, ರವೀಂದ್ರ, ಏ. ಇ. ಎಮರ್ಸನ್, ಮಾರಿಸ್ ಮೆಟರ್‌ಲಿಂಕ್, ಜೆ. ಕೃಷ್ಣಮೂರ್ತಿ ಮೊದಲಾದ ಲೇಖಕರ ಗ್ರಂಥಗಳನ್ನು ಓದಿ ಬೇಂದ್ರೆಯವರ ಬುದ್ಧಿ ಪ್ರಗಲ್ಭವಾಗಿತ್ತು. ಅಂತ-ರಂಗದ ಪ್ರೇರಣೆಯಂತೆ ನಡೆಯುವುದು ಬೇಂದ್ರೆಯವರ ಸ್ವಧರ್ಮವಾಗಿತ್ತು. ವಯಸ್ಸಿನಿಂದ ಹಿರಿಯರು, ಅನುಭವಿಗಳು ಎಂಬವರೊಡನೆ ಗೌರವದಿಂದ ನಡೆಯು ತ್ತಿದ್ದರೇ ಹೊರತು ಅವರು ಹೇಳಿದ್ದಕ್ಕೆಲ್ಲ ಗೋಣು ಹಾಕುವ ಕೌಲೆತ್ತು ಬೇಂದ್ರೆ-ಯವರು ಆಗಲಿಲ್ಲ. ಬಡತನದಲ್ಲಿಯೂ ಮದ್ದಾನೆಯಂತೆ ಮದೋನ್ಮತ್ತವಾಗಿತ್ತು ಬೇಂದ್ರೆಯವರ ನಡತೆ. ಧಾರವಾಡದ ಅನೇಕ ಹಿರಿಯರು ಇದನ್ನು ಕಂಡು ಆಶ್ಚರ್ಯ ಗೊಂಡರು. ಬೇಂದ್ರೆಯವರು ತಮ್ಮ ವಿದ್ಯಾರ್ಥಿಗಳಿಗೆ ಸ್ನೇಹಿತರ ಪಟ್ಟಗೊಟ್ಟು ಅವರೊಡನೆ ವಿಚಾರವಿನಿಮಯ ಮಾಡುವುದು ಅನೇಕ ಸಹಶಿಕ್ಷಕರಿಗೆ ಸೇರಲಿಲ್ಲ.

ಅವರೆಲ್ಲ ಬೇಂದ್ರೆಯವರನ್ನು ದುರ್ಲಕ್ಷ ಮಾಡಿದರು. 'ಇಬ್ಬರಿದ್ದರೆ ಸಾಕು ಸರ-ಸಾಟಕೆ' ಎಂಬುದು ಬೇಂದ್ರೆಯವರ ಭಾವ.

೧೯೧೯ ರಲ್ಲಿ ಬೇಂದ್ರೆಯವರ ವಿವಾಹದ ಚರ್ಚೆ ಮನೆಯಲ್ಲಿ ನಡೆಯಿತು. ಆಗ ಬೇಂದ್ರೆಯವರು ತಾಯಿಗೆ ಜೋತಿಷ್ಯದ ತೊಡಕು ಹೇಳಿ ತಮಗೂ ಲಕ್ಷ್ಮೀ-ಬಾಯಿಗೂ ಹೊಂದಿಕೆಯಾದೀತೆ ಎಂಬ ಸಂಶಯವನ್ನು ವ್ಯಕ್ತಪಡಿಸಿದರು. ತಾಯಿ ಅಂಬಕ್ಕ "ನಾನೂ ವಿಚಾರ ಮಾಡಿದೆ. ನಿನ್ನೆ ರಾತ್ರಿ ಸ್ವಪ್ನದಲ್ಲಿ ಅಕ್ಕಲಕೋಟೆ ಮಹಾರಾಜರು ಬಂದು ಈ ವಿವಾಹಕ್ಕೆ ಒಪ್ಪಿಗೆ ಕೊಟ್ಟಿದ್ದಾರೆ. ಲಕ್ಷ್ಮೀಬಾಯಿ-ಯನ್ನೇ ವಿವಾಹ ಆಗು" ಎಂದು ಹೇಳಿದರು. ಬೇಂದ್ರೆಯವರು 'ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ' ಎಂಬ ಕವನಕ್ಕೆ ಹಿನ್ನೆಲೆಯಾದ, ಬೆಣ್ಣೀಹಳ್ಳ ದಾಟಿ ನರಗುಂದ ದಲ್ಲಿ ೧೯೧೭ ರಲ್ಲಿಯೇ ನೋಡಿ ಬಂದ ಲಕ್ಷ್ಮೀಬಾಯಿಯೊಂದಿಗೆ ೧೯೧೯ರಲ್ಲಿ ವಿವಾಹ ವನ್ನು ಮಾಡಿಕೊಂಡರು. ವಿವಾಹಸಮಾರಂಭ ಹುಬ್ಬಳ್ಳಿಯಲ್ಲಿ ನಡೆಯಿತು. ಬೇಂದ್ರೆಯವರು ಸಂಸಾರಿಕರಾದರು. ಸಂಸಾರಿಕರು ಮತ್ತು ಶಿಕ್ಷಕರು. ಶಿಕ್ಷಕರ ಬಡಸಂಸಾರ ನಿರ್ವಿಘ್ನವಾಗಿ ಸಾಗಿತು. ಬಡಸಂಸಾರ ಎಂಬ ಭಾವನೆಯೇ ಬೇಂದ್ರೆ ಯವರಿಗೆ ಬರಲಿಲ್ಲ. ಏಕೆಂದರೆ ಶ್ರೀಮಂತತನ ಅವರಿಗೆ ಬೇಕಾಗಿರಲಿಲ್ಲ. ಊಟಕ್ಕೆ ಇರದಿದ್ದರೆ ಉಪವಾಸ ಮಾಡಿದರೇನು ತಪ್ಪು, ಉಪವಾಸ ವ್ರತವನ್ನೂ ಸಾಧಿಸಿದಂತೆ ಆಯಿತು ಎಂಬುದೆ ಅವರ ಜೀವನದೃಷ್ಟಿ.

ಉತ್ತಮ ವಿದ್ಯಾರ್ಥಿಗಳು ತಮ್ಮ ಭಾಗ್ಯ. ಅವರೇ ತಮ್ಮ ಸ್ನೇಹಿತರು. ಸ್ನೇಹ ಎಂಬುದು ಬಹಳ ಕಷ್ಟದ ವಿಷಯ. ಸ್ನೇಹಸಿದ್ಧಿಗೆ ಸಾಧನೆ ಬೇಕು. ರಾಮಾ ಯಣದೊಳಗಿನ 'ಸುಂದರ ಕಾಂಡ', 'ವಾಯುಸ್ತುತಿ', 'ಸೌಂದರ್ಯ ಲಹರಿ', 'ಲಲಿತಾ ಸಹಸ್ರ' ಮೊದಲಾದ ಅನೇಕ ಸ್ತೋತ್ರಮಂತ್ರಗಳನ್ನು ಪಠನ ಮಾಡುತ್ತ, ತಮ್ಮ ಜೊತೆಗೆ ಇದ್ದ ವಿದ್ಯಾರ್ಥಿಮಿತ್ರರೊಂದಿಗೆ ಸಹಪಠನ ಮಾಡುತ್ತ ಸ್ನೇಹ-ಸಾಧನೆಯನ್ನು ಬೇಂದ್ರೆಯವರು ಸಾಗಿಸಿದರು. ಪ್ರಹ್ಲಾದ ನರೇಗಲ್, ಚಿದಂಬರ, ವಿನೀತ ರಾಮಚಂದ್ರರಾವ ಇವರಿಗೆ, ಮತ್ತು ಬೇಂದ್ರೆಯವರು ಯಾವ ಯಾವ ಕ್ಲಾಸಿಗೆ ಕಲಿಸುತ್ತಿದ್ದರೋ ಆ ಎಲ್ಲ ವಿದ್ಯಾರ್ಥಿಗಳಿಗೆ ಬೇಂದ್ರೆಯವರು ಬಿಚ್ಚುಮನಸ್ಸಿ ನಿಂದ, ಮೈದುಂಬಿ ಕಲಿಸುತ್ತಿದ್ದರು. ವಿದ್ಯಾರ್ಥಿಗಳಿಗೆ ಕೈಬರಹದ ಪತ್ರಿಕೆ ತೆಗೆಯಲು ಪ್ರೇರಣೆ ಕೊಟ್ಟರು. ಇಂಥ ಹುಮ್ಮಸದ ಕಾರ್ಯ ನಡೆದಾಗ ಅತ್ಯಂತ ಪ್ರೀತಿಯ ವಿದ್ಯಾರ್ಥಿ ಚಿದಂಬರನನ್ನು ಕಳೆದುಕೊಂಡು ಮರುಗಿದರು. ಮನೆಯಲ್ಲಿ ಚೊಚ್ಚಿಲ ಮಗು ಕ್ಷೇಮೇಂದ್ರ, ಹುಟ್ಟಿದ ಮರುವರ್ಷವೇ ತೀರಿಕೊಂಡಿದ್ದ. ೧೯೨೪ರಲ್ಲಿ ತಾಯಿ ಅಂಬಕ್ಕ ತೀರಿಕೊಂಡರು. ಬೇಂದ್ರೆಯವರ ಜೀವನದಲ್ಲಿ ಬಹಳ ದೊಡ್ಡ ಹೊಡೆತ ಇದು. ನಿಜವಾದ ಅರ್ಥದಲ್ಲಿ ಬೇಂದ್ರೆಯವರು ಈಗ ಅನಾಥರಾದರು. ಬೇಂದ್ರೆ ಯವರು ೨೮ ವರ್ಷದವರಾಗಿದ್ದರೂ ತಾಯಿ ಅಂಬಕ್ಕ ಅವರನ್ನು ಚಿಕ್ಕ ಮಗುವಿ-



ಬೇಂದ್ರೆ ಕುಟುಂಬ-( ೧೯೪೬ )

ಕುಳಿತವರು : ೧. ಕುಮಾರ ವಾಮನ ಬೇಂದ್ರೆ, ೨. ಸೌ. ಲಕ್ಷ್ಮೀಬಾಯಿ ಬೇಂದ್ರೆ

೩. ಶ್ರೀ ದ. ರಾ. ಬೇಂದ್ರೆ, ೪. ಕುಮಾರಿ ಮಂಗಲಾ ಬೇಂದ್ರೆ

ನಿಂತವರು : ಕುಮಾರ ಪಾಂಡುರಂಗ ಬೇಂದ್ರೆ

ನಂತೆಯೇ ಪಾಲಿಸುತ್ತಿದ್ದರು. ಬೇಂದ್ರೆಯವರ ಪೆನ್ನಿಗೆ ಮಸಿ ಹಾಕಿಕೊಡುವುದು, ಅವರ ಎಲ್ಲ ವಿಧದ ಚಟುವಟಿಕೆಗಳಿಗೆ ಅನುಕೂಲ ಮಾಡಿಕೊಡುವುದು ತಾಯಿ ಅಂಬಕ್ಕ ಮಾಡುತ್ತಿದ್ದರು. ಅನಾಥ ಹಿರಿಯ ಬಾಲಕನ ಜವಾಬುದಾರಿ ಸಂಪೂರ್ಣವಾಗಿ ನನ್ನ ತಾಯಿ ಲಕ್ಷ್ಮೀಬಾಯಿಯವರ ಮೇಲೆ ಬಿತ್ತು. ಬೇಂದ್ರೆಯವರು ತಾವು ಗಳಿಸಿದ ಹಣವನ್ನು ಮೊದಲು ತಾಯಿಗೆ, ಅನಂತರ ಪತ್ನಿ ಲಕ್ಷ್ಮೀಬಾಯಿ—ಕಡೆಗೆ ಕೊಡುತ್ತ, ಮನೆಯನ್ನು ಸಂಭಾಳಿಸಿಕೊಂಡು ಹೋಗಬೇಕು ಎಂದು ಹೇಳಿ ತೆರವಾದರು. ಕನ್ನಡ ಭಾಷೆ, ಕವನಗಳ ರಚನೆ, ಸಾಹಿತ್ಯದ ಅಭಿವೃದ್ಧಿ, ರಾಷ್ಟ್ರೀಯ ಚಳುವಳಿ ಇವುಗಳತ್ತ ಗಮನ ಕೊಡುತ್ತ, ವಿದ್ಯಾರ್ಥಿಗಳಿಗೆ ಪ್ರಾಮಾಣಿಕವಾಗಿ ಕಲಿಸುವ ಜವಾಬುದಾರಿಯನ್ನಷ್ಟು ಬೇಂದ್ರೆಯವರು ಹೊತ್ತರು.

ಮನೆಗೆ ಬರುವ ವಿದ್ಯಾರ್ಥಿಗಳನ್ನು ಲಕ್ಷ್ಮೀಬಾಯಿಯವರು ಮಕ್ಕಳಂತೆ ನಡೆಯಿಸಿಕೊಳ್ಳುತ್ತಿದ್ದರು ಮತ್ತು ವಿದ್ಯಾರ್ಥಿಗಳೂ ಮಕ್ಕಳಂತೆಯೇ ನಡೆಯುತ್ತಿದ್ದರು. ಇದಕ್ಕೆ ಪ್ರಹ್ಲಾದ ನರೇಗಲ್ಲ, ಗೋವಿಂದ ಚುಳಕಿ ಮೊದಲಾದವರೇ ಇಂದಿನ ಸಾಕ್ಷಿ. ೧೯೨೧ ರ ಸುಮಾರು ಕಿರಿಯರು, ಹಿರಿಯರು, ಸಮಾನರು ಕೂಡಿಕೊಂಡು 'ಗೆಳೆಯರ ಗುಂಪು' ಏಕೆ ಕಟ್ಟಬಾರದು ಎಂಬ ವಿಚಾರ ಬೇಂದ್ರೆಯವರ ತಲೆಯಲ್ಲಿ ಬಂದಿತು. ಪುಣೆಯಲ್ಲಿ 'ಶಾರದಾ ಮಂಡಲ' ಕಟ್ಟಿದ ಅನುಭವ ಬೇಂದ್ರೆಯವರಿಗಿತ್ತು. 'ನಾನು ಬಡವಿ, ಆತ ಬಡವ ಒಲವೆ ನಮ್ಮ ಬದುಕು' ಎಂಬುದು 'ಗೆಳೆಯರ ಗುಂಪಿನ' ಧ್ಯೇಯವಾಕ್ಯವಾಗಿತ್ತು. ಈ ಗುಂಪಿಗೆ ಸದಸ್ಯತ್ವ, ನಿಯಮ, ಕಟ್ಟಳೆ, ಚುನಾವಣೆ, ಪದಾಧಿಕಾರಿ ಎಂಬ ಡೌಲು ಇರಲಿಲ್ಲ. ಇದು ಸಾಹಿತ್ಯ ಮತ್ತು ಜೀವನ ಇವುಗಳ ಸಾಮೂಹಿಕ ಸಾಧನೆಯ ಕೇಂದ್ರವಾಗಿತ್ತು. 'ವಾಗ್ಭೂಷಣ', 'ಜಯಕರ್ನಾಟಕ' ಮತ್ತು 'ಸ್ವಧರ್ಮ'—ಇವು ಬೇಂದ್ರೆಯವರ ಗೆಳೆಯರ ಗುಂಪಿನ ಸಾಧನೆಯ ಕೀರ್ತಿಧ್ವಜಗಳಾದವು. ಆದುದರಿಂದ ಧಾರವಾಡದ ಗೆಳೆಯರ ಗುಂಪಿಗೆ ಹುಬ್ಬಳ್ಳಿ, ಕೊಪ್ಪಳ, ಹಲಸಂಗಿ ಮೊದಲಾದ ಊರಿನ ಕಿರಿಯರು, ಹಿರಿಯರು ಸೇರಿಕೊಳ್ಳಲು ಪ್ರಾರಂಭವಾಯಿತು. ಒಬ್ಬನಿಗೆ ಇನ್ನೊಬ್ಬ ನಿಜವಾದ ಗೆಳೆಯ ಸಿಕ್ಕರೆ ಸಾಕು, ಅದು ಗೆಳೆಯರ ಗುಂಪು ಎಂದು ಗೆಳೆಯರ ಗುಂಪಿನ ವ್ಯಾಖ್ಯೆ.

"ನಾನು ಬಾಯಿ, ನೀನು ಕಿವಿ
ಬಾನ ಕಡಲಲ್ಲಿ ತೇಲಿಬಿಟ್ಟ ಈ ನುಡಿ ದೋಣಿ
ನಿನ್ನ ಹೃದಯದ ಬಂದರವ ಮುಟ್ಟೀತು
ನಿನ್ನ ಬುದ್ಧಿಯ ಮನೆಯ ಕಟ್ಟೀತು

ನೀನೆಲ್ಲೀ ಇರು. ಕೇಳುವ ಸೂತ್ರ ಸರಿ ಇರಲಿ
ಹೃದಯ ತೆರೆದಿರಲಿ".

ಎಂಬ ಬೇಂದ್ರೆಯವರ ವಿನಂತಿ ಗೆಳೆಯರಲ್ಲಿ ಅಂದೂ ಇತ್ತು; ಇಂದಿಗೂ ಗೆಳೆಯರಿಂದ ಬೇಂದ್ರೆಯವರು ಅಪೇಕ್ಷಿಸುವುದು ಇಷ್ಟೆ.

ಬೇಂದ್ರೆಯವರ ಗೆಳೆಯರ ಸಂಖ್ಯೆ ಬೆಳೆಯುತ್ತ ಹೋಯಿತು. ಮಧುರಚೆನ್ನ, ಸಿಂಪಿ ಲಿಂಗಣ್ಣ, ಮುಗಳಿ, ಗೋಕಾಕರಂಥ ಸ್ನೇಹ ರತ್ನಗಳು ಬೇಂದ್ರೆಯವರಿಗೆ ಲಭಿಸುತ್ತ ಹೋದವು. ಪಂಪೋತ್ಸವ, ವಿದ್ಯಾರಣ್ಯ ಉತ್ಸವ, ರಘುವೇಂದ್ರೋತ್ಸವ ಮೊದಲಾದ ಉತ್ಸವದೊಳಗಿಂದ 'ನಾಡಹಬ್ಬ'ದ ಆಚರಣೆಯ ಬೀಜ ಮೊಳಕೆ ಒಡೆಯಿತು. ಬೇಂದ್ರೆ ಮತ್ತು ಮಧುರಚೆನ್ನ ಇವರಲ್ಲಿ ಅಂತರಂಗದ ಸಾಧನೆ ಚೆನ್ನಾಗಿ ಸಾಗಿತು. ಜ್ಯೋತಿಷ್ಯ, ಭೌತಶಾಸ್ತ್ರ, ಭಾಷಾಶಾಸ್ತ್ರ ಇವು ಅವರಿಬ್ಬರ ಚರ್ಚೆಯ ವಿಷಯಗಳಾದವು. ಅನುಭಾವದ ವಿಷಯ ಅವರಿಬ್ಬರಲ್ಲಿ ಸಾಮೀಪ್ಯವನ್ನು ಪಡೆ-ಯಿತು. ಮುಗಳಿ, ಗೋಕಾಕ ಮತ್ತು ಬೇಂದ್ರೆ ಸಂಬಂಧದಲ್ಲಿ ವಿಪುಲವಾದ ಸಾಹಿತ್ಯ ನಿರ್ಮಿತಿಯ ದೃಷ್ಟಿ ಹರಿತವಾಯಿತು. ಸಾಹಿತ್ಯಸೃಷ್ಟಿ ಕಮ್ಮಟಶಾಲೆಯ ಕರ್ಮವಲ್ಲ; ಅದು ಒಂದು ಹೃದಯೋದ್ಭವ, ದೀಪದಿಂದ ದೀಪ ಹತ್ತುವ ಕ್ರಿಯೆ ಎಂದು ಬೇಂದ್ರೆಯವರು ಕಂಡುಕೊಂಡಿದ್ದರು. ಅವರಿಂದ ರಚಿತವಾದ ಸಾಹಿತ್ಯ ಅದು ಅವರದಲ್ಲ; ಅವರಿಗೆ ಸಿಕ್ಕ ಗುಪ್ತನಿಧಿ ಎಂದು ಬೇಂದ್ರೆಯವರು ಭಾವಿಸು-ತ್ತಾರೆ, ಅದನ್ನು ಕಂಡು ಆಹ್ಲಾದಿಸುತ್ತಾರೆ. ಅವರು ರಚಿಸಿದ ಕವನ ಅವರವೇ ಆಗಿದ್ದರೆ,ಅವರು ಅವುಗಳನ್ನು ರಚಿಸಿ, ಗಂಟುಕಟ್ಟಿ ಇಟ್ಟುಬಿಡುತ್ತಿದ್ದರು. ಅನೇ-ಕರು ನಾವು ಮಾಡುವಂತೆ. ಬೇಂದ್ರೆಯವರು ತಾವು ರಚಿಸಿದ ಸಾಹಿತ್ಯವನ್ನು ಎಷ್ಟು ಮನಮೆಚ್ಚಿ, ಆನಂದಪಟ್ಟು ಓದುತ್ತಾರೆ ಎಂದರೆ ಅವು ಇನ್ನೊಬ್ಬರವೇನೋ ಎಂಬಷ್ಟು ಆಶ್ಚರ್ಯ ಪಡುತ್ತಾರೆ. ಆ ಸಾಹಿತ್ಯದ ರಮಣೀಯತೆಯನ್ನು ಕಂಡು ತಾವೇ ಬೆರಗಾಗುತ್ತಾರೆ. ಸಾಹಿತ್ಯವು ಶ್ರುತಿ ಮತ್ತು ಕೃತಿ ಆದಾಗ ಅದರ ಅನುಭವ, ಅನುಭಾವದ ಮಟ್ಟಕ್ಕೆ ಏರುತ್ತದೆ. ಅನುಭಾವ ಎಂಬುದು ಸಂತೆಯ ಸುದ್ದಿ ಅಲ್ಲ.

೧೯೨೯ ರ ಬೆಳಗಾವಿಯ ಸಾಹಿತ್ಯಸಮ್ಮೇಳನದ ಕಾಲಕ್ಕೆ 'ಗೆಳೆಯರ ಗುಂಪು' ಸಶಕ್ತವಾಗಿತ್ತು. ಆಲೂರ ಅವರಿಂದ 'ಜಯಕರ್ನಾಟಕ'ವು ಗೆಳೆಯರ ಗುಂಪಿಗೆ ಬಂದಿತ್ತು. 'ಸ್ವಧರ್ಮ' ಮತ್ತು 'ನಾಡಹಬ್ಬ'ಗಳ ಮೂಲಕ ಗುಂಪಿನ ಹೆಸರು ಕನ್ನಡಸಾಹಿತ್ಯಲೋಕಕ್ಕೆ ಪರಿಚಯವಾಗಿತ್ತು. ಗುರುದೇವ ರಾನಡೆಯವರ ಉಪನಿಷತ್ ರಹಸ್ಯದ ಅನುವಾದಕರಲ್ಲಿ ಬೇಂದ್ರೆಯವರೂ ಒಬ್ಬರಾಗಿದ್ದರು. ೧೯೨೯ ರ ಸಮ್ಮೇಳನದಲ್ಲಿ ಬೇಂದ್ರೆಯವರು 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ

ಕವನವನ್ನು ಓದಿದರು. ಮಾಸ್ತಿ ವೆಂಕಟೇಶ ಅಯ್ಯಂಗಾರರಿಂದ ಹಿಡಿದು ಸಮಸ್ತ ಕನ್ನಡ ಕೋಟಿಯ ಜನರ ಮನವನ್ನು 'ಹಕ್ಕಿ ಹಾರುತಿದೆ' ಕವನ ಗೆದ್ದಿತು.

೧೯೩೦ ರಲ್ಲಿ 'ಹಕ್ಕಿ ಹಾರುತಿದೆ' ಎಂಬ ಗೆಳೆಯರ ಗುಂಪಿನ ಕವಿಗಳ ಕವನ ಸಂಗ್ರಹ ರೂಪಗೊಂಡಿತು. ಧಾರವಾಡದ ಗೆಳೆಯರಿಗೆ ಹಲಸಂಗಿಯ ಗೆಳೆಯರು ಸಹಾಯ ಮಾಡಿದ್ದರಿಂದ 'ಗರತಿಯ ಹಾಡು' ಎಂಬ ಜಾನಪದ ಸಾಹಿತ್ಯ ಸಂಕಲನ ಸಿದ್ಧವಾಯಿತು. ಜನರು ಹೇಳಿದ ಪದವೇ ಜಾನಪದ ಎಂದು ಬೇಂದ್ರೆಯವರು ರೂಪಿಸಿಕೊಂಡ ವ್ಯಾಖ್ಯೆ.

ಡಾ|| ಮಾಸ್ತಿ ಮತ್ತು ಬೆಂಗಳೂರಿನ ಅವರ ಅನೇಕ ಮಿತ್ರರ ಪ್ರೇರಣೆಯಿಂದ ಬೇಂದ್ರೆಯವರ ಮೊದಲನೆಯ ಕವನಸಂಗ್ರಹ 'ಗರಿ' ಸಿದ್ಧವಾಯಿತು, ಪ್ರಕಟ-ವಾಯಿತು. ಬೇಂದ್ರೆಯವರ 'ಕೃಷ್ಣಾಕುಮಾರಿ' ಎಂಬ ಒಂದು ಷಟ್ಪದಿ ಕಾವ್ಯ-ಖಂಡ ಮಾತ್ರ ಈವರೆಗೆ ಪ್ರಕಟವಾಗಿತ್ತು. ಪ್ರಕಾಶನ ಕಾರ್ಯ ಆಗ ಸುಲಭ-ವಾಗಿರಲಿಲ್ಲ. ಕಂಡಕಂಡವರಿಗೆ ತಲೆ ಬಗ್ಗಿಸುವ ಮತ್ತು ತಮ್ಮ ಯಾವುದೇ ಕೆಲಸ ವನ್ನು ಸಾಧಿಸಿಕೊಳ್ಳುವುದಕ್ಕಾಗಿ ಇನ್ನೊಬ್ಬರಿಗೆ ಅಧೀನನಾಗಿ ತೋರಿಕೆಯ ವಿನಯ ವನ್ನು ನಟಿಸುವ ಸ್ವಭಾವ ಬೇಂದ್ರೆಯವರಲ್ಲಿ ಇಲ್ಲದ್ದರಿಂದ ಅವರ ಸಾಹಿತ್ಯ ಪ್ರಕಟ ವಾಗಲು ತಡವಾಯಿತು ಅಷ್ಟೆ. ಬೇಂದ್ರೆಯವರು ಪ್ರಯತ್ನವಾದಿಗಳಲ್ಲ, ದೈವ-ವಾದಿಗಳು. ಹೀಗಾಗಿ ೧೯೧೬ ರಿಂದ ರಚಿಸುತ್ತ ಬಂದ ಕವನಗಳು ೧೯೩೨ ರ ವರೆಗೆ ಪ್ರಕಟನೆಯ ದಾರಿ ಕಾಯುತ್ತ ಕುಳಿತವು. ೧೯೧೭ ರಿಂದ ೧೯೨೯ರ ವರೆಗೆ ಬೇಂದ್ರೆ ಯವರು ತಮ್ಮ ಕವನಗಳನ್ನು ತಮ್ಮದೇ ಆದ ಧಾಟಿ, ಗತ್ತು-ಗಮಕಗಳಿಂದ ಹಾಡಿ ತೋರಿಸಿ ಜನರ ಮನವನ್ನು ಗೆದ್ದಿದ್ದರು. ಆದುದರಿಂದ ಬೇಂದ್ರೆಯವರ 'ಗರಿ' ಕವನಸಂಗ್ರಹಕ್ಕೆ ಕರ್ನಾಟಕದ ಮೂಲೆಮೂಲೆಗಳಿಂದ ಸ್ವಾಗತವು ಲಭಿಸಿತು.

'ಗರಿ' ಕವನಸಂಗ್ರಹದೊಳಗಿನ 'ನರಬಲಿ' ಕವನವು ಬೇಂದ್ರೆಯವರನ್ನು ಜೇಲಿಗೆ ಕಳುಹಿಸಿತು. ಪೋಲೀಸರು ಬೇಂದ್ರೆಯವರ ಮನೆಯ ಶೋಧನೆ ಮಾಡಲು ಬಂದಾಗ, ಮನೆಯ ಹೊರಗೆ ಹಾದಿಯ ಮೇಲೆ ಚಳುವಳಿಗಾರರು 'ಗಾಂಧೀ-ಮಹಾರಾಜಕೀ' ಎಂದು ಕೂಗಿದರು. ಬೇಂದ್ರೆಯವರ ಸದ್ಯದ ಹಿರಿಮಗ-ಪಾಂಡು ರಂಗ ಆಗ ತೊಟ್ಟಿಲದಲ್ಲಿ ಕುಣಿದಾಡುವ ಕೂಸು. ಅದು ಹೊರಗಿನ 'ಗಾಂಧೀ-ಮಹಾರಾಜಕೀ' ಎಂಬ ಕೂಗಿಗೆ 'ಜೈ' ಎಂದು ಕೂಗಿ ತೊಟ್ಟಿಲದಲ್ಲಿ ಎದ್ದುನಿಂತಿತು. ಆಗಿನ ಕಾಲವೇ ಅಂಥದು. ಚಿಕ್ಕಮಕ್ಕಳಲ್ಲಿಯೂ ರಾಷ್ಟ್ರೀಯ ಪ್ರಜ್ಞೆ ಹೊರ-ಚಿಮ್ಮುವ ಕಾಲ ಅದು.

ಬೇಂದ್ರೆಯವರನ್ನು ಹಿಂಡಲಗಿ ಜೇಲಿನಲ್ಲಿ ಇಟ್ಟರು. ಅಲ್ಲಿ ಬೇಂದ್ರೆಯವರು

ತಮ್ಮ ಗೆಳೆಯರಾದ ಜೋಗ ಅವರಿಗೆ ರಾಮದಾಸ ರಚಿತ 'ದಾಸಬೋಧ' ಓದಿ ಹೇಳುತ್ತಿದ್ದರಂತೆ. ಚಳುವಳಿಯ ಕಾಲಕ್ಕೆ ಅನೇಕರು ತಮ್ಮ ತಮ್ಮ ಸ್ವಾಧ್ಯಾಯ, ಲೇಖನಕಾರ್ಯ ಜೇಲಿನಲ್ಲಿ ಮಾಡಿದ ದಾಖಲೆಗಳು ಸಾಕಷ್ಟಿವೆ.

ಬೇಂದ್ರೆಯವರ ಕಕ್ಕನವರ ಆರೋಗ್ಯ ಕೆಟ್ಟದ್ದರಿಂದ ಬೇಂದ್ರೆಯವರು ಜೇಲಿನಿಂದ ಹೊರಬಂದರು. ಕೆಲವು ತಿಂಗಳ ಮುಗದ ಎಂಬ ಹಳ್ಳಿಯಲ್ಲಿ ನಜರ ಕೈದಿಯಾಗಿ ಬೇಂದ್ರೆಯವರು ಇರಬೇಕಾಯಿತು. ಮುಗದಹಳ್ಳಿಯ ಒಂದು ದೇವಿಯ ಗುಡಿಯಲ್ಲಿ 'ಭೃಂಗದ ಬೆನ್ನೇರಿ ಬಂತು' ಎಂಬ ಕವನದ ನಿರ್ಮಿತಿ ಆಯಿತು. ಗೆಳೆಯರೊಂದಿಗೆ ಸಾಹಿತ್ಯ ಚರ್ಚೆ ಇಲ್ಲಿಯೂ ನಡೆಯಿತು.

ಜೇಲಿಗೆ ಹೋಗಿಬಂದದ್ದರಿಂದ ಬೇಂದ್ರೆಯವರಿಗೆ ಎಲ್ಲಿಯೂ ಕೆಲಸದ ಮೇಲೆ ತೆಗೆದುಕೊಳ್ಳಬಾರದು ಎಂದು ಸರಕಾರದ ಆದೇಶವಿತ್ತು. ಹೀಗಾಗಿ ೧೯೩೩ ರಲ್ಲಿ ಬೇಂದ್ರೆಯವರು ಎಂ. ಎ. ಪರೀಕ್ಷೆಯ ಅಭ್ಯಾಸಕ್ಕಾಗಿ ಪುಣೆಗೆ ಕಕ್ಕನವರ ಕಡೆಗೆ ಹೋಗಬೇಕಾಯಿತು.

**೧೯೩೩ – ೧೩೪೩**

ಈಗ ಬೇಂದ್ರೆಯವರು ಸಂಸಾರಿಕರು. ರಾಮು ಮತ್ತು ಪಾಂಡುರಂಗ ಎಂಬ ಇಬ್ಬರು ಮಕ್ಕಳು. ನಾಲ್ಕು ಜನರ ಸಂಸಾರದೊಂದಿಗೆ ಕಕ್ಕನ ಮನೆಯಲ್ಲಿ ಹೋಗಿ ಇರುವುದು ನಾಚಿಕೆಯದಾಗಿ ತೋರುತ್ತಿತ್ತು. ಅನಿವಾರ್ಯವಾಗಿ ಪುಣೆಗೆ ಹೋದರು. ಆಗ ಗೋಕಾಕ ಮತ್ತು ಕಥೆಗಾರ 'ಆನಂದ' ಪುಣೆಯಲ್ಲಿ ಇದ್ದರು. ಇವರಿಬ್ಬರ ಜೊತೆಗೆ ಸಹವಾಸ, ಚರ್ಚೆ ಬೆಳೆಯಿತು.

೧೯೩೩ ರಲ್ಲಿ 'ಗೆಳೆಯರ ಗುಂಪು' ಒಡೆಯಿತು. ಸ್ನೇಹಕ್ಕಿಂತ ಹಣದ ವಿಷಯ ಪ್ರಾಶಸ್ತ್ಯ ಪಡೆದದ್ದರಿಂದ ಗುಂಪು ಒಡೆಯಿತು ಎಂದು ತೋರುತ್ತದೆ. ಹಣಗಳಿಸುವುದು, ಹಣ ಉಳಿಸಿಕೊಳ್ಳುವುದು ಮತ್ತು ಹಣ ಹಂಚಿಕೊಳ್ಳುವುದು ಮೊದಲಾದ ವ್ಯವಹಾರಕ್ಕಿಂತ ಹಣವನ್ನು ವೆಚ್ಚ ಮಾಡದೆ ಇರುವುದು ಬೇಂದ್ರೆಯವರ ಸ್ವಭಾವ. ಕೈಯಲ್ಲಿಯ ಹಣವನ್ನು ಯಾವುದೇ ರೀತಿಯಿಂದ ಕಳೆದುಕೊಂಡು, ಇನ್ನೊಬ್ಬರ ಕಡೆಗೆ ಹಣದ ಸಹಾಯ ಬೇಡುವ ಮನೋವೃತ್ತಿ ಅವರದಲ್ಲ. ಗುಂಪಿನ ಸ್ವರೂಪ ಹೋಗಿ ಅದು ಅಮೀಬಾದಂತೆ ಅಣುರೂಪಿನ ಅಸ್ಥಿರ ಪ್ರಾಣಿಯಾಯಿತು. ಅದು ಒಡೆದಷ್ಟು ಸ್ವತಂತ್ರರೂಪ ಪಡೆಯುವಂತೆ, ಗುಂಪಿನ ಗೆಳೆಯರು ಒಡೆದು ಹೋದಹೋದಕಡೆ ಹೊಸಹೊಸ ಗುಂಪು ಕಟ್ಟಿಕೊಂಡರು. 'ಮಿಂಚಿನ ಬಳ್ಳಿ' 'ಮನೋಹರ ಗ್ರಂಥಮಾಲೆ', 'ಲಲಿತ ಸಾಹಿತ್ಯಮಾಲೆ', 'ಸಾಧನಾ ಮುದ್ರಣಾಲಯ' ಎಂಬ ಹೆಸರಿನ ಸಂಸ್ಥೆಗಳಾದವು. 'ಪ್ರದೀಪ' ಮತ್ತು 'ಕರ್ಮಧಾರಾ-

ಪ್ರಕಾಶನ' ಇವೂ ಗುಂಪಿನ ರೂಪಗಳಾಗಿ ಬೆಳೆದು ಬಂದಿವೆ. ಗೆಳೆಯರ ಗುಂಪಿನ ಸ್ನೇಹಬೀಜಕ್ಕೆ ಇಂದಿಗೂ ಧಕ್ಕೆ ಬಂದಿಲ್ಲ.

೧೯೩೫ರಲ್ಲಿ ಬೇಂದ್ರೆಯವರು ಎಂ. ಎ. ಪರೀಕ್ಷೆ ಮುಗಿಸಿದರು. ಪರೀಕ್ಷೆಗಾಗಿ ಓದಿ ಬೇಸರಪಟ್ಟಿದ್ದರು. ಪರೀಕ್ಷೆ ಮುಗಿಸಿದವರು ಚಲನಚಿತ್ರ ನೋಡಲು ಹೋದರೆ, ಬೇಂದ್ರೆಯವರು ತಮಗೆ ಪ್ರೀತಿಯಾದ ಕೆಲವು ಹಳೆಯ ಪುಸ್ತಕ ಕೊಂಡು ಮುಂಬೈ ಸಮುದ್ರದ ದಂಡೆಗೆ ಹೋಗಿ ಓದುತ್ತ ಕುಳಿತರು. ಆದರೆ ಅಂದೇ ಪುಣೆ ಯಿಂದ ಅವರಿಗೆ ತಂತಿ ಬಂತು— ಕಕ್ಕನ ಪ್ರಕೃತಿ ಸರಿ ಇಲ್ಲ ಎಂದು. ಕೂಡಲೇ ಬೇಂದ್ರೆಯವರು ಪುಣೆಗೆ ಬಂದರು. ಬೇಂದ್ರೆಯವರು ಎಂ. ಎ. ಪಾಸಾದರು. ಆಶ್ರಯದಾತರಾದ ಕಕ್ಕ ತೀರಿಕೊಂಡರು.

೧೯೩೬ರ ಕಾಲಕ್ಕೆ ಬೇಂದ್ರೆಯವರು ಸೂರ್ಯೋಪಾಸನೆ ಮಾಡುತ್ತಿದ್ದರು. ಸಂಸಾರದ ಚಿಂತೆ ಹೆಚ್ಚಾಯಿತು. ತಮ್ಮನಾದ ಕೃಷ್ಣನಿಗಾಗಿ ಕಕ್ಕಿಯ ಬಳಗದ ಹುಡುಗಿಯನ್ನು ಆರಿಸಿ ವಿವಾಹ ನಡೆಯಿತು. ತಮ್ಮ ಕಕ್ಕಿ ಹತ್ತಿರ ಉಳಿದುಕೊಂಡ. ಬೇಂದ್ರೆಯವರು ತಮ್ಮ ಸಂಸಾರ ಎತ್ತಿಕೊಂಡು ಮರಳಿ ಧಾರವಾಡಕ್ಕೆ ಬಂದರು.

ಬೇಂದ್ರೆಯವರಿಗೆ ನೌಕರಿ ಇಲ್ಲ. ಅಣ್ಣ ಮಾಸ್ತಿಯವರು ಹೃದಯ ವೈಶಾಲ್ಯ-ದಿಂದ ಬೇಂದ್ರೆಯವರಿಗೆ ಸಹಾಯಹಸ್ತ ನೀಡಿದರು. 'ಜೀವನ' ಪತ್ರಿಕೆಯ ಸಂಪಾದಕರನ್ನಾಗಿ ಮಾಡಿದರು. ಮಾಸ್ತಿಯವರೊಂದಿಗೆ ಬೇಂದ್ರೆಯವರು ಸಾಕಷ್ಟು ಪ್ರವಾಸ ಮಾಡಿದ್ದು ಈ ಕಾಲದಲ್ಲಿ. ಅನೇಕ ಸ್ಥಳಗಳಲ್ಲಿ ಭಾಷಣ ಮಾಡುವುದು, ಕವಿತಾ ವಾಚನ ಮಾಡುವುದು ಬೇಂದ್ರೆಯವರ ಪ್ರಮುಖ ಕೆಲಸವಾಗಿತ್ತು. ಇದರಿಂದ ಸ್ನೇಹಿತರ, ಆತ್ಮೀಯರ ಬಳ್ಳಿ ಬೆಳೆಯುತ್ತ ಹೋಯಿತು. 'ಚಳಿಯಾಕೆ' ಕವನವನ್ನು ಹಾಡಲು ಮಾಸ್ತಿಯವರು ಸೂಚಿಸುತ್ತಿದ್ದರಂತೆ.

ನನ್ನ ತಾಯಿ ಲಕ್ಷ್ಮೀಬಾಯಿ ತನ್ನ ತವರುಮನೆಯಲ್ಲಿ ರಾಮ ಮತ್ತು ಪಾಂಡುರಂಗರನ್ನು ಕರೆದುಕೊಂಡು ರಾಣೇಬೆನ್ನೂರಲ್ಲಿ ಇದ್ದಳು, ಬೇಂದ್ರೆಯವರು ಬೆಂಗಳೂರಿನಲ್ಲಿ ಮಾಸ್ತಿಯವರ ಮನೆಯಲ್ಲಿ ಇದ್ದರು. ಆಗ ನನ್ನ ತಾಯಿ ಕಂಡ ಕನಸು ಹೀಗಿದೆ— ಒಬ್ಬ ಗಡ್ಡ ಬಿಟ್ಟ ಸನ್ಯಾಸಿ ಬಂದು "ಬೇಂದ್ರೆಯವರು ಪಾಂಡಿಚೇರಿಯ ಆಶ್ರಮಕ್ಕೆ ಹೋಗಿದ್ದಾರೆ. ಶ್ರೀ. ಅರವಿಂದರು ಅವರಿಗೆ ಸಂನ್ಯಾಸ ದೀಕ್ಷೆ ಕೊಟ್ಟರು ಎಂದನಂತೆ" ನನ್ನ ತಾಯಿ ಗಾಬರಿಯಾದಳು. ಅಷ್ಟರಲ್ಲಿ ಅವಳ ಹತ್ತಿರ ಇದ್ದ ರಾಮ, ಆ ಸನ್ಯಾಸಿಯ ಗಡ್ಡ ಎಳೆದು "ಇದು ನೋಡು ಇವರೇ ನನ್ನ ತಂದೆ ಅಣ್ಣಾ" ಎಂದನಂತೆ. ಈ ಕನಸಿಗೆ ಆ ಕಾಲದ ಬಡತನದ

ಪರಿಸ್ಥಿತಿಯೂ ಕಾರಣವಿರಬಹುದು. ಬೇಂದ್ರೆಯವರು ಮಾತ್ರ ಮಾಸ್ತಿಯವರು ಬರೆದ 'ಯಶೋಧರಾ' ನಾಟಕವನ್ನು ಓದುತ್ತ ಸುಖದಿಂದ ಬೆಂಗಳೂರಲ್ಲಿ ಇದ್ದರು.

೧೯೩೬ರ ರಲ್ಲಿ ವಿಜಯನಗರ ಷಟ್ ಸಾಂವತ್ಸರಿಕ ಉತ್ಸವದ ನಿಮಿತ್ತವಾಗಿ ಬೇಂದ್ರೆಯವರು ಜಿ. ಬಿ. ಜೋಶಿಯವರನ್ನು ಜೊತೆಗೆ ಕರೆದುಕೊಂಡು ಹೈದ್ರಾಬಾದ ಕರ್ನಾಟಕದಲ್ಲಿ ಸುತ್ತಾಡಿದರು. ಜನರಿಂದ ಉತ್ಸವಕ್ಕಾಗಿ ಹಣ ಕೂಡಿಸುವ ಕೆಲಸ ಬೇಂದ್ರೆಯವರು ಮಾಡಿದ್ದು ಇದೇ ಮೊದಲು ಮತ್ತು ಕೊನೆ. ಯಾವುದೇ ರೀತಿಯಿಂದ ಇನ್ನೊಬ್ಬರ ಹತ್ತಿರ ಹಣ ಬೇಡುವುದು ಅಪಮಾನಕರ ಎಂಬ ಬೇಂದ್ರೆಯವರ ಭಾವನೆ ಈ ಪ್ರವಾಸದಿಂದ ಮತ್ತಷ್ಟು ದೃಢವಾಯಿತು.

೧೯೩೮ ರಿಂದ ೧೯೪೪ಗ ಬೇಂದ್ರೆಯವರು ತಮ್ಮ ಮಗ ರಾಮನೊಂದಿಗೆ ಮತ್ತು ಷಡ್ಡಕನ ಮಗ ಮಾಧವನೂ ತಮ್ಮ ಮಗನೇ ಎಂದು ಬಗೆದು, ಅವರೊಂದಿಗೆ ಸಾಹಿತ್ಯಸಾಧನೆ ಪ್ರಾರಂಭಿಸಿದರು. ಮೂವರೂ ಕೂಡಿ ಸೌಂದರ್ಯಲಹರಿ, ಅನ್ನಪೂರ್ಣಸ್ತೋತ್ರ, ಗಂಗಾಲಹರಿ, ಮೊದಲಾದ ಸ್ತೋತ್ರಪಠನ ಮಾಡುತ್ತಿದ್ದರಂತೆ. ಅನೇಕ ಉತ್ತಮೋತ್ತಮ ಕವನ ಭಾಗಗಳನ್ನು ರಾಮ ಮತ್ತು ಮಾಧವ ಇಬ್ಬರಿಗೂ ಕಂಠಪಾಠಮಾಡಲು ಹಚ್ಚುತ್ತಿದ್ದರು. ಓಂಕಾರದ ವಿಷಯವಾಗಿ ಚರ್ಚೆ ಮಾಡುತ್ತಿದ್ದರು. ಬೇಂದ್ರೆಯವರು ಹೇಳಿದ ಭವಿಷ್ಯವನ್ನು ಅನು-ಸರಿಸಿ, ಮಾಧವ ಆಯುರ್ವೇದ ಶಾಸ್ತ್ರವನ್ನೇ ಅಭ್ಯಸಿಸಿ ಇಂದು ಮುಂಬೈ ನಗರದಲ್ಲಿ ಪ್ರಖ್ಯಾತ ಡಾಕ್ಟರ ಆಗಿದ್ದಾರೆ. ಅವರ ಮುಖದಿಂದಲೆ ನಾನು ಮೇಲೆ ಹೇಳಿದ ವಿಷಯ ತಿಳಿದುಕೊಂಡೆ. ಈ ಕಾಲಾವಧಿಯಲ್ಲಿ ಕವನರಚನೆ ಬೇಂದ್ರೆಯವರ ನಿತ್ಯದ ಜೀವನವಾಗಿತ್ತು. ಪ್ರತಿ ದಿವಸ ರಾತ್ರಿ ರಚಿಸಿದ ಕವನಗಳನ್ನು ತಮ್ಮ ಮಡದಿ ಮತ್ತು ಮಕ್ಕಳಿಗೆ ಓದಿ ತೋರಿಸುತ್ತಿದ್ದರು. ಮಕ್ಕಳು ಸ್ವತಂತ್ರ ಬರೆಯುವಂತೆ ಪ್ರೇರಣೆ ಕೊಡುತ್ತಿದ್ದರಂತೆ. ಗದ್ಯ ಬರವಣಿಗೆ ಮಾತ್ರ ಸ್ನೇಹಿತರಿಗೆ ಹೇಳಿ ಬರೆಸುತ್ತಿದ್ದರು. ಜಿ. ಬಿ. ಜೋಶಿ, ಗೋವಿಂದ ಚುಳಕಿ, ದತ್ತಮೂರ್ತಿ ದೇಸಾಯಿ ಮೊದಲಾದವರು ಬೇಂದ್ರೆಯವರ ಲೇಖನಿಕರಾಗಿ ಕೆಲಕಾಲ ಕೆಲಸ ಮಾಡುತ್ತಿದ್ದರು. ಸಾಧನಕೇರಿಯ ದಂಡೆಗೆ ಹೋಗಿ ಬೇಂದ್ರೆಯವರು ಪುಸ್ತಕ ವಾಚನ ಮಾಡುತ್ತ ಕುಳಿತರೆ ಅವರಿಗೆ ವೇಳೆಯ ಮಿತಿ ಇರುತ್ತಿರಲಿಲ್ಲ. 'ಮೂರ್ತಿ ಮತ್ತು ಕಾಮಕಸ್ತೂರಿ' 'ನಾದಲೀಲೆ' 'ಉಯ್ಯಾಲೆ' 'ಸಖೀಗೀತ'ಗಳಂಥ ಕವನ ಸಂಗ್ರಹ; 'ಸಾಹಿತ್ಯ ವಿಮರ್ಶೆ'ಯಂಥ ಗದ್ಯಲೇಖನ ಮತ್ತು 'ನಿರಾಭರಣ ಸುಂದರಿ'ಯಲ್ಲಿಯ ಹರಟೆ, ಕಥೆ, ಅಣಕವಾಡು ರೂಪಗೊಂಡು ಪ್ರಕಾಶನಗೊಂಡದ್ದು ಈ ಅವಧಿಯಲ್ಲಿ. ಸಾಹಿತ್ಯಕೃಷಿಯೆ ಈ ಕಾಲದ ಜೀವನಧರ್ಮವಾಗಿತ್ತು ಬೇಂದ್ರೆಯವರಿಗೆ.

ಬೇಂದ್ರೆಯವರು ತಾಯಿಗೆ, ಮನೆಗೆ ಬರುವ ಹೆಣ್ಣುಮಕ್ಕಳಿಗೆ ಅಥವಾ ವಿದ್ಯಾರ್ಥಿನಿಯರಿಗೆ ಯಾವುದೇ ಗ್ರಂಥವನ್ನು ಸರಸವಾಗಿ ಓದಿ ತೋರಿಸುವ ರೂಢಿ-ಯನ್ನು ಬೆಳೆಸಿಕೊಂಡಿದ್ದರು. ಧಾರವಾಡದ ವನಿತಾಸೇವಾಸಮಾಜದಲ್ಲಿ ಕೆಲವು ಕಾಲ ಬೇಂದ್ರೆಯವರು ಶಿಕ್ಷಕರಾಗಿ ಕೆಲಸ ಮಾಡಿದರು. ಅಲ್ಲಿಯ ಅನೇಕ ಅನಾಥ ಮಹಿಳೆಯರಿಗೆ ರವೀಂದ್ರನಾಥ ಠಾಕೂರ ಅವರ ಕಥೆಗಳನ್ನು ಓದಿ ತೋರಿಸಿ ಆ ಮಹಿಳೆಯರನ್ನು ಸುಸಂಸ್ಕೃತಗೊಳಿಸಿದರು. ಮಹಿಳೆಯರು ಬೇಂದ್ರೆಯವರನ್ನು ಕಂಡಾಗ ಒಮ್ಮೊಂದೊಮ್ಮೆ ಗೌರವಭಕ್ತಿಯನ್ನು ಮತ್ತು ಬೇಂದ್ರೆಯವರು ಕೂಡ ಮಹಿಳೆಯರ ಅಂತಃಕರಣಕ್ಕೆ ಬಹುಬೇಗ ಮಾರುಹೋಗುತ್ತಾರೆ. ಬೇಂದ್ರೆಯವರು ಕೆಲವು ಮಹಿಳೆಯರೊಂದಿಗೆ ಮಾತನಾಡುವ ರೀತಿಯನ್ನು ನೋಡಿ ನಾನು ಆಶ್ಚರ್ಯ-ಪಟ್ಟಿದ್ದುಂಟು. ಈ ಮಹಿಳೆಯರ ಭೆಟ್ಟಿ ಆಕಸ್ಮಿಕ. ಅವರ ಸಂಬಂಧ ಕೆಲವು ಕಾಲ ಅಖಂಡ, ಕೆಲವು ಕಾಲ ಖಂಡಿತ. ಪೂರ್ವಜನ್ಮದ ಸ್ಮರಣೆಯಂತೆ ಇರು-ತ್ತವೆ ಈ ಸಂಬಂಧ!

ಅನೇಕ ವಿಷಯಗಳನ್ನು ನನಗೆ ಡಾ|| ಮಾಧವ ನಾತು ಹೇಳಿದ್ದಾರೆ. ರಾಮು ಮತ್ತು ಮಾಧವ ಇವರ ಉನ್ನತೋನ್ನತ ಬೆಳವಣಿಗೆ ಬೇಂದ್ರೆಯವರ ನಿರುದ್ಯೋಗದ ಆ ಅವಸ್ಥೆಯಲ್ಲಿ ಅವರಿಗೆ ಒಂದು ಬಗೆಯ ವಿಶ್ರಾಂತಿ, ಉತ್ಸಾಹ ಕೊಡುತ್ತಿತ್ತು.

೧೯೪೪ ರ ಸುಮಾರು ಯಾವುದೋ ಒಂದು ಕಾಯದೆಯ ಮೇರೆಗೆ ಬೇಂದ್ರೆ ಯವರ ಮೇಲಿನ ಬಂಧನ ಹೋಯಿತು. ಬೇಂದ್ರೆಯವರನ್ನು ಗದುಗಿನ ಸಮಿತಿ ಹೈಸ್ಕೂಲಿನವರು ಮುಖ್ಯಾಧ್ಯಾಪಕ ಹುದ್ದೆಗೆ ಆಮಂತ್ರಿಸಿದರು. ಬೇಂದ್ರೆಯವರ ಜೀವನಕ್ಕೆ ಒಂದು ಹೊಸ ಚೈತನ್ಯ ಬಂತು. ಮಗ-ರಾಮು ಎಲ್ಲ ಪುಸ್ತಕಗಳನ್ನು ಸರಿಯಾಗಿ ಕಟ್ಟಿ, ಇನ್ನು ನಾವು ಕೊನೆಯ ವರೆಗೆ ಗದುಗಿನಲ್ಲಿಯೇ ಇರುವೆವು ಎಂಬ ಒಂದು ನಂಬಿಗೆಯಿಂದ ಸಾಮಾನು ಗದುಗಿಗೆ ಸಾಗಿಸಿದ. ಬೇಂದ್ರೆಯವರು ಶ್ರದ್ಧೆ-ಯಿಂದ ಕೆಲಸ ಸಾಗಿಸಿದರು, ಅವರ ಬೆಳೆಯುತ್ತಿರುವ ಸಾಹಿತ್ಯಸೇವೆ, ಸತ್ಯವನ್ನು ಒರೆಗೆ ಹಚ್ಚುವ ರೀತಿ ಶಿಕ್ಷಣ ಸಂಸ್ಥೆಯ ಆಡಳಿತಗಾರರಿಗೆ ಸರಿಬರಲಿಲ್ಲ.

೧೯೪೪ ರ ಕೊನೆ ಮಲ್ಲಮ್ಮನ ಬೆಳವಡಿಯಲ್ಲಿ ಬೇಂದ್ರೆಯವರ ಭಾಷಣ. ಆಗ ಬಿ. ಎಮ್. ಶ್ರೀ ಅವರೂ ಇದ್ದರು. ೨೧ ಎತ್ತಿನ ಜೋಡಿ ಹೂಡಿದ ಬಂಡಿಯಲ್ಲಿ ಕವಿ ಬೇಂದ್ರೆಯವರ ಮೆರವಣಿಗೆಯ ಸಂಭ್ರಮ. ಬೇಂದ್ರೆಯವರಿಗೂ ತಮ್ಮ ಜೀವನದ ಧನ್ಯತೆಯ ಬಗ್ಗೆ ಏನೋ ಭಾವನೆ ಮೂಡಿರಲೂ ಸಾಕು. ಕಾರ್ಯ-ಕ್ರಮ ಮುಗಿಸಿ ಮನೆಗೆ ಬಂದಾಗ — ಗದಗ ಸಮಿತಿ ಹೈಸ್ಕೂಲಿನವರು ಬೇಂದ್ರೆ ಯವರನ್ನು ಕೆಲಸದಿಂದ ಕಡಿಮೆ ಮಾಡಿದ್ದಾರೆ ಎಂದು ಪತ್ರ. ಬೇಂದ್ರೆಯವರು ಆಡಳಿತಗಾರರಿಗೆ ಕಾರಣ ಕೇಳಲಿಲ್ಲ; ಅವರು ಹೇಳಲಿಲ್ಲ. ಬೇಂದ್ರೆಯವರು

ಧಾರವಾಡದಿಂದ ಒಯ್ದು ಸಾಮಾನು ಮರಳಿ ಧಾರವಾಡಕ್ಕೆ ತಂದು ತಮ್ಮ ಜೀವ-ನೋಪಾಯದ ಹಾದಿ ಹುಡುಕತೊಡಗಿದರು. ‘ಬಾರೋ ಸಾಧನಕೇರಿಗೆ’ — ಕವನ ಬಂತು.

೧೯೪೩ ರಲ್ಲಿ ನ್ಯೂ ಇಂಗ್ಲಿಷ್ ಸ್ಕೂಲಿನಲ್ಲಿ ‘ವಾರದಾಗ ಮೂರು ಸರತಿ’ ಮಾತ್ರ ಹೋಗಿಬರುವ ಶಿಕ್ಷಕನ ಕೆಲಸ ಸಿಕ್ಕಿತು. ಅಷ್ಟೇ ಮನೆಗೆ ಆಧಾರವಾಯಿತು.

> “ಮಾಡುವದು ಬಿಡುವದು ಕೂಡಿಹುದು ನಿನ್ನನ್ನು
> ಮಾಡು ಬಿಡು ನನ್ನ ಹಿತಬಂಧು ನೀನು!
> ‘ಮಾಡಿಬಿಡು’ ಎಂದು ಮಾತಾಡದಲೆ ನಂಬಿರುವೆ
> ಮಾಡಿ ಮಾಡಿಸುವವನೆ ಬಲವ ನೀಡು”

ಎಂಬುದು ಬೇಂದ್ರೆಯವರ ನಿತ್ಯ ಪ್ರಾರ್ಥನೆ. ‘ಅಗ್ನಿಸೂಕ್ತ’, ‘ಸರಸ್ವತಿ-ಸೂಕ್ತ’, ‘ಗಾಯತ್ರಿ ಸೂಕ್ತ’ ಮೊದಲಾದ ಅನೇಕ ಪ್ರಾರ್ಥನಾಪದ್ಯಗಳನ್ನು ಬರೆಯುವುದು ಬೇಂದ್ರೆಯವರ ರೂಢಿ. ಬೇಂದ್ರೆಯವರಲ್ಲಿ ಇದ್ದ ದೊಡ್ಡ ಆಸ್ತಿ ಎಂದರೆ ಅಭಿಮಾನ. ಅಭಿಮಾನವನ್ನು ಕೆಣಕಿದವರನ್ನು ಅವರು ಎಂದಿಗೂ ಬಿಟ್ಟಿಲ್ಲ. ಶಿಕ್ಷಣ ಕಲಿಸಿದ ಕಕ್ಕ ಬಂಡೋಪಂತ, ಕಷ್ಟದಲ್ಲಿ ನೆರವಾದ ಅಣ್ಣ ಮಾಸ್ತಿ ಮತ್ತೂ ಅನೇಕರಿಗೆ ಬೇಂದ್ರೆಯವರ ಅಭಿಮಾನದ ರೌದ್ರ ಗೊತ್ತು. ಬೇಂದ್ರೆಯವರಿಗೂ ಇದು ಗೊತ್ತು. ಇಂಥ ತಾನು ಜೀವನ ಸಾಗಿಸುವುದು ಹೇಗೆ ಎಂಬ ಚಿಂತೆಯೂ ಉಂಟು. ಆದುದರಿಂದ ಅವರು ನಂಬಿದ ಧಾರವಾಡದ ತಾಯಿ– ದುರ್ಗಾದೇವಿ-ಯಲ್ಲಿ—

> “ ಅಂಬಿಕಾತನಯನು ನಿನ್ನ | ನಂಬಿ ಇನ್ನೂ ವರೆಗೂ ಇರುವ
> ‘ಜಂಭ ನೀನೆ ಕಾಯಿ’ ಎಂದು | ತುಂಬಿ ನಿನ್ನಡಿದಾವರೆಗಾದಾ ”

ಎಂದು ಬೇಡಿಕೊಂಡಿದ್ದಾರೆ.

೧೯೪೪ ರಲ್ಲಿ ಪುಣೆಯ ಕಾಮರ್ಸ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕವೃತ್ತಿ ಸಿಕ್ಕಿತು. ‘ಕನ್ನಡ ಮೇಘದೂತ’ ಪ್ರಕಾಶನಗೊಂಡಿತು. ಶಿವಮೊಗ್ಗಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನಕ್ಕೆ ಆಯ್ಕೆ ಆಯಿತು. ಈ ಮೊದಲೂ ಬೇರೆ ಬೇರೆ ಸಾಹಿತ್ಯಸಮ್ಮೇಳನಗಳಲ್ಲಿ ಬೇಂದ್ರೆಯವರು ಭಾಗವಹಿಸಿದ್ದರು. ಆ ಎಲ್ಲದರ ಒಂದು ಪರಿಣಾಮವಾಗಿ ಬೇಂದ್ರೆಯವರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಈ ಸಮ್ಮೇಳನ ಕಾಲಕ್ಕೆ ‘ಆಶುಕವನ ಸ್ಪರ್ಧೆ’ ಇಡಲಾಗಿತ್ತು. ಅದರಲ್ಲಿ ರಾಮನಿಗೆ ಬಹುಮಾನ ಸಿಕ್ಕಿತು. ಹೀಗಾಗಿ ಬೇಂದ್ರೆಯವರ ಸಂಸಾರಕ್ಕೆ ಸುಗ್ಗಿಯ

ಕಾಲ ಬಂದಂತೆ ಘಟನೆಗಳು ಉನ್ನತೋನ್ನತವಾಗಿ ಸಾಗಿದ್ದವು. ಇವು ಮಾನ-ಸನ್ಮಾನಗಳು. ಪ್ರತಿನಿತ್ಯದ ಉಪಜೀವನದ ದೃಷ್ಟಿಯಿಂದ ಪುಣೆಯ ಅಧ್ಯಾಪಕ ಕೆಲಸದ ಸಂಬಳ ಸಾಕಾಗುವಂತಿರಲಿಲ್ಲ. ಕೆಲಸ ಕಡಿಮೆ. ಸಂಬಳ ಕಡಿಮೆ. ಪುರ-ಸೊತ್ತು ಸಾಕಷ್ಟಿತ್ತು. ಸಾಂಸಾರಿಕ ತಾಪತ್ರಯದ ಮೂಲಕ ಮನಸ್ಸು ಸಂತ್ರಸ್ತವಾಗಿತ್ತು. ಆದುದರಿಂದ ಬೇಂದ್ರೆಯವರು 'ಸೌಂದರ್ಯಲಹರಿ'ಯ ಕನ್ನಡ ಅನುವಾದ ಭಕ್ತಿಗೆ ಶರಣುಹೋದರು. ಅನುವಾದಕಾರ್ಯ ಪ್ರಾರಂಭಿಕ ಅವಸ್ಥೆಯಲ್ಲಿ ಇರುವಾಗ ಅವರಿಗೆ ಸೊಲ್ಲಾಪೂರ ಡಿ. ಎ. ವ್ಹಿ. ಕಾಲೇಜಿನಿಂದ 'God Sent Start' ಎಂದು ಒಂದು ತಂತಿ ಬಂತು. ತಂತಿಯ ಅರ್ಥ ದೇವರಿಗೇ ಗೊತ್ತು. ಸೌಂದರ್ಯಲಹರಿಯ ಅನುವಾದ ಪ್ರಸಾದ ಎಂದು ಭಾವಿಸಿ ಬೇಂದ್ರೆ ಪುಣೆಯಿಂದ ಸೊಲ್ಲಾಪೂರಕ್ಕೆ ಹೋದರು. ಅಲ್ಲಿ ಅವರಿಗೆ ಪೂರ್ಣಾವಧಿಯ ಕನ್ನಡ ಪ್ರಾಧ್ಯಾಪಕ ವೃತ್ತಿ ಹಾದಿ ಕಾಯುತ್ತಿತ್ತು. ಬೇಂದ್ರೆಯವರು ಹೊರನಾಡ ಕನ್ನಡಿಗರಲ್ಲಿ ಕನ್ನ-ಡದ ಪ್ರಾಧ್ಯಾಪಕರಾದರು. ಜ್ಞಾನಗಜ ಹೊರನಾಡಿಗೆ ಹೋಯಿತು ಎಂದು ಕರ್ನಾ-ಟಕದವರು ನಿಟ್ಟುಸಿರು ಬಿಟ್ಟರು.

ಈವರೆಗೆ ಬೇಂದ್ರೆಯವರನ್ನು ಕುರಿತು ಬರೆದದ್ದು ನಾನು ಪ್ರತ್ಯಕ್ಷ ನೋಡಿ-ದ್ದಲ್ಲ. ನಾನು ಹುಟ್ಟಿದ್ದೇ ೧೯೩೫ ರಲ್ಲಿ. ಆದುದರಿಂದ ನಾನು ತಂದೆ, ತಾಯಿ, ಅಣ್ಣ, ಬೇಂದ್ರೆಯವರ ಸ್ನೇಹಿತರು, ವಿದ್ಯಾರ್ಥಿಗಳು ಇವರಿಂದ ಕೇಳಿ ತಿಳಿದು ಕೊಂಡದ್ದು. ನನ್ನ ಸ್ಮರಣೆಯ ಬಣ್ಣದಿಂದ ರೂಪಿಸಿಕೊಂಡದ್ದು. ೧೯೪೪ ರಿಂದ ಮುಂದೆ ಮಾತ್ರ ನಾನು ಬೇಂದ್ರೆಯವರ ಜೀವನವನ್ನು ಪ್ರತ್ಯಕ್ಷ ನೋಡಿರುವೆ. ಕೇಳಿದ ಮಾತುಗಳನ್ನು ತುಲನಾತ್ಮಕವಾಗಿ ಪರೀಕ್ಷಿಸಿಯೂ ನೋಡಿರುವೆ. ೧೯೪೪ ರಲ್ಲಿ ನನ್ನ ವಯಸ್ಸು ಒಂಭತ್ತು. ಅಂದಿನಿಂದ ಇಂದಿನ ವರೆಗೆ ಬೇಂದ್ರೆಯವರನ್ನು ನಾನು ನೋಡಿದ್ದರಲ್ಲಿ ಮೂರು ಭಾಗ ಮಾಡುವೆ. ೧೯೪೪ ರಿಂದ ೧೯೫೬ ಸೊಲ್ಲಾಪೂರ ಜೀವನ. ೧೯೫೬ ರಿಂದ ೧೯೬೬ ಮರಳಿ ಧಾರವಾಡ ಜೀವನ. ೧೯೬೬ ರಿಂದ ೧೯೭೬ ರ ಜೀವನವನ್ನು ನಾನು ಬೇಂದ್ರೆಯವರ ಸಾಮೀಪ್ಯವನ್ನು ಹೇಗೆ ಅನುಭವಿಸಿದೆ ಎಂಬುದನ್ನು ವರ್ಣಿಸಲು ಮೀಸಲಾಗಿಟ್ಟಿರುವೆ.

**೧೯೪೪–೧೯೫೬**

ಮನೆಯಲ್ಲಿ ಎಲ್ಲರಿಗೂ ಆನಂದ. ರಾಮು ಸೊಲ್ಲಾಪೂರಕ್ಕೆ ಹೋಗಿ ದೊಡ್ಡ ಮನೆ ನೋಡಿಕೊಂಡು ಬಂದ. ನಾವೆಲ್ಲ ಉತ್ಸಾಹಿತರಾಗಿ ಸೊಲ್ಲಾಪೂರಕ್ಕೆ ಹೋದೆವು. ಮನೆಯ ಸಾಮಾನು ನಿಧಾನವಾಗಿ ಬಹಳ ವ್ಯವಸ್ಥಿತವಾಗಿ ಹಚ್ಚು-ತ್ತಿದ್ದೆವು. ಅಷ್ಟರಲ್ಲಿ ದೀಪಾವಳಿ ಸಮೀಪಿಸಿತು. ಎಲ್ಲರಿಗೂ ಅತ್ಯಾನಂದ ನೀಡುವ

ಕಿರಿಯ ತಮ್ಮ-ಆನಂದನ ಪ್ರಕೃತಿ ಕೆಟ್ಟಿತು. ಎಲ್ಲರ ಲಕ್ಷ್ಯ ಅವನ ಕಡೆಗೆ ಹತ್ತಿತು.

ತಾಯಿ ಮತ್ತು ಆನಂದ ಒಂದು ಕೋಣೆಯಲ್ಲಿ, ಮತ್ತೊಂದು ಕೋಣೆಯಲ್ಲಿ ತಂದೆಯವರು, ಇನ್ನೊಂದು ಕೋಣೆಯಲ್ಲಿ ನಾವು ಹುಡುಗರು— ಹೀಗೆ ಮಲಗುವ ವ್ಯವಸ್ಥೆ ಇತ್ತು. ಒಂದು ದಿವಸ ರಾತ್ರಿ ನನ್ನ ತಾಯಿಗೆ ಕನಸು. ಯಮುನ ಕಡೆಯಿಂದ ಪೋಸ್ಟಮನ್ ಬಂದು-ಇದೋ ನಿಮಗೆ ಕರೆ ಎಂದು ಪತ್ರ ಕೊಟ್ಟ. ತಾಯಿ ಅಂಜಿದಳು, ನಡುಗಿದಳು, ಜಡವಾದಳು. ಏಳಲಿಕ್ಕೆ ಬರಲಿಲ್ಲ. ನಾಲಿಗೆ ಜಡವಾಗಿತ್ತು, ಅಷ್ಟರಲ್ಲಿ ಮತ್ತೆ ಜಂಪು ಹತ್ತಿ—ಅದೇ ಪೋಸ್ಟಮನ್ 'ಆಗಳೇ ಕೊಟ್ಟ ಪತ್ರ ನಿಮ್ಮದಲ್ಲ ಆದು ಕೊಡಿ, ನಿಮ್ಮಲ್ಲಿಯೇ ಬೇರೆಯವರದು' ಎಂದು ಹೇಳಿದ. ತಾಯಿಯವರಿಗೆ ಎಚ್ಚರವಾಯಿತು. ಅವರು ತಂದೆಯವರನ್ನು ಎಬ್ಬಿಸಿ ಕನಸು ಹೇಳಿದರು, ಅರ್ಥ ಆಗಲಿಲ್ಲ. ದೇವರ ಮೇಲೆ ಭಾರ ಹಾಕಿ ಜೀವನ ಸಾಗಿಸಿದರು. ತಾಯಿಯವರಿಗೆ ಅಂದಿನಿಂದ ಏನೋ ವ್ಯಥೆ. ಪ್ರಕೃತಿ ಕೆಡಲು ಪ್ರಾರಂಭವಾಯಿತು. ಒಂದು ದಿವಸ ಅಟ್ಟದ ಮೇಲಿಂದ ಜಾರಿಬಿದ್ದರು. ಆಗ ಪ್ರಾರಂಭವಾದ ಅನಾರೋಗ್ಯ ೧೯೫೨ ರ ವರೆಗೆ ಇತ್ತೇ ಇತ್ತು.

ಆನಂದ ತೀರಿಕೊಂಡ. ಎಲ್ಲರ ಆನಂದಕ್ಕೆ ಬರೆಕೊಟ್ಟಂತೆ ಆಯಿತು. ಸಾಯುವುದಕ್ಕಿಂತ ಕೆಲವು ದಿವಸ ಮೊದಲು ಬೇಂದ್ರೆಯವರು ಆನಂದನನ್ನು ಎತ್ತಿಕೊಂಡು ಆಡ್ಡಾಡುತ್ತಿದ್ದರು. ಊಟವಾಗಿತ್ತು, ಬೇಂದ್ರೆಯವರ ಬಾಯಿಯಲ್ಲಿ ಅಡಿಕೆಯ ಹೋಳಿತ್ತು. ಅದನ್ನು ಆನಂದ ಬೇಡಿದ. ಬೇಂದ್ರೆಯವರಿಗೆ ಸಿಟ್ಟು ಬಂತು. ನಿನ್ನ ಪ್ರಕೃತಿ ನೆಟ್ಟಗಿಲ್ಲ. ನಿನಗೆ ಅಡಿಕೆ ಏಕೆ ಬೇಕು ಎಂದು ಜಬರಿಸಿದರು. ಅಂದಿನಿಂದ ಒಂದು ವರ್ಷವಾಗಿರದ ಮಗು ಅಡಿಕೆ ಬೇಡಲಿಲ್ಲ. ಈ ಘಟನೆ ಇಂದಿಗೂ ಬೇಂದ್ರೆಯವರನ್ನು ಅಸ್ವಸ್ಥಗೊಳಿಸುತ್ತದೆ. ಆನಂದ ತೀರಿಕೊಂಡು ಎರಡು ದಿನವಾಗುವಷ್ಟರಲ್ಲಿ ರಾಮನ ಆರೋಗ್ಯ ಕೆಟ್ಟಿತು. ಎಂಟನೆಯ ದಿವಸ ಸಾಯಂಕಾಲ ಅವನ ಪ್ರಾಣಪಕ್ಷಿ ಹಾರಿತು. ರಾಮ ಸತ್ತ ಅಂದರ ಏನು ಆತು ನನಗ ತಿಳೀಲಿಲ್ಲ. ನನಗೂ ಜ್ವರಾ ಇತ್ತು. ನನ್ನ ತಂಗಿಗೂ ಜ್ವರಾ ಇತ್ತು.

ರೇಶನಿಂಗ ಕಾಲ. ಊರು ಹೊಸದು. ಒಂದಿಬ್ಬರು ಆಪ್ತರನ್ನು ಬಿಟ್ಟರೆ ಇನ್ನೂ ಪರಿಚಯ ಬೆಳೆದಿರಲಿಲ್ಲ. ಬೇಂದ್ರೆಯವರಿಗೆ ದಿಕ್ಕು ತೋಚದಂತಾಯಿತು. ಸೊಲ್ಲಾಪೂರದಲ್ಲಿದ್ದ ಜಜ್ ಶಾನಭಾಗ ಅವರಿಗೆ ಬೇಂದ್ರೆಯವರ ದಾರುಣಪರಿಸ್ಥಿತಿ ತಿಳಿಯಿತು. ಅವರು ಬೇಂದ್ರೆಯವರಿಗೆ ಸಹಾಯಹಸ್ತ ನೀಡಿದರು. ನಮ್ಮೆಲ್ಲರನ್ನು ಆಸ್ಪತ್ರೆಗೆ ಸಾಗಿಸಿದರು. ಈ ಪರಿಸ್ಥಿತಿಯ ಮೂಲಕ ತಾಯಿಗೆ ಕಣ್ಣೀರು ಸುರಿಸು-

ವುದೇ ಕೆಲಸವಾಗಿತ್ತು. ದುಃಖ ಹತ್ತಿಕ್ಕಿದ್ದರಿಂದ ಬೇಂದ್ರೆಯವರ ಸ್ವಭಾವ ಸಿಡುಕಿನದಾಗಿತ್ತು. ಅಷ್ಟರಲ್ಲಿ ಓಡಾಡುತ್ತಿರುವ ಪಾಂಡುರಂಗನಿಗೂ ಜ್ವರ ಹಿಡಿಯಿತು.

“ರುದ್ರವಿಲಾಸದ ಪರಿಯೇ ಬೇರೆ
ಶಿವಕರುಣೆಯು ಹಿರಿದು ॥ ಪಲ್ಲ ॥

ತಾಂಡವ ಪಾದಾಹತಿಯಲಿ ನೋಡುವ
ಬೆನಕೆಚ್ಚ ತುಳಿದು;
ಭುಜದ ಭುಜಂಗನ ಕಚ್ಚಿಸಿ ನೋಡುವ
ರಸದಲಿ ವಿಷ ಹಿಳಿದು;

ಚಿತಾಭಸ್ಮದಲಿ ಹೊರಳಿಸಿ ನೋಡುವ
ಮೈಯ ಮಲವ ತೊಳೆದು;
ಕಣ್ಣ ಕಿಚ್ಚಿನಲಿ ಹೊತ್ತಿಸಿ ನೋಡುವ
ಜ್ಯೋತಿಯ ಎಳೆಯೆಳೆದು

ಗಂಗಾಜಲದಲಿ ಮುಳುಗಿಸಿ ನೋಡುವ
ಎದೆಯಾಳವನಳೆದು,
ರುಂಡವ ಹೂವೊಲು ಉರದಲಿ ಧರಿಸುವ
ಕೊರಳಿಗೆ ಬರಸೆಳೆದು

ಅಟ್ಟಹಾಸದಲಿ ಕೆರಳಿಸಿ ನೋಡುವ
ಬಗೆಯನು ಬಗೆಬಗೆದು
ಬ್ರಹ್ಮಕಪಾಲದಲದ್ದಿ ನೋಡುವನು
ಆಸೆಯ ತೆರೆ ತೆಗೆದು

ಅದಕೂ ನಗುತಲೆ ಬರಮಾಡಿದರೆ
ತೆರೆವನು ಹೃದಯವನು
ಶಿವಕಾರುಣ್ಯದ ಘನತೆಯೆ ಮಿಗಿಲು
ತಿಳಿದವರಾರದನು ?”

ಎಂಬ ಚಿಂತನೆಯಲ್ಲಿ, 'ಹಾಡು-ಪಾಡು' ಎಂಬ ವಿಲಾಪಿಕೆಯನ್ನು ಸೃಷ್ಟಿಸುವಲ್ಲಿ, ರಾಮನು ಸಿದ್ಧಪಡಿಸಿದ 'ಗಂಗಾವತರಣ'ದ ಹಸ್ತಪ್ರತಿಯನ್ನು ನೋಡುವಲ್ಲಿ ಬೇಂದ್ರೆಯವರು ಕಾಲ ಕಳೆದರು.

ಎಲ್ಲರೂ ಗುಣಮುಖರಾಗಿ ಮನೆಗೆ ಬಂದೆವು. ಮೊದಲಿನ ದೊಡ್ಡಮನೆ ಬಿಟ್ಟು ಸೀಲಾನಗರದಲ್ಲಿ ಒಂದು ಚಿಕ್ಕಮನೆ ಹಿಡಿದೆವು. ಪ್ರತಿಯೊಬ್ಬರಿಗೂ ಪರಸ್ಪರರ ಆಧಾರ ಬೇಕಾಗಿತ್ತು. ಗುಮಾಸ್ತೆ ರಾಮಣ್ಣ ಮನೆಯವರಾದರು. ನಮಗೆಲ್ಲರಿಗೆ ಹಿರಿಯರಾಗಿ, ನನ್ನ ತಂದೆ-ತಾಯಿಗೆ ಕಳೆದುಕೊಂಡ ರಾಮನ ಸ್ಥಾನದಲ್ಲಿ ಇದ್ದು ಸಾಮೀಪ್ಯಕ್ಕೆ ಬಂದರು. ರಾಮಣ್ಣನವರ ಪತ್ನಿ ಜಾನಕೀಬಾಯಿ ಅವರು ನಮ್ಮ ಮನೆಗೆ ಸಮೀಪವಾದರು. ಆದರೆ ಅವರ ಮೇಲೆಯೂ ಯಮನ ಬಿರುಸುಕೈ ಬಿತ್ತು. ಬೇಂದ್ರೆ ಮತ್ತು ರಾಮಣ್ಣ ಗುಮಾಸ್ತೆ ಪರಸ್ಪರರಿಗೆ ಆಧಾರವಾದರು.

ನನ್ನ ತಂದೆ, ತಾಯಿ ಮತ್ತು ರಾಮಣ್ಣ ಮೂವರಿಗೂ ನಿದ್ದೆ ಇಲ್ಲ. ಬೇಂದ್ರೆಯವರು ಶ್ರೀ ಅರವಿಂದ ಮತ್ತು ತಾಯಿಯವರ ಲೇಖನಗಳನ್ನು ಓದಿ ಅರ್ಥ ಹೇಳುವುದು, ಸಾವಿತ್ರಿ ಮಹಾಕಾವ್ಯ ಅರ್ಥಮಾಡಿ ಹೇಳುವುದು, ಸಾಧು-ಸತ್ಪುರುಷರಗ್ರಂಥ ಓದಿಹೇಳುವುದು, ಜೀವನದಲ್ಲಿ ಸಾಧನೆಮಾಡುವುದು ಹೇಗೆ ಎಂಬುದನ್ನುಹೇಳುವುದು, ಹೀಗೆಯೇ ಮಾತಾಡುತ್ತ ಮಾತಾಡುತ್ತ ನಿದ್ದೆ ಬಂದಾಗ ಮಲಗುವುದು— ಈ ಸಾಧನೆ ಮೂವರಲ್ಲಿ ನಡೆದಾಗ ಒಂದು ರಾತ್ರಿ ರಾಮಣ್ಣ ಅಂತರ್ಮುಖರಾದರು. ಅವರ ಸ್ಥಿತಿ ನೋಡಿ ಬೇಂದ್ರೆಯವರಿಗೆ ಇದು ಸಮಾಧಿಸ್ಥಿತಿ ಎಂದು ತಿಳಿಯಿತು. ಬೇಂದ್ರೆಯವರು ಅಂಜಿದರು. ಸಮಾಧಿ ಇಳಿಸುವುದು ಹೇಗೆ ಗೊತ್ತಿಲ್ಲ. ಶ್ರೀ ತಾಯಿಯವರ ಫೋಟೋ ಅವರ ತಲೆಯ ಮೇಲೆ ಇಟ್ಟು ಶ್ರೀಮಾತಾರವಿಂದರಲ್ಲಿ ಪ್ರಾರ್ಥನೆ ಪ್ರಾರಂಭಿಸಿದರು. ಸಮಾಧಿ ಇಳಿಯಿತು.

ಬೇಂದ್ರೆಯವರು ಸೊಲ್ಲಾಪೂರಕ್ಕೆ ಹೋಗಿರದಿದ್ದರೆ ಅವರ ಮರಾಠಿ ಸಾಹಿತ್ಯ ರಚನೆ ಹೆಚ್ಚಾಗುತ್ತಿರಲಿಲ್ಲ ಎಂದು ತೋರುತ್ತದೆ. ಸೊಲ್ಲಾಪೂರದಲ್ಲಿ ಮರಾಠಿ ಜನರು ಇವರ ಸುತ್ತುಮುತ್ತು ಸೇರತೊಡಗಿದರು. ಕಾಲೇಜಿನಲ್ಲಿ ಕನ್ನಡ ವಿದ್ಯಾರ್ಥಿಗಳಿಗಿಂತ ಮರಾಠಿ ವಿದ್ಯಾರ್ಥಿಗಳೇ ಹೆಚ್ಚು. ಮರಾಠಿ ವಿದ್ಯಾರ್ಥಿಗಳು ಕನ್ನಡ ಪ್ರಾಧ್ಯಾಪಕರಿಂದ ಅಭ್ಯಾಸದಲ್ಲಿ ಸಹಾಯ ಪಡೆದು ದಾ. ಗೋ. ದೇಶಪಾಂಡೆ, ಶ್ರೀರಾಮ ಪೂಜಾರಿ, ಅಶೋಕ ಜಾವಡೇಕರ ಮೊದಲಾದವರು ಮುಂದಾದರು. ಕನ್ನಡ ವಿದ್ಯಾರ್ಥಿಗಳಾದ ವಸಂತ ದಿವಾಣಜಿ ಅವರು ನಮ್ಮ ಮನೆಯವರೆ ಆಗಿಬಿಟ್ಟಿದ್ದರು.

ಧಾರವಾಡದ 'ವನಿತಾಸೇವಾ ಸಮಾಜ'ದಂತೆ ಸೊಲ್ಲಾಪುರದಲ್ಲಿ 'ಶ್ರಾವಿಕಾ-ಶ್ರಮ' ಎಂಬ ಒಂದು ಜೈನ ಅನಾಥ ಹೆಣ್ಣುಮಕ್ಕಳ ಸಂಸ್ಥೆ ನಮ್ಮ ನೀಲಾನಗರದ ವಾಸಸ್ಥಾನದ ಸಮೀಪಕ್ಕೆ ಇತ್ತು. ಅಲ್ಲಿಯ ಅನೇಕ ವಿದ್ಯಾರ್ಥಿನಿಯರಿಗೆ ವಿದ್ಯಾ-ಭ್ಯಾಸ ಹೇಳಿಕೊಡುತ್ತ, ಅಲ್ಲಿಯ ಜೈನ ಪುಸ್ತಕಭಾಂಡಾರದಿಂದ ಜೈನಸಿದ್ಧಾಂತ-ವನ್ನು ಅಭ್ಯಾಸ ಮಾಡುತ್ತ ಬೇಂದ್ರೆಯವರು ಸಾಗಿದರು. ಕನ್ನಡಕ್ಕೆ ಜೈನರ ಕೊಡುಗೆ ಹೇಗೆ ವಿಪುಲವಾಗಿದೆ ಎಂಬುದನ್ನು ಜೈನರಿಗೆ ಮರಾಠಿಯಲ್ಲಿ ತಿಳಿಸಿಕೊಡು-ವುದು, 'ಭರತೇಶವೈಭವ'ದ ಮಹತಿಯನ್ನು ವರ್ಣಿಸುವುದು ಬೇಂದ್ರೆಯವರ ಸೊಲ್ಲಾಪುರದ ಜೀವನದ ಒಂದು ಪ್ರಮುಖ ಘಟನೆ.

ಜೈನರೇ ಪ್ರಾರಂಭಿಸಿದ 'ಸನ್ಮತಿ' ಮಾಸಪತ್ರಿಕೆಗಾಗಿ ಮರಾಠಿ ಲೇಖನಗಳನ್ನು ಬರೆದು ಕೊಡುವುದು ಒಂದು ಹವ್ಯಾಸವಾಗಿತ್ತು. ಸುಮೇರಚಂದ ಜೈನ, ಸರ-ದೇಶಮುಖ ಮೊದಲಾದವರು ಬೇಂದ್ರೆಯವರು ಹೇಳುವ ಮರಾಠಿ ಲೇಖನಗಳನ್ನು ಬರೆದುಕೊಳ್ಳಲು ಸಿದ್ಧರಾಗಿರುತ್ತಿದ್ದರು. ಇದು ಎಲ್ಲ ಸ್ನೇಹದ ವ್ಯವಹಾರ, ಹಣದ ವಿಷಯ ಗೌಣ. ಬೇಂದ್ರೆಯವರು ಮಾಡಿದ ಕೆಲಸಕ್ಕೆ ಜನರು ಹಣ ಕೊಡ ಬೇಕೇ ಹೊರತು; ಹಣಕ್ಕಾಗಿ ಬೇಂದ್ರೆಯವರಿಗೆ ಕೆಲಸ ಮಾಡಲು ಬರಲೇ ಇಲ್ಲ. ಇನ್ನೊಬ್ಬರಿಗೆ ಲಾಭ ಮಾಡಿಕೊಡುವುದು ಮತ್ತು ಲಾಭ ಹೊಡೆಯುವುದು ಎಂಬ ಎರಡೂ ವಿದ್ಯೆ ಅವರಿಗೆ ಎಂದೂ ಬರಲೇ ಇಲ್ಲ. ಹೀಗಾಗಿ ಅವರಿಗೆ ಅನೇಕ ಗುಪ್ತ ವೈರಿಗಳು ನಿರ್ಮಾಣವಾದದ್ದು ತಿಳಿಯದೇ ಹೋಯಿತು. ಬೇಂದ್ರೆಯವರನ್ನು ದುಡಿಸಿ ಸಂಸ್ಥೆ ನಡೆಸಿಕೊಳ್ಳಬೇಕು ಎಂಬವರು ನಿರಾಶರಾಗಿದ್ದಾರೆ. ಬೇಂದ್ರೆಯವ ರನ್ನೇ ನಂಬಿ ಕೆಲಸ ಹಮ್ಮಿಕೊಂಡವರು ಕೈಸುಟ್ಟುಕೊಂಡಿದ್ದಾರೆ. ಇದಕ್ಕೆ ಕಾರಣ ಬೇಂದ್ರೆಯವರ ಸ್ವಭಾವವನ್ನು ಅವರು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ ಎಂದೇ ಹೇಳಬೇಕಾಗುತ್ತದೆ.

ಸೊಲ್ಲಾಪೂರದಲ್ಲಿಯ ಸಮಾಜ-ಮಿಶ್ರ ಸಮಾಜ. ಎಲ್ಲ ಸಮಾಜಗಳೊಂದಿಗೆ ಸಂಪರ್ಕ ಸಾಧಿಸಿ ಅವರ ಅಭ್ಯಾಸವನ್ನು ಬೇಂದ್ರೆಯವರು ಮಾಡತೊಡಗಿದರು. ಯಾವುದೇ ಸಮಾಜದವರು ಭಾಷಣಕ್ಕೆ ಕರೆದರೆ ಅಲ್ಲಿ ಹೋಗಿ ಅವರ ಸಮಾಜದ ಗುಣ-ದೋಷ ಗಳನ್ನು ಧೈರ್ಯವಾಗಿ ಹೇಳಿಬರುತ್ತಿದ್ದರು. ಇದಕ್ಕೆ ಒಂದು ಉದಾಹರಣೆ ಹೀಗಿದೆ—

ಹೊಲೆಯರ ಸಮಾಜದ ಕೆಲವು ಚಿತ್ರಕಾರರು ಬೇಂದ್ರೆಯವರನ್ನು ಭಾಷಣ ಕ್ಕಾಗಿ ಆಮಂತ್ರಿಸಲು ಬಂದರು. ಬೇಂದ್ರೆಯವರು ಆಮಂತ್ರಣ ಒಪ್ಪಿಕೊಂಡರು. ಆದರೂ ಮೂರು ಕರಾರು ಹಾಕಿದರು. ಅವು ಹೀಗೆ— ೧. ಚಿತ್ರಕಾರರು ತಮ್ಮ ಮನೆಯ, ಗುಡಿಸಲಿನಲ್ಲಿಯ ನಿತ್ಯಜೀವನದ ಚಿತ್ರಗಳನ್ನೇ ಹೆಚ್ಚಾಗಿ ಪ್ರದರ್ಶನದಲ್ಲಿ

ಇರಿಸಬೇಕು. ೨. ಚಿತ್ರಕಾರರು ಪರಸ್ಪರರಲ್ಲಿ ಅಸೂಯೆ ತಾಳದೆ, ತಾಯಿಯ ಹೆಸರಿನಿಂದ ಕೆಟ್ಟ ಬೈಗಳ ಉಚ್ಚಾರ ಮಾಡಬಾರದು. ೩. ತಮ್ಮ ಕೇರಿಯಲ್ಲಿ ಸಿಕ್ಕಸಿಕ್ಕಲ್ಲಿ ಉಗುಳಾಡಬಾರದು. ಈ ಮೂರು ಕರಾರು ಒಪ್ಪಿದರೆ ತಾವು ಹೊಲೆ-ಗೇರಿಗೆ ಚಿತ್ರಪ್ರದರ್ಶನದ ಉದ್ಘಾಟನೆಗೆ ಬರುವುದಾಗಿ ಹೇಳಿದರು. ಚಿತ್ರಕಾರರು ಒಪ್ಪಿದರು. ಇದರ ಪರಿಣಾಮ–ಆ ಚಿತ್ರಕಾರರ ಜೀವನಕ್ಕೇ ಒಂದು ಹೊಸ ರೂಪ ಸಿಕ್ಕಿತು.

ಸೊಲ್ಲಾಪುರದ ಸಿದ್ಧರಾಮೇಶ್ವರ ದೇವಾಲಯ ಮತ್ತು ಶುಭರಾಯ ಮಹಾರಾಜರ ಆ ಮಠ ಬೇಂದ್ರೆಯವರ ಆಧ್ಯಾತ್ಮಿಕ ಸಾಧನೆಯಲ್ಲಿ ಪ್ರಮುಖ ಪಾತ್ರ ಪಡೆದವು. ಅಗ್ನಿಹೋತ್ರಿ ಎಂಬ ಸ್ನೇಹಿತರೊಂದಿಗೆ ಜ್ಯೋತಿಷ್ಯ ಅಭ್ಯಾಸ; ಕವಿ ಕುಂಜವಿಹಾರಿಯವರೊಂದಿಗೆ–ಕಾವ್ಯಾಭ್ಯಾಸ; ಕಾಲೇಜ ಪ್ರಾಧ್ಯಾಪಕರೊಂದಿಗೆ–ಗಣಿತ, ಭೌತಶಾಸ್ತ್ರ, ರಸಾಯನಶಾಸ್ತ್ರದ ಅಭ್ಯಾಸ; ಜೈನ ಮತ್ತು ವೀರಶೈವ ಸಮಾಜದವರೊಂದಿಗೆ ಅವರವರ ಸಾಹಿತ್ಯದಲ್ಲಿಯ ಶ್ರೇಷ್ಠ ಕೃತಿಗಳ ರಸವಿಮರ್ಶೆ ೧೯೪೪ ರಿಂದ ೧೯೫೬ ರ ವರೆಗೆ ಸತತವಾಗಿ ನಡೆದಿದ್ದವು.

ಗುಳವಣಿ ಮಹಾರಾಜ ಎಂಬ ಒಬ್ಬ ದತ್ತ ಉಪಾಸಕರ, ಶಕ್ತಿಪಾತ ವಿದ್ಯೆ-ಯಲ್ಲಿ ಸಿದ್ಧರಾದ ಸತ್ಪುರುಷರ ಭೆಟ್ಟಿ ಬೇಂದ್ರೆಯವರಿಗೆ ಆಯಿತು. ಇಬ್ಬರಲ್ಲಿ ಗುರು-ಶಿಷ್ಯ ಭಾವನೆಗಿಂತ, ಸಹೋದರ ಭಾವನೆ ಬೆಳೆದುಬಿಟ್ಟಿತು. ದತ್ತಭಕ್ತಿಯ ಉಪಾಸನೆ ಈ ಸ್ನೇಹಬಾಂಧವ್ಯದಲ್ಲಿ ಭರದಿಂದ ಬೆಳೆಯಿತು.

ಚಿದಂಬರ – ಗೋಂದವಲೇಕರ ಮಹಾರಾಜ – ಅಕ್ಕಲಕೋಟ ಮಹಾರಾಜ–ಶ್ರೀ ಅರವಿಂದ ಮತ್ತು ಶ್ರೀಮಾತೆ–ಗುಳವಣಿ ಮಹಾರಾಜ–ಪ್ರಭಾಕರ ಮಹಾರಾಜ–ನಿತ್ಯಾನಂದ – ಉಪಳೇಕರ ಮಹಾರಾಜ – ಸತ್ಯಸಾಯಿಬಾಬಾ — ಹೀಗೆ ಬೇಂದ್ರೆಯವರಿಗೆ ಅನೇಕ ಗುರುಗಳು. ಈ ಎಲ್ಲ ಅನೇಕ ಗುರುಗಳನ್ನು ಬೇಂದ್ರೆಯವರು ಹುಡುಕಿಕೊಂಡು ಹೋಗಲಿಲ್ಲ. ಅವರ ಅಂತರಂಗದ ಸಾಕ್ಷಿಗುರು ಅವರಿಗೆ ಅವರ ಎರಡನೆಯ ವರ್ಷದಲ್ಲಿ ಲಭಿಸಿದ್ದು ಅವರ ಮಹತ್‌ಭಾಗ್ಯ. ಅನಂತರ ಅವರ ಸ್ವಪ್ನದಲ್ಲಿ ಅವರಿಗೆ ಮಾರ್ಗದರ್ಶನವಾದಂತೆ ಬಾಹ್ಯದಲ್ಲಿ ಅನೇಕ ಗುರುಗಳ ಭೆಟ್ಟಿಯಾಗಿದೆಯೇ ಹೊರತು, ಗುರುಗಳಿಗಾಗಿ ಬೇಂದ್ರೆಯವರು ಹುಡುಕಾಡಬೇಕಾಗ-ಲಿಲ್ಲ. ಬೇಂದ್ರೆಯವರಿಗೆ ಗುರುವಾದ ಒಪ್ಪಿಗೆ ಇಲ್ಲ. ದೇವರನ್ನು ಒಪ್ಪದ ಗುರು ಶ್ರೇಷ್ಠರಿಗೆ ಬೇಂದ್ರೆಯವರು ಮನ್ನಣೆ ಕೊಡಲಿಲ್ಲ. ದೇವರು ಕೇಂದ್ರಶಕ್ತಿ. ಆ ಶಕ್ತಿಗೆ ಗುರು ಮತ್ತು ಶಿಷ್ಯ ಸಾಧನಗಳು, ಆಧೀನರು ಎಂದು ಯಾರು ಒಪ್ಪು-ವರೋ ಅವರು ಮಾತ್ರ ಬೇಂದ್ರೆಯವರಿಗೆ ಒಪ್ಪಿಗೆ. ತಮ್ಮ ಜ್ಞಾನನೇತ್ರದಿಂದ ಗುರುಗಳ ಸೇವೆ ಬೇಂದ್ರೆಯವರು ಮಾಡಿದರೆ ಹೊರತು ಗುರುಗಳ ಶಿಷ್ಯಕೋಟಿ-

ಯಲ್ಲಿ ಸೇರಲಿಲ್ಲ, ಶಿಷ್ಯೋತ್ತಮರೆನಿಸಿಕೊಳ್ಳಲಿಲ್ಲ. ಬೇಂದ್ರೆಯವರ ಈ ವಿಶಿಷ್ಟ ಸಾಧನೆಯನ್ನು ಅರ್ಥಮಾಡಿಕೊಳ್ಳುವುದು ಕಠಿಣ.

೧೯೪೬ ರಲ್ಲಿ ಬೇಂದ್ರೆಯವರ ೫೦ ನೆಯ ಹುಟ್ಟುಹಬ್ಬವನ್ನು ಧಾರವಾಡದ ಅಭಿಮಾನಿಗಳು ಮಾಡಿದರು. ಹೀಗೆ ಹುಟ್ಟುಹಬ್ಬವನ್ನು ಸಾರ್ವಜನಿಕವಾಗಿ ಮಾಡುವ ರೀತಿ ಇದೇ ಮೊದಲನೆಯದು ಎಂದು ಹೇಳಬಹುದು. ಈ ಕಾಲಕ್ಕೆ ಸಿದ್ಧವಾದ ಸಂಭಾವನಾ ಗ್ರಂಥಗಳು, ಹೊರಡಿಸಿದ ವಿಶೇಷ ಸಂಚಿಕೆಗಳು ಬೇಂದ್ರೆಯವರ ಜನಪ್ರಿಯತೆಗೆ ನಿದರ್ಶಕಗಳಾಗಿವೆ. ಹುಟ್ಟುಹಬ್ಬದ ಸಮಿತಿಯವರು ಬೇಂದ್ರೆಯವರಿಗೆ ಹತ್ತುಸಾವಿರದ ಒಂದು ರೂಪಾಯಿಗಳ ನಿಧಿಯನ್ನು ಸಂಗ್ರಹಿಸಿ ಕೊಟ್ಟರು. ಈ ನಿಧಿಗೆ ಸಹಾಯ ಮಾಡಿದವರೆಲ್ಲರ ಹೆಸರುಗಳನ್ನು ಸಂಚಿಕೆಯಲ್ಲಿ ಆಗ ಮುದ್ರಿಸಿದ್ದಾರೆ. ಈ ನಿಧಿ ಬೇಂದ್ರೆ ಮನೆತನಕ್ಕೆ ಬೆಂಬಲವಾಯಿತು; ಬೇಂದ್ರೆಯವರು ಸಾಹಿತ್ಯ ಸಾಧನೆಗೆ ಮತ್ತಷ್ಟು ಸ್ವತಂತ್ರರಾದರು.

ಪುಣೆಯ ವಿಶ್ವವಿದ್ಯಾಲಯದ ಕೆಲಸಕ್ಕೆ ಬೇಂದ್ರೆಯವರು ಆಗಾಗ ಹೋಗುತ್ತಿದ್ದರು. ಅಲ್ಲಿ (ಈಗ ದಿವಂಗತ) ವಿಟ್ಠಲರಾವ ದೀಕ್ಷಿತ ಎಂಬ International Book Serviceನ ಮಾಲಕರು ಬೇಂದ್ರೆಯವರ ಸ್ನೇಹಿತ ಅಭಿಮಾನಿಗಳಾಗಿದ್ದರು. ಅಲ್ಲಿಂದ ಬೇಂದ್ರೆಯವರು ಪುಸ್ತಕಗಳನ್ನು ಮಿತಿಮೀರಿ ಕೊಂಡರು. ಮನೆಯ ಗ್ರಂಥಾಲಯ ಮನೆಯನ್ನೇ ನುಂಗುತ್ತ ಹೊರಟಿತು. ನೀಲಾನಗರದ ನಮ್ಮ ಮನೆ ಪುಸ್ತಕದ ಅಂಗಡಿಯಂತೆ ಅಲ್ಲಿಯ ಕೆಲವರಿಗೆ ಕಂಡಿತು. ಗ್ರಂಥಾಲಯದ ವಿಸ್ತಾರದಲ್ಲಿ ಸ್ನೇಹಿತರು ಕೂಡಿಸಿಕೊಟ್ಟ ನಿಧಿ ಕರಗತೊಡಗಿತು. ಪ್ರಾಧ್ಯಾಪಕವೃತ್ತಿಯಿಂದ ಸಂಪಾದಿಸಿದ ಹಣವನ್ನೂ ಗ್ರಂಥಾಲಯ ವೃದ್ಧಿಗಾಗಿ ಬೇಂದ್ರೆಯವರು ಬಳಸಿದರು.

ಈ ಎಲ್ಲ ಕಾಲಾವಧಿಯಲ್ಲಿ ನನ್ನ ತಾಯಿಯ ಆರೋಗ್ಯ ಸರಿ ಇರಲಿಲ್ಲ. ಅವಳು 'ಗುರುಚರಿತ್ರ' ಪೋಥಿಗೆ ಪ್ರದಕ್ಷಿಣೆ ಹಾಕುತ್ತ ತನ್ನ ಸಾಧನೆ ನಡೆಸಿದ್ದಳು. ಆ ಸಾಧನೆಯ ಫಲವಾಗಿ ನೀಲಾನಗರದಲ್ಲಿಯೇ ಅನೇಕ ವರ್ಷಗಳಿಂದ ವಾಸವಾಗಿದ್ದ ಪ್ರಭಾಕರ ಮಹಾರಾಜರ ಭೆಟ್ಟಿ ೧೯೫೦ರಲ್ಲಿ ನಮಗೆಲ್ಲರಿಗೂ ಆಯಿತು. ಅವರು ಗುರು-ಶಿಷ್ಯ ಭಾವದ ಗುಟ್ಟನ್ನು ಆತ್ಮೀಯತೆಯಿಂದ, ಸಾಮೀಪ್ಯದಿಂದ ನಮಗೆಲ್ಲರಿಗೂ ತಿಳಿಸಿಕೊಟ್ಟರು.

೧೯೧೬ ರಿಂದ ಬೇಂದ್ರೆಯವರು ಶ್ರೀ ಮಾತಾರವಿಂದರ ಸಾಹಿತ್ಯ ಓದುತ್ತಿದ್ದರೂ ಅವರ ದರ್ಶನಭಾಗ್ಯ ೧೯೪೩ ರಲ್ಲಿ ದಿ. ಶಂಕರಗೌಡರ ಸಸ್ನೇಹ ಸಹಾಯದಿಂದ ಲಭಿಸಿತು. ೧೯೪೪ ರಿಂದ ಶ್ರೀಮಾತಾರವಿಂದ ಉಪಾಸನೆಯನ್ನೂ ಬೇಂದ್ರೆಯವರು ಮಾಡುತ್ತಲೆ ಇದ್ದರು.

೧೯೫೦ ರಲ್ಲಿ ನನ್ನ ತಾಯಿಗೆ ವಿಷಮಜ್ವರ. ಅದು ವಿಕೋಪಕ್ಕೆ ಹೋದಾಗ ಒಂದು ಸ್ವಪ್ನದೃಷ್ಟಾಂತ. ಅದು ಹೀಗೆ — ಯಮದೂತರು ಕರೆಯಲು ಬಂದರು ಎಂದು ನನ್ನ ತಾಯಿ ಬೇಂದ್ರೆಯವರಿಗೆ ಹೇಳಿದಳು. ಬೇಂದ್ರೆಯವರು ನಮ್ಮನ್ನೆಲ್ಲ ಎಬ್ಬಿಸಿ ಗಂಭೀರ ಪರಿಸ್ಥಿತಿಯ ಅರಿವು ಮಾಡಿಕೊಟ್ಟು ನನ್ನ ತಾಯಿಗೆ ಹೇಳಿದರು— 'ಆ ಯಮದೂತರನ್ನು ಪಾಂಡಿಚೇರಿಗೆ ಕಳಿಸು. ಅಲ್ಲಿಂದ ಒಪ್ಪಿಗೆ ಪಡೆದುಕೊಂಡು ಬರಲು ಹೇಳು.' ತಾಯಿ ಹೂಂ ಎಂದಳು. ಅವಳಿಗೆ ಕ್ಷಣಹೊತ್ತು ಜಂಪು ಮತ್ತೆ ಎಚ್ಚರ. ಆಗ ತಾಯಿ ಹೇಳಿದಳು — "ನೀವು ಹೇಳಿದಂತೆ ಯಮದೂತ-ರನ್ನು ಪಾಂಡಿಚೇರಿಗೆ ಕಳಿಸಿದೆ. ಅವರು ನನ್ನ ಕಾಲನ್ನು ಮಾತ್ರ ಒಯ್ಯುತ್ತಿದ್ದಾರೆ ನೋಡ್ರಿ" ಎಂದು ನಕ್ಕರು. ಬೆಳಗಾಗುವುದರಲ್ಲಿ ನನ್ನ ತಾಯಿ ಗುಣಮುಖ ವಾಗಿದ್ದಳು. ಅನಂತರ ಪ್ರಕೃತಿ ಸುಧಾರಿಸಿತು. ಆಗ ಎರಡೂ ಕಾಲುಗಳಿಗೆ ಆದ ಇಸಬು ಕೊನೆಯವರೆಗೂ ಇತ್ತು. ಯಮದೂತರು ಒಯ್ದು ಕಾಲುಗಳವು!

ಈ ಹನ್ನೆರಡು ವರ್ಷಗಳಲ್ಲಿ ಬೇಂದ್ರೆಯವರು ಸಾಕಷ್ಟು ಕನ್ನಡ ಕವನಗಳನ್ನು ರಚಿಸಿದ್ದರು. ಆದರೆ ಅವು ಕವನ ಸಂಗ್ರಹಗಳಾಗಿ ಪ್ರಕಟಗೊಂಡಿರಲಿಲ್ಲ. ಶ್ರೀ. ಜಿ. ಬಿ. ಜೋಶಿಯವರು 'ಹೊಸ ಸಂಸಾರ' ನಾಟಕವನ್ನು ಬೇಂದ್ರೆಯವರು ಹೇಳು ವಂತೆ ಮಾಡಿ, ಬರೆದುಕೊಂಡು, ರಂಗಭೂಮಿಗೆ ತಂದರು. ನಾಟಕಕ್ಕೆ ಬಹು ಮಾನವೂ ಬಂದಿತು. ಬೇಂದ್ರೆಯವರ ಕವಿತಾಶಕ್ತಿಯ ಕಾಲ ಮುಗಿಯಿತು ಎಂದು ಕರ್ನಾಟಕದಲ್ಲಿ ಅನೇಕರು ತಿಳಿದುಕೊಂಡರು.

೧೯೫೪ರಲ್ಲಿ ಬೇಂದ್ರೆಯವರಿಗೆ ಒಂದು ಅಪಘಾತವಾಗಿ, ಕಾಲಿಗೆ ಪ್ಲಾಸ್ಟರ ಹಾಕಿದರು. ಬೇಂದ್ರೆಯವರು ಮನೆಹಿಡಿದು ಕೂಡಬೇಕಾಯಿತು. ಆಗ ತಾವು ಬರೆದ ಎಲ್ಲ ಕವನಗಳನ್ನು ಸಂಗ್ರಹಿಸಿದ್ದು. ೧೯೫೦ರ 'ಗಂಗಾವತರಣ'ದ ಪ್ರಕಟನೆಯ ಅನಂತರ ಬೇಂದ್ರೆಯವರ ಕವನಸಂಗ್ರಹ ಹೊರಬಂದಿರಲಿಲ್ಲ. ೧೯೫೫ ರಲ್ಲಿ ಧಾರವಾಡದ ಸಮಾಜ ಪುಸ್ತಕಾಲಯದ ಘಾಣೇಕರರ ಸಂಪರ್ಕ ಬಂದಿತು. ಅವರು 'ಸೂರ್ಯಪಾನ' 'ಹೃದಯ ಸಮುದ್ರ' 'ಮುಕ್ತ ಕಂಠ' 'ಜೀವಲಹರಿ' 'ಚೈತ್ಯಾಲಯ' ಎಂಬ ಬಿಡಿ ಬಿಡಿ ಕವನಸಂಗ್ರಹ ಮತ್ತು 'ಅರಳು-ಮರಳು' ಎಂಬ ಕವನಸಂಗ್ರಹಗುಚ್ಛವನ್ನು ಎರಡು ವರ್ಷಗಳಲ್ಲಿ ಪ್ರಕಟಪಡಿಸಿ ಕವಿ ಬೇಂದ್ರೆಯವರ ಬಗ್ಗೆ ಕನ್ನಡಿಗರಿಗೆ ವಿಚಾರ ಮಾಡಲು ಹಚ್ಚಿದರು.

೧೯೫೬ ಕ್ಕೆ ಬೇಂದ್ರೆಯವರಿಗೆ ೬೦ ವರ್ಷ ವಯಸ್ಸು ಆಗಿದ್ದರಿಂದ ಕೆಲಸ ಮುಗಿಯಿತು. ಡಿ. ಎ. ವ್ಹಿ. ಕಾಲೇಜ ಪ್ರಾಧ್ಯಾಪಕ, ಪ್ರಾಚಾರ್ಯ ಮತ್ತು ವಿದ್ಯಾರ್ಥಿಗಳಲ್ಲಿ, ಸೊಲ್ಲಾಪೂರ ಜನತೆಯಲ್ಲಿ ಬೇಂದ್ರೆಯವರ ಬಗ್ಗೆ ಒಂದು ಅಪಾರ ಗೌರವ ಮೂಡಿತ್ತು, ಇದೇ ಬೇಂದ್ರೆಯವರ ಸಂಪಾದನೆ. ಮಗ-ಪಾಂಡು.

ಬೇಂದ್ರೆಯವರ ೮೦ನೆಯ ಹುಟ್ಟುಹಬ್ಬ ( ೧೬-೨-೧೯೭೬ )



ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳು ಮತ್ತು ಬಳಗದವರೊಂದಿಗೆ ಶ್ರೀ ಬೇಂದ್ರೆ

ರಂಗನ ವಿವಾಹವಾಯಿತು. ವಾಮನ ಮತ್ತು ಮಂಗಲೆ ಇವರ ಶಿಕ್ಷಣವಾಗಬೇಕು. ಕೆಲಸ ಹೋಯಿತು. ಬೇಂದ್ರೆಯವರು ನೌಕರಿ ಮಾಡಿದ್ದೆ ೧೨ ವರ್ಷ. ಜಮಾ-ಖರ್ಚು ಎಲ್ಲಾ ಹೋಗಿ ೭೦೦ ರೂಪಾಯಿ ಮಾತ್ರ ಉಳಿಸಿಕೊಂಡು ಧಾರವಾಡಕ್ಕೆ ಬಂದರು. ಜಮಾಖರ್ಚಿನ ವಿಷಯ ನನ್ನ ತಾಯಿಗೆ ಮತ್ತು ನನಗೆ ಗೊತ್ತಿತ್ತು. ಬೇಂದ್ರೆಯವರು ಮೊದಲಿನಿಂದಲೂ ಹಣದ ವ್ಯವಹಾರದಿಂದ ದೂರವಿದ್ದರು.

೧೯೫೬ರಲ್ಲಿ ಸೊಲ್ಲಾಪೂರ ಬಿಡುವಾಗ ಸೊಲ್ಲಾಪುರದ ಜನತೆ ಬೇಂದ್ರೆಯವರ ೬೦ನೆಯ ಹುಟ್ಟುಹಬ್ಬ ಆಚರಿಸಿತು. ಅವರು ಸಂಗ್ರಹಿಸಿದ ನಿಧಿಯನ್ನು ಬೇಂದ್ರೆಯವರು ಶ್ರೀಮಾತಾರವಿಂದ ಆಶ್ರಮಕ್ಕೆ ಕಾಣಿಕೆಯಾಗಿ ಕಳಿಸಲು ಹೇಳಿದರು. ಬೇಂದ್ರೆಯವರ ಹಿರಿಯ ಸ್ನೇಹಿತರಾದ ದತ್ತೋ ವಾಮನ ಪೋದ್ದಾರ ಅವರ ಅಧ್ಯಕ್ಷತೆಯಲ್ಲಿ ಹುಟುಹಬ್ಬದ ಸಮಾರಂಭ ನಡೆಯಿತು.

೧೯೫೬ ಮಾರ್ಚ ೪ — ರವಿವಾರ, ಸಮಾರಂಭ ನಡೆದಿದೆ. ದತ್ತೋ ವಾಮನ ಪೋದ್ದಾರ ಅವರು 'ಬೇಂದ್ರೆಯವರಿಗೆ ಆಶೀರ್ವಾದ ಮಾಡುವ ವಯಸ್ಸಿನ ಅಧಿಕಾರ ನನಗಿದೆ ಆದರೆ ಆ ಶಕ್ತಿ ನನಗಿಲ್ಲ. ಯಾರಾದರೂ ಕೊಟ್ಟರೆ ಆಶೀರ್ವಾದ ಮಾಡಬಹುದು' ಎಂದು ತಮ್ಮ ಭಾಷಣದಲ್ಲಿ ಹೇಳಿದರು. ಸಭಿಕರಲ್ಲಿ ಕುಳಿತ ಒಬ್ಬ ಪೋಸ್ಟಮಾಸ್ತರ ರಮಣಾಶ್ರಮದಿಂದ ಬಂದ ಒಂದು ಪ್ರಸಾದ ಪತ್ರವನ್ನು ಬೇಂದ್ರೆಯವರ ಪರವಾಗಿ ಸಹಿ ಮಾಡಿ, ರವಿವಾರ ಇದ್ದುದರಿಂದ ಅದನ್ನು ಸಭೆಗೆ ತಂದಿದ್ದ. ಅವನು ಶ್ರೀರಮಣಭಕ್ತ. 'ಇದೋ ಶಕ್ತಿ ಇಲ್ಲಿದೆ' ಎಂದು ಕೂಗಿ ಪ್ರಸಾದ-ಪುಷ್ಪವನ್ನು ಅಧ್ಯಕ್ಷರ ಕೈಗೆ ಕೊಟ್ಟ. ಅವರು ಆದರಿಂದ ಬೇಂದ್ರೆಯವರನ್ನು ಹರಸಿದರು.

ಬೇಂದ್ರೆಯವರು ಡಾ. ಸದಾನಂದ ನಾಯಿಕ ಅವರೊಂದಿಗೆ ಡಿ. ಎ. ವ್ಹಿ. ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ ವೃತ್ತಿ ಪ್ರಾರಂಭಿಸಿದ್ದರು. ಅನಂತರ ಅಲ್ಲಿಯ ಕೆಲಸ ಒಬ್ಬರಿಗೆ ಮಾತ್ರ ಸಾಕಾಗುತ್ತದೆ ಎಂದು ತಿಳಿದಿದ್ದರಿಂದ ಬೇಂದ್ರೆಯವರೊಬ್ಬರೆ ಅಲ್ಲಿ ಉಳಿದರು. ಅವರು ಮಾಡಿದ ಪ್ರತಿವರ್ಷದ ಕಾರ್ಯ ಆ ಆ ಕಾಲದ ಪ್ರಾಚಾರ್ಯರು ಕಾಲೇಜಿನ ವಾರ್ಷಿಕ ವರದಿಯಲ್ಲಿ ಹೊಗಳಿದರು. ಪ್ರಾಚಾರ್ಯ ಶ್ರೀರಾಮ ಶರ್ಮಾ ಅವರಂತೂ ಬೇಂದ್ರೆಯವರ ಬಗ್ಗೆ 'Our roving Professor of Indian Culture' ಎಂಬ ಅಭಿಮಾನವನ್ನು ತಾಳಿದ್ದರು. ಒಬ್ಬ ಪ್ರಾಧ್ಯಾಪಕನಿಗೆ ಇದಕ್ಕಿಂತ ಹೆಚ್ಚೇನು ಬೇಕು. ?

ಆಗ, ಒಬ್ಬ ಕನ್ನಡ ಪ್ರಾಧ್ಯಾಪಕ ಎಂಬ ದುರ್ಲಕ್ಷದ ಭಾವ ಕೆಲವರಲ್ಲಿದ್ದರೂ, ಅವರು ಬೇಂದ್ರೆಯವರ ಬಗ್ಗೆ ಇಂಗ್ಲೀಷ್ ಪತ್ರಿಕೆಗಳಲ್ಲಿ ಬಂದ ಲೇಖನಗಳನ್ನು ಓದಿ ಎಚ್ಚರಾದರು.

ಸೊಲ್ಲಾಪೂರದ ವಾಸ್ತವ್ಯದಲ್ಲಿ ಶ್ರೀ ಪ್ರಭಾಕರ ಮಹಾರಾಜ ಟೇಂಬೆ ಅವರ ದರ್ಶನ ಬೇಂದ್ರೆಯವರ ಜೀವನದಲ್ಲಿ ಅತ್ಯಂತ ಮಹತ್ವದ್ದು. ೧೯೪೪ ರಿಂದ ೧೯೫೦ ರ ವರೆಗೆ ನನ್ನ ತಾಯಿಯವರ ಆರೋಗ್ಯ ಒಂದು ದಿವಸವೂ ಸರಿ ಇರುತ್ತಿರಲಿಲ್ಲ. ೧೯೪೪ ರಿಂದ ಮಹಾರಾಜರು ಸೋಲಾಪೂರದಲ್ಲಿ ಇದ್ದರೂ ಅವರೊಡನೆ ಸಂಪರ್ಕ ಬಂದಿರಲಿಲ್ಲ. ೧೯೫೦ ರ ಸುಮಾರು ಅವರ ದರ್ಶನ ಮತ್ತು ಉಪದೇಶ ಬೇಂದ್ರೆಯವರ ಮನೆತನದವರಿಗೆಲ್ಲ ಆಯಿತು. ತಾಯಿಯವರ ಆರೋಗ್ಯ ಗುಣಮುಖವಾಗುತ್ತ ನಡೆಯಿತು. ಬೇಂದ್ರೆ ಮತ್ತು ಮಹಾರಾಜರ ಸಂವಾದವು ಪ್ರತಿದಿವಸ ೩, ೪ ತಾಸು ನಡೆಯುತ್ತಿತ್ತು. ಮಹಾರಾಜರಿಗೆ ೧೦೦ಕ್ಕಿಂತ ಹೆಚ್ಚು ವಯಸ್ಸು, ದತ್ತಾತ್ರೇಯ ಸಾಕ್ಷಾತ್ಕಾರ ಪಡೆದವರು. ಗುರುಸೇವೆ ಎಂದರೇನು, ಗುರುಮಾರ್ಗದ ರೀತಿಗಳು ಯಾವವು, ನಾಮೋಪಾಸನೆಯ ಮಹಿಮೆ, ನಮ್ಮ ದೇಶದಲ್ಲಿರುವ ಅನೇಕ ವಿದ್ಯೆಗಳು ಮೊದಲಾದ ವಿಷಯಗಳನ್ನೇ ಕುರಿತು ಬೇಂದ್ರೆಯವರೊಡನೆ ಮಹಾರಾಜರು ಜೋರು–ಜೋರಿನಿಂದ ಮಾತನಾಡುತ್ತಿದ್ದರು. ನಾಮೋಪಾಸನೆಯ ಗುಪ್ತ ವಿಷಯಗಳನ್ನು ದೊಡ್ಡಸ್ವರದಲ್ಲಿ ಹೇಳಿದಾಗ ಬೇಂದ್ರೆಯವರು ಮಹಾರಾಜರಿಗೆ ಅಂದರು — "ಮಹಾರಾಜ ಇಷ್ಟು ಜೋರಿನಿಂದ ಹೇಳಿದರೆ ಅದು ಎಲ್ಲರಿಗೂ ತಿಳಿಯುವದಿಲ್ಲವೆ ?" ಅದಕ್ಕೆ ಮಹಾರಾಜರ ಉತ್ತರ— "ತಿಳಕೋಬೇಕು ಅಂಬೋ ಅವರಿಗೆ ಈ ಮಾತು ತಿಳಿಯುವುದು ಕಷ್ಟ. ಇನ್ನು ತಮ್ಮದೇ ಜೀವನ ಪ್ರವಾಹದಲ್ಲಿರುವ ಜನರ ಕಿವಿಗೆ ನನ್ನ ಮಾತು ಬಿದ್ದರೂ ಅವರಿಗೆ ಅರ್ಥ ಆಗೂದಿಲ್ಲಾ." ಇಂಥ ಅನೇಕ ಮಾತುಗಳು ಮಹಾರಾಜರ ಬಾಯಿಂದ ಬೇಂದ್ರೆಯವರಿಗೆ ಸಿಕ್ಕವು. ಇದರಿಂದ ಬೇಂದ್ರೆಯವರ ಸಾಧನಾಮಾರ್ಗದಲ್ಲಿ ಮತ್ತಷ್ಟು ಬೆಳಕು ಬಿತ್ತು. ಪ್ರಭಾಕರ ಮಹಾರಾಜರೂ ಸಿದ್ಧಿಯಿಂದ ದೂರ ಇದ್ದರು. ಸಿದ್ಧಿಯ ಮಾರ್ಗ ಎಷ್ಟು ಕಠಿಣ ಎಂಬುದು ಬೇಂದ್ರೆಯವರಿಗೆ ಮೊದಲಿನಿಂದ ಗೊತ್ತಿದ್ದುದರಿಂದ ಬೇಂದ್ರೆ ಮತ್ತು ಪ್ರಭಾಕರ ಮಹಾರಾಜರ ಸಂಬಂಧ ಆಪ್ತವ್ಯದಲ್ಲಿ ಮಾರ್ಪಾಟುಗೊಂಡಿತು. ಆದರಿಂದ ಬೇಂದ್ರೆಮನೆತನದ ನಮಗೆ ಪ್ರಭಾಕರ ಮಹಾರಾಜರು ಅಜ್ಜನ ಸ್ಥಾನದಲ್ಲಿದ್ದರು.

### ೧೯೫೬ ರಿಂದ ೧೯೬೬ :

ಸೊಲ್ಲಾಪುರದ ೬೦ನೆಯ ಹುಟ್ಟುಹಬ್ಬದ ಕಾರ್ಯಕ್ರಮ ಮುಗಿಸಿ ಧಾರವಾಡಕ್ಕೆ ಹೋಗುವುದು ಎಂದು ನಿರ್ಣಯವಾಗಿತ್ತು. ಅಲ್ಲಿ ಹೋಗಿ ಏನು ಮಾಡುವುದು ನಿರ್ಣಯವಾಗಿರಲಿಲ್ಲ. ಅಷ್ಟರಲ್ಲಿ ಆಗ ಆಕಾಶವಾಣಿಯ ನಿರ್ದೇಶಕರಾಗಿದ್ದ ಲಾಡ ಅವರ ಸ್ನೇಹ ದೃಷ್ಟಿ ಬೇಂದ್ರೆಯವರ ಮೇಲೆ ಬಿತ್ತು. ಬೇಂದ್ರೆಯವರು ಜೀವನದಲ್ಲಿ ಮೊಟ್ಟಮೊದಲನೆಯ ಸಲ ಸರಕಾರಿ ನೌಕರರಂತೆ ! ಧಾರವಾಡದ

ಆಕಾಶವಾಣಿಯಲ್ಲಿ ಕಾರ್ಯ ಪ್ರಾರಂಭಿಸಿದರು. ಹತ್ತು ವರ್ಷಗಳವರೆಗೆ ಆಕಾಶ-ವಾಣಿಯ ಸಲಹಾಗಾರರಾಗಿ ಬೇಂದ್ರೆಯವರು ಕೆಲಸ ಮಾಡಿದರು. ಈ ಸಂದರ್ಭ ದಿಂದ ವಿಪುಲವಾಗಿ ಸಾಹಿತ್ಯ ನಿರ್ಮಿಸಿದರು. ಕವನ, ಕಥೆ, ಬಾನುಲಿ ಭಾಷಣ, ಬಾನುಲಿರೂಪಕ, ಶಬ್ದಚಿತ್ರ ಎಂಬ ವೈವಿಧ್ಯ ಅವರ ಸಾಹಿತ್ಯಕ್ಕೆ ಬಂತು. ಅದು ಎಲ್ಲ ಪ್ರಕಟವಾಗಿಲ್ಲ. ಕಾಲಕಾಲಕ್ಕೆ ಪ್ರಕಾಶನ ಪಡೆಯಲಿದೆ.

ಜನತೆಯಲ್ಲಿ ಸಾಹಿತ್ಯದ ಅಭಿರುಚಿಯನ್ನು ಬೆಳೆಸುವುದು ಅವರ ನೌಕರಿಯ ಪ್ರಮುಖ ಉದ್ದೇಶವಾಗಿತ್ತು. ಆದುದರಿಂದ ಅವರು ತಿಂಗಳಲ್ಲಿ ಸಾಕಷ್ಟು ದಿವಸ ಆಮಂತ್ರಣ ಕೊಟ್ಟ ಕಡೆಗೆಲ್ಲ ಸಂಚರಿಸಿ, ಜನರಲ್ಲಿ ಸಾಹಿತ್ಯ ಅಭಿರುಚಿಯನ್ನು ಹುಟ್ಟಿಸಿದರು.

೧೯೫೮-೧೯೫೯ರಲ್ಲಿ ಬೇಂದ್ರೆಯವರ ‘ ಅರಳು-ಮರಳು ’ ಕಾವ್ಯಗುಚ್ಛಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿಯ ಪ್ರಶಸ್ತಿ-ಬಹುಮಾನ ಸಿಕ್ಕಿತು. ಅನೇಕರಿಗೆ ಸಾಹಿತ್ಯಅಕಾಡಮಿ ಬಹುಮಾನ ಸಿಕ್ಕಿತ್ತು. ಬಹುಮಾನ ಸಿಕ್ಕ ಕೃತಿಯಲ್ಲಿ ಅರ್ಥ ವಿಲ್ಲ. ಆ ಕೃತಿಗೆ ಬಹುಮಾನ ಸಿಗಬಾರದಾಗಿತ್ತು ಎಂದು ಎಲ್ಲ ದೇಶೀಯ ಭಾಷಾ ಸಾಹಿತ್ಯದಲ್ಲಿ ಜನಮತವು ತಲೆ ಎತ್ತುವಂತೆ, ಕರ್ನಾಟಕದಲ್ಲಿಯೂ ‘ ಅರಳು-ಮರಳಿ ’ನ ಬಗ್ಗೆ ಪರ-ವಿರುದ್ಧ ಅಭಿಪ್ರಾಯಗಳು ಎದ್ದವು, ಅಡಗಿದವು.

ಮನೆಯಲ್ಲಿ ವಾಮನ(ನನ್ನ) ಮತ್ತು ಮಂಗಲೆ ಇವರ ಶಿಕ್ಷಣ ಸರಿಯಾಗಿ ಸಾಗಿತು. ಪ್ರತಿಮಾ, ಪ್ರಭಾಕರ, ಪುನರ್ವಸು ಮೊದಲಾದ ಮೊಮ್ಮಕ್ಕಳು ಮನೆ ಯಲ್ಲಿ ಆಡತೊಡಗಿದರು. ಬೇಂದ್ರೆಯವರು ಈ ನಿಮಿತ್ತವಾಗಿ ಅನೇಕ ಮರಾಠಿ, ಕನ್ನಡ ಕವನಗಳನ್ನು ರಚಿಸಿದರು. ಮೊಮ್ಮಗಳು-ಪ್ರತಿಮಾ ಇವಳನ್ನು ಕುರಿತು ರಚಿಸಿದ ಭಾವಗೀತವು ಮರಾಠಿ ಪಠ್ಯಪುಸ್ತಕದಲ್ಲಿ ಸ್ಥಾನಪಡೆಯಿತು.

ಬೇಂದ್ರೆಯವರ ಮರಾಠಿ ಗದ್ಯಪದ್ಯಸಾಹಿತ್ಯದ ಸಂಕಲನ ‘ ಸಂವಾದ ’ ಎಂಬ ಹೆಸರಿನಿಂದ ಪ್ರಕಟವಾಗಿ, ಅದಕ್ಕೆ ೧೯೬೫ ರಲ್ಲಿ ಮಹಾರಾಷ್ಟ್ರದ ಕೇಳಕರ ಪಾರಿತೋಷಕ ಲಭಿಸಿತು.

ಈ ಘಟನೆಯ ಮೂಲಕ ಬೇಂದ್ರೆಯವರ ಮಾತೃಭಾಷೆ ಮರಾಠಿ ಇದ್ದು ಕನ್ನಡದಲ್ಲಿ ಅವರು ಶ್ರೇಷ್ಠರಾದರು ಎಂದು ಕನ್ನಡಿಗರಿಗೆ ಆಶ್ಚರ್ಯವೆನಿಸತೊಡಗಿತು —೧೯೬೭ ರ ಅನಂತರದ ಕಾಲದಲ್ಲಿ. ಅದರ ಹಾಗೆಯೆ ಬೇಂದ್ರೆಯವರು ಕರ್ನಾ-ಟಕದ ಸುಪ್ರಸಿದ್ಧ ಸಾಹಿತಿಗಳಾಗಿ ಮರಾಠಿಯಲ್ಲಿ ಅತ್ಯುತ್ತಮ ಗ್ರಂಥ ಬರೆಯಲು ಹೇಗೆ ಸಾಧ್ಯ ಎಂದು ಮಹಾರಾಷ್ಟ್ರದ ಜನತೆ ಆಶ್ಚರ್ಯಪಟ್ಟರು. ಯಾವಾಗಲೂ ಜನಮತದ ಲಕ್ಷಣವೆ ಇದು. ಹಿಂಚಿ ಹೋದ ಮೇಲೆ ಚಿಂತಿಸುವವರು ಇವರು.

ಬೇಂದ್ರೆಯವರನ್ನು ಮೊದಲಿನಿಂದ ಬಲ್ಲ ಕರ್ನಾಟಕದ ಮತ್ತು ಮಹಾರಾಷ್ಟ್ರದ ಸಾಹಿತಿಗಳಿಗೆ ಜನಮತದ ವಿಚಿತ್ರ ಸ್ವರೂಪ ನೋಡಿ ನಗು ಬಂತು. ಕನ್ನಡ ಮತ್ತು ಮರಾಠಿ ಇವುಗಳ ಸಂಬಂಧ ಬೇಂದ್ರೆಯವರಿಗೆ ಹುಟ್ಟಿನಿಂದ ಉಂಟು. ಈ ಎರಡೂ ಭಾಷೆಗಳಲ್ಲಿ ದ್ವೇಷ ಹುಟ್ಟಬಾರದು, ಪ್ರೇಮವನ್ನು ಸಾಧಿಸಬೇಕು ಎಂಬುದೇ ಅವರ ಜೀವನ ಸಾಧನೆ.

ಫಿನ್‌ಲ್ಯಾಂಡ್‌ದ ಒಬ್ಬ ಮಹಾಕವಿಯು ಕೊನೆಯ ದಿನವನ್ನು ಕುರಿತು ಬರೆದ ಕವನದ ಅನುವಾದವನ್ನು ಬೇಂದ್ರೆಯವರು ಮಾಡಬೇಕಾಗಿತ್ತು. 'ಸಾಳಿ ಜೆಳಿಗ್ಗೆ ಐತಿ ಮಹಾಮರಣ' ಎಂದು ಅದು ಪ್ರಕಟವಾಗಿದೆ. ಆ ಕವನ ಸಿದ್ಧಪಡಿಸಿ ಬೇಂದ್ರೆಯವರ ಪ್ರಥಮಶ್ರೋತೃ-- ಲಕ್ಷ್ಮೀಬಾಯಿಯವರಿಗೆ ಓದಿ ತೋರಿಸಲು ಬಂದರು. ನಾನೂ ಇದ್ದೆ. ಬೇಂದ್ರೆಯವರ ಕಾವ್ಯವಾಚನ ಆವೇಶದಿಂದ ಪ್ರಾರಂಭವಾಯಿತು. ಲಕ್ಷ್ಮೀಬಾಯಿ ಧಾರಾಕಾರವಾಗಿ ಕಣ್ಣೀರು ಸುರಿಸಿದರು. ಬೇಂದ್ರೆಯವರು ಆಶ್ಚರ್ಯಪಟ್ಟು ಏನಾಯಿತು ಎಂದು ಕೇಳಿದರು. ನಿಮ್ಮ ಕವನ ವಾಚನದಿಂದ ನನ್ನ ಸತ್ತ ಮಕ್ಕಳ ಭೆಟ್ಟಿಯಾಯಿತು ಎಂದರು. ನನ್ನ ತಾಯಿಗೆ ಅಂಥ ಒಂದು ದೃಷ್ಟಿ ಇತ್ತು. ಆ ದೃಷ್ಟಿಯಿಂದಲೆ ಅವರು ತಮ್ಮ ಮರಣದ ದಿನಾಂಕವನ್ನು ಕಂಡುಕೊಂಡಿದ್ದರು. ೧೯೫೬ ರಿಂದ ೧೯೬೬ರ ವರೆಗೆ ನನ್ನ ತಾಯಿ ಜೀವನದಲ್ಲಿ ತಕ್ಕಮಟ್ಟಿಗೆ ಸುಖಕಂಡಳು ಎಂದು ಹೇಳಬಹುದು. ಬೇಂದ್ರೆಯವರಿಗೆ ಬರವಣಿಗೆಯಿಂದ ವ್ಯವಸ್ಥಿತವಾಗಿ ಹಣ ಬರಲು ಪ್ರಾರಂಭವಾದುದು ಈ ಕಾಲಾವಧಿಯಲ್ಲಿ. ಹಣದ ಕೊರತೆ ಇರಲಿಲ್ಲ.

ಬೇಂದ್ರೆಯವರಿಗೆ ಮುಂಬೈ – ವಜ್ರೇಶ್ವರಿಯ ನಿತ್ಯಾನಂದರ ದರ್ಶನ ಪಡೆ-ಯುವ ಪ್ರೇರಣೆ ಆಯಿತು. ಬೇಂದ್ರೆಯವರು ಯಾವ ಸತ್‌ಪುರುಷರ ಕಡೆಗೆ ಹೋದರೂ ಅವರ ಅಪೇಕ್ಷೆ ದರ್ಶನಭಾಗ್ಯ ಬಿಟ್ಟು ಬೇರೆ ಇರಲಿಲ್ಲ. ಆದುದರಿಂದ ಅವರು ಆ ಆ ಸಾಧುಗಳ ಭಕ್ತರ ಜಾತ್ರೆಯಲ್ಲಿ ಸೇರಿಕೊಳ್ಳಲು ಇಷ್ಟಪಡಲಿಲ್ಲ. ನಿತ್ಯಾನಂದ-ದರ್ಶನದ ಮೂಲಕ ಬೇಂದ್ರೆಯವರಿಗೆ ಮರಾಠಿಯಲ್ಲಿ ಭಜನೆಗಳನ್ನು ಬರೆಯುವ ಪ್ರೇರಣೆ ಆಯಿತು. ಮರಾಠಿಯಲ್ಲಿ ಸಾಕಷ್ಟು ಭಜನೆಗಳನ್ನು ರಚಿ-ಸಿದ್ದಾರೆ. ಅದೇ ರೀತಿ ಫಲಟಣದ ಉಪಳೇಕರ ಮಹಾರಾಜರ ದರ್ಶನದ ಪ್ರೇರಣೆ ಆಯಿತು. ಈ ದರ್ಶನದ ಫಲವಾಗಿ ಮರಾಠಿ ಮಹಾಗ್ರಂಥ 'ಜ್ಞಾನೇ-ಶ್ವರಿ'ಯ ಬಗ್ಗೆ ಕನ್ನಡದಲ್ಲಿ ಅನುವಾದ, ಪ್ರಹ್ಲಾದ ನರೇಗಲ್ಲ ಅವರಿಂದ ಮಾಡಿಸ ಬೇಕಾಯಿತು.

ಈ ಹತ್ತು ವರ್ಷಗಳಲ್ಲಿ ಬೇಂದ್ರೆಯವರು ಮಾಡಿದ ಸಂಚಾರ ಮತ್ತು ಭಾಷಣ ಗಳ ವರದಿಗಳನ್ನು ಹತ್ತು ವರ್ಷದ ದಿನಪತ್ರಿಕೆಗಳಿಂದ ಸಂಗ್ರಹಿಸಿದರೆ ಒಂದು ಹೊತ್ತಿಗೆಯಾಗುತ್ತದೆ. ಆಗ ಆ ಕಾರ್ಯದ ವೈಶಿಷ್ಟ್ಯ ಗೊತ್ತಾದೀತು.

ವಾಮನನ ಶಿಕ್ಷಣ ಮುಗಿದು ಕೆಲಸಕ್ಕೆ ಹತ್ತಿದ; ಮಂಗಲೆಯ ಶಿಕ್ಷಣ ಮುಗಿಯಿತು. ಇಬ್ಬರ ವಿವಾಹಸಮಾರಂಭಗಳೂ ಆದವು. ೧೯೬೬ ರಲ್ಲಿ ಶಿರ-ಹಟ್ಟಿಯ ಜನರು ಬೇಂದ್ರೆಯವರ ೭೦ ನೆಯ ಹುಟ್ಟುಹಬ್ಬ ಆಚರಿಸುವುದಾಗಿ ನಿರ್ಣಯಿಸಿದರು. ವಿಜೃಂಭಣೆಯಿಂದ ಸಮಾರಂಭ ನಡೆಯಿತು. ಕರ್ನಾಟಕದ ಮುಖ್ಯ ಮಂತ್ರಿ ನಿಜಲಿಂಗಪ್ಪನವರು, ನ್ಯಾಯಮೂರ್ತಿ ತುಕೋಳ ಅವರು ಮತ್ತು ಅನೇಕ ಮಂತ್ರಿಗಳು, ಸಾಹಿತಿಗಳು, ಸ್ನೇಹಿತರು ಶಿರಹಟ್ಟಿಯಲ್ಲಿ ಕೂಡಿದರು, ಬೇಂದ್ರೆಯವರಿಗೆ ಅರಮನೆ, ಗುರುಮನೆ, ಸ್ನೇಹಮನೆಗಳಿಂದ ಗೌರವ ಸಲ್ಲಿಸಲಾಯಿತು.

ಬೇಂದ್ರೆಯವರ ಆಕಾಶವಾಣಿಯ ಕೆಲಸ ಮುಗಿಯಿತು. ಲಕ್ಷ್ಮೀಬಾಯಿಯವರ ಆರೋಗ್ಯ ಕೆಟ್ಟಿತು; ಕೆಟ್ಟಿತು ಅನ್ನುವಷ್ಟರಲ್ಲಿ ೧೭-೮-೧೯೬೬ ರ ದಿವಸ ಅವರು ಇಹಲೋಕವನ್ನೇ ಬಿಟ್ಟರು. ಬೇಂದ್ರೆಯವರಿಗೆ ದಾಂಪತ್ಯ ಎಂಬುದೂ ಒಂದು ಸಾಧನೆ. ಬೇಂದ್ರೆಯವರಿಗೆ ಎಲ್ಲವೂ ಸಾಧನೆಯೆ. ಗುರುಗಳ ಭೆಟ್ಟಿ — ಅಧ್ಯಾತ್ಮ ಸಾಧನೆ; ಗೆಳೆಯರ ಭೆಟ್ಟಿ—ಸ್ನೇಹ ಸಾಧನೆ; ಮಕ್ಕಳ ಸಹವಾಸ— ವಾತ್ಸಲ್ಯ ಸಾಧನೆ; ವಿವಿಧ ಸಾಮಾಜಿಕ ಹಂತ ಹಂತದ ಜನರ ಭೆಟ್ಟಿ— ಸಖ್ಯ ಸಾಧನೆ.

ಸಂಸಾರದಲ್ಲಿ ತಂದೆತಾಯಿಗಳ ಪ್ರೀತಿ, ವಿರೋಧ, ಸಿಟ್ಟು-ಸೆಡವು, ಕೋಪೋದ್ರೇಕದ ಪ್ರಕಾರ ನಾನು ಕಂಡಿದ್ದೆ. ನನ್ನಂತೆ ನಮ್ಮ ಆಪ್ತೇಷ್ಟ ಪರಿ-ವಾರಕ್ಕೂ ಗೊತ್ತಿತ್ತು. ನನ್ನ ತಾಯಿಯ ಆರೋಗ್ಯ ಕೆಟ್ಟಿತು. ಅವಳ ಬಳಗ ಸುತ್ತುವರಿಯಿತು. ಅವಳ ಶುಶ್ರೂಷೆ ಮಾಡಲು ಅಕ್ಕತಂಗಿಯರು ಇದ್ದರು. ಆದರೆ ಬೇಂದ್ರೆಯವರು ವೈಯಕ್ತಿಕವಾಗಿ ನಡೆದುಕೊಂಡ ರೀತಿ ನನ್ನ ತಾಯಿಯ ಮರಣಘಟನೆಯ ಕಾಲಕ್ಕೆ ಉಪಸ್ಥಿತರಿದ್ದ ಎಲ್ಲರ ಜೀವನದಲ್ಲಿ ಒಂದು ಹೊಸ ಶಕ್ತಿಯನ್ನು ಕೊಟ್ಟಿತು ಎಂದು ನನಗೆ ಕಂಡು ಬಂದಿತು. ಬೇಂದ್ರೆಯವರ ದಾಂಪ-ತ್ಯದ ನಿಜವಾದ ಸೊಗಸು, ‘ ನಾ ಕಂಡ ಬೆಳಕಿನ ಹಣ್ಣು ನೀನು; ನೀನಲ್ಲ ಚಿತ್ರದ ಹೆಣ್ಣು, ’ ‘ ನನ್ನ ಚಿತ್ತದಾಗಿನ ಚಿತ್ರಗಾರ ಬರದಾನ ಚಿತ್ತಕ ಕಣ್ಣು, ನಾ ಕಂಡ ಬೆಳಕಿನ ಹಣ್ಣು ’ ಎಂಬ ಉಕ್ತಿಗಳ ಅರ್ಥ ನನ್ನ ತಾಯಿಯ ಮೃತದೇಹವನ್ನು ಆವರಿಸಿತ್ತು. ದಾಂಪತ್ಯಸಾಧನೆಯ ಮಂಗಲವೆಂದು ಬೇಂದ್ರೆಯವರು ಮೃತ ದೇಹದ ಸುತ್ತುಮುತ್ತು ಕುಳಿತ ಜನರಿಗೆ ‘ ಸೌಂದರ್ಯಲಹರಿ ’ ಓದಿ ತೋರಿಸಿದರು. ಈ ಸಂದರ್ಭದ ಅರ್ಥ ಆಗ ಉಪಸ್ಥಿತರಿದ್ದವರಿಗೆ ಆಯಿತು.

ಅನೇಕರಿಗೆ ಮಾಸಾಶನ ಕೊಡುವಂತೆ ಬೇಂದ್ರೆಯವರಿಗೂ ಕರ್ನಾಟಕ ಸರ-ಕಾರ ಮಾಸಾಶನ ಕೊಟ್ಟಿತು. ಬೇಂದ್ರೆಯವರು ಧಾರವಾಡದ ಮನೆ ಹಿಡಿದು ಕುಳಿತರು.

**೧೯೬೬ – ೧೯೬೬ :**

ಮನೆಯಲ್ಲಿ ಮೂರೇ ಮೂರು ಜನ. ಬೇಂದ್ರೆಯವರು, ನಾನು, ನನ್ನ ಹೆಂಡತಿ. ಹಿರಿಯ ಮಗ ಪಾಂಡುರಂಗ, ತನ್ನ ಪತ್ನಿ, ಮೂರು ಮಕ್ಕಳೊಂದಿಗೆ ಪುಣೆಯಲ್ಲಿ ಇದ್ದ. ಮಗಳು ಮಂಗಲೆ ಚೊಚ್ಚಲು ಬಸುರಿ. ಬೇಂದ್ರೆಯವರಿಗೆ ಸ್ವಲ್ಪ ಅಶಕ್ತತೆ. ಮಂಗಲೆ ಹಡೆದಳು. ಮೊಮ್ಮಗಳಿಗೆ ಸ್ಮಿತಾ ಎಂದು ಹೆಸರಿಡಲಾಯಿತು.

ಮೈಸೂರು ವಿಶ್ವವಿದ್ಯಾಲಯದವರು ಬೇಂದ್ರೆಯವರಿಗೆ ಗೌರವ ಡಾಕ್ಟರೇಟ ಪದವಿಕೊಟ್ಟರು. ಬೇಂದ್ರೆಯವರು ತಮ್ಮ ೨೧ನೆಯ ಕವನಸಂಕಲನ — 'ಮರ್ಯಾದೆ' ಪ್ರಕಟಪಡಿಸಿದರು. ತನಗೆ ದೇಶದಲ್ಲಿ ಆಗುವ ಮರ್ಯಾದೆ, ಸನ್ಮಾನ ಗಳ ಅರ್ಥಮಾಡಿಕೊಂಡರು.

೧೯೫೫ ರಿಂದ ೧೯೬೨ ರ ವರೆಗೆ ನನ್ನ ಮಟ್ಟಿಗೆ ನಾನು, ಬೇಂದ್ರೆಯವರ ಮಟ್ಟಿಗೆ ಅವರು. ಅವರ ಭಾಷಣ, ಅವರ ಪ್ರವಾಸ, ಅವರ ಕೆಲಸದಲ್ಲಿ ನಾನು ಸಹಾಯ ಮಾಡುತ್ತಿದ್ದೆ. ಎಂದಾದರೂ ನಾನಾಗಿ ನನ್ನ ಅಭ್ಯಾಸದಲ್ಲಿ ತೊಡಕು ಬಂದರೆ ಕೇಳುತ್ತಿದ್ದೆ, ಅವರು ತೊಡಕು ಬಿಡಿಸುತ್ತಿದ್ದರು. ನಾನು ಲಕ್ಷ್ಮೀಶನ ಮಹಾಭಾರತವನ್ನು ನನ್ನ ಪಿಎಚ್. ಡಿ. ಅಭ್ಯಾಸಕ್ಕಾಗಿ ಆರಿಸಿಕೊಂಡ ಮೇಲೆ ಒಂದು ವರ್ಷದ ಅಭ್ಯಾಸದ ಅನಂತರ ನನಗೆ ಒಂದು ಹೊಸ ಅರಿವು ಮೂಡಿತು. ಸತ್ತ ಕವಿಯ ಅಭ್ಯಾಸಕ್ಕೆ ಜೀವಂತ ಕವಿಯ ಅಭ್ಯಾಸ ಅವಶ್ಯ ಎಂಬುದೆ ಆ ಅರಿವು. ಅಂದಿನಿಂದ ನಾನು ಬೇಂದ್ರೆಯವರ ಅಭ್ಯಾಸ ಪ್ರಾರಂಭಮಾಡಿದೆ. ಬೇಂದ್ರೆ ಯವರಿಗೂ ನನಗೆ ಕೆಲವು ವಿಷಯ ಹೇಳಬೇಕು ಎಂದು ಪ್ರೇರಣೆ ಬಂದಿತು. ಅಂದಿನಿಂದ ನಮ್ಮಲ್ಲಿ ಸಂವಾದಕ್ಕೆ ಪ್ರಾರಂಭವಾಯಿತು. ೧೯೬೬ ರ ಅನಂತರ ಈ ಸಂವಾದಕ್ಕೆ ಗತಿ ಬಂದಿತು; ನನ್ನ ಅನುಭವದ ಆಳಗಲೂ ಬೆಳೆಯತೊಡ ಗಿತು.

ಬೇಂದ್ರೆಯವರ ಬಗ್ಗೆ ಈ ವರೆಗೆ ನಾನು ಕೇಳಿದ್ದು, ನೋಡಿದ್ದು ಮತ್ತು ಅನುಭವಿಸುತ್ತಿರುವುದು ಇವುಗಳಲ್ಲಿ ಯಾವ ಸಾಮ್ಯವಿದೆ, ಭೇದವಿದೆ ಎಂಬುದರ ಬಗ್ಗೆ ನನ್ನ ಅಭ್ಯಾಸ ಸಾಗಿತು. ಕವಿತೆ ಎಂದರೇನು ? ಕವಿತೆ ಹೇಗೆ ಹುಟ್ಟುತ್ತದೆ ? ಕವಿತ್ವದ ನೆಲೆಗಳು ಯಾವವು ? ಎಂಬುದರ ಬಗ್ಗೆ ನಿರೀಕ್ಷೆ, ಪರೀಕ್ಷೆ ನಡೆಯಿತು. ಇದಕ್ಕಾಗಿ ನಾನು ಕವನಗಳನ್ನು ಬರೆಯಬೇಕಾಗಿ ಬಂದಿತು. ಕವನ ಬರೆಯದೆ ಕವಿತ್ವದ ಹಾದಿ ತಿಳಿಯದೋ ಏನೋ !

ಒಂದೆರಡು ವರ್ಷ ದೇಹವಿಚಾರ, ಷಟ್‌ಚಕ್ರವಿಚಾರ, ಸಾಧನಾವಿಚಾರ, ಪಾತಂಜಲಯೋಗವಿಚಾರ ಬೇಂದ್ರೆಯವರು ನನ್ನೊಡನೆ ಮಾತನಾಡಿದರು.

ಅನಂತರ ಒಂದೆರಡು ವರ್ಷ ಭೌತಶಾಸ್ತ್ರ, ರಸಾಯನಶಾಸ್ತ್ರ, ನಕ್ಷತ್ರ ವಿಜ್ಞಾನ, ಭೂಗರ್ಭಶಾಸ್ತ್ರ, ಗಣಿತಶಾಸ್ತ್ರ, ಮಾತನಾಡಿದರು. ನನಗೆ ಎಲ್ಲ ವಿಷಯ ಹೊಸದು. ಅನಂತರ ಒಂದೆರಡು ವರ್ಷ ವೇದ, ಉಪನಿಷತ್ತು, ವಿಷ್ಣುಸಹಸ್ರ ಮಂತ್ರಶಾಸ್ತ್ರ ಮಾತನಾಡಿದರು. ಇಷ್ಟೆಲ್ಲ ಆಗುವುದಕ್ಕೆ ೧೯೬೨ ಮುಗಿಯಲು ಬಂತು. 'ನನ್ನ ಮಾತು ಕೇಳುತ್ತ ಹೋಗು; ನನ್ನ ಸಾಹಿತ್ಯ ಓದುತ್ತ ಹೋಗು' ಎಂದು ಬೇಂದ್ರೆಯವರು ಆಜ್ಞೆ ಮಾಡಿದರು. "ನಿನಗ ಏನು ತಿಳೀತದ ಅಷ್ಟು ಓದು, ನಿನಗ ಏನು ತಿಳೀತು ಹೇಳು. ನಿನಗೆ ಏನು ತಿಳಿಯುವದಿಲ್ಲ ಅದನ್ನು ಓದುತ್ತ ಹೋಗು. ಅದರ ಬಗ್ಗೆ ನನಗ ಕೇಳಬ್ಯಾಡಾ. ಅದು ತಿಳಿಯೋಕಾಲಕ್ಕ ತಿಳೀತದ, ನನಗೂ ಎಲ್ಲಾ ತಿಳಿದಿಲ್ಲಾ. ನನಗೂ ಹ್ಯಾಂಗ ಹ್ಯಾಂಗ ಏನೇನು ತಿಳೀತದ ಹಾಂಗ ಹಾಂಗ ನಾ ಹೇಳಿಕೋತ ಹೋಗತೇನಿ" ಅಂತ ಬೇಂದ್ರೆಯವರು ಅಂದರು. ನಾನು ನನ್ನ ಒಪ್ಪಿಗೆ ಕೊಟ್ಟೆ.

೧೯೬೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದವರು ಬೇಂದ್ರೆಯವರಿಗೆ ಗೌರವ ಡಾಕ್ಟರೇಟ ಪದವಿ ಕೊಟ್ಟರು. ಬೇಂದ್ರೆಯವರ 'ಕನ್ನಡ ಸಾಹಿತ್ಯದಲ್ಲಿ ನಾಕು-ನಾಯಕ ರತ್ನಗಳು' ಎಂಬ ವಿಮರ್ಶೆಯ ಗ್ರಂಥ ಪ್ರಕಟಪಡಿಸಿದರು. ೧೯೬೮ರಲ್ಲಿ ಕೇಂದ್ರ ಸಾಹಿತ್ಯಅಕಾಡಮಿ ಬೇಂದ್ರೆಯವರಿಗೆ 'ಫೆಲೊ' ಗೌರವ ಸಲ್ಲಿಸಿತು. ಕರ್ನಾ-ಟಕದ ಅನೇಕ ಊರುಗಳಲ್ಲಿ ಬೇಂದ್ರೆಯವರಿಗೆ ಸತ್ಕಾರಗಳಾದವು. ಅನೇಕ ಸತ್ಕಾರ ಸಮಾರಂಭಗಳ ವೈಶಿಷ್ಟ್ಯ ಮತ್ತು ವೈಚಿತ್ರ್ಯಗಳನ್ನು ನಾನು ಅನುಭವಿಸಿದ್ದೇನೆ. ಬೇಂದ್ರೆಯವರ ಕವನಗಳ ಸಂಗ್ರಹಗಳ ಸಂಗ್ರಹ 'ಬಾಹತ್ತರ' ಮತ್ತು 'ವಿನಯ' ಪ್ರಕಟಗೊಂಡವು. 'ಶ್ರೀಮಾತಾ', 'ಇದು ನಭೋವಾಣಿ', 'ಮತ್ತೆ ಶ್ರಾವಣಾ ಬಂತು' ಎಂಬ ಹೊಸ ಕವನಸಂಗ್ರಹಗಳು ಪ್ರಕಟವಾದವು.

ಬೇಂದ್ರೆಯವರ ಲೇಖನ, ಪ್ರವಾಸ ಮತ್ತು ಭಾಷಣ ಸಾಕು-ಎಂದು ಜನ-ರಿಂದ ನನಗೆ ಸೂಚನೆ ಬರಲು ಪ್ರಾರಂಭವಾದವು ಇದರ ಜೊತೆ ಜೊತೆಗೆ ಅವರು ನಾವು ಕರೆದ ಊರಿಗೆ ಮಾತ್ರ ಬಂದು ಭಾಷಣ ಮಾಡಲಿ, ನಾವು ಹೇಳಿದ ಲೇಖನ, ಮುನ್ನುಡಿ ಮಾತ್ರ ಬರೆದುಕೊಡಲಿ ಎಂದು ಒತ್ತಾಯದ ವಿನಂತಿಗಳನ್ನೂ ನನ್ನಲ್ಲಿ ಮಾಡತೊಡಗಿದರು. ಈ ಎರಡು ಘಟನೆಗಳಲ್ಲಿ ಇರುವ ವಿರೋಧ ವಿಚಿತ್ರ. ಇದು ಅನೇಕರ ಮಾನಸಿಕ ಜಗ್ಗಾಟಕ್ಕೆ, ಅಸ್ವಾಸ್ಥ್ಯಕ್ಕೆ ಕಾರಣವಾಗಿ ಪರಿಣಮಿಸಿತು.

ಡಾ. ಮಾಧವ ನಾತು ಅವರೊಂದಿಗೆ ಬೇಂದ್ರೆಯವರು ಅಷ್ಟವಿನಾಯಕ ತೀರ್ಥಕ್ಷೇತ್ರಗಳಿಗೆ ಹೋಗಿ ಬಂದರು. ಸಿದ್ಧಟೇಕ ಎಂಬ ಸಿದ್ಧಿವಿನಾಯಕ ಕ್ಷೇತ್ರಕ್ಕೆ ಬೇಂದ್ರೆಯವರು ಮುಟ್ಟಿದಾಗ ರಾತ್ರಿಯಾಗಿತ್ತು. ದೇವರ ಗುಡಿಯ ಬಾಗಿಲ ಬಂದಾಗಿತ್ತು. ಹೀಗಾಗಿ ಬೇಂದ್ರೆಯವರು ಕಾರಿನಲ್ಲಿ ನಿದ್ದೆಮಾಡುತ್ತಿದ್ದರು.

ಅಲ್ಲಿ ಅವರಿಗೆ ಒಂದು ಸ್ವಪ್ನ ದೃಷ್ಟಾಂತವಾಗಿ ಅವರು ೧೯೪೬ ರಿಂದ ೧೯೬೯-೭೦ರ ವರೆಗೆ ನಡೆಸಿದ ಜೀವನ, ಸಾಹಿತ್ಯಸೇವೆ, ಮುಂದೆ ಅವರು ಮಾಡಬೇಕಾದ ಕಾರ್ಯ ಇವುಗಳ ಹೊಂದಿಕೆಯ ತಿಳಿವಳಿಕೆ ಆಯಿತು.

೧೯೭೦ ರಿಂದ ಬೇಂದ್ರೆಯವರ ಸಾಂಖ್ಯವಿಚಾರಸರಣಿಗೆ ನಿಶ್ಚಿತರೂಪ ಬಂದಿತು. ೧೯೧೬ ರಲ್ಲಿ ಶ್ರೀ ಅರವಿಂದರ ಬರವಣಿಗೆ, ರಾಮದಾಸರ ದಾಸಬೋಧ, ಜ್ಞಾನೇಶ್ವರಿಯಲ್ಲಿಯ ಅಂಕಿಸಂಖ್ಯೆಗಳತ್ತ ಆಕರ್ಷಿತವಾದ ಮನಕ್ಕೆ ಆ ಅಂಕಿಸಂಖ್ಯೆಗಳ ಸತ್ಯಸ್ವರೂಪದ ಬೋಧವಾಗಲು ಪ್ರಾರಂಭವಾಯಿತು. 'ಕರ್ನಾಟಕದಲ್ಲಿ ನಿಮ್ಮ ಮನೆತನದ ಉನ್ನತಿ ಇದೆ' ಎಂಬ ಬೇಂದ್ರೆಮನೆತನದವರಿಗಾದ ಸ್ವಪ್ನ ದೃಷ್ಟಾಂತದ ಅರ್ಥ ಬೇಂದ್ರೆಯವರಿಗೂ ನನಗೂ ಆಗಲು ಪ್ರಾರಂಭವಾಯಿತು.

ಬೇಂದ್ರೆಯವರು ಎಚ್ಚರಿದ್ದಾಗ ಮಾತುಗಾರರು; ನಿದ್ದೆ ಹೋದಾಗ ಸ್ವಪ್ನ ದೃಷ್ಟಾರರು. ಸ್ವಪ್ನದಲ್ಲಿ ಸುಷುಪ್ತಿ ಮತ್ತು ತುರೀಯ ಅವಸ್ಥೆಗೆ ಹೋಗಿ ಬಂದು, ಎಚ್ಚರಾದೊಡನೆ ಸುಷುಪ್ತಿ, ತುರೀಯ ದರ್ಶನದ ಮಾತು ಆಡಲು ಪ್ರಾರಂಭಿಸು-ತ್ತಾರೆ. ಆದುದರಿಂದ ಜನರಿಗೆ ಬೇಂದ್ರೆಯವರ ಮಾತಿನ ಬಗ್ಗೆ ಸಂಶಯ ಬರಲು ತೊಡಗುತ್ತದೆ. ಇದರ ಜೊತೆಜೊತೆಗೆ ಬೇಂದ್ರೆಯವರ ಕವನ, ಗದ್ಯಲೇಖನ, ಅವರು ಕಂಡ ಕನಸು ಮತ್ತು ಅವರ ಜೀವನದ ಬಗ್ಗೆಯೆ ಸಂಶಯ ಬರಲು ಪ್ರಾರಂಭವಾಗಿ ಬಿಡುತ್ತದೆ. ಸಂಶಯಕ್ಕೆ ಕೊನೆ ಇದೆಯೇ?

ದಿ. ಬಂಡೋಪಂತ ಬೇಂದ್ರೆ, ದಿ. ಶಾನಭಾಗ, ಡಾ. ಮಾಸ್ತಿ, ಡಾ. ಗೋಕಾಕ, ಡಾ. ಮುಗಳಿ, ಶ್ರೀ ಪ್ರಹ್ಲಾದ ನರೇಗಲ್ಲ, ದತ್ತಮೂರ್ತಿ ದೇಸಾಯಿ, ವಸಂತರಾವ ಕುಲಕರ್ಣಿ, ಅಕ್ಕಿ ಬಸಣ್ಣ, ಡಾ. ಕೆ. ಕೃಷ್ಣಮೂರ್ತಿ, ಡಾ. ಶಂಕರ ಮೊಕಾಶಿ, ಡಾ. ಕೆ. ರಾಘವೇಂದ್ರರಾವ, ಪ್ರಾ. ಕೆ. ಎಸ್. ಶರ್ಮಾ, ಪ್ರಾ. ಕೀರ್ತಿನಾಥ ಕುರ್ತ-ಕೋಟಿ, ಡಾ. ವಸಂತ ದಿವಾಣಜಿ, ಪ್ರಾ. ಕು. ಶಿ. ಹರಿದಾಸಭಟ್ಟ, ಪ್ರಾ. ಆರ್. ಜಿ. ಕುಲಕರ್ಣಿ, ಪ್ರಾ. ನಿ. ಶ್ರೀಶ ಬಲ್ಲಾಳ, ಶ್ರೀ ಬನ್ನಂಜೆ, ಡಾ. ಸದಾನಂದ ನಾಯಿಕ ಮತ್ತು ಶ್ರೀ ಎನ್. ಕೆ. ಕುಲಕರ್ಣಿ ಮೊದಲಾದವರೊಂದಿಗೆ ಬೇಂದ್ರೆ-ಯವರ ಸರಸ, ವಿರಸ ಸಂವಾದಗಳಾಗಿವೆ. ಬೇಂದ್ರೆಯವರ ಸಿಟ್ಟು, ರೌದ್ರ ಇವರಿಗೆಲ್ಲ ಪರಿಚಿತ. ಇದು ಎಳ್ಳಷ್ಟೂ ಮುಖ್ಯವಲ್ಲ. ಇದು ಮುಖ್ಯವಾಗಿದ್ದರೆ ಸ್ನೇಹಕ್ಕೆ ಕೊಡಲಿಏಟು ಬೀಳುತ್ತಿತ್ತು. ಬೇಂದ್ರೆಯವರ ಶುದ್ಧ ಅಂತಃಕರಣದ ಪರಿಚಯವೂ ಅವರಿಗಿದೆ.

ಬೇಂದ್ರೆಯವರ ಈ ವರೆಗಿನ ಜೀವನದ ಪರಿಸರ ಮತ್ತು ಪರಿಸ್ಥಿತಿ ನೋಡಿ-ದರೆ ಅವರು ಇಷ್ಟು ದಿವಸ ಬದುಕಿದ್ದುದೇ ಒಂದು ಮಹಾ ಆಶ್ಚರ್ಯ. ಈ ಆಶ್ಚರ್ಯ

ಭಾವನೆಯಿಂದ ನಾನು ೧೯೭೨ ರಿಂದ ಪ್ರತಿದಿವಸ ಅವರ ಜೀವನದ ಏರಿಳಿತವನ್ನು ನಿರೀಕ್ಷಿಸುತ್ತಿರುವೆ. ಅಲ್ಪಸ್ವಲ್ಪ ಟಿಪ್ಪಣಿ ಇಟ್ಟಿರುವೆ.

ಧಾರವಾಡದಿಂದ ಪುಣೆ–ಪ್ರವಾಸ ಮಾಡುತ್ತಿದ್ದೆವು. ಸೂಟಿಯ ದಿನಗಳು. ಪ್ರವಾಸಿಗರ ನೂಕು ನುಗ್ಗಲು ಹೆಚ್ಚು. ಕಷ್ಟಪಟ್ಟು ಬೇಂದ್ರೆಯವರಿಗಾಗಿ ಒಂದು ಪ್ರಥಮ ವರ್ಗದ ತಿಕೀಟು ಪಡೆದುಕೊಂಡೆ. ಅವರಿಗೆ ಎಲ್ಲ ಅನುಕೂಲ ಮಾಡಿ-ಕೊಟ್ಟು ನಾನು ಎರಡನೆಯ ವರ್ಗದ ಡಬ್ಬಿಗೆ ಹೋಗಿ ಕುಳಿತೆ. ರಾತ್ರಿ ಒಂದು ಕಡೆ ಗಾಡಿ ಬಹಳ ಹೊತ್ತು ನಿಂತಿತು. ನಾನು ತಂದೆಯವರ ಕಡೆ ಹೋಗಿಬರೋ-ದಕ್ಕಾಗಿ ಎದ್ದೆ. ಹೊರಗಿನಿಂದ ನೋಡಿದರೆ ನಾನು ಕೂಡಿಸಿದ ಡಬ್ಬಿಯಲ್ಲಿ ಅವರು ಕಾಣಲಿಲ್ಲ. ಡಬ್ಬಿ ಹತ್ತಿ ನೋಡಿದರೆ ಒಂದು ಮೂಲೆಯಲ್ಲಿ ಅವರು ಕೂತಿದ್ದಾರೆ. ಅವರ ಹಾಸಿಗೆಯ ಮೇಲೆ ದಂಪತಿ ಪ್ರವಾಸಿಗರು ಮತ್ತು ಮಗು ಮಲಗಿರುವುದನ್ನು ಕಂಡು ನನಗೆ ಆಶ್ಚರ್ಯ, ಸ್ವಲ್ಪ ಸಿಟ್ಟೂ ಬಂತು. ಆಗ ಬೇಂದ್ರೆಯವರು ಹೇಳಿದರು— "ಪಾಪ! ಪ್ರವಾಸಿಗರು ದಣಿದು ಬಂದಿದ್ದರು. ಅವರಿಗೆ ಬೇರೆ ಡಬ್ಬಿ-ಯಲ್ಲಿ ಸ್ಥಳ ಸಿಗಲಿಲ್ಲ. ಮಗು ಅಳುತ್ತಿತ್ತು, ನಾನೇ ಅವರಿಗೆ ಕರೆದು ನನ್ನ ಹಾಸಿಗೆ ಮೇಲೆ ಮಲಗಲು ಹೇಳಿದ್ದೇನೆ" ಎಂದರು. ಬೇಂದ್ರೆಯವರ ಈ ಅಂತಃಕರಣಕ್ಕೆ ಮನದಲ್ಲೇ ನಮಸ್ಕರಿಸಿ ಮರಳಿದೆ.

ಕರ್ನಾಟಕದಲ್ಲಿ ಸಾಹಿತಿಗಳು, ಕವಿಗಳು, ಕಾದಂಬರಿಕಾರರು, ನಾಟಕ-ಕಾರರು ಹೆಚ್ಚು. ಅಂಥವರಲ್ಲಿ ಬೇಂದ್ರೆಯವರು ಒಬ್ಬ ಸಾಹಿತಿಗಳು. ಅವರು ಸಾಹಿತಿಗಳು ಎಂಬುದು ಸುಳ್ಳಾದರೂ ಅವರು ಕರ್ನಾಟಕದಲ್ಲಿ ಹುಟ್ಟಿ, ಬೆಳೆದು, ಉಸಿರಾಡಿಸುತ್ತಿರುವ ಶುದ್ಧ ಅಂತಃಕರಣದ ಗೃಹಸ್ಥರು ಎಂಬುದು ಸುಳ್ಳಾಗ-ಲಾರದು.

ಬೇಂದ್ರೆಯವರಿಗೆ ಸಾಹಿತ್ಯನಿರ್ಮಿತಿಗಿಂತ ಜೀವನಉನ್ನತಿ ಹೆಚ್ಚು ಪ್ರಿಯ. ವಿರಕ್ತಿಗಿಂತ–ಸಂಸಾರ; ಗುರುವಿಗಿಂತ–ದೇವರು; ಸಿದ್ಧಿಗಿಂತ–ಸಾಧನೆ; ಮುಕ್ತಿ-ಗಿಂತ–ಜೀವನ ಶ್ರೇಷ್ಠ ಎಂಬ ಅರಿವು ಅವರಿಗೆ ೧೯೪೮ ರಿಂದ ಇತ್ತು. ಅನೇಕ ಸತ್ಪುರುಷರ ಭೆಟ್ಟಿಯಿಂದ ಈ ಅರಿವು ಪಕ್ವವಾಗತೊಡಗಿತು. ಇನ್ನೂ ಅದು ಪರಿಪಕ್ವವಾಗುತ್ತಿದೆ. ಪ್ರತಿದಿವಸ ಅವರು ಎದ್ದಾಗಿನಿಂದ ಮಲಗುವವರೆಗೆ ಅವರಿಗೆ ಬಂದ ಹೊಸ ಅರಿವನ್ನೇ ಅವರು ಯಾರು ಭೆಟ್ಟಿಯಾದರೂ ಮಾತನಾಡುತ್ತಾರೆ. ಈ ಅರಿವಿನ ರೀತಿ ಗೊತ್ತಾಗಲು ಬೇಂದ್ರೆಯವರೊಡನೆ ಸ್ನೇಹ–ಸಹವಾಸದ ಅವಶ್ಯ-ಕತೆ ಇದೆ. ಈ ಅರಿವೇ ಶಕ್ತಿಯಾಗಿ, ಬೆಂಬಲವಾಗಿ ಬೇಂದ್ರೆಯವರನ್ನು ಕಾಪಾಡುತ್ತಿದೆ.

ಬೇಂದ್ರೆಯವರು ಜ್ಯೋತಿಷಿಗಳಾಗಿ, ಶಿಕ್ಷಕನ ಧಂದೆ ಮಾಡುತ್ತ, ನಾಟಕ ಕಂಪನಿಯ ಲೇಖಕನಾಗಿ ಜೀವನ ಸಾಗಿಸಬಹುದಾಗಿತ್ತು. ಬೇಂದ್ರೆಯವರು ನೂರಾರು ಜನರ ಜನ್ಮಪತ್ರಿಕೆ ಅಭ್ಯಾಸ ಮಾಡಿದ್ದಾರೆ. ಜ್ಯೋತಿಷ್ಯಶಾಸ್ತ್ರದಲ್ಲಿ ಅವರಿಗೆ ವಿಶ್ವಾಸವಿದೆ. ಆದರೆ ಆ ಶಾಸ್ತ್ರದ ಬೆದರಿಕೆ ಯಾರಾದರೂ ಹಾಕಿದರೆ ಅದಕ್ಕೆ ಬೇಂದ್ರೆಯವರು ಬಗ್ಗುವದಿಲ್ಲ. ಶಿಕ್ಷಕವೃತ್ತಿ ಆತ್ಮವಿಕಾಸಕ್ಕಾಗಿಯೇ ಹೊರತು ಚಲಾವಣೆಯ ನಾಣ್ಯಕ್ಕಾಗಿ ಅಲ್ಲ. ಬರೆದ ನಾಟಕಕ್ಕಿಂತ ನಾಟಕಕಾರನ ಜೀವನ ಶ್ರೇಷ್ಠ ಎಂಬ ಅರಿವು ಮೂಡಿ ಬೇಂದ್ರೆಯವರು ಎಲ್ಲ ಶಾಸ್ತ್ರಗಳಿಂದ ತಮಗೆ ಬೇಕಬೇಕಾದ ತತ್ತ್ವರತ್ನಗಳನ್ನು ಆರಿಸಿಕೊಂಡು ಮುಂದೆ ಹೋಗುತ್ತಿದ್ದಾರೆಯೇ ಹೊರತು ಯಾವ ಗುಪ್ತಸಿಧಿಯನ್ನೂ ಕಂಡು, ಮೋಹಿತರಾಗಿ ನಿಂತುಬಿಡಲಿಲ್ಲ.

೧೯೬೮ ರಲ್ಲಿ ಬೇಂದ್ರೆಯವರಿಗೆ 'ಪದ್ಮಶ್ರೀ' ಪ್ರಶಸ್ತಿ ಸಿಕ್ಕಿತು. ೧೯೭೨ರಲ್ಲಿ ಕರ್ನಾಟಕ ಸರಕಾರದವರು ಬೇಂದ್ರೆಯವರ ಜೀವನವನ್ನು ಕುರಿತು ಒಂದು ಸಾಕ್ಷಿ-ಚಿತ್ರ ತೆಗೆದರು. ಈ ಮೊದಲು ಕೆಲವು ಜನರ ಬಗ್ಗೆ ಸಾಕ್ಷಿಚಿತ್ರ ಸರಕಾರದವರು ತೆಗೆದು ಆಗಿತ್ತು. ಬೇಂದ್ರೆಯವರ ಸಾಕ್ಷಿಚಿತ್ರ ಕೆಲವರಿಗೆ ಹಿಡಿಸಿತು, ಕೆಲವರಿಗೆ ಸೇರಲಿಲ್ಲ, ಕೆಲವರಿಗೆ ಕುತೂಹಲ ಉಂಟಾಯಿತು. ಸಾಕ್ಷಿಚಿತ್ರ ನಿರ್ಮಾಣ-ನಾಟಕ, ಕಥೆ, ಕವನ, ಕಾದಂಬರಿಯಂತೆ ಒಂದು ಕಲೆ. ಸಾಕ್ಷಿಚಿತ್ರ ಎಂದರೆ ಸತ್ಯ ಘಟನೆ ಅಲ್ಲ, ಅದೊಂದು ಕಲ್ಪನಾವಿಲಾಸ. ಆ ಸಾಕ್ಷಿಚಿತ್ರದಲ್ಲಿ ತೋರಿಸಿದ—ಮಂಗ, ಹಾವು, ಹಣ್ಣುಮಾರುವ ಸುಂದರ ಹೆಣ್ಣು ಮತ್ತು ಎಮ್ಮೆ ಕಾಯುವ ಹುಡುಗ-ಇವುಗಳಲ್ಲಿ, 'ಎಮ್ಮೆ ಎಲ್ಲಿ' ಎಂದು ಕೇಳಲು ಅನೇಕರು ಬಂದರು. ಸಾಕ್ಷಿ-ಚಿತ್ರದಲ್ಲಿ ಭೌತಶಾಸ್ತ್ರಗಳ ಪಟ, ಕಾಲಪುರುಷನ ಚಿತ್ರ, ಅನೇಕ ಸಂಖ್ಯೆ, ಆಕೃತಿಗಳ ಕಡೆಗೆ ಜನತೆಯ ಲಕ್ಷ್ಯ ಆಕರ್ಷಿತವಾಗಲಿಲ್ಲ. ಎಮ್ಮೆ, ಮಂಗ-ಸಾಕಾರ. ಅಂಕಿ, ಸಂಖ್ಯೆ—ನಿರಾಕಾರ. ನಿರಾಕಾರದ ಬಗ್ಗೆ ಚಿಂತನೆ ಮಾಡುವುದೇ ಸಾಧಕ ಬೇಂದ್ರೆಯವರ ಕಾರ್ಯ. ಸಾಕ್ಷಿಚಿತ್ರವೂ ಬೇಂದ್ರೆಯವರಿಗೆ ಸರಕಾರದವರು ತೋರಿದ ಒಂದು ಗೌರವ.

೧೯೭೪ ರಲ್ಲಿ ಬೇಂದ್ರೆಯವರಿಗೆ ಜ್ಞಾನಪೀಠ ಪ್ರಶಸ್ತಿ ಸಿಕ್ಕಿತು. ೧೯೬೪ರಲ್ಲಿ ಪ್ರಕಟಗೊಂಡ 'ನಾಕು ತಂತಿ'ಯನ್ನು ಕುರಿತು ೧೯೭೩ರ ಬಹುಮಾನವೆಂದು ೮-೧೧-೧೯೭೪ ರಂದು ಜ್ಞಾನಪೀಠ ಪ್ರಶಸ್ತಿ ಬೇಂದ್ರೆಯವರಿಗೆ ಲಭಿಸಿತು. ಬೇಂದ್ರೆಯವರು ಭಾಗ್ಯವಂತರು ಎಂದು ಕೆಲವರು ಮರುಗಿದರು. ಬೇಂದ್ರೆಯವರಿಗೆ, ಬೇಂದ್ರೆಯವರ ಈ ಕೃತಿಗೆ ಬಹುಮಾನ ಕೊಡಬಾರದಾಗಿತ್ತು ಎಂದು ಕೆಲವರು ರೇಗಾಡಿ-ದರು. ಬೇಂದ್ರೆಯವರ ಬಗ್ಗೆ ತಮಗೆ ಇರುವ ಅಸಮಾಧಾನವನ್ನು ತೋಡಿ-ಕೊಂಡರು. ಆದರೆ ಮಾತು ಮಿಂಚಿಹೋಗಿತ್ತು; ಬಹುಮಾನ ಸಿಕ್ಕುಬಿಟ್ಟಿತ್ತು.

ಕವಿ ಒಬ್ಬ ವ್ಯಕ್ತಿ. ಕಾವ್ಯಶಕ್ತಿ, ಅವನ ಎದುರಿಗಿದ್ದ ಕನ್ನಡಿ. ಕವಿಗೆ ಚೆನ್ನಾಗಿ ಗೊತ್ತು ಯಾವ ಕವನ ಶ್ರೇಷ್ಠ, ಕನಿಷ್ಟ, ಮಧ್ಯಮ ಎಂಬುದು. ತನ್ನ ಯಾವ ಕವನ ಜನರಿಗೆ ಸೇರಬಹುದು, ಸೇರಲಿಕ್ಕಿಲ್ಲ, ಪಠ್ಯಪುಸ್ತಕದಲ್ಲಿ ಯಾವುದು ಸೇರ್ಪಡೆಯಾದೀತು ಎಂಬುದೂ ಗೊತ್ತು. ಇದಕ್ಕಿಂತ ಹೆಚ್ಚು, ಯಾವ ಕವನ ಅವನು ಬರೆದ; ಯಾವ ಕವನ ಅವನ ಕಾವ್ಯಶಕ್ತಿ ಬರೆಯಿಸಿತು ಎಂಬ ಅರಿವು ಕವಿಗೆ ಇರುತ್ತದೆ. ಬೇಂದ್ರೆಯವರಿಗೆ ಈ ಅರಿವು ಇದೆ. ಆದುದರಿಂದ ತಾವು ಬರೆದ ಕವನದ ಅರ್ಥ ಅವರು ಮತ್ತೆ ಮತ್ತೆ ಚಿಂತನೆಮಾಡಿ, ಮನನ ಮಾಡಿ ತಿಳಿದುಕೊಳ್ಳುತ್ತಾರೆ. ಬೇಂದ್ರೆಯವರು ಬರೆದ ಎಲ್ಲ ಕವನಗಳ ಸಂಪೂರ್ಣ ಅರ್ಥ ಅವರಿಗೇ ಆಗಿಲ್ಲ! ಅನೇಕ ಪಂಡಿತರಿಗೆ ಆಗಿಲ್ಲ! ಆದುದರಿಂದ ಜನಸಾಮಾನ್ಯರಿಗೆ ಬೇಂದ್ರೆ ಕವನದ ಅರ್ಥವಾಗುತ್ತಿಲ್ಲ ಎಂಬುದರ ಬಗ್ಗೆ ಬೇಂದ್ರೆಯವರಿಗೆ ಎಳ್ಳಷ್ಟೂ ಅಸಮಾಧಾನವಿಲ್ಲ.

ಕರ್ನಾಟಕದ ಜನತೆ, ಕರ್ನಾಟಕ ಸರಕಾರ, ಕರ್ನಾಟಕದ ಪಂಡಿತರು ಬೇಂದ್ರೆಯವರನ್ನು ಗೌರವದಿಂದ ಕಾಣುತ್ತ ಬಂದಿದ್ದಾರೆ. ೫೦, ೬೦ ಮತ್ತು ೭೦ ನೆಯ ಹುಟ್ಟುಹಬ್ಬವನ್ನು ಕರ್ನಾಟಕದವರು ಆಚರಿಸಿದರೆ; ೬೦, ೭೦ ಮತ್ತು ೭೫ ನೆಯ ಹುಟ್ಟುಹಬ್ಬವನ್ನು ಮಹಾರಾಷ್ಟ್ರದವರೂ ಆಚರಿಸಿದ್ದಾರೆ. ಕವಿಗೆ ಈ ಯಶಸ್ಸಿಗಿಂತ, ಕೀರ್ತಿಗಿಂತ ಇನ್ನೇನು ಹೆಚ್ಚು ಬೇಕು ?

ಬೇಂದ್ರೆಯವರು ಪ್ರವಾಸ ಮಾಡುವ, ಭಾಷಣ ಮಾಡುವ, ಕವನವಾಚನ ಮಾಡುವ ವಯಸ್ಸು ಇದು ಅಲ್ಲ. ಬೇಡವೆನಿಸಿದರೆ ಬೇಂದ್ರೆಸಾಹಿತ್ಯ ಓದಬೇಡಿರಿ. ಧಾರವಾಡಕ್ಕೆ ಬಂದರೂ ಅವರಿಗೆ ಭೆಟ್ಟಿಯಾಗಬೇಡಿರಿ. ಭೆಟ್ಟಿ ಆದರೂ ಸಾಹಿತ್ಯ ವಿಷಯವಾಗಿ, ಸಾಹಿತಿಗಳ ವಿಷಯವಾಗಿ ಅವರೊಡನೆ ವಾದ ಮಾಡಬೇಡಿರಿ. ಬೇಂದ್ರೆಯವರು ಈಗ ಧಾರವಾಡದಲ್ಲಿ ಇರುವದಿಲ್ಲ ಎಂದು ಪ್ರಚಾರ ಮಾಡಿದರೂ ಧನ್ಯವಾದಗಳು. ಬೇಂದ್ರೆಯವರನ್ನು ಅವರ ಪಾಡಿಗೆ ಬಿಟ್ಟುಬಿಡುವುದೂ ಗೌರವವೆ. 'ಎನ್ನ ಪಾಡೆನಗಿರಲಿ ಅದರ ಹಾಡನಷ್ಟೆ ನೀಡುವೆನು ರಸಿಕ! ನಿನಗೆ' ಎಂದು ೧೯೩೪ ರಲ್ಲಿ ಹೇಳಿದ್ದನ್ನೇ ಅವರು ೧೯೭೬ ರಲ್ಲಿಯೂ ಹೇಳುತ್ತಿದ್ದಾರೆ.

೧೯೬೬ ರಿಂದ ೧೯೭೬: ಬೇಂದ್ರೆಯವರಿಗೆ ಗೌರವ, ಸನ್ಮಾನ ಮತ್ತು ತಕ್ಕ-ಮಟ್ಟಿಗೆ ಹಣ ಬರುವ ಕಾಲ. ನಿಜವಾಗಿ ನೋಡಿದರೆ ಇದರಿಂದ ಬೇಂದ್ರೆ ಮನೆ-ತನಕ್ಕೆ ಸ್ವಲ್ಪ ಲಾಭವಿದೆಯೇ ಹೊರತು, ಬೇಂದ್ರೆಯವರಿಗೆ ಇಲ್ಲ. ಬೇಂದ್ರೆ ಹಾಗು ಅವರ ಕಾವ್ಯ ಕುರಿತು ಕರ್ನಾಟಕದಲ್ಲಿಯ ಅನೇಕ ಜನರು ಉತ್ತಮೋತ್ತಮ

ಭಾಷಣ ಮಾಡಿದ್ದಾರೆ, ಕವನ ರಚಿಸಿದ್ದಾರೆ, ವಿಶೇಷ ಸಂಚಿಕೆಗಳನ್ನು ಹೊರಡಿ-ಸಿದ್ದಾರೆ ಮತ್ತು ಅನೇಕ ಗ್ರಂಥಗಳನ್ನು ಪ್ರಕಟಪಡಿಸಿದ್ದಾರೆ ಎಂಬುದನ್ನು ಬೇಂದ್ರೆಯವರ ಮನೆತನದವರಾದ ನಾವೂ ಮರೆಯುವದಿಲ್ಲ.

ಬೇಂದ್ರೆಯವರೊಡನೆ ತಪ್ಪು ನಡೆದು ಕ್ಷಮೆ ಕೇಳಲು ಬಂದರೆ, ಬೇಂದ್ರೆಯವರಿಗೆ ವಿಪರೀತ ಸಿಟ್ಟು. 'ತಪ್ಪು ಮರೆಯೋಣ ಒಪ್ಪಾಗಿ ಇರೋಣ' ಎಂಬ ತತ್ತ್ವವೇ ಬೇಂದ್ರೆಯವರಿಗೆ ಒಪ್ಪಿಗೆ ಇಲ್ಲ. ತಪ್ಪನ್ನು ನೆನಪಿಟ್ಟು, ಮತ್ತೊಮ್ಮೆ ತಪ್ಪು ಮಾಡದೆ ಇರೋಣ ಎನ್ನುತ್ತಾರೆ ಬೇಂದ್ರೆ. ಮಾನವ ಎಷ್ಟು ದುಷ್ಟನೋ ಅಷ್ಟು ಅವರು ದುಷ್ಟರಾಗಲು ಸಿದ್ಧರಾಗುತ್ತಾರೆ! ಉತ್ತಮಿಕೆಯ ನಟನೆಗಿಂತ ಉತ್ತಮಿಕೆ ನಮ್ಮಲ್ಲಿ ಬರುವಂತೆ, ಉತ್ತಮ ಜನಾಂಗದ ಸೃಷ್ಟಿಯಾಗುವಂತೆ ದೇವರಲ್ಲಿ ಪ್ರಾರ್ಥಿಸಲು ಬೇಂದ್ರೆಯವರು ಸದಾಸಿದ್ಧ. ಸುಮಾರು ೫೦ ಪುಸ್ತಕಗಳನ್ನು ಕನ್ನಡದಲ್ಲಿ ಬರೆದ ಬೇಂದ್ರೆಯವರ ಮಾತೃಭಾಷೆ ಮರಾಠಿ ಎಂದು ಕುಹಕ ಮಾಡುವ, ನೆನಪು ಮಾಡಿಕೊಡುವ ಕೆಲವು ಕನ್ನಡಿಗರ ಕನ್ನಡ ಪ್ರಜ್ಞೆಗೆ ಯಾವ ಹೆಸರು ಕೊಡಬೇಕೋ ?

ಬೇಂದ್ರೆಯವರ ಸದ್ಯದ ಚಿಂತನವು ಶಬ್ದ-ಅರ್ಥ ಮೀರಿ ಸಾಂಖ್ಯದತ್ತ ಒಲಿ-ದಿದೆ. ಸಂವತ್ಸರ-ಯಜ್ಞ-ಪುರುಷ ಮತ್ತು ಪ್ರಾಜಾಪತ್ಯ ಹೊಂದಾಣಿಕೆ ಮಾಡಿ, ಒಂದು ಹೊಸ ಸಿದ್ಧಾಂತದರ್ಶನವನ್ನು ಕಂಡುಕೊಳ್ಳುವಲ್ಲಿ ಬೇಂದ್ರೆಯವರು ನಿರತರಾಗಿದ್ದಾರೆ. ಅದಕ್ಕೇ ಅವರು ಸದ್ಯಕ್ಕೆ 'ಬದರ ದರ್ಶನ' ಎಂದು ನಾಮ-ಕರಣ ಮಾಡಿದ್ದಾರೆ. ಅವರು ಈ ಸಂಶೋಧನೆಯನ್ನು ಕುರಿತು ಈಗಾಗಲೇ 'ಮಾಧವಿ' ಎಂಬ ಮಾಸಪತ್ರಿಕೆಯಲ್ಲಿ ಆಗಸ್ಟ ೧೯೬೭ ರಿಂದ ನವ್ಹಂಬರ ೧೯೬೭ ರ ವರೆಗೆ 'ವನ ಮಾನವ', 'ನವಮ-ದಶಮ', 'ಕಾಲ ಮತ್ತು ಪಾಕ', 'ಏಕಪಾಕ' ಎಂಬ ಶೀರ್ಷಿಕೆಯ ಲೇಖನಗಳನ್ನು ಪ್ರಕಟಪಡಿಸಿದ್ದಾರೆ. ೮-೧೦-೧೯೬೦ ರಂದು 'ವಿಶ್ವಧಾರಣಸೂತ್ರ' ಎಂಬ ಒಂದು ಸಂದರ್ಶನವನ್ನು ಪ್ರಕಟಪಡಿಸಿ, ಅನೇಕರಿಗೆ ಕೊಟ್ಟದ್ದಾರೆ. 'ಪ್ರದೀಪ' ಮಾಸಪತ್ರಿಕೆ ಆಗಸ್ಟ ಮತ್ತು ಸಪ್ಟೆಂಬರ ೧೯೬೧ ರ ಸಂಚಿಕೆಗಳಲ್ಲಿ 'ದತ್ತ-ರಾಮ-ಸಂವಾದ' ಎಂದು ಎರಡು ಲೇಖನ ಬಂದವು. ೧೯೬೨ ರಲ್ಲಿ ಕರ್ನಾಟಕ ರಾಜ್ಯವು ನಿರ್ಮಿಸಿದ ಸಾಕ್ಷಿಚಿತ್ರದಲ್ಲಿ ಕೆಲವು ಸಂಶೋಧನೆಯ ಪಟಗಳನ್ನು ತೋರಿಸಲಾಗಿದೆ. ೧೯೬೩ ರಲ್ಲಿ ಧಾರವಾಡ ಆಕಾಶವಾಣಿಯಿಂದ ಡಾ. ದ. ರಾ. ಬೇಂದ್ರೆ ಮತ್ತು ಡಾ. ಸರೋಜಿನಿ ಮಹಿಷಿ ಇವರಲ್ಲಿ ನಡೆದ ಸಂಖ್ಯಾ ಶಾಸ್ತ್ರದ ಸಂವಾದವನ್ನು ಬಿತ್ತರಿಸಲಾಯಿತು. ಇದರಿಂದ ಕೆಲವರು ನಮ್ಮೊಡನೆ ಪತ್ರವ್ಯವಹಾರ ಮಾಡಿದರು, ತಮ್ಮ ಶುಭಸಂಖ್ಯೆ ಏನು ಅದರ ಭವಿಷ್ಯವೇನು ಎಂದು ಕೇಳಿದರು. ಬೇಂದ್ರೆಯವರ ಸಾಂಖ್ಯಸಿದ್ಧಾಂತ ಮತ್ತು 'ಬದರದರ್ಶನ'ದ ರೀತಿಯ ಕೆಲವು ಮಾತು ಇನ್ನು ವಿವರಿಸುವೆ.

## ಬೇಂದ್ರೆಯವರ ಸಾಂಖ್ಯದೃಷ್ಟಿ 'ಬದರದರ್ಶನ'

ಶಬ್ದ, ಅವುಗಳಲ್ಲಿಯ ಏಕಾರ್ಥ ಪದ, ಅನೇಕಾರ್ಥಪದ, ಅರ್ಥವ್ಯಾಪ್ತಿ, ಅರ್ಥಸಂಕೋಚ, ಶಬ್ದಜೋಡಣೆಯ ಸಂಗೀತ, ವ್ಯಂಗ್ಯಾರ್ಥ, ಧ್ವನಿತಾರ್ಥ ಹಾಗೂ ಅಲಂಕಾರ ಮತ್ತು ರಸ ಇವುಗಳೇ ಕವಿಗೆ ದ್ರವ್ಯ. ಅನುಷ್ಟುಪ್ ಎಂದರೆ ೮ ಅಕ್ಷರಗಳ ಛಂದಸ್ಸು, ಪಂಕ್ತಿ–೧೦ ಅಕ್ಷರಗಳ ಛಂದಸ್ಸು. ೨೬ ಅಕ್ಷರಗಳ ಛಂದಸ್ಸಿಗಿಂತ ಮುಂದಿನ ಬಂಧ ಮಾಡುವುದು ಕಠಿಣ ಎಂಬ ಅಂಶವೂ ಕವಿಯ ಕಾವ್ಯಾಭ್ಯಾಸದಲ್ಲಿ ಬರುವ ಮಾತು. ಏನೇ ಇರಲಿ ಶಬ್ದಗಳಷ್ಟೇ ಸಂಖ್ಯೆಗೂ ಮಹತ್ತ್ವವಿದೆ. ಶಬ್ದಪ್ರವಾಹಕ್ಕೆ ಸಂಖ್ಯೆಯೇ ದಂಡೆ, ಒಡ್ಡು. ಶಬ್ದಕ್ಕಿಂತ ಸಂಖ್ಯೆ ನಿಶ್ಚಿತಾರ್ಥವನ್ನು ಸೂಚಿಸುವುದು ನಿತ್ಯವ್ಯವಹಾರದಲ್ಲಿ ಅನುಭವಕ್ಕೆ ಬರುವ ಮಾತು.

'ಏಕಂ ಸಾಂಖ್ಯಂ ಚ ಯೋಗಂ ಚ', 'ಸಾಂಖ್ಯಂ ಜ್ಞಾನಂ' ಎಂಬ ಉಕ್ತಿಗಳೂ ಸಂಖ್ಯೆಯ ಮಹತ್ವವನ್ನೇ ಸಾರುತ್ತವೆ. ಜ್ಯೋತಿಜ್ಞಾನವೇ ಎಲ್ಲಕ್ಕೂ ಮೂಲ ಮತ್ತು ಪ್ರಾಚೀನ. ನಕ್ಷತ್ರಗಳು ೨೭ ಅಥವಾ ೨೮ ಎಂದು ಹೇಳಲಾಗುತ್ತದೆ. ಪ್ರತಿಯೊಂದು ನಕ್ಷತ್ರದ ೪ ಚರಣ ಎಂದರೆ— ೨೭×೪ ಅಥವಾ ೨೮×೪ = ೧೦೮ ಅಥವಾ ೧೧೨ ಚರಣಗಳಾಗುತ್ತವೆ. ನಮ್ಮ ಲಿಪಿಗೆ ಮೂಲ - ನಕ್ಷತ್ರಲಿಪಿ ಎಂಬುದನ್ನು ಮರೆಯುವಂತಿಲ್ಲ. ಆಂಗ್ಲಭಾಷೆಯ ವರ್ಣಮಾಲೆ — ಅಶ್ವಿನಿ, ಭರಣಿ, ಕೃತ್ತಿಕಾ ಎಂಬ ನಕ್ಷತ್ರಮಾಲೆಯ ನಾಮಗಳಿಂದ ಪ್ರೇರಿತವಾಗಿ ೨೬ ಅಕ್ಷರಗಳುಳ್ಳದ್ದಾಗಿದೆ ಎಂದು ತೋರುವಂತಿದೆ.

ವರ್ತುಳಕ್ಕೆ ೩೬೦ ಅಂಶ. ಎನ್ನಲು ಕಾರಣ ನಮ್ಮ ಋತುಮಾನದ ವರ್ಷ ೩೬೦ ದಿವಸದ್ದು ಎಂಬುದೆ. ನಾಲ್ಕು ಋತುಮಾನಗಳು ಕೂಡಿ ವರ್ಷ (೯೦ × ೪ = ೩೬೦). ಆದುದರಿಂದ ೯೦ ಅಂಶದ ಕೋನವು ಋತುಕೋನವಾಗಿದೆ. 'ಋತಂಸತ್ಯಂ'. ಹೀಗಿದ್ದೂ ವರ್ಷವು 360 ರಿಂದ 365¼ ದಿವಸದ ವರೆಗೆ ಹೆಚ್ಚು ಕಡಿಮೆಯಾಗಲು ಗ್ರಹ ಮತ್ತು ನಕ್ಷತ್ರಗಳ ಚಲನೆಯ ಹೊಂದಾಣಿಕೆಯೆ ಕಾರಣ-ವಾಗಿದೆ. ವರ್ಷದಲ್ಲಿ ಕೆಲವು ಸಲ ಕ್ಷಯಮಾಸವಾಗಿ ೧೧ ತಿಂಗಳ, ಅಧಿಕಮಾಸವಾಗಿ ೧೩ ತಿಂಗಳವಾಗುವುದನ್ನೂ ನಾವು ಕಾಣುತ್ತೇವೆ. ಸರ್ವಸಾಮಾನ್ಯ ೧೨ ತಿಂಗಳಿಗೆ ಒಂದು ವರ್ಷ. ೯೦, ೯೧, ೯೨, ದಿವಸಗಳ ಋತುಮಾನದ ಮತ್ತು ೧೧, ೧೨, ೧೩ ತಿಂಗಳುಗಳ ವರ್ಷದ ಚಲನೆಯೆ ೯೦, ೯೧ ಮತ್ತು ೯೨ ನೆಯ ಸಂಖ್ಯೆಯ ಭೌತಿಕ ದ್ರವ್ಯಗಳ ಸೃಷ್ಟಿಗೆ ಕಾರಣವಾದವೋ ಏನೋ ?

ನಕ್ಷತ್ರಲಿಪಿಯೆ ವರ್ಣಮಾಲೆಯಾದಾಗ ಅದರಲ್ಲಿ ಸಾಮಾನ್ಯವಾಗಿ ೧೬ ಸ್ವರ,

೨೫ ವರ್ಗೀಯ ವ್ಯಂಜನ ಮತ್ತು ೯ ಅವರ್ಗೀಯ ವ್ಯಂಜನ ಬರುತ್ತವೆ. ಕ್ಷ, ತ್ರ ಮತ್ತು ಜ್ಞ ಸೇರಿದಾಗ ೫೩ ಮತ್ತು ಓಂಕಾರದ ಅ-ಉ-ಮ ಸೇರಿ ೫೬ ರ ವರ್ಣ-ಮಾಲೆಯಾಗುತ್ತದೆ. ನಿಗಮಗಳ ಕಾಲಕ್ಕಂತೂ ೬೪ ರ ವರ್ಣಮಾಲೆ ಪ್ರಚಾರ-ದಲ್ಲಿತ್ತು; ಆದುದರಿಂದ ವೇದಾದಿಗಳ ಭಾಷೆ ನೈಗಮಿಕವೆ ಹೊರತು ಆಗಮಿಕ ಸಂಸ್ಕೃತವಲ್ಲ; ವೇದಕ್ಕೆ ೬೪ ವರ್ಣ ಬೇಕು, ಸಂಸ್ಕೃತಕ್ಕೆ ಹೆಚ್ಚಾದರೆ ೫೩ ಸಾಕು.

ವರ್ಣಮಾಲೆಯಲ್ಲಿಯ ಅಕ್ಷರಗಳಿಗೆ ವಿವಿಧವಾಗಿ ಸಂಖ್ಯಾಬದ್ಧತೆಯನ್ನು ಪೂರ್ವಜರು ತಂದಿದ್ದಾರೆ. ‘ಅ’ ದಿಂದ ‘ಜ್ಞ’ದ ವರೆಗೆ ಕ್ರಮವಾಗಿ ಸಂಖ್ಯೆ ಹಾಕಿ ೫೩ ಮಾಡಬಹುದು. ಅಥವಾ ‘ಅ’ದಿಂದ ‘ಅಃ’ದ ವರೆಗೆ ೧೬ ಸಂಖ್ಯೆ; ‘ಕ’ದಿಂದ ‘ಞ’ ೧೦ ಸಂಖ್ಯೆ; ‘ಟ’ದಿಂದ ‘ನ’ದ ವರೆಗೆ ಇನ್ನೊಂದು ೧೦ ಸಂಖ್ಯೆ ಮತ್ತು ‘ಪ’ದಿಂದ ‘ಮ’ ೫ ಸಂಖ್ಯೆ; ‘ಯ’ದಿಂದ ‘ಜ್ಞ’ ೧೨ ಸಂಖ್ಯೆ ಎಂದೂ ಒಡೆದು ಹಾಕುವ ಕ್ರಮವನ್ನು ಪೂರ್ವಿಕರು ಒಪ್ಪಿದ್ದಾರೆ — ‘ಕ, ಟ, ಪ, ಯ’ಆದಿ ಭಾಷೆಯಲ್ಲಿ.

ಬುದ್ಧನ ಗತಿ ೮೮ ದಿವಸ, ಶುಕ್ರನ ಗತಿ ೨೨೬ ದಿವಸ, ಪೃಥ್ವಿಯ ಗತಿ-೩೬೦, ೩೬೨, ೩೬೪, ೩೬೮ ದಿವಸ, ಮಂಗಳನ ಗತಿ ೬೮೬ ದಿವಸ ಮತ್ತು ಗುರುವಿನ ಗತಿ ೪೩೩೨ ದಿವಸ ಎಂಬುದೂ ಬೇಂದ್ರೆಯವರಿಗೆ ವಿಚಾರ ಮಾಡಲು ಹಚ್ಚಿತು.

ಕವಿಯ ಕಣ್ಣು ಸುಂದರವಾದ ಸಾದೃಶ್ಯವನ್ನು ಕಂಡು, ಆನಂದಪಟ್ಟು, ಆ ಆನಂದವನ್ನು ಅಭಿವ್ಯಕ್ತಪಡಿಸುವಂತೆ; ಸಂಖ್ಯೆಸಂಖ್ಯೆಗಳಲ್ಲಿಯ ಸುಂದರವಾದ ಸಾದೃಶ್ಯವನ್ನು ಕಂಡು ಆನಂದಪಡುತ್ತದೆ ಅಂಬಿಕಾತನಯದತ್ತರ ಸಾಂಖ್ಯದೃಷ್ಟಿ.

ಧ್ರುವನಕ್ಷತ್ರಕ್ಕೆ ಒಂದು ನಾರಾಯಣ ಬಿಂದುವಿದೆ. ಅದು ಸ್ಥಿರವಾಗಿದೆ. ಅದರ ಸುತ್ತಲೂ ಧ್ರುವಮಂಡಲವಿದೆ. ಈ ಧ್ರುವನಕ್ಷತ್ರ ನಮ್ಮ ಪೃಥ್ವಿಗೆ ೨೩ ಅಂಶದಿಂದ ಒಲೆದಿದೆ. ಪುರುಷ, ಸ್ತ್ರೀ ಮತ್ತು ಮಗು ಇವರಲ್ಲಿ ೨೩ ಜೊತೆ ಎಂದರೆ ೪೬ ಜೀವಾಣು ಬೀಜಗಳಿರುತ್ತವೆ (೪೬+೪೬+೪೬=೧೩೮) ವರ್ತುಲದ ಪರೀಘವು ೩.೧೪೧೫೯೨........ಇರುತ್ತದೆ. ವರ್ತುಲಕ್ಕೂ, ವ್ಯಾಸಕ್ಕೂ, ತ್ರಿಜ್ಯಕ್ಕೂ ಇರುವ ಸಂಖ್ಯೆಗಳ ಅಂತರಾರ್ಥವೇನು? ಪೂರ್ಣಾತ್ ಪೂರ್ಣನಾದ ಪುರುಷನು ಸಹಸ್ರಾಕ್ಷ, ಸಹಸ್ರಪಾದ, ಸಹಸ್ರಶೀರ್ಷನಾಗಿರಲು ಕಾರಣವೇನು? ಇಂಥ ಅನೇಕ ಸಂಖ್ಯಾ-ಬದ್ಧ ವಿಷಯ — ಜೀವಸೃಷ್ಟಿ, ಪ್ರಾಣಿಸೃಷ್ಟಿ, ಸಸ್ಯಸೃಷ್ಟಿ, ಭೂಖನಿಜಸೃಷ್ಟಿ, ಸಂಗೀತಶಾಸ್ತ್ರ ಮೊದಲಾದವು ಬೇಂದ್ರೆಯವರ ಕಣ್ಣಿಗೆ ಬಿದ್ದವು. ಅಂದಿನಿಂದ ಸಂಖ್ಯೆಗಳ ಬಗ್ಗೆ ಬೇಂದ್ರೆಯವರು ಆಳವಾಗಿ ವಿಚಾರ ಮಾಡಲು ತೊಡಗಿದರು. ಈ ವಿಚಾರಕ್ಕೆ ಆರಂಭ ೧೯೧೬, ಗತಿ ಬಂದದ್ದು ೧೯೪೪ ಮತ್ತು ಪ್ರಗತಿ ಹೊಂದು-

ತ್ತಿರುವುದು ೧೯೬೦ರ ಅನಂತರದ ಕಾಲಾವಧಿಯಲ್ಲಿ.

೧ ರಿಂದ ೧೦ರ ವರೆಗಿದ್ದ ಅಂಕಿಗಳ ವೈಶಿಷ್ಟ್ಯವೇನು ? ಅವುಗಳ ಬೇರೀಜು, ವಜಾಬಾಕಿ, ಗುಣಾಕಾರ, ಭಾಗಾಕಾರ ಮಾಡುವುದರಿಂದ ಮತ್ತು ಅವುಗಳನ್ನು ಕ್ರಮವಾಗಿ ಮತ್ತು ವಿರುದ್ಧ ಕ್ರಮವಾಗಿ ಜೋಡಿಸಿದಾಗ ಯಾವ ಬೋಧ ಆಗುತ್ತದೆ ? ಭಾಗ ಹೋಗದ ಸಂಖ್ಯೆಯು ಮತ್ತು ಭಾಗ ಹೋಗುವ ಸಂಖ್ಯೆಯು ವೈಶಿಷ್ಟ್ಯ ವೇನು ? Prime Number, Perfect Number, Febonaci Number ಇವುಗಳ ವೈಶಿಷ್ಟ್ಯವೇನು ಎಂದು ಬೇಂದ್ರೆಯವರು ಸಂಶೋಧನೆ ಮಾಡುತ್ತ ಆನಂದಪಡಲು ಪ್ರಾರಂಭಿಸಿದರು. ೧, ೪. ೭, ೧೦, ೧೧, ೧೨, ೧೩, ೧೪, ೧೫, ೧೬, ೧೭, ೧೮, ೧೯, ೨೦, ೨೨, ೨೩, ೨೭, ೨೯, ೩೧, ೩೩, ೩೪, ೩೭, ೩೯, ೪೩, ೫೫, ೬೪, ೬೬, ೭೯, ೯೧—ಹೀಗೆಯೇ ಅನೇಕ ಸಂಖ್ಯೆಗಳ ವಿವಿಧ ಶಾಸ್ತ್ರಾಧಾರದಿಂದ-ಮಹತ್ತ್ವವನ್ನು ಅರಿತುಕೊಂಡರು.

ರಾಮಾನುಜ ಸಂಖ್ಯೆ-೧೭೨೮-(೧೭೨೯); ಎಡಿಂಗ್ಟನ್ ಸಂಖ್ಯೆ-೧೩೭; ತ್ರಿವಿಕ್ರಮವಾಮನನ ಸಂಖ್ಯೆ-೩.೧೪೧೫೯೨.......; ಲೆಡ್ ಬೀಟರಸಂಖ್ಯೆ-೧೬೮೦; ಕಾಲಿದಾಸ ಸಂಖ್ಯೆ-೪೨೩೧ ಮತ್ತು ೧೩೮೭; ಅರವಿಂದ ಸಂಖ್ಯೆ-೧೨೪೪೮ ಅಥವಾ ೧೨೪೦೮; ಬದರ ಸಂಖ್ಯೆ-೩೮೨; ಗೊಮ್ಮಟ ಸಂಖ್ಯೆ-೧೫೩; ಯಾಜ್ಞವಲ್ಕ್ಯ ಸಂಖ್ಯೆ-೧೧೩೧; ರವಿ ಸಂಖ್ಯೆ-೩೨; ಚಂದ್ರ ಸಂಖ್ಯೆ-೧೬; ಹೂ ಸಂಖ್ಯೆ-೮; ಬೇಂದ್ರೆ ಕವಿಸ್ಥಲ ಸಂಖ್ಯೆ-೧೪೨೩; ವಿವೇಕ ಸಂಖ್ಯೆ-೪೪೧; ಹೃದಯ ಸಂಖ್ಯೆ-೮೮೧; ಸಂವಾದ ಸಂಖ್ಯೆ-೭೦೪೮; ಹೀಗೆ ಅನೇಕ ಸಂಖ್ಯೆಗಳನ್ನು ಬೇಂದ್ರೆಯವರು ತಮ್ಮ ಮಾತುಗಳಲ್ಲಿ ಸಾಂಕೇತಿಕವಾಗಿ ಉಪಯೋಗಿಸಲು ತೊಡಗಿದರು. ಇದು ಭವಿಷ್ಯದ ಜಾತಿಯ ಶುಭ-ಅಶುಭ ಸಂಖ್ಯಾ ಮಾರ್ಗವಲ್ಲ ಮತ್ತು ವಿನೋದದ ಗಣಿತವೂ ಅಲ್ಲ. ಬೇಂದ್ರೆಯವರು ನಿರ್ಣಯಿಸಿದ ಸಂಖ್ಯೆಗಳ ಹಿಂದೆ ಆಳವಾದ ಚಿಂತನೆ ಮತ್ತು ಸಂಶೋಧನೆ ಇದೆ. ಈ ಸಂಖ್ಯಾವಿಜ್ಞಾನ ಸಂಶೋಧನೆಗೆ ತಮ್ಮ ಹೆಸರನ್ನು 'ಬದರ' ಎಂದು ಸಾಂಕೇತಿಕವಾಗಿ ಇಟ್ಟುಕೊಂಡರು. ಹಾಗೆ ಹೊಳೆಯಿತು ಅವರಿಗೆ !

ವೈದಿಕ, ಜೈನ, ವೀರಶೈವ, ಇಸ್ಲಾಂ, ಕ್ರಿಶ್ಚನ್ ಮೊದಲಾದ ಯಾವುದೇ ಧರ್ಮದ ಅಭ್ಯಾಸ ಮಾಡುವಾಗ ಅಲ್ಲಿ ಸಂಖ್ಯೆಗಳಿಗೆ ಮಹತ್ತ್ವ ಇರುವುದು ಬೇಂದ್ರೆಯವರ ಲಕ್ಷ್ಯಕ್ಕೆ ಬಂದಿತು. ಯಾಜ್ಞವಲ್ಕ್ಯರು ೧೧೩೧ ಶಾಖೆಗಳು ಎನ್ನಲು ಕಾರಣವೇನು ? ೬೩ ಪುರಾತನರು; ೬೩ ಮರ್ಯಾದಾ ಪುರುಷರು; ೨೧೬ ಸಕೀಲಗಳು; 'ಅಲ್ಲಾ'ನಿಗೆ ೯೯ ನಾಮಗಳು; ೩೩ ಕೋಟಿ ದೇವತೆಗಳು ಎಂದು ಮೊದಲಾಗಿ ಅನೇಕ ಉಲ್ಲೇಖಗಳು ಸಿಗುತ್ತವೆ. ಇವುಗಳ ಜಾಡನ್ನು ಹಿಡಿದು

ಬೇಂದ್ರೆಯವರು ಸಾಗಿದರು.

ಶ್ರೀ ಅರವಿಂದರ 'On the Veda'; ವೈದಿಕ ವಿಜ್ಞಾನ ಸಮೀಕ್ಷಾ ಚಕ್ರವರ್ತಿ ಮಧುಸೂಧನ ಓಝಾ ಮತ್ತು ಅವರ ಪರಂಪರೆಯ ಪಂಡಿತ ಗಿರಿಧರ ಶರ್ಮಾ, ಪಂಡಿತ ಮೋತಿಲಾಲ ಶರ್ಮಾ, ಪಂಡಿತ ಪ್ರದ್ಯುಮ್ನ ಶರ್ಮಾ ರಚಿಸಿದ ಗ್ರಂಥಗಳು. ನಿರುಕ್ತ ಮತ್ತು 'ಅಸ್ಯವಾಮಸ್ಯ' ಸೂಕ್ತಕ್ಕೆ ಇರುವ ವಿದ್ವತ್ ಪ್ರಚುರ ಭಾಷ್ಯಗಳು; ಡಾ. ವಾಸುದೇಶರೂ ಅಗ್ರವಾಲರ ಗ್ರಂಥಗಳು; ಶ್ರೀ ವಾಸಿಷ್ಠ ಗಣಪತಿಮುನಿ ಮತ್ತು ಅದೇ ಪರಂಪರೆಯ ದಿ. ದೇವರಾತ ಅವರ ಗ್ರಂಥಗಳು; ಶ್ರೀ ಕಪಾಲಿಶಾಸ್ತ್ರಿಗಳ ಗ್ರಂಥ; ಲೋಕಮಾನ್ಯ ಟಿಳಕರ 'ಆರ್ಕಟಿಕ್ ಹೋಮ್ ಇನ್ ದ ವೇದಾಸ್'; ಗೋಪಾಲದಾಸರ – ಕಂಕಣ ಸುಳಾದಿ ಮತ್ತು ಸೃಷ್ಟಿ ವಚನಗಳು ಬೇಂದ್ರೆಯವರ ವೈಜ್ಞಾನಿಕ ದೃಷ್ಟಿಗೆ ಹರಿತವನ್ನು ತಂದವು. ಶ್ರೀ ಬ್ರಹ್ಮಚೈತನ್ಯ ಗೋಂದವಲೇಕರ ಮಹಾರಾಜ, ಶ್ರೀ ಅರವಿಂದ ಮತ್ತು ಶ್ರೀ ಸತ್ಯ ಸಾಯಿಬಾಬಾ ಅವರ ಕೃಪಾಶೀರ್ವಾದದಿಂದ ಮತ್ತು ಸ್ವಪ್ನದೃಷ್ಟಾಂತಗಳಿಂದ ಬೇಂದ್ರೆಯವರ ಸಾಂಖ್ಯಸಂಶೋಧನೆ ನಿರ್ವಿಘ್ನವಾಗಿ ಸಾಗಿದೆ.

ಬೇಂದ್ರೆಯವರ ಸದ್ಯದ ಚಿಂತನೆಯ ಕೆಲವು ಗ್ರಂಥ ಮತ್ತು ಸಂಶೋಧನೆ ನಡೆದ ಮಾರ್ಗವನ್ನು ಅತ್ಯಂತ ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಿರುವೆ. ಮೇಲೆ ಹೇಳಿದ ಜಾತಿಯ ಗ್ರಂಥ ಓದಿ ಯಾರಿಗಾದರೂ ಕೆಲಕೆಲವು ವಿಷಯ ಹೊಳೆಯುತ್ತಿದ್ದರೆ ಅಂಥವರಿಂದ ಬೇಂದ್ರೆಯವರಿಗೆ ಅಥವಾ ಬೇಂದ್ರೆಯವರಿಂದ ಅವರಿಗೆ ಲಾಭವಿದೆ. ಬೇಂದ್ರೆಯವರ ಹತ್ತಿರ ಸಂಖ್ಯಾಶಾಸ್ತ್ರ ವಿಷಯವಾಗಿ ಸಿದ್ಧ ಗ್ರಂಥ ಯಾವುದೂ ಇಲ್ಲ. ಗ್ರಂಥಾಭ್ಯಾಸದಲ್ಲಿ ಹೊಸ ವಿಷಯ ಹೊಳೆದು ಅವರಿಗಾದ ಆನಂದವನ್ನು–ಕವನಗಳಂತೆ–ಬರೆದಿಡುತ್ತಿದ್ದಾರೆ. ಸಾಹಿತ್ಯಚರ್ಚೆ, ಭಾಷಣ, ಸಭೆಗಳಿಗೆ ಈಗಿನ ಮಿಶ್ರಸಮಾಜ ಸರಿಯಾದ ಇರ್ಥ ಮಾಡುತ್ತಿಲ್ಲ. ಆದುದರಿಂದ ಅವುಗಳಿಂದ ದೂರ ಇರಬೇಕು ಎಂದು ಅವರ ಅಪೇಕ್ಷೆ. ಅವರ ಈ ಅಪೇಕ್ಷೆಯನ್ನೂ ಕರ್ನಾಟಕದವರು ಈಡೇರಿಸುವರೆಂದು ನಂಬಿ ವಿರಮಿಸುವೆ. ಇದುವರೆಗೆ ಬರೆದದ್ದು ಗುಟ್ಟೂ ಅಲ್ಲ, ರಟ್ಟೂ ಅಲ್ಲ! ಆಕಾಶಯಾನದ 'Kit' ಅಷ್ಟೆ.

§ § § §



ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪಡೆಯುತ್ತಿರುವುದು (೧೯೫೯)
[ 'ಅರಳು-ಮರಳು'ವಿಗೆ ದೊರೆತುದು ]

ಜ್ಞಾನಪೀಠ ಪ್ರಶಸ್ತಿ ಪಡೆಯುತ್ತಿರುವುದು (೧೯೭೪)
[ 'ನಾಕುತಂತಿ'ಗೆ ದೊರೆತುದು ]

ಳ ೯

# ಬೇಂದ್ರೆಯವರ ಕಲಾತ್ಮಕ ವ್ಯಕ್ತಿತ್ವ

**ಪು. ತಿ. ನರಸಿಂಹಾಚಾರ್**

ಕವಿ ಬೇಂದ್ರೆ ಅಸಾಧಾರಣ ವ್ಯಕ್ತಿ. ಅವರದು ಸರಸ ತೇಜಸ್ವಿತೆ. ಅಗಲವಾದ ಹಣೆ. ನೀಟಾಗಿ ಇಳಿದಿದ್ದು ತುದಿಯಲ್ಲಿ ತುಸು ಹರಡಿರುವ ಮೂಗು. ಹಾಳತವಾದ ಗಂಡುಮೀಸೆ. ರಸಾರ್ದ್ರ ತುಟಿಗಳು, ಮುದ್ದಾದ ಗಲ್ಲಕ್ಕೆ ಇಳಿಯುವ ಕೆನ್ನೆಗಳು. ಹೊಳಪುಗಣ್ಣು, ನಿಲುವು ಸ್ವಲ್ಪ ಕುಳ್ಳು. ಕೇದಗೆಯ ಹತ್ತಿರಕ್ಕೆ ಬರುವ ಮೈಬಣ್ಣ. ಕೂರ್ಪುಳ್ಳ ಧ್ವನಿ, ಬಹು ಆಕರ್ಷಕವಾದದ್ದು. ಅದು ಕೇಳುವವರ ಮೈಯ್ಯೊಳಗಿಳಿದು, ಎಲುಬಿನ ಮಜ್ಜೆಯ ಮೂಲಕ ತೂರಿ ಹೃದಯವನ್ನು ತಿಣ್ಣನೆ ಮುಟ್ಟುತ್ತದೆ. ಅದು ಮುಟ್ಟಿಸುವ ಚುರುಕು ಪ್ರಣಯಿಯದು. ಇದಕ್ಕೆ ಮೋಹಗೊಳ್ಳದ ಕನ್ನಡ ರಸಿಕ ಪ್ರಾಯಶಃ ಇರಲಾರ. ಬೇಂದ್ರೆಯವರ ಗಾರುಡಿಕೆ ಅವರ ಈ ಧ್ವನಿಯ ಏರಿಳಿತ ಮುರಿವು ಹರಿವುಗಳಲ್ಲಿದೆ. ಅವರ ಉಂಗುರಬೆರಳುಗಳ ಹಾವಭಾವ, ತೇಲುಗಣ್ಣು ಮೇಲುಗಣ್ಣುಗಳ ವೀಕ್ಷಣ ಚಾತುರಿ, ಕಣ್ಣಿನ ಮಿಂಚು, ತುಟಿಗಳ ಮೇಲಿನ ತುಂಟು ನಗೆಯ ಹೊಂಚು, ಮೈಯ ಗತ್ತು — ಇವುಗಳೆಲ್ಲ ಆ ಧ್ವನಿವಿಲಾಸದ ಕೈವಾರಿಗಳು. ಕಲಾವಂತ ನಮ್ಮ ಬೇಂದ್ರೆ. ಸಹೃದಯರಿಗೆ ತನ್ನನ್ನು ತಾನು ತೆತ್ತುಕೊಳ್ಳುವ ಉದಾರಭಾವ ಅವರ ವಚೋವೈಖರಿಯಲ್ಲಿ ಕಂಡುಬರುತ್ತದೆ. ಇದು ಅಭ್ಯಾಸದಿಂದ ಬಂದುದಲ್ಲ; ಹುಟ್ಟುರಸಿಕತೆಯ ಗುಣ.

ಬೇಂದ್ರೆಯವರ ಮನೋವೃತ್ತಿಯನ್ನು ಒಟ್ಟುನೋಟದಿಂದ ನೋಡಿದಾಗ ಅವರದೇ ಒಂದು ಕವಿತೆಯ ಸಾಲು ನೆನಪಿಗೆ ಬರುತ್ತದೆ, ಹೂವನ್ನು ಕುರಿತದ್ದು : " ಮಣ್ಣನ್ನು ಕಂಪತ್ತ ಹೊರಳಿಸುತಿರು. " ಅವರ ಕವಿತೆಗಳು ಕನ್ನಡ ನಾಡಿನ, ಏಕೆ— ಇಡೀ ಈ ಭೂಮಿಯ ದಿವ್ಯಗಂಧವನ್ನು ನಮ್ಮರಿವಿಗೆ ಬೀರುತ್ತದೆ. ತಾನು ತಾನಾಗಿಯೇ ಬೆಳೆದು ಮೊಗ್ಗಾಗಿ ಅರಳಿ ಕಂಪು ಬೀರುವುದು ಹೂವಿನ ಸಹಜ ಗುಣ. ಅದೊಂದು ಕಲೆಗಾರಿಕೆಯಲ್ಲ. ಬೇಂದ್ರೆಯವರ ಕವಿತೆಗಳೂ ಹಾಗೆಯೇ ಸುಕೃತಫಲ. ಅದು ಕಲೆಗಾರಿಕೆಯ ವಿಶ್ಲೇಷಣೆಗೆ ಸಿಕ್ಕುವುದಿಲ್ಲ.

ವಿಮರ್ಶೆಗೆ ದಕ್ಕುವುದಿಲ್ಲ, "ನುಡಿದರೆ ಮಾಣಿಕ್ಯದೀಪ್ತಿಯಂತಿರಬೇಕು" ಎಂಬ ವಚನ ಪ್ರಸಿದ್ಧವಾಗಿದೆ; ಬಸವಣ್ಣ, ಅಲ್ಲಮಾದಿಗಳ ವಚನಗಳಲ್ಲೂ, ಪುರಂದರ-ಕನಕದಾಸಾದಿಗಳ ಪದಗಳಲ್ಲೂ ಆ ಕಾಂತಿಯನ್ನು ಕಂಡು ಆಶ್ಚರ್ಯ-ಚಕಿತರಾಗಿ ಸುಖಪಟ್ಟಿದ್ದೇವೆ. ಬೇಂದ್ರೆಯವರ ಅನೇಕ ಕವನಗಳಿಗೂ ಈ ಮಾತು ಅನ್ವಯಿಸುತ್ತದೆ. ತೀಕ್ಷ್ಣಮತಿಯೂ, ಪ್ರತಿಭಾಶಾಲಿಯೂ, ಬಹುಶ್ರುತನೂ, ವಿಪುಲ ಲೋಕಾನುಭವವುಳ್ಳವನೂ ಆಗಿರುವವನ ಅಪೂರ್ವ ಮನೋವೃತ್ತಿಗಳು ಥಟ್ಟನೆ ಯಾವ ಕ್ಲೇಶವೂ ಇಲ್ಲದೆ, ಮಾತಾಗಿ ಅರಳಿ ಸುರಿದು ಹೋಗುತ್ತವೆ ಇಲ್ಲಿ. ಅವುಗಳ ತರವೇ ಬೇರೆ. ಎಷ್ಟು ಬಣ್ಣ, ಎಷ್ಟು ಬೆಡಗು, ಎಷ್ಟು ಕಂಪು! ಬೇಕಾದವರು ಬೇಕಾದ್ದನ್ನು ಆರಿಸಿಕೊಳ್ಳಬಹುದು.

"ನಿನ್ನ ನಗೆಯ ಬೆಳಕಿನಲ್ಲಿ ಜಗಕೆ ಬೇರೆ ಬಣ್ಣವು

ಬರಲು, ನನ್ನ ಜೀವನಯನ ಬೇರೆ ಉಣಿಸನುಣ್ಣವು" (ಹೃದಯ ಸಮುದ್ರ-ತಾಯ-ನಗೆ)

ಎಂದು ಹಾಡುತ್ತಾನೆ ಕವಿ. ನಾವೂ ಅಹುದು ಅಹುದು ಎನ್ನುತ್ತೇವೆ — ಅದನ್ನು ಕೇಳಿ, ಓದಿ. ಬೇಂದ್ರೆಯವರ ಕವನಗಳಲ್ಲಿ ಯಾವುದಿದೆ ಯಾವುದಿಲ್ಲ ಎಂದು ಎಂಥವರಿಗೂ ಹೇಳುವುದು ಕಷ್ಟ ಎಂದು ನನ್ನ ಎಣಿಕೆ. ಚೆಲುವು ಬೇಕಾದವರಿಗೆ ಚೆಲುವಿದೆ ಪ್ರಕೃತಿ ಗೀತೆಗಳಲ್ಲಿ; ಒಲವು ಬೇಕಾದವರಿಗೆ ಒಲವಿದೆ — ಪ್ರಣಯಗೀತೆಗಳಲ್ಲಿ; ಭಕ್ತಿ ಬೇಕಾದವರಿಗೆ ಅವರ "ಅರಳು ಮರಳು" ಎಂಬಲ್ಲಿ ಸಾಕುಬೇಕಾದಷ್ಟಿದೆ. ಶಬ್ದಾಲಂಕಾರಕ್ಕೂ, ಅರ್ಥಾಲಂಕಾರಕ್ಕೂ ಏನೂ ಕೊರತೆಯಿಲ್ಲ. "ಮಾತು ಮಾತು ಮಥಿಸಿ ಬಂದ ನಾದದ ನವನೀತ" ಯಾರಿಗುಂಟು ಯಾರಿಗಿಲ್ಲ ಬೇಂದ್ರೆಯವರ ಅಕ್ಷಯಪಾತ್ರೆಯಲ್ಲಿ? ನೊಂದ ಜನಕ್ಕೆ ಮರುಕ ಉಂಟು. ಕೇಡಿಗರಿಗೆ ಧಿಕ್ಕಾರ ಉಂಟು. ವಿಡಂಬನವಿದೆ, ಹಾಸ್ಯವಿದೆ, ಅಣಕವಿದೆ, ಮಾತಿನ ಚಕಮಕಿಯ ಸುಗ್ಗಿಯೇ ಇಲ್ಲುಂಟು. ಇವೆಲ್ಲ ನಮ್ಮ ಓದಿನ ಪ್ರೌಢಿಮೆಗೂ ಬೌದ್ಧಿಕ ವಿಮರ್ಶಾಕೌಶಲ್ಯಕ್ಕೂ ಸಿಕ್ಕುವಂಥವು. ಆದರೆ ಇವುಗಳ ಮುಖ್ಯ ಗುಣ ಕಾವ್ಯ-ಸೌಂದರ್ಯ ಮೀಮಾಂಸೆಗೆ ಸಿಕ್ಕಿಯೂ ಸಿಕ್ಕದಂತೆ ಮಿಕ್ಕಿ ನಿಲ್ಲುವ ಯಾವುದೊ ಒಂದು ಅಸದೃಶವಾದ ಮನೋಲಹರಿ-ತ್ಯಾಗರಾಜರ ಸಂಗೀತದಲ್ಲಿ ಮಾತ್ರ ದೊರೆಯುವಂಥದು. ಷೇಕ್ಸಪಿಯರ್, ಬ್ಲೇಕ್, ಷೆಲ್ಲಿ, ಗಯಟೆ, ಮಾಲಿಯರ್—ಮುಂತಾದ ಶ್ರೇಷ್ಠರಲ್ಲಿ ಮಿಂಚುವಂಥದು. ಅವರ ಕಾವ್ಯವಿಮರ್ಶೆಯನ್ನು ಅವರ ಮಾತಿನಿಂದಲೇ ಮಾಡೋಣ :

"'ಪ್ರಾತಿಭ ಚಕ್ಷುಪಿನ ಜ್ಯೋತಿಯ ಬೆಳಕಿನಲ್ಲಿ ಜಗತ್ತಿನ ರಸಿಕ ದೃಷ್ಟಿಗೆ ತೋರಿಸುವ, ಶ್ರವಣಮಾತ್ರದಿಂದ ಸಹೃದಯರ ಹೃದಯದಲ್ಲಿ ವಿದ್ಯುದ್ದೀಪಗಳ

ಕಾರ್ತಿಕವನ್ನು ಮಾಡುವ, ಮಂತ್ರಜಲವನ್ನು ಕಿವಿಯಿಂದೀಂಟಿಸುವ ಕಾವ್ಯ ನಮಗೆ ಬೇಕಾದ ಕಾವ್ಯ!' ವೆಂದು ಗುರು ಅರವಿಂದರು 'Future poetry' ಯಲ್ಲಿ ಹೇಳಿರುವರು" (ಸಾಹಿತ್ಯ ಮತ್ತು ವಿಮರ್ಶೆ ಪುಟ-೨೧). ಈ ವರ್ಣನೆಗೆ ಸಾಕ್ಷೀಭೂತವಾದ ಎಷ್ಟೊಂದು ಕವನಗಳನ್ನು ಬೇಂದ್ರೆಯವರು ನಮಗೆ ಕೊಟ್ಟಿಲ್ಲ! ಗರಿ, ನಾದಲೀಲೆ, ಉಯ್ಯಾಲೆ, ಮೂರ್ತಿ ಮತ್ತು ಕಾಮ-ಕಸ್ತೂರಿ, ಸಖೀಗೀತ — ಮುಂತಾದ ಕವನಸಂಗ್ರಹಗಳಲ್ಲಿ ಇಂಥ ಅನೇಕ ಕವನಗಳು ಕಳೆ ಚೆಲ್ಲುತ್ತಿವೆ.

ಇವೆಲ್ಲ ಪ್ರಾಯಶಃ ಪೂರ್ವವಯಸ್ಸಿನಲ್ಲಿ ಅವರು ಬರೆದ ಕವನಗಳು. ಆಯುಷ್ಯದ ಉತ್ತರಾರ್ಧದಲ್ಲಿ ಬರೆಯುತ್ತಿರುವ ಕವನಗಳ ರೀತಿ ತುಸು ಬೇರೆ. "ಶ್ರೀಮಾತಾ," "ಹೃದಯ ಸಮುದ್ರ" ಮುಂತಾದ ಐದು ಸಂಗ್ರಹಗಳ-ನ್ನೊಳಗೊಂಡ "ಅರಳು-ಮರಳಿ" ನಲ್ಲಿ ಕಾಣಿಸಿಕೊಳ್ಳುವ ಆಧ್ಯಾತ್ಮಿಕಾನುಭವಗಳನ್ನು ವರ್ಣಿಸುವ ಕವಿತೆಗಳನ್ನು ಬೇರೆ ತರದಲ್ಲಿ ಲಕ್ಷಣಿಸಬೇಕಾಗುತ್ತದೆ. ಅದೇ ಅರವಿಂದರ ವಾಣಿಗೆ ಶರಣು ಹೋಗೋಣ-ಈ ವರ್ಣನೆಗೆ. "ವಸ್ತು ವಸ್ತುಗಳ ಅಂತರಂಗದ ಮೊಗ್ಗೆಗಳನ್ನರಳಿಸುವ, ಪ್ರಕೃತಿಯ ಅಂತರ್ಗತವಾದ ಚೈತನ್ಯವನ್ನು ಮೂರ್ತಿಮತ್ತಾಗಿ ತೋರಿಸುವ, ಅಕ್ಷರಾತ್ಮನ, ಅಂತರಾತ್ಮನ, ಅವಿದಿತ ರಸಗಳ ಅನಂತಲೀಲಾನಾಟ್ಯದ ಪ್ರೇಕ್ಷಕರನ್ನಾಗಿ ನಮ್ಮನ್ನು ಮಾಡುವ, ನಶ್ವರದೊಳ-ಗಿನ ಈಶ್ವರನನ್ನು ಅಂತಶ್ಚಕ್ಷುವಿಗೆ ಪ್ರತ್ಯಕ್ಷೀಕರಿಸುವ ಕಾವ್ಯ- ನಮಗೆ ಬೇಕಾದ ಕಾವ್ಯ." (ಅದೇ ಪುಸ್ತಕ, ಪು. ೨೧).

ಬಹು ಹುರುಳಾದ ಈ ಮಾತುಗಳನ್ನು ಮನನ ಮಾಡದೆ ಬೇಂದ್ರೆಯವರ ಆಧ್ಯಾತ್ಮಿಕ ಕವನಗಳನ್ನು ಅರಿತುಕೊಳ್ಳುವುದು ಕಷ್ಟ. ಅವರ ಮಾತು ಭಾವಕ್ಕೂ, ರಸಕ್ಕೂ ನೇರವಾಗಿ ಕುದಿಯುತ್ತದೆ. ವೇದ ಇತಿಹಾಸ, ಪುರಾಣ, ಆಗಮಾದಿಗಳ ಕಥನಗಳೆಲ್ಲ ಆಧ್ಯಾತ್ಮ ಸಂಕೇತಗಳಾಗಿ ಹೊಳೆದು ಹೋಗುತ್ತವೆ. ರಸದಲ್ಲಿ ಕರ-ಗುತ್ತವೆ. ನಮಗೆ ಅವುಗಳ ಓದಿನಿಂದ ಲಭಿಸುವುದು ನಮ್ಮ ಜೀವಕ್ಕೆ ತನ್ನ ಜಾಗ್ರದವಸ್ಥೆಯಲ್ಲಿ ಏರಬಹುದಾದಷ್ಟು ಎತ್ತರದಲ್ಲಿ ದೀಪ್ತಚಿತ್ತತೆ- ಈ ಮಹೋನ್ನತ ದೇದೀಪ್ತ ಜಾಗರವನ್ನು ಅರ್ಥೈಸುವದು ಕಷ್ಟ. ನಿನ್ನೆ ಮೊನ್ನೆ ನಾನು 'ಶ್ರೀಮಾತೆ'ಯನ್ನೂ, 'ಹೃದಯಸಮುದ್ರ'ವನ್ನೂ ಓದುತ್ತಿದ್ದಾಗ ತುಂಬ ಸುಖಪಟ್ಟೆ, ಒಂದು ತರದ ಗುಂಗಿನಲ್ಲಿದ್ದೆ. ಪ್ರಣಯಗೀತೆಗಳನ್ನು, ಪ್ರಕೃತಿಗೀತೆಗಳನ್ನು ಓದುತ್ತಿದ್ದಾಗ ಆ ಸುಖ ಬೇರೆ. ಅದೊಂದು ತೆರದ ಆಸ್ವಾದನೆ. ಇದೊಂದು ತೆರದ ಬೀಸೊಗೆತ. ನಿಮ್ಮ ಬುದ್ಧಿಯಿದ್ದಷ್ಟು, ಓದು ಇದ್ದಷ್ಟು, ನಿಮ್ಮಿಂದ ನೀವು ಬಿಡಿಸಿಕೊಳ್ಳಬಲ್ಲ ಲಘುಮೆ ಇದ್ದಷ್ಟು ಈ ಕವನಗಳ

ಮಹಿಮೆ ನಿಮ್ಮ ಮೇಲೆ. ಮತ್ತು ಕಾವ್ಯದ ವಿಚಾರವಾಗಿ ಅವರು ಹೇಳಿರುವ ಈ ಮಾತುಗಳನ್ನು ಕೇಳಿ :

“ ವರ್ಣಕ ಕಾವ್ಯಗಳಲ್ಲಿ ವಸ್ತುಜಾತದೊಳಗಿನ ತೇಜೋಂಶವನ್ನೂ, ವಸ್ತುಕ ಕಾವ್ಯಗಳಲ್ಲಿ ಶೀಲ ಕಾರ್ಯಗಳೊಳಗಿನ ಊರ್ಜಿತ ತತ್ತ್ವವನ್ನೂ, ಭಾವಗೀತೆಗಳಲ್ಲಿ ವಿರಾಟಪುರುಷನ ಅಂತಃಕರುಣ ಶ್ರೀಮತ್ತಾದ ವಿಭೂತಿಯುತ ಸತ್ವವನ್ನೂ ಕವಿಯು ಆಸ್ವಾದಾನುಕೂಲವನ್ನಾಗಿ ಮಾಡುವನು. ” ( ಅದೇ ಪುಸ್ತಕ ಪುಟ. ೧೫ )

ಬಹು ಚೆನ್ನಾದ ಮಾತುಗಳು, ಕವಿಕರ್ಮದ ಮರ್ಮವನ್ನೇ ವಿಶದಗೊಳಿಸು-ವಂಥವು. ಎಲ್ಲ ಕವಿಗಳೂ, ವಿಮರ್ಶಕರೂ ಇವನ್ನು ಮನನ ಮಾಡುವದು ಯೋಗ್ಯ. ಬೇಂದ್ರೆಯವರ ಕೃತಿಗಳ ಪರಾಮರ್ಶೆಗೆ ತೊಡಗುವವರು ಈ ಮಾತುಗಳನ್ನು ಲಕ್ಷಿಸಬೇಕು.

ವಿಮರ್ಶೆಯ ವಿಷಯದಲ್ಲೂ ಕವಿಯ ಮಾತನ್ನು ಗಮನಿಸುವದೊಳ್ಳಿಯದು.

“ ವಿಮರ್ಶೆಗೆ ಮೂಲವು ಹೃದಯದ ಅನುಭವವು. ಬರಿ ಶಾಸ್ತ್ರದ ನಿಯಮವಲ್ಲ. ಶಾಸ್ತ್ರದಲ್ಲಿ ಮೋಸವಿದ್ದರೆ ಹೃದಯದನುಭವದಿಂದ ತಿದ್ದಬಹುದು. ಹೃದಯದಲ್ಲಿಯೇ ಮೋಸವೆನಿಸಿದರೆ ಶಾಸ್ತ್ರವೇನು ಮಾಡಬಲ್ಲದು ? ಹೃದಯವನ್ನು ಶಂಕಿಸಬಾರದು. ಅದರ ಅನುಭವವು ಸ್ವಯಂ ಪ್ರಮಾಣವಾದ ಸತ್ಯವು. ”

ಶಾಸ್ತ್ರವನ್ನೇ ಹಿಡಿದು ವಾದಿಸುವ ಹಳೆಯ ಪಂಡಿತರಿಗೆ ಬೇಂದ್ರೆಯವರ ಕವನಗಳು ಹೆಚ್ಚಾಗಿ ಹಿಡಿಸುತ್ತಿರಲಿಲ್ಲ. ನಾನು ಬಲ್ಲೆ. ಕವಿಯ ಭಾಷೆಯೆ ಈ ಪಂಡಿ-ತರ ರಸಗ್ರಹಣ ಚಾತುರಿಯನ್ನು ತಡೆದು ಬಿಡುತ್ತಿತ್ತು. ನವ್ಯ ಸಂಪ್ರದಾಯಕ್ಕೂ ಒಂದು ಶಾಸ್ತ್ರವಿರುವಂತಿದೆ. ಈ ಸಂಪ್ರದಾಯಕ್ಕೆ ಮಾರು ಹೋಗಿರುವ ವಿಮರ್ಶಕ ವೃಂದ, ಕವಿ ಆಡುನುಡಿಯಲ್ಲಿ ರಚಿಸಿರುವ ಭಕ್ತಿ ಮುಂತಾದ ಆಧ್ಯಾತ್ಮಿಕ ವಿಚಾರಗಳನ್ನೊಳಗೊಳ್ಳದ ಕವನಗಳನ್ನು ಮೆಚ್ಚುತ್ತದೆ. ಈ ಸಂಪ್ರದಾಯಕ್ಕೆ ಹಾಡಿನ ಲಯ, ಪದ್ಯದ ಛಂದಸ್ಸು ಮತ್ತು ಶಿಷ್ಟ ಭಾಷೆ, ಅದು ಶುದ್ಧ ದೇಸಿಯಾದರೂ ಅಷ್ಟಾಗಿ ಸೇರದು. ಬೇಂದ್ರೆಯವರು ಇವೆರಡು ಶಾಸ್ತ್ರ ಸಂಪ್ರದಾಯಗಳಿಗೂ ತಾವು ಅಷ್ಟಾಗಿ ಬೆಲೆಕೊಟ್ಟಂತೆ ಕಾಣಲಿಲ್ಲ. ಅವರದು ಹೃದಯ ಹೃದಯವನ್ನು ಹುಡುಕಿಕೊಂಡು ಹೋಗುವ ಬಗೆ. ಅವರ ರಚನೆಗಳಲ್ಲಿ ವಿವಿಧ ಲಯಗಳಿವೆ, ಛಂದಸ್ಸುಗಳಿವೆ, ಭಾಷಾ ರೀತಿಗಳಿವೆ. ಭಾಷೆ ಶುದ್ಧ ದೇಸಿ ಕನ್ನಡ; ರೂಪಕಾದಿ ಅಲಂಕಾರಗಳಿವೆ. ಸಂಸ್ಕೃತ ಶಬ್ದಗಳ ಬಳಕೆ ತುಂಬ ಮಿತ. ಶಿಷ್ಟ ಎಂದರೆ Standard ಕನ್ನಡವನ್ನೂ

ಧಾರವಾಡದ ತಮ್ಮ ಮನೆಮಾತಿನ ಕನ್ನಡವನ್ನೂ, ಜಾನಪದ ಕನ್ನಡವನ್ನೂ ಅವರ ರಚನೆಗಳಲ್ಲಿ ಕಾಣಬಹುದು. ಭಾಷೆ ಯಾವ ರೀತಿಯದಾದರೂ ಕವನದ ಶ್ರೇಷ್ಠತೆಗೆ ಕೊರತೆ ಇಲ್ಲ. ಏಕೆಂದರೆ ಅವೆಲ್ಲ ದೀಪ್ತಾತ್ಮನ ಚಿದೂರ್ಜೆಯ ಸ್ಫೂರ್ಜನಗಳು. "ಬಂತಿದೊ ಶೃಂಗಾರ ಮಾಸ" "ನನ್ನ ಹರಣ ನಿನಗೆ ಶರಣ," ಮುಂತಾದ ಕವನಗಳು. "ಬಂಧವಿರದೆ ಬಂಧುರ, ಸ್ವಚ್ಛಂದ ಸುಂದರ" ಎಂಬ ಬರಿ ಸಂಸ್ಕೃತವಾದರೂ ದೇಸಿ ಎನಿಸಿಕೊಳ್ಳುವ ಸಾಲುಗಳು. ಈ ರೀತಿಯವು ಒಂದು ಬಗೆ; "ಸಚ್ಚಿದಾನಂದೋಂ, ಕುಣಿಯೋಣು ಬಾರ, ಶ್ರಾವಣಾ ಬಂತು ಶ್ರಾವಣಾ, ಬೆಳುದಿಂಗಳ ನೋಡs"—ಮುಂತಾದ ಆಡುನುಡಿಯ ಕೃತಿಗಳು; "ಹುಬ್ಬಳ್ಳಿಯಾಂವ, ಮುಗಿಲ ಮಾರಿಗೆ ರಾಗರತಿಯ ನಂಜು ಏರಿತ್ತ" ಎಂಬ ಜಾನಪದ ಶೈಲಿಯ ಕವನಗಳು ವೈದಿಕ ಛಂದಸ್ಸಿನಂತೆ ಉದಾತ್ತ—ಅನುದಾತ್ತ,—ಸ್ವರಿತಗಳನ್ನು ಸಾಮಗಾನದ ಸ್ತೋಭಗಳನ್ನು ಅನುಕರಿಸುವಂತೆ ತೋರುವ ಸ್ತುತಿರೂಪವಾದ ಗೀತೆಗಳು. ಹೀಗೆ ಛಂದೋಲಯಗಳಲ್ಲಿ, ಅನೇಕ ತೆರೆದ ಮಾತುಗಳಲ್ಲಿ, ಬೇಂದ್ರೆಯವರ ಕವಿತಾಲಹರಿ ಹೊರಹೊಮ್ಮಿ ಕೇಳುವವರ ಕಿವಿಯನ್ನು ಸೆರೆಹಿಡಿಯುತ್ತದೆ. ಚಿತ್ತವನ್ನು ಚಮತ್ಕೃತಿಯಿಂದ ಗೆಲ್ಲುತ್ತದೆ. ಹೃದಯವನ್ನು ರಸದಿಂದ ಸತ್ಕರಿಸುತ್ತದೆ. ಅವರು ಬಳಸುವ ಭಾಷೆಯ ವಿವಿಧ ರೀತಿಗಳನ್ನು ನೋಡಿದರೆ ಮಾತಿಗಿಂತ ಅವುಗಳನ್ನು ಮುಂದೆ ನೂಕುವ ಮನಸ್ಸಿನ ಹದದಂತೆ, ಅದರ ಸಾಮರ್ಥ್ಯ, ಅನುಭವವೈಪುಲ್ಯ, ವಿದ್ಯಾ-ಪ್ರೌಢಿಮೆ, ಕಳಾವಂತಿಕೆ ಮತ್ತು ಕವನದ ಉಗಮಕ್ಕೆ ಪೂರ್ವಭಾವಿಯಾದ ಸದ್ಯದ ಪಡುಹದ ತೀವ್ರತೆ—ಇವು ಆ ಕವನಗಳ ಬೆಲೆಯನ್ನು ನಿಷ್ಕರ್ಷಿಸುತ್ತವೆ. ಅವರ ಶ್ರೇಷ್ಠ ಕವನಗಳಲ್ಲಿ ವಜ್ರದ ಹೊಳಪಿದೆ; ಬೆಳಕು ಬಿದ್ದಂತೆ ಅದರ ಬಣ್ಣ— ಈಗ ನೀಲಿ, ಆಗ ಹಸಿರು, ಈಗ ಕೆತ್ತಳೆ — ಆಗ ಬರಿ ಬೆಳ್ಳನೆ ಕೋರೈಸುವ ಹೊಳಪು — ಲೋಕದ ಮೇಲೆ ಅಲೌಕಿಕ ಬೆಳಕು ಚೆಲ್ಲುವ ಕವನಗಳಿವು; ಮನುಷ್ಯನಿಗೆ ತಾನು ಆತ್ಮಶಾಲಿ, ಆನಂದಮಯ ಎಂಬುದನ್ನು ನೆನಪಿಸುವಂಥವು.

ಬೇಂದ್ರೆಯವರ ಕವನಗಳನ್ನು ಓದಿ, ಕೇಳಿ ನಾನು ತುಂಬ ಸಂತೋಷ-ಪಟ್ಟಿದ್ದೇನೆ. "ಕುರುಡು ಕಾಂಚಾಣ" "ನಾನು ಬಡವಿ ಆತ ಬಡವ," "ಪಾತರಗಿತ್ತಿ ಪಕ್ಕ," "ಏಕೊ ಕಾಣೆ ರುದ್ರ ವೀಣೆ ಮಿಡಿಯುತಿರುವುದು", "ಯುಗಾದಿ", — ಹೀಗೆಯೇ 'ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸಾ' — ಈ ಕವನವನ್ನು ಕೇಳಿದಾಗ ನನ್ನ ಮನಸ್ಸು ತತ್ತರಿಸಿತು. ಅರಿವು ಕೋರೈ-ಸಿತು. ಮೈ ಜುಮ್ಮೆಂದಿತು. ಈ 'ಗಾಳಿಗೂ ಬಾಳೀವ ರೂವಾರಿ'ಯನ್ನು ಕುರಿತು ನಾನೊಂದು ಸೊನೆಟ್ಟನ್ನು ಆಗ ಬರೆದೆ. ನನ್ನ ಅವರ ಆತ್ಮೀಯತೆ ನಲವತ್ತು ವರುಷಗಳಷ್ಟು ಹಳೆಯದು. ಕಾಲ ಈ ದೃಢತೆಯನ್ನು ಕೆಡಿಸಿಲ್ಲ. ಬೇಂದ್ರೆಗೆ ಜನ

ಬೇಕು. ಅವರು ಸಹೃದಯರಾಗಿರಬೇಕು, ಅಷ್ಟೆ. ನನ್ನ ಕೇಳ್ಮೆ ಅವರ ಕಾಣ್ಕೆಗೆ ಯಾವಾಗಲೂ ಇಂಬು. ನನ್ನ ಕವನಗಳಲ್ಲಿ ನಾನು ಅರ್ಥಕ್ಕೆ ಕುದಿದರೂ ಅವರ ಕವನಗಳಲ್ಲಿ ನಾನು ಅದನ್ನು ಹುಡುಕುತ್ತಾ ಹೋಗುವದಿಲ್ಲ. ಹೋದ ವರ್ಷವೊ, ಅವರ ಹಿಂದಿನದರಲ್ಲೊ ಬಾನುಲಿಯಲ್ಲಿ ಅವರು ರಚಿಸಿ ನಿರ್ದೇಶಿಸಿದ ಗಣಪತಿಯ ಮೇಲಣ ಸಂಗೀತರೂಪಕವನ್ನು ಕೇಳಿ ಆ ಗೀತಗಳಿಗೆ ಬೆರಗಾದೆ. ಅವು ಆವಿರ್ಭವಿಸಿದಾಗ ಈ ತಿರೆಯದಲ್ಲದ ಯಾವುದೋ ಬೆಳಕು ಹೊಳೆದು ಹೋದಂತಾಯಿತು. ಬೇಂದ್ರೆಯವರ ಚೈತನ್ಯದ ಓಟ, ತರ್ಕ ಜಿಜ್ಞಾಸೆಗಳಿಗೆ ಸಿಕ್ಕುವಂತಹದಲ್ಲ. ಅವುಗಳ ಮೇಲೆ ಲಾಸ್ಯವಾಡುವ ಬಳ್ಳಿ ಬೆಳಕದು. ಅದರ ಜಾಯಮಾನ ಬೇರೆ. ಅವರ ಹಲವಾರು ರಚನೆಗಳು ಕೆರೆಯ ನೀರಿನ ತೆರೆ ಮುರಿವುಗಳ ಮೇಲೆ ಹರಿದಾಡುವ ಬೆಳಕಿನ ಗುಂಫನಗಳಂತಿವೆ. ನಮ್ಮ ಜನ ರಸಜ್ಞರು. ಬೇಂದ್ರೆ ಅತ್ಯಂತ ಜನಪ್ರಿಯ ಕವಿ. "ಯಾರಿಗೂ ಹೇಳೋಣು ಬ್ಯಾಡ" ಎಂದು ಮಗುವಿನ ಮನಸ್ಸನ್ನು ಚಿತ್ರಿಸುವ ಕವನವನ್ನು ನಮ್ಮ ಯುವಕ ವೃಂದವೊಂದು ಹಾಡುವದನ್ನು ಕೇಳಿದಾಗ ನನ್ನ ಮನಸಿಗೆ ಎಷ್ಟೊಂದು ಉಲ್ಲಾಸವಾಯಿತು! "ಕರುಳಿನ ವಚನಗಳಿಗೆ" ಸಾಟಿ ಯಾವುದು? ಆದ್ಯರ ವಚನಗಳಿಗೇ ಹೋಗಬೇಕು. (ನವ್ಯರೂ ತುಂಬ ಮೆಚ್ಚಿಕೊಳ್ಳುವ ಈ ವಚನಗಳ ಭಾಷೆಯೂ ಶಿಷ್ಟಭಾಷೆ! ದಾಸರ ಪದಗಳ ಭಾಷೆಗಿಂತ ಶ್ರೇಷ್ಠ ದರ್ಜೆಯದು!). ಅಷ್ಟೇಕೆ? "ಮೂರ್ತಿ ಮತ್ತು ಕಾಮುಕಸ್ತೂರಿ" ಎಂಬ ಸಂಗ್ರಹದಲ್ಲಿ ಬರುವ "ಅವನು–ಅವಳು" ಎಂಬ ತುಣುಕುಗಳನ್ನು ನೋಡಿ, ಬರಿ ಸನ್ನೆ ಮತ್ತು ಕೊನೆಯ ಪದದ ಅನುರಣನದಿಂದ ಸಾಗುವ ಈ ಪದ್ಯಗಳು ಎಷ್ಟು ಮೋಹಕವಾಗಿವೆ! ಒಂದು ಸಭೆಯಲ್ಲಿ ಬೇಂದ್ರೆಯವರು ಕವನವನ್ನು ವಾಚಿಸುತ್ತಿದ್ದಾಗ ನಾನು ಅವರ ಪಕ್ಕದಲ್ಲಿ ಕುಳಿತಿದ್ದೆ. ಸಭೆಯ ವ್ಯವಧಾನ ಸ್ವಲ್ಪ ಕಡಿಮೆಯಾದಂತೆ ನನಗೆ ತೋರಿತು. ಆಗ ಈ ಪದ್ಯಗಳನ್ನು ಓದಿರೆಂದು ನಾನು ಅವರಿಗೆ ಸೂಚಿಸಿದೆ. ಅವರು ಒಪ್ಪಿಕೊಂಡು ಓದತೊಡಗಿದರು. ಎಂಥ ವಾಚನ ಅದು! ಆ ಸನ್ನೆ, ಬೆರಳುಗಳ ವಿನ್ಯಾಸ, ಆ ಅಭಿನಯ, ಆ ಹೊಳಲಿನ ಪಿಸುನುಡಿ! ಸಭೆಯಲ್ಲಿ ವಿದ್ಯುತ್‌ಸಂಚಾರವಾದಂತಾಯಿತು. ಒಳ್ಳೆ ನುರಿತ ಕಲೆಗಾರ ಬೇಂದ್ರೆ, ನುಡಿಗಾರ ಮಾತ್ರವಲ್ಲ.

ಹೀಗೆಯೇ ಈ ಬರೆಹವನ್ನು ಬೆಳಸುತ್ತಾ ಹೋಗಬಹುದು. ಈ ನೂರು ವರ್ಷಗಳಲ್ಲಿ ಕನ್ನಡನುಡಿ ಅನೇಕ ದೀಪ್ತಿಗಳನ್ನು ಮೆರಿಸುತ್ತಿದೆ. ಬೇಂದ್ರೆ, ನಾಡಿನ ದೊಡ್ಡ ಬೆಳಕು. ಕವಿ, ನನ್ನ ವಿಷಯದಲ್ಲಿ ತುಂಬ ಮಮತೆ ತೋರಿಸಿದ್ದಾರೆ. ನನ್ನನ್ನು ಕುರಿತು ಒಂದು ಸೊನೆಟ್ಟನ್ನು ಬರೆದಿದ್ದಾರೆ. "ಗೋಕುಲ ನಿರ್ಗಮನ" ಕೃಷ್ಣನನ್ನು ಕುರಿತ ಬರಿ ಒಂದು ಹಾಡಿನ ಮಾಲೆಯಲ್ಲ, ಅದೊಂದು ಕವಿಯ ಕಣಸು

ಎಂಬ ಅರ್ಥದಲ್ಲಿ ಆ ಕಾವ್ಯದ ಹುರುಳನ್ನೇ ಎತ್ತಿ ತೋರಿಸುವ ಒಂದು ಇಂಗ್ಲೀಷ ಲೇಖನವನ್ನು P. E. N. ಸಂಚಿಕೆಯಲ್ಲಿ ಪ್ರಕಟಿಸಿ ನನಗೆ ತುಂಬ ಹರುಷ ತಂದಿದ್ದಾರೆ. ಧಾರವಾಡಕ್ಕೆ ಒಮ್ಮೆ ಹೋಗಿದ್ದಾಗ ಅವರ ಚಿಕ್ಕಮ್ಮನ ಮನೆಯಲ್ಲಿ ಅವರು ತಂಗಿದ್ದರು. ನಾನೂ ಒಂದು ರಾತ್ರಿ ಅಲ್ಲಿ ಕಳೆದು ಮರುದಿನ ಊಟ ಮಾಡಿ ಮರಳಿದ ನೆನಪು. ಆಗ ಗಡ್ಡ ಸ್ವಲ್ಪ ಬೆಳೆದಿತ್ತು ನನಗೆ. ಕ್ಷೌರದ ಅಂಗಡಿಗೆ ನನ್ನನ್ನು ಕರೆದುಕೊಂಡು ಹೋಗಿ, ಕ್ಷೌರ ಪೂರ್ತಿಯಾಗುವವರೆಗೂ ತಾವು ಆ ಅಂಗಡಿಯಲ್ಲಿ ಕುಳಿತಿದ್ದು, ಮನೆಗೆ ಕರೆದುಕೊಂಡು ಹೋಗಿ, ಸ್ನಾನ ಮಾಡಿಸಿ, ಸುಖಭೋಜನಾನಂತರದಲ್ಲಿ ಬೀಳ್ಕೊಟ್ಟರು. ಕೆರಳಿಸಿದಾಗ ಹೊರತು, ಬೇಂದ್ರೆಯವರಿಗೆ ತಮ್ಮ ಹಿರಿಮೆಯ ಅರಿವಿಲ್ಲದಂತೆ ತೋರುತ್ತದೆ. ಹೊನ್ನಾವರದಲ್ಲಿ ಒಂದು ರಾತ್ರಿ ಬಹು ಆತ್ಮೀಯವಾದ ಸಂಭಾಷಣೆಯಲ್ಲಿ ಇರುಳನ್ನೆ ಕಳೆದೆವು. ಮೇಲ್ಕೋಟೆಯಲ್ಲಿ ಶ್ರೀಮಾಸ್ತಿ ಮತ್ತು ಚೆನ್ನೇಗೌಡರ ಜತೆಗೆ ಇವರೂ ಸೇರಿ ಬಹು ಉಲ್ಲಾಸವಾಗಿ ಕಾಲಯಾಪನೆ ಮಾಡಿದೆವು. ಅಲ್ಲಿ ಅವರಿಗೊಂದು ಮಂತ್ರ ಹೊಳೆಯಿತಂತೆ. ನನಗೆ ಸುಮುಹೂರ್ತದಲ್ಲಿ ಅದನ್ನು ಉಪದೇಶಿಸುವುದಾಗಿ ಹೇಳಿದ್ದು ಜ್ಞಾಪಕ. ಆ ಮುಹೂರ್ತ ಇನ್ನೂ ಬಂದಿಲ್ಲ. ಅದನ್ನು ಅವರು ಈಗ ಮರೆತೂ ಇರಬಹುದು. ಹೃದಯಸಂಪನ್ನ ಮನುಷ್ಯ. ಭಾರತದ ಮತ್ತು ಕನ್ನಡದ ವಿಷಯದಲ್ಲಿ ಅತ್ಯಂತ ಭರವಸೆಯುಳ್ಳ ದೃಷ್ಟಾರ ಕವಿ.

ಒಳ್ಳೆ ಮಾತಿಗೂ ಕೆಟ್ಟ ಮಾತಿಗೂ ಸಗ್ಗುವಂಥ ವ್ಯಕ್ತಿಯಲ್ಲ ಕವಿ ಬೇಂದ್ರೆ. ಆತನಲ್ಲಿ ಸಂಸ್ಕೃತಿ ಮತ್ತು ನಾಗರಿಕತೆಗಳಿಗೆ ಮೀರಿರುವ ಒಂದು ಅಗಮ್ಯವಾದ "ಕಾಡುತನ" ಇದೆ, ಯೋಗಿಗಳಲ್ಲೂ, ಬೈರಾಗಿಗಳಲ್ಲೂ, ಅವಧೂತರಲ್ಲೂ ಕಾಣಬರುವಂಥದು. ಈ ಅಲೌಕಿಕ ತೇಜಸ್ಸು ನಮ್ಮ ನಡುವೆ ಅನೇಕ ಕಾಲ ತನ್ನ ಕಾಂತಿಯನ್ನು ಬೆಳಗುತ್ತಿರುವಂತೆ ಸಚ್ಚಿದಾನಂದ ಅನುಗ್ರಹಿಸಲಿ. ಇಂಥ ದೊಡ್ಡ ಕವಿಗಳ ಬದುಕು ನಮ್ಮ ಸಂಸ್ಕೃತಿಗೂ ಅನುಭಾವ ಪರಂಪರೆಗೂ ಒಂದು ದೊಡ್ಡ ರಕ್ಷೆ.

§ § § §

೫೦

# ಕವಿವರ ಬೇಂದ್ರೆ—ಪರಂಪರೆ

ಗೋ. ವೆಂ. ಜುಳಕಿ

" ಓಂಕಾರ ಹೊರಟತ್ತೈ ಶಂಖವನ್ನೂದಿದಂತೆ," " ತು ತೂ ತುತೂ " ಎಂದು ಕಾವ್ಯನಿರ್ಮಿತಿಯ ಪ್ರಾರಂಭದ ಸಾಲುಗಳನ್ನು ರಚಿಸಿದ ಕವಿ ಶ್ರೀ ದ. ರಾ. ಬೇಂದ್ರೆಯವರು, ಇಂದು ' ಅಂಬಿಕಾತನಯ ದತ್ತ ' ಎಂಬ ಕಾವ್ಯನಾಮದಿಂದ ಪ್ರಕಟವಾಗಿ, ಕರ್ನಾಟಕದಲ್ಲಿ ವರಕವಿಗಳೂ ಆಗಿ, ಹಿರಿಯ ಕವಿಯೆನಿಸಿಕೊಂಡಿ-ದ್ದಾರೆ. ಅವರು ತಾವು ಕವಿಗಳಾಗಿ ತಮ್ಮಷ್ಟಕ್ಕೆ ಕಾವ್ಯಯೋಗದಲ್ಲಿ ಸಿದ್ಧಿಯನ್ನು ಪಡೆಯಲಿಲ್ಲ. ತಮ್ಮ ಸಂಪರ್ಕದಲ್ಲಿ ಬಂದವರಿಗೂ, ನಿಕಟವರ್ತಿಗಳಾಗಿ ಓಲೈಸಿದ-ವರಿಗೂ ಆ ಸಿದ್ಧಿಯನ್ನು ಪಡೆಯುವ ಕಾವ್ಯಯೋಗದೀಕ್ಷೆಯನ್ನು ಕೊಟ್ಟು, ಶಿಕ್ಷಣ-ವನ್ನು ದಯಪಾಲಿಸಿರುವರು.

ಅಂದು ಬೇಂದ್ರೆಯವರ ಅದೇ ದಯಪಾಲಿಸುವಿಕೆಯೇ ಇಂದು ಬೇಂದ್ರೆ-ನಿರ್ಮಿತಿ ಸಾಹಿತ್ಯಕೇಲಿಯ ಪರಂಪಂರೆಯನ್ನುಂಟುಮಾಡಿ, ಸ್ಥಿರಪಟ್ಟವನ್ನು ಪಡೆದಿದೆ. ಈ ಪರಂಪರೆಯ ಕಾಲಖಂಡವು ಮಹಾತ್ಮಾ ಗಾಂಧಿಯುಗದಾರಂಭ ದಿಂದ — ಅಂದರೆ — ೧೯೨೦ ರಿಂದ ಇಲ್ಲಿಯ ವರೆಗೆ ಅಖಂಡವಾಗಿ, ಅವ್ಯಾಹತವಾಗಿ ಹರಿಯುತ್ತ ಬಂದಿದೆ. ಅವರ ಸ್ವಂತದ ಸಾಹಿತ್ಯ–ನಿರ್ಮಿತಿ, ಮತ್ತು ಸಾಹಿತ್ಯಕೇಲಿ ಹರಿಗಡೆಯದಿಹ ಹಳ್ಳವಾಗಿ ಕನ್ನಡ ಸಾಹಿತ್ಯೇತಿಹಾಸದಲ್ಲಿ ಅಮರಪಟ್ಟ ಗಳಿಸಿದೆ. ಅದು ವಿಶೇಷತಃ ಉತ್ತರಕರ್ನಾಟಕದಲ್ಲಿ ಎಂದು ಮುಕ್ತಮನಸಿನಿಂದ ಹೇಳಬಲ್ಲೆ.

ಕವಿ ಬೇಂದ್ರೆಯವರಿಂದ ನಿರ್ಮಿತವಾದ ಸಾಹಿತ್ಯರಚನೆ ಗೆಳೆಯರ ಗುಂಪಿನ ಸಾಹಿತ್ಯೋಪಾಸನೆಯ ರೂಪವನ್ನು ಧಾರಣ ಮಾಡಿತು. ಅದು ಕನ್ನಡಸಾಹಿತ್ಯ ದಲ್ಲಿ ವಿಶಿಷ್ಟ ಸ್ಥಾನವನ್ನಲಂಕರಿಸಿತ್ತೆಂಬ ಮಾತನ್ನು ಆ ಕಾಲದ ಸಾಹಿತ್ಯಾಭಿರುಚಿ ಯುಳ್ಳ ವಾಚಕವೃಂದದ ಸಾಕ್ಷಿಯೇ ಪುರಾವೆ ಎಂದು ತೋರಿಸಬಹುದು. ಗೆಳೆಯರ ಗುಂಪಿನವರಿಂದ ರಚಿತವಾದ ಸಾಹಿತ್ಯವೆಂದರೆ—ಅರ್ಥವಾಗದ ಸಾಹಿತ್ಯ, ಅನುಭಾವ

ಸಾಹಿತ್ಯ (Mystic)ವೆಂದೆನಿಸಿಕೊಳ್ಳುವದಕ್ಕೆ ಗುರಿಯಾಗಬೇಕಾಯಿತು. ಅದಕ್ಕಾಗಿ ಗುಂಪಿನವರ ಸಾಹಿತ್ಯನಿರ್ಮಿತಿಗೆ ಸವಿ ಬರೆದು, ಅರ್ಥಯಿಸಿಕೊಳ್ಳಲು ಹವಣಿಸಿತು. ಇದನ್ನೋದಿ ಗೆಳೆಯರ ಗುಂಪಿನ ಸಾಹಿತ್ಯದರ್ಥವನ್ನು ತಿಳಿದು ಕೊಳ್ಳಲು ಪ್ರಯತ್ನಪಡುವವರಲ್ಲಿ ಕೆಲವರು ಸವಿಯು ಇನ್ನಿಷ್ಟು ಕಗ್ಗಂಟಾಗಿದೆ ಎಂದು ಆಲಾಪಿಸಹತ್ತಿದರು. ಆದುದರಿಂದ ಇನ್ನೂ ತಿಳಿಯಾಗಲೆಂದು ಸವಿಗೆ ಸವಿಯ ತೇಪೆಯನ್ನು ಹಚ್ಚಲಾಯಿತು. ಗುಂಪಿನವರು ಅಚ್ಚಗನ್ನಡ ಶಬ್ದಗಳನ್ನು ಬಳಕೆಯಲ್ಲಿ ತರುವದಕ್ಕೋಸ್ಕರ ಮಾಡಿದ ಪ್ರಯತ್ನಕ್ಕೆ ಚೇಷ್ಟೆಯೂ ನಡೆಯದೆ ಹೋಗಲಿಲ್ಲ. ಒಳ್ಳೇ ಒಳ್ಳೇ ಶಬ್ದಗಳು ಕನ್ನಡದಲ್ಲಿದ್ದರೂ ಅವು ಸಾಹಿತ್ಯಲೋಕ ದಿಂದ ಬಹು ದೂರವಾಗಿ ಉಳಿದಿದ್ದವು. ಅವುಗಳನ್ನು ಪ್ರಚುರಪಡಿಸುವ ಮನೀಷೆ ಯಿಂದ ಗುಂಪಿನವರು ನಡೆಸಿದ ಸಾಹಸಕಾರ್ಯಕ್ಕೆ ಪ್ರೋತ್ಸಾಹನೆಯ ಮಾತೂ ಬರಲಿಲ್ಲ; ಪುಷ್ಟಿಯ ಮಾತಂತೂ ದೂರೇ ಉಳಿಯಿತು. 'ಓಂ ನಲ್' ಎಂಬ ಶಬ್ದದ ಬಳಕೆಯನ್ನು ಗೆಳೆಯರ ಗುಂಪಿನವರು ಬಳಕೆಯಲ್ಲಿ ತಂದಾಗ, ಹಲ-ಕೆಲವರು 'ಓಂ ಕಲ್' ಎಂದು ನಗೆಚೇಷ್ಟೆ ಮಾಡದೆಯೂ ಇರಲಿಲ್ಲ.

'ನಲ್' ಎಂಬ ಶಬ್ದವನ್ನು ಪ್ರೇಮವೆಂಬರ್ಥದಲ್ಲಿ ಉಪಯೋಗಿಸಿದರೆ, ಕಲ್ ಎಂಬ ರೂಪ ತಾಳಿದ ಸ್ವಾಗತವನ್ನು ಅದು ಕಂಡಿತು. ಈ ರೀತಿಯಾಗಿ ಬೇಂದ್ರೆ ಸಾಹಿತ್ಯೋಪಾಸನೆಯ ಮಾರ್ಗ ಬೆಳೆಬೆಳೆದು ಆಧುನಿಕ ಕನ್ನಡಸಾಹಿತ್ಯ ಚರಿತ್ರೆಯಲ್ಲಿ ತನ್ನ ಸ್ಥಾನವನ್ನು ಭದ್ರಗೊಳಿಸಿಕೊಂಡಿತು. ಇಂಥ ವಾತಾವರಣವಿದ್ದ ಕಾಲಕ್ಕಿಂತಲೂ ಮೊದಲು ಧಾರವಾಡದಲ್ಲಿ 'ಪ್ರಭಾತ'ವೆಂಬ ಕವನಗಳಿಗೇ ಮೀಸಲಾದ ಮಾಸಪತ್ರಿಕೆಯು ಮೈವೆತ್ತಿತ್ತು. ಈ ಪ್ರಭಾತ ಪತ್ರಿಕೆಯಲ್ಲಿ ಆಗ ಕವಿಗಳೆಂದೆನಿಸಿಕೊಂಡವರೂ ಉದಿತೋದಿತ ಹೊಸ ಹೊಸ ಕವಿಗಳು ರಚಿಸಿದಂಥ ಕವನಗಳು ಪ್ರಕಟವಾಗುತ್ತಿದ್ದವು. ಅಂಥವರಲ್ಲಿ ಶಾಂತಕವಿಗಳೂ, ಕಾವ್ಯಾನಂದರೂ (ನರಸಿಂಹಾಚಾರ್ಯ ಪುಣೇಕರ), ಕನ್ನಡ ವಾಮನರೂ (ಅಭಿನವ ಕಾಲಿದಾಸನೆಂದುಕೊಳ್ಳುತ್ತಿದ್ದ ಶ್ರೀ ಉಪೇಂದ್ರ ತೋಳಮಟ್ಟಿ) ಅಲ್ಲದೆ ಇನ್ನೂ ಹಲವಾರು ಕವಿಗಳ ಹೆಸರುಗಳೂ ಪ್ರಸಿದ್ಧವಾಗಿದ್ದವು.

ಇದೇ ಸುಮಾರಿಗೆ (೧೯೧೮) ೪ ನೆಯ ಕನ್ನಡ ಸಾಹಿತ್ಯಸಮ್ಮೇಲನವು ದಿವಂಗತ ಆರ್. ನರಸಿಂಹಾಚಾರ್ಯರ ಅಧ್ಯಕ್ಷತೆಯಲ್ಲಿ ಧಾರವಾಡದೊಳಗೆ ಜರುಗಿತು. ಆಗ ಶ್ರೀ ದ. ರಾ. ಬೇಂದ್ರೆಯವರು ಪುಣೆಯಿಂದ ಬಂದಿದ್ದರು. ಕರ್ನಾಟಕ ಕುಲ ಪುರೋಹಿತರೆಂದು ಪ್ರಖ್ಯಾತರಾದ ಆಲೂರ ವೆಂಕಟರಾಯರು 'ಈ ಬೇಂದ್ರೆ — ಈ ಹುಡುಗ — ಕವಿಯಿದ್ದಾನೆ. ಬಿ. ಎ. ಪರೀಕ್ಷೆಗೆ ಕಟ್ಟಿದ್ದಾನೆ. ಅವನು ರಚಿಸಿದ ಕವನಗಳನ್ನು ಕೇಳಿರಿ' ಎಂದು ತಮ್ಮ ಪರಿಚಿತರಿಗೆ ಪರಿಚಯಮಾಡಿ ಕೊಟ್ಟ-ರೆಂದು ನನ್ನ ಕೇಳಿಕೆ ಉಂಟು. ಆಗಲೇ ಅವರ 'ತು ತೂ ತುಹೂ' ಎಂಬ

ಕವನ ಜನರ ಕಿವಿಗೆ ಬಿದ್ದಂತೆ ತೋರುತ್ತದೆ. ಶ್ರೀ ಬೇಂದ್ರೆಯವರು ತಮ್ಮ ಕಾವ್ಯಸಸಿಯನ್ನು ಪುಣೆಯಲ್ಲಿ ನೆಟ್ಟು, ಅದರ ಬೆಳವಣಿಗೆಯನ್ನು ಧಾರವಾಡದಲ್ಲಿ ಮಾಡಿಕೊಂಡರೆಂದು ನನ್ನ ತಿಳಿವಳಿಕೆಯಾಗಿದೆ.

ಪುಣೆಯಲ್ಲಿ ಅವರಿಗೆ ಅವರ ಸುಪ್ತಚೇತನದಲ್ಲಿ ಒಡಮೂಡುತ್ತಿದ್ದ ಕಾವ್ಯ-ದೇವಿಯ ಆವಿಷ್ಕಾರಕ್ಕೆ ಪರಿಪೋಷಕವಾಗುವಂಥ ವಾತಾವರಣದಲ್ಲಿ ಅವರು ಆರಾಧಕರಾಗಿದ್ದರು. ಅಲ್ಲಿಯ ಶಾರದಾಮಂಡಲವೆಂಬ ಗುಂಪೋ ಅಥವಾ ಸಂಸ್ಥೆ-ಯೋ ಎಂಬುದೊಂದಿತ್ತು. ಅದರಲ್ಲಿರುವವರೆಲ್ಲರೂ ಶಾರದಾಉಪಾಸಕರೇ; ಸಾಹಿತ್ಯೋಪಾಸಕರೇ ಆಗಿದ್ದರು. ಆಗ ಮಹಾರಾಷ್ಟ್ರದಲ್ಲಿ ಗೋವಿಂದಾಗ್ರಜ, ಕೇಶವಸುತ, ಠೋಮರೇ ಬಾಲಕವಿ, ಮೊದಲಾದ ಕವಿಗಳು ಮರಾಠಿ ಕಾವ್ಯ ಸಾಮ್ರಾಜ್ಯದಲ್ಲಿ ಉನ್ನತೋನ್ನತ ಸ್ಥಾನವನ್ನು ಅಲಂಕರಿಸುತ್ತ ಹೊರಟಿದ್ದರು. ಅಂಥವರ ನಿಕಟ ಸಂಪರ್ಕವೂ ಬೇಂದ್ರೆಯವರ ಕಾವ್ಯೋಪಾಸನೆಗೆ ಸಾಧನೆಯನ್ನು ಒದಗಿಸಿರಬಹುದೆಂದೆಣಿಸಿದರೆ ತಪ್ಪಾದ ಮಾತೇನಲ್ಲ. ಬೇಂದ್ರೆಯವರ ಇಂಗ್ಲೀಷ ಸಾಹಿತ್ಯಾಭ್ಯಾಸವೂ ಯಾವ ವಿಧದಲ್ಲಿಯೂ ಕಡಮೆಯಾದುದಲ್ಲ. ಇಂಗ್ಲೀಷ ಕವಿ-ಗಳಲ್ಲಿ ಬೇಂದ್ರೆಯವರಲ್ಲಿದ್ದ ಪ್ರತಿಭಾಶಕ್ತಿಯನ್ನು ಓಜಸ್ವಿಯೂ ಸತ್ವಯುತವೂ ಆಗುವಂತೆ ಮಾಡಿದವರಲ್ಲಿ ಶೆಲಿ, ಕೀಟ್ಸ್ ಮತ್ತು ಬಾಯರನ್ ಕವಿಗಳೆಂದು ಅವರೇ ಹೇಳುತ್ತಿರುವುದುಂಟು. ಈ ಬಗೆಯಾಗಿ ಶ್ರೀ ಬೇಂದ್ರೆಯವರ ಬೌದ್ಧಿಕ ವಿಕಾಸವೂ ಕಲ್ಪನಾಸಂಪತ್ತೂ ಏಕತ್ರಿತವಾಗಿ, ಪರಿಪುಷ್ಟವಾಗಿ ಸಮೃದ್ಧವಾದುದರಿಂದ ಅವರಿಗೆ ಕಾವ್ಯದೇವಿಯ ಸಾಕ್ಷಾತ್ಕಾರವಾಗಿದೆಯೆಂದೇ ಅದರಿಂದ ವರಕವಿ ಎಂಬ ಸಂಬೋಧನೆಗೆ ಪಾತ್ರರಾಗಿದ್ದಾರೆ.

ಶ್ರೀ ಬೇಂದ್ರೆ ಅವರು ಪುಣೆಯ ಫರ್ಗ್ಯುಸನ್ ಕಾಲೇಜದಿಂದ ಬಿ. ಎ. ಪರೀಕ್ಷೆಗೆ ಕುಳಿತೇ ಧಾರವಾಡಕ್ಕೆ ಬಂದಿದ್ದರು. ಇನ್ನೂ ಪರೀಕ್ಷೆಯ ಪರಿಣಾಮ ಆಗಿರಲಿಲ್ಲವಾದರೂ ಆಗಿನ ವ್ಹಿಕ್ಟೋರಿಯಾ ಹೈಸ್ಕೂಲಿನಲ್ಲಿ ಶಿಕ್ಷಕನ ವ್ಯವಸಾಯ ವನ್ನು ಕೈಕೊಂಡರು. ಆಗ ಧಾರವಾಡದಲ್ಲಿ ನಿಂತವರು ಈಗಲೂ ನೆಲೆಸಿಯೇ ಇದ್ದಾರೆ. ಬೇಂದ್ರೆಯವರು ಸಖ್ಯಯೋಗದ ಕನಸನ್ನು ಎಂದಿನಿಂದ ಕಾಣುತ್ತಿದ್ದ ರೆಂಬುದನ್ನು ನನಗೆ ನಿಚ್ಚಳವಾಗಿ ಗೊತ್ತಿಲ್ಲದಿದ್ದರೂ, ಅವರು ಶಿಕ್ಷಕನ ಕೆಲಸ ಕೈಕೊಂಡ ಮೇಲೆ ಅದು ಪ್ರಕಟವಾಗುತ್ತ ಬೃಹದಾಕಾರವನ್ನು ಪಡೆಯಿತೆಂದು ಹೇಳಬಹುದು. ಅವರ ವಿದ್ಯಾರ್ಥಿವೃಂದವೇ ಈ ಸಖ್ಯಯೋಗದ ಸಾಧನೆಯ ಸ್ಥಾನವಾಯಿತೆಂದೂ ಆ ವಿದ್ಯಾರ್ಥಿಗಳೆಲ್ಲರೂ ಎಳೆಯ ಗೆಳೆಯರೆಂಬ ಅಭಿಧಾನ ತಳೆದರು. ಅಂಥ ಎಳೆಯ ಗೆಳೆಯರಲ್ಲಿ ಪ್ರಪ್ರಥಮ ಸ್ಥಾನವು ದಿವಂಗತ ಚಿದಂಬರ ಕೃಷ್ಣ ಸಗರ ಎಂಬವರಿಗೆ ಸಂದಿತು. ಈ ಮಾತನ್ನು ಶ್ರೀ ಬೇಂದ್ರೆಯವರೇ ದಿ. ಸಗರನ ಬಗ್ಗೆ ಬರೆದ ಕವನದಲ್ಲಿ ಸ್ಪಷ್ಟವಾಗಿ ಬರೆದಿದ್ದಾರೆ. ವಯೋಮಿತಿಯನ್ನು

ಲೆಕ್ಕಕ್ಕೆ ತೆಗೆದುಕೊಳ್ಳದೆ ಸಖ್ಯಯೋಗ ಹಾಗೂ ಕಾವ್ಯಯೋಗಗಳ ಕುರಿತು ಶ್ರೀ ಬೇಂದ್ರೆಯವರ ತಪಸ್ಸು ಇಂದಿಗೆ ಸಿದ್ಧಿಯನ್ನು ಪಡೆದಿದೆ ಎಂದು ಹೇಳಬಲ್ಲೆ.

ಕಾವ್ಯಯೋಗದ ದಾರ್ಶನಿಕರಾಗಿ ಶ್ರೀ ಬೇಂದ್ರೆಯವರು ಕವನರಚನೆಯನ್ನು ನಡೆಸಿಯೇ ಇದ್ದರು. ಅವರ ಕವನಗಳು ಆಗ ಅನೇಕ ಪತ್ರಿಕೆಗಳಲ್ಲಿ ಆಗಾಗ ಬರುತ್ತಿದ್ದಂತೆ ಕಾಣುತ್ತದೆ. ಆದರೆ ಪ್ರಾಕಟ್ಯವಾಗಿ ಸಂಗ್ರಹರೂಪದಿಂದ ಹೊರ ಬಂದಿರಲಿಲ್ಲ. ಶಕೆ ೧೮೪೪ (೧೯೨೨) ರಲ್ಲಿ ಶ್ರೀ ಬೇಂದ್ರೆಯವರಿಂದ ವಾರ್ಧಿಕ ಷಟ್ಪದಿಯಲ್ಲಿ ರಚಿತವಾದ 'ಕೃಷ್ಣಾಕುಮಾರಿ' ಎಂಬ ಖಂಡಕಾವ್ಯವು ಪ್ರಕಟವಾಗಿ ಹೊರಬಂದಿತು. ಧಾರವಾಡದಲ್ಲಿದ್ದ ಶಾರದಾ ಮಂಡಲದ ಸ್ಥಾಪಕರಾದ ದಿ. ವೆಂಕಟೇಶ ಭೀಮರಾವ ಆಲೂರ ಅವರು ಅದನ್ನು ಪ್ರಕಾಶನಗೊಳಿಸಿದರು. ಈ ಕೃಷ್ಣಾಕುಮಾರಿ ಖಂಡಕಾವ್ಯದಲ್ಲಿ ೨೭ ವಾರ್ಧಿಕಷಟ್ಪದಿಗಳಿದ್ದು, ಅದನ್ನು ನಕ್ಷತ್ರಮಾಲೆಯೆಂದು ಕರೆಯಲಾಗಿದೆ. ಆಗ ದಿವಂಗತ ಆಲೂರರವರು ಈ ಕವನದ ವಿಷಯವಾಗಿ "ಈ ಅರೆ ಅರಳಿದ ಮೊಗ್ಗೆಯ ಸುವಾಸನೆಯನ್ನು ಅರಸಿಕರೂ ಕೂಡ ಮೂಸಿಸಿ ಮೋದಪಡಲೆಂದು ಹಾರೈಸುವೆ" ಎಂದು ಬರೆದಿದ್ದಾರೆ. ಅದು ಅರ್ಧ ಅರಳಿದ ಮೊಗ್ಗೆಯ ಸುವಾಸನೆಯು, ಅರಸಿಕರಿಗೂ ಮೋದಪಡಿಸುವಂಥ ಶಕ್ತಿಸಂಪನ್ನವಾಗಿದೆ ಎಂದಮೇಲೆ ರಸಿಕರಿಗಂತೂ ರಸದೂಟವೇ ಆಗಿರಲಿಕ್ಕೆ ಸಾಕು. ಅರೆ ಅರಳಿದ ಈ ಮೊಗ್ಗೆ ಪೂರ್ಣ ಅರಳದೆ ಎಂದಿಗಾದರೂ ಇದ್ದೀತೇ? ಅದು ಪೂರ್ಣವರಳಿ, ಸುಳಿಗಾಳಿಗೆ ಮುಲಮುಲನೆ ಕಂಗೊಳಿಸುವಾಗ ಆ ಕವಿಯ ಸಾರ್ಥಕತೆ ಆಗದೆ ಎಂದಾದರೂ ಇದ್ದೀತೇ? ಅದು ಈಗ ಸಂಪೂರ್ಣ ಅರಳಿ ನಿಂತಿದೆ. ಅದರ ಸುಗಂಧವು ಕನ್ನಡನಾಡ ತುಂಬಿ ಹೊರಚೆಲ್ಲಿದೆ. ಭಾರತದಾದ್ಯಂತ ಪಸರಿಸಿದೆ.

ಶ್ರೀ ಬೇಂದ್ರೆಯವರ ಕಾವ್ಯನಿರ್ಮಿತಿಯಂತೂ ಎಡೆಬಿಡದೆ ಸಾಗಿಯೇ ಇದೆ. ಅದರ ಜೊತೆಗೆ ಅವರೇ ತಮ್ಮ ಕವನಗಳನ್ನು ಅಂದು ತೋರಿಸುವ ಸೊಗಸೂ ಸೊಬಗೂ ಶ್ರೋತೃವೃಂದದ ಮೇಲೆ ವಿಲಕ್ಷಣ ಪರಿಣಾಮವನ್ನು ಬೀರುತ್ತದೆ ಎಂಬ ಮಾತು ನಿಜಕ್ಕೂ ಸತ್ಯವಾದುದು. ೧೯೨೯ ನೆಯ ಇಸ್ವಿಯಲ್ಲಿ ಬೆಳಗಾಂವಿಯೊಳಗೆ ೧೫ ನೆಯ ಸಾಹಿತ್ಯಸಮ್ಮೇಲನವು ಜರುಗಿತು. 'ಶ್ರೀನಿವಾಸ' ಎಂಬ ಕಾವ್ಯನಾಮಧಾರಿಗಳಾದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು ಅಧ್ಯಕ್ಷರಾಗಿದ್ದರು.

ಈ ಸಮ್ಮೇಲನದಲ್ಲಿ ಕಾವ್ಯವಾಚನದ ಕಾರ್ಯಕ್ರಮವೂ ಒಂದು ನಡೆಯಿತು. ಆಗ ಶ್ರೀ ದ. ರಾ. ಬೇಂದ್ರೆಯವರು "ಹಕ್ಕಿ ಹಾರುತಿದೆ ನೋಡಿದಿರಾ!" ಎಂಬ ತಮ್ಮ ಕವನವನ್ನು ತಮ್ಮದೇ ಆದ ರಾಗದ ಮೋಡಿಯಲ್ಲಿ ಹಾಡಿದರು. ಆಗ ಆ ಪದ್ಯ ಸಭಿಕರ ಮೇಲೆ ಅದ್ಭುತ ಪರಿಣಾಮವನ್ನು ಬೀರಿತು. ಅದನ್ನು ಕೇಳಿಯೇ ಶ್ರೀ ಮಾಸ್ತಿಯವರು "Bendre is not only wise, but is a genious" ಎಂದು ಉದ್ಗಾರ ತೆಗೆದರಂತೆ! ಆ ನಂತರವೇ ಮಾಸ್ತಿ

ಹಾಗು ಬೇಂದ್ರೆಯವರಲ್ಲಿ ಘನಿಷ್ಠ ಸಂಬಂಧವುಂಟಾಗುತ್ತ ಹೋಯಿತೆಂದು ಹೇಳ ಬಯಸುವೆ. ಅದರ ಫಲವೇ ಏನೋ ಎಂಬಂತೆ ಶ್ರೀ ಮಾಸ್ತಿಯವರೂ ಅವರ ಹಲವು ಸ್ನೇಹಿತರೂ ಕೂಡಿಕೊಂಡು ಶ್ರೀ ಬೇಂದ್ರೆಯವರ ‘ ಗರಿ ’ ಎಂಬ ಪ್ರಥಮ ಕವನಸಂಗ್ರಹವನ್ನು ಅಚ್ಚು ಹಾಕಿಸಿಕೊಟ್ಟರು. ಇದು ಪ್ರಕಟಗೊಂಡಮೇಲೆ ಶ್ರೀ ಬೇಂದ್ರೆಯವರ ಕವನಸಂಗ್ರಹಗಳು ಪ್ರಕಟವಾಗುತ್ತ ಇಂದಿಗೆ ಇಪ್ಪತ್ತಾ-ರಕ್ಕೂ ಮಿಕ್ಕಿ ಕವನಸಂಗ್ರಹಗಳು ಕನ್ನಡ ಸಾಹಿತ್ಯದಲ್ಲಿ ಬೆಳಗುತ್ತಲಿರುವವು.

ಸಖ್ಯಯೋಗದ ಕನಸನ್ನು ಕಾಣುತ್ತಿದ್ದ ಶ್ರೀ ಬೇಂದ್ರೆಯವರು ಗೆಳೆಯರು ಗುಂಪಾಗುವದಕ್ಕೆ ಪ್ರೇರಕರಾದರೇ ಹೊರತಾಗಿ ಗುಂಪನ್ನು ಕಟ್ಟಿಯೇ ತೀರಬೇಕೆಂಬ ಪಣವನ್ನೇನು ಮಾಡಿದವರಲ್ಲ. ಅದು ತನ್ನಿಂದ ತಾನೆ ‘ ಗೆಳೆಯರ ಗುಂಪು ’ ಎಂದು ಪ್ರಕಟವಾಯಿತು. ಗೆಳೆಯನೆಂಬ ಬಗೆಗೆ ಅಹೋರಾತ್ರಿ ಚರ್ಚಿಸಿ, ಕೊನೆಯಲ್ಲಿ ಗೆಳೆಯನಾದವನೂ, ಗೆಳೆಯರ ಗೆಳೆಯನೆನಿಸಿಕೊಂಡವನೂ ಕೂಡಿಯೇ ಹತ್ತಿರ ಹತ್ತಿರ ಬರತೊಡಗಿದಂತೆ ಗೆಳೆಯರ ಗುಂಪು ನಿರ್ಮಾಣವಾಯಿತು. ಶ್ರೀ ಬೇಂದ್ರೆ ಯವರು ಯಾವುದೊಂದು ಕೆಲಸವಾಗಲಿ ಅಥವಾ ಮಾತಾಗಲಿ ಹೀಗೆ—ಹೀಗೆ ಆಗ ಬೇಕೆಂದೇ ಅನ್ನುವವರೇ ಅಲ್ಲ. ಅದು ಹೀಗಾಗಬೇಕೆಂದರೆ — ಆಗಲಿ; ಹೀಗಾಗ ಬಾರದೆಂದರೆ ಹಾಗೆಯೇ ಆಗಲಿ ಎಂದು ಅನ್ನುವ ಸ್ವಭಾವವವರದು. ಆದರೂ ‘ ಲೀಲೆಯಲಿ ಯಾವುದೂ ವಿಫಲವಲ್ಲ ’ ಎಂಬ ದೃಷ್ಟಾರರಾಗಿ ಅದರ ಕಡೆಗೆ ನೋಡತಕ್ಕವರು.

ಗೆಳೆಯರ ಗುಂಪು ಸಾಕಾರಮೂರ್ತಿಯಾದಾಗ, ಅದು ಜಯಕರ್ನಾಟಕ ಮಾಸಪತ್ರಿಕೆಯನ್ನು ಕೈಯಲ್ಲಿ ತೆಗೆದುಕೊಂಡಿತು. ಮೂರು ವರ್ಷ ಅದು ಅದರ ಕೈಯಲ್ಲಿ ಬಾಳಿತು. ಅದರ ಬಾಳು ಮುಗಿತಾಯ ಹೊಂದಿದಾಗ ಗೆಳೆಯರ ಗುಂಪು ಮೂಲೆಗುಂಪಾಯಿತೆಂಬ ಕೂಗು ಎಲ್ಲೆಲ್ಲಿಯೂ ಎದ್ದಿತು. ಗುಂಪನ್ನು ಕಟ್ಟ ಬೇಕೆಂದು ಯಾರೂ ಕಟ್ಟಲಿಲ್ಲ. ಅದು ಮೂಲೆಗುಂಪಾದಾಗ ಸಖ್ಯಯೋಗದ ಸಮಾಧಿಯೇನಾಗಲಿಲ್ಲ. ಗೆಳೆಯರೆಂಬವರು ಗೆಳೆಯರಾಗಿಯೇ ಉಳಿದರು. ಗೆಳೆ-ಗೆಳೆಯರಲ್ಲಿ ಪ್ರತಿಯೊಂದರಲ್ಲಿ ಏಕಸಾಮ್ಯತೆ ಇರಬೇಕೆಂದೇನಿಲ್ಲ. ಭಕ್ತಿಯಲ್ಲಿ ನಿಷ್ಠಾ ಭಕ್ತಿ, ವಿರೋಧ ಭಕ್ತಿಗಳೆಂಬ ಭೇದ ಎದ್ದಂತೆ ಗೆಳೆತನದಲ್ಲಿಯೂ ಮಿತ್ರತ್ವ, ಸಾಮ್ಯತೆ, ಭಿನ್ನ ಭಿನ್ನ ದೃಷ್ಟಿಯಿದ್ದರೂ ಸಖ್ಯಯೋಗಕ್ಕೆ ಯಾವುದೇ ತರದ ಚ್ಯುತಿ ಬರಲಾರದು. ಶ್ರೀ ಬೇಂದ್ರೆಯವರೇ ಮಧುರಚೆನ್ನರ ವಿಷಯವಾಗಿ ಬರೆದ ಕವನದಲ್ಲಿ ಅದನ್ನು ನಿರ್ದೇಶಿಸಿದ್ದಾರೆ :– “ ನನ್ನ ನಿನ್ನ ಬಳಿ ವಿಶಾಲ ವೃಕ್ಷ ಬೆಳೆದಿದೆ, ವಿಶ್ವ ತುಂಬಿ ಉಳಿದಿದೆ ” ಎಂದು ಹಾಡಿದುದುಂಟು. ಅಂದಮೇಲೆ ಗೆಳೆತನದ ಒಡನಾಟಕ್ಕೆ ಜಾತಿ, ಮತ, ಶಿಕ್ಷಣ, ಸ್ವಭಾವ, ವಯಸ್ಸು, ಅಸಾಮ್ಯತೆ-ಗಳು ಎಂದೂ ಅಡ್ಡ ಬರುವುದಿಲ್ಲೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಸ್ನೇಹದ

ಎರಕವೇ ಅಷ್ಟು ಗಟ್ಟಿಮುಟ್ಟಾಗಿದೆ. ಅದರಲ್ಲಿ ಬಿರುಕುಗಳು ತೋರಿಬರುವದೇ ಇಲ್ಲ.

ಕವಿವರ್ಯ ಬೇಂದ್ರೆಯವರ ಕವನಗಳು ಜನಮನದಲ್ಲಿ ನೆಟ್ಟು ಸಾರ್ಥಕತೆಯನ್ನು ಪಡೆದು, ಅವರು ಕನ್ನಡ ನಾಡಿನ ಕವಿಗಳೆಂಬ ಮೆಚ್ಚುಗೆಯನ್ನು ಪಡೆದರು. ಆದರೂ 'ಕುಣಿಯೋಣು ಬಾರs, ಹುಬ್ಬಳ್ಳಿಯಾವಾ' ಎಂಬ ಕವನಗಳನ್ನು ಬೇಂದ್ರೆಯಂಥವರು ಬರೆಯಬೇಕೇ ಎಂಬ ಟೀಕೆಗಳ ಅಪಶ್ರುತಿ ಬಾರದೆ ಹೋಗಲಿಲ್ಲ. ಅದಕ್ಕೆ ಸಮರ್ಥನೆಯನ್ನು ಮಾಡಿಕೊಳ್ಳುವ ಗೋಜಿಗೂ ಅವರು ಹೋಗಲಿಲ್ಲವಾದರೂ, ಬೇಂದ್ರೆಯವರು 'ಕುಣಿಯೋಣು ಬಾರs' ಎಂಬ ಕವನವನ್ನು ಒಂದು ವರುಷದ ವರೆಗೆ ಹಾಡುವದೇ ಇಲ್ಲೆಂದು ಭೀಷ್ಮಪ್ರತಿಜ್ಞೆಯನ್ನೇ ಮಾಡಿ-ದರು; ಅದರಂತೆ ನಡೆದೂ ಬಿಟ್ಟರೂ. ತಾನು ಮೆಚ್ಚಿದ ಕೃತಿ ಎಂಬ ಆಕಾಶವಾಣಿಯ, ಮಾಲಿಕೆಯಲ್ಲಿ ತಮ್ಮ ಸಾವಿರಾರು ಕವನಗಳಲ್ಲಿ 'ಕುಣಿಯೋಣು ಬಾರs' ಎಂಬ ಕವನವೇ ತಮಗೆ ಮೆಚ್ಚಿನ ಕವನವೆಂದು ರೇಡಿಯೋ ಭಾಷಣದಲ್ಲಿ ಅವರೇ ಹೇಳಿದ್ದುಂಟು.

ಕಾವ್ಯನಿರ್ಮಿತಿಯ ಪ್ರಯೋಗವು ಬೇಂದ್ರೆಯವರಿಗೆ ಲೀಲಾಜಾಲವೆನಿಸಿದಂತೆ ಮಾತನಾಡುವದೂ ಅವರಿಗೆ ಅಷ್ಟೇ ಸಹಜ ಸ್ವಭಾವವಾಗಿದೆ. ಮಾತು ಬಹಳ ಬೇಕು ಅವರಿಗೆ ಎಂದಿದ್ದರೂ ಆ ಮಾತಿನ ಆಳ ಬಹಳವಾದುದು. ಆ ಮಾತುಗಾರಿಕೆ ಎಲ್ಲೆಲ್ಲಿಯೋ ಸುತ್ತು ಹಾಕಿ, ಅದರ ಪಾತಾಳದಾಳವನ್ನು ಕಂಡೇ ಹೊರ-ಹೊಮ್ಮುವದು. ಅದಕ್ಕೆ ಅವರ ಮಾತಿಗೆ ಸಿಕ್ಕವರು ಕೊನೆಗೆ ಅವರು ಏನು ಹೇಳಿದರೆಂಬ ನಿಶ್ಚಿತಾರ್ಥ ತಿಳಿಯದೆ 'ಏನೋ ಹೇಳಿದರು' ಎಂದು ದುಂಡು ಸುತ್ತುತ್ತಾ-ರೆಂಬ ಮಾತು ನನ್ನ ಅನುಭವಕ್ಕೂ ಬಂದಿದೆ. ಕಾವ್ಯಯೋಗ ಸಾಧನೆಯಲ್ಲಿಯೇ ಅವರು ಮಗ್ನರಾಗಿರದೆ ನಾಡಹಬ್ಬದ ಉತ್ಸವವನ್ನು ಆಚರಿಸಲು ಮೊದಲು ಮಾಡಿದವರು ಅವರೇ ಎಂದು ಹೇಳಬಲ್ಲೆ. ಅದರಂತೆ ಜಾನಪದ ಹಾಗೂ ಹಳ್ಳಿಯ, ಬೀಸು-ಕುಟ್ಟುವ ಹಾಡುಗಳಲ್ಲಿಯ ರಸವನ್ನು ಹೀರಿ, ಕಿರಿದರೊಳಗೆ ಪಿರಿದರ್ಥವನ್ನು ಕಂಡು, ಅದೆಲ್ಲ ಬೆಳಕಿಗೆ ಬರಬೇಕೆಂಬ ಹಂಬಲತೊಟ್ಟು, ಅದರ ಉದ್ಧಾರ ಕಾರ್ಯಕ್ಕೆ ಬೇಂದ್ರೆಯವರೇ ಪ್ರಚೋದಕರಾದರೆಂದು ಹೇಳಬೇಕು. ಅಂದಿನಿಂದ ಗ್ರಾಂಥಿಕ ಸಾಹಿತಿಗಳ ದೃಷ್ಟಿ ಈ ಜಾನಪದ ಸಾಹಿತ್ಯಸಾಗರದತ್ತ ಒಲಿಯಿತೆಂದು ಹೇಳದಿರಲಾರೆ.

ಕಾವ್ಯೋಪಾಸಕರಿಗೆ, ಕವಿತ್ವಶಕ್ತಿಯಿದ್ದವರಿಗೆ ಸಹಜಸ್ಫೂರ್ತಿಯು ಉಕ್ಕಿ ಬರುವದೆಂದು ಸಾಮಾನ್ಯವಾದ ಮಾತಾಗಿದ್ದರೂ ಒಮ್ಮೊಮ್ಮೆ ಪ್ರಾಸಂಗಿಕವಾಗಿ ಅದು ಹೊರಹೊಮ್ಮುತ್ತದೆಂದು ಹೇಳಿದರೆ, ಕವಿಗಳ ಪ್ರಾಸಾದಿಕ ಗುಣಕ್ಕೆ ಗೌಣತ್ವ ಬರುತ್ತದೆ ಎಂದು ಯಾರೂ ಭಾವಿಸಿಕೊಳ್ಳಬಾರದು. ಶ್ರೀ ಬೇಂದ್ರೆಯವರ ಕವನಗಳ

ಸಂಗ್ರಹದಲ್ಲಿ ಆಯಾಯ ಕವನಗಳಿಗೆ ಸಂದರ್ಭಸೂಚಿಯನ್ನು ಕೊಡಲಾಗಿದೆ. ಆ ಸಂದರ್ಭಸೂಚಿಯು ಅವರ ಕವನಗಳ ಅರ್ಥವನ್ನು ಬಿಡಿಸಿ, ಅಂತರಂಗಿಕ ಮರ್ಮ ವೇನಿರುತ್ತದೆಂಬದನ್ನು ತಿಳಿದುಕೊಳ್ಳಲು ನೆರವಾಗುತ್ತದೆ. ಕಾಗೆಯೊಂದು ಮರದ ಕೊಂಬಿಯಲ್ಲಿ ಟಣ್ ಟಣ್ ಕುಣಿದಾಡಿದುದರ ನಿರೀಕ್ಷಣೆಯಿಂದ ಶ್ರೀ ಬೇಂದ್ರೆ ಯವರಿಗೆ ‘ ಕುಣಿಯೋಣು ಬಾರ ’ ಕವನ ರಚಿಸಲು ಕಾರಣವಾಯಿತು. ಅವರು ಸರಸಸಜ್ಜನಿಕೆಯ ಲಲಿತ ಕವನಗಳನ್ನು ಕಟ್ಟಿದ್ದಾರಲ್ಲದೆ ವ್ಯಂಗ್ಯ, ಹಾಸ್ಯ ಹಾಗು ರೌದ್ರರಸಗಳಿಂದೊಡಗೂಡಿದ ಕವನಗಳೂ ಅವರಿಂದ ಹೊರಹೊಮ್ಮಿರು ವವು.

ಕವಿಗೆ ಧೂರ್ತ ದೃಷ್ಟಿಯಿದೆ ಎಂಬುದಕ್ಕೆ ‘ ಯಾಕೊ ಕಾಣೆ ರುದ್ರವೀಣೆ ಮಿಡಿಯುತಿರುವುದು ’ ಎಂಬ ಕವನ ರಚಿಸಿದಾಗ ಆದರ ಪ್ರತಿಫಲವು ಅಂದರೆ ಗುಂಪು, ಗುಂಪಾಗಿ ಉಳಿಯಲಿಲ್ಲವೆಂಬುದು ನಮಗೆ ಗೊತ್ತಿದ್ದ ಮಾತಾಗಿದೆ. ಅವರ ‘ ನರಬಲಿ ’ ಎಂಬ ಕವನ ಅವರನ್ನು ಹಿಂಡಲಗಿ ಸೆರೆಮನೆಗೆ ಕರೆದೊಯ್ಯಲು ಕಾರಣವಾಯಿತು. ಬೇಂದ್ರೆಯವರು, ನರಬಲಿಯಾಗುತ್ತಿರುವುದನ್ನು ಕಂಡು, ಅವರ ಅಂತಃಕರಣ ಮಮ್ಮಲನೆ ಕರಗಿ, ಕಣ್ಣೀರು ಮಿಡಿದು—ನರಬಲಿ ತಪ್ಪ ಬೇಕೆಂದು ಕಾತುರತೆಯಿಂದ ಭಾವಗಳನ್ನು ವ್ಯಕ್ತಪಡಿಸಿದರೆ ಆಗಿನ ಬ್ರಿಟಿಶ್ ಸರಕಾರ ಅದನ್ನು ಅಪಾರ್ಥ ಮಾಡಿಕೊಂಡು ಅವರನ್ನು ಹಿಂಸಿಸಿತು. ಅದಕ್ಕೇ ವಿಶ್ವಕವಿ ರವೀಂದ್ರನಾಥ ಟಾಗೋರ ಅವರು ‘ ನನ್ನ ಕವನಗಳ ಅರ್ಥ ನಾನು ಏನೇ ಇಟ್ಟಿದ್ದರೂ ಓದುವ ಮಹಾಶಯರು ತಮ-ತಮಗೆ ತಿಳಿದಂತೆ ಅರ್ಥ ಮಾಡಿ ಕೊಳ್ಳುವರು ’ ಎಂದು ಉಸುರಿದ್ದಾರೆ.

ನರಬಲಿಯಿಂದ ಲಭಿಸಿದ ಈ ಹಿಂಡಲಗಿಯ ವಾಸದಲ್ಲಿ ಅಪರಾಧಿಗಳಿಗೆ ಆಹಾರ ಒದಗಿಸುವಾಗ ಹಸರಾಣಿಯ ಪಲ್ಯ ಕೊಡುತ್ತಿದ್ದರಂತೆ ! ಶ್ರೀ ಬೇಂದ್ರೆ ಯವರಿಗೆ ಪ್ರಾಸಂಗಿಕವಾಗಿ ಹಸರಾಣಿಯ ಬಗ್ಗೆ ಕವನವೊಂದನ್ನು ರಚಿಸುವ ಯೋಗ ಬಂದಿತು. ಕವಿಗಳಿಗೆ ಯಾವ ವಿಷಯವೇನು. The poetry of the earth is never dead ಎಂದು ಹೇಳುವುದಿಲ್ಲವೇ ಹಾಗೆ ಶ್ರೀ ಬೇಂದ್ರೆ ಯವರ ಪ್ರತಿಭಾಶಕ್ತಿ ಅವರಿಗೆ ಅಂಗೈನೆಲ್ಲೀಕಾಯಿಯಾಗಿದೆ ಎಂದು ನಾನು ಸಂಕೋಚವಿಲ್ಲದೆ ಈ ಸಂದರ್ಭದಲ್ಲಿ ಹೇಳಬಲ್ಲೆ.

ಶ್ರೀ ಬೇಂದ್ರೆಯವರ ಅಮಿತ ಬುದ್ಧಿಶಕ್ತಿಗೆ ತಕ್ಕಂತೆ ಅವರ ಕಲ್ಪನಾ ವಿಲಾಸದ ಪ್ರಸ್ತಾರವೂ ವೈಚಾರಿಕ ಮಂಥನದಲ್ಲಿ ಎವ್ಹರೆಸ್ಟ್ ಶಿಖರವನ್ನೇರುವಂಥ ದಾಗಿರುವದು. ಅವರ ನಿರ್ಮಿತಿಯಲ್ಲಿ ಕವನಗಳಂತೂ ಸಹಜವಾದುವಲ್ಲದೆ ನಾಟಕ, ಹರಟೆ, ವ್ಯಕ್ತಿಚಿತ್ರ ರೂಪಿತವಾಗಿರುವವು. ಅದರಂತೆ ಸಂಶೋಧನವಲ್ಲಿಯೂ ಅವರ ಕೈ ಆಡದೆ ಉಳಿದಿಲ್ಲ. ಯಾವುದೇ ಸಂಶೋಧನೆ ನಡೆದರೂ ತೀರ ನಿರ್ದಿಷ್ಟ-

ವಾಗಿ ನಿರ್ದುಷ್ಟವಾಗಿ ಯಾವ ಸಿದ್ಧಾಂತವನ್ನು ಕಟ್ಟಲಿಕ್ಕೆ ಬಾರದಿದ್ದರೂ ತರ್ಕ–ಬದ್ಧವಾಗಿ, ಸಾಧಕ–ಬಾಧಕ ಪ್ರಮಾಣಗಳನ್ನಾಧರಿಸಿ, ಅದರ ತಿರುಳನ್ನೇ ಕಂಡು ಹಿಡಿಯುವುದರಲ್ಲಿ ಅವರ ಚಾಣಾಕ್ಷತೆಯು ಕಂಡುಬರುವದು. ‘ ಚೇರ ಘಟ್ಟ ಯಾರು ’ ವಿಷಯವಾಗಿ ಅವರು ಬರೆದ ಲೇಖನವೇ ಇದಕ್ಕೆ ಸಾಕ್ಷಿಯಾಗಿದೆ.

ಶ್ರೀ ಬೇಂದ್ರೆಯವರಿಗೆ ಮೈಸೂರು ವಿಶ್ವವಿದ್ಯಾಲಯವು ನಾದಲೋಲ ಶ್ರೀ ಲಕ್ಷ್ಮೀಶನ ಜೈಮಿನಿಭಾರತವನ್ನು ಏಳುನೂರು ನುಡಿಗಳಲ್ಲಿ ಸಂಕ್ಷೇಪಿಸಿ, ಯೋಗ್ಯ ಪಾಠಾಂತರಗಳನ್ನು ಕಾಣಿಸಿ, ಸಿದ್ಧಪಡಿಸಿಕೊಡಬೇಕೆಂದು ಕೇಳಿಕೊಂಡಿತ್ತು. ಅವರು ಹಾಕಿದ ಮಿತಿಯಲ್ಲಿ ಅದನ್ನು ಪೂರೈಸಬೇಕೆಂದು ಹಲವಾರು ಜೈಮಿನಿ ಭಾರತದ ತಾಡವಾಲಿ ಹಾಗು ಕೋರೀಕಾಗದದ ಹಳೆಯ ಕೈಬರೆಹದ ಪ್ರತಿಗಳನ್ನು ದೊರಕಿಸಿದ್ದರು. ಅವುಗಳಲ್ಲಿಯೇ ಅತಿ ಶುದ್ಧವೆನಿಸಿದ, ಅಕ್ಷರಸ್ಖಾಲಿತ್ಯರಹಿತವಾದ, ತೀರ ಹಳೆಯವಾದ ೪–೫ ಪ್ರತಿಗಳನ್ನು ಆಯ್ಕೆಮಾಡಿಕೊಂಡು ಪಾಠಾಂತರ ಭೇದವನ್ನು ನಮೂದಿಸಲು ಶ್ರೀ ಬೇಂದ್ರೆಯವರು ಅಣಿಯಾದರು. ನಾನು ಮತ್ತು ಇನ್ನೊಬ್ಬರು ಅವರ ಸಹಾಯಕರಾಗಿ ಜೈಮಿನಿಯ ಹಳೆಯ ತಾಡವಾಲಿ ಹಾಗೂ ಕೋರೀಕಾಗದದ ಬರೆಹವನ್ನು ಓದತೊಡಗಿದೆವು.

ಹೀಗೆ ಪಾಠಾಂತರ ಮಾಡಿಕೊಳ್ಳುತ್ತ ಜೈಮಿನಿಯಲ್ಲಿಯ ೩೦ ನೆಯ ಸಂಧಿಯ ೨೮ ನೆಯ ನುಡಿಯ ಕೊನೆಯ ಸಾಲು ಬಂದಿತು. ಅವರಲ್ಲಿ " ಪತ್ರಿಕೆಯೊ | ಳಿಡಹಿ ಬರೆದಕ್ಕರದ ಬೀಳಿದ್ರೊಡರಿಂದೆ | ಕೆಡವುದಗ್ಗದ ಕಜ್ಜ–ಮೆಂದಾ ತರುಣಿ ತಾನದಂ ತಿದ್ದಲನುಗೈದಳು | " ಎಂದು ಸಾಮಾನ್ಯವಾಗಿ ಜೈಮಿನಿಯ ಎಲ್ಲ ಪ್ರತಿಗಳಲ್ಲಿಯೂ ಇದೆ. ಆದರೆ ಒಂದು ಪ್ರತಿಯಲ್ಲಿ ಮಾತ್ರ " ತಾತನಂ " ಎಂಬ ಪಾಠಾಂತರ ದೊರೆಯಿತು. ತಾನು ‘ ಅದಂ ’ ಎಂಬ ಸರ್ವನಾಮವನ್ನು ಹಾಕಿ ಪದ ಪೂರ್ತಿ ಮಾಡಿದ ಶಬ್ದ ತೀರ ಸಾಮಾನ್ಯವೆನಿಸಿತು. ಅದೇ ‘ ತಾತನಂ ’ ಎಂಬ ಪಾಠಾಂತರದಿಂದ ಬಹಳ ಅರ್ಥವಾಗುತ್ತದೆ ಎಂದು ಕಂಡಿತು. " ತಾತನ ಅಂದರೆ ದುಷ್ಟ ಬುದ್ಧಿಯ ದುಷ್ಟತನವನ್ನೇ ವಿಷಯೆ ತಿದ್ದಿದಳು " ಎಂಬ ಮಾತು ಬಹಳೇ ಅರ್ಥವತ್ತಾಗಿ ಕಂಡಿತು. ಅದಕ್ಕೆ ಈ ಪಾಠಾಂತರ ಸಾಧುವೆನಿಸಿ, ಅದರಿಂದ ನಿಜವಾದ ಸಂಶೋಧನೆ ದೊರೆತರೆ ಎಷ್ಟು ಆನಂದವಾಗ–ಬೇಕೋ ಅಷ್ಟು ಹರುಷವು ಅಂದು ನಮಗಾಯಿತು.

ಈ ರೀತಿಯ ವಿಲಕ್ಷಣ ಚಿಕಿತ್ಸೆಯುಳ್ಳ ಶ್ರೀ ಬೇಂದ್ರೆಯವರ ಪ್ರಾತಿಭ ಶಕ್ತಿಯ ವಿನ್ಯಾಸವು ಸಂಶೋಧನೆಯ ತಳಬುಡವನ್ನೇ ಅಲುಗಾಡಿಸಿ, ಸಾಧುಪ್ರಯೋಗಗಳನ್ನು ಕಂಡು ಹಿಡಿಯುವುದರಲ್ಲಿ ಎತ್ತಿದಕೈಯಾಗಿದೆ.

ಶ್ರೋತವ್ಯ, ಮಂತವ್ಯ, ನಿಧಿಧ್ಯಾಸಿತವ್ಯ ಮುಖಭಾವಿಗಳಾಗಿ ಚಿಂತನೀಯ ನೇತ್ರಭಂಗಿಯಿಂದ ಡಾ. ದ. ರಾ. ಬೇಂದ್ರೆಯವರು ಯಾವುದೊ ಒಂದು ವಿಷಯದ ಬಗ್ಗೆ ತಳಬುಡವನ್ನೇ ಕಾಣಬಯಸುವ ಸ್ವಭಾವದವರು. ಅಂತಲೆ ಅವರ ಲೋಕ–

ಸಂಗ್ರಹಬುದ್ಧಿಯು ವ್ಯಾಪಕವಾಗಿ ಸರ್ವೋನ್ಮೇಷಶಾಲಿಯಾಗಿ ಸಂಸ್ಕಾರಗೊಂಡಿದೆ. ಆ ಸಂಸ್ಕಾರಬಲದಿಂದಲೇ ಅವರ ಶಿಷ್ಯಬಳಗವು, ಹಿತೈಷಿಗಳ ಸಮೂಹವು ಅಪಾರವಾಗಿ ಬೆಳೆದು ನಿಂತಿದೆ. ೧೯೩೦ನೆಯ ಇಸ್ವಿಯಿಂದಲೂ ಕವಿವರ ಬೇಂದ್ರೆ-ಪರಂಪರೆಯು ಅವಿಚ್ಛಿನ್ನವಾಗಿ ಸಾಗಿ ಬಂದಿದೆ. ‘ ಸಮರಸವೇ ಜೀವನ ’ ಎಂಬ ಸೈದ್ಧಾಂತಿಕ ತತ್ತ್ವಕ್ಕೆ ಬಂದು ತಲುಪಿದ ಬೇಂದ್ರೆಯವರು ಜೀವನದಲ್ಲಿ ಬಂದೆರಗಿದ ಕಹಿ-ಸಿಹಿಗಳ ಬೇವಿನ ರಸವನ್ನು ಹೀರಿಕೊಂಡಿದ್ದರೂ ಅಮೃತಸದೃಶವಾದ ಬಾಳಿನ ಆಗುಹೋಗುಗಳ ಬಗ್ಗೆ ವಿಲಕ್ಷಣವಾದ ತಾಳ್ಮೆಯುಳ್ಳವರಾಗಿದ್ದಾರೆ. ಬೇಂದ್ರೆಯವರ ಜೀವನ, ಅವರ ಕಾವ್ಯಜೀವನಗಳು ರಸಘಟ್ಟಿಯಾಗಿ ಹೊಂದಿಕೊಂಡಿರುವವು. ಆದುದರಿಂದಲೇ ಅವರ ಕಾವ್ಯನಿರ್ಮಿತಿಯು ಕನ್ನಡಸಾಹಿತ್ಯ ಕ್ಷೇತ್ರದಲ್ಲಿ ಅಮರಪಟ್ಟದಲ್ಲಿ ನಿಂತುಕೊಂಡಿದೆ.

ಈ ಬಗೆಯಿಂದ ನೋಡುತ್ತಿರಲಿಕ್ಕೆ ಬೇಂದ್ರೆಪರಂಪರೆಯ ಇತಿಹಾಸವು ಕರ್ನಾಟಕದ ಚರಿತ್ರೆಯ ಸಂಪುಟದಲ್ಲಿ ಸದಾ ಜಾಗೃತವಾಗಿ ತೊಳಗುತ್ತಿರುವುದರಲ್ಲಿ ಸಂದೇಹವಿಲ್ಲ. ಅವರು ಈಗ ಬಾಳಿದ ೮೦ ವರುಷಗಳ ಶ್ರೀ ಬೇಂದ್ರೆಯವರು ಇನ್ನೂ ತಮ್ಮ ಕವಿದರ್ಶನದ, ದಾರ್ಶನಿಕ ತತ್ತ್ವಗಳ, ಕಲ್ಪನಾಸಾಮ್ರಾಜ್ಯದಲ್ಲಿ ವಿಹರಿಸುವ ಚೇತೋಹಾರಿಯಾದ ಹಕ್ಕಿಯಾಗಿ ಹಾಡುತ್ತಿದ್ದಾರೆ. ಹೀಗೆಯೇ ಅವರು ತುಂಬು ಆಯುಷ್ಯಪರ್ಯಂತ ಕನ್ನಡಕುಲಕ್ಕೆ ತಮ್ಮ ಕಾವ್ಯದ ಆನಂದ ಸ್ರೋತವನ್ನು ಹರಿಸಲು ಭಗವಂತನು ಅವರನ್ನು ದೀರ್ಘಾಯುಷಿಯನ್ನಾಗಿ ಮಾಡಲೆಂದು ನಾನು ಆತನಲ್ಲಿ ಬೇಡಿಕೊಳ್ಳುತ್ತೇನೆ.

ಬೇಂದ್ರೆಯವರು ಕೇವಲ ಸಾರಸ್ವತ ಕ್ಷೇತ್ರದಲ್ಲಿ ತನ್ಮಯರಾಗಿದ್ದಾರೆ ಎಂದು ತಿಳಿಯಬಾರದು. ಅವರ ಜಿಜ್ಞಾಸೆ ಸರ್ವ ವಿಷಯಗಳ ಸಕಲಾಂಗಗಳಲ್ಲಿಯೂ ಓಡಾಡುತ್ತದೆ. ಸೃಷ್ಟಿನಿರೀಕ್ಷಣೆ, ಜ್ಯೋತಿಷ್ಯ, ಸಸ್ಯಶಾಸ್ತ್ರ, ಅಧ್ಯಾತ್ಮವಿದ್ಯೆ ಮುಂತಾದವುಗಳಲ್ಲದೆ ಇತ್ತೀಚೆಗಂತೂ ಅಂಕಿ-ಸಂಖ್ಯಾಶಾಸ್ತ್ರದಲ್ಲಿ ಪ್ರಯೋಗಗಳನ್ನು ಮಾಡಿ, ಒಂದು ನಿರ್ಣಾಯಕ ಸಿದ್ಧಾಂತಕ್ಕೆ ಬಂದಂತೆ ತೋರುತ್ತದೆ. ಅವರ ಗುರುಸ್ಥಾನದಲ್ಲಿ ವಿಶ್ವಕವಿ ರವೀಂದ್ರನಾಥ ಟಾಗೋರ, ಮಹಾಯೋಗಿ ಅರವಿಂದ, ಶ್ರೀಮಾತಾ ಅವರಲ್ಲದೆ, ಎ. ಈ., ಮೆಟರಲಿಂಕ್ ಮೊದಲಾದವರಿದ್ದಾರೆ. ಶ್ರೀ ಅರವಿಂದರ ದಿವ್ಯಮಾನವತತ್ವವನ್ನು ಅರಗಿಸಿಕೊಂಡವರಲ್ಲಿ ಬೇಂದ್ರೆಯವರೂ ಒಬ್ಬರೆಂದು ಹೇಳಬಹುದು. ಅದರಂತೆ ಅವರಲ್ಲಿ ಮಾತೃಭಕ್ತಿಯು ಎಷ್ಟು ಅಪಾರವಾಗಿದೆ ಎಂಬುದಕ್ಕೆ ಅವರು ಇಟ್ಟುಕೊಂಡ ‘ ಅಂಬಿಕಾತನಯದತ್ತ ’ವೆಂಬ ಕಾವ್ಯನಾಮವೇ ಸಾಕ್ಷಿಯಾಗಿದೆ. ಆ ಹೆಸರಿನಿಂದಲೇ ಭಾರತದಾದ್ಯಂತ ಖ್ಯಾತನಾಮರಾಗಿ, ಅಜರಾಮರರಾಗಿದ್ದಾರೆ. ಅವರಿಂದ ನಡೆದುಬಂದ ಈ ಬೇಂದ್ರೆಪರಂಪರೆ ಕನ್ನಡಸಾಹಿತ್ಯ ಕ್ಷೇತ್ರದಲ್ಲಿ ಬೆಳ್ಳಿಚುಕ್ಕೆಯಾಗಿ ಎಂದಿಗೂ ಶೋಭಿಸುತ್ತಿದೆ ಎಂದು ಹೇಳಬಯಸುವೆ.

§ § § §

೫೧

# ಗೆಳೆಯರ ಗುಂಪಿನ ಶ್ರೀ ಬೇಂದ್ರೆಯವರು

ಸಿಂಪಿ ಲಿಂಗಣ್ಣ

ಡಾಕ್ಟರ್ ದ. ರಾ. ಬೇಂದ್ರೆಯವರು 'ಅಂಬಿಕಾತನಯದತ್ತ'ರೆನಿಸಿದ ಕವಿ-ಗಳು. ಕನ್ನಡನಾಡಿನ ಅದೃಷ್ಟವಂತ ದೃಷ್ಟಾರರು. ಕವಿತೆಗಳೊಡನೆ ಕವಿಗಳನ್ನೂ ನಿರ್ಮಿಸಿಕೊಟ್ಟವರು. ಸಣ್ಣಕತೆ, ಪ್ರಹಸನ, ಹರಟೆ, ಸಂಶೋಧನಗಳಲ್ಲಿ ಯಾರಿಗೂ ಕಡಿಮೆಯಿಲ್ಲದ ಪ್ರತಿಭಾಶಾಲಿಗಳು, ಅತುಲ ಅಧ್ಯಾತ್ಮಿಗಳು; ನಾಡುನುಡಿಗಳ ಕೆಚ್ಚನ್ನು ಮೈಗೂಡಿಸಿಕೊಂಡವರು. ಅಂಥ ಅತ್ಯುಚ್ಚ ಜೀವನ ಬಾಳುತ್ತಿರುವ ಶ್ರೀ ಬೇಂದ್ರೆಯವರು ನನಗೆ ಆತ್ಮೀಯ ಸಹೋದರರು ಎಂದು ಹೇಳಿಕೊಳ್ಳುವುದು ಆಶ್ಚರ್ಯದ ಸಂಗತಿ. ಶ್ರೀ ಬೇಂದ್ರೆ ಅವರು ಅದಕ್ಕೆ "ಇಂವ ನಮ್ಮವ, ಇಂವ-ನಮ್ಮವ" ಎಂದು ಸಮ್ಮತಿಸಿದಾಗಲೇ ಆ ಮಾತಿಗೆ ಸಾರ್ಥಕ್ಯವುಂಟಾಗುತ್ತದೆ.

೧೯೨೧ರ ಸುಮಾರಿಗೆ ದಿ. ಚೆನ್ನಮಲ್ಲಪ್ಪ, ನಾನು ನಮ್ಮ ಭಾಗದ ಜಾಣ ವಿದ್ಯಾರ್ಥಿಗಳೆಂದು ಹೆಸರಾಗಿದ್ದೆವು. ಯಾಕಂದರೆ ನಾವು ಮುಲ್ಕಿ ಪರೀಕ್ಷೆಯಲ್ಲಿ ಜಿಲ್ಲೆಗೇ ಮೊದಲನೆಯ ನಂಬರು ಪಡೆದಿದ್ದೆವು. ನಮ್ಮ ವಯಸ್ಸು ಆಗ ಕ್ರಮವಾಗಿ ೧೯, ೧೭. ಅಷ್ಟರಲ್ಲಿ ಹಲಸಂಗಿಯವರಾದ ಚೆನ್ನಮಲ್ಲಪ್ಪನವರ ಹಾಗೂ ಚಡಚಣ ದವನಾದ ನನ್ನ ಸಂಬಂಧವು ದರ್ಶನ, ಪರಿಚಯ, ಸಂಭಾಷಣೆ, ಸಹವಾಸಗಳನ್ನು ದಾಟಿ ಸಖ್ಯದ ಹಂತಕ್ಕೆ ಬಂದಿತ್ತು.

ಚೆನ್ನಮಲ್ಲಪ್ಪನವರು ಆಗ ಟೈಗರ್ ಎಂದು ಹೆಸರಾದ ಶ್ರೀ ಕೊಣ್ಣೂರ ಹಣಮಂತರಾಯರಲ್ಲಿ ಇಂಗ್ಲಿಷ್ ಹೇಳಿಸಿಕೊಳ್ಳುವದಕ್ಕೆ ವಿಜಾಪುರದಲ್ಲಿ ನೆಲೆಸಿದಾಗ ಅವರಿಗೆ ಶ್ರೀ ಬಿ. ಡಿ. ಅಕ್ಕಿ ಹಾಗೂ ಶ್ರೀ ಪದ್ಮರಾಜ ಹುನಗುಂದ ಮೊದಲಾದವರ ಸ್ನೇಹವುಂಟಾಯಿತು. ಆ ಸ್ನೇಹ ಆನುಷಂಗಿಕವಾಗಿ ನನಗೂ ಪ್ರಾಪ್ತವಾಯಿತು. ಆ ಹೊತ್ತಿಗೆ ಶ್ರೀ ಬೇಂದ್ರೆಯವರ ಗೆಳೆಯರ ಗುಂಪು ಧಾರವಾಡದಲ್ಲಿ ರೂಪು-ಗೊಂಡಿತ್ತು. ಅವರು ಆಗಲೇ ಕವಿಗಳೆಂದು ಹೆಸರಾಗಿದ್ದರು. ಧಾರವಾಡದ 'ಪ್ರಭಾತ'ದಲ್ಲಿ ಶ್ರೀ ಬೇಂದ್ರೆ ಅವರ ಕೆಲವು ಬಿಡಿಕವನಗಳು ಪ್ರಕಟವಾಗಿದ್ದವಲ್ಲದೆ,

'ಕೃಷ್ಣಾಕುಮಾರಿ' ಎಂಬ ಖಂಡಕಾವ್ಯವು ಪ್ರತ್ಯೇಕ ಪುಸ್ತಕವಾಗಿ ಪ್ರಕಟವಾಗಿತ್ತು. ವಿಜಾಪುರಕ್ಕೆ ಆಗಮಿಸಿದ ಬೇಂದ್ರೆ ಅವರು ಶ್ರೀ ಕೊಣ್ಣೂರ ಅವರ ಮನೆಗೂ ಬಂದು, ಅಲ್ಲಿಯ ಗೆಳೆಯರನ್ನು ಕಂಡು, ಅವರ ಸಾಹಿತ್ಯಚಟುವಟಿಕೆಗಳನ್ನು ಶ್ಲಾಘಿಸಿದರು. 'ಕೃಷ್ಣಾಕುಮಾರಿ' ಖಂಡಕಾವ್ಯವನ್ನು ನಾವೆಲ್ಲರೂ ಆಸ್ಥೆಯಿಂದ, ಉತ್ಸಾಹದಿಂದ ಓದಿದೆವು.

ವಿಜಾಪುರ ಸಾಹಿತ್ಯಸಮ್ಮೇಲನಕ್ಕೆ (೧೯೩೩) ಧಾರವಾಡದಿಂದ ಗುಂಪಿನ ಗೆಳೆಯರೆಲ್ಲರೂ ಬಂದರು. ಆ ಸಮ್ಮೇಲನದಲ್ಲಿ ದಿ. ಚೆನ್ನಮಲ್ಲಪ್ಪ ತಮ್ಮ 'ಸುಸೀತಿ-ದೇವಿ ನಿದ್ದೆ ತಿಳಿದು ಎದ್ದು ಕುಳಿತಳು' ಎಂಬ ಕವನವನ್ನು ಓದಿದರು. ದುರ್ದೈವ ದಿಂದ ನನಗೆ ಆ ಸಮ್ಮೇಲನಕ್ಕೆ ಹೋಗಲು ಸಾಧ್ಯವಾಗಲಿಲ್ಲ. ಧಾರವಾಡ-ವಿಜಾಪುರ ಗೆಳೆಯರೆಲ್ಲರೂ ಸೇರಿ ತೆಗೆಯಿಸಿಕೊಂಡ ಫೋಟೋದ ಒಂದು ಪ್ರತಿ ಮಾತ್ರ ನನ್ನ ಕಡೆಗೆ ಬಂದಿತು. ಅದರಲ್ಲಿ ಕಾಣಿಸಿಕೊಂಡವರ ಹೆಸರು, ದೆಶೆ, ಚಟುವಟಿಕೆಗಳ ಪರಿಚಯವನ್ನು ಮಾತ್ರ ಮರೆಯದೆ ಮಾಡಿಕೊಂಡೆನು.

ಕರ್ನಾಟಕ ಕುಲಪುರೋಹಿತರೆನಿಸಿದ ಶ್ರೀ ಆಲೂರ ವೆಂಕಟರಾಯರು 'ಜಯ ಕರ್ನಾಟಕ' ಎಂಬ ಬೃಹತ್ತಾದ ಮಾಸಪತ್ರಿಕೆಯನ್ನು ಆರಂಭಿಸಿದ್ದು ಅದೇ ಕಾಲ-ದಲ್ಲಿಯೇ. ಆ ಪತ್ರಿಕೆಗೆ ನಾವೆಲ್ಲರೂ ಅದೆಂಥದೋ ಲೇಖನ, ಕವನ ಕಳಿಸಲು ಆರಂಭಿಸಿದೆವು. ಶ್ರೀ ಕೊಣ್ಣೂರ ಅವರು ಕಾವ್ಯಕಲ್ಪಲತಾ ಗ್ರಂಥಮಾಲೆ-ಎಂಬ ತ್ರೈಮಾಸಿಕವನ್ನು ಹೊರಡಿಸಿದರು. ನಾನಾಗ ಜಡಚಣದಲ್ಲಿಯೇ ಇದ್ದುಕೊಂಡು ಮನೆಯ ಉದ್ಯೋಗವಾಗಿದ್ದ ನೆಯ್ಗೆಯ ಕಾಯಕವನ್ನು ಕೈಕೊಂಡಿದ್ದೆ. ಅಲ್ಲದೆ 'ವಾಗ್ವಿಲಾಸ ಭವನ', ಎಂಬ ವಾಚನಾಲಯವನ್ನು ಗೆಳೆಯರೊಡನೆ ಮಾಡಿಕೊಂಡು ಓದು-ಬರಹಕ್ಕೆ ಆಸ್ಪದ ಕೊಟ್ಟಿದ್ದೆನು. ಧಾರವಾಡದ ಗೆಳೆಯರು ಬರೆದಿಡುತ್ತಿದ್ದ ಕೈಬರಹದ 'ಕಾವ್ಯಸೇವೆ' ಎಂಬ ಪತ್ರಿಕೆಯನ್ನು ನೋಡಿ, ನಾವೂ ಒಂದೊಂದು ಪತ್ರಿಕೆಯನ್ನು ಬರೆದಿಡಲು ತೊಡಗಿದೆವು. ಹಲಸಂಗಿಯ ಶಾರದಾ ವಾಚನಾಲಯ ದಲ್ಲಿ 'ಮೊಗ್ಗೆ' ಅರಳಿತು. ಜಡಚಣದ ವಾಗ್ವಿಲಾಸಭವನದಲ್ಲಿ 'ಮುದ್ದು' ಮುಗು-ಳಿತು. ಅವೆರಡೂ ಕವಿತಾಪತ್ರಿಕೆಗಳೇ.

೧೯೩೪ರಲ್ಲಿ ನಾನು ಧಾರವಾಡದ ಟ್ರೇನಿಂಗ್ ಕಾಲೇಜಿಗೆಂದು ಆರಿಸಲ್ಪ-ಟ್ಟಾಗ, ಗೆಳೆಯರು ನನ್ನ ಕೋಣೆಯನ್ನು ಅರಸುತ್ತ ಬಂದು, ತಮ್ಮ ಪರಿಚಯ ಮಾಡಿಕೊಟ್ಟು, ನನ್ನ ಪರಿಚಯ ಮಾಡಿಕೊಂಡು ಹೋದರು. ಅವರು - ತಿವಾರಿ ಗಂಗಾಧರ, ಬೆಳಗುಂಪಕರ ರಾಮಚಂದ್ರ, ಶೀ. ಗೋ. ಕುಲಕರ್ಣಿ, ಪ್ರಹ್ಲಾದ ನರೇಗಲ್ಲ. ಇನ್ನೊಂದು ಸಾರೆ ಶ್ರೀ ರಂ. ಶಾ. ಜೋಶಿ ಮತ್ತು ಶ್ರೀ ಬೆಟಗೇರಿ

ಕೃಷ್ಣಶರ್ಮಾ ಅವರೂ ಬಂದಿದ್ದು ನೆನಪಿದೆ. ಫೋಟೋದಲ್ಲಿ ನೋಡಿದ್ದರ ಮೇಲಿಂ-
ದಲೇ ಅವರವರ ಹೆಸರುಗಳನ್ನೆಲ್ಲ ಹೇಳಿಬಿಟ್ಟದ್ದಕ್ಕೆ ಅವರಿಗೆ ಅತ್ಯಾಶ್ಚರ್ಯ-
ವಾಯಿತು. ಅವಕಾಶವಾದಾಗಲೆಲ್ಲ ಬೆಳಗಾಂವಕರ ಅವರ ಮನೆಗೆ ಹೋಗುತ್ತಿದ್ದೆ.
ಅವರೆಲ್ಲ ಮಾಳಮರಡಿಯಲ್ಲಿರುವ ರಾಷ್ಟ್ರೀಯವಿದ್ಯಾಲಯದ ವಿದ್ಯಾರ್ಥಿಗಳಾಗಿದ್ದರು.
ಶ್ರೀ ಬೇಂದ್ರೆಯವರೂ, ದಿ. ಖಾನೋಳಕರ ಅವರೂ ಅಲ್ಲಿಯ ಶಿಕ್ಷಕರು. ಅವರನ್ನು
ಮೊಟ್ಟಮೊದಲಿಗೆ ಕಂಡುದು ಬೆಳಗಾಂವಕರ ಅವರ ಮನೆಯಲ್ಲಿ. ಮನಸ್ಸಿಗೆ ಹತ್ತಿರ-
ದವನಾಗಿದ್ದ ನನ್ನನ್ನು ಅವರು ಮೈಗೂ ಹತ್ತಿರದವನಾಗುವಂತೆ ಮಾಡಿದರು.

ಮರುವರುಷವೇ ನಾನು ಛತ್ರಗುಣಕಿ ಗ್ರಾಮಕ್ಕೆ ಶಿಕ್ಷಕನಾಗಿ ಹೋದೆ. ಅದು
ಹಲಸಂಗಿಗೆ ಹತ್ತಿರದ ಹಳ್ಳಿ. ಚಡಚಣ ಮಾತ್ರ ಅಲ್ಲಿಂದ ೧೫ ಮೈಲು ದೂರ-
ವಾಗಿತ್ತು. ಸ್ಥಳೀಯ ಸಹಶಿಕ್ಷಕರೊಡನೆ ವಾಚನಾಲಯವೊಂದನ್ನು ಏರ್ಪಡಿಸಿ-
ಕೊಂಡಿದ್ದರಿಂದ ಹೊಸಹೊಸ ಪುಸ್ತಕ- ಪತ್ರಿಕೆಗಳನ್ನು ತರಿಸಿಕೊಂಡು ಓದಲು
ಸುಗಮವಾಯಿತು. ಆ ಸಂದರ್ಭದಲ್ಲಿ ನಾನು ಮೂರು ಅಥವಾ ಐದಂಕಿನ ಆರೆಂಟು
ನಾಟಕಗಳನ್ನು ಬರೆದೆನೆಂದು ತೋರುತ್ತದೆ. ಅವುಗಳಲ್ಲಿ 'ಬುದ್ಧದೇವ' ಎಂಬ
ನಾಟಕವನ್ನು ಮುದ್ರಿಸುವ ಆಶ್ವಾಸನವೊಬ್ಬರಿಂದ ದೊರೆತ ಕಾರಣ, ಅದಕ್ಕೆ
ಮುನ್ನುಡಿ ಬರೆಯಲು ಶ್ರೀ ಬೇಂದ್ರೆ ಅವರನ್ನು ಕೇಳಿಕೊಂಡೆ. ಅವರು ಅದಕ್ಕೆ ಒಪ್ಪಿ
ಕೊಂಡು ಬರೆದೂ ಕೊಟ್ಟರು. ಆದರೆ ಪುಸ್ತಕ ಮುದ್ರಣ ಮಾತ್ರ ಅದೇಕೋ ಆಗ
ಲಿಲ್ಲ. ಶ್ರೀ ಬೇಂದ್ರೆ ಅವರು ಆ ನನ್ನ ನಾಟಕ ಬರವಣಿಗೆಯಲ್ಲಿ ನೂರಾರು ತಪ್ಪು
ಗಳಿದ್ದರೂ ಮೂರು ಗುಣಾಂಕುರಗಳನ್ನು ತೋರಿಸಿಕೊಟ್ಟಿದ್ದರು. ಅವುಗಳಲ್ಲಿ
ನನಗಿಂದು ಎರಡೇ ನೆನಪಿನಲ್ಲಿವೆ.

೧. ಬಳಕೆಯ ಶಬ್ದಗಳನ್ನು ಬಳಸುವ ಹದ. ೨. ಹಾಸ್ಯಸಂದರ್ಭವನ್ನು
ನಿರ್ಮಿಸಿಕೊಳ್ಳುವ ಜಾಣ್ಮೆ.

೧೯೩೯-೪೦ರ ಸುಮಾರಿಗೆ 'ಜಯಕರ್ನಾಟಕ'ವನ್ನು ಗುಂಪಿನ ಗೆಳೆಯರು
ನಡೆಯಿಸತೊಡಗಿದಾಗ, ಅದರಲ್ಲಿ ಜನಪದಸಾಹಿತ್ಯ ವಿಭಾಗವು ಕಾಣಿಸಿಕೊಂಡಿತು.
ಬೀಸುಕಲ್ಲಿನ ಹಾಡು, ಡೊಳ್ಳಿನ ಹಾಡು, ಒಡಪು, ಗಾದೆ ಮೊದಲಾದ ವೈವಿಧ್ಯಗಳ
ಸಂಗ್ರಹ ಅವ್ಯಾಹತವಾಗಿ ನಡೆಯಿತು. ಜಯಕರ್ನಾಟಕ ಗ್ರಂಥಮಾಲೆಯಿಂದ
'ಗರತಿಯ ಹಾಡು' ಪ್ರಕಟವಾಯಿತು. ಎರಡುಸಾವಿರ ತ್ರಿಪದಿಸಂಗ್ರಹದಿಂದ
ಐನೂರು ಪದ್ಯಗಳನ್ನು ಮಾತ್ರ ಆರಿಸಿ ತೆಗೆಯಲಾಗಿದ್ದೇ ಗರತಿಯ ಹಾಡು.
ಶ್ರೀ ಬೇಂದ್ರೆ ಅವರ ಸಲಹೆ-ಸೂಚನೆಗಳನ್ನು ಅನುಲಕ್ಷಿಸಿಯೇ 'ಮಲ್ಲಿಗೆ ದಂಡೆ'
ಸಿದ್ಧವಾಯಿತು. 'ಜೀವನ ಸಂಗೀತ' ಅಳವಟ್ಟಿತು. ಹೀಗೆ ಹಳ್ಳಿಯ ಹಾಡಿನ
ಮೂರು ಮುಖ್ಯ ವಿಧಗಳು, ಮೂರು ಗ್ರಂಥಗಳಲ್ಲಿ ಕಾಣಿಸಿಕೊಂಡವು.

ರಾಷ್ಟ್ರೀಯ ಆಂದೋಲನದ ಕಾಲಕ್ಕೆ ನನ್ನಂತೆ ಗೆಳೆಯರೂ ಎಲ್ಲೆಲ್ಲಿಯೋ ಅಲೆದಾಡಿದರು. ೧೯೩೨ರ ಹೊತ್ತಿಗೆ ನಾನೂ ಹಲಸಂಗಿಗೇ ಶಿಕ್ಷಕನಾಗಿ ಹೋದೆ. ನನ್ನ ಮೂವತ್ತನೆಯ ಹುಟ್ಟುಹಬ್ಬದ ಕಾಲಕ್ಕೆ (೧೯೩೪) ಶ್ರೀ ಬೇಂದ್ರೆ ಅವರ ಆಶೀರ್ವಾದಪೂರ್ವಕ ಸಂದೇಶ ಬಂದಿತ್ತು. ಜ್ಞಾನ–ರಕ್ಷಾ–ಧನ–ಸೇವಾಶಕ್ತಿಗಳ ಅಗತ್ಯವನ್ನೂ, ಅವುಗಳನ್ನು ಅಳವಡಿಸಿಕೊಳ್ಳುವ ವಿಧಾನವನ್ನೂ ಸೂಚಿಸಿತ್ತು ಅವರ ಆ ಸಂದೇಶ. ಆ ಕಾಲಕ್ಕೆ ಲೆನಿನ್ ಚರಿತೆ (ಇಂಗ್ಲೀಷ್), ಮುದ್ದು ಮಗುಗಳ ಚಿತ್ರಸಂಕಲನ ಪುಸ್ತಕ ನನಗೆ ಬಳುವಳಿಯಾಗಿ ಬಂದಿದ್ದವು. ಹಲಸಂಗಿಯ ಗೆಳೆಯರಿಂದ ಸಂಪಾದಿತವಾದ 'ವಿಶ್ವಾಮಿತ್ರ' ಎಂಬ ಕೈಬರಹದ ತ್ರೈಮಾಸಿಕ ಪತ್ರಿಕೆ ಅಂದೇ ಪ್ರಕಟಗೊಳಿಸಲ್ಪಟ್ಟಿತು.

ಮರುವರ್ಷವೇ ಶ್ರೀರಾಮಕೃಷ್ಣ ಪರಮಹಂಸರ ಶತಮಾನೋತ್ಸವ. ಎರಡು ದಿನ ಕಾರ್ಯಕ್ರಮಗಳು ಬಿಡುವಿಲ್ಲದೆ ಸಾಗಿದವು. ಡಾ. ಬೇಂದ್ರೆ, ಡಾ. ಮುಗಳಿ, ಡಾ. ಕಾರಂತ ಮೊದಲಾದವರಲ್ಲದೆ, ವಿಜಾಪುರದಿಂದ ಹಾಗೂ ನೆರೆಯ ಗ್ರಾಮಗಳಿಂದ ನೂರಿನ್ನೂರು ಜನ ಸ್ನೇಹಿತರು ಬಂದಿದ್ದರು. ಶ್ರೀ ಅರವಿಂದ–ಗ್ರಂಥಮಾಲೆಯ ಮೊದಲನೆಯ ಗ್ರಂಥ 'ನಂದನವನ'ದ ಉದ್ಘಾಟನೆ ಶ್ರೀ ಬೇಂದ್ರೆ ಅವರ ಹಸ್ತದಿಂದಾಯಿತು. ಅಂದು ರಾತ್ರಿ ಪರಮಹಂಸರನ್ನು ಕುರಿತ ನಾಟಕ–ವಾಡಿದೆವು. ದಿ. ಚೆನ್ನಮಲ್ಲಪ್ಪನವರು ಶ್ರೀ ರಾಮಕೃಷ್ಣರ ಪಾತ್ರ ವಹಿಸಿದ್ದರು; ನನ್ನ ಪಾಲಿಗೆ ವಿವೇಕಾನಂದರ ಪಾತ್ರ ಬಂದಿತ್ತು.

೧೯೩೬ರಲ್ಲಿ ವಿಜಯನಗರದ ಆರನೆಯ ಶತಮಾನೋತ್ಸವ. ಕನ್ನಡ ಅಧಿ–ದೇವತೆ ಶ್ರೀ ಭುವನೇಶ್ವರಿಮಾತೆ ಹಾಗೂ ಕರ್ನಾಟಕ ಸಿಂಹಾಸನ ಸ್ಥಾಪನಾ–ಚಾರ್ಯ ಶ್ರೀ ವಿದ್ಯಾರಣ್ಯಸ್ವಾಮಿ ಇವರ ಮೇಲಿರುವ ನಮ್ಮ ಅಪಾರ ಭಕ್ತಿ–ಶ್ರದ್ಧೆಗಳ ದ್ಯೋತಕವಾಗಿ 'ಕನ್ನಡ ಕುಲಗುರು' ಎಂಬ ಗ್ರಂಥದ ಇನ್ನೂರು ಪ್ರತಿಗಳನ್ನು ಉತ್ಸವ ಕಾಲಕ್ಕೆ ಶ್ರೀ ಬೇಂದ್ರೆ ಅವರ ಹಸ್ತದಿಂದ ಹಂಚಿಸಲಾಯಿತು. ದಿ. ಚೆನ್ನ–ಮಲ್ಲಪ್ಪನವರ ಹಾಗೂ ನನ್ನ ಲೇಖನಗಳನ್ನು, ದಿ. ಕಾಪಸೆ ರೇವಪ್ಪನವರು ಬರೆದ ದೇವಿಭುವನೇಶ್ವರಿ-ವಿದ್ಯಾರಣ್ಯರ ಚಿತ್ರಗಳೊಡನೆ ಆ ಪುಸ್ತಕದಲ್ಲಿ ಸೇರಿಸಲಾಗಿತ್ತು. ಇಳಕಲ್ಲಿನ ಶ್ರೀ ಸಕ್ಕರಿ ಶಿವಶಂಕರಪ್ಪನವರು ಆ ಪುಣ್ಯಕಾರ್ಯಕ್ಕೆ ಧನಸಹಾಯ ನೀಡಿದ್ದರು.

ಶ್ರೀ ಅರವಿಂದ ಗ್ರಂಥಮಾಲೆಯಲ್ಲಿ ಶ್ರೀ ಬೇಂದ್ರೆ ಅವರಿಂದ ಅನುವಾದಿತವಾದ 'ಭಾರತೀಯ ನವಜನ್ಮ' ಎಂಬ ಶ್ರೀ ಅರವಿಂದರ ಪುಸ್ತಕವನ್ನು ಪವಣಿಸುವ ಹೊತ್ತಿಗೆ ಶ್ರೀ ಬೇಂದ್ರೆ ಅವರು ಧಾರವಾಡದಿಂದ ಸೊಲ್ಲಾಪುರಕ್ಕೆ ಬಂದು ನೆಲೆ–ಸಿದ್ದರು. ನನ್ನ ಚೊಚ್ಚಿಲಮಗಳಾದ ಭುವನೇಶ್ವರಿಯನ್ನು ಸೊಲ್ಲಾಪುರಕ್ಕೆ

ಕೊಟ್ಟಿತ್ತು. ಹಲಸಂಗಿಯಿಂದ ಸೊಲ್ಲಾಪುರವು ೬೪ ಮೈಲಿನ ಅಂತರದಲ್ಲಿದೆ. ಬಸ್‌ಸರ್ವೀಸೂ ಇತ್ತು. ಆದ್ದರಿಂದ ಅನೇಕ ಸಾರೆ ನಾವು ಸೊಲ್ಲಾಪುರಕ್ಕೆ ಹೋಗಿ ಅವರನ್ನು ಕಾಣುವದಕ್ಕೂ, ಅವರು ಅನೇಕ ಸಾರೆ ಹಲಸಂಗಿಗೆ ಬಂದು ಒಂದೆರಡು ದಿನ ನಿಂತು ಹೋಗುವದಕ್ಕೂ ಸುಗಮವಾಯಿತು. ವೈಯಕ್ತಿಕ ಪರಿಚಯ - ಬಾಂಧವ್ಯ - ಸ್ನೇಹಗಳು ಉಭಯ ಮನೆತನಗಳನ್ನೂ ವ್ಯಾಪಿಸುವದಕ್ಕೆ ದಾರಿಯಾಯಿತು.

ಸೊಲ್ಲಾಪುರದಿಂದಾಗಲಿ, ವಿಜಾಪುರದಿಂದಾಗಲಿ ಹಲಸಂಗಿಗೆ ಬರಬೇಕಾದರೆ, ಏಳಗಿ ಎಂಬ ಹಳ್ಳಿಯ ಹತ್ತರ ಇಳಿದು ೧॥ ಮೈಲು ನಡೆಯುತ್ತಲೋ, ಎತ್ತಿನ ಬಂಡಿಯಲ್ಲಿ ಕುಳಿತೋ ಬರಬೇಕಾಗುತ್ತಿತ್ತು. ಒಮ್ಮೆಯಂತೂ ಶ್ರೀ ಬೇಂದ್ರೆ ಅವರು ಏಳಗಿಗೆ ಇಳಿದು, ಕರೆಯಹೋದ ಎತ್ತಿನ ಬಂಡಿಯಲ್ಲಿ ಬಂದರೂ ಮಳೆಯಲ್ಲಿ ಸಿಕ್ಕು ತುಂಬ ತೋಯಿಸಿಕೊಂಡಿದ್ದರು. ಆವಾಗ ಮನೆಯಲ್ಲಿ ನಾನೊಬ್ಬನೇ, ಸಾಕಷ್ಟು ಬೆಂಕಿ ಮಾಡಿ ಮೈ-ಕೈ ಕಾಯಿಸಿಕೊಳ್ಳುವ ಹಾಗೂ ಬೆಚ್ಚಗಿನ ಬೇರೆ ಅರಿವೆಗಳನ್ನು ಒದಗಿಸುವ ಏರ್ಪಾಡು ಮಾಡಬೇಕಾಯಿತು.

ಶ್ರೀ ಬೇಂದ್ರೆ ಅವರಿಂದ ಆ ಸಂದರ್ಭದಲ್ಲಿ ರಚಿತವಾದ ಹೊಸ ಕವನಗಳಿಗೆ ಬಹುಶಃ ಮೊದಲ ಶ್ರೋತೃಗಳೆಂದರೆ ಹಲಸಂಗಿಯ ಗೆಳೆಯರೇ. ಗೆಳೆಯರ ಮನೆ-ತನದವರೂ, ಹತ್ತಗಡೆಯವರೂ ಆ ರಸವತ್ ಪ್ರಸಂಗವನ್ನು ಕಳಕೊಳ್ಳುತ್ತಿರಲಿಲ್ಲ. ಕವಿಯ ಬಾಯಿಂದಲೇ ಅವನ ಕವಿತೆ ಕೇಳುವುದೂ ಒಂದು ಭಾಗ್ಯವೇ. ಅಂಥ ಮಹದ್ಭಾಗ್ಯವು ನಮಗೆ ಸಹಜವಾಗಿ ದೊರಕೊಳ್ಳುತ್ತಿತ್ತು.

೧೯೪೪ರಲ್ಲಿ ರಬಕವಿ ಸಾಹಿತ್ಯಸಮ್ಮೇಲನದ ಅಂಗವಾಗಿ ಜರುಗಿದ ಸಾಹಿತ್ಯ-ಗೋಷ್ಠಿಯ ಅಧ್ಯಕ್ಷನೆಂದು ನನ್ನನ್ನು ಆರಿಸಿದರು. ನನ್ನ ಹಿಂಬಲ-ಬೆಂಬಲವಾಗಿ ಶ್ರೀ ಬೇಂದ್ರೆಯವರು ರಬಕವಿಗೆ ಹೋಗುವಾಗ ಹಲಸಂಗಿಗೆ ಇಳಿದದ್ದರಿಂದ ಅವ-ರೊಡನೆ ನಾನು ಹಾಗೂ ಹೆಂಡತಿ - ಮಗಳು ಸಮ್ಮೇಲನಕ್ಕೆ ಹೋಗಿಬರುವುದು ಸುಗಮವಾಯಿತು.

ಗೆಳೆಯರ ಗುಂಪು ಕ್ರಮೇಣ ಶ್ರೀ ಅರವಿಂದ ಮಂಡಲವಾಗಿ ಮಾರ್ಪಟ್ಟಿತು. ಅದರಿಂದ ನಮ್ಮ ಸಾಹಿತ್ಯಿಕ ಚಟುವಟಿಕೆಗಳಿಗೆ ಅಧ್ಯಾತ್ಮದಮೆರುಗು ಬರತೊಡಗಿತು. ಶ್ರೀ ಚೆನ್ನಮಲ್ಲಪ್ಪನವರಿಂದ ಆರಂಭಗೊಂಡ ಪಾಂಡಿಚೇರಿಯ ಯಾತ್ರೆಯನ್ನು ಗೆಳೆ-ಯರೂ, ಅವರ ಮನೆತನದವರೂ ಮುಂದುವರಿಸಿದರು. ಶ್ರೀಮಾತಾ ಅರವಿಂದರ ಸಾಹಿತ್ಯರಚನೆ ಮೊದಲಾಯಿತು. ಅದಕ್ಕೂ ಶ್ರೀ ಬೇಂದ್ರೆಯವರೇ ನೇತೃಗಳೆನ್ನ-ಬೇಕು. ಅವರ ಕವನ, ಹರಟೆ, ಕಥೆ ಹಾಗೂ ಜೀವನಗಳನ್ನು ಕುರಿತು ನಾನು

"ದತ್ತಸಾಹಿತ್ಯ" ಎಂಬ ರಸವಿಮರ್ಶೆ ಬರೆಯಲು, ಅದನ್ನು ಶ್ರೀ ಶೇ. ಗೋ. ಕುಲಕರ್ಣಿಯವರು ಪ್ರಕಟಗೊಳಿಸಿದರು.

ಶ್ರೀ ಅರವಿಂದ ಗ್ರಂಥಮಾಲಿ ಎರಡು ವರುಷ ಸೇವೆ ಸಲ್ಲಿಸಿದ ಬಳಿಕ ಅದನ್ನು ನಿಲ್ಲಿಸಿಬಿಡುವುದು ಅನಿವಾರ್ಯವಾಯಿತು. ಚೆನ್ನಮಲ್ಲಪ್ಪ ಅಶಕ್ತ; ಕಾಪಸೆ ರೇವಪ್ಪ ಕಾಯಿಲೆಗೀಡಾದರು. ನಾನು ಹಲಸಂಗಿಯಿಂದ ಬೇರೆಡೆಗೆ ಹೋಗಲೇ-ಬೇಕಾದ ಸಂದರ್ಭವೊದಗಿತು. ಗ್ರಂಥಮಾಲೆಗೆ ಒಂದಿಷ್ಟು ಸಾಲವಾಗಿತ್ತು. ಇದ್ದ ಮೂವರಲ್ಲಿ ನಾನೇ ಒಂದಿಷ್ಟು ಗಟ್ಟಿಗನೆಂದು ಗ್ರಂಥಮಾಲೆಯ ಪುಸ್ತಕಗಳೊಡನೆ ಸಾಲವನ್ನೂ ಹೊರಿಸಲಾಯಿತು. ಸಾಲವಿತ್ತ ಬೇಂದ್ರೆ ಅವರು ಒಂದೇ ಮಾತು ಹೇಳಿದರು— 'ಲಿಂಗಣ್ಣಾ ! ನಾನೂ ಮುಕ್ಕಳೊಂದಿಗ !' ನನಗದರ ಅರ್ಥವಾಯಿತು. ಪುಸ್ತಕದ ಅಂಗಡಿಯಲ್ಲಿ ನಮ್ಮ ಪ್ರಕಟನೆಗಳನ್ನಿರಿಸಿ, ಕಾಲಕಾಲಕ್ಕೆ ಹಣ ವಸೂಲು ಮಾಡಿ, ಶ್ರೀ ಬೇಂದ್ರೆಯವರ ನಾಲ್ಕೈದು ನೂರು ರೂಪಾಯಿಗಳನ್ನು ಮುಟ್ಟಿಸಿ-ದ್ದಾಯಿತು. ಆದರೆ ಏಕಕಾಲಕ್ಕೆ ಕೊಡಲು ಸಾಧ್ಯವಾಗದೆ, ೨-೩ ವರುಷಗಳ ಅವಧಿ ಹಿಡಿಯಿತು, ಪೂರ್ಣ ಸಾಲ ತೀರಲಿಕ್ಕೆ.

ಗುಂಪಿನ ಗೆಳೆಯರಾದ ಪಿ. ಧೂಲಾ, ಕಾಪಸೆ ಮೊದಲಾದವರು ಅಗಲಿದರು. ನನ್ನ ಕೈಹಿಡಿದವಳು ಅದೇ ಸಂದರ್ಭದಲ್ಲಿ ಗತಿಸಿದಳು. ನಾನು ನನ್ನೂರಾದ ಚಡ-ಚಣಕ್ಕೆ ಬಂದುಬಿಟ್ಟೆ. ಶ್ರೀ ಚೆನ್ನಮಲ್ಲಪ್ಪನವರೂ ದಿವಂಗತರಾದರು. ಬಸವಣ್ಣ ಅಲ್ಲಮಪ್ರಭುಗಳ ರೀತಿಯಲ್ಲಿ ಆ ಅಗಲಿಕೆ ಒಬ್ಬರಿಗಾದರೆ, ಅರ್ಜುನ – ಶ್ರೀಕೃಷ್ಣರ ರೀತಿಯಲ್ಲಿ ಆ ಅಗಲಿಕೆ ಇನ್ನೊಬ್ಬರಿಗಾಯಿತು. ಚಡಚಣಕ್ಕೆ ಬಂದ ಕೆಲವೇ ವಾರಗಳಲ್ಲಿ ಶ್ರೀ ಜೇರಂಕಲಗಿ ಗುರುಪಾದಪ್ಪ ದೇಹವಿಟ್ಟರು. ಹಲಸಂಗಿ – ಚಡಚಣಗಳಲ್ಲಿ ಶ್ರೀ ಅರವಿಂದ ಮಂಡಲಗಳು ಶ್ರೀ ಚೆನ್ನಮಲ್ಲಪ್ಪನವರಿಗೆ ಪ್ರಿಯವಾದ ಆಧ್ಯಾತ್ಮಿಕ ಕಾರ್ಯವನ್ನು ಸಾಧ್ಯವಾದ ರೀತಿಯಲ್ಲಿ ಮುಂದುವರಿಸಿಕೊಂಡು ಸಾಗಿದವು.

ಆ ಬಳಿಕ ಸಹ ಬೇಂದ್ರೆ ಅವರು ಹಲಸಂಗಿಗೆ ಭೆಟ್ಟಿಯಿತ್ತಂತೆ, ಚಡಚಣಕ್ಕೆ ಭೆಟ್ಟಿಯೀಯುವುದನ್ನು ನಿಲ್ಲಿಸಲಿಲ್ಲ. ಒಮ್ಮೆ ಅವರು ನನಗಂದಿದ್ದು ನೆನಪಿದೆ— "ಚೆನ್ನಮಲ್ಲಪ್ಪನ ಸ್ಥಳದಲ್ಲಿ ಈಗ ನೀನಿರುವಿ". ಆದರೆ ಅವರು ಯಾವ ಅರ್ಥದಲ್ಲಿ ನುಡಿದರೋ, ನಾನಾವ ಅರ್ಥವನ್ನು ಗ್ರಹಿಸಿದೆನೋ ಸ್ಪಷ್ಟವಾಗಲಿಲ್ಲ.

ಯಾವುದೋ ಕಾರ್ಯಕ್ರಮದ ಸಲುವಾಗಿ ನಾನು ಗುಲಬರ್ಗಾಕ್ಕೆ ಹೋದಾಗ ನನ್ನ ಪರಿಚಿತ ಸ್ನೇಹಿತರ ಕೋಣೆಯಲ್ಲಿ ತಂಗಿದ್ದೆನು. ಆ ಸ್ನೇಹಿತರು B.Ed. ವಿದ್ಯಾರ್ಥಿಗಳು. ನನ್ನ ಹೆಸರು ಕೇಳಿ ಹತ್ತೆಂಟು ಜನ B.Ed ವಿದ್ಯಾರ್ಥಿಗಳು ಸೇರಿದರು. ಸಾಹಿತ್ಯವಿಷಯವು ಮಾತುಕತೆಯಲ್ಲಿ ಮೊಳೆತು ದಾಂಗುಡಿಯಿಟ್ಟಿತು.

ಇಂದಿನ ಕವಿತೆ, ಇಂದಿನ ಕವಿಗಳನ್ನು ವಿವಿಧವಾಗಿ ಅಳೆಯತೊಡಗಿತು. ಆ ವಿದ್ಯಾರ್ಥಿಗಳಲ್ಲೊಬ್ಬರು ಅಭಿಮಾನಾವೇಶಪೂರಿತರಾಗಿ– "ಕವಿಯೆಂದರೆ ಕುವೆಂಪು, ಅವರ ಮುಂದೆ ಇನ್ನಾರೂ ಕವಿಗಳಲ್ಲ. ಬೇಂದ್ರೆಯವರು ಸಹ ಕವಿ ಅಲ್ಲ. ಕುವೆಂಪು ಅವರ ಕವಿತೆಗಳ ಮುಂದೆ ಬೇಂದ್ರೆ ಅವರ ಕವಿತೆ ಏನೂ ಅಲ್ಲ." ಎಂದು ಆರ್ಭಟಿಸಿದರು. ಕೆಲಹೊತ್ತು ಅದೇ ಚರ್ಚೆ ನಡೆಯಿತು. "ಕವಿಯೆಂದರೆ ಕುವೆಂಪು" ಎಂಬ ಮಾತೇ ಸರ್ವಸಮ್ಮತವಾಯಿತು. ನಾನು ಅವರ ಚರ್ಚೆಯನ್ನೆಲ್ಲ ಕೇಳುತ್ತ ಸುಮ್ಮನೆ ಕುಳಿತಿದ್ದೆ. ನಡುವೆ ಬಾಯಿ ಹಾಕಿದ್ದಿಲ್ಲ. ಕೊನೆಯದಾಗಿ ನನಗೆ ಕೇಳಿದರು— "ನೀವೇನೆನ್ನುವಿರಿ ಈ ಮಾತಿಗೆ?"

ಅದೇ ಮೌನವನ್ನು ನಾನು ಮುಂದುವರಿಸಿದೆ. ಅವರು ಬಿಡಲಿಲ್ಲ, ಕೆಣಕೆಣಕಿ ಕೇಳತೊಡಗಿದರು— "ಈ ಬಗ್ಗೆ ನಿಮ್ಮ ಅಭಿಪ್ರಾಯವೇನು ತಿಳಿಯಲಿ! ಏನೆನ್ನುವಿರಿ, ಕವಿ ಎಂದರೆ ಕುವೆಂಪು–ಎಂಬ ಮಾತಿಗೆ?"

"ನಾನೂ ಅದೇ ಅನ್ನುತ್ತೇನೆ ಕವಿಯೆಂದರೆ ಕುವೆಂಪು."

"ಬೇಂದ್ರೆ ಅವರು?"

"ಅವರು ಕವಿಯೇ ಅಲ್ಲ!" ನಾನೆಂದೆ.

"ಹಾಗಾದರೆ ಅವರೇನು?"

"ಅವರು ದ್ರಷ್ಟಾರರು!" ಎಂದಾಗಲೇ ಅವರೆಲ್ಲರೂ ತೆಪ್ಪಗಾಗಿ ಕುಳಿತರು. ನಾನು ಮುಂದುವರಿಸಿದೆ—

"ಕವಿಗಳಲ್ಲಿ ಎರಡು ವಿಧ. ಅಂತರಾತ್ಮನ ಉಪಾಸಕರು; ಅಧ್ಯಾತ್ಮದ ಉಪಾಸಕರು. ವಾಲ್ಮೀಕಿಯ ವರ್ಗ ಒಬ್ಬರದು, ವ್ಯಾಸರ ವರ್ಗ ಇನ್ನೊಬ್ಬರದು. ಶರಣವೃಂದದಲ್ಲಿಯೂ ಎರಡು ವಿಧ ಕಂಡುಬರುತ್ತಿವೆ. ಬಸವಣ್ಣನ ಜಾತಿ, ಪ್ರಭುದೇವರ ಜಾತಿ. ಅಂತರಾತ್ಮನಿಂದ ಚಿಮ್ಮುವ ಬುಗ್ಗೆಯಂತೆ ಬಸವಣ್ಣನ ವಚನಗಳು ಸುಲಭ, ಸರಳ. ಅಧ್ಯಾತ್ಮದಿಂದ ಇಳಿದು ಬರುವ ಜಲಧಾರೆಯಂತೆ ಪ್ರಭುದೇವರ ವಚನಗಳು ತಿಳಿಯೆಂದರೂ ಸುಗಮವಲ್ಲ. ಅಂತೆಯೇ ಪ್ರಭುವಿನ ವಚನಗಳನ್ನು ಓದಿ ಆನಂದಪಡುವವರಿಗಿಂತ, ಬಸವಣ್ಣನವರ ವಚನಗಳನ್ನೋದಿ ಆನಂದಪಡುವವರ ಸಂಖ್ಯೆ ಹೆಚ್ಚು. ಅದೇ ಕಾರಣದಿಂದ ಕುವೆಂಪು ಅವರ ಕವನಗಳು ತೀವ್ರವೇ ಆನಂದವನ್ನೆರೆಯುತ್ತವೆ. ಬೇಂದ್ರೆ ಅವರ ಕವನಗಳು ಒಮ್ಮೆಲೆ ಅಗಾಧಗೊಳಿಸುತ್ತವೆ. ಅಗಿದಗಿದು ಸವಿದಂತೆ ಆನಂದ ಸೂಸತೊಡಗುತ್ತದೆ."

ನನ್ನ ಮಾತು ಆ ಪದವೀಧರ ವಿದ್ಯಾರ್ಥಿಗಳಿಗೆ ಸಮಾರೋಪಕ ಭಾಷಣ-ವಾಗಿ ಪರಿಣಮಿಸಿತು.

*   *   *   *

ಬುದ್ಧದೇವರನ್ನು ಕುರಿತ ಕನ್ನಡಸಾಹಿತ್ಯವು ಯಾರಾರಿಂದ, ಯಾವ-ಯಾವಾಗ, ಎಷ್ಟೆಷ್ಟು ನಿರ್ಮಾಣವಾಗಿದೆಯೆನ್ನುವ ಒಂದು ದೀರ್ಘಲೇಖನವು ಪುಸ್ತಕರೂಪದಿಂದ ಪ್ರಕಟವಾದಾಗ ಶ್ರೀ ಬೇಂದ್ರೆ ಅವರು ಅದನ್ನು ವಿವೇಚಿಸುತ್ತ ಅದರಲ್ಲಿ ಸೇರಬೇಕಾದ ಎರಡು ಮಾತುಗಳನ್ನು ನೆನಪಿಗೆ ತಂದುಕೊಟ್ಟರು— ೧. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಸಿಂಪಿ ಲಿಂಗಣ್ಣನವರು ಬರೆದ ಬುದ್ಧದೇವ ನಾಟಕ. ೨. ಶ್ರೀ ನಾ. ವೆಂ. ಕುರಡಿ ಅವರು ಬರೆದ ಬುದ್ಧನನ್ನು ಕುರಿತ ಕವನ.

ಸಾಹಿತ್ಯಸಮ್ಮೇಲನ ಕಾಲಕ್ಕೆ ಅಗಲಿದ ಸಾಹಿತಿಗಳನ್ನು ಸ್ಮರಿಸಿ ದುಃಖಸೂಚಕ ಗೊತ್ತುವಳಿ ತರುವಾಗ, ಮರೆತುಬಿಟ್ಟ ಹೆಸರುಗಳನ್ನು ಸೂಚಿಸಿ ಆ ಯಾದಿಯನ್ನು ಪೂರ್ಣಗೊಳಿಸುವವರು ಶ್ರೀ ಬೇಂದ್ರೆ ಅವರೇ. ದಿ. ಕಾಪಸೆ ರೇವಪ್ಪನವರ ಹೆಸರು ಹಾಗೆ ಬೇಂದ್ರೆ ಅವರಿಂದ ಸೂಚಿತವಾದದ್ದೆಂದು ನನಗೆ ನೆನಪಿದೆ. ಮನೆತನಕ್ಕೆ ಸರ್ವಹೊಣೆಹೊತ್ತ ಹಿರಿಯರಿದ್ದಂತೆ, ಕನ್ನಡ ಸಾಹಿತ್ಯಪ್ರಪಂಚಕ್ಕೆ ಹೊಣೆಗಾರಿಕೆ-ಯರಿತು ಕೆಲಸ ಮಾಡುವುದು ಶ್ರೀ ಬೇಂದ್ರೆ ಅವರಿಗೆ ಮೈಗೂಡಿಬಂದ ಸ್ವಭಾವ-ವಾಗಿದೆ.

ದಿ. ಮಧುರಚೆನ್ನರನ್ನು ಕುರಿತು ಬರೆಯುವಾಗ–"ಬಾಗಿಲಕೋಟೆಯ ಸಾಧ-ನೆಯ ಕಥೆಯು 'ನನ್ನ ನಲ್ಲ'ದಲ್ಲಿ ಉದ್ಯಾಪನ ಕಂಡಿತ್ತು. 'ಏಳವ್ವಾ, ಮಲಗಿರುವ ತಾಯಿಪೃಥಿವಿ' ಗೆಳೆಯ ಹಾಡಿದ; ಹದಮಾಡಿದ ಸುತ್ತು ಹರದಾರಿ. ಗೆಳೆಯ ಸಿಂಪಿ ಲಿಂಗಣ್ಣನ ಸಾಧನೆಯೂ ಅದರ ಮುಂದಿನ ಹಂತ." ಎನ್ನುವ ಮಾತಿನಲ್ಲಿ ಅವರ ಪರಿಪೂರ್ಣ ಆತ್ಮೀಯತೆಯ ದೃಷ್ಟಿ ಕಂಡುಬರುವದಿಲ್ಲವೇ?

ಹನ್ನೆರಡು ವರ್ಷಗಳಿಂದ ನಡೆಸುತ್ತ ಬಂದಿರುವ ಗ್ರಂಥಮಾಲೆಯ ಸಲುವಾಗಿ ನಾನು ಪಾಂಡಿಚೇರಿಯ ಆಶ್ರಮದ ಶ್ರೀತಾಯಿಯವರ ಆಶೀರ್ವಾದವನ್ನು ಮೊದಲು ಪಡೆದು ಆ ಮೇಲೆ, ಸಲಹೆ ಪಡೆಯುವ ಸಲುವಾಗಿ ಮೂವರು ಮಹನೀಯರನ್ನು ಆರಿಸಿಕೊಂಡಿದ್ದೇನೆ. ಅವರಲ್ಲಿ ಶ್ರೀ ದ. ರಾ. ಬೇಂದ್ರೆ ಅವರೂ ಒಬ್ಬರು. ಅವರು ಚಡಚಣದ ಶ್ರೀ ಅರವಿಂದರ ಗ್ರಂಥಾಲಯದ ಪ್ರಕಟನೆಗಳನ್ನು ಅವಲೋಕಿಸಿ ಕಾಲ ಕಾಲಕ್ಕೆ ಸೂಕ್ತ ಸಲಹೆಗಳನ್ನಿತ್ತು ಮುನ್ನಡೆಸಿಕೊಂಡು ಬಂದಿದ್ದಾರೆ. ಇಂಥ ಸಲಹೆ ಗಳು ಆತ್ಮೀಯ ಸಹೋದರರಿಗೆ ಸಾಧ್ಯವಲ್ಲದೆ ಉಳಿದವರಿಗೆ ಸಾಧ್ಯವಿಲ್ಲ.

ನನ್ನ ಹಲವು ಕೃತಿಗಳಿಗೆ ಶ್ರೀ ಬೇಂದ್ರೆ ಅವರು ಮುನ್ನುಡಿ ನೀಡಿದ್ದಾರೆ— ೧. ಶ್ರೀ ಅರವಿಂದರು, ೨. ಕನ್ನಡ ಕುಲದೀಪ ಬಸವಣ್ಣ, ೩. ಸಿಡಿಲು ಸನ್ಯಾಸಿ. ಅದರಂತೆ ನನ್ನ ಮಗಳು ಸೌ. ಭುವನೇಶ್ವರಿ ಬರೆದ 'ಕರುಳಿನ ಕರೆ' ಎಂಬ ಕಥಾಸಂಕಲನಕ್ಕೆ ಆಶೀರ್ವಾದಪರ ಮುನ್ನುಡಿ ದಯಪಾಲಿಸಿದ್ದಾರೆ. ನನ್ನ 'ಸ್ವರ್ಗದೋಲೆಗಳು' ಕೃತಿಯು ಶ್ರೀ ಬೇಂದ್ರೆ ಅವರಿಗೆ ಅರ್ಪಿತವಾಗಿದೆ.

ಅವರು ಮುನ್ನುಡಿಯಲ್ಲಿ ಬರೆದದ್ದು—

"ಸ್ವಾಮಿ ವಿವೇಕಾನಂದರು ಲಿಂಗಣ್ಣನವರ ಅಂತರಾತ್ಮದಲ್ಲಿ, ಶ್ರೀ ರಾಮಕೃಷ್ಣ ಪರಮಹಂಸರು ದಿ. ಮಧುರಚೆನ್ನರ ಜೀವನದಲ್ಲಿ ಪ್ರತಿಷ್ಠೆಗೊಂಡಿದ್ದ ಮಾತು ಬಹಳ ಹಳೆಯದು. ಮುಂದೆ ಇಬ್ಬರೂ, ಶ್ರೀ ಅರವಿಂದರು ಮತ್ತು ಶ್ರೀಮಾತೆಯವರು ಇವರಿಬ್ಬರಿಗೆ ಹೃದಯಾರ್ಪಣ ಮಾಡಿದ್ದುದು ಇತಿಹಾಸ. ಇಂದಿನಾಡಿನಲ್ಲಿ ಅವರಿಬ್ಬರೂ, ಇವರಿಬ್ಬರ ಕಾರ್ಯವನ್ನೂ ರೂಪುಗೊಳಿಸುತ್ತಲಿದ್ದಾರೆ. ತತ್ವಚಿಂತನದಷ್ಟೇ ಚರಿತ್ರಚಿಂತನೆಯೂ, ಅದನ್ನು ಖಡ್ಗಧಾರೆಯಿಂದ ನಿಶಿತವಾಗಿ ಮೂಡಿಸುವುದೂ ಲಿಂಗಣ್ಣನವರ ಜೀವನಸೂತ್ರವೇ ಆಗಿದೆ. ಸ್ವಾಮಿ ವಿವೇಕಾನಂದರ ತಾಯಿ ಭುವನೇಶ್ವರಿ: ಲಿಂಗಣ್ಣನವರ ಮಗಳೂ ಭುವನೇಶ್ವರಿ. ತಂದೆಯ ಜೀವನಸೂತ್ರವನ್ನೇ ಜಪಮಾಲೆ ಮಾಡಿಕೊಂಡಿದ್ದಾಳೆ. ಯಾರೂ ವಿವೇಕಾನಂದರ ಜೀವನನಾಟಕ ಬರೆದರೆ, ಲಿಂಗಣ್ಣನವರು ಆ ಪಾತ್ರವಹಿಸಲು ತಕ್ಕ ಆಸಾಮಿ ಎಂದು ಅವರನ್ನು ಕಣ್ಣಾರೆ ಕಂಡವರು ಒಪ್ಪಿಕೊಳ್ಳಬಹುದು. ಒಬ್ಬ ಹಳ್ಳಿಯ ಹುಡುಗನು ಶ್ರೀ ಅರವಿಂದರ ಪೂರ್ಣಯೋಗಾಧಿದೇವತೆಯಾದ ಶ್ರೀಮಾತೆಯವರ ಪಾದದವರೆಗೆ ಯಾತ್ರೆ ಮಾಡಿ, ಅದನ್ನು ಜೀವನಯೋಗದ ರಾಜಮಾರ್ಗ ಮಾಡಿಕೊಂಡಿದ್ದು ಸಣ್ಣ ಮಾತಲ್ಲ. ಇದಕ್ಕೆ ವಿಘ್ನ ಬರದಿರಲಿ. ಬಂದರೆ ಶ್ರೀಮಾತೆಯವರು ಅದನ್ನು ನಿವಾರಿಸಲಿ. ಈ ನೈಮಿತ್ತಿಕ ಗ್ರಂಥವು ಲೇಖಕರ ನಿತ್ಯಚಿಂತನದ ಬಹುದಿನದ ಫಲ ಎಂಬುದು ಪುಟಪುಟದಲ್ಲಿಯೂ ಮೂಡಿದೆ. ಬುದ್ಧಸತ್ತ್ವದ ನಾಟಕವನ್ನು ಲೇಖಕರು ಜೀವನಾರಂಭದಲ್ಲಿಯೇ ರೂಪಿಸಿದ್ದು ನನ್ನ ನೆನಪಿಗೆ ಬರುತ್ತದೆ. ತಾವು ಇಂಥ ಕೆಲಸ ಮಾಡುತ್ತ, ಇತರ ತರುಣರಿಂದಲೂ ಮಾಡಿಸುತ್ತಿರುವ ಈ ಕುಸ್ತಿಯಗಡಿಯು ಜೀವನದ ಕಣದಲ್ಲಿ ಸೌಹಾರ್ದದ ಸಾಮರ್ಥ್ಯ ಬೆಳೆಸುತ್ತ ಅಂಥ ಬೀಜಗಳ ಉತ್ಪಾದನೆಗೂ, ಸಂಗ್ರಹಕ್ಕೂ ಕಾರಣರಾಗಲಿ. ಗೆ. ಲಿಂಗಣ್ಣನವರೂ ಸಿಡಿಲಿನ ಮರಿಯೇ. ಈ ಸಿಂಪಿನೊಳಗೆ ಇನ್ನೂ ಯಾವ ಯಾವ ಮಿಂಚಿನ ಮುತ್ತು ಮೂಡುತ್ತಿವೆಯೋ ? ಎಲ್ಲಕ್ಕೂ ಸ್ವಾಗತವಿದೆ."

ಇಲ್ಲಿ ಬೇಂದ್ರೆಯವರ ಆತ್ಮೀಯ ಸಹೋದರತೆಯ ದಿಗ್ದರ್ಶತೆ, ನಿರೀಕ್ಷಣೆ, ಆಶೀರ್ವಾದ, ಹರಕೆ, ಹಿಂಬಲ ಇವೆಲ್ಲವೂ ಒಳಗೊಂಡಿದ್ದು ಕಂಡುಬರುವದಿಲ್ಲವೇ?

ಸೌ. ಭುವನೇಶ್ವರಿಯ 'ಕರುಳಿನಕರೆ'ಯ ಮುನ್ನುಡಿಯಲ್ಲಿ ಬಂದುದೇನೆಂದರೆ—

'ಗೆಳೆಯರಾದ ಮಧುರಚೆನ್ನ, ಧೂಲಾ, ರೇವಪ್ಪ ದಿವಂಗತರ ಸಾಲಿಗೆಸಾಲೇ ಮಿಂಚಿಹೋಗುತ್ತದೆ. ಚೆನ್ನಮಲ್ಲಪ್ಪನವರ ತಾಯಿ, ಲಿಂಗಣ್ಣನ ಹೆಂಡತಿ, ಧೂಲಾನ ಅಣ್ಣ ! ಯಾರಿಗೆ ಯಾರು ಹತ್ತಿರ? ದೂರ? ಗೆ. ಲಿಂಗಣ್ಣನ ಮಗಳು ಚಿ. ಸೌ|| ಭುವನೇಶ್ವರಿಯ ಸಂಸಾರಪಟದ ಮೇಲಿನ ಚದುರಂಗದಾಟ ಸೊಲ್ಲಾಪುರದಷ್ಟು ಹತ್ತಿರದ ಸಹಾನುಭೂತಿಯಿಂದ ಕಂಡ ನನಗೆ ಈ ಕಥೆಗಳನ್ನೋದುವಾಗ 'ಜೀವನ್ ಭದ್ರಾಣಿ ಪಶ್ಯತಿ' ಎಂಬ ಸುಭಾಷಿತವು ಹೃದಯದಲ್ಲಿ ಹೊಳಲು ಹೊಡೆಡುತ್ತದೆ. ಗೆ. ಮಧುರಚೆನ್ನರ ಮಗಳು ಸರೋಜಿನಿ, ಗೆ. ಲಿಂಗಣ್ಣನ ಮಗಳು ಭುವನೇಶ್ವರಿ, ನನ್ನ ಮಗಳು ಮಂಗಳಗೌರಿ,ಹೆಚ್ಚುಕಡಿಮೆ ಒಂದು ದಶಕದೊಳಗಿನವರು, ನಮ್ಮ ಸುಖ-ದುಃಖದ ಪಾಲನ್ನುಂಡವರು. ನಮ್ಮ ಸಾಹಿತ್ಯ ನಿರ್ಮಿತಿಯಲ್ಲಿ ಇವರು ತಮ್ಮ ಪಾತ್ರವಾಡಿದ್ದಾರೆ. ಆ ಕಥೆ ಬಯಲಿಗಾಡುವುದು ಸುಕರವಲ್ಲ. ಅದಕ್ಕೆ ಕಾಲ ಕಳೆಯಬೇಕು.

"ಲಿಂಗಣ್ಣನ ಮಾತಿನ ಮುತ್ತಿನಸರ ಮಗಳೂ ಪವಣಿಸಿದ್ದಾಳೆ....ಇಲ್ಲಿಯ ಕಥನಶೈಲಿ, ಸಮಕಾಲಿಕ ಸಾಹಿತ್ಯ-ಸಂಸ್ಕೃತಿಗಳಿಂದ ರಂಜಿತವಾಗಿದೆ. ಇದು ಬರಿಯ ಜಾನಪದವಲ್ಲ. ಹೃದಯವಿಸ್ತಾರವಂತೂ ನವಯುಗದ ಬಾಗಿಲ ತೆಗೆದು ರಂಗವಲ್ಲಿ ಹಾಕಿದಂತಿದೆ ಸ್ವಾಗತಕ್ಕೆ ! ಮನೆಕಟ್ಟುವ ಹದವನ್ನು ಬಲ್ಲ ಹೃದಯವಂತಿಯರು ಮುಂದೆ ಬರಬೇಕು. ಕನ್ನಡ ಕಥೆ-ಕಾದಂಬರಿಗಳನ್ನು ಸಂಪನ್ನಗೊಳಿಸುವವರ ಸಾಲಿಗೆ ನಮ್ಮ ಈ ಬಳಗದ ಮಗಳು ಸೇರಿ, 'ಮಾತೃಶಕ್ತಿ'ಯ ಪಲ್ಲವಿಗೆ ಹೊಸನುಡಿ ಜೋಡಿಸುತ್ತಿದ್ದಾಳೆ. ಕನ್ನಡದ ಹೃದಯ ಇಂಬುಗೊಡಲಿ."

ಈ ಎಲ್ಲ ಒಳುನುಡಿಗಳು ಅನಿಮಿತ್ತ ಬಂಧುವೊಬ್ಬರ ಆತ್ಮೀಯ ಸಹೋದರತೆಯ ಒಳ್ನುಡಿಗಳಾಗಿಲ್ಲವೇ? ಒಂದೇ ಮನೆತನ ಭಾವನೆಯ ನಂದಾದೀವಿಗೆಯಂತಿಲ್ಲವೇ ಈ ವಿಚಾರಪ್ರದೀಪ?

§ § § §

೫೨

# ಬೇಂದ್ರೆಯವರ ವ್ಯಕ್ತಿತ್ವ

ಗೊರೂರು ರಾಮಸ್ವಾಮಿ ಅಯ್ಯಂಗಾರ

ಶ್ರೀಮಾನ್ ಬೇಂದ್ರೆಯವರನ್ನು ಕಾಣದವರು ಕರ್ನಾಟಕದಲ್ಲಿ ಯಾರೂ ಇಲ್ಲ. ಅವರ ಕವಿತೆಯನ್ನು ಅರಿಯದ ಕನ್ನಡಿಗರು ಭಾರತದಲ್ಲಿಯಾಗಲಿ, ಜಗತ್ತಿನಲ್ಲಿಯಾಗಲಿ ಇಲ್ಲ. ಯುದ್ಧಕ್ಕೆ ಮುಂಚಿತವಾಗಿ ಜರ್ಮನಿಗೆ ಹೋಗಿ ಹಿಂದಿರುಗಿದ ನಮ್ಮ ಮಿತ್ರರೊಬ್ಬರು ಆಗ ಜರ್ಮನಿಯಲ್ಲಿದ್ದ ಕನ್ನಡಿಗರಿಗೆಲ್ಲಾ 'ಬೇಂದ್ರೆಯವರು ಪ್ರಸಿದ್ಧ ಕವಿ' ಎಂಬುದು ಗೊತ್ತಾಗಿದ್ದಿತೆಂದು ಹೇಳುತ್ತಾರೆ. ಹಿಂದೀ, ಮರಾಠಿ, ಇಂಗ್ಲೀಷು, ಬಂಗಾಳಿ ಎಲ್ಲಾ ಭಾಷೆಗಳ ಪತ್ರಿಕೆಗಳೂ ಇವರನ್ನು ಕುರಿತ ವಿಮರ್ಶಾತ್ಮಕ, ಪ್ರಶಂಸಾತ್ಮಕ ಲೇಖನಗಳನ್ನು ಪ್ರಕಟಿಸಿವೆ.

ಕರ್ನಾಟಕದ ಹಾದಿಗಳೆಲ್ಲಾ ಶ್ರೀಮಾನ್ ಬೇಂದ್ರೆಯವರ ನಡಿಗೆಯಿಂದ ಸವೆದಿವೆ. ಇವರು ಕನ್ನಡನಾಡಿನ ಮೂಲೆ ಮೂಲೆಗಳನ್ನೂ ತಿರುಗಿದ್ದಾರೆ. ಇವರ ತೇಜಃಪುಂಜವಾದ ಮುಖವನ್ನು ಒಂದು ಸಲ ನೋಡಿದರೆ ಸಾಮಾನ್ಯವಾಗಿ ಮರೆಯುವದು ಸಾಧ್ಯವಿಲ್ಲ. ವಿಶಾಲವಾದ ಹಣೆ; ಎತ್ತರವೂ ಕುಳ್ಳೂ ಅಲ್ಲದ ದೇಹ; ಹಾಸ್ಯದಿಂದಲೂ 'ಚಕಮಕ ಚಂಚಲ'ದಿಂದಲೂ ಜ್ಯೋತಿಯ ಕಿಡಿಯಂತೆ ಹೊಳೆಯುವ ಕಣ್ಣುಗಳು, ತಲೆಯ ಮೇಲೇರಿಸಿದ ಖಾದಿ ಅಗಿವೆಯ ಟೋಪಿ; ಮುಖದಲ್ಲಿ ಒಂದು ವಿಧವಾದ ಧೈರ್ಯ, ಕೆಚ್ಚು, ತ್ಯಾಗ, ಅನಾಸಕ್ತಿ; ಈ ಪ್ರಪಂಚವನ್ನು ಮರೆತು ಎಲ್ಲಿಯೋ ವಿಹರಿಸುತ್ತಿರುವಂತಹ ದೂರದ ನೋಟ; ಬೇರೆ ಯಾವುದೋ ಉತ್ತಮವಾದ ಲೋಕಕ್ಕೆ ಸೇರಿದವನು ಒಂದು ಗಳಿಗೆ ಬಂದು ನಮ್ಮಲ್ಲಿ ಮಿಳಿತವಾಗುತ್ತಿದ್ದಾನೇನೋ ಎಂಬ ಗಂಭೀರವಾದ ಯೋಗಿಯ ಮುಖಭಾವ. ಈ ನೈಜವಾದ ಗುಣಗಳಿಂದ ಬೇಂದ್ರೆಯವರು ಸ್ವಾಭಾವಿಕವಾಗಿ ಎಲ್ಲರ ಗಮನವನ್ನೂ ಎಳೆಯುತ್ತಾರೆ. ಅವರ ಸಾನ್ನಿಧ್ಯದಲ್ಲಿರುವಾಗ ಒಂದು ಅದ್ಭುತವಾದ, ಸಾತ್ವಿಕವಾದ, ಸ್ವಚ್ಛವಾದ ಶಕ್ತಿಯು ಎದುರಿಗೆ ಇರುವ ಮನೋಭಾವ ನಮಗೆ ಉಂಟಾಗುತ್ತದೆ.

ಬೇಂದ್ರೆಯವರ ಪ್ರಸಿದ್ಧಿ ಅವರು ಹೋಗುವದಕ್ಕಿಂತ ಮುಂಚೆ, ಎಲ್ಲಾ ಕಡೆಗೂ ಹೋಗುತ್ತದೆಯಾದರೂ ಅವರನ್ನು ಮುಖತಃ ನೋಡಿದ ಕೂಡಲೇ ಅವರ ಪ್ರಸಿದ್ಧಿ ಅವರ ಯೋಗ್ಯತೆಗಿಂತ ಅತ್ಯಂತ ಕಡಿಮೆ ಎಂದು ಗೊತ್ತಾಗುತ್ತದೆ. ಅವರ ಕಾವ್ಯಗಳಿಗಿಂತ ಅವರು ಹಿರಿಯರು. ಅವರನ್ನು ನೋಡಿದವರಿಗೆ 'ಎಲ್ಲಿಯೋ ಒಂದು ಸ್ಫೂರ್ತಿಯ ಗಳಿಗೆಯಲ್ಲಿ ಇವರಿಂದ ಕಾವ್ಯ ಹೊರಟು ಬಿಟ್ಟಿದೆ' ಎಂಬ ಭಾವ ಬರುವುದಿಲ್ಲ. "ಇಂತಹ ವ್ಯಕ್ತಿ ಇಂತಹ ಮಾತನ್ನು ಹೇಳುವದು ಸಹಜ-ವಾದುದೇ. ಈ ವ್ಯಕ್ತಿ ನಡೆಸುತ್ತಿರುವ ಜೀವನ ಇವರ ಕಾವ್ಯಕ್ಕಿಂತ ಹಿರಿಯದು. ಇವರಿಂದ ಇನ್ನೂ ಮಹತ್ತರವಾದ ಕಾವ್ಯಸೃಷ್ಟಿಯಾಗುತ್ತದೆ." ಎಂದು ತೋರುತ್ತದೆ. ಶ್ರೀಮಾನ್ ಬೇಂದ್ರೆಯವರ ಬಾಳಿನಲ್ಲಿ ಕೃತಕತೆ, ಎರಡು ಮುಖ ಇಲ್ಲ. ಇವರು ಹೇಳುತ್ತಿರುವುದೂ ಬಾಳುತ್ತಿರುವುದೂ ಒಂದೇ. ಕವಿಗಳ 'ತಲೆ ಹರಟೆ'ಯನ್ನೂ ಅವರು 'ಹಾರಗುದುರೆಸ್ವಾರರಾಗಿ' ಮೆರೆಯುವುದನ್ನೂ ನೋಡಿದವರಿಗೆ, ಬೇಂದ್ರೆಯವರ ಸರಳತೆ, ಬೇಸಗೆಯ ಮಲಯಮಾರುತದಂತೆ ಚೈತನ್ಯದಾಯಕವಾಗುತ್ತದೆ. ತಮ್ಮದೇ ಧಾಟಿಯಲ್ಲಿ ಶಬ್ದಬ್ರಹ್ಮಜಾಲವನ್ನೇ ವಿವರಿಸುತ್ತಾ, ಬಲಗೈಯಿನ ಬೆರಳುಗಳಿಂದ ಪುಸ್ತಕದ ಮೇಲೂ, ಬಲಗಾಲಿನಿಂದ ನೆಲದ ಮೇಲೂ ನಿಧಾನವಾಗಿ ತಾಳ ಹಾಕುತ್ತಾ ಏಕನಾದ ಕಿಂದರಿಜೋಗಿಯಂತೆ ಕೇಳುವವರನ್ನು ಆನಂದ, ಕರುಣೆ, ಹಾಸ್ಯ, ಕೆಚ್ಚು, ನೆಚ್ಚು, ಭಯ, ತ್ಯಾಗ, ಆವೇಶದ ತೊಟ್ಟಿಲುಗಳಲ್ಲಿ ಆಡಿಸುತ್ತಾ ಕೊನೆಯಲ್ಲಿ ಇದೆಲ್ಲಾ ಶಬ್ದದ ಇಂದ್ರ ಜಾಲವೇ ಎಂದು ತೋರಿಸಿದ ನಾಟಗಾರ ಬೇಂದ್ರೆಯವರು ಇವರೇಯೆ ? ಕವಿಯ ಹಾಗೆ ಕಾಣುವುದೇ ಇಲ್ಲವಲ್ಲ ? " ಎಂದು ಮಿತ್ರರಿಗೆ ಸಹ ಆಶ್ಚರ್ಯವಾಗು ತ್ತದೆ.

ಬೇಂದ್ರೆಯವರು ನಾಟಗಾರರೆಂಬುದರಲ್ಲಿ ಸ್ವಲ್ಪವೂ ಅತಿಶಯೋಕ್ತಿಯಿಲ್ಲ. ಅವರು ಸ್ವತಃ ಸಂಗೀತಗಾರರೋ ಅಲ್ಲವೋ ನಾನು ಕಾಣೆ. ಆದರೆ ಅವರ ಹಾಡಿಗೆ ಅವರು ಕೊಡುವ ಮಟ್ಟು, ಕವಿತೆ ಅವರಿಗೆ ಹೇಗೆ ಸಹಜವಾಗಿ ಬಂದಿದೆಯೋ ಹಾಗೆಯೇ ಸಹಜವಾಗಿ ಬಂದಿದೆ. ಅದು ಇಂತಹ ರಾಗ ಎಂದು ಶ್ರೀ ಬೇಂದ್ರೆ ಯವರು ಸಹ ಯಾರಿಗೂ ಯಾವಾಗಲೂ ಹೇಳಲಿಲ್ಲ. 'ನಾನು ಹೀಗೆ ಹಾಡುತ್ತೇನೆ, ಒಳ್ಳೆಯ ಸಂಗೀತಗಾರರು ಇನ್ನೂ ಒಳ್ಳೆಯ ಧಾಟಿಯಲ್ಲಿ ಹಾಡಬಹುದು' ಎನ್ನು ತ್ತಾರೆ. ಪಿಟೀಲು ಮೇಷ್ಟರುಗಳೂ ಹಾರ್ಮೋನಿಯಂ ಮೇಷ್ಟರುಗಳೂ 'ಹಕ್ಕಿ ಹಾರುತಿದೆ, ತುತ್ತಿನ ಚೀಲ, ಮುವ್ವತ್ತು ಮೂರು ಕೋಟಿ, ಬೆಳದಿಂಗಳ ನೋಡ' ಇವುಗಳಿಗೆ ತಮಗೆ ಸರಿ ತೋರಿದ ಮಟ್ಟುಗಳನ್ನು ಹಾಕಿ ಹುಡುಗರಿಂದ ಹಾಡಿಸುವ ದನ್ನು ಕೇಳಿದ್ದೇವೆ. ಆದರೆ ಅವು ಆಗ ಸಪ್ಪೆಯಾಗಿಯೇ ಕಂಡಿವೆ. ಸ್ವರದೊಂದಿಗೆ ವೇದ ಬಂದಂತೆ, ಬೇಂದ್ರೆಯವರ ಕವನ ಅದರ ಮಟ್ಟುಗಳೊಂದಿಗೆ ಅವರಿಗೆ

ಸಿದ್ಧಿಸಿದೆ. ಆ ಮಟ್ಟು ಅಲೆ ಅಲೆಯಾಗಿ ಎದ್ದು ಆನಂದವಾಗಿ ಮಂಗಳಲೋಕದ ಅಂಗಳಕ್ಕೆ ಏರುವದು; ಸುಳಿಸುಳಿಯಾಗಿ ವಾಚಕನಲ್ಲಿ ರಸಾನುಭವವನ್ನುಂಟು ಮಾಡುವದು. ಈ ಕಾವ್ಯದ ಪೂರ್ಣ ಅನುಭವಕ್ಕೆ ಈ ಕಾವ್ಯದ ಮಾತು ಮಾತ್ರವೇ ಸಾಲದು. ಇದನ್ನು ಸೃಷ್ಟಿಸಿದ ಸಂಸ್ಕೃತಿಯೂ ಬೇಕು ಎಂದು ಗೋಚರವಾಗುವದು. ಕೆಲವು ಕವನಗಳಂತೂ ಬೇಂದ್ರೆಯವರು ಹಾಡಿದಂತೆ ಹಾಡದಿದ್ದರೆ ಸಿದ್ಧಿಸುವುದೇ ಇಲ್ಲ. ಆದರೆ ಬೇಂದ್ರೆಯವರೇನೋ ಅದಕ್ಕೆ ಒಂದು ಮಟ್ಟು ಹಾಕಿಲ್ಲ. 'ಪಾತರಗಿತ್ತಿ ಪಕ್ಕ' ಎಂಬುದು ಇದಕ್ಕೆ ಒಂದು ಉದಾಹರಣೆ.

ಒಂದು ಸಾಯಂಕಾಲ ಬೆಂಗಳೂರಿನಲ್ಲಿ ಬೇಂದ್ರೆಯವರನ್ನು ಹಿಡಿದುಕೊಂಡು ಹೋಗಿ ಶ್ರೀಮಾನ್ ಪು. ತಿ. ನರಸಿಂಹಾಚಾರ್ಯರ ಜನಸ್ಥಾನದ ಆ ದ್ವೀಪದಲ್ಲಿ ಸೆರೆಹಾಕಿದೆವು. ಜತೆಯಲ್ಲಿ ಶ್ರೀಮಾನ್ ನಂ. ಶಿವರಾಮಶಾಸ್ತ್ರಿಗಳೂ ಇದ್ದರು. ಬೇಂದ್ರೆಯವರು ಕೆಲವು ಕವನಗಳನ್ನು ಹಾಡಿದ ಮೇಲೆ ಶ್ರೀ ಶಾಸ್ತ್ರಿಗಳು 'ಪಾತರಗಿತ್ತಿ ಪಕ್ಕಾ' ಹಾಡಿ ಎಂದರು ಆ ದಿನ ಬೇಂದ್ರೆಯವರಿಗೆ ಸಹ ಆ ಕಾವ್ಯವನ್ನು ಬರೆದ ದಿನ ಉಂಟಾದ ಸ್ಫೂರ್ತಿ ಮತ್ತೆ ಉಂಟಾಗಿದ್ದಿತೆಂದು ತೋರುತ್ತದೆ. ನಮಗಂತೂ ಆ ಹಾಡನ್ನು ಕೇಳಿ ಮತ್ತವಾದ ದುಂಬಿಗಳಂತೆ ಆಯಿತು. ಬೇಂದ್ರೆಯವರು ಮತ್ತೆ ಹಾಡಿದರು; ಮತ್ತೆ ಹಾಡಿದರು; ಮತ್ತೆ ಹಾಡಿದರು; ಅವರು ಹಾಡುತ್ತಲೇ ಇದ್ದರು. ನಾವು ಕೇಳುತ್ತಲೇ ಇದ್ದೆವು. 'ಗಾಳೀ ಕೆನೀಲೇನ ಮಾಡಿದ್ದಾರ ತಾನ; ಮದುಗುಣಿಕೆಯ ಮದ್ದು ಹುರುಪಿಗಪ್ಪು ಮೆದ್ದು; ಗುಲಬಾಕ್ಷಿಯ ಹೂವ ಚಪಲಾ ಕೇಳತಾವ; ಅಲ್ಲಿ ಓಡತಾವ ಗಲ್ಲ ತಿಪೀತಾವ' ವಾತಾವರಣವೆಲ್ಲಾ ಒಂದು ವಿಧವಾದ ಗುಂ ಗುಂ ಗುಂ ಗುಂಗಿನೊಂದಿಗೆ ಸೇರಿ ಹೋಯಿತು. ಮನೆಯಲ್ಲಿದ್ದ ಹೆಣ್ಣುಮಕ್ಕಳಿಗೆಲ್ಲಾ ಹಾಡು ಬಾಯಿಗೆ ಬಂದು ಹೋಯಿತು. ಈಚೆಗೆ ಅದೇ ಕವನವನ್ನು ಅನೇಕರು ಅನೇಕ ಬಗೆಯಲ್ಲಿ ಹಾಡಿದ್ದಾರೆ. ಆದರೆ ಬೇಂದ್ರೆಯವರ ಧಾಟಿಯೇ ಸರಿ ಎನ್ನುವದು ಅಂದಿನಿಂದ ನನಗೆ ಖಚಿತವಾಗಿ ಹೊಳೆದ ಭಾವ.

'ನಾನೃಷಿಃ ಕುರುತೇ ಕಾವ್ಯಂ' ಎಂಬುದು ಪೂರ್ವಿಕರ ನುಡಿ. ಹಾಗೆಯೇ ಮಗುವಿನಂತಹ ಸರಳವಾದ ಅಕೃತ್ರಿಮವಾದ ಹೃದಯವಿಲ್ಲದವರಿಂದಲೂ ಕಾವ್ಯಸೃಷ್ಟಿ ಸಾಧ್ಯವಿಲ್ಲವೆಂಬುದು ಗೊತ್ತಾಗುತ್ತದೆ. 'ಶೋಕಃ ಶ್ಲೋಕತ್ವಮಾಗತಃ' (ಶ್ಲೋಕ ಶ್ಲೋಕತ್ವಮಾಗತಃ — ರಾಮಾಯಣ) ಎಂಬುದು ಪಶುಪಕ್ಷಿಮೃಗಗಳ ದುಃಖದಿಂದ ಹೃದಯ ವಿದೀರ್ಣವಾಗಿ ಧಾರೆಧಾರೆಯಾಗಿ ಕಣ್ಣೀರನ್ನು ಸುರಿಸುವವರ ವಿಷಯದಲ್ಲಿ ಹೇಳಿದ ಮಾತೇ ಹೊರತು, ಆಟಂಬಾಂಬು ಕಂಡುಹಿಡಿದ ನರಮೇಧ ಕರ್ತೃಗಳಿಗೆ ಅನ್ವಯಿಸುವದಿಲ್ಲ — ಇಂಥವರಿಗೂ ಅನ್ವಯಿಸುವ ಕವಿತೆಯೊಂದನ್ನು ಬೇಂದ್ರೆ ಬರೆದಿದ್ದಾರೆ — ಇರಲಿ; ಬೇಂದ್ರೆಯವರದು ಇಂಥಹ

ಮಗುವಿನೋಪಾದಿಯಲ್ಲಿಯ ಸರಳತೆ. ಅವರ ಸರಳತೆ ನೋಡಿದರೆ ತಮ್ಮ ಮಹಿಮೆ ಇವರಿಗೆ ತಿಳಿದೇ ಇಲ್ಲವೇನೋ ಎನ್ನಿಸುತ್ತದೆ. ಹಿಂದೆ ತಿಳಿಸಿದ ಪ್ರ ತಿ. ನರ-ಸಿಂಹಾಚಾರ್ಯರ ಜನಸ್ಥಾನದ ಶಿಬಿರದಿಂದ ರಾತ್ರಿ ಹಿಂದಿರುಗುತ್ತಿರುವಾಗ, ಶ್ರೀ-ಮಾನ್ ಸಿಟ್ಟೂರು ಶ್ರೀನಿವಾಸರಾಯರೂ ಬೇಂದ್ರೆಯವರೂ ಹಿಂದೆಂದೂ ಸಿಕ್ಕದಿದ್ದ ಅಸಾಧ್ಯ ಮಳೆಗೆ ಸಿಕ್ಕಿದರು. ಆಗ ಅರ್ಧ ರಾತ್ರಿಯ ಮೇಲಾಗಿದ್ದಿತು. ಹಾಸ್ಯದ ಮಾತುಗಳಲ್ಲಿಯೂ — ಮಾತಿನ ಕಟಕಿಯಲ್ಲಿಯೂ ಇಬ್ಬರೂ ಒಬ್ಬರನ್ನೊಬ್ಬರು ಮೀರಿಸಿದವರೇ. ಮಳೆ ಪಟಪಟನೆ ಬಾಣದೋಪಾದಿಯಲ್ಲಿ ರಾಚುತ್ತಿದ್ದಿತು. ಹುಡುಗರು ಮಳೆಯಲ್ಲಿ ನೆನೆಯುತ್ತಾ ಹೋಗುವಂತೆ ಇಬ್ಬರೂ ನಿಧಾನವಾಗಿ ವಿನೋದದ ಮಾತುಗಳನ್ನಾಡುತ್ತ ನಗುತ್ತಾ ನಗರದ ಮತ್ತೊಂದು ತುದಿಯಲ್ಲಿದ್ದ ಶ್ರೀನಿವಾಸರಾಯರ ಮನೆ ಸೇರಿದರು.

ಮಾರನೆಯ ಬೆಳಿಗ್ಗೆ ಬೇಂದ್ರೆಯವರನ್ನು ನಾನು ನೋಡಿದಾಗ ಅವರು ಬಿಗಿಯಾಗಿ ಮೇಲಕ್ಕಾದ ಬನೀನು ಹಾಕಿಕೊಂಡಿದ್ದರು. ಕತ್ತಿನ ಗುಂಡಿ ಹಾಕುವಂತೆಯೇ ಇರಲಿಲ್ಲ. ನಾನು ‘ ಇದೇನು ಬೇಂದ್ರೆಗಳೇ, ಯಾರದೋ ಅಂಗಿ ಸಿಗ-ಹಾಕಿಕೊಂಡು ಬಿಟ್ಟಿದ್ದೀರಿ, ನಿಮಗೆ ಅರ್ಧ ಮೈಗೆ ಸಹ ಸಾಕಾಗುವದಿಲ್ಲವಲ್ಲ ? ’ ಎಂದೆ. ಬೇಂದ್ರೆಯವರು ಸಿಟ್ಟೂರರ ಕಡೆ ಕೈ ತೋರಿಸಿ— ‘ ನಾನು ಬರೆದುದಕ್ಕೆ ದುಡ್ಡು ಕೊಡುವವರು ಇವರು. ಆದುದರಿಂದ ಇವರ ಮೈ ಬೆಳೆಯುವಂತೆ ಇಲ್ಲ. ಅದು ಅಲ್ಪ ಪ್ರಾಣ. ಆ ಅಲ್ಪ ಪ್ರಾಣದ ಅಂಗಿ ಈ ಮಹಾಪ್ರಾಣಕ್ಕೆ ಅರ್ಧ ಅಂಗಿ ’ ಎಂದರು. [ಗಾಂಧಿಯವರಲ್ಲಿ ಅರೇ ಬಟ್ಟೆಗಳಿವೆ ಎನ್ನುತ್ತಾರೆ. ಬೇಂದ್ರೆಯವರು ಬನೀನು ಒಣಗುವವರೆಗೆ ಸೇರಿಸುವವರ ಬನೀನನ್ನೇ ಹಾಕಿಕೊಂಡು ಇರುತ್ತಾರೆ.] ಆದರೆ ಈ ಸರಳತೆ ಮೌಢ್ಯದ ಸರಳತೆಯಲ್ಲ.

ಒಂದು ದಿನ ಬೇಂದ್ರೆಯವರು ಶ್ರೀಮಾನ್ ಮಾಸ್ತಿಯವರ ಆರಾಮು ಕುರ್ಚಿಯ ಮೇಲೆಯೇ ಮಲಗಿ ಬೆಳಗಾಯಿತು. ‘ ಯಾಕೆ ಸ್ವಾಮಿ ಹಾಸಿಗೆ ಹಾಸಿಕೊಳ್ಳಲೇ ಇಲ್ಲವಲ್ಲ ’ ಎಂದೆ. ‘ ಅದರಿಂದ ನಿದ್ರೆ ಏನೂ ಕಡಿಮೆಯೇ ಆಗಲಿಲ್ಲ ’ ಎಂದರು. ಶ್ರೀಮಾನ್ ಮಾಸ್ತಿಯವರು ‘ ಎಳಿಸಿ ಹಾಸಿಗೆ ಹಾಸಿ ಕೊಡೋಣ ಅಂತ ನೋಡಿದೆ. ಆದರೆ ಗಾಢವಾದ ಇವರ ನಿದ್ರೆ ನೋಡಿ ಎಳಿಸುವದಕ್ಕೆ ಮನಸ್ಸು ಬರಲಿಲ್ಲ ’ ಎಂದರು. ಕ್ರಿಪ್ಸ್‌ನನ್ನು ನೋಡುವುದಕ್ಕೆ ಹೋದಾಗ ಗಾಂಧಿಯವರು ಲೋಡಾಗಾಡಿಯ ಸೋಡಾ ಪೆಟ್ಟಿಗೆಯ ಮೇಲೆಯೇ ಕುಳಿತುಕೊಂಡು ಹೋದರು. ಅನಾಸಕ್ತರ ಮಾರ್ಗಗಳೆಲ್ಲಾ ಒಂದೇ. ಅಲ್ಪವಾದುದರಲ್ಲಿ ಪೂರ್ತಿ ಸೋಲುತ್ತಾರೆ. ಮುಖ್ಯವಾದುದರಲ್ಲಿ ಒಂದು ರೇಣುವಿನಷ್ಟು ಸೋಲುವದಿಲ್ಲ: ವಜ್ರಕ್ಕಿಂತ ಕಠಿಣವಾದವರಾದರೂ ಹೂವಿಗಿಂತ ಮೃದು. ಈ ಸಮರಸ ಬೇಂದ್ರೆಯವರ ಸಂಸ್ಕೃತಿಯ

ಫಲ. ಅವರು ಪೂರ್ಣವಾಗಿ ನಮ್ಮ ಸಂಸ್ಕೃತ, ಸಂಸ್ಕೃತಿಯಲ್ಲಿ ಬೆಳೆದವರು. ಸಂಸ್ಕೃತ ಬಲ್ಲವರು ಕನ್ನಡವನ್ನು ಹೇಗೆ ಸೇವಿಸಬಹುದೆಂಬುದಕ್ಕೆ ಅವರ ಬಾಳು ಉದಾಹರಣೆ. ಅವರ ಶ್ರದ್ಧೆಯನ್ನೂ ಅನಾಸಕ್ತಿಯನ್ನೂ ಸಾತ್ವಿಕತೆಯನ್ನೂ ನೋಡಿದರೆ ಇವರು ಯಾವುದಾದರೂ ದೇವತೆಯ ಉಪಾಸಕರೋ, ಕನ್ನಡನಾಡಿನ ಕಾರಣ ಪುರುಷ, ಮುಂದೆ ಬರುವುದನ್ನು ಅರಹುವ ಬೇಹುಗಾರ ಈತನೋ ಎಂದು ಭಾಸವಾಗುತ್ತದೆ. ಬಾಳಿನ ಹೋರಾಟವೆಲ್ಲಾ ಈ ಮನಸ್ಸಿನ ಮೇಲೆ, ಮನಸ್ಸನ್ನು ಮೃದು ಮಾಡಿ, ಆರ್ದ್ರ ಮಾಡಿ ಸಾಗಿದೆ. ವಿಧಿ ಕೊಟ್ಟ ಏಟುಗಳಿಂದ ಹೃದಯ ಕಲ್ಲಾಗಿಲ್ಲ. ಅಣ್ಣ ತಮ್ಮಂದಿರು ಮಾಡಿದ ಮೋಸದಿಂದ ಮನುಷ್ಯತ್ವದಲ್ಲಿ ನಂಬಿಕೆ ಕೆಟ್ಟಿಲ್ಲ. ನಮ್ಮವರ ಪರಸ್ಪರ ಕಲಹದಿಂದ, ನಮ್ಮ ನಾಡು ಮಂಗಳದ ನಾಡಾಗುವುದೆಂಬ ನಚ್ಚು ನಂದಿಲ್ಲ. ವಿಶ್ವಾಮಿತ್ರನ ಅಸ್ತ್ರಗಳನ್ನೆಲ್ಲಾ ನುಂಗಿ ನಿಂತ ವಸಿಷ್ಠನ ಬ್ರಹ್ಮದಂಡ-ದಂತೆ, ಕೆಚ್ಚೆದೆಯ ಆಳು ತನ್ನ ಬಾಳಿನ ಗುರಿಯನ್ನು ಮರೆಯದೆ ನಿಂತಿದ್ದಾನೆ. ಹೀಗೆ ತನ್ನ ಬಾಳನ್ನೇ ತಾನು, ಮೂರನೆಯ ಮನುಷ್ಯನಂತೆ ನೋಡುವುದರಿಂದಲೇ ಬೇಂದ್ರೆಯವರ ಶುದ್ಧವಾದ ಆತ್ಮವನ್ನು ಯಾವ ಕೊಳೆಯೂ, ಯಾವ ದುಃಖವೂ ಹೆಚ್ಚು ಕಾಲ ಮಲಿನವಾಗಿಡಲು ಶಕ್ತವಾಗುವುದಿಲ್ಲ. ಮೋಡ ಮುಚ್ಚಿದ ಸೂರ್ಯ, ಒಂದು ಗಳಿಗೆಯ ನಂತರ ಹೊರಕ್ಕೆ ಬಂದು ಮತ್ತೆ ಜಗತ್ತಿಗೆ ಆಹ್ಲಾದವನ್ನುಂಟು-ಮಾಡುವಂತೆ ಪ್ರತಿಯೊಂದು ದುಃಖ, ಬೇಸರಿಕೆಯ ಪ್ರಸಂಗದಿಂದಲೂ ಬೇಂದ್ರೆ ಹೆಚ್ಚು ಕಾಂತಿಯುಕ್ತರೇ ಆಗಿ ಹೊರಬಂದು, ತಮ್ಮ ಕಾವ್ಯವಾಹಿನಿಯ ಅಮೃತ ಧಾರೆಯಿಂದ ಈ ಸತ್ತ ಜಗಕ್ಕೆ ಚೈತನ್ಯವನ್ನಿತ್ತಿದ್ದಾರೆ.

ಬೇಂದ್ರೆಯವರ ಜತೆಯಲ್ಲಿರುವುದು ಹಾಸ್ಯದ ಅಲೆಗಳ ಮೇಲೆ ಲಾಸ್ಯವಾಡಿದಂತೆ. ಹಾಸ್ಯಕ್ಕೆ ಒಳಗಾಗದ ಯಾವ ಸನ್ನಿವೇಶವೂ ಇಲ್ಲವೇ ಇಲ್ಲವೆಂಬುದು ರಸಿಕರ ಮತ. ಇದು ಬೇಂದ್ರೆಯವರ ನಿತ್ಯದ ಅನುಭವ. ಒಂದು ಸಲ ಬೇಂದ್ರೆಯವರ ಗೌರವಕ್ಕಾಗಿಯೇ ಒಂದು ನಾಟಕವನ್ನು ಏರ್ಪಡಿಸಿದ್ದಿತು. ಬೇಂದ್ರೆಯ-ವರನ್ನು ಒಳಕ್ಕೆ ಕರೆದುಕೊಂಡು ಹೋಗಲು ನಾಟಕಗೃಹದ ಮುಂದೆ ‘ ದೊಡ್ಡ ಮನುಷ್ಯರು ’ ನಿಂತಿದ್ದರು. ಬೇಂದ್ರೆಯವರನ್ನು ದಾರಿಯಲ್ಲಿ ಯಾರೋ ‘ ಐದು ನಿಮಿಷ ’ ಎಂದು ಮನೆಗೆ ಎಳೆದುಕೊಂಡು ಹೋದರು. ದಾಕ್ಷಿಣ್ಯಪರರೂ ಸರ್ವ ಜನ-ಸುಲಭರೂ ಆದ ಅವರು ನಾಟಕಕ್ಕೆ ಹೊತ್ತಾಯಿತು ಎಂದು ಹೇಳಿದುದಕ್ಕೆ ಕರೆದವರು ‘ ನಾಟಕ ನಿಮ್ಮ ಗೌರವಕ್ಕೆ, ನೀವು ಹೋದ ಹೊರತು ಪ್ರಾರಂಭ-ವಾಗುವುದಿಲ್ಲ ’ ಎಂದರು. ಹೆಚ್ಚು ಚರ್ಚೆ ಮಾಡಿದರೆ ಕಾಲವ್ಯಯವಾಗುವುದೆಂದು ಬೇಂದ್ರೆ ಒಳಗೆ ಹೋದರು. ಮಿತ್ರರ ಕೈಯಿಂದ ತಪ್ಪಿಸಿಕೊಂಡು ಬರುವುದು ೧೫-೨೦ ನಿಮಿಷವಾಯಿತು. ಬೇಂದ್ರೆ, ನಾಟಕಗೃಹದ ಬಾಗಿಲಿಗೆ ಬರುವ ವೇಳೆಗೆ ಅಲ್ಲಿ ಸ್ವಯಂಸೇವಕನ ಹೊರತು ಮತ್ತಾರೂ ಇರಲಿಲ್ಲ. ಸ್ವಯಂಸೇವಕ ತನ್ನ

ನಿಯಮಕ್ಕೆ ಅನುಸಾರವಾಗಿ ‘ಯಾರು ಸ್ವಾಮಿ, ಎಲ್ಲಿ ಪಾಸು’ ಎಂದ. ಅವನಿಗೆ ಬೇಂದ್ರೆಯವರ ಪರಿಚಯವಿರಲಿಲ್ಲ. ಆಗ ಬೇಂದ್ರೆ ಹೀಗೆ ಯೋಚಿಸಿದರು. ‘ನಾನು ಯಾರು ಎಂದು ಈತ ಕೇಳುವುದರಿಂದ ಇವನಿಗೆ ನನ್ನ ಪರಿಚಯವಿಲ್ಲ. ನಾನು ಯಾರು ಎಂದು ಕೇಳುವವನಿಗೆ ನನ್ನ ಹೆಸರು ಹೇಳಿ ಏನು ಪ್ರಯೋಜನ ? ಹೀಗೆ ಹೇಳುತ್ತೇನೆ ಎಂದು, “ನಾನು ಬೇಂದ್ರೆಯ ಕಡೆಯವ” ಎಂದರು. ಬೇಂದ್ರೆಯ ಕಡೆಯವರಾದ ಮೇಲೆ ಇನ್ನೇನು ಎಂದು ಸ್ವಯಂಸೇವಕ ಅವರನ್ನು ಒಳಗೆ ಬಿಟ್ಟನು.

ಈ ಸಂದರ್ಭದಲ್ಲಿ ಮದರಾಸು ಕಾಂಗ್ರೆಸ್‌ನಲ್ಲಿ ನಡೆದ ಒಂದು ಸಂಗತಿ ನನ್ನ ಜ್ಞಾಪಕಕ್ಕೆ ಬಂದಿತು. ಆಗ ನಾವು ಸ್ವಯಂಸೇವಕರು. ನಮ್ಮ ಮಿತ್ರನಾದ ಒಬ್ಬ ಸ್ವಯಂಸೇವಕನನ್ನು ಕಾಂಗ್ರೆಸ್ ಮಂಟಪದ ಬಾಗಿಲಿನಲ್ಲಿ ಕಾವಲಿರಿಸಿದ್ದರು. ಬ್ಯಾಡ್ಜ ಅಥವಾ ಪಾಸು ಇಲ್ಲದೆ ಯಾರನ್ನೂ ಒಳಕ್ಕೆ ಬಿಡಕೂಡದೆಂದು ಕಟ್ಟಪ್ಪಣೆ ಯಾಗಿದ್ದಿತು. ಡಾಕ್ಟರ್ ಅನ್ಸಾರಿ ಕಾಂಗ್ರೆಸ್ ಅಧ್ಯಕ್ಷರು. ಅವರು ಬ್ಯಾಡ್ಜ-ಪಾಸ್ ಯಾವುದೂ ಇಲ್ಲದೆ ಬಂದರು. ಸ್ವಯಂಸೇವಕನಿಗೆ ಇವರು ಕಾಂಗ್ರೆಸ್ ಅಧ್ಯಕ್ಷ ಅನ್ಸಾರಿ ಎಂಬುದು ತಿಳಿಯಲಿಲ್ಲ. ಒಳಕ್ಕೆ ಬಿಡುವದಿಲ್ಲ ಎಂದನು. ಎರಡು ಮೂರು ನಿಮಿಷಗಳಲ್ಲಿ ಬಾಗಿಲಿಗೆ ಉಳಿದ ಮುಖಂಡರು ಬರಲು ಸ್ವಯಂಸೇವಕನಿಗೆ ತನ್ನ ತಪ್ಪು ಗೊತ್ತಾಯಿತು. ಅವನು ಗಾಬರಿಯಲ್ಲಿ ಡಾಕ್ಟರ ಅನ್ಸಾರಿಯವರಿಗೆ ‘I pardon you’ ಎಂದನು. ಡಾಕ್ಟರ ಅನ್ಸಾರಿ ನಗುತ್ತ ‘You pardon me; alright thank you’ ಎಂದುಕೊಂಡು ಒಳಕ್ಕೆ ಹೊರಟುಹೋದರು. ಸಂಯಂಸೇವಕನಿಗೆ ಗಾಬರಿ ಶಾಂತವಾದ ಮೇಲೆ ‘Pardon me ಎಂದು ಹೇಳಬೇಕಾಗಿದ್ದಿತೆಂಬುದು ತಿಳಿಯಿತು.

ಬೇಂದ್ರೆಯವರಿಗೆ “‘ನಾನು ಬೇಂದ್ರೆ’ ಎಂದು ನೀವು ಹೇಳಿಕೊಳ್ಳದೆ ‘ಬೇಂದ್ರೆಯವರ ಕಡೆಯವ’ ಎಂದು ಯಾಕೆ ಹೇಳಿದಿರಿ” ಎಂದೆ. ಬೇಂದ್ರೆಯವರು ನಗುತ್ತ ‘ಕೆಲವು ಸಮಯಗಳಲ್ಲಿ ನಮಗಿಂತ ನಮ್ಮ ಹೆಸರಿಗೆ ಹೆಚ್ಚು ಮಹಿಮೆ. ನಮ್ಮ ಹೆಸರು ಮಾಡುವ ಕೆಲಸ ನಮ್ಮಿಂದ ಸಾಧ್ಯವಿಲ್ಲ. ಶ್ರೀರಾಮಚಂದ್ರನಿಗೇ ಆ ಅನುಭವವಾಯಿತು.’ ಎಂದರು.

ಹೀಗೆ ಹಾಸ್ಯದ ಚಟಾಕಿಯಾಗಿ ಮಕ್ಕಳಂತೆ ಇದ್ದರೂ, ಖಂಡಿತವಾಗಿ ಮಾತ ನಾಡಬೇಕಾದಾಗ ಬೇಂದ್ರೆಯವರು ಖಡಾಖಂಡಿತವಾಗಿಯೇ ಮಾತನಾಡುತ್ತಾರೆ. ಯಾರ ದಾಕ್ಷಿಣ್ಯಕ್ಕಾಗಿಯೂ ಹೇಳಬೇಕಾದುದನ್ನು ಇವರು ಹೇಳದೆ ಬಿಡುವದಿಲ್ಲ. ಬೊಂಬಾಯಿನ ಸಮ್ಮೇಳನದ ಸಮಯದಲ್ಲಿ ಶ್ರೀಮಾನ್ ಕೈ. ಎನ್. ಎಸ್. ಸುಬ್ಬರಾಯರು ‘ಕವಿಗಳು ಜನರಿಗೆ ತಿಳಿಯುವಂತೆ ಬರೆಯಬೇಕು’ ಎಂದಾಗ ಶ್ರೀ ಬೇಂದ್ರೆಯವರು ‘ಜನರೂ ವ್ಯಾಸಂಗ ಮಾಡಿ ಕವಿಯ ಆಶಯವನ್ನು ಹಿಡಿಯ

ಬೇಕು. ಜನರಂಜನೆಗಾಗಿ ಕವಿ ತನ್ನ ಮಟ್ಟವನ್ನು ತಗ್ಗಿಸಿಕೊಳ್ಳಲು ಸಾಧ್ಯವಿಲ್ಲ,' ಎಂದರು. ಶಿವಮೊಗ್ಗ ಸಮ್ಮೇಳನದಲ್ಲಿ ಕೆಲವು ಸದಸ್ಯರು ಸ್ವಲ್ಪ ಮರ್ಯಾದೆ ಮೀರಿ ಕಟುವಾಗಿ ಮತ್ತೊಬ್ಬ ಸದಸ್ಯರನ್ನು ಟೀಕಿಸಿದಾಗ ಬೇಂದ್ರೆಯವರು "ಬೈಗುಳದ ಜೋರಿನಿಂದಲೇ ನೀವು ಎದುರಾಳಿಯನ್ನು ತಗ್ಗಿಸುವೆವೆಂದು ತಿಳಿದಿದ್ದರೆ ಅದು ತಪ್ಪು. ಆ ಅಸ್ತ್ರವನ್ನು ನಾವೂ ನಿಮ್ಮಷ್ಟೇ ತೀವ್ರವಾಗಿ ಪ್ರಯೋಗಿಸಬಲ್ಲೆವು," ಎಂದಾಗ ಎದುರಾಳಿಗಳಿಗೆ ಆ ಮಾತಿನ ಸತ್ಯ ಹೊಳೆಯಿತು. ತಮ್ಮ ಈ ಖಂಡಿತವಾದ ಸ್ವಭಾವದಿಂಲೇ ಇವರು ಮೈಸೂರಿನವರಿಗೆ ಅವರ ಗುರಿಯನ್ನು ಜ್ಞಾಪಕ ಕೊಟ್ಟರು.

> "ಮೈಸೂರಿನ ಜನ ಎಚ್ಚೆತ್ತು ಎದ್ದರೆ, ನಮ್ಮ ರತ್ನಸಿಂಹಾಸನವು ತನ್ನ ಅನಾದಿ ಧರ್ಮದಿಂದ ಉದ್ಧಾರಕವಾಗಿ ಬಂದರೆ ತುಂಗೆ-ಕಾವೇರಿ-ಯೊಳಗಣ ಕನ್ನಡನಾಡು ಸಹ ಭೂರಂಗಕ್ಕೆ ಆದರ್ಶವಾದೀತು. ಮೈಸೂರಲ್ಲಿ ಶಿವ-ಮುಗ್ಗಿ ಅರಳಬೇಕು. ಆತ್ಮಜಾಗೃತಿ ಬೇಕು. ಮೈಸೂರಿನಲ್ಲಿ ಏನಿಲ್ಲ ? ನಮ್ಮ ಭಾಷೆಯಿದೆ; ನಮ್ಮ ಶ್ರೀಮನ್ಮಹಾರಾಜರಿದ್ದಾರೆ. ನಮ್ಮ ಜನ ಇದೆ. ಗೋಮಟೇಶ್ವರನಿದ್ದಾನೆ. ಬಾಬಾಬುಡಣಗಿರಿಯಿದೆ. ಗೇರು-ಸೊಪ್ಪೆಯಿದೆ. ಹರಿಹರ, ಮೇಲುಕೋಟೆ ಇವೆ. ಚಿತ್ರದುರ್ಗವಿದೆ. ಚಂದ್ರ-ವಳ್ಳಿಯಿದೆ. ಬೇಲೂರ ಚೆನ್ನಕೇಶವನಿದ್ದಾನೆ. ಶ್ರೀರಂಗ-ನಂಜುಂಡೇಶ್ವರ-ರಿದ್ದಾರೆ. ಚಾಮುಂಡಿ ಶಾರದಾಂಬೆಯರಿದ್ದಾರೆ. ಶಿಲ್ಪಾಚಾರ್ಯರಿದ್ದಾರೆ. ವಾಸ್ತುಶಿಲ್ಪವಿದೆ. ವೆಂಕಟಪ್ಪನವರಿದ್ದಾರೆ. ಶ್ರೀಕಂಠಯ್ಯನವರು, ಪುಟ್ಟಪ್ಪ-ನವರು, ಗುಂಡಪ್ಪನವರು, ಮಾಸ್ತಿಯವರು ಇದ್ದಾರೆ. ಶೇಷಣ್ಣನವರ ವೀಣೆಯಿದೆ. ಬಿಡಾರ ಕೃಷ್ಣಪ್ಪನವರ ಗಾನದ ತಾನವಿದೆ. ಆನೆಯಿದೆ. ಚಂದನವಿದೆ. ಬಂಗಾರವಿದೆ. ಕಬ್ಬು ಇದೆ. ಕಬ್ಬಿಣವಿದೆ. ಕಾಫಿ ಇದೆ. ಕಾವೇರಿ-ತುಂಗಭದ್ರೆಯರಿದ್ದಾರೆ. ಮಿಂಚು ಇದೆ. ವಿಶ್ವೇಶ್ವರಯ್ಯನವರು ನಮ್ಮವರೇ ಇದ್ದಾರೆ. ನೃತ್ಯ-ನಾಟಕವಿದೆ. ಶಾಸ್ತ್ರಸಂಪತ್ತಿದೆ. ಶ್ರೀ ರಾಮನ್ ಅವರೂ ಇಲ್ಲಿಯೇ ಇದ್ದಾರೆ. ಏನಿಲ್ಲ ? ಎಲ್ಲ-ಎಲ್ಲ ಇದೆ. ನಮ್ಮ ರತ್ನ ಸಿಂಹಾಸನವಿದೆ. ಕೆಂಪೇಗೌಡನ ಬೆಳೆವ ಬೆಂಗಳೂರಿದೆ. ಉತ್ಸಾಹದಿಂದ ತುಂಬಿದ ತರುಣ-ತರುಣಿಯರಿದ್ದಾರೆ. ವಾನಪ್ರಸ್ಥರ ವಿಪುಲ ಸಮುದಾಯ ಇದೆ. ಬೆಂಗಳೂರು ದಂಡು, ಮೈಸೂರು ವಿಶ್ವವಿದ್ಯಾಲಯ, ತಾತ ಇನ್‌ಸ್ಟಿಟೂಟ ........ ಮತ್ತೇನೇನೋ ಇದೆ. ಸಣ್ಣ ಬ್ರಹ್ಮಾಂಡವೇ ಇದೆ. ಆದರೆ ತಾನು ಕನ್ನಡ ಪುಣ್ಯಪುರುಷ ಭೂಮಿ. ಕನ್ನಡ ಜನವೆಲ್ಲಾ ತನ್ನದು: ಜಗತ್ತಿನ ರಾಷ್ಟ್ರಗಳಿಗೆ ಸಮಾನಸ್ಕಂದ ತಾನು ಎಂಬ ಆತ್ಮಜ್ಞಾನವಿಲ್ಲ, ಅರಿವಿನ ಎಚ್ಚರವಿಲ್ಲ. ಎಚ್ಚರದ ಏರಿಕೆಯಿಲ್ಲ. ಏರಿಕೆಯ ಕಾರ್ಯವಿಲ್ಲ.

ಅಂತೆಯೇ ಕಾರ್ಯದ ಫಲವಿಲ್ಲ. ಮೈಸೂರು ನಾಡಿಗೆ, ಹಳೆಯ ಮಹಿಷಾಸುರನ ಪಿಶಾಚಿಯೋ ಏನೋ ಕಾಡುತ್ತಿರಬೇಕು. ಶ್ರೀ ಚಾಮುಂಡಿ ಕೊಟ್ಟ ದಿವ್ಯತೆಯ ಅರಿವು ಮೈದುಂಬಿ ಬರುತ್ತಿಲ್ಲ. ತುಂಗೆ ಕಾವೇರಿಗಳ ದಡ ಮೀರಿ ಸೂಸುತ್ತಿಲ್ಲ.'

ಇದು ಬೇಂದ್ರೆಯವರ ಸ್ಪಷ್ಟವಾದ ವಾಣಿ. ಇದನ್ನು ಮೈಸೂರಿನ ಜನತೆಗೆ ಸಂದೇಶವೆಂದೇ ಭಾವಿಸಬಹುದು. ಚಾಮುಂಡಿ ಕೊಟ್ಟ ದಿವ್ಯತೆಯ ಅರಿವು ಮೈದುಂಬಿ ಬರುತ್ತಿಲ್ಲ ಎಂಬುದೇ ಭಾರತಕ್ಕೂ ಇರುವ ಶಾಪ. ಗಂಗೆ-ಯಮುನೆ-ಯರು ಕೊಟ್ಟ ದಿವ್ಯತೆ ಭಾರತಕ್ಕೆ ತುಂಬಿ ಬರುತ್ತಿಲ್ಲ. ಭಾರತವು ತನ್ನ ಪೂರ್ಣತೆ ತಳೆದಾಗಲೇ ಭಾರತದಿಂದ ಜಗತ್ತಿಗೆ ಉಪಕಾರವಾಗುವದೆಂಬುದನ್ನು ಬೇಂದ್ರೆ ತಮ್ಮ ಕಾವ್ಯಗಳಲ್ಲಿ ಎಲ್ಲೆಲ್ಲಿಯೂ ಹೇಳಿದ್ದಾರೆ. ಭಾರತ ಇತರ ರಾಷ್ಟ್ರಗಳೊಂದಿಗೆ ಸಮಾನವಾಗಿ ನಿಂತಿಲ್ಲವಲ್ಲ ಎಂಬುದು ಬೇಂದ್ರೆಯವರ ಮೊದಲನೆಯ ಕೊರಗು. ಅವರ ಕಾಲಪುರುಷ ಹೇಗೆ ಅವರ ಅದ್ಭುತ ಕಲ್ಪನೆಗೆ ಮಾತ್ರ ಸಿಕ್ಕಿ, ಸಾಮ್ರಾಜ್ಯದ ತಲೆ ಒಕ್ಕಿ, ಮಂಡಲಗಳನ್ನೆಲ್ಲಾ ಮುಕ್ಕಿ, ಯುಗ ಯುಗ ಮನ್ವಂತರಗಳನ್ನೆಲ್ಲಾ ಮೀರಿ ಮಂಗಳಲೋಕಕ್ಕೆ ಹಾರಿ ನಿಂತಿದೆಯೋ, ಹಾಗೆಯೇ ಅವರ ಭಾರತವೂ ಮೊದಲಗಿತ್ತಿ. ಈ ಭಾರತದ ಮಹಿಮೆ ಅದ್ಭುತವಾದುದು. ಜಗತ್ತಿನ ಸಂಸ್ಕೃತಿ ಹೋರಾಟಗಳೆಲ್ಲಾ ಇಲ್ಲಿ ಬಂದು ತೆಪ್ಪಗಾಗಿವೆ. ಭಾರತಿಯು ಒಕ್ಕುಡಿತೆ ಅರೆ ಮುಳುಗು ಎಂದು ಪಾಣಿಪತ್ತುಗಳನ್ನು ಮುಕ್ಕಳಿಸಿದ್ದಾಳೆ. ಕೊಡಲಿರಾಮನು ಎರೆದ ಕೆನ್ನೀರ ಜಳಕದಿಂದ ಕೂದಲು ಸಹ ನೆನೆಯಲಿಲ್ಲವೆಂದಿದ್ದಾಳೆ. ಈ ಜಗಜ್ಜನನಿ ತನ್ನ ಪೂರ್ವದ ವೈಭವದಿಂದ ಮೆರೆಯಬೇಕು. ಕನ್ನಡನಾಡು ತನ್ನ ಹಿರಿಮೆಯನ್ನು ಸಾಧಿಸಬೇಕು. ಇದೇ ಬೇಂದ್ರೆಯವರ ಸಂದೇಶ.

ಬೇಂದ್ರೆಯವರ ಕಾವ್ಯ ಕನ್ನಡದಲ್ಲಿ ಸಾಧಿಸಿರುವ ಕಾರ್ಯವನ್ನು, ಅಂದರೆ ರಾಜಕೀಯವಾದ ಕ್ರಾಂತಿಯನ್ನು, ಜನಜಾಗೃತೆಯನ್ನು, ಮತ್ತಾವ ಕವಿಯೂ ಸಾಧಿಸಿಲ್ಲ. ಇವರ ಪದ್ಯಕ್ಕಾಗಿಯೇ ಸರಕಾರ ಇವರನ್ನು ಬಂಧನದಲ್ಲಿಟ್ಟಿತು. ಕವಿಯು ಸ್ವೇಚ್ಛೆಯಿಂದ ಹಕ್ಕಿಯಂತೆ ತನಗೆ ತೋರಿದುದನ್ನು ಹಾಡಿದುದಕ್ಕಾಗಿಯೇ ಅವರನ್ನು ಬಂಧನದಲ್ಲಿಟ್ಟ ಉದಾಹರಣೆ ಭಾರತದಲ್ಲಿ ಮತ್ತೆಲ್ಲಿಯೂ ಇಲ್ಲ; ಅಂದರೆ ಕವಿಗಳ ಮೇಲೆ ಸರಕಾರದ ವಕ್ರದೃಷ್ಟಿ ಬಿದ್ದಿಲ್ಲವೆಂದಲ್ಲ. ಆದರೆ ಅವರನ್ನು ಸರ್ಕಾರ ಬಂಧಿಸಿದುದು ಅವರು ರಾಜಕೀಯದಲ್ಲಿ ಪ್ರವೇಶಿಸಿ ಮಾಡಿದ ಚಳುವಳಿಗಾಗಿ. ಆದರೆ ಬೇಂದ್ರೆಯವರನ್ನು ಅವರು ರಾಜಕೀಯವಲ್ಲದ ಪದ್ಯಗಳನ್ನು ಬರೆದು ಹಾಡಿ ಕೊಳ್ಳುತ್ತಿದ್ದುದಕ್ಕಾಗಿಯೇ ಬಂಧಿಸಿದರು. ಅಂದರೆ ರಾಜಕೀಯ ಚಳುವಳಿಗಾರ ನಲ್ಲದವನು ಬರೆದವೂ, ಅವುಗಳ ಕ್ರಾಂತಿಯ ಸ್ವಭಾವ ಹಾಗೆ ಇದ್ದವು. ಇನ್ನು ಬೇಂದ್ರೆಯವರು ರಾಜಕೀಯ ಆಂದೋಳನಕ್ಕಾಗಿಯೇ ಪ್ರಚಾರಸಾಹಿತ್ಯವನ್ನು

ಬರೆದಿದ್ದರೆ ಅದರ ಫಲ ಹೇಗೆ ಆಗುತ್ತಿದ್ದಿತೆಂಬುದು ಊಹನೆಯಿಂದ ಮಾತ್ರ ಅರಿಯಬಹುದಾದ ಮಾತು. ಬೇಂದ್ರೆಯವರು ಮಗುವಿನಂತೆ ಕೋಮಲವಾಗಿರುವಂತೆಯೇ ಅವರ ಮಾತುಗಳು ಆವಶ್ಯಕವಾದಾಗ ಗುಂಡುಮೆಟ್ಟಾಗುತ್ತವೆ. ವೀರವಾಣಿ, ಸಿಡಿಲು, ಗುಡುಗು — ಬಾಂಬು ಆಗುತ್ತವೆ. 'ಮೂವತ್ತು ಮೂರು ಕೋಟಿ' ನಮ್ಮವರ ಹೃದಯವನ್ನು ಕೆಣಕಿದಂತೆ ಪರರ ಕಣ್ಣನ್ನು ಕೆರಳಿಸಿದವು. 'ತುತ್ತಿನ ಚೀಲ' ನಮ್ಮ ಎದುರಾಳಿಗಳ ಕಣ್ಣಿಗೆ ಮದ್ದಿನ ಚೀಲವೇ ಆಯಿತು. 'ನರಬಲಿ' 'ಇದುವೆ ಕಾಳಿಯ ಪೂಜೆಯು ಶುದ್ಧ, ಇದಕ್ಕೆ ಹುಂಬರು ಎಂಬರು ಯುದ್ಧ' ಸರ್ಕಾರವನ್ನೇ ಬೇಂದ್ರೆಯವರ ಮೇಲೆ ಕೆಡವಿತು. ಸರ್ಕಾರ ಇವರ ಕೆಲಸ ಕಿತ್ತುಕೊಂಡಿತು. ಮುಗದ್‌ನಲ್ಲಿ ಇವರನ್ನು ಬಂಧನದಲ್ಲಿರಿಸಿತು. ಅದೇನೂ ಆಶ್ಚರ್ಯವಲ್ಲ. ಸರ್ಕಾರಗಳು ಮತ್ತೇನನ್ನೂ ಮಾಡಲು ಅರಿಯದವು. ಸರ್ಕಾರವು ಕವಿಯ ಸ್ವಾತಂತ್ರ್ಯವನ್ನು ಅಪಹರಿಸಿತೇ ಹೊರತು ಕವಿಯ ಕವಿತಾಶಕ್ತಿಯನ್ನು ಅಪಹರಿಸಲಿಲ್ಲ. ಒಂದು ಸಲ ಬ್ರಹ್ಮನಿಗೆ ರಾಜಹಂಸಗಳ ಮೇಲೆ ಸಿಟ್ಟು ಹತ್ತಿತಂತೆ; ರಾಜಹಂಸಗಳು ಮಾನಸಸರೋವರಕ್ಕೆ ಬರದಂತೆ ಬ್ರಹ್ಮ ಅಪ್ಪಣೆ ಮಾಡಿದ. ಒಂದು ಹಂಸವು ಬಹ್ಮನಿಗೆ 'ನೀನು ನಮ್ಮನ್ನು ಮಾನಸಸರೋವರಕ್ಕೆ ಬರದಂತೆ ತಡೆಯಬಹುದು, ಆದರೆ ಹಾಲನ್ನೂ ನೀರನ್ನೂ ಬೇರೆ ಮಾಡುವ ನಮ್ಮ ಶಕ್ತಿಯನ್ನು ನೀನು ಕಿತ್ತುಕೊಳ್ಳಲಾರೆ' ಎಂದಿತಂತೆ.

ಬೇಂದ್ರೆಯವರ ಕಾವ್ಯವನ್ನು ಅರಿಯುವುದು ಅವರ ಸ್ವಭಾವನ್ನು ಅರಿತಂತೆಯೇ. ಇಂತಹ ಪರಿಚಯಾತ್ಮಕವಾದ ಚಿಕ್ಕ ಪ್ರಬಂಧದಲ್ಲಿ ಅವರು ರಚಿಸಿರುವ ಕವನಗಳ ಹೆಸರನ್ನು ಹೇಳುವುದಕ್ಕೂ ಸ್ಥಳ ಸಾಲದು. ಶ್ರೀಮಾನ್ ಪು. ತಿ. ನರಸಿಂಹಾಚಾರ್ಯರು ಒಂದೆಡೆ ಹೇಳಿದಂತೆ 'ಬೇಂದ್ರೆಯವರ ಕಾವ್ಯಗಳನ್ನು ವಿಮರ್ಶಿಸುವ ಕಾಲ ಹೋಯಿತು. ಇನ್ನು ಅವು ವ್ಯಾಖ್ಯಾನಕ್ಕೆ ತಕ್ಕುವು' ಎಂಬುದು ನಿಜ. ಬೇಂದ್ರೆಯವರ ಕವನಗಳ ವ್ಯಾಖ್ಯಾನವನ್ನು ನಾವು ಬರಿಯ ಬುದ್ಧಿಯಿಂದ ಮಾತ್ರ ಮಾಡುವುದಕ್ಕೆ ಹೋದರೆ ಅದರ ಆಳ, ಸ್ವಾರಸ್ಯ, ಸಂದೇಶ ನಮಗೆ ಖಂಡಿತ ದೊರಕುವುದಿಲ್ಲ. ಅವರ ಕವನಗಳನ್ನು ನಮ್ರತೆಯಿಂದಲೇ ಸವಿಯಬೇಕು. ಪ್ರೇಮ, ಸೌಂದರ್ಯ, ತ್ಯಾಗ, ಇವುಗಳ ಮಾನದಂಡದಿಂದಲೇ ಅವನ್ನು ಅಳೆಯಬೇಕು. ನನ್ನ ಮನಸ್ಸು, ನನ್ನ ಕಾರ್ಯ, ನನ್ನ ಶಕ್ತಿ ಎಲ್ಲವೂ ಯಾವಾಗಲೂ ಭಾರತ ಸ್ವಾತಂತ್ರ್ಯಸಾಧನೆಗೆ ಆಗಲಿ ಎಂಬುದು ಈ ಕವಿಯ ವ್ರತ. ದೇಶಕ್ಕಾಗಿ 'ಗಂಡುಸಾದರೆ ನಿನ್ನ ಬಲಿಕೊಡುವಿಯೇನು ?' ಎಂದು ಎದೆ ನಡುಗುವ ಗಂಡು ಪ್ರಶ್ನೆಯನ್ನು ಇವರು ಹಾಕುತ್ತಾರೆ. ನಮ್ಮವರ ದಾರಿದ್ರ್ಯ, ದೀನತೆ, ಹಸಿವು ಇವರ ಬಗೆಯನ್ನು ಬಹಳ ಕದಡಿವೆ. ಬಡವರ, ಹೊಟ್ಟೆಗಿಲ್ಲವರ ಸಂಕಟ ಇವರ ಕಾವ್ಯವಾಣಿಯನ್ನು ಕೆರಳಿಸಿದೆ. ಧನಿಕರ ಔದ್ಧತ್ಯದಿಂದ ಇವರು ಔಡು

ಕಚ್ಚಿದ್ದಾರೆ. ‘ ದೈವುಳ್ಳವರಿಗೆ ದಂಪೇ ಇಲ್ಲ, ತಿತ್ತಿರಿ ತುಂಬಿದೆ ಜೊಕ್ಕಸದೊಡಲು ಆದರೆ ಬರಿದೋ ಬರಿದು ತೆರವೋ ತೆರವು ಬಡವರ ಬಗ್ಗರ ತುತ್ತಿನ ಚೀಲ. ’ ಬಡವರ ಹಸಿವು ಜಗತ್ತನ್ನೇ ಸುಡುತ್ತದೆ. ಈ ಹಸಿವನ್ನು ಆರಿಸದ ದೇವರುಗಳಿಂದ ತಾನೆ ಪ್ರಯೋಜನವೇನು ? ಅವತಾರಗಳಿಂದ ತಾನೆ ಪ್ರಯೋಜನವೇನು ? ಪ್ರಾಣ-ದೇವರು ನಿತ್ರಾಣನಾಗಿ ಒಂದು ಕಡೆ ವಸುಂಧರೆ ಮತ್ತೊಂದು ಕಡೆ, ರತ್ನಾಕರ ಇವರ ನಡುವೆ ಬಿದ್ದು ನರಳುತ್ತಿದ್ದಾನೆ. ಸಿಡುಕು ದೇವ ಬರುತ್ತಾನೆ, ಮಿಡುಕುವ ದೇವ (ರಾಮ-ಸೀತೆಗಾಗಿ ಮಿಡುಕುತ್ತಿದ್ದಾನೆ ಎಂದು ಒಂದು ಸಲ ಬೇಂದ್ರೆ ಹೇಳಿದರು) ಬರುತ್ತಾನೆ. ಯಾರು ಬಂದರೂ, ಅನ್ನದೇವರು ಮಾತ್ರ ಇನ್ನೂ ಬರಲಿಲ್ಲೊ ಇನ್ನೂ ಬರಲಿಲ್ಲ. ’

ಬೇಂದ್ರೆಯವರ ಕವನಗಳಲ್ಲಿ ಉದ್ದಕ್ಕೂ ಬಡವರ ಮೇಲಿನ ಈ ಕನಿಕರ ಒಡೆದು ಕಾಣುತ್ತದೆ. ಅದು ಅವರ ಸ್ವಭಾವದ ಪ್ರತಿಬಿಂಬ. ಅನ್ನಾವತಾರದಂತಹ ಒಂದು ಪದ್ಯ, ಬಂಗಾಳಾ ಕ್ಷಾಮವನ್ನು ಕುರಿತು ನೂರು ವರದಿಗಳು ಮಾಡದಿರುವ ಕೆಲಸವನ್ನು ಮಾಡಿದೆ. ಪ್ರಗತಿಶೀಲರು ಇದನ್ನು ತಮ್ಮ ರಾಷ್ಟ್ರಗೀತೆಯಾಗಿ ಇಟ್ಟು-ಕೊಳ್ಳಬಹುದು. ದೇಶದ ದಾರಿದ್ರ್ಯ ಕವಿಯ ಹೃದಯವನ್ನು ಕಲಕಿದಂತ ಹೆಣ್ಣಿನ ಕಷ್ಟವೂ ಕವಿಯನ್ನು ಶೋಕದಲ್ಲಿ ಮುಳುಗಿಸಿದೆ. ಬೇಂದ್ರೆಯವರು ಮುಗದ್‌ನಲ್ಲಿ ಬಂಧನದಲ್ಲಿದ್ದಾಗ ನಡೆದ ಒಂದು ಸಂಗತಿಯನ್ನು ಕುರಿತು ‘ ಹೆಣದ ಹಿಂದೆ ’ ಎಂಬ ಹೆಸರಿನ ಕವನವೊಂದನ್ನು ಬರೆದರು. ಸತ್ತವನ ಹೆಣದ ಹಿಂದೆ ಬಾಲವಿಧವೆ ಹೋಗುತ್ತಿದ್ದಾಳೆ. ತಲೆ ಕೆದರಿಕೊಂಡು ಬಾಯಿ ಬಡಿದುಕೊಳ್ಳುತ್ತಿದ್ದಾಳೆ. ಕವಿಯ ಹೃದಯವನ್ನು ಕೊಡಲಿಯಿಂದ ಸೀಳಿದಂತೆ ಆಗುತ್ತಿದೆ. ಆ ‘ ಪುಟ್ಟ ವಿಧವೆ ’ಯ ಮದುವೆಯನ್ನು ಕವಿಜ್ಞಾಪಿಸಿಕೊಳ್ಳುತ್ತಾನೆ.

‘ ಕೊರಳ ಕರಿಮಣಿ, ಗಲ್ಲದರಿಷಿಣವು ಮುಗಬೊಟ್ಟು
ಆಮೇಲೆ ಉದ್ದು ಕುಂಕುಮದ ಅಂದ
ಆ ಪುಟ್ಟ ಮುತ್ತೈದೆ ಪುಟಪುಟನೆ ನೆಗೆದಾಡೆ
ಅಷ್ಟೆ ಕಂಡಿತು ಕಣ್ಣಿಗೆಷ್ಟೊ ಚೆಂದ........ ’

‘ ತನ್ನ ದುಃಖ ನುಂಗಿಕೊಂಡು
ಅವಳು ಹಸಿವ ಕಳೆಯ ಬೇಕು
ತಾನೆ ಅತ್ತು ಹಾಡಿಕೊಂಡು
ತನ್ನ ತಾನೇ ರಮಿಸಬೇಕು
ಅವಳಿಗಾವ ಕೆರೆಯ ದಾರಿ

ಹೆಣ್ಣು ಪಾಡು ನಾಯಿಪಾಡು
ಎಂದುದೆಷ್ಟೊ ಸಲವೊ ಏನೊ
ಬೇಡ ಬೇಡ ಹೆಣ್ಣುಜನ್ಮ
ಬಯ್ದುಕೊಂಡುದೆಷ್ಟು ಸಲವೊ
ಮುಂದೆ ಹೇಗೆ ಮುಂದೆ ಹೇಗೆ
ಒಂದೆ ಒಂದು ಮಾತು ಮತ್ತೆ '

ಆದರೆ ಸಮಾಜ ಅವಳ ದುಃಖಕ್ಕೆ ಅವಳನ್ನು ಬಿಟ್ಟೀತೆ ?

' ಹತ್ತು ದಿವಸಕೆ ಹಾಳು ಮುತ್ತೈದೆತನ ಹೋಗಿ
ವೈಧವ್ಯ ಸಂಪತ್ತು ಪಡೆದಳಾಕೆ
ಮನೆಯವರು ವೈದಿಕರು ಊರು ಧರ್ಮದ ತವರು
ಶಾಸ್ತ್ರವಿದೆ ಬೇರೆಯ ವಿಚಾರವೇಕೆ ?
ತಲೆಭಾರ ಇಳಿದಿತ್ತು ಅಂಗಾರ ಬೆಳೆದಿತ್ತು;
ಮೈಯನ್ನು ಮುಚ್ಚಿತ್ತು ಕೆಂಪು ಸೀರೆ
ಆದರಯ್ಯೋ ಪಾಪ ! ಆಕೆಯಿನ್ನೂ ಮಗುವು
ಸಿಂಗಾರವಿರದೆ ! ಆ ಮಾತೆ ಬೇರೆ
ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದಳೊ
ಹೂಬತ್ತಿ ಹೊಸೆಯಲಿಕೆ ಮೈತಳೆದಳೊ '

ಆದರೆ ಈ ಅನ್ಯಾಯವನ್ನು ದೇವರು ಸುಮ್ಮನೆ ಬಿಡುವುದಿಲ್ಲ. ಬರುತ್ತಿರುವ ಕ್ರಾಂತಿ, ಕವಿಯ ಕಣ್ಣಿಗೆ ಕಾಣುತ್ತದೆ. ಅವಳ ದುಃಖ ಜಗತ್ತನ್ನು ನಾಶ ಮಾಡಲು ಸಾಕು. ಆ ದುಃಖ :

ತುಳಿದೇ ಬಿಡುವೆ ಬಾಳನೆಲ್ಲ
ಎಂಬ ಸೊಲ್ಲ ಹುಟ್ಟಿಸುವುದು
ಆನಂದ ಸ್ಪಂದದಿಂದ
ಹುಟ್ಟಿ ಬಂದ ಸೃಷ್ಟಿಯಿಂದ
ಇಂಥ ಮಾತು ಹುಟ್ಟಬೇಕೆ

ಕವಿ ಕುರುಡನಲ್ಲ. ತನ್ನವರು ಸ್ತ್ರೀಗೆ ಮಾಡಿದ ಅನ್ಯಾಯ ಆತನಿಗೆ ಗೊತ್ತು. ಅವನು ಹೀಗೆ ಸಮಾಧಾನಪಡಿಸುತ್ತಾನೆ.

ಕಾಳಿಯಂತೆ ಕೇಣಗೊಂಡು
ಶಿವನ ಎದೆಯ ತುಳಿಯಲೆಂದು
ಅಡಿಯನೆತ್ತಬೇಡ ತಾಯಿ
ಬಂದುದೆಲ್ಲದಕ್ಕೆ ನೀನು
ತಲೆಯನೊಡ್ಡದಿರಲು ನಮಗೆ
ನಿಲ್ಲೆ ನೆಲೆಯು ಎಲ್ಲು ಇಲ್ಲ
ನಮ್ಮ ಕಾಲ ಹಾದಿ ನೀನು
ನಿನ್ನ ತುಳಿವೆವೆಂದರೇನು
ನಿನ್ನ ಮೈಯ ಮಣ್ಣು ನಮ್ಮ
ಮನೆಗಳನ್ನು ಕಟ್ಟುತಿಹುದು.

ಬೇಂದ್ರೆಯವರ ಸ್ವಭಾವದಲ್ಲಿ ದುಃಖ, ಹಾಸ್ಯ, ಪ್ರೀತಿ ಮೂರೂ ಸಮನಾಗಿ ಬೆರೆತಿವೆ. ಪ್ರೀತಿಯು ಅವರ ಕಾವ್ಯಗಳಲ್ಲಿ ಬರಿಯ ಕಾಮವಾಗಿ ಉಳಿದಿಲ್ಲ. ಹೆಣ್ಣು–ಗಂಡುಗಳ ಆತ್ಮವನ್ನು ಉದ್ಧಾರ ಮಾಡುವ ತೇಜಶ್ಶಕ್ತಿ ಅದು. ಕವಿಯು ಸೌಂದರ್ಯದೇವಿಗೆ :

'ಓಂ ನಮೋ ನಲ್ ಎಂದು ಇಂದು ಎಲ್ಲರ ನಲ್ಲೆ ವಂದಿಸುವೆ ಮುಂದೆ ಬಂದು
ನನ್ನ ಮನ ಕಂಡಿತಾ ನನ್ನೀ ಪ್ರಸನ್ನತೆಯು ನಿನ್ನೆದೆ ಪ್ರಸಾದವೆಂದು'

ನಮಿಸುತ್ತಾನೆ. ಪ್ರಕೃತಿಯು ತಳೆಯುವ ವಿಧವಿಧಗಳಾದ ಬೆಡಗುಗಳೆಲ್ಲಾ ಆತನ ಪ್ರೇಮಉಪಾಸನೆಗೇ ಸಹಾಯವಾಗುತ್ತವೆ. ಮುಗಿಲ ಮಾರಿಗೆ ರಾಗರತಿಯ ನಂಜು ಏರುತ್ತದೆ; ಬಿದಿಗೆ ಚಂದ್ರನಾ ಜೊಗಚೀ ನಗೆ ಹೂ ಮೆಲ್ಲಗೆ ಮೂಡುತ್ತದೆ; ಮೇಲಕ್ಕೆ ಬೆಳ್ಳಿಯನ್ನು ಕೂಡುತ್ತದೆ.

ಇರುಳ ಹೆರಳಿನ ಅರಳಮಲ್ಲಿಗೀ ಜಾಳಿಗಿ ಹಾಂಗಿತ್ತ ಸೂಸ್ಯಾವ ಚಿಕ್ಕಿ ಅತ್ತಿತ್ತ
ಮಳ್ಳ ಗಾಳಿ ಸುಳಿ ಕಳ್ಳ ಕೈಲೆ ಸೆರಗನು ಹಿಡಿದಿತ್ತ ಮತ ಮತ ಬೆರಗಿಲೆ ಬಿಡತಿತ್ತ
ಒಂದ ಮನದ ಗಿಣಿ ಹಿಂದೆ ನೆಳ್ಳಿಗೆ ಬೆನ್ನಿಲೆ ಬರತಿತ್ತ ತನ್ನ ಮೈ ಮರಮರತಿತ್ತ.

ಈ ಸುಖವಾದ ಸನ್ನಿವೇಶಕ್ಕೆ ಅನುಗುಣವಾಗಿ ನಲ್ಲನಿಗೆ ನಲ್ಲೆ ಗೋಚರವಾಗುತ್ತಾಳೆ :

ನಾರೀ ನಿನ್ನ ಮಾರೀ ಮ್ಯಾಗ
ನಗೀನವಿಲು ಆಡತಿತ್ತ

ಆಡತಿತ್ತ ಓಡತಿತ್ತ
ಮುಗಿಲ ಕಡೆ ನೋಡತಿತ್ತ

ಕಣ್ಣಿನಾಗ ಬಣ್ಣದ ನೋಟ
ತಕ ತಕ ಕುಣಿದಾಡುತಿತ್ತ
ಕುಣೀತಿತ್ತ ಮಣೀತಿತ್ತ
ಒನಪಿಲೆ ವನದಾಡತಿತ್ತ

ಬೇಂದ್ರೆಯವರು ಪ್ರೇಮದ ಮೀಮಾಂಸೆಯನ್ನು ಸಖೀಗೀತದಲ್ಲಿ ಅನು-ಭವದ ಹಿನ್ನೆಲೆಯಲ್ಲಿ ವರ್ಣಿಸಿದ್ದಾರೆ. ಬೇಂದ್ರೆಯವರ ಹಾಸ್ಯ ಸಹ ಬರಿಯ ಬರಡು, ಒಣಗಿದ ಹಾಸ್ಯವಲ್ಲ. 'ನಾಯಿಮರಿ'ಯಂತಹ, ಮಕ್ಕಳಿಗೆ ಬರೆದ ಪದ್ಯದಲ್ಲಿ ಸಹ ಕರುಣೆ ಕಣ್ಣೀರನ್ನು ಮಿಡಿಸುತ್ತದೆ. ಅವರ್ಣನೀಯ ಸೌಂದರ್ಯದ ಹಾಸ್ಯದಲ್ಲಿ ಸಹ ಆ ಸೌಂದರ್ಯ ಸ್ವಾಭಾವಿಕವಲ್ಲ ಎಂಬ ಒಂದು ಕೊರಗಿದೆ.

ತುಟಿಗಳನು ಬಣ್ಣಿಸಲೆ ? ತುಂಬೆಲ್ಲ ತಂಬುಲವು
ಹಲ್ಲುಗಳ ಬಣ್ಣಿಸಲೆ ? ನಿನ್ನವಹುದೋ ?
ಸಾರಣೆಯ ಕಾರಣೆಯ ಗಲ್ಲಗಳ ಬಣ್ಣಿಸಲೆ ?
ಆ ಬಣ್ಣನೆಯು ಏನು ನಿನ್ನದಹುದೊ ?

ಪ್ರೇಮಕ್ಕೆ ತಂಗಾಳಿಯಾದ 'ರಸಿಕಾ ಪೇಳೋ' ಎಂಬ ಪದ್ಯದಲ್ಲಿ ಸಹ 'ಪ್ರೇಮ ಯಾವಾಗಲೂ ಪೂರ್ಣವಿಲ್ಲ, ಆದರಲ್ಲಿ ಒಂದು ಕೊರತೆ ಇದ್ದೇ ಇದೆ.' ಎಂಬ ಭಾವವಾಗುತ್ತದೆ.

ಕಬ್ಬಿನ ಗಣೆ ಡೊಂಕು ಅದರ ಹಾಲದು ಡೊಂಕೆ ರಸಿಕಾ ಪೇಳೊ
ಹುಬ್ಬಿನ ಗೆರೆ ಡೊಂಕು ಕಣ್ಣ ನೋಟವು ಡೊಂಕೆ ರಸಿಕಾ ಪೇಳೊ
ಬಿಲ್ಲ ಕಂಬಿಯು ಡೊಂಕು ಬಿಟ್ಟ ಬಾಣವು ಡೊಂಕೆ ರಸಿಕಾ ಪೇಳೊ
ಹಲ್ಲ ಸಾಲದು ಡೊಂಕು ಬಿದ್ದ ಕಿರಣವು ಡೊಂಕೆ ರಸಿಕಾ ಪೇಳೊ
ಬಿದಿಗೆ ಚಂದ್ರನು ಡೊಂಕು ಬೆಳದಿಂಗಳದು ಡೊಂಕೆ ರಸಿಕಾ ಪೇಳೊ
ಬಿದಿಯಿತ್ತ ಕುಲ ಡೊಂಕು ನನ್ನ ಪ್ರೀತಿಯು ಡೊಂಕೆ ರಸಿಕಾ ಪೇಳೊ.

ಪ್ರೇಮದ ವ್ಯಾಪಾರದಲ್ಲಿ ಕೊಡುವುದು ಮಾತ್ರವೇ ಹೊರತು ತೆಗೆದುಕೊಳ್ಳುವು-ದಿಲ್ಲವೆಂಬುದು ಕವಿಗೆ ಗೊತ್ತು. ಪ್ರೇಮ ವ್ಯವಹಾರವಲ್ಲ; ತ್ಯಾಗ. ಗಳಿಗೆ ಗಳಿಗೆಗೂ ದುಃಖದ ಕಾರ್ಮೋಡಗಳು ಎದ್ದು ಸುಖವನ್ನೂ, ಶಾಂತಿಯನ್ನೂ ಹಾಳುಮಾಡು

ಮಾಡುತ್ತವೆ. ಅತೃಪ್ತಿ, ಒಳಕ್ಕೆ ಸೇರಿಕೊಳ್ಳಲು ಬಾಗಿಲಿನಲ್ಲಿಯೇ ಕಾಯುತ್ತಿರುತ್ತದೆ.

ಹಳ್ಳದ ದಂಡ್ಯಾಗ ಮೊದಲೀಗೆ ಕಂಡಾಗ| ಏನೊಂದು ನಗಿ ಇತ್ತ
ಏನೊಂದು ನಗಿ ಇತ್ತ, ಏಸೊಂದು ನಗಿ ಇತ್ತ ! ಏರಿಕೆ ನಗಿ ಇತ್ತ

ಆ ನಗು ಈಗ ಏನಾಯಿತು ? ಅಂದು ಕಟ್ಟಿದ ಸ್ವರ್ಗ ಈಗ ಎಲ್ಲಿ ? ಮಾತು ಮಾತಿಗೆ ಈ ವಿರಸ ಯಾಕೆ ? ನಾನೊಂದು ನೆನೆದರೆ ನೀನೊಂದು ನೆನೆ-ಯುತೀ ? ನನಗೆ ಯಾಕೆ ಮುನಿಯುತಿ ? ಎಂದು ಕವಿಯು ಚಿಂತಿತನಾಗುತ್ತಾನೆ. ‘ ಕೊನೆಗೆ ಬಾಳೇ ಹೀಗೆ. ಇದರಲ್ಲಿ ಸುಖದುಃಖ ಸಮ. ಸುಖವನ್ನು ಕದ್ದಾದರೂ ಅನುಭವಿಸುವುದೇ. ಅಳುವನ್ನು ನುಂಗಿ ನಗಬೇಕು. ನಕ್ಕವನೇ ಗೆದ್ದ. ಅತ್ತವನೇ ಸತ್ತ. ’

‘ ಹುಸಿ ನಗುತ ಬಂದೇವ ನಸು ನಗುತ ಬಾಳೋಣ
ತುಸು ನಗುತ ತೆರಳೋಣ
ಬಡ ನೂರು ವರುಷಾನ ಹರುಷಾದಿ ಕಳೆಯೋಣ
ಯಾಕಾರೆ ಕೆರಳೋಣ
ಬಡತನ ಒಡೆತನ ಕಡೆತನಕುಳಿದಾವೇನ
ಎದೆ ಹಿಗ್ಗು ಕಡೆಮುಟ್ಟ
ಬಾಳೀನ ಕಡಲಾಗ ಅದನು ಮುಳುಗಿಸಬೇಡ
ಕಡಗೋಲು ಹಿಡಿಹುಟ್ಟ ’

ಹೀಗೆ ಪ್ರೇಮದ ನಾವೆಯನ್ನು ಸಾಗಿಸಿ ಬಾಳನ್ನು ಬಾಳಬೇಕು. ಯಾವುದಿಲ್ಲದಿದ್ದರೂ ಆಗುತ್ತದೆ ‘ ನಾನು ಬಡವಿ ಆತ ಬಡವ, ಒಲವೆ ನಮ್ಮ ಬದುಕು| ಬಳಸಿಕೊಂಡೆವದನೆ ಅದಕು ಇದಕು ಎದಕು ’ ಹೀಗೆ ಜಗತ್ತಿನ ದೃಷ್ಟಿಯು ಸಾಗುತ್ತಿದೆ. ಗಂಡು ಯಾವುದೋ ಹೆಣ್ಣು ಯಾವುದೋ; ಪ್ರೇಮ ಒಂದನ್ನೊಂದು ಬೆಸೆಯುತ್ತದೆ.

‘ ಆ ಮುಖಾ ಈ ಮುಖಾ
ಯಾವ ಗಂಡೊ ಯಾವ ಹೆಣ್ಣೊ
ಪ್ರೀತಿಯೆಂಬ ಚುಂಬಕಾ
ಕೂಡಿಸಿತ್ತು ಆಡಿಸಿತ್ತು
ಕೂಡಲದೊಲು ನೋಟವಾ
ಮೂರು ದಿನದ ಆಟವಾ

ಬೇಂದ್ರೆಯವರ ಕಲೆ, ಕಲ್ಪನೆಯು, ಸಚ್ಚಿದಾನಂದ ಬ್ರಹ್ಮದಲ್ಲಿ ಭೃಂಗದ ಬೆನ್ನೇರಿ ಬರುತ್ತಿದ್ದರೂ ಅದರ ಬೇರು ಜನಪದದಲ್ಲಿಯೇ ಇದೆ. ಅವರ ಮಾತಿ-ನಲ್ಲಿ, ಕವನದಲ್ಲಿ ಸಂಸ್ಕೃತ ಪದ ಬಹು ವಿರಳ. ಅವರು ಆರಿಸುವ ಮಟ್ಟುಗಳೆಲ್ಲಾ ಜನಪದ ಸಾಹಿತ್ಯದ, ರಾಗಿ ಬೀಸುವ ಹಾಡುಗಳ ಮಟ್ಟುಗಳೇ ಅವುಗಳನ್ನೆಲ್ಲಾ ಜನಜೀವನದ ಸಂಪರ್ಕದಿಂದಲೇ ಹೊಂದಿದ್ದಾರೆ. ಅದೇ ಬೇಂದ್ರೆಯವರ ಬಲ. ಅವರ ಕವನ ಜನರನ್ನು ಹಾಗೆ ಆಕರ್ಷಿಸುತ್ತಿರುವದಕ್ಕೂ ಅದೇ ಕಾರಣ. ಒಂದು ಸಲ ಅವರು, 'ಕುಣಿಯೋಣು ಬಾರ' ಕವನವನ್ನು ಹಾಡವುದನ್ನು ಮೂರು ವರುಷ ನಿಲ್ಲಿಸಿ ಬಿಟ್ಟರು. 'ಕೆಲವು ದಿನ ಹಾಡುವುದಿಲ್ಲ, ಜನ ಮರೆತರೆ ಮರೆಯಲಿ' ಎಂಬುದು ಅವರ ಅಭಿಪ್ರಾಯವಾಗಿದ್ದಿತು. ಆದರೆ ಜನ ಒಳ್ಳೆಯದನ್ನು ಎಂದಿಗೂ ಸಾಯಗೊಡುವುದಿಲ್ಲ. ಜನದ ಬಾಯಲ್ಲಿ ಕನ್ನಡ ಇರುವ ವರೆಗೆ ಬೇಂದ್ರೆ ಹೆಸರು ಇದ್ದೇ ಇರುತ್ತದೆ.

ನನ್ನ ಸ್ನೇಹಿತರೊಬ್ಬರು 'ಬೇಂದ್ರೆ, ಈ ಐವತ್ತು ವರುಷದಿಂದ ಏನು ಆಸ್ತಿ ಮಾಡಿದ್ದಾರೆ' ಎಂದು ಕೇಳಿದರು. ಅವರಿಗೆ ನಾನು ತತ್ ಕ್ಷಣ ಜವಾಬು ಕೊಡ-ಲಿಲ್ಲ. ಬೇಂದ್ರೆಯವರ ಕೆಲಸ ಹೋದಾಗ ಅವರನ್ನು ನಾನು 'ಮುಂದೆ ಎಲ್ಲಿಗೆ ಹೋಗುತ್ತೀರಿ' ಎಂದು ಕೇಳಿದ್ದೆ. ಬೇಂದ್ರೆ "ಧಾರವಾಡಕ್ಕೆ" ಎಂದರು. "ಅದೇನು" ಎಂದೆ. 'ಅಲ್ಲೊಂದು ಮನೆ ಇದೆ' ಎಂದರು. ತಲೆಯ ಮೇಲೆ ಒಂದು ಸೂರು ಇದ್ದರೆ ಸಾಕೆಂದು, ಅಲ್ಲಿ ಕಾವ್ಯ ಬರೆಯುವವರು, ಆಸ್ತಿ ಮಾಡುವ ಜನವೇ? ಕಾವ್ಯಗಳೇ ಅವರ ಆಸ್ತಿ. ಜನಾನುರಾಗವೇ ಅವರ ಸಂಪತ್ತು. ನನ್ನನ್ನು ಪ್ರಶ್ನೆ ಮಾಡಿದವರಿಗೆ ನಾನು 'ನೀವು ಬೇಂದ್ರೆಯವರನ್ನು ನೋಡಿಲ್ಲ. ನೋಡಿಯಾದ ಮೇಲೆ ನನ್ನನ್ನು ಈ ಪ್ರಶ್ನೆ ಕೇಳಿ.' ಎಂದೆ. ಕೆಲವು ತಿಂಗಳುಗಳ ನಂತರ ಅವರು ಬೇಂದ್ರೆಯವರನ್ನು ಬೆಂಗಳೂರಿನಲ್ಲಿ ನೋಡಿದರು. ಈಚೆಗೆ ಮತ್ತೆ ನನಗೆ ಪ್ರಶ್ನೆ ಹಾಕಿಲ್ಲ.

ಕೊನೆಗೆ ಈ ಪದ್ಯವನ್ನೇ ಹೇಳಿ ಬೇಂದ್ರೆಯವರನ್ನು ನಮಿಸುತ್ತೇನೆ :

ನಡಿದು ಬೇಸತ್ತಾಗ | ದುಡಿದುಡಿದು ಸತ್ತಾಗ
ಜಗಕ ಹಿಗ್ಗಿನ ಹಾಡು ನೀಡಾಂವಾ
ನಿನ್ಹಾಂಗ ಆಡಾಕ | ನಿನ್ಹಾಂಗ ಹಾಡಾಕ
ಪಡೆದು ಬಂದವ ಬೇಕೊ ಗುರುದೇವಾ

ಮಕ್ಕಳಾಗ್ಯಾಡೀದಿ | ಹಕ್ಕ್ಯಾಗಿ ಹಾಡೀದಿ
ಚಿಕ್ಕ್ಯಾಗಿ ನೋಡೀದಿ ಗುರುದೇವಾ

ಬಳ್ಳ್ಯಾಗ ಕುಣಿದೀದಿ | ಬೆಳಕಿನ್ಯಾಗ ತಣಿದೀದಿ
ಹೂವಾಗಿ ಅರಳೀದಿ ಗುರುದೇವಾ

ಬೆಳಿಯಾಗೀಸಾಡೀದಿ | ಗಾಳ್ಯಾಗ ಬೀಸಃಡೀದಿ
ಮಳಿಯಾಗ ಕೂಸಾಡೀದಿ ಗುರುದೇವಾ
ಬಿಸಿಲ್ಹಣ್ಣು ಉಂಡೀದಿ | ಬೆಳದಿಂಗಳ ಕಂಡೀದಿ
ಚಳಿಮುದ್ದು ಕೊಂಡೀದಿ ಗುರುದೇವಾ

ಮೂಡಲಕ ಮೂಡೀದಿ | ಪಡುವಲಕ ಓಡೀದಿ
ದಿಕ್ಕೆಲ್ಲ ಕೂಡೀದಿ ಗುರುದೇವ
ಹಾಡಿ ಹಣ್ಣಾದಿ ನೀ | ಜಗದ ಕಣ್ಣಾದಿ ನೀ
ದುಡಿದು ಸಣ್ಣಾದಿ ನೀ ಗುರುದೇವಾ.

§ § § §

---

* 'ಸಾಹಿತ್ಯ ರಶ್ಮಿ' ಯಿಂದ.

೫೩ | # ನನಗಿದ್ದ ಬೇಂದ್ರೆಯವರ ಪರಿಚಯ

**ರಾ. ವೆ. ಕರಗುದರಿ**

ಕಳೆದ ಅರ್ಧಶತಮಾನದಿಂದ ನಾನು ಶ್ರೀ ಬೇಂದ್ರೆಯವರನ್ನು ಬಲ್ಲೆ. ಸನ್ ೧೯೨೨-೨೩ ಈ ಎರಡು ವರ್ಷಗಳಲ್ಲಿ, ನಾನು ಧಾರವಾಡದಲ್ಲಿ, ಆಗ ಅಲ್ಲಿ ಇದ್ದ ರಾಷ್ಟ್ರೀಯ ಶಾಲೆಯಲ್ಲಿ (ಈಗ ಆ ಕಟ್ಟಡದಲ್ಲಿ ವಿದ್ಯಾರಣ್ಯ ಹಾಯ್‌ಸ್ಕೂಲು ಇದೆ) ಕಲಿಯಲು ಇದ್ದೆ. ಆಗ ಬೇಂದ್ರೆಯವರು ಆ ಶಾಲೆಯ ಶಿಕ್ಷಕರಲ್ಲಿ ಒಬ್ಬ-ರಾಗಿದ್ದರು.

ಆಗಿನಿಂದಲೇ ನಾನು ಅವರ ವೈಶಿಷ್ಟ್ಯಗಳನ್ನು ಬಲ್ಲೆ. ಅವರು ತೀಕ್ಷ್ಣ-ಬುದ್ಧಿಯವರೂ, ಒಳ್ಳೇ ಅಭ್ಯಾಸಿಗಳೂ, ಕವಿತ್ವದಲ್ಲಿ ನಿವೇಶವುಳ್ಳವರೂ, ಒಳ್ಳೇ ವಾದಿಗಳೂ, ಒಳ್ಳೇ ಶಿಕ್ಷಕರೂ ಎಂಬುದಾಗಿ ಪರಿಚಿತರಿದ್ದರು.

ಯಾವಾಗಲೂ ಅವರ ಸಂಗಡ, ಕೆಲವು ವಿದ್ಯಾರ್ಥಿಗಳು ಓಡಾಡುತ್ತ ಅವರ ಮಾರ್ಗದರ್ಶನದಲ್ಲಿ, ಸಾಹಿತ್ಯದ ಪಾಠಗಳನ್ನು ಪಡೆಯುತ್ತಿದ್ದರು. ಭಾಷಣ ಕಲೆಯಲ್ಲಿ, ಕವಿತೆ ಬರೆಯುವುದರಲ್ಲಿ, ಲೇಖ ಬರೆಯುವುದರಲ್ಲಿ, ಅನೇಕ ತರುಣರು ಬೇಂದ್ರೆಯವರಲ್ಲಿಯ ಪಾಠದಿಂದ ಮುಂದುವರಿದರು. ಆ ಶಾಲೆಯಲ್ಲಿ, ವಿದ್ಯಾರ್ಥಿಗಳಿಂದ ಒಂದು ಕೈಬರಹದ ಮಾಸಪತ್ರಿಕೆಯು ಪ್ರಕಟಿಸಲ್ಪಡುತ್ತಿತ್ತು. ನಾನೂ ಅವರಲ್ಲಿ ಒಬ್ಬನಾಗಿದ್ದೆ.

ಮುಂದೆ ನಾನು ಡಾ. ಹರ್ಡೀಕರರ ಸೆಳವಿಗೆ ಸಿಕ್ಕದ್ದರಿಂದ ನನ್ನದೂ ಬೇಂದ್ರೆಯವರದೂ ಹೆಚ್ಚು ಸಂಪರ್ಕ ಉಳಿಯಲಿಲ್ಲ.

ಆದರೂ ಬೇಂದ್ರೆಯವರನ್ನು ಆಗಾಗ್ಗೆ ಭೆಟ್ಟಿಯಾಗುವ ಪ್ರಸಂಗಗಳು ಹಾಗೆ ಬಂದೇಬರುತ್ತಿವೆ. ಅವರ ಹೆಣ್ಣುಕೊಟ್ಟ ಮಾವಂದಿರಾಗಿದ್ದ ಶ್ರೀ ಜೋಗಳೇಕರರು ಹಾನಗಲ್ಲಿನಲ್ಲಿ ಸರಕಾರೀ ಕೆಲಸದಲ್ಲಿದ್ದಾಗ್ಗೆ ಬೇಂದ್ರೆಯವರು ಅಲ್ಲಿಗೆ ಬರುತ್ತಿದ್ದರು.

ಆಗ ಆ ಊರಲ್ಲಿ ಅವರ ಪರಿಚಯದ ವ್ಯಕ್ತಿ ನಾನೊಬ್ಬನೇ ಆಗಿದ್ದೆ. ನನ್ನ ಮನೆಗೆ ಅವರು ಬರುತ್ತಿದ್ದರು; ಅವರ ಮನೆಗೆ ನಾನು ಹೋಗುತ್ತಿದ್ದೆ.

ಆ ಬಳಿಕ ಅನೇಕ ಪ್ರಸಂಗಗಳಲ್ಲಿ, ನನ್ನದೂ ಅವರದೂ ಭೆಟ್ಟಿಯಾಗುತ್ತಿರು-ತ್ತದೆ. ಸಭೆ – ಸಮ್ಮೇಲನಗಳಲ್ಲಿ, ಪ್ರವಾಸದಲ್ಲಿ ಕೂಡುತ್ತಿರುತ್ತೇವೆ. ಧಾರವಾಡ ದಲ್ಲಿ ಸಾಧನಕೇರಿಗೆ ನಾನು ಹೋದಾಗ, ಅವರ ಭೆಟ್ಟಿಯಾಗದೆ ತಿರುಗಿ ಬರುವುದು ತೀರ ಕಡಿಮೆ.

ಬೇಂದ್ರೆಯವರು ಆಗಿನಿಂದ ಈಗಿನವರೆಗೆ ಸಾಧಿಸಿದ ಪ್ರಗತಿಯನ್ನು ಎಲ್ಲರೂ ಬಲ್ಲರು. ಅವರು 'ವರಕವಿ' ಎಂದು ಹೆಸರಾಗಿದ್ದಾರೆ. ಕನ್ನಡ ಸಾಹಿತ್ಯಪರಿಷತ್ತಿನ ಅಧ್ಯಕ್ಷ ಪದವಿ ಅವರಿಗೆ ದೊರೆಯಿತು. ಭಾರತ ಸರಕಾರವು ಅವರಿಗೆ ಪದ್ಮಶ್ರೀ ಬಿರುದನ್ನು ಕೊಟ್ಟಿತು. ಅಲ್ಲದೆ ಸರಕಾರದಿಂದ ಅವರಿಗೆ ಮಾಸಾಶನವು ಸಿಗುತ್ತಿದೆ. ಅವರಿಗೆ ದೊರೆತ ಸಭೆಗಳ ಅಧ್ಯಕ್ಷ ಪದವಿಗಳು, ಅವರು ಮುಖ್ಯ ಅತಿಥಿಗಳಾಗಿ ಸಭೆ ಗಳಿಗೆ ಹೋದ ಪ್ರಸಂಗಗಳು, ಅವರಿಗೆ ದೊರೆತ ಸತ್ಕಾರಗಳು ಇವುಗಳಿಗೆ ಲೆಕ್ಕವೇ ಇಲ್ಲ. ಅವರ ಕವನ, ಲೇಖನ, ನಾಟಕ ಮೊದಲಾದ ಪ್ರಕಟಿತ ಸಾಹಿತ್ಯಕೃತಿಗಳ ಸಂಖ್ಯೆಯು ದೊಡ್ಡದಿದೆ.

ಬೇಂದ್ರೆಯವರಿಗೆ ಎರಡು ಭಾಷೆಗಳ ಪ್ರಯೋಜನ ಸಿಕ್ಕಿದೆ. ಮನೆಯ ಮಾತು ಮರಾಠಿ, ವ್ಯಾವಹಾರಿಕ ಮತ್ತು ಅವರ ಸಾಹಿತಿತ್ತ್ವವನ್ನು ಮೆರೆಯಿಸಿದ ಭಾಷೆ ಕನ್ನಡವಾದ್ದರಿಂದ, ಇವೆರಡೂ ಭಾಷೆಗಳಲ್ಲಿ ಅವರು ಸಮಾನವಾಗಿ ಈಸಾಡ-ಬಲ್ಲರು.

ಬೇಂದ್ರೆಯವರು ಸಿಂತಿದ್ದ ಉನ್ನತ ಸ್ಥಾನದ ಬಗ್ಗೆ ಇನ್ನೂ ಬೇಕಾದಷ್ಟು ಹೇಳಬಹುದು. ಅದನ್ನು ಹೇಳುವುದು ಬಹು ಸುಲಭ. ಆದರೆ ಅಷ್ಟನ್ನೇ ಹೇಳಿ-ದರೆ, ಒಂದು ವ್ಯಕ್ತಿಯ, ಒಂದು ಅಂಶವನ್ನು ಮಾತ್ರ ಹೇಳಿದಂತಾಗುತ್ತದೆ.

ರಾಮಾಯಣವನ್ನು ಓದಿದಮೇಲೆ; ರಾಮನು ಅನೇಕ ತಪ್ಪುಗಳನ್ನು ಮಾಡಿ ದ್ದಾನೆ, ಅನೇಕ ಪ್ರಸಂಗಗಳಲ್ಲಿ ಅವನ ಅಜ್ಞಾನವು ಎದ್ದುಕಂಡಿದೆ ಎಂದು ಅನೇಕರು ಮೂಗು ಮುರಿದವರು ಇದ್ದಾರೆ. ಅಂದ ಮಾತ್ರಕ್ಕೆ ರಾಮನು ದಶಾವತಾರಿಗಳಲ್ಲಿ ಒಬ್ಬನು ಎಂಬ ಮಾತಿಗೆ ಭಂಗಬಂದಿಲ್ಲ.

ಹಾಗೆ ಬೇಂದ್ರೆಯವರ ಇನ್ನೊಂದು ಸಿಟ್ಟಿನ ಬಗ್ಗೆ ಹೇಳಿದರೆ ಅವರ ದೊಡ್ಡ ಯೋಗ್ಯತೆಗೆ ಕುಂದು ಬಂದೀತೆಂದು ನಾನು ಎಣಿಸುವುದಿಲ್ಲ.

ಸಜ್ಜನನೆಂದರೆ ನೂರಕ್ಕೆ ನೂರು ಸೌಜನ್ಯವುಳ್ಳವನೆಂದು ಎಂದೂ ಕಂಡು-ಬಂದಿಲ್ಲ. ಮತ್ತು ಸ್ವಾಭಾವಿಕವಾಗಿ ಅದು ಸಾಧ್ಯವೂ ಇಲ್ಲ.

ಈ ದೃಷ್ಟಿಯಿಂದ ನಾನು ಈ ಮುಂದೆ ಶ್ರೀ ಬೇಂದ್ರೆಯವರ ಇನ್ನೊಂದು

ನಿಟ್ಟನ್ನು ವಿಮರ್ಶಿಸುವವನಿದ್ದೇನೆ.

ಈ ತಪ್ಪು–ಒಪ್ಪುಗಳು, ಸ್ವಭಾವನಿರ್ಮಿತವಾದವುಗಳಾದ್ದರಿಂದ ಅವು-ಗಳನ್ನು ಹೊಂದಿದವರು, ಅವುಗಳ ಪರಿಣಾಮಕ್ಕೆ ಅನಿವಾರ್ಯವಾಗಿ ಒಳಪಡ-ಬೇಕಾಗುತ್ತದೆ.

ಈ ಮಾತಿಗೆ ಬೇಂದ್ರೆಯವರ ಒಂದು ಮನವರಿಕೆಯನ್ನೇ ಉದಾಹರಿಸ-ಬಹುದು. 'ನನ್ನೊಳಗಿನ ಕವಿಗೆ ನಮಸ್ಕಾರ' ಎಂದು ಅವರು ಅನ್ನುತ್ತಿರುತ್ತಾರೆ. ಅಂದಮೇಲೆ ಅವರಲ್ಲುಂಟಾದ ಕವಿಶಕ್ತಿಯು, ಅವರಿಗೂ ಗೊತ್ತಾಗದ ಕಾರಣದಿಂದ ಉದ್ಭವಿಸಿದಂಥದು ಎಂದೇ ಹೇಳಬೇಕಲ್ಲವೇ ?

ಬೇಂದ್ರೆಯವರು ಕರ್ನಾಟಕದಲ್ಲಿ ಹುಟ್ಟದೇ, ಬೇರೆ ಪ್ರಾಂತದಲ್ಲಿ ಹುಟ್ಟಿದ್ದರೆ ಅವರು ಕವಿತಾಪ್ರಪಂಚದಲ್ಲಿ ಇನ್ನೂ ಹೆಚ್ಚಿನ ಮಟ್ಟಕ್ಕೆ ಏರಬಹುದಾಗಿತ್ತು ಎಂದು ಹೇಳುವ ಪರಿಪಾಠವಿದೆ.

ಹಾಗೆನ್ನುವವರಿಗೆ ಈ ಉತ್ತರವನ್ನು ಹೇಳಬೇಕು—

"ಕರ್ನಾಟಕದಲ್ಲಿ ಹೆಸರು ಗಳಿಸುವವನೇ ನಿಜವಾದ ಗಂಡಸು. ಹಿಡಿದದ್ದಕ್ಕೆ, ಬಿಟ್ಟದ್ದಕ್ಕೆ ಅಟ್ಟಕ್ಕೇರಿಸುವವರ ನಡುವೆ ಸಿಕ್ಕರೆ, ಯಾವುದು ಹರಳು, ಯಾವುದು ರತ್ನ ಎಂಬುದು ಗೊತ್ತಾಗುವುದಕ್ಕೆ ಬಹಳ ಕಷ್ಟವಾಗುವುದು. ಕರ್ನಾಟಕದಲ್ಲಿಯ ಯೋಗ್ಯತೆಯ ತರಗತಿಯ ಮಟ್ಟವು ಬಹಳ ಎತ್ತರವಾಗಿದೆ. ಆದ್ದರಿಂದ ಇಲ್ಲಿ ಅವಾಸ್ತವ ಬೆಳವಣಿಗೆಗೆ ಆಸ್ಪದವಿಲ್ಲ."

ಬೇಂದ್ರೆಯವರು ಚಿಕ್ಕಂದಿನಲ್ಲಿ ಬಹಳ ಬಡತನದಲ್ಲಿ ಬೆಳೆದವರು. ಅವರ ತಾಯಿಯವರು ಬಹಳ ಕಷ್ಟಪಟ್ಟು ಅವರನ್ನು ಬೆಳೆಸಿದರು. ಅದಕ್ಕಾಗಿ ಬೇಂದ್ರೆ-ಯವರು ತಾಯಿಯೆಂದರೆ ಪ್ರತ್ಯಕ್ಷ ದೇವರು ಎಂದು ತಿಳಿಯುತ್ತಾರೆ.

ಆರ್ಥಿಕಸ್ಥಿತಿ, ಕುಟುಂಬದಲ್ಲಿಯ ಕಷ್ಟ–ಸುಖಗಳು ಬೇಂದ್ರೆಯವರನ್ನು ಗಾಸಿಮಾಡದೆ ಬಿಡಲಿಲ್ಲ. ಅಂಥದರಲ್ಲಿಯೇ ಬೆಳೆದುಬಂದ ಅವರು ಧೈರ್ಯ, ಸಾಹಸ ಮತ್ತು ಆತ್ಮವಿಶ್ವಾಸ ಮೊದಲಾದ ಗುಣಗಳನ್ನು ಚೆನ್ನಾಗಿ ಅಳವಡಿಸಿ-ಕೊಂಡಿದ್ದಾರೆ.

ಇತ್ತೀಚೆಗೆ ಬೇಂದ್ರೆಯವರು ಆರ್ಥಿಕ ದೃಷ್ಟಿಯಿಂದ 'ಅಡ್ಡಿಯಿಲ್ಲ' ಎಂಬ ಸ್ಥಿತಿಗೆ ಬಂದು ಮುಟ್ಟಿದ್ದಾರೆ. ಹೀಗೆನ್ನುವಷ್ಟರಲ್ಲಿ, ಅವರ ಧರ್ಮಪತ್ನಿಯವರು ಅವರನ್ನು ತಬ್ಬಲಿಯನ್ನಾಗಿ ಮಾಡಿದರು.

ಕೇವಲ ಸಹಧರ್ಮಿಣಿಯನ್ನಷ್ಟೇ ಅಲ್ಲದೆ, ತಾಯಿಯನ್ನೇ ಕಳೆದುಕೊಂಡಂ-ತಾಗಿದೆಯೆಂದು ಬೇಂದ್ರೆಯವರು ಅನ್ನುತ್ತಾರೆ. ಹಡೆದ ತಾಯಿ ಹೋದಮೇಲೆ

ಬೇಂದ್ರೆಯವರನ್ನು ಅವರ ಸಹಧರ್ಮಿಣಿಯವರು ಕೇವಲ ಪತ್ನಿಯೆಂದಷ್ಟೇ ಅಲ್ಲದೆ, ತಾಯಿಯಂತೆಯೂ ಕಾಪಾಡಿಕೊಂಡು ಬಂದರು.

ಏಕೆಂದರೆ ಬೇಂದ್ರೆಯವರು ಕವಿಯಷ್ಟೇ? ಅದರಲ್ಲಿಯೂ ವರಕವಿ. ಅಂದ ಮೇಲೆ ಅವರು ದೇಹದಿಂದ ಈ ಜಗತ್ತಿನಲ್ಲಿದ್ದರೂ ಮನಸ್ಸಿನಿಂದ ಇರುವವರಲ್ಲ.

ನಮ್ಮ ನಾಡಿನ ಓರ್ವ ವಿಖ್ಯಾತ ಸಾಹಿತಿಯಾಗಿದ್ದ ದಿ. ಟಿ. ಪಿ. ಕೈಲಾಸಂ ಅವರು ಬುದ್ಧನ ಬಗ್ಗೆ ನಾಟಕ ಬರೆಯುವಾಗ, ಆ ಸಿದ್ಧಾರ್ಥನ ಅರಮನೆಯಲ್ಲಿಯೇ ಬೀಡುಬಿಟ್ಟಿರುತ್ತಿದ್ದರಂತೆ.

ಹಾಗೆ ಬೇಂದ್ರೆಯವರ ಮನೋರಾಜ್ಯದ ಹೊರಗಿನ ವ್ಯವಹಾರಗಳನ್ನು ಬಗೆಹರಿಸುವುದಕ್ಕೆ ಅವರ ಹತ್ತರ ಇನ್ನೊಬ್ಬ ವ್ಯಕ್ತಿಯೇ ಬೇಕಾಗುತ್ತದೆ. ಇಲ್ಲದಿದ್ದರೆ ಅವರಿಗೆ ಗಾಡಿಗಳೂ ಸಿಗುವುದಿಲ್ಲ. ಊಟವೂ ಮುಗಿಯುವುದಿಲ್ಲ.

ಬೇಂದ್ರೆಯವರೊಂದಿಗೆ ವಾದಕ್ಕಿಳಿಯುವುದೆಂದರೆ ಅದೊಂದು ಅಲಭ್ಯ-ಸಂದರ್ಭ. ಏಕೆಂದರೆ ಅಂತಹ ಒಂಟಿಯ ಹಿಡಿತದ ವ್ಯಕ್ತಿಯೊಡನೆ ವಾದಮಾಡು-ವುದರಿಂದಲೇ ಇನ್ನೊಬ್ಬ ವಾದಿಯ— ಅವನು ನಿಜವಾದ ವಾದಿಯಾಗಿದ್ದರೆ— ತೋಳ ತಿಂಡಿಯು ತೀರುತ್ತದೆ. ಅಂದದ್ದಕ್ಕೆ 'ಆಗಬಹುದು' ಎಂಬ ವ್ಯಕ್ತಿ-ಯೊಂದೇ ವಾದ ಮಾಡುವುದೆಂದರೆ; ಅದು ಕಾಲ, ಉತ್ಸಾಹಗಳ ಅಪವ್ಯಯ.

ಆದರೆ ಬೇಂದ್ರೆಯವರೊಡನೆ ವಾದ ಮಾಡಹೊರಟ ವ್ಯಕ್ತಿಯು ಗೆದ್ದುಬಂದುದು ವಿರಳ. ಪ್ರತಿವಾದಿಯು ಸೋಲಲಿಕ್ಕೂ ಇಲ್ಲ. ಏನೊಂದು ನಿರ್ಣಯವು ಮಾತ್ರ ಆ ವಾದದಿಂದ ಹೊರಡುವುದಿಲ್ಲ.

ಬೇಂದ್ರೆಯವರೊಡನೆ ಮಾತಾಡಲು ಹೋದವನು, ಅವರು ಅಂದದ್ದಕ್ಕೆ 'ಸರಿ' ಎಂದು ಬರಲು ಸಿದ್ಧಸಿದ್ದರೆ ಮಾತ್ರ ಅವರಲ್ಲಿಗೆ ಹೋಗಬೇಕು. ಇಲ್ಲದಿದ್ದರೆ ಅದು ಅನೇಕ ಸಲ ಮನಸ್ತಾಪದಲ್ಲಿ ಪರಿಣಮಿಸುವುದುಂಟು.

ಹಾಗೆಂದಮಾತ್ರಕ್ಕೆ ಬೇಂದ್ರೆಯವರವು ತಪ್ಪು ಅಭಿಪ್ರಾಯಗಳಾಗಿರುತ್ತ-ವೆಯೆಂದಲ್ಲ. ಈ ಜಗತ್ತಿನಲ್ಲಿ ಯಾವುದೇ ವಿಷಯದಲ್ಲಿ ಒಮ್ಮತವಿಲ್ಲ.

ಅಂದಮೇಲೆ, ಯಾವುದೇ ವಿಷಯದಲ್ಲಿ ವಿಚಾರಮಾಡುವಾಗ, ಒಬ್ಬರಿ-ಗೊಬ್ಬರು, ಪರಸ್ಪರರ ವಿಚಾರಗಳಿಗೆ ಒಪ್ಪದೆ ಇರಬಹುದು. ಆದರೆ ಪರಸ್ಪರರು, ತಂತಮ್ಮ ಅಭಿಪ್ರಾಯಗಳನ್ನು ಬಿಡದಿರುವುದಕ್ಕೆ ಅವರಿಗೆ ಸ್ವಾತಂತ್ರ್ಯವಿದೆಯೆಂಬ ಮಾತನ್ನು ಮರೆತರೆ ನಡೆಯಲಾರದು.

ಬೇಂದ್ರೆಯವರು ತಮ್ಮ ಅಭಿಪ್ರಾಯವನ್ನು ಬಿಟ್ಟು ಎದುರು ಅಭಿಪ್ರಾಯ ವನ್ನು ಒಪ್ಪುವ ಪ್ರಸಂಗವೂ ಬರುತ್ತಿರಬಹುದು. ಇದಾವುದೇ ಆಗಲಿ, ಯಾವುದೇ ಪ್ರಸಂಗದಲ್ಲಿ ವಾದಗಳು ನಗುತ್ತ ಮುಗಿಯುವಂತಾದರೆ ಅದು ಕ್ಷೇಮಕರ.

ಬೇಂದ್ರೆಯವರ ಕವನಗಳ ಬಗ್ಗೆ ಹೇಳುವುದಾದರೆ, ಆ ಬಗ್ಗೆ ಎರಡು ಅಭಿ-ಪ್ರಾಯಗಳಿವೆ. ಪರಂಪರಾಪ್ರಿಯ ಕವಿಗಳಿಗೆ, ಬೇಂದ್ರೆಯವರ ಕವನಗಳು ಸೇರುವುದಿಲ್ಲ. ಓದುಗರಲ್ಲಿಯೂ ಈ ಅಭಿಪ್ರಾಯವಿದೆ. ಬೇಂದ್ರೆಯವರು ನವ್ಯಕಾವ್ಯದ ಅಧ್ವರ್ಯುಗಳಲ್ಲಿ ಒಬ್ಬರು. ಈ ನವ್ಯಕಾವ್ಯ ಮತ್ತು ಪರಂಪರಾಪ್ರಿಯ ಕಾವ್ಯ-ಗಳ ನಡುವೆ ದೊಡ್ಡ ವಾದವಿದೆ.

ಕರ್ನಾಟಕದ ಅನೇಕ ಗಣ್ಯ ಸಾಹಿತಿಗಳ ಪರಿಚಯ ಮತ್ತು ಸ್ನೇಹ ನನಗಿದೆ. ಆದರೆ ಅವರಲ್ಲಿಯ ಅನೇಕರಲ್ಲಿ ಕಂಡುಬಂದ ಪರಸ್ಪರರ ಬಗ್ಗೆ ಅಸಹನೆ, ದ್ವೇಷ ಮೊದಲಾದವುಗಳನ್ನು ಕಂಡು ನನ್ನ ಮೈ ನಡುಗಿತು. ಈ ಮಟ್ಟದಲ್ಲಿಯೂ ಈ ವಾತಾವರಣವೇ ?–ಎನ್ನುವಂತಾಯಿತು.

ಇಂತಹ ಅನೇಕ ಮಾತುಗಳನ್ನು, ಪ್ರಸಂಗಗಳನ್ನು ಬೇಂದ್ರೆಯವರು ಎದುರಿಸಿದ್ದಾರೆ.

ಮುಪ್ಪು ಕೂಡ ಬೇಂದ್ರೆಯವರ ಮೇಲೆ ತನ್ನ ಪರಿಣಾಮದನ್ನು ಮಾಡದೆ ಬಿಟ್ಟಿಲ್ಲ. ದೈಹಿಕವಾಗಿಯಂತೂ ಸರಿಯೇ. ಮಾನಸಿಕವಾಗಿಯೂ ಅದು ಅವರನ್ನು ದುರ್ಬಲಗೊಳಿಸುತ್ತಿದೆ ಎಂಬ ಮಾತು, ಇತ್ತೀಚೆಗೆ ಅವರು ಕೆಲವೆಡೆಗೆ ಆಡಿದ ಮಾತುಗಳನ್ನು ಮತ್ತು ಅವುಗಳಿಂದ ವಾತಾವರಣದಲ್ಲಿ ಆದ ಪರಿಣಾಮಗಳನ್ನು ನೋಡಿದರೆ, ಕಂಡುಬರುತ್ತದೆ.

ಇದೆಲ್ಲವೂ; ಸ್ವಭಾವ, ವಯಸ್ಸು, ಪರಿಸ್ಥಿತಿ ಇವೇ ಮೊದಲಾದ ಕಾರಣಗಳ ಮೂಲಕ, ಯಾವದೇ ಮನುಷ್ಯನಲ್ಲಿ ಆಗತಕ್ಕ ಮಾರ್ಪಾಡು ಎಂದು ಹೇಳಬೇಕಾ-ಗುವುದು. ಇದರಿಂದ ಪಾರಾಗುವುದು ಬಹುಜನರಿಗೆ ಆಗಲಾಗದೆಂಬುದು ಅನುಭವದ ಮಾತಾಗಿದೆ.

ಬೇಂದ್ರೆಯವರು, ತಮ್ಮಲ್ಲಿಯ ಕವಿಗೆ ನಮಿಸುವಂತೆ, ತಮ್ಮಲ್ಲಿ ಬೀಡುಬಿಟ್ಟ-ರುವ ಈ ದೌರ್ಬಲ್ಯಗಳಿಗೂ ನಮಸ್ಕಾರ ಮಾಡಬೇಕಾದುದು ಅನಿವಾರ್ಯವಾಗಿದೆ.

ಹೀಗೆ ಮಾತಾಡುವ ನಾನು ಬೇಂದ್ರೆಯವರ ಬಗ್ಗೆ ತಿರಸ್ಕಾರವುಳ್ಳವನಾಗಿ-ದ್ದೇನೆ, ಅವರ ಕಾಲನ್ನು ಹಿಡಿದು ಎಳೆಯಲು ಯತ್ನಿಸುವವರಲ್ಲಿ ಒಬ್ಬನಾಗಿದ್ದೇನೆ ಎಂದು ಯಾರೂ ತಿಳಿಯಬಾರದು. ನಾನು ಇನ್ನಿತರರಿಗಿಂತ ಹೆಚ್ಚು ಮಾನವನ್ನು ಬೇಂದ್ರೆಯವರಿಗೆ ಕೊಡುವವನಾಗಿದ್ದೇನೆ ಎಂಬುದನ್ನು ಬೇಂದ್ರೆಯವರ ಇತರ ಸ್ನೇಹಿತರು, ಶಿಷ್ಯರು ಒಪ್ಪಲು ಸಿದ್ಧರಿರದಿದ್ದರೆ, ಅವರಿಗಿಂತ ಕಡಿಮೆ ಮಾನವನ್ನು ನಾನು ಬೇಂದ್ರೆಯವರಿಗೆ ಕೊಡುವವನಾಗಿದ್ದೇನೆ ಎಂದು ಒಪ್ಪಲು ನಾನು ಸಿದ್ಧನಿಲ್ಲ.

ಅಭಿನಂದನಪರ ಗ್ರಂಥದಲ್ಲಿ, ಈ ರೀತಿಯ ಸ್ಪಷ್ಟ ಬರೆಹಕ್ಕೆ ಆಸ್ಪದವಿರ-ಕೂಡದು ಎಂದು ಯಾರಾದರೂ ಅನ್ನಬಹುದು. ಆದರೆ ನನ್ನ ದೃಷ್ಟಿಯಿಂದ ಅದು ಸರಿಯಲ್ಲ.

ಯಾವನೊಬ್ಬ ಮನುಷ್ಯನ ತರುವಾಯ, ಅವನ ಜೀವನದ ಸರ್ವ ವಿವರ-ಗಳನ್ನು ಏನೂ ಅಡೆತಡೆಯಿಲ್ಲದೆ ಪ್ರಸಿದ್ಧಿಸುತ್ತಾರೆ. ಇದು ಆ ವ್ಯಕ್ತಿಗೆ ಮಾಡಿದ ಅಪಕಾರವೆಂದೇ ನಾನು ತಿಳಿಯುತ್ತೇನೆ.

ಜನ ಏನೆನ್ನುತ್ತಿದ್ದಾರೆ ? ಜನರು ತಮಗೆ ಕೊಡುತ್ತಿರುವ ಮಾನ-ಮರ್ಯಾದೆಗಳ ಜೊತೆಗೆ ಇನ್ನೂ ಏನೇನು ಸೇರಿದೆ ? ಎಂಬ ಸ್ಪಷ್ಟಚಿತ್ರವು ಆಯಾ ವ್ಯಕ್ತಿಗಳಿಗೆ ಅವರು ಜೀವಂತರಿರುವಾಗಲೇ ತಿಳಿಯುವುದು, ಹೆಚ್ಚಾಗಿ ಅವರಿಗೇ ಪ್ರಯೋಜನಕಾರಿಯಾದುದು.

ಈ ಕೆಲಸವನ್ನು, ಬೇಂದ್ರೆಯವರ ಬಗ್ಗೆ ತಾನು ಈ ಲೇಖದಿಂದ ಮಾಡಿ-ದ್ದೇನೆ. ಇಂತಹ ಅಪ್ರಿಯ ಸತ್ಯವನ್ನು ಹೇಳಲು ಮುಂದೆ ಬರುವವರು ಕಡಿಮೆ. ಅದನ್ನು ಹೇಳುವ ಧೈರ್ಯಮಾಡುವ ನನ್ನಂಥವರು ಅವರ ಹಿತೇಚ್ಛುಗಳಲ್ಲ ಎಂದು ತಿಳಿಯಬಾರದೆಂದು ನಾನು ಬೇಂದ್ರೆಯವರಿಗೆ ಬಿನ್ನವಿಸುತ್ತೇನೆ.

ಹೀಗೆ ಬರೆಯುವುದರಿಂದ ಬೇಂದ್ರೆಯವರ ಬಗ್ಗೆ ಅನಾದರ ಹುಟ್ಟಿಸುವ ಮಾತುಗಳನ್ನು ಎಲ್ಲರ ತಲೆಯಲ್ಲಿ ಹಾಕಿದಂತಾಗುವುದು ಎಂದು ಯಾರಾದರೂ ಅನ್ನಬಹುದು.

ಇದು ಸುಳ್ಳು ಹೆದರಿಕೆ. ಜನರು ದಡ್ಡರಿಲ್ಲ. ಇಂತಹ ವಿಷಯದಲ್ಲಿಯಂತೂ ಬಹಳ ದಕ್ಷರಾಗಿ ಕಾರ್ಯಮಾಡುತ್ತಾರೆ. ಚಲೋ ಮಾತನ್ನು ಎದುರಿಗೆ ಆಡು-ತ್ತಾರೆ, ನಿಜವಾದ ವಿಮರ್ಶೆಯನ್ನು ಹಿಂದೆ ಮಾಡುತ್ತಾರೆ. ತಿಳಿಯಬಲ್ಲ ಎಲ್ಲರಿಗೆ ಎಲ್ಲವೂ ತಿಳಿದೇ ಇರುತ್ತದೆ. ತಿಳಿಯಲಾರದವರಿಗೆ ಅದು ತಿಳಿಯುವುದೂ ಇಲ್ಲ; ತಿಳಿದರೆ ಅದರಿಂದ ಯಾವ ಪರಿಣಾಮವೂ ಆಗುವುದಿಲ್ಲ.

ಬೇಂದ್ರೆಯವರನ್ನು ನಾನು ತಿಳಿದುಕೊಂಡಿದ್ದು ಸರಿಯಾಗಿದ್ದರೆ, ಅವರು ಈ ಲೇಖದಿಂದ ನೊಂದುಕೊಳ್ಳದೆ, ಆನಂದಪಡುವರೆಂದು ನಾನು ತಿಳಿಯುತ್ತೇನೆ. ಏಕೆಂದರೆ, ಅವರೊಬ್ಬ ವಿಚಾರವಂತ ವ್ಯಕ್ತಿ. ಪ್ರತಿಯೊಂದು ಮಾತನ್ನೂ ತೂಕ ಮಾಡಿ ನೋಡಬಲ್ಲರು.

ಅಂದಮೇಲೆ, ಯಾವುದು ಉಂಟೋ ಅದನ್ನು ಮುಚ್ಚಿಡುವುದರಲ್ಲಿ ಏನೂ ಲಾಭವಿಲ್ಲ. ಗ್ರಾಹ್ಯವು ಗ್ರಾಹ್ಯವೇ; ಅಗ್ರಾಹ್ಯವು ಅಗ್ರಾಹ್ಯವೇ. ಇವೆರಡೂ ಸಂಗತಿಗಳ ದೃಷ್ಟಿಯಿಂದ ದೊರೆಯುವ ಪ್ರಯೋಜನವೇ ಗಟ್ಟಿಮುಟ್ಟಾದದ್ದು.

ಏನಾದರೂ ಎಷ್ಟಾದರೂ, ಬೇಂದ್ರೆಯವರು ಅಸಾಮಾನ್ಯ ವ್ಯಕ್ತಿತ್ವ ಪಡೆ-ದವರಾಗಿದ್ದಾರೆ. ಲಕ್ಷದಲ್ಲಿಯೋ, ಕೋಟಿಯಲ್ಲಿಯೋ ಎದ್ದುಕಾಣುವ ಒಂದು ವ್ಯಕ್ತಿ. ಇಂಥವರಿಂದಲೇ ನಮ್ಮ ಇತಿಹಾಸ, ಕಲೆ, ಸಂಸ್ಕೃತಿಗಳು ಪುನಃ ಪುನಃ ಚೇತರಿಸಿಕೊಂಡು ಬೆಳೆಯುತ್ತಬಂದಿವೆ.

§ § § §

೫೪

# ಬೇಂದ್ರೆಯವರು ಹಲಸಂಗಿಗೆ ಬಂದರೆ

**ಸರೋಜಿನಿ**

ಶ್ರೀ ಬೇಂದ್ರೆಯವರು ಹಲಸಂಗಿಗೆ ಬಂದರೆ ಸಭೆ ಕೂಡಿಸುವ ಆವಶ್ಯಕತೆ-ಯಿಲ್ಲ. ಅವರು ಕೂತಲ್ಲಿ, ನಿಂತಲ್ಲಿ, ಹೊಲಕ್ಕೆ ಹೋದಲ್ಲಿಯೂ ಸಭೆ ಸೇರುವದು. 'ಸಕ್ಕರೆಗೆ ಇರುವೆ ಮುಕುರಿದಂತೆ' ಜನ-ಜಂಗುಳಿ ಅವರನ್ನು ಮುಕುರುವುದು. ಹೆಣ್ಣುಮಕ್ಕಳು, ಶಾಲೆಯ ಮಕ್ಕಳು, ಮಕ್ಕಳ ಗುರುಗಳು, ಮುಪ್ಪಿನ ಮುದು-ಕರು, ಜನಪದ ಹಾಡುವವರು ಬಂದು ಶ್ರೀ ಬೇಂದ್ರೆಯವರು (ಹೀಗೆ ಇಲ್ಲಿ ಬರೆಯ-ಬೇಕಾದಾಗ ಹೇಗೋ ಅನ್ನಿಸುತ್ತದೆ, ಏಕೆಂದರೆ ನಾವು ಯಾವಾಗಲೂ ಕಾಕಾ—ಬೇಂದ್ರೆ ಕಾಕಾ ಎಂದು ಪ್ರೀತಿಯಿಂದ ಕರೆಯುತ್ತೇವೆ.) ಬಹು ಪ್ರೀತಿಯಿಂದ, ಆತ್ಮೀಯತೆಯಿಂದ ಕಂಡು ಅವರ ರಸಪೂರ್ಣವಾದ ಮಾತುಗಳನ್ನೂ, ಹಾಡುಗಳನ್ನೂ ಕೇಳಿ, ಹಾಡುವಾಗಿನ ಹಾವ-ಭಾವಗಳನ್ನು ನೋಡಿ ತಣಿಯುವರು. ಶ್ರೀ ಬೇಂದ್ರೆ-ಯವರಾದರೂ ಬಂದವರನ್ನು ನಕ್ಕು-ನಗಿಸುವರು, ಹಾಡಿ-ಹಾಡಿಸುವರು, ಅವರವರ ಮಟ್ಟದಲ್ಲಿ ನಿಂತು ಮಾತನಾಡುವರು. ಶ್ರೀ ಬೇಂದ್ರೆಯವರು ಹೊಕ್ಕಮನೆ ನಗೆ ಯಿಂದ ಉಕ್ಕುವುದು. ಎಲ್ಲರಿಗೂ ಆನಂದವೇ ಆನಂದ. ಕೂಲಿಕಾರರು, ಬಡ-ವರು, ಹರಿಜನರೂ ಕೂಡ (ಅಂದಿನ ದಿನಗಳಲ್ಲಿ ಹರಿಜನರು ಊರಲ್ಲಿ ಬಂದು ಸಭೆ ಸಮ್ಮೇಲನಗಳಲ್ಲಿ ಭಾಗವಹಿಸುವದು—ಕನಿಷ್ಟ ಬಂದು ದೂರ ಕುಳಿತು ಕೇಳುವದು ಕೂಡ—ಹೆಚ್ಚಿನ, ಆಶ್ಚರ್ಯಕರ, ಕ್ರಾಂತಿಕಾರಕ ವಿಷಯವೇ ಆಗಿತ್ತು.) ಬಂದು ಆ ಆನಂದದಲ್ಲಿ ಪಾಲುಗೊಳ್ಳುವರು. ಅಂಥ ದಿನಗಳೆಂದರೆ ಹಲಸಂಗಿಗೆ ರಸದೂಟದ ಹಬ್ಬ; ನಕ್ಕು ನಲಿಯುವ ಸಂಭ್ರಮ. ಶ್ರೀ ಬೇಂದ್ರೆಯವರೆಂದರೆ ನಾಡಿನಗಲವಾಗಿ ಹಬ್ಬಿದ ವ್ಯಕ್ತಿ ಎಂಬುದನ್ನು ಹಲಸಂಗಿಯ ಜನ ಅರಿಯರು. ಅವರು ತಮ್ಮವರು, ತಮ್ಮ ಬಳಗದಲ್ಲಿಯ ಒಬ್ಬರೆಂದೇ ಅವರ ಮುಗ್ಧಭಾವನೆ.

೪೭ ವರ್ಷಗಳ ಹಿಂದೇ ಶ್ರೀ ಬೇಂದ್ರೆಯವರು ಹಲಸಂಗಿಗೆ ಬಂದಾಗ ಶ್ರೀಶೈಲ ದಾಚೆ ನೆಲವಿಲ್ಲ; ಕಾಶಿಯಿಂದಾಚೆಗೆ ಮುಗಿಲಿಲ್ಲವೆಂಬ ಕಲ್ಪನೆಯುಳ್ಳ ಈ ಹಳ್ಳಿ

ಯವರು ಹೆಮ್ಮೆಯಿಂದ, "ನಮ್ಮ ಚೆನ್ನಮಲ್ಲಪ್ಪನ ಶ್ಯಾಣ್ಯಾ ಗೆಳ್ಯಾರು ಬಂದಾರ ಬರ್ರಿ" ಎಂದು ಒಬ್ಬರನ್ನೊಬ್ಬರು ಕರೆಯುತ್ತಿದ್ದರಂತೆ. ಅಂಥ ಹಳ್ಳಿ ಇಂದು ಜಗತ್ತಿನ ಅನೇಕ ವಿಷಯಗಳ ಬಗ್ಗೆ, ಸಮಸ್ಯೆಗಳ ಬಗ್ಗೆ, ವ್ಯಕ್ತಿಗಳ ಬಗ್ಗೆ, ಸಾಹಿತ್ಯದ ಬಗ್ಗೆ ಚರ್ಚಿಸುವ ಸುಸಂಸ್ಕೃತಿಯ ಸಂಪತ್ತಾಗಿದೆ. ಇದು ಶ್ರೀ ಬೇಂದ್ರೆಯವರು ಬಂದು ಹೋಗುವದರ ಫಲ. ಇದರಂತೆ ಕನ್ನಡನಾಡಿಗೆ ನಾಡೇ ವಿಶೇಷ ಸಂಸ್ಕಾರ ಹೊಂದಿತು. ಅವರ ಪ್ರತಿಭಾ – ಪ್ರಭಾವದಿಂದ, ನಿಸ್ಪೃಹ – ನಿಷ್ಕೃರತೆಯಿಂದ ಕರುಣಾ–ಕಕ್ಕುಲತೆಯಿಂದ, ನಾಡತಾಯಿಯ ಮೇಲಿಟ್ಟ ಅಖಂಡಪ್ರೇಮ–ಭಕ್ತಿಗಳಿಂದ ನಾಡು ಎಚ್ಚತ್ತು, ತಾನು ಕಾಡಲ್ಲವೆಂದರಿತು ತನ್ನ ನೈಜ ಇರುವಿಕೆಯ ಅರಿವುಂಟಾಯಿತು. ಇನ್ನೂ ನಾಡು ಅರೆನಿದ್ರೆಯಲ್ಲಿದ್ದಾಗ— 'ಹಿಂದಿನದೆಲ್ಲ ಕಥೆ–ಯಲ್ಲುಳಿದು, ಇಂದಿನದಷ್ಟೆ ಕೈಯಲ್ಲುಳಿದು, ಮುಂದಿನ ಭಾಗ್ಯದ ಧನಿಯರು ನಾವು ತೂ ತೂ ತೂ' ಎಂದು ಉದಯ–ತುತ್ತೂರಿಯನ್ನೂದಿ ಎಬ್ಬಿಸಿದರು. ಆಗ ಅಗಣಿತ ವೀರರ ರಕ್ತ ಕುದಿಯಿತು, ಕವಿಗಳ ಕಂಠ ಕೆರಳಿತು, ಕೋಮಲ ಹೃದಯದವರಾದ ಹೆಣ್ಣುಮಕ್ಕಳು ಕೂಡ ತಮ್ಮ ಕರ್ತವ್ಯವನ್ನು ನೆನೆದರು. ಇಷ್ಟಕ್ಕೇ ಕವಿಹೃದಯ ತೃಪ್ತಿಗೊಳ್ಳದೆ ನಾಡತಾಯಿ ಜಾಗೃತಗೊಳ್ಳಲೆಂದು—

ಏಳು ಶೂರರ ಖಣಿ।<br>
    ಏಳು ವೀರರ ರಾಣಿ।<br>
        ಏಳು ತೀರದ ವೀರರಸದ ವಾಣಿ॥

ಸತ್ತಿರುವರೆದೆ ಸೇರು।<br>
    ಸುತ್ತಿರುವ ವಿಷ ಹೀರು।<br>
        ಬತ್ತಿರುವದಮೃತ ಝರಿ ಮತ್ತೆ ತೋರು॥

ಎಂದು ನಾಡ ತಾಯಿಯನ್ನು ಬೇಡಿಕೊಂಡ ಅವರ ಪ್ರಾರ್ಥನೆಯು ಕನ್ನಡಮ್ಮನನ್ನು ತಟ್ಟಿ – ಮುಟ್ಟಿ ತಬ್ಬಿಬ್ಬಾಗಿ ಅಲ್ಲಾಡಿಸಿತು. ಆಗ ತಾಯಿ ಎಲ್ಲೆಲ್ಲೂ ಉಸಿರಾಡಿ–ದಳು. ಮೂಲೆ ಮೂಲೆಯಲ್ಲಿಯೂ ಮಿಸುಕಾಡಿದಳು. ಅಳಿದ ಅವಳ ಚೈತನ್ಯ ಬೆಳೆದು ಬಂತು. ಎಲ್ಲೋ ಕಳಚಿಬಿದ್ದ ತನ್ನ ವೀರಖಡ್ಗವನ್ನು ಹುಡುಕಿಕೊಂಡಳು. ಮಣಿಮುಕುಟವನ್ನು ಪುನಃ ಧರಿಸಿದಳು. ಅಲ್ಲಲ್ಲಿ ಚಲ್ಲಿದ ವಜ್ರ–ವೈಡೂರ್ಯಗಳನ್ನೂ, ಅಸ್ತವ್ಯಸ್ತವಾದ ತನ್ನ ಒಡವೆಗಳನ್ನೂ ಸರಿಪಡಿಸಿಕೊಂಡಳು. ಆಗ ಕವಿಯು ಶಾಂತಹೃದಯದಿಂದ ತಲೆಬಾಗಿ 'ಒಂದೇ ಒಂದೇ ಒಂದೇ ಕರ್ನಾಟಕ ಒಂದೇ' ಎಂದು ಕೈಮುಗಿದ ರಸಋಷಿಯ ಮಂತ್ರಬಲದಿಂದ ಕನ್ನಡತಾಯಿ ಜಗ–ದೇಳಿಗೆಗೂ ಸಡುಕಟ್ಟಿ ನಿಂತಳು.

ಶ್ರೀ ಬೇಂದ್ರೆಯವರು ಸುಖಜೀವಿಗಳೆಂದು ಬಹಳ ಜನರ ಕಲ್ಪನೆ ಇದೆ. ಹೌದು, ಅವರು ಸುಖಜೀವಿಗಳಾಗಿದ್ದದ್ದೂ ನಿಜ. ಆದರೂ ಅವರ ಬಾಳಿ-ನಲ್ಲಿಯೂ ಕಷ್ಟ - ನಷ್ಟಗಳೂ, ನೋವು - ಸಾವುಗಳೂ ಬಂದು ಹೋದವು. ಒಂದೇ ತಿಂಗಳಲ್ಲಿ ಎರಡು ಮಕ್ಕಳ ಮರಣವನ್ನು ಕಂಡ ಧೀರರವರು. ಮನೆಭಾರ-ಹೊರುವಂತಹ ಮಗ ಸತ್ತರೆ-ಅವರು ಮಂಕಾಗದೆ, ಜಗನ್ಮಾತೆಗೆ ಭಕ್ತಿಮಾಲೆ-ಯನ್ನರ್ಪಿಸಿ ಶರಣೆಂದ ಧೀರ ಶರಣರವರು. ಕೈಹಿಡಿದವರ ಸಾವನ್ನೂ ನೋಡಿ-ದರು. ಆದರೂ ಅವರ ಆನಂದದ ಜೊಕ್ಕಸ ಬರಿದಾಗದೆ, ಝುರಿಗಡಿಯದೆ ಹಾಗೇ ತುಂಬಿ ತುಂಬಿ ಹರಿಯುತ್ತಾ ಇದೆ. ಇದಕ್ಕೆನ್ನಬೇಕು ದೈವೀ ಸಂಪತ್ತೆಂದು, ಸುಖ ಜೀವನವೆಂದು. ಹಾಗೆಂದೊಡನೆ ಅವರು ನಿಷ್ಕರುಣಿಗಳೆಂದು ಅರ್ಥವಲ್ಲ. ಅವರು ಕರುಣಾಳುಗಳು, ಅನಂತ ಪ್ರೇಮಿಗಳು - ಮನೆಯಲ್ಲಿ ಎಳೆಗೂಸು ಕೈಮುಚ್ಚಿ-ಕೊಂಡಿದ್ದಾಗ — "ನನ್ನ ಮಗುವಿನ ಮುಚ್ಚಿದ ಮುಷ್ಟಿಗೆಯಲ್ಲಿ ಮೂಲೋಕದ ಒಡೆತನವಿರಬಹುದೆ? ಧ್ರುವಪದಕ್ಕೆ ಇರಬಹುದೆ? ಕುಬೇರನ ಸಂಪತ್ತು ಇರ-ಬಹುದೆ?" ಎಂದು ಆಶ್ಚರ್ಯಪಟ್ಟಿದ್ದಾರೆ. ಅಗಾಧ, ಅಲೌಕಿಕ ಜಗತ್ತೇ ಆ ಮಗುವಿನಲ್ಲಿ ಕಂಡು ಭಗವಂತನ ಅನಂತ ಸ್ವರೂಪದಿಂದ ಮಗುವನ್ನು ಬಣ್ಣಿ-ಸುತ್ತಾರೆ— "ಅವ್ವಾ, ನೋಡಿರೆ ನನ್ನ ಮಲ್ಲಾರಿ ಮಾರ್ತಂಡನ, ದೇವರ ದಂಡ್ನಾಯಕನ, ಶಾಂತ ಸುಕುಮಾರ ಸುಬ್ಬಯ್ಯನ, ಚಲುವ ಚೆನ್ನಕೇಶವನ, ಮಲಗಿದ ಅನಂತಶಯನನ, ಮುದ್ದು ವಿಠಲನ, ದಾಸರ ದಾಸನ ಟೊಂಕದ ಮೇಲೆ ಕೈಯಿಟ್ಟವನ" ಎಂದಾಗ ಅವರಲ್ಲಿ ಮಗುವಿನ ಮಮತೆಯ ಘನತೆ ಎಷ್ಟಿತ್ತೆಂಬುದು ಗೊತ್ತಾಗುತ್ತಿದೆ. ಅಂತೇ 'ಮಂಗಲೆಯೊಂದಿಗೆ ಅಷ್ಟೊಂದು ಹಿಗ್ಗಾಗಿದೆ' ಅವಳ ತಂದೆಗೆ. 'ಮುಚ್ಚಂಜಿ ನಾಲಿಗೆ ಅವಳ ಅಂಗಾಲಿಗೆ ಚಾಚಿದ್ದು ಗುಲಬಾಕ್ಷಿ ಮಲ್ಲಿಗೆ, ನಿರ್ಜೀವವಾದ ಕಲ್ಲಿಗೆ ಕೇಳಿದ್ದು' ಈ ತಂದೆಗೆ ಕಾಣಿಸಿತು, ಕೇಳಿಸಿತು.

ಇಂತಹ ಪ್ರೇಮಿಗಳೂ, ರಸಋಷಿಗಳೂ ಆದ ಶ್ರೀ ಬೇಂದ್ರೆಯವರನ್ನು ನೆನೆಸಿದಾಗೆಲ್ಲ ನನ್ನ ಮನ ಹರುಷದಿಂದ ಹೀಗೆ ಕೇಳುತ್ತಿರುತ್ತದೆ—

ಇಷ್ಟೆ ತಲೆಯ ಬುರುಡೆಯಲ್ಲಿ
ಎಷ್ಟೊಂದು ತರ್ಕ ತುಂಬಿದೆ
ಅಷ್ಟೊಂದು ಇಂಬು ಎಲ್ಲಿದೆ
ಭಗವಂತ ಬಲ್ಲ ಆ ಬಗೆ!

ಚಿಕ್ಕ ಕೈಯ ಬೆರಳಿನಿಂದ
ಲೆಕ್ಕ ಮೀರಿ ಶಬ್ದಜಾಲ
ನಾಡ ತುಂಬ ಹಬ್ಬಿದೆ–ಹೊರ
ನಾಡಿಗೂ ಕುಡಿ ಚಾಚಿದೆ।

ಧ್ವನಿಯ ತಾನ ಹುಲಿಯ ಗಾನ
ಪುಕ್ಕರೆದೆಗೆ ರೆಕ್ಕೆ ಕೊಡುವ
ಧೈರ್ಯದೀಕ್ಷೆಯ ಗದ್ದುಗೆ
ಕನ್ನಡಿಗರ ಮನ ಬುದ್ಧಿಗೆ।

§ § § §

೫೫

# ಕವಿವರ ಅಂಬಿಕಾತನಯದತ್ತ

ದ. ಲ. ಕೆರೂರ

ಬೇಂದ್ರೆಯವರ ಒಂದು ಹುಟ್ಟುಹಬ್ಬದ ಸಂದರ್ಭದಲ್ಲಿ ಅವರನ್ನು ಭೆಟ್ಟಿಯಾಗಿ ಅವರ ಹೃದಯಸಾಗರದಲ್ಲಿ ಸದ್ಯ ಕುಪ್ಪಳಿಸಿ ಭೋರ್ಗರೆಯುತ್ತಿರುವ ವಿಚಾರಗಳಾವವು ಎಂಬುದನ್ನು ಅರಿತುಕೊಳ್ಳುವ ದೃಷ್ಟಿಯಿಂದ ನಾನು ಅವರನ್ನು ಅವರ ಮನೆಯಲ್ಲಿಯೇ ಕಾಣಬಹುದಾದ ಸುಯೋಗವನ್ನು ಕಲ್ಪಿಸಿಕೊಂಡೆ-ಮಾತಿಗೆ ಮಾತು ಮಥಿಸಿ ನಾದದ ನವನೀತವೇನಾದರೂ ದೊರೆಯಬಹುದೆಂಬ ಆಶೆಯಿಂದ.

‘ಅಂಬಿಕಾತನಯದತ್ತ’ ಎಂಬ ಕಾವ್ಯನಾಮದಿಂದ ಪ್ರಖ್ಯಾತರಾಗಿರುವ ಶ್ರೀ ದ. ರಾ. ಬೇಂದ್ರೆಯವರು ಹುಟ್ಟಿದ್ದು ಗುರುಪ್ರತಿಪದೆಯ ದಿನ. ಅಂದರೆ ಮಾಘ ವದ್ಯ ಪ್ರತಿಪದೆ; ಶ್ರೀ ದತ್ತಾತ್ರೇಯನ ಎರಡನೆಯ ಅವತಾರ—ಶ್ರೀ ನೃಸಿಂಹ ಸರಸ್ವತಿ ಸ್ವಾಮಿಗಳು ಮಹಾಸಮಾಧಿ ಪಡೆದ ಸುದಿನ. ಗುರುಪ್ರತಿಪದೆಯ ದಿನ ಜನಿಸಿದ್ದರಿಂದಲೇ ಇವರಿಗೆ ದತ್ತಾತ್ರೇಯ ಎಂಬ ಹೆಸರು ಎಂದೆನ್ನಲಡ್ಡಿಯಿಲ್ಲ.

**ಕರವೀರ ಕರ್ನಾಟಕದ್ದು:**

ಶ್ರೀ ದ. ರಾ. ಬೇಂದ್ರೆಯವರು ಜನಿಸಿದ ವರ್ಷದಲ್ಲಿ ಜನೆವರಿ ೩೧ ರಂದು ಇದ್ದ ಗುರುಪ್ರತಿಪದೆ, ಈ ಸಲ ಫೆಬ್ರುವರಿ ೬ ಕ್ಕೆ ಬಂದಿದೆ. ಅಂದು ೭೧ರ ಅವರ ಹುಟ್ಟುಹಬ್ಬವನ್ನು ಶಿರಹಟ್ಟಿಯಲ್ಲಿ ಸಂಭ್ರಮದಿಂದ ಆಚರಿಸಲಾಗುವದು. ಧಾರವಾಡದ ಕವಿಗೆ ಶಿರಹಟ್ಟಿಯಲ್ಲಿ ಸತ್ಕಾರ ಸಮಾರಂಭ ಏಕೆ ಎಂದು ನನ್ನ ಕುತೂಹಲ ವ್ಯಕ್ತಪಡಿಸಲಾಗಿ ತಮ್ಮ ಮನೆತನಕ್ಕೆ ಶಿರಹಟ್ಟಿಯ ಸಂಬಂಧವೂ ಇದೆ ಎಂದು ತಿಳಿಸಿದರು.

"ಬೇಂದ್ರೆ ಮನೆತನ ಚಿತ್‌ಪಾವನ ಬ್ರಾಹ್ಮಣ ಮನೆತನ; ರತ್ನಾಗಿರಿ ಜಿಲ್ಲೆಯಲ್ಲಿಯ ಕೇಳಸಿ ಎಂಬ ಗ್ರಾಮ ನಮ್ಮ ಮೂಲಗ್ರಾಮ. ಕಳೆದ ಶತಮಾನದ ಉತ್ತರಾರ್ಧದಲ್ಲಿ ಪೇಶ್ವೆಯವರ ಅಂಗರಕ್ಷಕರಾಗಿದ್ದ ಲಾಗೂ ಮನೆತನದವರ ಸಂಗಡ ಬೇಂದ್ರೆ ಮನೆತನ ಕರ್ನಾಟಕಕ್ಕೆ ಮೊದಲು ತಾಸಗಾಂವ ಎಂಬಲ್ಲಿಗೆ ಬಂತು. ಕರವೀರ ಅಂದರೆ ಕೊಲ್ಹಾಪುರ ಪ್ರದೇಶ ಕರ್ನಾಟಕವೆಂದು ಪೇಶ್ವೆಯವರ ಕಾಗದಪತ್ರಗಳಲ್ಲಿ ಕಾಣಸಿಗುತ್ತದೆ. ಅವರು ಒಪ್ಪಿದ್ದನ್ನು ಇಂದಿನ ಮರಾಠಿಗರು ಒಪ್ಪದಾಗಿದ್ದಾರೆ. ಕೃಷ್ಣೆಯ ದಕ್ಷಿಣಕ್ಕೂ ಕಾಲು ಚಾಚಬೇಕೆನ್ನುತ್ತಿದ್ದಾರೆ' ಎಂದು ಶ್ರೀ ಬೇಂದ್ರೆಯವರು ಮಾತಿನ ಓಘದಲ್ಲಿ ವಿವರಿಸಿ, 'ಕಳೆದ ಶತಮಾನದ ಕೊನೆಯ ಸುಮಾರಕ್ಕೆ ಈ ಭಾಗ (ಡೆಕ್ಕನ್)ದಲ್ಲಿ ಪಟವರ್ಧನ ಮನೆತನದ ಪ್ರಾಬಲ್ಯ ಹೆಚ್ಚಿದ್ದರಿಂದ ಲಾಗೂ ಮನೆತನದವರು ಶಿರಹಟ್ಟಿಯಲ್ಲಿ ಸ್ಥಾಯಿಕರಾದರು. ಅವರೊಂದಿಗೇ ಬೇಂದ್ರೆಮನೆತನದವರೂ ಶಿರಹಟ್ಟಿಗೆ ಬಂದರು. ಇಂದಿಗೂ ಕೇಳಸಿಯಲ್ಲಿ ನಮ್ಮದೊಂದು ಚಿಕ್ಕ ಹೊಲ ಇದೆ. ಶಿರಹಟ್ಟಿಯಲ್ಲಿ ಮನೆಯಿದೆ. ಮುಂದೆ ಶಿರಹಟ್ಟಿಯಲ್ಲಿ ಸಂಬಂಧಿಕರಾರೂ ಉಳಿಯದಂತಾದಾಗ ಬೇಂದ್ರೆ ಮನೆತನ ಧಾರವಾಡಕ್ಕೆ ಈ ಶತಮಾನ ಸುರುವಾಗುವ ಕಾಲಕ್ಕೆ ಮೊದಲಿಗೇ ಬಂದಿತು" ಎಂದು ನಿವೇದಿಸಿದರು.

**ಬಾಳ ನಂಜುಂಡರು**

ಶ್ರೀ ಬೇಂದ್ರೆ ಅವರ ಜೀವನಚರಿತ್ರ ನಿವೇದನ ಇಲ್ಲಿ ಮುಖ್ಯವಲ್ಲ. ತೋಳು ತೊಟ್ಟಿಲ ಮಾಡಿ, ಕಣ್ಣ ಮಣಿದೀಪ ಮಾಡಿ, ತಾಯಿ ಅಂಬಿಕೆ ತಮ್ಮನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡಿದ ದಿನಗಳನ್ನು ಇವರು ಇನ್ನೂ ಮರೆತಿಲ್ಲ. "ಜೀವನ ಅಂದರೆ ಸುಖ-ದುಃಖ ಇರತಕ್ಕವೇ. ಆದರೆ ಅವರು ಕಷ್ಟಪಟ್ಟಷ್ಟು ನಾವೇನೂ ಕಷ್ಟಪಟ್ಟಿಲ್ಲ'' ಎಂದು ಕೆಚ್ಚಿನಿಂದ ಹೇಳುವ ಈ ಎಪ್ಪತ್ತರ ಯುವಕನನ್ನು ಕಂಡರೆ, 'ಸಖೀಗೀತ'ದಲ್ಲಿ ಮೂಡಿಬಂದ ದುರ್ಭರ ಜೀವನವನ್ನು ಇವರು ಅನುಭವಿಸಿಲ್ಲವೇನೋ ಎಂಬಂತೆ ತೋರುತ್ತದೆ. ಆದರೆ ಹಾಗಲ್ಲ; ಅಷ್ಟೆಲ್ಲ ಕಹಿಯನ್ನು ನಂಜುಂಡನಂತೆ ನುಂಗಿ ಧೀರರಾಗಿ ನಿಂತಿದ್ದಾರೆ ಇವರು. ಅಲ್ಲದೆ ಇವರಲ್ಲಿ ಹರೆಯದಲ್ಲಿಯೇ ಮೂಡಿ, ಇವರೊಂದಿಗೆ ಬೆಳೆದುಬಂದಿರುವ ಅಧ್ಯಾತ್ಮದ ಒಲವು ಇವರಿಗೆ ಇಂಥ ಶಕ್ತಿಯನ್ನಿತ್ತಿದೆ.

"ನಿಮ್ಮ ಹುಟ್ಟುಹಬ್ಬ ನೀವು ಮನೆಯಲ್ಲಿ ಆಚರಿಸುತ್ತೀರಾ ? ಅಂದು ನಿಮ್ಮಲ್ಲಿ ಮೂಡುವ ಭಾವನೆಗಳಾವವು ?" ಎಂದು ಪ್ರಶ್ನಿಸಲಾಗಿ, ನನ್ನ ತಾಯಿ ಇರುವವರೆಗೆ ನನ್ನ ಹುಟ್ಟುಹಬ್ಬ ಆಚರಿಸುತ್ತಿದ್ದಳು. ನಂತರ ಈಗಲೂ ಆಚರಿಸುತ್ತೇವೆ. ಒಮ್ಮೊಮ್ಮೆ ನಾನು ಧಾರವಾಡದಲ್ಲಿರುವದಿಲ್ಲ; ಸಂಚಾರದಲ್ಲಿ ಎಲ್ಲಿಯೋ ಸ್ನೇಹಿತರ

ಮನೆಯಲ್ಲಿರುತ್ತೇನೆ. ಅವರ ಗಮನಕ್ಕೆ ಬಂದರೆ ಅವರೇ ಹುಟ್ಟುಹಬ್ಬ ಆಚರಿಸು-ತ್ತಾರೆ'' ಎಂದು ತಿಳಿಸಿದ ಅವರು "ಅಂದಿನ ದಿನ ನನಗೆ ವಿಶೇಷ ಏನೂ ಅನಿಸುವ-ದಿಲ್ಲ'' ಎಂದೂ ಹೇಳಿಬಿಟ್ಟರು.

**'ಆರ್ಯ'ದ ಆಕರ್ಷಣೆ**

ಹರೆಯದಲ್ಲಿಯೇ ಅಧ್ಯಾತ್ಮದ ಕಡೆಗೆ ಒಲವು ಎಂದೆನಲ್ಲ. ಇವರು ೧೯೧೬ ನೇ ಇಸ್ವಿಯಿಂದಲೇ ಶ್ರೀ ಅರವಿಂದರ 'ಆರ್ಯ' ಮಾಸಪತ್ರಿಕೆಯ ಆರಾಧಕರಾಗಿದ್ದಾರೆ. ಪ್ರಥಮ ಜಾಗತಿಕ ಯುದ್ಧದ ಕಾಲಕ್ಕೆ ವಿಶ್ವದಾದ್ಯಂತ ಹಬ್ಬುತ್ತಿದ್ದ ದ್ವೇಷದಾವಾನಲವನ್ನು ತಡೆಗಟ್ಟುವದಕ್ಕಾಗಿ ಶ್ರೀ ಅರವಿಂದರು, ಶ್ರೀ ಮಾತೆಯ ಸಲಹೆಯಂತೆ, ತಮ್ಮ ಅಂತರ್ವಾಣಿಯನ್ನು ಪ್ರಪಂಚಕ್ಕೆ ಬಿತ್ತರಿಸುವದಕ್ಕೆಂದು ಆರ್ಯ ಮಾಸ-ಪತ್ರಿಕೆಯನ್ನು ೧೯೧೪ರ ಆಗಸ್ಟ ೧೫ರಂದು ಪ್ರಾರಂಭಿಸಿದರು. ಆಗಸ್ಟ ೧೫ ಶ್ರೀ ಅರವಿಂದರ ಜನ್ಮದಿನ. ಭಾರತಕ್ಕೆ ಸ್ವಾತಂತ್ರ್ಯ ದೊರೆತ ದಿನವೂ ಅದಾಗಿದೆ. ಇದು ವಿಚಿತ್ರ ಯೋಗಾಯೋಗ. ಇದೇ ರೀತಿ ಪಾಂಡಿಚೇರಿಯ ಶ್ರೀ ಮಾತೆಯ ಜನ್ಮದಿನ ಹಾಗೂ ತಮ್ಮ ತಾಯಿಯ ಜನ್ಮದಿನ ಒಂದೇ ಆಗಿದೆಂದೂ ಅವರು ತಿಳಿಸಿದರು.

ಶ್ರೀ ಬೇಂದ್ರೆಯವರು ಪದವೀಧರರಾಗಿ ಉದರಂಭರಣಕ್ಕಾಗಿ ಶಿಕ್ಷಕವೃತ್ತಿಯನ್ನು ಕೈಕೊಂಡರು. ಮುಂದೆ ಬ್ರಿಟಿಷ್ ಆಳರಸರ ಸಂಶಯದ ಜಾಲಕ್ಕೆ ಒಳ-ಗಾಗಿ ಕೆಲಸ ಕಳೆದುಕೊಂಡು ಮುಗದದಲ್ಲಿ ಸ್ಥಾನಬದ್ಧರಾಗಿ, ಬಿಡುಗಡೆ ಹೊಂದಿದ ನಂತರ ಪುಣೆಯಲ್ಲಿ ಅಜ್ಞಾತವಾಸವನ್ನು ಕೈಕೊಂಡು, ದೈವಾನುಕೂಲವಾದಾಗ ಧಾರವಾಡಕ್ಕೆ ಹಿಂತಿರುಗಿ, ಕೆಲ ದಿನಗಳನ್ನು ನೂಕಿ, ಧಾರವಾಡದಿಂದ ಸೊಲ್ಲಾ-ಪುರಕ್ಕೆ ಪ್ರಾಧ್ಯಾಪಕರಾಗಿ ಹೋಗಿ, ಅಲ್ಲಿ ಮರಾಠಿಗರ ಸಂಪರ್ಕ ಹೆಚ್ಚಿದ್ದರಿಂದ ಮರಾಠಿಯಲ್ಲಿಯೂ ಲೇಖಗಳನ್ನು, ಕವಿತೆಗಳನ್ನು ಬರೆದು ಸೇವಾನಿವೃತ್ತರಾಗಿ ಪುನಃ ಧಾರವಾಡದ ತಾಯಿಯ ಆಶ್ರಯಕ್ಕೇ ಬಂದು ನಿಂತಿದ್ದಾರೆ. ಈಗ ನೆಮ್ಮದಿಯಿಂದ ಜೀವನ ನಡೆಸುವಂತೆ ಆ ತಾಯಿ ದಯೆದೋರಿದ್ದಾಳೆ.

"ಕನ್ನಡದ ಸಾಹಿತ್ಯಪ್ರಪಂಚದಲ್ಲಿ ನೀವು ಕಳೆದ ನಾಲ್ಕು ದಶಕಗಳಿಂದ ಇದ್ದೀರಿ. ಅಂದಿಗಿಂದಿಗಿನ ಸಾಹಿತ್ಯದ ಬಗ್ಗೆ ನಿಮಗೆ ಏನು ಅನಿಸುತ್ತದೆ? ಇಂದಿನ ಸಾಹಿತ್ಯದ ದರ್ಜೆ ಕೆಳಗಿಳಿದಿದೆ ಎಂದು ನಮಗೆ ಅನಿಸುತ್ತದೆ'' ಎಂದು ಕೇಳಲಾಗಿ ಅವರು ಇತ್ತ ಉತ್ತರ ಮಾರ್ಮಿಕವಾಗಿದೆ.

**ಜನ ಹೆಚ್ಚು : ಕಸ ಹೆಚ್ಚು**

"ನನಗೇನೂ ಹಾಗೆ ಅನಿಸುವದಿಲ್ಲ. ಹುಡುಗರು ಹೆಚ್ಚಾದಂತೆ ಕಸ ಹೆಚ್ಚಾ-ಗುತ್ತದೆ. ಇನ್ನು ಈ ಕಸ ಹೆಚ್ಚಾಗುತ್ತದೆಂದು ಹುಡುಗರನ್ನು ಹಡೆಯುವದು ನಿಲ್ಲು

ವಂತಿಲ್ಲ. ಬರಿ ಟೀಕಿಸಿ ಏನು ಪ್ರಯೋಜನ? ನಮ್ಮ ಹುಡುಗರನ್ನು ನಾವೇ ತಿದ್ದಬೇಕು."

"ಹುಡುಗರು ಬಹಳ ತುಂಟರಾಗಿದ್ದಾರೆ; ಅವರನ್ನು ನಿಯಂತ್ರಿಸುವದು ಕಷ್ಟ." ಎಂದೆ.

"ಇಂಥಾ ಮಕ್ಕಳನ್ನ ಹಡೀತೀನಿ ಅಂತ ಯಾರು ಏನು ಹೇಳಿ ಹಡೆಯುತ್ತಾರೇನು? ಹುಡುಗರಲ್ಲಿ ತುಂಟತನ- ಕ್ಷಾತ್ರತೇಜ ಇರಬೇಕು. ಅದನ್ನು ನೀವು ಚಿವುಟಿ ಹಾಕಿದರೆ ಹೊರಗಿನವರು ನಿಮ್ಮ ಮಕ್ಕಳ ತಲೆಯ ಮೇಲೆ ಮೆಣಸು ಅರೆ-ಯುತ್ತಾರೆ" ಎಂದು ತಮ್ಮ ಪರಿಹಾರ ಸೂಚಿಸಿದರು.

"ಸಾಹಿತ್ಯಸೃಷ್ಟಿ ಎಲ್ಲರಿಗೂ ಸುಲಭವಾಗಿ ಬರೂದಿಲ್ಲ. ನಾನೇ ಈ ಕೋಣೆಯ ಬಾಗಿಲ ಹಾಕಿಕೊಂಡು ಓದಲಿಕ್ಕೆ ಕುಳಿತುಬಿಟ್ಟರೆ, ನನ್ನ ಮಕ್ಕಳು ಕಿಟಕಿಯೊಳ-ಗಿಂದ ವಿಚಾರಿಸಿಕೊಂಡು ನನಗೆ ಬೇಕಾದ ಚಹಾ-ಕಾಫಿ ಮುಂತಾದನ್ನು ತಂದು ಬಾಗಿಲಿಗೆ ಇಟ್ಟು ಹೋಗಬೇಕು. ಈಗೇನೋ ಮೊಮ್ಮಕ್ಕಳು ಕದಾ ನೂಕಿ ಒಳ-ನುಗ್ಗತಾರ ಖರೆ; ಅಂದು ಆ ರೀತಿ ಮಾಡಿದ್ದಕ್ಕೆ ಅಂಬಿಕಾತನಯದತ್ತ ಸಿಕ್ಕ" ಎಂದು ತಮ್ಮ ಅನುಭವ ನಿವೇದಿಸಿದರು.

"ಪ್ರಾಧ್ಯಾಪಕ ಬೇಂದ್ರೆಯವರ ಆಜ್ಞಾನುವರ್ತಿಯಾಗಿ ಅಂಬಿಕಾತನಯ-ದತ್ತ ಕವನಗಳನ್ನು ಬರೆಯುತ್ತಾನೆಯೆ?" ಎಂದು ಪ್ರಶ್ನಿಸಿದರೆ ಅವರು, "ಪ್ರಾಧ್ಯಾಪಕ ಬೇಂದ್ರೆ ಕೇವಲ ಲಿಪಿಕಾರ, ಕವಿ ಅಂಬಿಕಾತನಯದತ್ತ ಹೇಳಿದ್ದನ್ನು ಆತ ಬರೆದಿಟ್ಟುಕೊಳ್ಳಬೇಕು. ಕೇವಲ ಸಂಸ್ಕಾರ ಜೀವಿಯಾಗಿರುವ ಅಂಬಿಕಾತನಯ-ದತ್ತನಿಗೆ ಯಾವ ಜಂಜಡವೂ ಇಲ್ಲ. ಶ್ರೀ ದ. ರಾ. ಬೇಂದ್ರೆ ಅವರಿಗಿರುವಂತೆ; ಸದಾ ಚಿಂತನಮಗ್ನ. ಸ್ಫೂರ್ತಿ ಬಂದಾಗ ಹಾಡಿಕೊಳ್ಳುವ. ಪ್ರಾಧ್ಯಾಪಕ ಬೇಂದ್ರೆ ಚುರುಕಾಗಿದ್ದರಿಂದೇ ಅಂಬಿಕಾತನಯನ ಇಷ್ಟಾದರೂ ಹಾಡುಗಳು ಜನರಿಗೆ ದೊರೆತಿವೆ" ಎಂದು ಹೇಳಿದರು.

## ಏನಿದು ಗೂಢ!

ಈ ಶ್ರೀ ದ. ರಾ. ಬೇಂದ್ರೆ. ಪ್ರಾಧ್ಯಾಪಕ ಬೇಂದ್ರೆ. ಅಂಬಿಕಾತನಯದತ್ತ. ಇದೇನೋ ಗೂಢ ಎಂದು ನನ್ನ ಮನಸ್ಸಿನಲ್ಲಿ ತುಸು ಮೆಲಕು ಹಾಕಿದಾಗ ಕವಿ ಅಂಬಿಕಾತನಯ "ಎಲ್ಲಿರುವೆ ರಾಜಗಂಭೀರ" ಎಂದೊ "ಸಚ್ಚಿದಾನಂದ ಸಚ್ಚಿ-ದಾನಂದ" ಎಂದೊ ಕಾವ್ಯಾರಾಮ ನಿಮಗ್ನನಾದಾಗ ಶ್ರೀ ದ. ರಾ. ಬೇಂದ್ರೆ ಅವನ ಕಡೆಗೆ ಬಂದು "ಯಾರಿಗೆ ಬೇಕಾಗ್ಯೈತಿ ನಿನ್ನ ಕವಿತಾ ಇದ್ರ ಒಂದು ಚೂರ ಬ್ರೆಡ್ ತಾ" ಎಂದು ಕೆಣಕಿ ವಾಸ್ತವಿಕ ಜಗತ್ತಿಗೆ ಎಳೆದರೂ ಆ ಅಂಬಿಕಾತನಯ ಅದನ್ನು

ಕಿವಿಗೆ ಹಾಕಿಕೊಳ್ಳದೆ "ಕವಿ ಜೀವದ ಬ್ಯಾಸರ ಹರಿಸಾಕ, ಹಾಡ ನುಡಿಸಾಕ ಮತ್ತ ಏನ ಬೇಕ, ಒಂದು ಹೂತ ಹುಣಸೀ ಮರ ಸಾಕ" ಎಂದು ಸ್ವಾನಂದಪರವಶನಾಗಿ-ರುವದನ್ನೂ ಪ್ರಾಧ್ಯಾಪಕ ಜೇಂದ್ರೆ ನೋಡಿ ಇವೆಲ್ಲವನ್ನೂ ಬರೆದಿಟ್ಟುಕೊಂಡಿರುವದರಿಂದ, ಈ ವರಕವಿಯ ಸ್ವರೂಪದರ್ಶನ ಕನ್ನಡ ಜನತೆಗೆ ಆಗಿದೆ ಎಂದು ಅನಿಸಿತು. ಈ ತ್ರಿವೇಣೀಸಂಗಮದಿಂದಲೇ ಅವರ ಕೀರ್ತಿ ಹೆಚ್ಚಿದೆ.

## ಗೋವೆಯ ಜನ ಉಕ್ಕಿದ್ದು ಕನ್ನಡಕ್ಕೆ

" ನೀವು ಕೊಂಕಣಸ್ಥರು, ಗೋವೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು ? " ಎಂದು ಕೇಳಲಾಗಿ ಅವರು ಶಾಂತಚಿತ್ತದಿಂದ ಹೀಗೆಂದರು :

" ಸಾಮಾನ್ಯವಾಗಿ ಎಲ್ಲರೂ ಇಲ್ಲಿ ಒಂದು ತಪ್ಪು ಮಾಡುತ್ತಾರೆ. ಕೊಂಕ-ಣಸ್ಥರೆಲ್ಲ, ಕೊಂಕಣಿಗರು ಎನ್ನುವದು ತಪ್ಪು. ನಾವು ರತ್ನಾಗಿರಿಯ ಕೊಂಕಣಸ್ಥರು. ಚಿತ್‌ಪಾವನ ಬ್ರಾಹ್ಮಣರು. ನಮ್ಮ ಮಾತೃಭಾಷೆ ಮರಾಠಿ ಆದರೆ ಗೋವೆಯ ಗೌಡಸಾರಸ್ವತರದು ಕೊಂಕಣಿ ಭಾಷೆ. ಗೋವೆಯ ಗೌಡಸಾರಸ್ವತರು ಉಕ್ಕಿ ಹರಿದದ್ದು ದಕ್ಷಿಣದ ಕಡೆಗೆ, ಮಂಗಳೂರಿನತ್ತ; ಹೊರತು ಉತ್ತರದ ಕಡೆಗಲ್ಲ. "

" ಮರಾಠಿಗರು ಗೋವೆಯನ್ನು ಕೇಳುತ್ತಿದ್ದಾರಲ್ಲ ? "

" ಕೇಳುತ್ತಿದ್ದಾರೆ ಅಲ್ಲ, ಹಿಡಿದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಅದಕ್ಕೆ ಅನುಕೂಲವಾಗಬೇಕೆಂದು ಕಾರವಾರ, ಬೆಳಗಾಂವಿಗಳನ್ನೂ ಕೇಳುತ್ತಿದ್ದಾರೆ. ಆದರೆ ಬೆಳಗಾಂವಿ - ಕಾರವಾರಗಳು ಎಂದಿಗೂ ಅವರಿಗೆ ದೊರೆಯಲಾರವು. ಇನ್ನು, ಗೋವೆಯ ಕೊಂಕಣಿಗರು ದಕ್ಷಿಣದಕೊಂಕಣಿಗರೊಡನೆ ಒಂದಾದರೇನೇ ಸುಖವಾಗಿ ಬಾಳಬಲ್ಲರು. ಇದನ್ನೇನು ಹೇಳಬೇಕಾಗಿಲ್ಲ. ಇದು ಸಾಹಿತಿಯ ಅಭಿಪ್ರಾಯ. ಅದರ ಬೆಲೆ ನೀವೇ ಅಳೆದುಕೊಳ್ಳಿರಿ." ಎಂದು ಆಡಿದರಿಷ್ಟೇ ಅಲ್ಲ, ಕನ್ನಡ-ಮರಾಠಿವಾದದ ಬಗ್ಗೆ ಮಾರ್ಮಿಕವಾದ ವಿನೋದವೊಂದನ್ನೂ ಮಾಡಿದರು.

" ನಾಯಿ ಎಲ್ಲಿ ಹೋದರೂ ನಾಯಿಯೆ. ಆದರೆ ಅದು ಕರ್ನಾಟಕದಲ್ಲಿ ಹಚ್ ! ಹಚ್ ! ಎಂದರೆ ಓಡಿಹೋಗುತ್ತದೆ. ಮರಾಠಿ ನಾಯಿ ಹಡ್ ಹಡ್ ಎಂದರೆ ಓಡಿಹೋಗುತ್ತದೆ. ಹಚ್ ಎಂದೊಡನೆ ನಾಯಿ ಯಾವ ಪ್ರದೇಶದಲ್ಲಿ ಓಡಿಹೋಗುವದೋ ಆ ಪ್ರದೇಶವೆಲ್ಲ ಕನ್ನಡ ಪ್ರದೇಶ. ಇಂಥ ಚಿಕ್ಕ ಪುಟ್ಟ ಸಂಗತಿಗಳನ್ನು ನಾವು ಗಮನಿಸಬೇಕು. "

## ಕರ್ನಾಟಕ ರಾಜ್ಯ

"ಕರ್ನಾಟಕರಾಜ್ಯ ಸ್ಥಾಪಿತವಾಗಿ ಸಾಹಿತಿಗಳ ಕನಸು ನನಸಾಯಿತು" ಎನ್ನು-

ವಷ್ಟರಲ್ಲಿ ಅವರು ನನ್ನನ್ನು ತಡೆದು, "ರಾಜಕಾರಣಿಗಳ ಕನಸು ನನಸಾಗಿದೆ: ಕನ್ನಡ ರಾಜ್ಯವೇನೊ ಬಂದಿದೆ. ಆದರೆ ಸಾಹಿತಿಗಳ ಕರ್ನಾಟಕ ಅಂದರೆ ಸಮಸ್ತ ಕನ್ನಡಿಗರಲ್ಲಿ ಭಾವೈಕ್ಯ ಪೂರ್ಣತೆ ಇರುವಂಥ ಕರ್ನಾಟಕ ಇನ್ನೂ ಬರಬೇಕಾಗಿದೆ. ಅಂಥ ಕರ್ನಾಟಕ ಸಾಕಾರವಾದಾಗಲೇ ಜನಕೋಟಿಯ ಕಲ್ಯಾಣ ಸಾಧ್ಯ. ಇಂದು ಇನ್ನೂ ನಮ್ಮಲ್ಲಿ ಕಂಡು ಬರುತ್ತಿರುವ ಜಾತಿ-ಮತ ಭೇದಗಳು ಸಂಪೂರ್ಣವಾಗಿ ನಿರ್ನಾಮವಾಗಬೇಕು" ಎಂದು ಕಳಕಳಿಯಿಂದ ಹೇಳಿದರು.

**ವರಕವಿ ಅಂಬಿಕಾತನಯದತ್ತ**

"ಈ ಕಾರ್ಯ ಸಾಧ್ಯವಾಗಲೇಬೇಕಲ್ಲ" ಎಂದಾಗ, "ಇದು ತಕ್ಷಣ ಸಾಧ್ಯವಾಗುವಂಥ ಕಾರ್ಯವಲ್ಲ. ಸಾವಧಾನದಿಂದ, ಪ್ರೀತಿಯಿಂದ ಸಾಧಿಸಬೇಕು. ಈ ಮಾತನ್ನು ನಾನು ಹೇಳುತ್ತಲೇ ಬಂದಿದ್ದೇನೆ. ಕೈಲಾದಷ್ಟು ಪ್ರಯತ್ನಿಸುತ್ತಲೂ ಇದ್ದೇನೆ" ಎಂದರು.

ಕನ್ನಡನಾಡಿನ ಕಲ್ಯಾಣ ಸಾಧನೆಯ ಬಗ್ಗೆ ಎಷ್ಟೊಂದು ಸ್ಪಷ್ಟ ವಿಚಾರಗಳಿವು! —ಎಂದು ಬೆರಗಾದೆ.

**ಸವ್ಯಸಾಚಿ**

ಶ್ರೀ ಬೇಂದ್ರೆಯವರು ಮರಾಠಿಯಲ್ಲಿಯೂ ಬರೆಯುತ್ತಿರುತ್ತಾರೆ. ಅವರು ಸವ್ಯಸಾಚಿಗಳು. ಕನ್ನಡದಲ್ಲಿಯಂತೆ, ಮರಾಠಿಯಲ್ಲಿಯೂ ಪ್ರಗಲ್ಭ ಲೇಖಗಳನ್ನು ಬರೆದಿದ್ದಾರೆ. ಇವರ ಇಂಥ ಮರಾಠಿ ಲೇಖನಸಂಗ್ರಹ "ಸಂವಾದ" ಪುಸ್ತಕಕ್ಕೆ ಕಳೆದ ವರ್ಷದ ಕೇಳಕರ ಪಾರಿತೋಷಕ ದೊರೆತಿರುತ್ತದೆ.

"ನಿಮ್ಮ ಆ 'ಸಂವಾದ' ಕನ್ನಡದಲ್ಲಿಯೂ ಪ್ರಸಿದ್ಧಿಸುವದಿಲ್ಲವೆ" ಎಂದು ಕೇಳಲಾಗಿ "ನಾನು ಕನ್ನಡದಲ್ಲಿ ಬರೆದುದೆಲ್ಲವನ್ನೂ ನಮ್ಮ ಜನ ಓದುತ್ತಿಲ್ಲ. ಒಮ್ಮೊಮ್ಮೆ ನನ್ನ ಲೇಖ ಎಲ್ಲಿದೆ ಎಂಬುದನ್ನು ನಾನೇ ಜನರಿಗೆ ತೋರಿಸಿಕೊಡಬೇಕಾಗುತ್ತದೆ. ಇಂಥ ಪರಿಸ್ಥಿತಿಯಲ್ಲಿ ಅದನ್ನಷ್ಟು ಕನ್ನಡಕ್ಕೆ ತರುವ ಉಪದ್ವ್ಯಾಪ ಯಾರಿಗೆ ಬೇಕಾಗಿದೆ?" ಎಂದರು.

"ನಿಮ್ಮ 'ಸಖೀಗೀತ' ಅರ್ಧಕ್ಕೇ ನಿಂತಿದೆ. ಅದನ್ನು ಪೂರ್ತಿಗೊಳಿಸುವದಿಲ್ಲವೆ?"

"ಅದಕ್ಕೆ ತಲೆ-ಬಾಲ ಕೂಡಿಯೇ ಜೋಡಿಸಬೇಕಾಗಿದೆ. ಹೊಳಹು ಹಾಕುತ್ತಿದ್ದೇನೆ" ಎಂದರು.

ಶ್ರೀ ಬೇಂದ್ರೆಯವರು ಮಹರ್ಷಿ ಅರವಿಂದರ ಪ್ರಥಮ ಸಂದರ್ಶನ ಪಡೆದದ್ದು ೧೯೪೩ ರಲ್ಲಿ. ಅಂದಿನಿಂದ ಇಂದಿನ ವರೆಗೆ ಅವರು ಅನೇಕಾವರ್ತಿ ಪಾಂಡಿಚೇರಿಗೆ ಹೋಗಿಬಂದಿದ್ದಾರೆ. ಇವರ ಪತ್ನಿ-ಮಕ್ಕಳು ಕೂಡ ಪಾಂಡಿಚೇರಿಯನ್ನು ಸಂದ-ರ್ಶಿಸಿ ಬಂದಿದ್ದಾರೆ.

ಎಂಬತ್ತರ ಈ ಇಳಿವಯಸ್ಸಿನಲ್ಲಿ ಕೂಡ ಈ ವರಕವಿಗಳು ಕನ್ನಡಿಗರ ಕರೆಗೆ ಓಗೊಟ್ಟು, ಸಂಸ್ಕೃತಿ ಸಂದೇಶ ಬೀರುವದಕ್ಕಾಗಿ ನಾಡಿನಲ್ಲೆಲ್ಲ ಸಂಚರಿಸುತ್ತಿರುವ-ದನ್ನು ನೋಡಿ ಯುವಕರೂ ನಾಚಬೇಕು. ಅಂಥ ಉತ್ಸಾಹಶಕ್ತಿ ಅವರದು.

ಆ ಮಾತೆ, ಜಗನ್ಮಾತೆ, ಅಂಬಿಕೆ, ಜಗದಂಬಿಕೆ ಈ ವರಕವಿ ಶತಾಯುಷಿಗಳಾಗ ಲೆಂದು ಈ ಶುಭಸಂದರ್ಭದಲ್ಲಿ ಹರಸಲೆಂದು ಆಕೆಯಲ್ಲಿ ಅನನ್ಯ ಪ್ರಾರ್ಥನೆಗಳನ್ನು ಸಲ್ಲಿಸುತ್ತೇನೆ.

§ § § §

೫೬

# ಬೇಂದ್ರೆ ವಾಗ್ವೈಭವ

ರಾ. ಯ. ಧಾರವಾಡಕರ

ಕಾವ್ಯಪ್ರತಿಭೆ ಮತ್ತು ಮಾತುಗಾರಿಕೆ — ಈ ಎರಡೂ ಕುದುರೆಗಳ ಸವಾರಿ ಮಾಡಿದವರು ಬಹಳ ವಿರಳ. ಇಂಗ್ಲೀಷಿನ ಡಾ. ಜಾನ್ಸನ್ ಬರೀ ಮಾತನಾಡಿದರು, ಹೆಚ್ಚಾಗಿ ಬರೆಯಲಿಲ್ಲ. ಅವರ ಸ್ನೇಹಿತ ಡಾ. ಗೋಲ್ಡ್‌ಸ್ಮಿತ್ ಬಂಗಾರದಂತೆ ಬರೆದರು, ಆದರೆ ಮಾತೇ ಹೊರಡುತ್ತಿರಲಿಲ್ಲ —‘ Wrote like an angle but talked like a poor Poll.’ ‘ ವಾಣ್ಯೇಕಾ ಸಮಲಂಕರೋತಿ ಪುರುಷಂ ಯಾ ಸಂಸ್ಕೃತಾಧಾರ್ಯತೇ, ಕ್ಷೀಯಂತೇ ಖಲು ಭೂಷಣಾನಿ ಸತತಂ, ವಾಗ್ಭೂಷಣಂ ಭೂಷಣಂ’ — ಎಂಬ ಉಕ್ತಿಯನ್ನು ಸಮರ್ಥಿಸಿದವರು ವರಕವಿ ಡಾ. ದ. ರಾ. ಬೇಂದ್ರೆ ಅವರು.

ಸಂಭಾಷಣೆಯೇ ಆಗಲಿ, ಭಾಷಣವೇ ಆಗಲಿ — ಎರಡರಲ್ಲೂ ಅವರ ಧ್ವನಿ ಎತ್ತರದ್ದೇ. ಅದೇ ಆತ್ಮವಿಶ್ವಾಸ, ಪಾಂಡಿತ್ಯ, ಪ್ರಖರತೆ, ವಿನೋದ, ಆತ್ಮೀಯತೆ, ಕಟಕಿ, ಕಾವ್ಯಮಯತೆ. ಅವರ ಕೂಡ ಮಾತನಾಡುವದೆಂದರೆ, ಸಮಗ್ರ ವಿಶ್ವ ಪರ್ಯಟನ ಮಾಡಿದಂತೆ; ನಂದನದ ತೋಟದಲ್ಲಿ ವಿಹರಿಸಿ ಬಂದಂತೆ. ಯಾವುದೇ ಜನಸಮುದಾಯವಿದ್ದರೂ, ಅಲ್ಲಿ ಬೇಂದ್ರೆಯವರ ಧ್ವನಿಯೇ ಗೌರೀಶಂಕರ. ಅದು ಒಡೆದು ಕೇಳಲೇ ಬೇಕು; ಸುತ್ತರಿದು ನಿಂತ ಜನ ಒಂದಕ್ಷರ ಕಳೆದುಕೊಂಡರೆ, ಎಲ್ಲಿ ಪ್ರಾಣವನ್ನೇ ಕಳೆದುಕೊಂಡೇವೇನೋ ಎಂಬ ತಲ್ಲೀನತೆಯಿಂದ ಕೇಳುತ್ತ ನಿಂತಿರಬೇಕು. ನಿಮಿಷ ನಿಮಿಷಕ್ಕೆ ವಿನೋದದ ಲಹರಿ ಜಲ್ಲರಿ ಎದ್ದ ಹಾಗೆ, ತಂಪಾದ ಸರೋವರದ ಮೇಲೆ ಶೀತಲವಾದ ಕಲ್ಲೋಲ ಎದ್ದ ಹಾಗೆ ಏಳುತ್ತಿರಬೇಕು. ಒಂದೊಂದು ಸಲ ಅನ್ನಿಸುತ್ತದೆ. ಡಾ. ಜಾನ್ಸನ್ ಅವರಿಗೆ ಒಬ್ಬ ಬಾಸ್ವೆಲ್ ದೊರೆತ ಹಾಗೆ ಡಾ. ಬೇಂದ್ರೆಯವರಿಗೆ ಒಬ್ಬ ಲಿಪಿಕಾರ ದೊರಕಿದ್ದರೆ, ಪ್ರಪಂಚದ ಜ್ಞಾನಭಂಡಾರ ಎಷ್ಟು ಮುಂದುವರಿಯುತ್ತಿತ್ತಲ್ಲಾ ಎಂದು. ಕಾಡಿನಲ್ಲಿಯ ಪರ್ವತ ಶಿಖರದಿಂದ ಪ್ರಪಾತದ ನೀರು ಉರುಳಿಬಿದ್ದು ಹೋಗುವ ಹಾಗೆ, ಅವರ ಈ ವಾಗ್ಝರಿ ಸುಮ್ಮನೇ ವ್ಯರ್ಥವಾಗುತ್ತಿದೆಯಲ್ಲಾ ಎನ್ನಿಸುತ್ತದೆ.

ಯಾವುದೇ ಸಭೆ ಇರಲಿ, ಬೇಂದ್ರೆಯವರ ಮಾತು ಜನರನ್ನು ಜಲ್ಲಾಡಿಸದೆ ಬಿಡದು. ಅವರ ಮಾತಿನಿಂದ ಅರ್ಥ ತಿಳಿದುಕೊಳ್ಳುವವರು ಎಷ್ಟೋ; ಅನರ್ಥ ಮಾಡಿಕೊಳ್ಳುವವರೆಷ್ಟೋ! ಕಲೆಯಿಂದ ಜನ ತಮ್ಮ ತಮ್ಮ ಸಂಸ್ಕಾರಕ್ಕೆ ತಕ್ಕಂತೆ ಜ್ಞಾನವನ್ನು ಪಡೆಯುವಂತೆ, ಬೇಂದ್ರೆಯವರ ಭಾಷಣದಿಂದಲೂ ಜನ ತಮ್ಮ ತಮ್ಮ ಅಭ್ಯಾಸ, ಅನುಭವ ಪ್ರವೃತ್ತಿಗಳಿಗೆ ತಕ್ಕಂತೆ ಬೋಧೆಯನ್ನು ಪಡೆಯುತ್ತಾರೆ. ಬೇಂದ್ರೆಯವರ ಭಾಷಣ Classic ಇದ್ದ ಹಾಗೆ, ಅದು ಎಲ್ಲ ಮಟ್ಟದ ಜನರನ್ನೂ ಹಿಡಿಯ ಬಲ್ಲದು; ರಂಜಿಸಬಲ್ಲದು. ಆದ್ದರಿಂದ ಅವರು ಮಾತಾಡಬೇಕಾದ ಸಭೆಯಲ್ಲಿ ನಿಂತು ಮಾತಾಡಬೇಕಾದವನಿಗೆ ಎಂಟೆದೆ ಬೇಕು.

ಬೇಂದ್ರೆಯವರ ಭಾಷಣಗಳ ಈ ಶಕ್ತಿ ಎಲ್ಲಿ? ಹೇಳುವುದು ಕಠಿಣ. ಅವರ ಭಾಷಣಗಳಲ್ಲಿ ಇಲ್ಲದ ಕತ್ತಿಯ ವರಸೆ ಇಲ್ಲ. ಅವರು ಸಮಯಕ್ಕೆ ತಕ್ಕ ಒಂದು ಮಾತಿನಿಂದ ನೇರವಾಗಿ ವಿಷಯಕ್ಕೇ ಬರುತ್ತಾರೆ ಧಾರವಾಡದ ಮಾತಿನ ದೇಸಿಯ ಕೆಚ್ಚು ಅವರ ಭಾಷಣಕ್ಕೆ ಒಂದು ವಿಧದ ಆತ್ಮೀಯತೆಯನ್ನು ತಂದು ಕೊಡುತ್ತದೆ. ಅವರ ಭಾಷಣ ಒಂದು ಸಂಭಾಷಣೆ ಇದ್ದ ಹಾಗೆ. ಭಾಷಣಕಾರ ಮತ್ತು ಶ್ರೋತೃ-ವಿನ ನಡುವಿನ ಅಂತರ ಅಳಿಸಿ ಹೋಗುತ್ತದೆ.

ಋಜುತೆ, ಪಾಂಡಿತ್ಯ, ಆತ್ಮವಿಶ್ವಾಸ, ಜೀವನಾನುಭವ, ಪ್ರಖರತೆ, ಕಾವ್ಯ ಮಯತೆ, ರಸಿಕತೆ, ವ್ಯಂಗ್ಯ, ಕಟಕಿ, ವಿನೋದ, ಆಖ್ಯಾನ-ಉಪಾಖ್ಯಾನಗಳು— ಬೇಂದ್ರೆಯವರ ಭಾಷಣಕ್ಕೆ ಕಾವನ್ನೂ, ಬೆಳಕನ್ನೂ ತಂದುಕೊಡುತ್ತವೆ. ಅವರ ಭಾಷಣವೆಂದರೆ ಗೇರುಸಪ್ಪೆಯ ಜಲಪಾತ ಇದ್ದಹಾಗೆ. ಅದೇ ಗಾಂಭೀರ್ಯ, ಅದೇ ಶಕ್ತಿ, ಅದೇ ಅದ್ಭುತ, ಅದೇ ಸೌಂದರ್ಯ, ಹಲವು ಸಲ ಅದೇ ರುದ್ರ ಮೋಹಕತೆ. ಅವರ ಭಾಷಣದಲ್ಲಿ ರಾಜನ ಗಾಂಭೀರ್ಯವಿದೆ, ಅಬ್ಬರದ ಗಡುಸಿದೆ, ರಾಣಿಯ ಚೆಲ್ವಿಕೆಯಿದೆ, ತುಷಾರದ ತಂಪಿದೆ. ಬೇಂದ್ರೆಯವರ ಭಾಷಣ ಚಿಚೇಂದ್ರಿ ಹಚ್ಚಿದ ಹಾಗೆ. ನೋಡ ನೋಡುತ್ತಲೇ ನೂರಾರು ಬಣ್ಣಗಳ ಸೌಂದರ್ಯ ಕಣ್ಣಮುಂದೆ ನರ್ತಿಸಿ ಮಾಯವಾಗುತ್ತವೆ. ಒಂದು ಚಿಚೇಂದ್ರಿ ಮುಗಿದ ಒಂದು ಅರೆಕ್ಷಣ ದಲ್ಲಿಯೇ ಮತ್ತೊಂದು ಚಿಚೇಂದ್ರಿ. ಬೆಳಕಿನ ಸಾಲುಗಳು, ತೋರಣಗಳು. ಉಳಿ ದವರ ಭಾಷಣ ಒಂದೇ ವಿಷಯವನ್ನು ಕುರಿತ ಗಂಭೀರ ಚಿಂತನ. ಬೇಂದ್ರೆ ಯವರದು ಹಾಗಲ್ಲ. ಮಾತು ಮಾತಿಗೆ ಮಾತಿನ ಮಲಕು. ಮಾಸ್ತಿಯವರನ್ನು ಕುರಿತು ಬೇಂದ್ರೆಯವರು ಒಂದು ಮಾತು ಹೇಳಿದರು:

ನೀನು ಒಂದೇ ಬೆಳಕು, ನಾನು ಹಲ ಬಣ್ಣ,<br>
ನಾನು ಬೆಳೆಯುವ ತಮ್ಮ, ನೀನು ಬೆಳೆದಣ್ಣ.

ಹಲವರ ಭಾಷಣ ಒಂದೇ ಬೆಳಕು, ಬೇಂದ್ರೆಯವರದು ಹಲ ಬಣ್ಣ. ಅವರ ಮಾತಿನ ಕಾಮನಬಿಲ್ಲಿಗೆ ಮಾರುಹೋಗದವರು ವಿರಳ. ಅದನ್ನು ಶ್ರೋತೃ ನೋಡ ನೋಡುತ್ತಿರುವಂತೆಯೇ, ಈ ಮಾಯಾವಿ ಆ ಕಾಮನಬಿಲ್ಲನ್ನು ತನ್ನ ಕೈಯಿಂದ ವಾಪಸು ಎಳೆದುಕೊಂಡು, ತನ್ನ ಜೋಳಿಗೆಗೆ ಸೇರಿಸಿಕೊಳ್ಳುತ್ತಾನೆ. ಅದು ಮಾಯವಾಯಿತೇನೋ ಎನ್ನುವದರಲ್ಲಿಯೇ, ಮತ್ತೊಂದು ಮೂಲೆಯಲ್ಲಿ ಎಲ್ಲಿಯೋ ಇನ್ನೊಂದು ಕಾಮನಬಿಲ್ಲು ಮೂಡಹತ್ತುತ್ತದೆ. ಬೇಂದ್ರೆಯವರ ಭಾಷಣದ ಈ ಗಾರುಡಿ ಅದ್ಭುತವಾದದ್ದು. ಅವರು ಮಾತಿಗೆ ನಿಂತರೆ, ಅವರ ಇಡೀ ದೇಹವೇ ಮಾತಾಡುತ್ತಿರುವುದೋ ಎನಿಸುತ್ತದೆ. ಬೆರಳು ಮೋಡಗಳನ್ನು ಹೆಕ್ಕುತ್ತಿರುತ್ತವೆ; ಕಣ್ಣು ಇಂದ್ರಲೋಕದ ಸೌಂದರ್ಯವನ್ನು ನೋಡುತ್ತಿರುತ್ತದೆ: ತುಟಿ ಕಿರುನಗೆ ಯನ್ನು ಸೂಸುತ್ತಿರುತ್ತದೆ. ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ; ಮಸೆದ ಗಾಳಿ ಪಕ್ಕ ಪಡೆಯುತಿತ್ತು ಒಂದು ಚಂದ್ರಹಾಸಾ; ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸಾ. ಭೃಂಗದ ಬೆನ್ನಸವಾರಿ ಮಾಡಿದ ಈ ಗಾರುಡಿಗನ ಕಾವ್ಯ ಪ್ರತಿಭೆಯ ಮಜಲುಗಳನ್ನು ಹಿಡಿಯಲು ಶ್ರೋತೃ ಪ್ರಯತ್ನಪಡುತ್ತಿರು ತ್ತಾನೆ.

ಬೇಂದ್ರೆಯವರ ಭಾಷಣ ಒಟ್ಟಿನಲ್ಲಿ ಪರಿಣಾಮಕಾರಿಯಾಗಿರುವಂತೆ, ವಿವರ ದಲ್ಲಿಯೂ ಅಷ್ಟೇ ಪರಿಣಾಮಕಾರಿ, ಅವರ ಭಾಷಣದುದ್ದಕ್ಕೂ ಬರುವ ಕತೆ—ಉಪಕತೆಗಳನ್ನು ಮರೆಯಲು ಸಾಧ್ಯವಿಲ್ಲ.

ಬೇಂದ್ರೆಯವರು ಒಂದು ಸಂಸ್ಥೆಯ ಸ್ನೇಹಸಮ್ಮೇಲನಕ್ಕೆ ಆಗಮಿಸಿದ್ದರು. ಯಥಾಪ್ರಕಾರದ ಪರಿಚಯ ಭಾಷಣ, ವರದಿವಾಚನ, ಪಾರಿತೋಷಕ ವಿತರಣೆಗಳ ಸರದಿ ಮುಗಿಯುವಷ್ಟರಲ್ಲಿಯೇ ಜನ ಹೆಚ್ಚುಕಡಿಮೆ ಬೇಸತ್ತಿದ್ದರು. ಆದರೆ, ಬೇಂದ್ರೆಯವರು ಮಾತಾಡುತ್ತಾರೆಂಬ ಒಂದು ಕಾರಣದಿಂದ ಮಾತ್ರ ತಾಳ್ಮೆ ವಹಿಸಿದ್ದರು. ಬೇಂದ್ರೆಯವರು ಎದ್ದವರೇ ಪ್ರಾರಂಭಮಾಡಿದರು : "ನೀವು ನನ್ನ ಈ ಗ್ಯಾದರಿಂಗಿಗೆ ಕರದೀರಿ. ಈ ವರ್ಷ ಗ್ಯಾದರಿಂಗು, ಹೋದ ವರುಷನೂ ಗ್ಯಾದರಿಂಗ ಇತ್ತು. ಅದರ ಹಿಂದಿನ ವರುಷನೂ ಇತ್ತಂತ ಕಾಣಸ್ತದೆ. ವರ್ಷಾ ವರ್ಷಾ ಯಾಕ ಈ ಗ್ಯಾದರಿಂಗು ?" ಅವರು ಹೀಗೆಂದಾಕ್ಷಣಕ್ಕೆ ಜನ ಎಚ್ಚತ್ತು ಕುಳಿತರು. ಬೇಂದ್ರೆ ಸಾಗಿದರು : "ಒಂದು ಊರಾಗ ಇಬ್ಬರು ಹೆಡ್ಡರಿದ್ದರು. ಅವರು ತಮ್ಮತಮ್ಮೊಳಗೇ ಮಾತಾಡ್ಲಿಕ್ಕೆ ಹತ್ತಿದರು. ಒಬ್ಬ ಅಂದ — 'ನಮ್ಮೂರಿಗೆ ಒಬ್ಬ ಬಂದಿದ್ದ. ಏನು ಹೊಲಸಪಾ ಅವ, ಛಿ! ಛಿ! ಭಾರಿ ಹೊಲಸು! ಅವನ್ನ ಕರಕೊಂಡು ಹೋಗಿ ಊರ ಮುಂದಿನ ಭಾವಿಕಟ್ಟಿ ಮ್ಯಾಲ ಕೂಡಿಸಿ ಹತ್ತು ಕೊಡ ನೀರು ಸುರುವಿದರ, ಅವನ ಮೈಮ್ಯಾಲಿನ ಹೊಲಸು ಸ್ವಲ್ಪ ಸರೀತು.' ಅದಕ್ಕೆ ಇನ್ನೊಬ್ಬವ ಅಂದ:- 'ಥೇ! ಥೇ! ಏನು

ಹೇಳತಿ ಬಿಡು ಅವಂದು. ನಮ್ಮೂರಿಗೆ ಒಬ್ಬವ ಬಂದಿದ್ದ. ಅವ ಏನು ಹೊಲಸಂತೀ, ಛೀ ಛೀ ಹೇಳಬಾರದು. ಹೊಲಸು ಅಂದರ ಹೊಲಸೇ ಹೊಲಸು. ಒಂದು ಸರೆ ಅವನ್ನ ನಮ್ಮ ಊರ ಮುಂದಿನ ಹಳ್ಳಕ್ಕೆ ಕರಕೊಂಡು ಹೋಗಿ, ಅಲ್ಲಿ ಅವನ್ನ ಹತ್ತ ತಾಸು ನೆನಿ ಇಟ್ಟು, ಇಟ್ಟೇ ಕಲ್ಲಿನಿಂದ ತಿಕ್ಕಿದರ, ಅವನ ಮೈಮ್ಯಾಲಿನ ಹೊಲಸು ಸ್ವಲ್ಪ ಸರದು, ಹತ್ತ ತಾಸ ಆದ ಮ್ಯಾಲೆ, ಒಳಗ ಹಕ್ಕೊಂಡಿದ್ದ ಬನೀನು ಸ್ವಲ್ಪ ಕಾಣಸಲಿಕ್ಕೆ ಹತ್ತಿತು.' (ಜನರ ಘೊಳ್ ಘೊಳ್ ಎನ್ನುವ ನಗೆ) "ಹಾಂಗ ಈ ನಮ್ಮ ಗ್ಯಾದರಿಂಗು ವರ್ಷಾ ವರ್ಷಾ ನಮ್ಮ ಮನಸ್ಸನ್ನ ನೆನಿ ಇಟ್ಟು, ಸಭಾದ ಇಟ್ಟೇಕಲ್ಲಿನಿಂದ ತಿಕ್ಕಿದರ, ಎಲ್ಲೋ ಹಾಕ್ಕೊಂಡ ಬನೀನು ಸ್ವಲ್ಪ ಕಾಣಸಲಿಕ್ಕೆ ಹತ್ತದ. ಮನಸಿನ ಈ ಹೊಲಸು ಹೋಗಬೇಕಾದರ, ವರ್ಷಾ ವರ್ಷಾ ಈ ಗ್ಯಾದರಿಂಗ್ ಬೇಕು." ಬೇಂದ್ರೆಯವರು ಈ ಕಥೆ ಹೇಳುತ್ತಿರುವಂತೆಯೇ, ಜನ ಆಕಾಶದ ಎತ್ತರಕ್ಕೆ ಹೋಗಿ ಪುನಃ ಭೂಮಿಗೆ ಬಂದಂತೆ ಭಾಸವಾಯಿತು. ಇಂಥ ನೂರಾರು ಉದಾಹರಣೆಗಳು.

ಶ್ಲೀಲ – ಅಶ್ಲೀಲದ ಬಗ್ಗೆ ತುಂಬಾ ಚರ್ಚೆಯಾಗುತ್ತಿದ್ದ ಕಾಲವದು. "ಎಲ್ಲಾ ಸ್ಪಷ್ಟ ಬಿಚ್ಚಿ ಹೇಳೂದು ಅಶ್ಲೀಲ. ಒಡದ್ಞ ಹೇಳಬೇಕಂತೇನೂ ಇಲ್ಲ. ಸೂಚಿಸಿದರೂ ಸಾಕು. ಮುಂದಿನದು ಓದುಗರಿಗೆ ಅರ್ಥವಾಗೇ ಆಗ್ತದೆ." ಎಂದರು ಬೇಂದ್ರೆ. ಮುಂದು ವರಿದು,

"ಒಂದು ಸರೆ ಶಿವಾ–ಪಾರ್ವತಿ ಆರಾಮಾಗಿ ಕೂತಿದ್ದರು. ಅವರೆದುರಿಗೆ ಹೊಟ್ಟೇ ಗಣಪ್ಪ ಕೂತಿದ್ದ. ಅವಗ ತಮ್ಮ ಅಪ್ಪ ಹಕ್ಕೊಂಡ ಆಭರಣಗಳ ಸಲುವಾಗಿ ತುಂಬಾ ಕುತೂಹಲ. ಅದಕ್ಕ ಅವ ಅವ್ವನ್ನ ಕೇಳಿದ, 'ಅವ್ವಾ, ಅಪ್ಪ ತಲಿ ಮ್ಯಾಲ ಇಟಗೊಂಡಾನಲ್ಲ, ಏನು ಅದು ?' ಪಾರ್ವತಿ ಹೇಳಿದಳು — 'ಅದು ಗಂಗಾ ನದಿ. ಗಂಗಾನದಿ ನಿಮ್ಮ ತಂದಿ ತಲಿಯಿಂದ್ಞನ ಹರೀತದ' 'ಕೊರಳಾಗ ಸುತಗೊಂಡಾನಲ್ಲ, ಏನದು ?' 'ಅದು ಹಾವು. ನಿಮ್ಮಪ್ಪ ವಿಷನುಂಗಿ, ವಿಷಕಂಠ ಆದದ್ದಲ್ಲದೆ, ಪನ್ನಗಾಭರಣ.' 'ಎದಿಮ್ಯಾಲ ಇರುವದು ಏನು ?' 'ಅದು ರುಂಡಮಾಲಾ', 'ಮೈಮ್ಯಾಲ ಹೊತಗೊಂಡದ್ದೇನು ?' 'ಅದು ಗಜ ಚರ್ಮ' 'ಮತ್ತ ೩ ಮತ್ತ ೩........' 'ಥೂ, ಹುಚ್ಚಮುಂಡೆಗಂಡ, ಸುಮ್ನೇ ಕೂಡು. ಹುಚ್ಚುಚ್ಚಾರ ಕೇಳಬ್ಯಾಡ' 'ಅಂದಳು ಪಾರ್ವತಿ. ಯಾಕಂದ್ರ ಗಣಪ್ಪ ಹೀಂಗ ಕೇಳ್ತಾ ಕೇಳ್ತಾ ಏನೇನಾರ ಕೇಳ್ಯಾನು ಅಂತ ಅವಳಿಗೆ ಹೆದರಿಕಿ, ಇದೇ ಶ್ಲೀಲ — ಅಶ್ಲೀಲ."

ಹೀಗೆಯೇ ಇನ್ನೊಂದು ಕಥೆ—

"ಉದ್ದ ಗಡ್ಡದ ಒಬ್ಬ ಸಾಹೇಬ ಒಮ್ಮೆ ಒಂದು ಪುಸ್ತಕಾ ಓದತಿದ್ದ. ಅದರೊಳಗ 'ಉದ್ದನ್ನ ಗಡ್ಡದವರಿಗೆ ಬುದ್ಧಿಯಿಲ್ಲ' ಅಂತ ಬರೆದಿತ್ತು. ಇದನ್ನೋದಿ

ಆ ಉದ್ದಗಡ್ಡದ ಸಾಹೇಬಗ ಭಾಳ ಕೆಟ್ಟ ಅನಿಸಿತು. ಅದಕ ಅವ ತನ್ನ ಗಡ್ಡ ಸಣ್ಣ ಮಾಡಿಕೋಬೇಕು ಅಂತ ವಿಚಾರ ಮಾಡಿದ. ಆಗ ತನ್ನ ಎದುರಿಗಿದ್ದ ದೀಪ ಕಂಡಿತು. ಅದಕ್ಕ ತನ್ನ ಉದ್ದ ಗಡ್ಡಾ ಹಿಡದ; ಆಗ ಇಡೀ ಗಡ್ಡೆಲ್ಲ ಸುಟ್ಟು ಹೋದೂ ಅಲ್ಲದೆ, ಅವನ ಮುಖಾನೂ ಸುಟ್ಟಿತು. ಇದರಿಂದ ಕೆಟ್ಟ ಅನಿಸಿಗೊಂಡ ಸಾಹೇಬ ಪುನಃ ಪುಸ್ತಕಾ ತಗದು ನೋಡಿದ. ಅದರೊಳಗ ಮತ್ತ ಅದೇ ವಾಕ್ಯಾನs ಇತ್ತು — 'ಉದ್ದನ್ನ ಗಡ್ಡದವರಿಗೆ ಬುದ್ಧಿಯಿಲ್ಲ'— ಅಂತ. ಹೀಂಗ, ನಾವು ಶಬ್ದದೊಳಗಿನ ಹೂರಣಾ ತಿಳಕೊಳ್ಳಲಿಕ್ಕೆ ಪ್ರಯತ್ನ ಮಾಡಬೇಕs ಹೊರತು, ಅಕ್ಷರಕ್ಕ ಮಾತ್ರ ಜೋತುಬೀಳಬಾರದು. ಹಾಂಗ ಮಾಡಿದರ ಅದು ಭಗವಂತನ ಲೆಖ್ಖs"

ಬೇಂದ್ರೆಯವರ ವ್ಯಂಗ್ಯವೂ ಅಷ್ಟೇ. ಕರ್ನಾಟಕ ಏಕೀಕರಣವಾಗುವ ಮೊದಲು ಮುಂಬಯಿಯ ಒಂದು ಸಭೆಯಲ್ಲಿ ಬೇಂದ್ರೆಯವರು ಹೇಳಿದರು, "ಏಕೀ-ಕರಣ ಏಕೀಕರಣ ಅಂತ ನಾವು ಸುಳ್ಳೇ ಚಳವಳಿ ಮಾಡುವ ಕಾರಣವೇ ಇಲ್ಲ. ನಾವು ಕನ್ನಡ ಜನ ಭಾಳ ಸಹನಶೀಲರು. ನಾವು ಏನೂ ಕಾದಾಡದೇ ಏಕೀಕರಣ ಪಡಕೋತೀವಿ. ಹ್ಯಾಂಗ s ಅಂತೀರಾ? ಇಗಾ, ಮಹಾರಾಷ್ಟ್ರದವರು ಹೊಡೆ-ದಾಡಿಕೊಂಡು ತಮಗೆಷ್ಟುಬೇಕೋ ಅಷ್ಟು ತಗೊಂಡು ಹೋಗ್ಲಿ; ಆಂಧ್ರದವರು ತಮಗೆಷ್ಟು ಬೇಕೋ ಅಷ್ಟು ತಗೊಳ್ಳಲಿ; ತಮಿಳರು, ಕೇರಳದವರು ಯಾಕ ಬಿಡ-ಬೇಕು, ಅವರೂ ತಮ್ಮ ತಮ್ಮದು ತಗೊಳ್ಳಲಿ. ಆಮೇಲೆ ಉಳಿದ ಅಖಂಡ ಕರ್ನಾ-ಟಕ ನಮಗ ಬರದ ಎಲ್ಲಿ ಹೋಗ್ತsದ. ಅದು ಬರಲೇಬೇಕು."

ಭಾರತೀಯರ ಆಲಸ್ಯ, ಹೇಡಿತನಗಳ ಬಗ್ಗೆ ಒಮ್ಮೆ ಹೀಗೆ ಹೇಳಿದರು :

"ಹಿಟ್ಲರ್ ಹಿಂದುಸ್ಥಾನದ ಮ್ಯಾಲ ಬಾಂಬ್ ಒಗೀಬೇಕೂ ಅಂತ ಮಾಡಿ-ದ್ನಂತ. ನಾ ಆವಾಗ ಅವಗ ಬರೀಬೇಕೂ ಅಂತ ಮಾಡಿದ್ದೆ. ಸುಮ್ಮನs ಬಾಂಬ್ ಯಾಕ ಒಗೀತೀರಿ, ಉಂಡೀ ಒಗೀರಿ ಅಂತ. ಯಾಕಂದ್ರ ಪುಕ್ಕಟೆ ಸಿಕ್ಕರ, ನಮ್ಮ ಜನಕ್ಕ ಇಷ್ಟೇ ತಿನಬೇಕೂ ಅನ್ನೋ ಕಂಟ್ರೋಲೂ ಇಲ್ಲ. ಅಪಚನ ಆಗೂವರೆಗೂ ತಿಂದತಿಂದೇ ಸಾಯ್ತಾವ. ಉಂಡೀಲೇ ಸಾಯೂವಕ್ಕ ಬಾಂಬ್ ಯಾಕs ಅಂತ."

ಒಂದು ಸಲ, ಅವಿವೇಕತನದಿಂದ ಹರದಾಡೂ ಯುವಕರಿಗೆ ಹೇಳಿದರು : "ಸಿಕ್ಕಾಂಗ ಹರಿಯೋ ನಳಕ್ಕ, ಒಂದು ದಮಯಂತಿ ಬೇಕು." (ಇಲ್ಲಿ ದಮ-ಯಂತಿ ಎಂದರೆ, ನಳ ಬಂದು ಮಾಡುವ ಬೆಣೆ ಎಂದು ಅರ್ಥ.)

ಹೀಗೆ ಬೇಂದ್ರೆಯವರಲ್ಲಿ ಕಥೆ-ಉಪಕಥೆಗಳು ಸಮರ್ಪಕವಾಗಿ ಸೇರಿಕೊಂಡು, ಅವರ ಭಾಷಣಕ್ಕೆ ಒಂದು ವಿಧದ ವೈವಿಧ್ಯತೆಯನ್ನು, ರಸಿಕತೆಯನ್ನು, ತಂದು ಕೊಡುತ್ತವೆ.

ಸಾದಾ ಮಾತನಾಡುವಕಿಂತಲೂ, ಕೆಣಕಿದಾಗ ಬೇಂದ್ರೆ ನಾಗರಹಾವು. ಆಗ ಅವರನ್ನು ಯಾರೂ ತಡವುವಂತಿಲ್ಲ. ನಾಲಗೆ ಆಗ ವಿಷ ಉಗುಳುತ್ತಿರುತ್ತದೆ, ಬೆಂಕಿ ಫೂತ್ಕರಿಸುತ್ತಿರುತ್ತದೆ. ಬೇಂದ್ರೆಯವರನ್ನು ಕೆಣಕಿ ಪಾರಾದವರು ಬಹಳ ವಿರಳ. ಆಗ ಇಡೀ ಶ್ರೋತೃಸಮುದಾಯ ಉಸಿರು ಗಟ್ಟಿಯಾಗಿ ಹಿಡಿದುಕೊಂಡು ಕೇಳುತ್ತ ಕುಳಿತಿರುತ್ತದೆ.

ಮುಂಬಯಿಯ ಒಂದು ಸಮಾರಂಭದಲ್ಲಿ ಹೀಗೆಯೇ ಆಯಿತು. ಬೇಂದ್ರೆಯವರು ಕನ್ನಡದ ವರಕವಿಗಳಾಗಿದ್ದರೂ, ಅವರು ಮನೆಯಲ್ಲಿ ಆಡುವ ಭಾಷೆ ಮರಾಠಿ. ಮುಂಬಯಿಯ ಆ ಸಮಾರಂಭದಲ್ಲಿ ಅಲ್ಲಿಯ ಮರಾಠಿಗರು ಇವರನ್ನು ಪ್ರೋತ್ಸಾಹಿಸುವ ರೀತಿಯಲ್ಲಿ, "ಬೇಂದ್ರೆ ಕನ್ನಡದ ಕವಿ; ಅವರ ಮನೆಮಾತು ಮರಾಠಿಯಾದರೂ, ಅವರಿಗೆ ಅಷ್ಟಾಗಿ ಮರಾಠಿ ರೂಢಿ ಇಲ್ಲ; ಆದರೂ ಮರಾಠಿಯಲ್ಲಿ ಮಾತಾಡಲಿಕ್ಕೆ ಪ್ರಯತ್ನ ಮಾಡುತ್ತಾರೆ" ಎಂದಾಗ, ಬೇಂದ್ರೆ ಪ್ರಾರಂಭಿಸಿದರು, "ನಾನು ಮರಾಠಿಯಲ್ಲಿ ಮಾತಾಡ್ತೀನಿ. ನನಗ ಬರೂ ಮರಾಠಿ ನನ್ನ ತಾಯೀ ಹಾಲಿನ ಜತೆಗೆ ಬಂದದ್ದು; ಅದು ಬಾಜಾರದಾಗಿನ ಪಲ್ಯಾ. ಕೊಂಡು ತಂಥಾಂಗ ಕೊಂಡು ತಂದದ್ದಲ್ಲ." ಪ್ರೋತ್ಸಾಹಕರ ರೀತಿಯಲ್ಲಿ ಮಾತನಾಡಿದ ಮಹನೀಯರ ಮುಖ ಪೆಚ್ಚಾಯಿತು.

ಬೇಂದ್ರೆಯವರ ಭಾಷಣದ ಹುಲ್ಲುಗಾವಲಿನಲ್ಲಿ ಅರಳಿದ ಕಾವ್ಯಮಂದಾರಗಳೆಷ್ಟೋ! 'ಇಟ್ಟಾರ ಯಾರು ಉಸರಿನಾ ಲೆಕ್ಕಾ, ಹೂವಿನಾ ಲೆಕ್ಕಾ' ಉದಾರದಾನಿ ಹಣ ಸೂರೆ ಮಾಡಿದ ಹಾಗೆ, ಕಾವ್ಯಸೌಂದರ್ಯವನ್ನೂ ಜೀವನಾನುಭವವನ್ನೂ ಸೂರೆಮಾಡುತ್ತಾರೆ ಬೇಂದ್ರೆಯವರು. ಅವರ ಒಂದೊಂದು ಭಾಷಣವೆಂದರೆ ಒಂದೊಂದು ಉದ್ಗ್ರಂಥವನ್ನು ಓದಿದ ಹಾಗೆ — ಇಂಥ ಹಲವಾರು ಮುಕ್ತಾಫಲಗಳನ್ನು ಇಲ್ಲಿ ಕೊಡಬಹುದು :

* ಬೀಜ ಇಂದ್ಧಾಂಗ ಫಲಾ ಬರ್ತsದ ಹೊರತು, ಗೊಬ್ಬರ ಇದ್ಧಾಂಗ ಅಲ್ಲ.
* ಅನಕ್ಷರಸ್ಥನ್ನ ಅಕ್ಷರಸ್ಥ ಮಾಡೋದಂದರ ಸುಳ್ಳು ಸಹಿಹಾಕಲಿಕ್ಕೆ ಕಲಿಸಿಧಾಂಗ.
* ಕಣ್ಣ ತಿಳಿ ಆದರ, ಎಲ್ಲಾ ತಿಳಿ.
* ಕಣ್ಣೆವೆ ತೆರೆದರs ಹುಣ್ಣಿವಿ ತೆರೆಧಾಂಗ.
* ಹಳೇ ಗ್ವಾಡಿಗೆ ಹೊಸಾ ಕ್ಯಾಲೆಂಡರ್ ಬರ್‍ತಾವ.
* ದುಃಖಾ ತಡಕೋಬಹುದು, ಆದರ ಸುಖಾ ತಡಕೊಳ್ಳೋದು ಕಠಿಣ.

* ಮಿಸ್‌ಪ್ರಿಂಟ್ ಆದರ ಅಡ್ಡಿ ಇಲ್ಲ, ಆದರ ತಪ್ಪು ಬರೀಬ್ಯಾಡ್ರಿ.
* ಸಂಸ್ಕೃತಿ ಅಂದರ ಕುಣಿಯೋ ಕಾಲು, ನಡೆಯೋ ಕಾಲುಗಳ ನಡುವಿನ ಅಂತರ.
* ನಾವೀಗ ಸ್ವತಂತ್ರರು; ಭಾರತ ಹಾಳ ಆದರ್ಽ ನಮ್ಮಿಂದ್ಽನ ಆಗಬೇಕು.
* ಸಂಚಾರಿಯಿಂದ ಸ್ಥಾಯಿ ಕೆಡಬಾರದು.
* ಸಾಯೋದು ಸುಲಭ, ಬದುಕೋದು ಕಷ್ಟ.
* ಬೇಂದ್ರೆನ ಮನೀಗೆ ಹೋದ ಕಳ್ಳರು ಏನೂ ಕದೀಲಿಕ್ಕೆ
  ಸಾಧ್ಯಇಲ್ಲಾಂತ ಕಳ್ಳರನ ಹಾಂಗ್ಽ ಬಿಟ್ಟು ಬಿಟ್ಟರಂತ ಪೋಲೀಸರು.

*    *    *    *

ಹೀಗಾಗಿ, ಬೇಂದ್ರೆಯವರ ಭಾಷಣವೆಂದರೆ ಅದು ಮುದ್ರಿತ ಆಮಂತ್ರಣ ಪತ್ರಿಕೆಯಲ್ಲಿಯ ಕೇವಲ ಒಂದು ಕಾರ್ಯಕ್ರಮವಲ್ಲ; ಅದೊಂದು ರಸದೂಟ, ಒಂದು ದಿವ್ಯಾನುಭವ, ‘ ಕಲ್ಪವೃಕ್ಷ ವೃಂದಾವನಂಗಳದಲಿ ಹೇಗೊ ಹೊಕ್ಕು ಬಂದೆ, ಅಲ್ಲ ನಿದ್ರೆಯೂ ಅಲ್ಲ ಎಚ್ಚರವೂ, ಎರಡೂ ಒಂದು ಎಂಬೆ ’ ಎನ್ನುವ ಸಮ್ಮೋಹಕತೆ, ದನಕರದ ಕಾಲಿನ ಧೂಳಿ ಮುಗಿಲ ರಸ ಹೂಳಿದಾಗ ಚೆಲ್ಲವರಿದು ಸೂಸಿದ ಬೆಳುದಿಂಗಳು, ಈ ರಸಗಂಗೆಯಲ್ಲಿ ಮಿಂಚು ಬಂದಾಗ, ಹರಕೆಸಂದಂತೆ, ದುಂದುಮೆಂದಂತೆ, ಮನಸ್ಸು ಸಂತೃಪ್ತಿ ಪಡೆಯುತ್ತದೆ. ಇಂಥ ವಾಗ್ವೈಭವವಿದ್ದ ವಾಗ್ಮಿಗಳು ಕನ್ನಡದಲ್ಲಿ ಇನ್ನೆಷ್ಟು ಜನ ಇದ್ದಾರೆ ?

§ § § §

## ೫೭ | ರಸವು ಒರತೆ ತೋಡಿತು

**ಕೃಷ್ಣಮೂರ್ತಿ ಪುರಾಣಿಕ**

ಬೇಂದ್ರೆ ಅಂದು ಹಾಡುತ್ತಿದ್ದ ಹಾಡು ನನ್ನಲ್ಲಿ ಗುಂಗು ಹಿಡಿಸಿತ್ತು; ಇಂದೂ ಆ ಗುಂಗು ಕಡಿಮೆಯಾಗಿಲ್ಲ. ಆ ಕಾವ್ಯದ ಮೋಡಿ ಅಂತಹದು. ಕಾವ್ಯಜೀವನದ ರಸೋತ್ಪಾದನೆಯಲ್ಲಿ ಚಿರಂತನ ಧ್ವನಿ, ವೀಣಾತರಂಗದ ಮಂಜುಳರವದ ಕಿಂಕಿಣಿಯ ಕೋಲುಹೆಜ್ಜೆಯ ಗತ್ತಿನ ಹಳ್ಳಿಯ ಕುಣಿತದ ಕಾವ್ಯಕನ್ನಿಕೆ, ಭಾವ ಪೂರಿತ ರಸಮಂಜರಿ, ತೂಬುಚ್ಚಿ ಬಿಟ್ಟ ರಸತರಂಗಗಳ ಮಾಲೆ, ಈ ಬೇಂದ್ರೆಕಾವ್ಯ ರಸವಾಹಿನಿ.

ಕಾಲೇಜದ ತರುಣನಾಗಿದ್ದ ನಾನು ಅವರ ಸಭೆಗಳಲ್ಲಿ ಹಾಜರು ಇರುತ್ತಿದ್ದೆ. ಮೂವತ್ತೈದು ವರುಷಗಳ ಹಿಂದೆ ನಾನು ಅವರಿಗೆ ಅರಿಯದ ಭಕ್ತನಾಗಿ ಕಾವ್ಯಾರಾಧನೆಗೆ ತೊಡಗಿದ್ದೆ. ಗೆಳೆಯ ರಾಮಚಂದ್ರ ಹೇಜೀಬ (ಈಗ ಕುರುಗಡ್ಡೆವಾಸಿ)ರೊಡನೆ ಆ ಭಾವಗೀತಗಳನ್ನು ಕರ್ನಾಟಕ ಕಾಲೇಜಿನ ಲಾಯಬ್ರರಿಹಾಲಿನ ಮೂಲೆಯಲ್ಲಿ ನಿಂತು ಗಂಟೆಗಟ್ಟಲೆ ಚರ್ಚಿಸಿ ರಸಾಸ್ವಾದನೆ ಮಾಡುತ್ತಿದ್ದುದೂ ಉಂಟು. ನನ್ನ ಎರಡನೆಯ ಕವನಸಂಗ್ರಹ 'ಜೀವನಾದ' ಹೊರಬಿದ್ದಾಗ ಸಹೃದಯ ವಿಮರ್ಶಕರು ಆ ಕವನಸಂಗ್ರಹದ ಬಹುಭಾಗ ಕವನಗಳಲ್ಲಿ ಬೇಂದ್ರೆ ಮುದ್ರೆ ಕಾಣುತ್ತದೆ ಎಂದುದೂ ಉಂಟು.

ನಾನು ಕವಿಯೆಂದು ಬೇಂದ್ರೆಯವರಿಗೆ ಮೊದಮೊದಲು ಕಾಣಿಸಿಕೊಳ್ಳಲೇ ಇಲ್ಲ. ಅವರನ್ನು ಕಾವ್ಯಗುರುವೆಂದು ನಾನು ಎಂದೋ ಸ್ವೀಕರಿಸಿದ್ದೆ.

ಧಾರವಾಡ ನಾಡಹಬ್ಬದ ಕಾರ್ಯಕ್ರಮದಲ್ಲಿ ವೇದಿಕೆಯ ಮೇಲೆ ಅಂದು ದಿ. ಮುದವೀಡು ಕೃಷ್ಣರಾಯರು, ಗರುಡ ಸದಾಶಿವರಾಯರು, ಆಲೂರ ವೆಂಕಟರಾಯರು ಆಸೀನರಾಗಿದ್ದರು. ಕುರುಚಲು ಗಡ್ಡದ, ಅಸ್ತವ್ಯಸ್ತ ಕೋಟಿನ ಗುಂಡಿ ಧರಿಸಿದ್ದ ವ್ಯಕ್ತಿಯೊಂದು ಅವರ ಪಕ್ಕದಲ್ಲಿಯೇ ಕುಳಿತಿತ್ತು. ನನ್ನ "ಬೆಂದೊಡಲ ಬಿಸಿಯುಸಿರು" ಕೇಳಿದ ಸಭೆಗೆ ಬೇಂದ್ರೆ 'ಹೆಣದ ಹಿಂದೆ' ಓದಿದಾಗ ಸಭೆ ಮಂತ್ರ-

ಮುಗ್ಧವಾಯಿತು. ಈ ಮೊದಲ ಪರಿಚಯ, ವ್ಯಕ್ತಿಪರಿಚಯವಾಗಿರಲಿಲ್ಲ; ಕಾವ್ಯ ಪರಿಚಯವಾಗಿತ್ತು.

ಸಾಧನಕೇರಿಯಿಂದ ಬೆಳಗಾಂವ ರಸ್ತೆ ಕೂಡುವ ದಾರಿಯಲ್ಲಿ ನಾನು ನಾಟ್ಯಾ-ಚಾರ್ಯ ಶ್ರೀನಿವಾಸ ಕುಲಕರ್ಣಿ ಅವರೊಡನೆ ಮಾತಾಡುತ್ತ ನಿಂತಾಗ ಅದೇ ಮಾರ್ಗದಿಂದ ಬಂದ ಬೇಂದ್ರೆಯವರು ನನ್ನನ್ನು ನೋಡಿ ಹೇಳಿದರು, "ನೀನು ಪುರಾಣಿಕ ಹೌದಲ್ಲೊ, ನೀ ನನ್ನ ಪದಾ ಅನುಕರಣ ಮಾಡತೀದಿ ಅಂತ ಒಬ್ಬರು ಹೇಳಿದ್ರು. ಏನ ತಪ್ಪಿಲ್ಲ, ಅನುಕರಣೆ ಇರದಿದ್ರ ಜಗಾ ಪಾಠ ಹ್ಯಾಂಗ ಕಲೀತದ, ಆದರೆ ಅನುಕರಣೆ ಕಡೆತನಕ ಉಳೀಬಾರದು, ಉಳಿಯೂದಿಲ್ಲ. ಅದು ಅನುಭವದ ವಿರುದ್ಧ" ಎಂದು ಮೊದಲು ಮಾಡಿದ ಈ ಕಾವ್ಯಗುರು ಎರಡು ತಾಸಿನ ವರೆಗೆ ರಸ್ತೆಯ ಪಕ್ಕದಲ್ಲಿಯೇ ಕಾವ್ಯಪಾಠ ಹೇಳಿಕೊಟ್ಟರು. ಆ ವೇಳೆಗೆ ಮಾರ್ಕೆಟ್ಟಿ-ನಿಂದ ಪಲ್ಯ, ಜೀನಸು ತಂದ ಶ್ರೀನಿವಾಸರು ನಮ್ಮನ್ನು ನೋಡಿ, 'ಮಾಸ್ತರ ಹರಟಿ ಇನ್ನೂ ಮುಗಿದಿಲ್ಲೇನು? ನಾ ತಿರುಗಿ ಮಾರ್ಕೆಟ್ಟಿಗೆ ಹೋಗಿ ಬಂದೆ' ಎಂದು ಸಾಯಕಲ್ ಇಳಿದರು. "ಇದು ಮುಗಿಯೂ ಹರಟಿ ಅಲ್ಲಪ್ಪಾ; ಜೀವಕ್ಕ ಜೀವಾ ಬೆಸಿಗೀ ಮಾಡೂ ಮಾತು ಮುಗಿತಾವೇನು? ನನಗೂ ಬಾಜಾರದಾಗ ಹೋಗೂ-ದಿತ್ತು. ನನ್ನ ಬದಲಿ ನೀನೇ ಹೋಗಿ ಬಂದೆಲ್ಲಾ. ಯಾರು ಹೋಗಿಬಂದ್ರೂ ಅಷ್ಟರಾಗ ಅದ." ಎಂದು ಬೇಂದ್ರೆ ತಿರುಗಿ ಗೃಹಾಭಿಮುಖರಾದರು.

ಆ ಮಾತಿನ ಚಾತುರ್ಯ, ಆ ಪಾಂಡಿತ್ಯದ ಪ್ರತಿಮಾಸ್ವರೂಪದ ಉದಾ-ಹರಣೆಗಳು, ವೇದಾಂತದ ಧ್ವನಿಯಲ್ಲಿ ಇಂದಿಗೂ ಹಾಗೆಯೇ ಕೇಳಿದವರನ್ನು ಮುಗ್ಧ ಮಾಡುತ್ತವೆ.

ಅವರ ಸ್ನೇಹಿತರು ಧಾರವಾಡದಲ್ಲಿ ನಿಧಿ ಸಮರ್ಪಿಸಿದ ಸಂದರ್ಭದಲ್ಲಿ ದಿ. ಗೆ. ನಾಡಿಗೇರ ರಘುನಾಥರಾಯರ ಮನೆಯಲ್ಲಿ, ದಿ. ನೆಗಳೂರ ರಂಗನಾಥರ ಹರಟಿ-ಗೋಷ್ಠಿಯ ಅಧ್ಯಕ್ಷರಾಗಿದ್ದ ಪೂಜ್ಯ ವಿ. ಸೀತಾರಾಮಯ್ಯರ ಸಮ್ಮುಖದಲ್ಲಿ ಆಗಲೆ ಬರೆದ ಪದ್ಯ ಹೀಗಿತ್ತು :

ಶಬ್ದಕ್ಕೊಂದು ಜೀವದುಂಬಿ
ಕುಣಿಸಿಬಿಟ್ಟಿ ತನನನಾ
ನುಡಿಯ ಜಾಡ ಹಿಡಿದು ಭಾವ
ಮಣಿದು ಬರುವ ತನ್ಮನಾ

ಕಡಲುಕೋಡಿವರಿದು ಬರುವ
ನುಡಿಗಭೀರ ವಾದನಾ

ಮಡಿಲು ಕೂಸು ಮಾಡುತಿರುವ
ತಾಯಿ ತೊಡೆಯ ರೋದನಾ

ನುಡಿವ ನುಡಿಗೆ ನಡೆಯ ಕಲಿಸಿ-
ದಂತೆ ಚಿತ್ರಬಂಧನಾ
ಭಾವದುಡಿಗೆಯುಟ್ಟ ಹುಡಿಗೆ
ನಲಿವದುಂದು ನರ್ತನಾ

ಶಬ್ದ-ಭಾವ-ಛಂದದಲ್ಲಿ
ನಿನ್ನ ಕಲೆಯು ಚಿನ್ಮಯಾ-
ನಂದ ರೂಪ ಧ್ಯಾನದಲ್ಲಿ
ನಿನ್ನ ಯೋಗ ತನ್ಮಯಾ

ನಿನ್ನ ಕೈಯ ಕುಸುರಿಗಿಂದು
ರಸವು ಒರತೆ ತೋಡಿತು
ನನ್ನ ಸವಿಯ ಲಾಲಿಯಲ್ಲಿ
ಜೇನರಸವು ತುಂಬಿತು

ಈ ಜೇನುರಸವು ಈಗಲೂ ತುಂಬುತ್ತಲೇ ಇದೆ. ಮಹಾಕವಿಯ ಕಾವ್ಯರಸವು ಒರತೆ ತೋಡುತ್ತಲೇ ಇದೆ. ಅಚ್ಯುತಜಲದ ಬುಗ್ಗೆ ಪುಟಿಯುತ್ತಲೇ ಇದೆ.

ಮಣಿಪಾಲ ಸಾಹಿತ್ಯಸಮ್ಮೇಲನದಲ್ಲಿ ನಾನು ಶ್ರೀ ಬೇಂದ್ರೆಯವರೊಂದಿಗೆ ಸೋಪಾನಗಳನ್ನಿಳಿದು ಬರುತ್ತಿರುವಾಗ ಅಲ್ಲಿಯೇ ನಿಂತಿದ್ದ ಶ್ರೀ ಶಿವರಾಮ ಕಾರಂತರು 'ಕಾವ್ಯ ಕಾದಂಬರಿಯೊಳಗೋ, ಕಾದಂಬರಿ ಕಾವ್ಯದೊಳಗೋ' ಎಂಬುದನ್ನು ಬೇಂದ್ರೆಯವರು 'ಕಾ-ಕಾ-ಎರಡೂ ಇಡ್ಡಲಿಯೊಳಗೊ' ಎಂದು ಪೂರ್ತಿ ಮಾಡಿದಾಗ ಶ್ರೀ ಮಾಸ್ತಿಯವರು 'ಸಧ್ಯ ಕಾಫಿಯೊಳಗೆ' ಎಂದು ನಕ್ಕಾಗ ರಸಿಕರೆಲ್ಲ ನಕ್ಕರು. ಬೇಂದ್ರೆಯವರೊಡನೆ ಇದ್ದರೆ ಇಂತಹ ರಸಗವಳಗಳಿಗೆ ಅಭಾವವಿರು-ವದಿಲ್ಲ.

ನನ್ನ ಐವತ್ತನೆಯ ಕಾದಂಬರಿ "ಮೌನಗೌರಿ" ಪ್ರಕಟವಾದಾಗ ಗುರು-ವರ್ಯರು ಬರೆದು ತಿಳುಹಿಸಿದ ಆಶೀರ್ವಚನವಿದು.

ಪ್ರಿಯ ಕೃಷ್ಣಮೂರ್ತಿ, ಧಾರವಾಡ, ೧೧-೪-೬೪

ಜೀವನದ ಹಲವು ಸತ್ತ್ವಪರೀಕ್ಷಕ ಸಂದರ್ಭಗಳು ನಾರೀವರ್ಗಕ್ಕೆ ಬರದೆ ಹೋಗುವದಿಲ್ಲ. ಮುಂದಿನ ಭಾರತದಲ್ಲಿ, ಅಂಥ ಚಾರಿತ್ರ್ಯದ ವಾಸ್ತವಿಕತೆಯನ್ನು ತೋರಿಸುವಾಗ, ಲೋಕದಷ್ಟೇ ಕಲಾಮಯ ನಾಟಕೀಯತೆಯನ್ನೂ ತೋರಿಸುವ ಶಕ್ತಿ ನಿನ್ನಲ್ಲಿದೆ ಎಂದು ನಾನು ನಂಬಿದ್ದೇನೆ. ನಿನ್ನ ಕಾವ್ಯಮಯ ನಾಟಕಗಳು ಆ ಚಂಚಕಾರ ಕೊಟ್ಟಿವೆ. ಐವತ್ತನ್ನು ಹಾಡಿದ ಈ ಕೃತಿಪ್ರಾಣ ವಾಸ್ತವದ ವೀರ-ವಿಲಾಸವನ್ನು ತೋರಿಸಲಿ ಎಂಬುದೇ ನನ್ನ ಆಶೀರ್ವಾದ.

ನಿನ್ನ ಪ್ರೌಢ ಸರಸ್ವತಿಗೆ ನಾನು ಹೆಚ್ಚಿನ ಯಾವ ಆಶೀರ್ವಾದವನ್ನು ನೀಡಲಿ? ಸಾಹಿತ್ಯಸೇವೆಗಾಗಿ ನಿನಗೆ ದೇವರು ಆಯುರಾರೋಗ್ಯವನ್ನು, ಪ್ರಜ್ಞಾವಿವೇಕವನ್ನು ಕೊಡಲಿ ಎಂದೇ ನನ್ನ ಪ್ರಾರ್ಥನೆ.

ನಿನ್ನ ಮಾಸ್ತರ, ದ. ರಾ. ಬೇಂದ್ರೆ

ಇದೇ ಪುಸ್ತಕದ ಅರಿಕೆಯಲ್ಲಿ ನಾನು ಬರೆದದ್ದು ಹೀಗೆ.... " ಈ ಐವತ್ತನೆಯ ಕಾದಂಬರಿಯನ್ನು ನನ್ನ ಸಾಹಿತ್ಯ ಗುರುಗಳಾದ ಶ್ರೀ ದ. ರಾ. ಬೇಂದ್ರೆಯವರಿಗೆ ಅರ್ಪಿಸುತ್ತಿದ್ದೇನೆ. ನಾನು ಕಾಲೇಜ ಜೀವನದಲ್ಲಿರುವಾಗಲೆ ನನ್ನ ಬಗ್ಗೆ ವಿಶೇಷ ಅಭಿಮಾನ ತೋರಿಸಿ ನಾನು ಬರೆದ ಕವನಗಳನ್ನೂ, ಕಾವ್ಯನಾಟಕಗಳನ್ನೂ ಮೆಚ್ಚಿ ಮಾರ್ಗದರ್ಶನ ಮಾಡಿದ ಹಿರಿಯರು ನನಗೆ ಅತ್ಯಂತ ಪೂಜ್ಯರಾಗಿದ್ದಾರೆ. ಈ ಶತಮಾನದ ಅತ್ಯಂತ ಪ್ರತಿಭಾವಂತ ಕವಿಗಳಲ್ಲಿ ವಿಶಿಷ್ಟಸ್ಥಾನ ಗಳಿಸಿಕೊಂಡ ಹಿರಿಯರಾದ ಶ್ರೀ ಬೇಂದ್ರೆಯವರು ನನಗೆ ಆತ್ಮೀಯರಾಗಿರುವುದೊಂದು ಹೆಮ್ಮೆ...."

ಅತ್ಯಂತ ಆತ್ಮೀಯರ ಬಗ್ಗೆ ಬರೆಯುವಾಗ ಔಪಚಾರಿಕವಾದೀತೆಂಬ ಭಯ ಇದ್ದೇ ಇರುತ್ತದೆ. ಅವರಿಗೆ ಅರವತ್ತು ತುಂಬಿದ ಸಂದರ್ಭದಲ್ಲಿ ಬರೆದ ಕವನ 'ಈ ಶತಮಾನದ ಶ್ರೇಷ್ಠ ಕವಿ' ನಾಡಿನ ನಾಡಿಸ್ಪಂದನವನ್ನೇ ಪ್ರತೀಕರಿಸುತ್ತದೆ ಎಂದು ಹೇಳಬಹುದು. ಆ ಕವನ ಇದು.

ಕನ್ನಡ ಚೇತನ ನಾಡಿನ ತುಂಬ
ರಸಗಂಗೆಯ ತೆರ ಹರಿಯುತಿದೆ;
ಬೇಂದ್ರೆ ಹರಿಸಿದ ಜೀವ-ತರಂಗಾ
ಧಮನಿಧಮನಿಯೊಳು ತುಂಬುತಿದೆ.

'ಗರಿ'ಯೊಳು ತುಂಬಿದ 'ನಾದಲೀಲೆ'ಯೇ
'ಸಖೀಗೀತ'ದೊಳು ಝೇಂಕರಿಸಿ

‘ಅರಳು ಮರಳು’ನಲಿ ಒಳದನಿ ತುಂಬಿತು
ತುಂಬಿದ ದನಿಯೇ ಹಾಡಾಗಿ.

ನಾದಬ್ರಹ್ಮನ ನಾದವಿಲಾಸವು
ರಸಋಷಿಗಾಯಿತು ತಂಬೂರಿ
ಹೃದಯವೀಣೆಯೆ ಭಾವತರಂಗಿಣಿ
ಹೊಮ್ಮಿತು ಜೀವನ ಮಧು ಬೀರಿ

ಜೀವಜೀವಕೂ ಜನುಮದುದ್ದಕೂ
ಕರುಣೆಯ ರಸದುಂಬಿ
ಪಡೆದ ಪಕ್ಕವೇ ನಾಡಿನುದ್ದಕೂ
ಹಾಡಿತು ಮೈದುಂಬಿ.

ಎಪ್ಪತ್ತಾಗಲಿ ಎಂಭತ್ತಾಗಲಿ
ಸಾವಿರ ವರುಷವು ಬಾಳು ಕವಿ!
ಅಮರ ಜೀವನಕೆ ವರುಷದ ಲೆಕ್ಕವೆ ?
ಈ ಶತಮಾನದ ಶ್ರೇಷ್ಠಕವಿ!

ಅನೇಕ ಸಂದರ್ಭಗಳಲ್ಲಿ ಅವರ ಮಾತುಗಳನ್ನು ಕೇಳಿದ್ದೇನೆ. ಉಪನ್ಯಾಸವನ್ನು ಕೇಳಿ ಪರವಶತೆಯನ್ನು ಪಡೆವ ಅನುಭಾವ ಅವರ ‘ಹರಟೆ’ಯಲ್ಲಿ ಜಾಗೃತವಾಗುತ್ತದೆ. ಬೇಂದ್ರೆ ಒಂದು ಜ್ಞಾನಭಾಂಡಾರ. ಕಾವ್ಯ ರಸಗಟ್ಟಿ, ವಿಜ್ಞಾನ ಮಂದಿರ, ಜ್ಯೋತಿಷ್ಯಬಲ್ಲ ಜೋಯಿಸ, ಸಮಾಜಶಾಸ್ತ್ರದಲ್ಲಿ ಪ್ರವೀಣ, ಆರೋಗ್ಯ ವಿಜ್ಞಾನದ ಬಗ್ಗೆ ಸಮರ್ಥವಾಗಿ ಮಾತಾಡಬಲ್ಲವ, ಶ್ರೇಷ್ಠ ವಿಮರ್ಶಕ, ‘ಎಲ್ಲ-ಬಲ್ಲವ’ ಎಂಬ ಅನುಭವ ನನ್ನದು. ಈ ವ್ಯಕ್ತಿಯ ಮಾತುಗಳನ್ನು ಪ್ರತಿದಿನ ಟೇಪ್‌ರೆಕಾರ್ಡ್ ಮಾಡಿ ತುಂಬಿಟ್ಟರೆ ಮುಂದಿನ ಜನಾಂಗಕ್ಕೆ ಅವರ ಶಿಷ್ಯರು ಮಾಡಿದ ಉಪಕಾರವೇ ಆದೀತು ಎಂದು ನಾನು ನನ್ನ ಮಿತ್ರರ ಮುಂದೆ ಅನೇಕ ಸಲ ಆಡಿತೋರಿಸಿದ್ದೇನೆ.

ಬೇಂದ್ರೆ ಕನ್ನಡ ಸಾರಸ್ವತ ಸಂಪತ್ತು. ಮಾತಿನಿಂದ ಮಾತಿನಕಿಡಿ ಹಾರಿಸಿ ಮಾತಿನ ಸಳಾಕೆಗೆ ಅಮೃತ ಸವರುವ ದಿವ್ಯ ಠೀವಿ ಅವರದು. ಈ ಮಾತು ಗಾಳಿ-ಯಲ್ಲಿ ಕೂಡಿ ಗಾಳಿಯ ಸಂಪತ್ತನ್ನು ಹೆಚ್ಚಿಸುವುದನ್ನು ಬಿಡಿಸಿ ಒಂದು ಯೋಜನಾ-ಬದ್ಧವಾದ ಮಾತು ಹಿಡಿಯುವ ಯಂತ್ರದೊಂದಿಗೆ ಅವರ ಸುತ್ತಲೂ ಅಡ್ಡಾಡಿದರೆ ದಿನಕ್ಕೊಂದು ಪುಸ್ತಕ ಆಗಬಹುದು.

ಈ ನಿಷ್ಠೆ ಕನ್ನಡಿಗರಲ್ಲಿ ಬೇಗ ಬಂದಷ್ಟು ಒಳಿತು. § § § §

೩೮

# ಪೂರ್ಣಯೋಗಸಾಧಕ ಬೇಂದ್ರೆ

ವು. ಗ. ಶೆಟ್ಟಿ

ಶ್ರೀ ಬೇಂದ್ರೆಯವರ ಕೈಯಲ್ಲಿ ಲೀಲಾಜಾಲವಾಗಿ ಕುಣಿವ ಸರ್ವಭೂತ ಭಾಷಾಜ್ಞಾನ, ಅಂಕಿಸಂಖ್ಯೆಗಳ ರಿಂಗಣಗುಣಿತಗಳನ್ನು ಕಂಡಾಗ ಪಾತಂಜಲ ಯೋಗಶಾಸ್ತ್ರದ ವಿಭೂತಿಪಾದದಲ್ಲಿ ಹೇಳಿದಂತೆ ಅವರ ಚಿತ್ತೈಕಾಗ್ರತೆಯನ್ನು ಕಂಡು ಮೂಕವಿಸ್ಮಿತರಾಗುತ್ತೇವೆ. ವಿಭೂತಿಪಾದದಲ್ಲಿ "ಸೂರ್ಯನ ವಿಷಯದಲ್ಲಿ ಚಿತ್ತವನ್ನು ಏಕಾಗ್ರಗೊಳಿಸುವುದರಿಂದ ಭುವನಜ್ಞಾನವೂ, ಚಂದ್ರನ ವಿಷಯದಲ್ಲಿ ಏಕಾಗ್ರಗೊಳಿಸುವದರಿಂದ ತಾರಾವ್ಯೂಹ ಜ್ಞಾನವೂ, ಧ್ರುವತಾರೆಯ ಮೇಲೆ ಏಕಾಗ್ರಗೊಳಿಸುವುದರಿಂದ ತಾರಾಗತಿ ಜ್ಞಾನವೂ ಲಭಿಸುವವು. ಭೂತ-ಭವಿಷ್ಯದ್—ವರ್ತಮಾನಗಳ ಮೇಲೆ ಚಿತ್ತೈಕಾಗ್ರತೆಯನ್ನು ಸಾಧಿಸುವುದರಿಂದ ತ್ರಿಕಾಲ-ಜ್ಞಾನವೂ, ಶಬ್ದದ ಅಂಗೋಪಾಂಗಗಳನ್ನು ಕುರಿತು ತನ್ಮಯತೆಯುಂಟಾದರೆ ಸರ್ವಭೂತಭಾಷಾ ಜ್ಞಾನವೂ, ಸಂಸ್ಕಾರ ತತ್ವದ ಮೇಲೆ ಪ್ರಯೋಗಿಸುವುದರಿಂದ ಪೂರ್ವಜನ್ಮಜ್ಞಾನವು ಪ್ರಾಪ್ತವಾಗುವದು. ಮೈತ್ರೀ ಗುಣದ ಮೇಲೆ ಚಿತ್ತದ ಏಕಾಗ್ರತೆಯನ್ನು ಸಾಧಿಸಿದರೆ ಆಯಾ ಶಕ್ತಿಗಳೂ, ಮಸ್ತಕಜ್ಯೋತಿಯಮೇಲೆ ಚಿತ್ತವನ್ನು ಏಕಾಗ್ರಗೊಳಿಸುವುದರಿಂದ ಸಿದ್ಧದರ್ಶನವೂ ಉಂಟಾಗುವವು."

ಬೇಂದ್ರೆಯವರ ಕವನಗಳಲ್ಲಿ ಭುವನಜ್ಞಾನವಿದೆ; ತಾರಾವ್ಯೂಹ ಜ್ಞಾನವಿದೆ, ತಾರಾಗತಿ ಜ್ಞಾನ, ತ್ರಿಕಾಲಜ್ಞಾನ ಇವೆಲ್ಲವುಗಳ ದರ್ಶನವಾಗುತ್ತದೆ. ಅವರೊಡನೆ ತುಸು ಹೊತ್ತು ಮಾತನಾಡಿದರೂ ಸಾಕು; ಉಳಿದ ಮಾತುಗಳೆಲ್ಲ ಅವರಲ್ಲಿ ಅಂತಸ್ಥವಾಗಿವೆಯೆಂಬುದರ ಅರಿವಾಗುವದು.

ಮನದ ಏಕಾಗ್ರತೆ, ಬುದ್ಧಿಯ ಏಕತಾನತೆ, ಪ್ರಜ್ಞೆಯ ಏಕಾತ್ಮತೆ ಇವು ಮೂರಕ್ಕೇ ಧಾರಣಾಧ್ಯಾನ ಸಮಾಧಿಗಳೆಂತಲೂ, ಈ ಮೂರನ್ನೂ ಏಕ ಕಾಲಕ್ಕೆ ಪ್ರಯೋಗಿಸುವುದಕ್ಕೇ ಸಂಯಮ ಅಥವಾ ಚಿತ್ತದ ಏಕಾಗ್ರತೆಯೆನ್ನು ವರು. ಈ ಏಕಾಗ್ರಚಿತ್ತದಿಂದ ವಸ್ತುವಿನ ಅಂತರಂಗ ಮತ್ತು ತನ್ನ ಅಂತರಂಗವು ಮೂಲದಲ್ಲಿ ಒಂದೇ ತತ್ವದಿಂದ ನಿರ್ಮಾಣವಾದುದೆಂಬುದನ್ನು ಅರಿತು ಆತ್ಯಂತಿಕ

ವಾಗಿ ಪರಸ್ಪರ ಐಕ್ಯವನ್ನು ಸಾಧಿಸುವುದರಿಂದಲೇ ಸತ್ಯಜ್ಞಾನವು ಪ್ರಕಟವಾಗುವುದೆಂದು ಗುರು ಅರವಿಂದರ ಅನುಭವವಾಗಿದೆ.

ಈಶಾವಾಸ್ಯ ಉಪನಿಷತ್ತಿನ ಮೊದಲ ಶ್ಲೋಕ—"ಈಶಾವಾಸ್ಯಂ ಇದಂ ಸರ್ವಂ ಯತ್ ಕಿಂಚ ಜಗತ್ಯಾಂ ಜಗತ್"—ಈ ಜಗತ್ತಿನಲ್ಲಿ ನಾವು ಏನೇನನ್ನು ನೋಡುವೆವೋ ಅವುಗಳಲ್ಲೆಲ್ಲ ಈಶ್ವರನು ವ್ಯಾಪಿಸಿದ್ದಾನೆ. ಅವನು ನಿರ್ಮಿಸಿದ ಅಸಂಖ್ಯಪ್ರಾಣಿಗಳಲ್ಲಿ ನಾನೂ ಒಬ್ಬ ಎಂಬ ವಿಚಾರವನ್ನು ಮನನ ಮಾಡಿದರೆ ಎಲ್ಲ ವಿಷಯಗಳನ್ನೂ ತ್ಯಾಗ ಮಾಡಿ ಆತನ ಚರಣಗಳಲ್ಲಿ ಲೀನವಾಗುವುದೊಂದೇ ದಾರಿ ನಮ್ಮ ಪಾಲಿಗೆ ಉಳಿಯುತ್ತದೆ.

ಸ್ವಾಮೀ ರಾಮತೀರ್ಥರು ಅಮೇರಿಕೆಯಲ್ಲಿ ಹಡಗಿನಿಂದ ಇಳಿಯುವಾಗ ಅವರ ಬಳಿ ಯಾವ ವಸ್ತುವೂ ಇರಲಿಲ್ಲ. ಅದನ್ನು ನೋಡಿದ ಒಬ್ಬ ಸ್ವಾಮಿ, ನಿಮ್ಮ ಆಹಾರದ ವ್ಯವಸ್ಥೆಯೇನು ? ಎಂದು ಕೇಳಿದಾಗ, ರಾಮತೀರ್ಥರು, "ಈ ಜಗತ್ತಿನಲ್ಲಿ ನನಗೆ ಏನು ಕೊರತೆ ? ಎಲ್ಲಿ ನೋಡಿದಲ್ಲಿ ನನ್ನ ಆತ್ಮಬಂಧುಗಳಿರುವರು. ಅವರ ಪ್ರೇಮಾಮೃತವೇ ನನ್ನ ಜೀವನ. ನಾನೇ ಈ ವಿಶ್ವದಲ್ಲಿ ವ್ಯಕ್ತಿ ವ್ಯಕ್ತಿಯ ರೂಪ ಧರಿಸಿ ಮೆರೆಯುತ್ತಿದ್ದೇನೆ. ಈ ಹೊಟ್ಟೆಗೆ ಹಸಿವೆಯಾದಾಗ ಯಾವುದೋ ಒಂದು ಕೈ ರೊಟ್ಟಿಯನ್ನು ಕೊಡುತ್ತದೆ. ನೀರಡಿಕೆಯಾದಾಗ ಇನ್ನೊಂದು ಕೈ ನೀರು ಕೊಡುತ್ತದೆ. ಈ ಜಗತ್ತಿನಲ್ಲಿ ತುಂಬಿ ತುಳುಕುವ ಸತ್ಯಶಕ್ತಿಯು ನನ್ನ ಪ್ರಾಣಕ್ಕೆ ಪುಷ್ಟಿ-ತುಷ್ಟಿಗಳನ್ನು ಒದಗಿಸುತ್ತದೆ'' ಎಂದರಂತೆ. ಬೇಂದ್ರೆಯವರ ಜೀವನದಲ್ಲಿಯೂ ದುರ್ಧರ ಪ್ರಸಂಗಗಳು ಬಂದಾಗ ಯಾವುದೋ ಕಾಣದ ಕೈ, ಕೈ ಹಿಡಿದು ನಡೆಸಿದೆ.

ಒಮ್ಮೊಮ್ಮೆ ಮನದ ವಿಕ್ಷಿಪ್ತ ಅವಸ್ಥೆಯಲ್ಲಿ ಯಾವುದು ನಮಗೆ ಕೇಳಿಸದೋ, ಯಾವುದು ಕಾಣಿಸದೊ ಅದು ಚಿತ್ತಸಂಯಮದಿಂದ ಕೇಳಿಸುತ್ತದೆ ಮತ್ತು ಕಾಣಿಸುತ್ತದೆ. ಇಚ್ಛಾನುಕ್ರಮದಿಂದ, ಬಹುಕಾಲದ ಅಭ್ಯಾಸದಿಂದ ಅನುಭೂತಿಶಕ್ತಿಯನ್ನು ಬೆಳೆಸಲು ಬರುವದು. 'ಇರತಾನೋ ದೇವರಿರತಾನೋ' ಎಂಬ ಕವನದಲ್ಲಿ :

> ಕೇಳವರ್‍ಗ ಕಿವಿಯಾಗಿ
> ಹೇಳವರ್‍ಗ ದನಿಯಾಗಿ
> ಮೈ ಮೈ ಚರ್ಮಾಗಿ, ಮನಮನ ಮರ್ಮಾಗಿ | ಮೂಡ್ಯಾನೋ

ಎಂದು ಎಲ್ಲೆಲ್ಲಿಯೂ ದೇವರ ಅಸ್ತಿತ್ವವನ್ನು ಬೇಂದ್ರೆ ಕಂಡಿದ್ದಾರೆ. 'ನಮ್ಮನ್ನ ಹ್ಯಾಂಗ ತಾ ಮರೀತಾನೋ' ಎಂದು ಆಹ್ವಾನಿಸಿದ್ದಾರೆ.

ಆದರಿಂದ ಮಾನವನು ಕೇವಲ ಅದೃಷ್ಟದ ದಾಸನೇನೂ ಅಲ್ಲ. ಆತನೊಳಗೇ ಒಂದು ಶಕ್ತಿ ಅಡಗಿದೆ. ಅದರಿಂದಲೇ ಆತನು ತನ್ನ ದೈಹಿಕ ಮಾನಸಿಕ ದುರ್ಬಲತೆ-ಗಳ ಮೇಲೆ ಜಯಗಳಿಸಬಲ್ಲನು. ಆಗ ಶ್ರುತಿಗೋಚರವಾಗದ ಸೂಕ್ಷ್ಮವಿಷಯಗಳು ಶ್ರುತಿಗೋಚರವಾಗುವವು. ದೃಗ್ಗೋಚರವಾಗದ ವಿಷಯಗಳು ಜ್ವಾಜ್ವಲ್ಯ-ಮಾನವಾಗುವವು. ಆತನು ಹೊರಗಿನ ಸಕಲ ಉತ್ಪಾತಗಳನ್ನು ಮೀರಿ ನಿಲ್ಲುವನು. ಸ್ವೇಚ್ಛಾಬಲದಿಂದ ಬಹಿರಂಗದ ಬಿರುಗಾಳಿಯೊಳಗೂ ಲಂಗರುಬಿಟ್ಟ ಹಡಗದಂತೆ ಅಂತರ್-ರಾಜ್ಯದಲ್ಲಿ ಆತನು ಅಕ್ಷುಬ್ಧನಾಗಿ ಇರುವನು.

ಆ ಶಕ್ತಿಯ ಉಚ್ಛ್ವಾಸದಿಂದಲೇ ಜೀವನದ ಪರಿಣತಿ. ಆ ಶಕ್ತಿಯಿಂದಲೇ ಮಾನವನು ದಾನವತ್ವವನ್ನು ಪರಿಹರಿಸಿಕೊಂಡು ದೇವತ್ವಕ್ಕೆ ಮುಟ್ಟುವನು. ಶಾರದಾಮಣಿದೇವಿಯವರು, 'ತಗ್ಗು ಪ್ರದೇಶದತ್ತ ಹರಿದು ಹೋಗುವ ಸ್ವಭಾವವುಳ್ಳ ನೀರು ಕೂಡ, ಸೂರ್ಯಕಿರಣದ ಸಹಾಯದಿಂದ ಆಕಾಶಕ್ಕೇರುವಂತೆ ವಿಷಯ ವಸ್ತುಗಳತ್ತ ಹರಿಯುವ ಚಂಚಲ ಮನಸ್ಸು ಸಹ ದೇವರ ದಯೆಯಿಂದ ಮೇಲುಮೇಲಕ್ಕೆ ಹೋಗುವುದು' ಎಂದಿದ್ದಾರೆ.

ನೀಟ್ಸನ ಭಾವನಾದೃಷ್ಟಿ, ಟ್ರಾಯಿನ್ನನ ಅಂತರ್ದೃಷ್ಟಿ, ಜಾರ್ಜ್ ರಸೆಲ್ ಅವರ ಧ್ಯಾನ ದೃಷ್ಟಿ, ಜಗದೀಶಚಂದ್ರ ಬೋಸರ ಪರೀಕ್ಷಾದೃಷ್ಟಿ — ಇವೆಲ್ಲವುಗಳಿಗಿಂತ ಮೇಲೆ ರಾಮತೀರ್ಥರ ಆತ್ಮದೃಷ್ಟಿ, ವಿವೇಕಾನಂದರ ಸತ್ಯದೃಷ್ಟಿ — ಈ ಸಕಲ ಸಬಲ ದೃಷ್ಟಿಗಳೆಲ್ಲ ಕೂಡಿ ನಿರ್ಮಿಸಿದ ಶಕ್ತಿಮಂದಿರಕ್ಕೆ ಅರವಿಂದಯೋಗಿಗಳ ದಿವ್ಯದೃಷ್ಟಿಯು ಭವ್ಯ ಕಳಸವನ್ನಿಟ್ಟಿದೆ.

ಶ್ರೀ ಽಽಽ ಅರವಿಂದೆಂದರೆ ಘೋಷಾ
ಓಂ ಮಾತೆಗೆ ಸಂತೋಷಾ
ಗೆಳೆಯಾ ಮರೆಯಬ್ಯಾಡಾ ಗುರತಾನೋ
ಓ ಹೋ ಹೆಮ್ಮರವಾಗಿ ಅರಿವಿಗೆ ಬರುವಾತಾ ||
ಹೋ ಹೋ ಉದುಂಬರವಾಗಿ
ಹೋ ಚಿದಂಬರ ಝುಂಬರವಾಗಿ
ಹೋ ಅವಧೂತಾ ದಿಗಂಬರನಾಗಿ |
ಮನೆ ಮನೆಗೆ ಬಾಗಿಣಾ ತರತಾನೋ ||

ಏಕಾಂತದಲ್ಲಿ ದೇವನ ಹೊರತು ನಮ್ಮ ಎದುರಿಗೆ ಇನ್ನಾರೂ ಇಲ್ಲವೆಂಬುದನ್ನು ಸ್ಮರಿಸಿ, ನಮ್ಮ ಒಳಗೂ ದೇವನ ದಿವ್ಯರಾಜ್ಯವಿದೆಯೆಂದು ಭಾವಿಸುತ್ತ ಸ್ತಬ್ಧಚಿತ್ತನಾಗಿರುವುದಕ್ಕೆ ಅಭ್ಯಾಸ ಮಾಡಬೇಕು. ಇದರಿಂದ ನಮ್ಮ ಮೈಮನಗಳಲ್ಲಿ ಸಾಮ-

ರಸ್ಯ ಉಂಟಾಗುತ್ತದೆ. ಏಕಾಗ್ರತೆ ಮತ್ತು ಸಂಕಲ್ಪ ಪ್ರಭುತ್ವವನ್ನು ಸಾಧಿಸುತ್ತ ಹೋದಂತೆ ಪಾವನ ಅಗ್ನಿಗಳ ಜಾಗೃತಿಯಾಗುವುದು. ಶಕ್ತಿಮಂತ ಪುರುಷರ ಮಸ್ತಕದ ಇಲ್ಲವೆ ಹೃದಯದ ಸುತ್ತುಮುತ್ತಲೆಲ್ಲ ಪ್ರಕಾಶವು ಕಂಡುಬರುವುದು. ಧ್ಯಾನದ ಕಡುತರವಾದ ಪರಮೋಚ್ಚ ಸ್ಥಿತಿಯಲ್ಲಿ ಪಾವನ ಅಗ್ನಿ ಬೆನ್ನಹುರಿಗುಂಟ ಮಿಂಚಿನಂತೆ ಚಿಮುಕಿಸುವುದು. ರತ್ನಾಕರವರ್ಣಿಯು ಭರತೇಶ ವೈಭವದ ಧ್ಯಾನಸಾಮರ್ಥ್ಯ ಸಂಧಿಯಲ್ಲಿ :

> "ಪೆಂಪಿನಾ ಧ್ಯಾನದೊಳಾ ತಪೋಧನನಿರೆ |
> ಕಂಪಿಸಿತೊಡನೆ ಮೂಲೋಕಾ |
> ಮಿಡುಕಲೀಯದೆ ಮನವನು ತಡೆದಾತ್ಮನೊಳಡಗಿಸಿ ನಿಷ್ಕಂಪನಾಗಿ
> ಕಡುಗಲಿ ನಿಂದ ಹಂಸಧ್ಯಾನ ನಿಷ್ಠೆಗೆ | ನಡುಗದಿಹುದೆ ಮೂರು ಲೋಕಾ
> ಕೀಡಿದ ಗಾಳಿಗೆ ಚಪ್ಪರ ಲತೆಗಳ| ಲ್ಲಾಡುವಂತಲುಗಿತು ಭೂಮಿ |
> ನಾಡುಬೀಡಚ್ಚರಿವಟ್ಟುದೇನೆಂದು ಕೊಂಡಾಡಲಾ ಧ್ಯಾನ ಶಕ್ತಿಯನು"

ಇಂಥ ಸತ್ಯ ಪ್ರತೀತಿಯಿಂದ ಕೂಡಿದ ಕ್ರತುಶಕ್ತಿಯು ನಮಗೀಗ ಬೇಕಾಗಿದೆ. ಈ ಕ್ರತುಶಕ್ತಿಯಿಂದ ಪ್ರಕೃತಿಯ ಶುದ್ಧೀಕರಣವನ್ನು ಸಾಧಿಸಬೇಕಾಗಿದೆ. ಇದಕ್ಕೆ ಬಹುಕಾಲದ ಸಾಧನೆ ಬೇಕು. ಸಾಧನೆ ಪೂರ್ತಿಯಾಗುವುದರೊಳಗೆ ಜಗತ್ಕಾರ್ಯದ ಬಗೆಗೆ ಪ್ರಯತ್ನಿಸುವುದು ತರವಲ್ಲ. ಮೊಟ್ಟಮೊದಲು ಆಧಾರಶುದ್ಧಿ, ಆಮೇಲೆ ಸಚರಾಚರ ಭೂತಗಳಲ್ಲಿ ಸರ್ವಾಂತರ್ಯಾಮಿಯ ಸಾಕ್ಷಾತ್ಕಾರ ದಿಂದಾಗಿ ಬಂಧನದಿಂದ ಬಿಡುಗಡೆ, ಅನಂತರ ನಿಖಿಲಾನಂದ. ಮತ್ತು ಅದರ ಫಲವಾಗಿ ಲಭಿಸುವ ಯೌಗಿಕ ಯೌವ್ವನ. ಇವೆಲ್ಲ ಸಿದ್ಧಿಸಿದ ಬಳಿಕವೇ ಜಗತ್ತಿನಲ್ಲಿ ಸತ್ಯಯುಗ ಪ್ರವರ್ತನೆಗೊಳಿಸುವ ಮಹಾಕಾರ್ಯ. ಸಿದ್ಧ ಜೀವನದ ಪ್ರಾಪ್ತಿಯೇ ಈ ಯೋಗದ ಸ್ವಾರಾಜ್ಯ; ಜಗತ್ತಿನ ಮೇಲೆ ಸ್ವರ್ಗವನ್ನು ಇಳಿಸುವುದೇ ಇದರ ಸಾಮ್ರಾಜ್ಯ. ಹೀಗೆ ಜ್ಞಾನ, ಭಕ್ತಿ, ಕರ್ಮಗಳ ಸಮನ್ವಯವೇ ಪೂರ್ಣಯೋಗದ ಮಹತ್ಕಾರ್ಯ :

> ಮಾನವ ದಾನವ ದೇವ ದೇವತಾ
> ಯುಗ ಯುಗ ಗರ್ಭಿತ ಜೀವ ಜೀವಿತಾ,
> ಮೂರ್ತಿತವಾಗಲಿ ಪ್ರಾರ್ಥನೆಗಾಗಿ
> ಉದ್ಭವ ಭವಿಷ್ಯ ಸಾರ್ಥಕವಾಗಿ
> ಸಹಸ್ರಾರವಿಂದೋತ್ಥಿತ ಬಾಲೆ
> ಬ್ರಹ್ಮ ಹೃದಯರತಿ ಸುಷುಪ್ತ ಜ್ವಾಲೆ
> ಏನಿದೆ? ಏನಿದೆ ? ಏನಾಮೇಲೆ
> ಕೃಪಾಪುಷ್ಪಗಳ ಅನಂತ ಮಾಲೆ.

ಶ್ರೀ ಬೇಂದ್ರೆಯವರ ಚೈತನ್ಯವು ಪೂರ್ಣಯೋಗದತ್ತ ಸಾಗುತ್ತ ತನ್ನ ಜೀವನದಲ್ಲಿ ಸತ್ಯದ ಪ್ರೀತಿ, ಸೌಂದರ್ಯದ ಆನಂದ ಮತ್ತು ಸೌಜನ್ಯಯುಕ್ತ ಸಾಮರ್ಥ್ಯವು ಪ್ರತಿಷ್ಠಿತಗೊಳ್ಳಲಿ ಎಂದು ಆಶಿಸುತ್ತದೆ. ಪ್ರತಿಯೊಬ್ಬನ ದೇಹಾ-ಲಯವು ಚೈತ್ಯಾಲಯವಾಗಿ ಎಡೆಬಿಡದೆ ಚೈತನ್ಯದ ಪೂಜೆಯನ್ನು ನಡಿಸಿದಾಗ 'ಸಹಸ್ರಾರ'ದೆಡೆಗೆ ಲಕ್ಷ್ಯ ಹತ್ತೀತು ಎಂಬ ಭರವಸೆ ತಳೆದಿದೆ.

ವಿಶ್ವಸಂಚಾಲಕಮಹಾಶಕ್ತಿಯನ್ನು ಅರಿತರಿತು ಅದಕ್ಕೆ ಅಧೀನವಾಗಬೇಕು. ಆ ಮಹಾಶಕ್ತಿಯ ಕಿಡಿಯೇ ನಮ್ಮಲ್ಲಿರುವ ಸಂಕಲ್ಪಶಕ್ತಿಯೆಂದು ತಿಳಿದು ಜಾಗೃತಗೊಳಿಸಬೇಕು. ಇವೆರಡರ ಸರ್ವಾಂಗೀಣ ಪ್ರಯೋಗದಿಂದ ತಾನು ಆ ಮಹಾಮಾತೆಯ ದಿವ್ಯಕರ್ಮಿಯಾದ ಅಜೇಯ ಸೇವಕನಾಗಿ ಪೂರ್ಣಯೋಗದತ್ತ ಸಾಗುವುದೇ ತನ್ನ ಜೀವನೋದ್ದೇಶ ಎಂಬ ನಿಜಾಕಾಂಕ್ಷೆಯನ್ನು ತಳೆದು ಕೃಪಾಪುಷ್ಪಗಳ ಅನಂತಮಾಲೆಯನ್ನು ಅನವರತವೂ ಅನುಭವಿಸುತ್ತ ಬೇಂದ್ರೆಯವರ ಚೈತನ್ಯ ಸಾಧನಾಮಗ್ನವಾಗಿದೆ.

§ § § §

೫೯

# ಮಾವ ಬೇಂದ್ರೆ

ಸೌ. ವಿಶಾಖಾ ಬೇಂದ್ರೆ

ಪುಣೆಗೆ ಹೋದವರು ಪರ್ವತಿ, ಸಿಂಹಗಡ ನೋಡಲು ಬಯಸುವಂತೆ ಸಾಂಗಲಿಯ ಕಡೆ ಪ್ರವಾಸಕ್ಕೆ ಹೋದವರು ಕೊಲ್ಲಾಪೂರ, ನರಸೋಬಾವಾಡಿ ನೋಡಿ ಬರಲು ಅಪೇಕ್ಷಿಸುವಂತೆ; ಧಾರವಾಡಕ್ಕೆ ಬಂದ ಅನೇಕ ಸುಶಿಕ್ಷಿತರು, ಜಿಜ್ಞಾಸುಗಳು ಮತ್ತು ಲಾಲಸೆಯುಳ್ಳ ಅಶಿಕ್ಷಿತರೂ ಸಾಧನಕೇರಿಯನ್ನು ನೋಡಿಕೊಂಡು ಹೋಗುವಂತೆ ತೋರುತ್ತದೆ. ಏಕೆಂದರೆ, ಪ್ರತಿ ದಿವಸ ಬೆಳಗಿನಿಂದ ಸಂಜೆಯವರೆಗೆ ನಮ್ಮ ಮನೆಗೆ ಬೇರೆ ಬೇರೆ ಊರಿನ ಜನರು ನನ್ನ ಮಾವನವರ ಭೆಟ್ಟಿಗೆ, ಸಾಹಿತ್ಯ ವಿಷಯದ ಚರ್ಚೆಗೆ ಅಥವಾ ಭಾಷಣದ ಆಮಂತ್ರಣವನ್ನು ಕೊಡಲು ಬರುತ್ತಿರುತ್ತಾರೆ.

ಸಾಧನಕೇರಿ ಬಸ್‌ಸ್ಟಾಪಿಗೆ ಇಳಿದೊಡನೆ ಯಾವ ಮನೆಯಿಂದ ಜೋರುಜೋರಿನಿಂದ ಮಾತುಗಳು ಕೇಳಿಸುವವೋ ಅದೇ ನಮ್ಮ ಮನೆ. ಯಾವ ಮನೆಯ ಎದುರು ಹೊರಅಂಗಳದಲ್ಲಿ, ಮನೆಯಿಂದ ಗೇಟು, ಗೇಟನಿಂದ ಮನೆ-ಹೀಗೆ ಸತತವಾಗಿ ಕೈಯಲ್ಲಿ ಪುಸ್ತಕವನ್ನು ಹಿಡಿದುಕೊಂಡು ಅಥವಾ ಹಾಗೆಯೇ ಅಡ್ಡಾಡುತ್ತಿರುವರೋ ಅವರೇ ನಮ್ಮ ಮಾವನವರು-ಕರ್ನಾಟಕದ ವರಕವಿ ದ. ರಾ. ಬೇಂದ್ರೆಯವರು.

ಇವರು ಕರ್ನಾಟಕದಲ್ಲಿ ಪ್ರಸಿದ್ಧ ಕವಿಗಳಾಗಿರುವಂತೆ, ಮಹಾರಾಷ್ಟ್ರದ ಸಾಹಿತ್ಯ ಕ್ಷೇತ್ರದಲ್ಲಿಯೂ ಹೆಸರನ್ನು ಪಡೆದಿದ್ದಾರೆ. ಇವರ 'ಸಂವಾದ' ಎಂಬ ಮರಾಠಿ ಕವನ ಮತ್ತು ಲೇಖನಗಳ ಸಂಗ್ರಹಕ್ಕೆ ಹೋದ ವರ್ಷ ನ. ಚಿ. ಕೇಳಕರ ಬಹುಮಾನ ದೊರೆತಿದೆ. ಹೀಗೆ ಎರಡೂ ಭಾಷೆಗಳಲ್ಲಿ ಪ್ರಭುತ್ವವನ್ನು ದೊರೆಕಿಸಿದವರು ವಿರಳ.

ನಾನು ಇವರ ಮನೆಗೆ ಸೊಸೆಯಾಗಿ ಬಂದು ಹದಿಮೂರು ವರ್ಷಗಳಾದವು. ಈ ಅವಧಿಯಲ್ಲಿ ನಾನು ನನ್ನ ಮಾವನವರಿಂದ ಏನು ಪಡೆದೆ? ಅವರ

ವ್ಯಕ್ತಿತ್ವದ ದರ್ಶನವು ನನಗೆ ಹೇಗೆ ಆಯಿತು?—ಎಂಬುದನ್ನು ವಿವರಿಸುವುದೇ ಈ ಲೇಖನದ ಉದ್ದೇಶವಾಗಿದೆ.

ಯಾವುದೇ ಒಂದು ವಿಷಯದಲ್ಲಿ ಪಾರಂಗತನಾಗಲು ಒಂದು ಇಡೀ ಜನ್ಮವು ಸಾಕಾಗಲಾರದು ಎಂದು ಕೇಳಿದ ನಾನು, ನನ್ನ ಮಾವನವರ ಬಹುಮುಖ ಜ್ಞಾನ ಪರಿಚಯವನ್ನು ಕಂಡು ಚಕಿತಳಾದೆ. ಪ್ರತಿನಿತ್ಯದ ಜೀವನದ ಸಾಮಾನ್ಯ ಮಾತಿನಿಂದ ಮಾತನಾಡಲು ಪ್ರಾರಂಭಿಸಿ, ಭೌತವಿಜ್ಞಾನ, ರಸಾಯನಶಾಸ್ತ್ರ, ಭೂಗರ್ಭ ಶಾಸ್ತ್ರ, ಗಣಿತ, ಶರೀರಶಾಸ್ತ್ರ, ಜ್ಯೋತಿಷ್ಯ, ಮತ್ತು ಅಧ್ಯಾತ್ಮದ ವರೆಗೆ ಸುತ್ತಾಡಿಕೊಂಡು ಬರುವ ರೀತಿಯು ಎಂಥವರನ್ನೂ ದಿಗ್ಭ್ರಮೆಗೊಳಿಸುತ್ತದೆ. ನನಗಂತೂ ಮೊದಮೊದಲು ಈ ಅಂತರಿಕ್ಷಯಾನ ಒಗ್ಗುತ್ತಿರಲಿಲ್ಲ.

ಬೇಂದ್ರೆಯವರು ಒಳ್ಳೆಯ ಭಾಷಣಕಾರರು ಎಂದು ಕೇಳಿದ್ದೆ. ಅವರು ಯಾವುದೇ ವಿಷಯವನ್ನು ಹೇಗೆ ತಿಳಿಸಿಕೊಡುತ್ತಾರೆ ಎಂಬುದು ಗೊತ್ತಿರಲಿಲ್ಲ. ಅವರು ವಿಷಯವನ್ನು ತಿಳಿಸಿಕೊಡುವ ರೀತಿ ಮತ್ತು ಕವಿತೆಯನ್ನು ಓದಿತೋರಿ-ಸುವ ರೀತಿಯು ನನ್ನಲ್ಲಿ ಪ್ರಮುಖವಾದ ಬದಲಾವಣೆಯನ್ನು ಮಾಡಿತು. ತಿಳಿ-ಯದ ವಿಷಯವನ್ನು ತಿಳಿಸಿ ಕೊಡುವುದೇ ಅವರ ವೈಶಿಷ್ಟ್ಯವಾಗಿದೆ. ಎಂಥ ಗಹನವಾದ ವಿಷಯವನ್ನೂ ಅವರು ಬಳಕೆಯಲ್ಲಿಯ ಉಪಮೆಗಳಿಂದ ಹದ ಮಾಡುತ್ತಾರೆ. ತಿಳಿದ ಮಾತುಗಳಿಂದ ತಿಳಿಯದ ಮಾತಿನತ್ತ ಒಯ್ಯುತ್ತಾರೆ.

ಒಂದು ದಿವಸ ನಾನು ಒಂದು ಸಂಸ್ಕೃತ ಶ್ಲೋಕವನ್ನು ಅನೇಕ ಸಲ ಓದಿದೆ. ಏನೇನೂ ಅರ್ಥವಾಗಲಿಲ್ಲ. ಆಗ ಅದನ್ನು ಬೇಂದ್ರೆಯವರಿಗೆ ಒಯ್ದು ಕೊಟ್ಟೆ. ಅವರು ಒಂದೇ ಸಲ ಓದಿದರು, ನನಗೆ ಸಾಕಷ್ಟು ಅರ್ಥವಾಯಿತು. ಆ ಶ್ಲೋಕದ ಅರ್ಥವನ್ನು ತಿಳಿಸಿಕೊಟ್ಟ ಮೇಲೆ ಆದ ಆನಂದ ಅಪರಿಮಿತ. ಅವರು ಗದ್ಯವನ್ನೇ ಆಗಲಿ, ಪದ್ಯವನ್ನೇ ಆಗಲಿ ಓದಿದರೆ ಸಾಕು-ಅರ್ಥದ ಪದರುಗಳು ಬಿಚ್ಚುತ್ತ ಹೋಗುತ್ತವೆ.

ಪ್ರತಿ ದಿವಸ ಅವರು ಅಭ್ಯಾಸ ಮಾಡುವುದನ್ನು ನೋಡಿದರೆ, ಯಾವುದೋ ಅತಿ ಮಹತ್ವದ ಪರೀಕ್ಷೆಗೆ ಕೂಡಲಿರುವ ವಿದ್ಯಾರ್ಥಿಗಳೇ ಇವರು ಎಂದು ತೋರು-ತ್ತದೆ. ಯಾವಾಗಲೂ ಓದು, ಮನನ, ಚಿಂತನ, ಜ್ಞಾನಗ್ರಂಥಿಯನ್ನು ಒಡೆ-ಯುವ, ಬಿಡಿಸುವ ಶತಪ್ರಯತ್ನಗಳಲ್ಲಿ ತೊಡಗಿರುತ್ತಾರೆ. ಇವರಿಗೆ ಸ್ನಾನಕ್ಕೆ ಬಿಸಿಬಿಸಿಯಾದ ನೀರುಬೇಕು; ಊಟಕ್ಕೆ ಬಿಸಿಬಿಸಿಯಾದ ಅಡಿಗೆಬೇಕು. ಇವೆರ-ಡನ್ನೂ ಸಿದ್ಧಮಾಡಿ ದಾರಿಕಾಯುವ ಭಾರ ನಮ್ಮ ಮೇಲೆ ಬೀಳುತ್ತದೆ. ಓದು, ವಿಚಾರ ಇವುಗಳಲ್ಲಿ ಮಗ್ನರಾದವರಿಗೆ, ಭಾವಸಮಾಧಿಯಲ್ಲಿದ್ದವರಿಗೆ ಎಬ್ಬಿಸುವುದು ಹೇಗೆ? ಸ್ನಾನಕ್ಕೆ, ಊಟಕ್ಕೆ ಎಬ್ಬಿಸಲೇಬೇಕು. ಅನೇಕ ಸಲ ಹೇಳಿ, ಹೇಳಿ ಎಬ್ಬಿಸಿ

ಸ್ನಾನದಮನೆಗೆ ಆಗಲಿ, ಅಥವಾ ಅಡಿಗೆಮನೆಗೆ ಊಟಕ್ಕಾಗಲಿ ಕರೆದೊಯ್ದು ನಿಟ್ಟು-ಸಿರು ಬಿಡುವಷ್ಟರಲ್ಲಿ ಯಾರಾದರೂ ಬಂದುಬಿಟ್ಟರೆ ಮುಗಿದೇಹೋಯ್ತು. ಮಾತು ಮುಗಿಯುವ ವರೆಗೆ ನೀರು, ಊಟ ಇವರ ಹಾದಿಯನ್ನು ಕಾಯುತ್ತ ಕೂಡ್ರು-ತ್ತವೆ. ಈ ವಿಚಿತ್ರ ನಡತೆಯನ್ನು ಕಂಡು ನನಗೆ ಮೊದಮೊದಲು ಸಿಟ್ಟು, ಅಳು-ಬರುತ್ತಿತ್ತು. ಇಂಥವರು ತಣ್ಣೀರು ಸ್ನಾನ ಮಾಡುವ ಅಭ್ಯಾಸ ಬೆಳಸಬೇಕು, ಬಿಸಿ ಅಡಿಗೆ ಇಂಥವರಿಗಾಗಿ ಅಲ್ಲ ಎಂದು ಕೆಲವು ಸಲ ನನಗೆ ಅನಿಸುತ್ತಿತ್ತು. ಆದರೆ ಇವರಿಗೆ ಸ್ನಾನಕ್ಕೆ-ಬಿಸಿಬಿಸಿ ನೀರು, ಊಟಕ್ಕೆ ಬಿಸಿಬಿಸಿ ಅನ್ನ ಬೇಕಾಗುವಂತೆ, ವಿಚಾರಕ್ಕೆ-ಬಿಸಿಬಿಸಿ ವಿಷಯಬೇಕು ಎಂಬುದನ್ನು ಕಂಡಾಗ ನನ್ನಲ್ಲಿ ಬದಲಾವಣೆ ಆಯಿತು. ಮನೆಗೆ ಹೊರಗಿನಿಂದ ಬರುವವರು ಯಾವುದೋ ಹೊಸ ವಿಷಯವನ್ನು ತಂದಿರುತ್ತಾರೆ. ಬಂದವರೊಡನೆ ಮಾತನಾಡುವುದರಲ್ಲಿ ಬೇಂದ್ರೆಯವರು ಬೇಗನೆ ತಲ್ಲೀನರಾಗಿ ಬಿಡುತ್ತಾರೆ.

ನನ್ನ ಬಿ. ಎ. ಪರೀಕ್ಷೆ ಮುಗಿದ ನಂತರ, ನಾನು ಎಲ್ಲ ಪುಸ್ತಕಗಳನ್ನು ಕಟ್ಟಿಟ್ಟು ನಿಟ್ಟುಸಿರು ಬಿಟ್ಟೆ. ಪರೀಕ್ಷೆಗಾಗಿ ಓದುವುದು ಮುಗಿಯಿತು. ಇನ್ನು ಮುಂದಿನ ಜೀವನದಲ್ಲಿ ನನಗೆ ಬೇಕಾದ ಕಥೆ, ಕಾದಂಬರಿ ಓದಿದರಾಯ್ತು ಎಂದು ತಿಳಿದಿದ್ದೆ. ಆದರೆ ಈ ಮನೆಗೆ ಬಂದ ಮೇಲೆ ನನ್ನ ನಿಜವಾದ ಶಿಕ್ಷಣ ಪ್ರಾರಂಭ-ವಾಯ್ತು ಎಂದು ಹೇಳಬೇಕಾಗುತ್ತದೆ. ನಾನು ಓದಿದ್ದು ಸಾಕಷ್ಟು ತಿಳಿದಿಲ್ಲ ಎಂಬುದು ನನ್ನ ಮಾವನವರೊಂದಿಗೆ ಮಾತನಾಡುವಾಗ ತಿಳಿದುಕೊಂಡೆ. ತಿಳಿದ ಮತ್ತು ತಿಳಿಯದ ವಿಷಯವನ್ನು ತಿಳಿಸಿಕೊಡುವವರು ಸಿಕ್ಕಾಗ ನನ್ನ ಜ್ಞಾನಲಾಲ-ಸೆಗೆ ಸೆಲೆ ಒಡೆಯಿತು.

ಪರೀಕ್ಷೆಯ ಪೇಪರ ಬಿಟ್ಟು ನಾನು ಏನೇನೂ ಬರೆದಿರಲಿಲ್ಲ. "ಇಲ್ಲಿ ಮಾತಾಡಿದ್ದೆಲ್ಲ ಬರೆದು ತೋರಿಸಬೇಕು" ಎಂದು ಬೇಂದ್ರೆಯವರು ಪ್ರತಿಸಲ ಹೇಳುತ್ತಿದ್ದರು. ಬರೆಯುವುದರಲ್ಲಿ ಏನಾದರು ತಪ್ಪಿದರೆ ?—ಎಂಬ ಅಂಜಿಕೆ ನನ್ನನ್ನು ಕಾಡುತ್ತಿತ್ತು. ಇಷ್ಟೇ ಅಲ್ಲದೆ, ನಾನು ಬರೆದದ್ದು ತಪ್ಪು ಎಂದರೆ, ಆ ಅಪಮಾನವನ್ನು ಹೇಗೆ ತಡೆದುಕೊಳ್ಳಲಿ ಎಂದು ನನ್ನ ಸ್ವಾಭಿಮಾನ ಪ್ರಶ್ನಿಸಿತ್ತು. ಎಷ್ಟೋ ದಿವಸ 'ಬರೆದಿಲ್ಲ' 'ಬರೆಯುತ್ತೇನೆ' ಎಂದು ಹೇಳಿ ಪಾರಾದೆ.

ನನ್ನ ಯಜಮಾನರ ಶಾಲೆಯ ಕೆಲಸ ಪ್ರಾರಂಭವಾಯ್ತು. ಅತ್ತೆಯವರು ಯಾವುದೋ ನಿಮಿತ್ತದಿಂದ ಪುಣೆ–ಮುಂಬೈಗೆ ಹೋದರು. ಮನೆಯಲ್ಲಿ ನಾನು ಮತ್ತು ನನ್ನ ಮಾವನವರು. ಹೊತ್ತು ಕಳೆಯುವುದಕ್ಕಾಗಿ ಏನೇನೋ ಓದುತ್ತಿದ್ದೆ. "ನೀನು ಓದೋದು ಹೊತ್ತು ಕಳೆಯುವುದಕ್ಕಾಗಿಯೋ ಅಥವಾ ನಿನಗೆ ಸೇರುವು-ದನ್ನೇ ಓದುತ್ತಿಯೊ?" ಎಂದು ಬೇಂದ್ರೆಯವರು ಪ್ರಶ್ನಿಸಿದರು. ನಾನು "ಹೊತ್ತು

ಕಳೆಯುವುದಕ್ಕಾಗಿ" ಎಂದು ಉತ್ತರಿಸಿದೆ. "ಹೊತ್ತು ಘಳಿಸಬೇಕು ಓದುವದಕ್ಕಾಗಿ; ಹೊತ್ತು ಕಳೆಯುವದಕ್ಕಾಗಿ ಅಲ್ಲ" ಎಂದು ಹೇಳಿ, ಕಾಳಿದಾಸನ "ಮೇಘದೂತ" ವನ್ನು ಓದಿ ತೋರಿಸಿ, ವಿವರಿಸಿದರು. ಅಂದಿನಿಂದ ನನಗೆ ಓದುವದರಲ್ಲಿ ಅಭ್ಯಾಸ ಮಾಡುವದರಲ್ಲಿ ಅಭಿರುಚಿ ಹುಟ್ಟಿತು ಎಂಬುದನ್ನು ನಾನು ಒಪ್ಪಲೇಬೇಕು.

ಆಮೇಲೆ ಬೇರೆ ಬೇರೆ ವಿಷಯಗಳನ್ನು ದಿನಾಲು ಬಿಡುವಿದ್ದಾಗ ಚರ್ಚಿಸುವುದು, ಓದುವುದು ಪ್ರಾರಂಭವಾಯ್ತು. ಒಂದು ದಿವಸ "ನಾನು ನಿನ್ನೆ ಹೇಳಿದ್ದನ್ನು ಬರೆದು ಆಯಿತೆ'' ಎಂದು ಬೇಂದ್ರೆಯವರು ಕೇಳಿದರು. ಈ ಸಲ ಮಾತ್ರ "ಅರ್ಧಮರ್ಧ ಮಾಡಿದ್ದೇನೆ" ಎಂಬ ಉತ್ತರ ತಾನಾಗಿಯೇ ಹೊರಬಿದ್ದಿತು. ಕೂಡಲೇ ಅದನ್ನು ಓದಲು ಹೇಳಿ, ಪೂರ್ಣವಾಗಿ ತಿದ್ದಿ, ತಪ್ಪುಗಳನ್ನು ತೋರಿಸಿಕೊಟ್ಟರು. ತಪ್ಪು ಗಳನ್ನು ತೋರಿಸಿಕೊಡುವ ಅವರ ರೀತಿ ನನಗೆ ಸೇರಿತು. ಅನೇಕ ತಪ್ಪುಗಳನ್ನು ಮಾಡಿದರೂ ಸರಿ, ಬರೆಯುವದನ್ನು ಬಿಡಬಾರದು ಎಂಬ ಧೈರ್ಯವು ನನಗೆ ಬಂದಿತು. ಈ ರೀತಿ ನನ್ನಲ್ಲಿ ಸಾಹಿತ್ಯಾಭಿರುಚಿಯನ್ನು ಹುಟ್ಟಿಸಿದ ನನ್ನ ಮಾವ- ನವರು, ನನಗೆ ಗುರುಸ್ಥಾನದಲ್ಲಿದ್ದಾರೆ. ಯಾವುದೇ ವಿಷಯವನ್ನು ತಿಳಿಸಿಕೊಡು ವಾಗ, ಬೇಂದ್ರೆಯವರು ಮಮತೆಯಿಂದ, ವಾತ್ಸಲ್ಯದಿಂದ ತಿಳಿಸಿಕೊಡುತ್ತಾರೆ. ಆದುದರಿಂದ ಈಗ ನಾನು ಮತ್ತೊಮ್ಮೆ ವಿದ್ಯಾರ್ಥಿನಿಯಾಗಿ ಬೇಂದ್ರೆಯವರ ಶಾಲೆಗೆ ಹೆಸರು ಹಚ್ಚಿದ್ದೇನೆ.

ನಮ್ಮ ಮನೆಯಲ್ಲಿರುವ ಗ್ರಂಥ ಸಂಗ್ರಹವು ಒಂದು ವಿದ್ಯಾಲಯದ ಗ್ರಂಥಾ- ಲಯದಷ್ಟಿದೆ. ಗ್ರಂಥ = ದ. ರಾ. ಬೇಂದ್ರೆ ಎಂದು ಸಮೀಕರಣ ಮಾಡಿದರೆ ತಪ್ಪಾಗ ಲಾರದು. ಹೋದ ವರ್ಷ ದ. ರಾ. ಬೇಂದ್ರೆಯವರು ಮಲಗುವ ಕೋಣೆ ಮತ್ತು ಗ್ರಂಥಾಲಯ ಬೇರೆ ಬೇರೆಯಾಗಿರಲೆಂದು ವ್ಯವಸ್ಥೆ ಮಾಡಿದೆವು. ಆದರೆ ಆ ವ್ಯವಸ್ಥೆ ಬಹುಕಾಲ ಬಾಳಲಿಲ್ಲ. ಕೆಲವೇ ತಿಂಗಳಲ್ಲಿ ಎಲ್ಲ ಮಹತ್ವದ ಪುಸ್ತಕಗಳು ಅವರನ್ನು ಸುತ್ತುಗಟ್ಟಿದವು. ಮಲಗುವ ಕೋಣೆ, ಚಿಕ್ಕ ಗ್ರಂಥಾಲಯವೇ ಆಯಿತು.

ಮೇ ತಿಂಗಳಲ್ಲಿ ದ. ರಾ. ಬೇಂದ್ರೆಯವರ ಜೀವನವು ಪ್ರತಿನಿತ್ಯದ ಜೀವನಕ್ಕಿಂತ ತೀರ ಭಿನ್ನವಾಗುತ್ತಿತ್ತು. ಪುಣೆಯಿಂದ ಮೊಮ್ಮಕ್ಕಳು ಬಂದಿರುತ್ತಾರೆ. ಅವರು ಹೇಳಿದಂತೆ ದ. ರಾ. ಬೇಂದ್ರೆಯವರು ಕೇಳಬೇಕು. ಅವರೊಡನೆ ಆಡ- ಬೇಕು, ಅಡ್ಡಾಡಲು ಹೋಗಬೇಕು. ಹುಡುಗರೊಡನೆ ಹುಡುಗರಾಗಿ ಆಡುತ್ತಾರೆ, ಮಧ್ಯೆ ಮಧ್ಯೆ ಆ ಹುಡುಗರಿಗೂ ಭೌತವಿಜ್ಞಾನ, ರಸಾಯನ- ಶಾಸ್ತ್ರದಂಥ ವಿಷಯಗಳನ್ನು ಹೇಳುತ್ತಾರೆ. ಇದನ್ನು ಕಂಡ ನಾನು ಅನೇಕ

ಸಲ ಜೆಚ್ಚಿಬಿದ್ದಿದ್ದೇನೆ. "ಈ ವಿಷಯ ಈ ಚಿಕ್ಕಮಕ್ಕಳಿಗೆ ತಿಳಿಯುವುದು ಸಾಧ್ಯವೆ ?" ಎಂದು ನಾನು ಪ್ರಶ್ನಿಸಿಯೇ ಬಿಟ್ಟೆ. 'ನಾನು ಹೇಳಿದಾಗ, ಅವರು ಹುಂ ಎನ್ನುತ್ತಾರೆ ಎಂದಮೇಲೆ ಅವರಿಗೆ ತಿಳಿಯುತ್ತಿರಬೇಕು. ಅವರಿಗೆ ಯಾವುದು ತಿಳಿಯಿತು, ಎಂಬುದು ಮಹತ್ತ್ವದ್ದು' ಎಂದು ಬೇಂದ್ರೆಯವರು ಉತ್ತರಿಸಿದರು. ಚಿಕ್ಕಮಕ್ಕಳಿಗೆ ಗಹನ ವಿಷಯಗಳನ್ನು ತಿಳಿಸುವುದಕ್ಕಾಗಿ ಅನೇಕ ಆಟಿಗೆಯ ಸಾಮಾನುಗಳನ್ನು ಸಂಗ್ರಹಿಸಿದ್ದಾರೆ.

ಇವರು ಪ್ರಯತ್ನವಾದಕ್ಕಿಂತ ದೈವವಾದಕ್ಕೆ ಮಹತ್ವವನ್ನು ಕೊಡುತ್ತಾರೆ. ಪ್ರಯತ್ನ ಮಾಡಬೇಕು; ಆದರೆ ದೈವವನ್ನು ವಿರೋಧಿಸಿ ಅಲ್ಲ-ಎಂಬುದು ಇವರ ಮತ.

ಪ್ರತಿಯೊಂದು ಕಾರ್ಯವನ್ನು ಇವರು "ಶ್ರೀ ಅರವಿಂದಾರ್ಪಣ" ಎಂಬ ಭಾವನೆಯಿಂದ ಮಾಡುತ್ತಾರೆ ಮತ್ತು ಹೀಗೆ ಏಕೆ ಮಾಡಬೇಕು, ಹೇಗೆ ಮಾಡ-ಬೇಕು ಎಂಬುದನ್ನೂ ವಿವರಿಸುತ್ತಾರೆ. ದತ್ತಾತ್ರೇಯ ಮತ್ತು ವಿಟ್ಠಲರು ಬೇಂದ್ರೆಯವರಿಗೆ ಪರಮಪ್ರಿಯ ಇಷ್ಟದೇವತೆಗಳಾಗಿವೆ. ಇವರ ಜೀವನದಲ್ಲಿ ಅಧ್ಯಾ-ತ್ಮಕ್ಕೆ ಪ್ರಥಮಸ್ಥಾನ ಮತ್ತು ವ್ಯವಹಾರಕ್ಕೆ ದ್ವಿತೀಯ ಸ್ಥಾನವು ಸಲ್ಲುತ್ತದೆ.

ನಾನೊಮ್ಮೆ "ಇಷ್ಟು ಪುಸ್ತಕಗಳನ್ನು ಏಕೆ ಸಂಗ್ರಹಿಸಿದಿರಿ" ಎಂದು ಕೇಳಿದಾಗ, ಅವರು ತಮ್ಮ ಜೀವನವನ್ನು ಸಂಕ್ಷಿಪ್ತವಾಗಿ ಹೇಳಿದರು. "ಜೀವನದಲ್ಲಿ ಬಡತನ, ಕಷ್ಟ-ನಷ್ಟ ಎಲ್ಲವೂ ಬಂದವು, ಹೋದವು. ಆದರೆ ಈ ಪುಸ್ತಕ ಮತ್ತು ಗೆಳೆಯರು ನನ್ನನ್ನು ಎಂದೂ ಬಿಡಲಿಲ್ಲ. ಬಡತನದಲ್ಲಿ ಸಹಾಯ ಮಾಡಿದ್ದಾರೆ, ಕಷ್ಟನಷ್ಟಗಳಲ್ಲಿ ನೆರವಾಗಿದ್ದಾರೆ, ೫೦ನೆಯ ಹುಟ್ಟುಹಬ್ಬವನ್ನು ಸಾಹಿತ್ಯಪ್ರೇಮಿಗಳು ಆಚರಿಸಿ, ಹತ್ತು ಸಾವಿರ ರೂಪಾಯಿ ಸಂಗ್ರಹಿಸಿ ಕೊಟ್ಟಿದ್ದರು. ಆ ಹಣವನ್ನು ನಾನು ತಿಂದು ಹಾಕಲಿಲ್ಲ. ಅದೇ ರೀತಿ ನಾನು ಗಳಿಸಿದ ಹಣದಲ್ಲಿಯೂ ಹೆಚ್ಚು ಪಾಲು, ಗ್ರಂಥಗಳನ್ನು ಕೊಳ್ಳುವದಕ್ಕಾಗಿ ವಿನಿಯೋಗಿಸಿದ್ದೇನೆ." ಎಂದು ಹೇಳಿ, ಕೆಲವು ಮಹತ್ವದ ಗ್ರಂಥಗಳನ್ನು ತೋರಿಸಿ, ಅದರಲ್ಲಿಯ ವಿಷಯಗಳನ್ನು ತಿಳಿಸಿಕೊಡಲು ಪ್ರಾರಂಭಿಸಿದರು.

ಕನ್ನಡನಾಡಿನವರು ೫೦ನೆಯ ಹುಟ್ಟುಹಬ್ಬವನ್ನು ಆಚರಿಸಿದರೆ, ಮಹಾರಾಷ್ಟ್ರದವರು ೬೦ನೆಯ ಹುಟ್ಟುಹಬ್ಬವನ್ನು ಆಚರಿಸಿದರು. ೭೦ನೆಯ ಹುಟ್ಟುಹಬ್ಬವನ್ನು ಶಿರಹಟ್ಟಿಯವರು ಆಚರಿಸಿದರು. ಇದೆಲ್ಲ ಬೇಂದ್ರೆಯವರ ಮನೆತನ-ದವರಾದ ನಮಗೆಲ್ಲರಿಗೂ ಆನಂದದ ವಿಷಯವಾಗಿದೆ.

ಪ್ರತಿನಿತ್ಯ ನಮಗೆ ಅಭ್ಯಾಸ ಮಾಡಲು ಹಚ್ಚುವ, ಮೊಮ್ಮಕ್ಕಳೊಡನೆ ಮಕ್ಕಳಂತೆ ಆಡುವ, ಸತತವಾಗಿ ಜ್ಞಾನಾರ್ಜನೆಯಲ್ಲಿ ತೊಡಗಿದ, ಆಧ್ಯಾತ್ಮಚಿಂತನೆಯಲ್ಲಿ ಇರುವ ಅಂಬಿಕಾತನಯದತ್ತರ ಮಾರ್ಗದರ್ಶನವು ನಮಗೆ ಚಿರಕಾಲ ಲಭಿಸಲಿ, ಮತ್ತು ಅವರಿಂದ ಇನ್ನೂ ಮಹತ್ವದ ಕೃತಿರಚನೆ ಆಗಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

§ § § §

(ಮರಾಠಿಯಿಂದ ಅನುವಾದಿತ)

೩೦

# ಬೇಂದ್ರೆ, ಶಿರಹಟ್ಟಿ ಮತ್ತು ನಾನು

ಮಾಧವ ನಾ. ಮಹಿಷಿ

ಧಾರವಾಡ ಜಿಲ್ಲೆಯಲ್ಲಿ ಗದುಗಿನಿಂದ ಹಾವೇರಿಗೆ ಹೋಗುವ ಹೆದ್ದಾರಿಗೆ ಇಂದಿಗೂ ಇರುವ ಹೆಸರು ಬಾದಾಮಿ-ಪಾಳಾ ರಸ್ತೆ ಎಂದು. ಇದು ಚಾಲುಕ್ಯರ ಕಾಲದಲ್ಲಿಯ ಮುಖ್ಯ ರಾಜಮಾರ್ಗಗಳಲ್ಲೊಂದು. ಚಾಲುಕ್ಯರ ರಾಜಧಾನಿ ಬಾದಾಮಿಯಿಂದ ಬನವಾಸಿ ನಾಡಿನಲ್ಲಿರುವ ಪಾಳಾ ತಲುಪುವ ಈ ದಾರಿಯಲ್ಲಿ, ಗದುಗಿನಿಂದ ಸುಮಾರು ೧೩ ಮೈಲು ಅಂತರಲ್ಲಿರುವುದು ಮಾಗಡಿ ಎಂಬೊಂದು ಹಳ್ಳಿ. ಮಾಗಡಿಯನ್ನು ಕೇಂದ್ರಬಿಂದುವಾಗಿರಿಸಿಕೊಂಡು ಆರು ಮೈಲು ತ್ರಿಜ್ಯವುಳ್ಳ ಒಂದು ವರ್ತುಲವನ್ನೆಳೆದರೆ ಮುಳಗುಂದ, ಲಕ್ಷ್ಮೇಶ್ವರ, ಶಿರಹಟ್ಟಿ ಈ ಮೂರು ಊರುಗಳು ಕೇಂದ್ರದಿಂದ ಸುಮಾರು ಅಷ್ಟೇ ಅಂತರದಲ್ಲಿ ಸಿಕ್ಕುವುದುಂಟು. ಇವುಗಳಲ್ಲಿ ಶಿರಹಟ್ಟಿ ನಮ್ಮೂರು. ಐತಿಹಾಸಿಕವಾಗಿ ಬಹುಶಃ ಲಕ್ಷ್ಮೇಶ್ವರ, ಮುಳಗುಂದ-ಗಳೆರಡೂ ಶಿರಹಟ್ಟಿಗಿಂತ ಹೆಚ್ಚು ಪುರಾತನವಾದುವು ಅಲ್ಲದೆ ಆದಿಕವಿ ಪಂಪ ತಮ್ಮೂರವನೆಂದು ಲಕ್ಷ್ಮೇಶ್ವರ (ಪುಲಿಗೆರೆ)ದವರಿಗೆ ಅಭಿಮಾನವಾದರೆ, ತಮ್ಮದು ನಯಸೇನನ ಮುಳಗುಂದವೆಂದು ಮುಳಗುಂದದವರಿಗೆ ಹೆಮ್ಮೆ. ಮುವ್ವತ್ತು ವರ್ಷಗಳ ಹಿಂದೆ, ಶಿರಹಟ್ಟಿಯ ಪ್ರಾಥಮಿಕ ಶಾಲೆಯಲ್ಲಿ ವಿದ್ಯಾರ್ಥಿಯಾಗಿರುವಾಗ, ನಮ್ಮೂರವರಿಗೂ ತಮ್ಮ ಟೊಪ್ಪಿಗೆಯಲ್ಲಿ ಇಂಥದೊಂದು ಹೆಮ್ಮೆಯ ಗರಿ ಇಲ್ಲವೇಕೆ ? ಎಂದು ಹುಡುಗ ಮನಸ್ಸು ನನ್ನೊಳಗೆಯೆ ಕೊರೆಯುತ್ತಿತ್ತು. ಆಗೊಮ್ಮೆ ನಮ್ಮ ಗುರುಗಳು ‘ ಹಕ್ಕಿ ಹಾರುತಿದೆ ’ ಪಾಠ ಹೇಳುತ್ತಿರುವಾಗಲೇ ಹೇಳಿದ ಒಂದು ಮಾತು ನನ್ನಲ್ಲಿ, ನನ್ನ ಗೆಳೆಯರಲ್ಲಿ ಪುಳಕವುಂಟುಮಾಡಿತು. “ ‘ ಹಕ್ಕಿ ಹಾರು-ತಿದೆ ’ಯ ಕವಿ ಅಂಬಿಕಾತನಯದತ್ತರು ನಿಮ್ಮೂರವರು, ಶಿರಹಟ್ಟಿಯವರು ಎಂಬುದನ್ನು ನೀವೆಲ್ಲ ನೆನಪಿಡಬೇಕು ” ಎಂದು ಗುರುಗಳು ಹೇಳಿದಾಗ ನನ್ನ ಬಾಲಿಶ ಮನಸ್ಸು ಹಿಂದೆಂದೂ ಅನುಭವಿಸಿರದಂಥ ಆನಂದವನ್ನನುಭವಿಸಿತು. ಸಾಲೆ ಬಿಟ್ಟ ನಂತರ ನಾವು ಕೆಲವರು ಗುರುಗಳನ್ನು ಮುತ್ತಿ ಇನ್ನಷ್ಟು ಮಾಹಿತಿ ಸಂಗ್ರಹಿಸಿದೆವು. ಅವರು ಕೋಟೆಯಲ್ಲಿ ನಮ್ಮನ್ನೆಲ್ಲ ಕರೆದೊಯ್ದು ಹಳೆಯ ಮನೆ

ಯೊಂದನ್ನು ತೋರಿಸಿ, ಅದು ಬೇಂದ್ರೆಯವರ ಪೂರ್ವಜರ ಮನೆಯೆಂದು ಹೇಳಿದರು; ಕೋಟೆಯ ಹೊರಗಡೆ ಇರುವ ಅಶ್ವತ್ಥಕಟ್ಟೆಯೊಂದನ್ನು ತೋರಿಸಿ, ಇದು ಅಪ್ಪಾ-ಭಟ್ಟರ ಕಟ್ಟೆಯೆಂದು ಹೇಳಿದರು. ಅಪ್ಪಾಭಟ್ಟರು ಬೇಂದ್ರೆಯವರ ಅಜ್ಜ—ತಂದೆಯ ತಂದೆ. ಅವರು ತಮ್ಮ ಕಾಲದಲ್ಲಿ ಹೆಸರಾಂತ ಸಂಸ್ಕೃತ ವಿದ್ವಾಂಸರು, ಸ್ವತಃ ಕವಿ. ಈ ಇತಿಹಾಸ ಪುರುಷ, ನಯಸೇನರಷ್ಟು ಹಳತಲ್ಲದಿದ್ದರೂ ನಾವು ಲಕ್ಷ್ಮೇಶ್ವರ, ಮುಳಗುಂದದವರಿಗಿಂತ ಕಡಿಮೆಯವರೇನಲ್ಲ ಎಂದೆನಿಸಿ, ಕಂಡವರೆದುರಿಗೆಲ್ಲ ಹೇಳಿದ್ದೇ ಹೇಳಿದ್ದು.

* * * *

ಶ್ರೀ ದ. ರಾ. ಬೇಂದ್ರೆಯವರು ಶಿರಹಟ್ಟಿಯಲ್ಲಿ ಹುಟ್ಟಲಿಲ್ಲ, ಬೆಳೆಯಲಿಲ್ಲ ಆದರೂ ಶಿರಹಟ್ಟಿಯವರಾದ ನಮಗೆಲ್ಲ ಅವರು ನಮ್ಮೂರವರೆಂದು ಅಭಿಮಾನ ಪಡುವುದರಲ್ಲಿ ಹೆಮ್ಮೆ. ದೊಡ್ಡವರೊಂದಿಗೆ ಸಂಬಂಧ ಕಲ್ಪಿಸಿಕೊಳ್ಳುವುದರಲ್ಲಿರುವ ಆ ಆನಂದವನ್ನು ಪಡೆದೇ ಅನುಭವಿಸಬೇಕು. ಶಿರಹಟ್ಟಿ ತಮ್ಮೂರೆಂದು ಹತ್ತಾರು ಸಂದರ್ಭಗಳಲ್ಲಿ ಬೇಂದ್ರೆಯವರೇ ಹೇಳಿದ್ದಾರೆ. ಒಂದು ವೇಳೆ ಅವರು ತಾವು ಶಿರಹಟ್ಟಿಯವರೆಂಬುದನ್ನು ಅಲ್ಲಗಳೆದರೂ ಅವರು ನಮ್ಮವರೆಂದು ಸಿದ್ಧಪಡಿಸಲು ಸಾಕಷ್ಟು ಬಲವಾದ ಸಾಕ್ಷ್ಯ-ಪುರಾವೆಗಳು ನಮ್ಮ ಬಳಿ ಇವೆ.

ನನ್ನ ತಂದೆಯವರ ದೊಡ್ಡಪ್ಪ ದಿ. ಅಶ್ವತ್ಥರಾವ ಮಹಿಷಿ ತಮ್ಮ ಜೀವಿತ ಕಾಲದಲ್ಲಿ ಉತ್ತರಕರ್ನಾಟಕದಲ್ಲಿ ಪ್ರಮುಖ ವ್ಯಕ್ತಿಯೆನಿಸಿಕೊಂಡವರು. ಸ್ವಾತಂತ್ರ್ಯಾಂದೋಲನದಲ್ಲಿ ಪ್ರಮುಖಪಾತ್ರ ವಹಿಸುವುದರ ಜೊತೆಗೆ ಕರ್ನಾ-ಟಕ ಏಕೀಕರಣಕ್ಕಾಗಿ, ಅಂದಿನ ಸಾಂಗಲಿ ಸಂಸ್ಥಾನದ ಕನ್ನಡ ಭಾಗಗಳಲ್ಲಿ ಕನ್ನಡದ ಜಾಗೃತಿಗಾಗಿ, ಮರಾಠಿಯ ಪ್ರಭಾವದಲ್ಲಿದ್ದ ಸಾಂಗಲಿ ಮತ್ತು ಇತರ ಸಂಸ್ಥಾನಗಳಲ್ಲಿ ಕನ್ನಡಕ್ಕೆ ಯೋಗ್ಯ ಮನ್ನಣೆ ದೊರಕಿಸುವುದಕ್ಕಾಗಿ ಶ್ರಮಿಸಿ ಒಂದು ಮಟ್ಟಿಗೆ ಯಶಸ್ವಿಯಾದವರವರು. ಸಾಹಿತ್ಯದಲ್ಲಿ ವಿಶೇಷ ಕೃಷಿಯನ್ನೇನೂ ಮಾಡಿರದಿದ್ದರೂ ಆಧುನಿಕ ಸಾಹಿತ್ಯವನ್ನು ಸಾಕಷ್ಟು ಓದಿಕೊಂಡವರು ಮಾತ್ರ-ವಲ್ಲ, ತಮ್ಮದೇ ಆದ ರೀತಿಯಲ್ಲಿ ಸಾಹಿತ್ಯದ ಅಭಿವೃದ್ಧಿಗಾಗಿ ದುಡಿದವರವರು. ಕನ್ನಡ ಆಂದೋಲನದಲ್ಲಿ ಮುನ್ ಸಾಲಿನಲ್ಲಿದ್ದ ದಿ. ಆಲೂರ ವೆಂಕಟರಾಯರು, ಮುದವೀಡು ಕೃಷ್ಣರಾಯರು, ಬಿ. ಎಂ. ಶ್ರೀಕಂಠಯ್ಯನವರು ಮುಂತಾದವ ರೊಂದಿಗೆ ಅವರಿಗೆ ನಿಕಟ ಮೈತ್ರಿಸಂಬಂಧ. ಕರ್ನಾಟಕ ವಿದ್ಯಾವರ್ಧಕ ಸಂಘದ ಚಟುವಟಿಕೆಗಳಲ್ಲಿ ಅವರ ಪಾತ್ರ ಹಿರಿದಾಗಿತ್ತು. ಕನ್ನಡ ಸಾಹಿತ್ಯಪರಿಷತ್ತಿನ ಸಂಸ್ಥಾಪಕಸದಸ್ಯರವರು. ಬೇಂದ್ರೆಯವರ ಕುರಿತು ಬರೆಯುವಾಗ ಅಶ್ವತ್ಥರಾಯರ ಬಗ್ಗೆ ಇಷ್ಟೆಲ್ಲ ಹೇಳುವುದಕ್ಕೂ ಒಂದು ಕಾರಣವಿದೆ. ಬೇಂದ್ರೆಮನೆತನಕ್ಕೂ ಅಶ್ವತ್ಥರಾಯರಿಗೂ ಘನಿಷ್ಠ ಸಂಬಂಧ. ಬೇಂದ್ರೆ ಮನೆತನದವರ ಹೊಲಮನೆಗಳ ವ್ಯವಹಾರವನ್ನು ತಾವಿರುವ ವರೆಗೂ ಅವರು ನೋಡಿಕೊಳ್ಳುತ್ತಿದ್ದರು. ಕವಿ

ಬೇಂದ್ರೆ ಮತ್ತು ಆವರ ಮನೆತನದೊಂದಿಗೆ ಅಶ್ವತ್ಥರಾಯರ ಸಂಬಂಧವೆಂತಹದಿತ್ತೆಂಬುದನ್ನು ಆವರ ಮಾತಿನಲ್ಲೇ ನೋಡಬೇಕು: [1]

‘‘ ದತ್ತಾತ್ರಯರಾಯರ ತಾಯಿ ಅಂಬೂತಾಯಿಯವರ ತಾಯಿ—ಗೋದೂಬಾಯಿಯವರ ಪರಿಚಯ ನನಗೆ ೧೮೮೮ನೇ ಇಸ್ವಿಯಲ್ಲಾಯಿತು. ಆಗ ನಾನು ಧಾರವಾಡ ಹಾಯಸ್ಕೂಲಿನಲ್ಲಿ ಕಲಿಯುತ್ತಿದ್ದೆ. ಆ ಸಮಯದಲ್ಲಿ ನಾನು ಗೋದೂಬಾಯಿಯವರ ಮನೆಯಲ್ಲಿಯೇ ಊಟಮಾಡುತ್ತಿದ್ದೆ. ಗೋದೂಬಾಯಿಯವರು ಅಂಬೂತಾಯಿಯ ಮದುವೆಯನ್ನು ಮಾಡಬೇಕೆಂದು ವರಸಂಶೋಧನೆ ನಡೆಯಿಸಿದ್ದರು. ಗೋದೂಬಾಯಿಯವರು ನನಗೂ ಸಾತ್ವಿಕ ಮನೆತನದ ವರನನ್ನು ಹುಡುಕಿಕೊಡಲಿಕ್ಕೆ ಹೇಳಿದರು. ಶಾಲೆಯ ಬಿಡುವಿನಲ್ಲಿ ನಾನು ಶಿರಹಟ್ಟಿಗೆ ಬಂದಾಗ ರಾಮೂತಾತ್ಯಾ [2] ಇವರ ಹೆಂಡತಿಯು ತೀರಿಕೊಂಡ ಸುದ್ದಿಯನ್ನು ಕೇಳಿದೆ. ಅಪ್ಪಾಶಾಸ್ತ್ರಿಗಳು ಕನ್ಯೆಯ ಶೋಧನೆಯಲ್ಲಿ ತೊಡಗಿದ್ದಾರೆಂದೂ ನನಗೆ ತಿಳಿದುಬಂದಿತು. ಆದ್ದರಿಂದ ನಾನು ಅಪ್ಪಾಶಾಸ್ತ್ರಿಗಳನ್ನು ಕಂಡು ಮದುವೆಯ ಪ್ರಸ್ತಾಪವನ್ನೆತ್ತಿ ಗೋದುಬಾಯಿಯವರ ಮನೀಷೆಯನ್ನು ಅವರಿಗೆ ಶ್ರುತಪಡಿಸಿದೆನು. ಅವರು, ‘ ಹುಡುಗಿಯನ್ನು ನೋಡೋಣ. ಮನಸಿಗೆ ಬಂದರೆ ಮದುವೆ ಮಾಡೋಣ, ’ ಎಂದೆಂದು ಹುಡುಗಿಯನ್ನು ಶಿರಹಟ್ಟಿಗೆ ಕರೆದುಕೊಂಡು ಬರಲು ಗೋದೂಬಾಯಿಯವರಿಗೆ ತಿಳಿಸಬೇಕೆಂದರು. ನಾನು ಧಾರವಾಡಕ್ಕೆ ಹೋಗಿ ಅಪ್ಪಾಶಾಸ್ತ್ರಿಗಳು ಹೇಳಿದುದನ್ನೆಲ್ಲ ಗೋದೂಬಾಯಿಯವರಿಗೆ ಹೇಳಿ, ಮನೆತನದ ಬಗ್ಗೆಯೂ ವರನ ಬಗ್ಗೆಯೂ ಎಲ್ಲ ಮಾತುಗಳನ್ನೂ ಮನವರಿಕೆ ಮಾಡಿಕೊಟ್ಟೆನು. ಅದರಂತೆ ಗೋದೂಬಾಯಿಯವರು ಕನ್ಯೆಯನ್ನು ಶಿರಹಟ್ಟಿಗೆ ಕರೆದುಕೊಂಡು ಹೋಗಿ, ತೋರಿಸಿ, ಮದುವೆಯ ನಿಶ್ಚಯ ಹಾಕಿಕೊಂಡೇ ಬಂದರು. ಕೆಲ ದಿನಗಳ ನಂತರ ಶಿರಹಟ್ಟಿಯಲ್ಲಿಯೇ ಮದುವೆಯ ಸಮಾರಂಭವು ನೆರವೇರಿತು. ಮುಂದೆ ರಾಮೂತಾತ್ಯಾ ಇವರು ಧಾರವಾಡದಲ್ಲಿಯೇ ಇರತೊಡಗಿದ್ದರೂ ಶಿರಹಟ್ಟಿಗೆ ಮೇಲಿಂದಮೇಲೆ ಬಂದು ಹೋಗುತ್ತಿದ್ದರು. ರಾಮೂತಾತ್ಯಾ—ಅಂಬೂತಾಯಿಯವರಿಗೆ ದತ್ತರಾಯರು, ಕೃಷ್ಣರಾಯರು ಎಂಬ ಇಬ್ಬರು ಗಂಡುಮಕ್ಕಳಾದರು....

‘‘ ನನಗೆ ದತ್ತರಾಯರ ಪರಿಚಯವಾದುದು ಪುಣೆಯಲ್ಲಿ, ಅವರು ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ. ಬೇಂದ್ರೆಮನೆತನದಲ್ಲಿ ಕರ್ತೃತ್ವಶಾಲಿಗಳೂ

---

1 ೧೯೪೬ ರಲ್ಲಿ ಶ್ರೀ ಬೇಂದ್ರೆಯವರನ್ನು ಅವರ ೫೦ನೆಯ ಹುಟ್ಟುಹಬ್ಬದ ನಿಮಿತ್ತ ಧಾರವಾಡದಲ್ಲಿ ಸತ್ಕರಿಸಿದಾಗ ಲಲಿತ ಸಾಹಿತ್ಯಮಾಲೆಯು ಪ್ರಕಟಿಸಿದ ಸ್ಮರಣಸಂಚಿಕೆಯಲ್ಲಿ ಅಶ್ವತ್ಥರಾಯರು ಬರೆದ ಲೇಖನದಿಂದ ಆಯ್ದುಕೊಂಡ ಅವತರಣಿಕೆಗಳಿವು.

2 ಬೇಂದ್ರೆಯವರ ತಂದೆ ರಾಮಚಂದ್ರಭಟ್ಟರ ವಾಡಿಕೆಯ ಹೆಸರು. ಊರಲ್ಲಿ ಅವರ ಬಂಧುಬಳಗದವರೂ, ಪರಿಚಿತರೂ ಅವರನ್ನು ಈ ಹೆಸರಿನಿಂದಲೇ ಕರೆಯುತ್ತಿದ್ದರು.

ನನ್ನ ಅತ್ಯಂತ ಸ್ನೇಹಿತರೂ ಆದ ವೆಂಕಟರಾಯರು ಆಕಸ್ಮಿಕವಾಗಿ ತೀರಿಕೊಂಡರು. ಅವರ ತಮ್ಮಂದಿರಾದ ಗೋವಿಂದರಾಯರೆಂಬವರು ನೌಕರಿಯಿಂದ ನಿವೃತ್ತರಾಗಿ, ಪೆನ್‌ಶನ್ ಪಡೆದುಕೊಂಡು ಪುಣೆಯ ಪ್ರಸಿದ್ಧ ವಿಸ್ತರಣವಾದ ಡೆಕ್ಕನ್ ಜಿಮಖಾನಾ ಭಾಗದಲ್ಲಿ ಒಂದು ಚಿಕ್ಕ ಮನೆಯನ್ನು ಕಟ್ಟಿಕೊಂಡು ಅಲ್ಲಿಯೇ ವಾಸಿಸುತ್ತಿದ್ದಾರೆ. ಅವರೇ ನನಗೆ ವೆಂಕಟರಾಯರು ತೀರಿಕೊಂಡುದನ್ನು ತಿಳಿಸಿದರು. ಆದುದರಿಂದ ವೆಂಕಟರಾಯರ ಕುಟುಂಬದವರನ್ನು ಕಂಡು ಮಾತನಾಡಿಸಿ ಸಮಾಧಾನ ಹೇಳಿ ಬರಬೇಕೆಂದು ನಾನು ೧೯೧೬ರಲ್ಲಿ ಪುಣೆಗೆ ತೆರಳಿದೆನು. ಆಗ ಪುಣೆಯಲ್ಲಿ ಪ್ಲೇಗಿನ ಹಾವಳಿಯು ಹಬ್ಬಿದ್ದರಿಂದ ವೆಂಕಟರಾಯರ ಕುಟುಂಬದವರು ಊರ ಹೊರಗೆ ಫರ್ಗ್ಯುಸನ್ ಕಾಲೇಜಿನ ಹತ್ತರ ಗುಡಿಸಲದಲ್ಲಿದ್ದರು. ದತ್ತರಾಯರೂ ಅದೇ ಸ್ಥಳದಲ್ಲಿ ತಮ್ಮ ಕಕ್ಕಂದಿರಾದ ಬಂಡೇರಾಯರೊಂದಿಗೆ ಇರುತ್ತಿದ್ದರು. ಬಂಡೇರಾಯರ ಹತ್ತಿರವೇ ನಾನು ಇಳಿದುಕೊಂಡಿದ್ದೆ. ೨-೩ ದಿನ ಇರಬೇಕಾಗಿ ಬಂದಿತು. ಆಗಲೇ ನಾನು ದತ್ತರಾಯರನ್ನೂ ಅವರ ತಮ್ಮಂದಿರಾದ ಕೃಷ್ಣರಾಯರನ್ನೂ ಮೊದಲನೇ ಸಲ ನೋಡಿದೆನು. ಬಂಡೇರಾಯರು ಕಚೇರಿಗೆ ಹೋಗತಕ್ಕವರು. ದತ್ತರಾಯರು ಕಾಲೇಜಿಗೆ ಹೋಗುವವರು. ನಾನು ಸುಮ್ಮನೇ ಗುಡಿಸಲಿನಲ್ಲಿ ಕುಳಿತು ವೇಳೆ ಕಳೆಯಬೇಕೆಂದು, ಏನಾದರೂ ಓದಬೇಕೆಂದು ದತ್ತರಾಯರ ಪುಸ್ತಕ ಪ್ರಪಂಚವನ್ನು, ಟಿಪ್ಪಣಿ ಬರೆದುಕೊಂಡ ಪುಸ್ತಕಗಳನ್ನು ತಿರುವಿಹಾಕಿದೆನು. ಆಗ ನನಗೆ ಒಂದು ಆಶ್ಚರ್ಯಕಾರಕ ದೃಶ್ಯ ಕಂಡುಬಂದಿತು. ಅವರು ಓದುವ ಪುಸ್ತಕಗಳಲ್ಲಿ ಮತ್ತು ಟಿಪ್ಪಣಿ ಬುಕ್ಕುಗಳಲ್ಲಿ, ಕನ್ನಡ ಲಿಪಿಯಲ್ಲಿ ತುಂಬಾ ಬರೆದುದನ್ನು ಕಂಡೆನು. ನಾನು ಅವುಗಳನ್ನು ಒಳ್ಳೇ ಕುತೂಹಲದಿಂದ ಓದತೊಡಗಿದೆನು. ಕವನಗಳಿದ್ದವು; ಗದ್ಯಲೇಖನಗಳಿದ್ದವು. ಕೆಲವು ಇಂಗ್ಲೀಷ್ ಕವನಗಳೂ ಇದ್ದವು. ಎಲ್ಲವನ್ನೂ ಎರಡು ಮೂರು ಸಲ ಓದಿದೆನು, ಆನಂದಪಟ್ಟೆನು. ಅವರ ಕಾವ್ಯ ಪ್ರತಿಭೆಯನ್ನು ಕಂಡು ಮನದಲ್ಲಿಯೇ ಕೊಂಡಾಡಿದೆನು. ದತ್ತರಾಯರು ಯಾವಾಗ ಬಂದಾರೋ— ನಾನು ಅವರನ್ನು ಯಾವಾಗ ಅಭಿನಂದಿಸೇನೋ ಎಂಬ ತವಕದಲ್ಲಿ ಕಾವ್ಯಾನಂದವನ್ನು ಅನುಭವಿಸುತ್ತಲೇ ಇದ್ದೆ. ಹೊತ್ತಿನ ಪರಿವೆಯೇ ನನಗಿರಲಿಲ್ಲ. ಸಾಯಂಕಾಲವಾಗಿರಬೇಕು — ಆಗ ದತ್ತರಾಯರು ಆಗಮಿಸಿದರು. ಅವರನ್ನು ಕಂಡೊಂಡನೆಯೇ ತಬ್ಬಿಕೊಂಡು, ಬೆನ್ನು ತಟ್ಟಿ ಅಂತಃಕರಣಪೂರ್ವಕವಾಗಿ ಅವರ ಅಭಿನಂದನೆ ಮಾಡಿದೆನು. ದತ್ತರಾಯರಿಗೂ ಒಂದು ತರದ ಸಮಾಧಾನವಾಗಿರ-ಬೇಕೆಂದು ಭಾವಿಸಿದೆನು. ಮುಂದೆ ಮಾತುಕಥೆ ನಡೆಯಿತು. ಆಗ ಅವರು ಬಿ. ಏ. ಆದ ನಂತರ ಧಾರವಾಡದಲ್ಲಿಯೆ ನೆಲೆಸಿ ಕನ್ನಡ ಸಾಹಿತ್ಯಸೇವೆಯನ್ನು ಕೈಕೊಳ್ಳ-ಬೇಕೆಂಬ ತಮ್ಮ ಮನೀಷೆಯನ್ನು, ಜೀವನದ ಗುರಿಯನ್ನು ವ್ಯಕ್ತಪಡಿಸಿದರು. ಅವರ ಆ ಧ್ಯೇಯವನ್ನು ಕಂಡು ನನಗೆ ಅವರಲ್ಲಿ ಆದರಾಭಿಮಾನಗಳುಂಟಾದವು

ಇಂದಿಗೆ[1] ಅದೆಷ್ಟೋಪಟ್ಟು ಹೆಚ್ಚಾಗಿ ಬೆಳೆದಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ತಿರುಳುಗನ್ನಡನಾಡಿನ ಶಿರಹಟ್ಟಿಯಲ್ಲಿಯ ಕೊಂಕಣಸ್ಥ ಮನೆತನವೊಂದರಲ್ಲಿ ಕನ್ನಡ ಕವಿವರನೊಬ್ಬನು ಜನ್ಮತಾಳಿದುದನ್ನು ಕಂಡು ನನಗಾದ ಆನಂದವನ್ನು ವ್ಯಕ್ತಪಡಿಸಲು ನನ್ನ ಶಬ್ದಸಂಪತ್ತಿಯು ಸಾಲದೆಂದು ಹೇಳದಿರಲಾರೆ.

“ದತ್ತರಾಯರು ಧಾರವಾಡದಲ್ಲಿ ನೆಲೆಸಿದಂದಿನಿಂದ ಶಿರಹಟ್ಟಿಗೆ ಹಲವಾರು ಸಲ ಬಂದಿದ್ದಾರೆ. ವ್ಯಾಖ್ಯಾನ ಕೊಟ್ಟಿದ್ದಾರೆ. ಕಾವ್ಯಾಮೃತವನ್ನು ಉಣಿಸಿದ್ದಾರೆ. ಪ್ರಗಲ್ಭ ವಿಚಾರಗಳ ಪ್ರಭಾವವನ್ನು ಬೀರಿದ್ದಾರೆ. ಅವರು ಶಿರಹಟ್ಟಿಗೆ ಆಗಮಿಸಿದರೆ ಶಿರಹಟ್ಟಿಯ ಜನರಿಗೆಲ್ಲ ತಮ್ಮ ಮನೆಯ ಪ್ರಿಯವಾದ ವ್ಯಕ್ತಿಯೇ ಬಂದಂತೆನಿಸಿ ಅಭಿಮಾನ ಉಕ್ಕೇರಿ ಬರುತ್ತಲಿದೆ ಎಂಬುದರಲ್ಲಿ ಸಂಶಯವಿಲ್ಲ.”

ಕನ್ನಡದಲ್ಲಿ ಬರೆಯುವ ಒಲವು ನನ್ನಲ್ಲುಂಟಾಗಿದ್ದರೆ ಮತ್ತು ಕನ್ನಡ ಕೃತಿಗಳನ್ನೋದಿ ಸವಿಯಬೇಕೆಂಬ ಅಭಿರುಚಿ ಮೂಡಿದ್ದರೆ ಅದಕ್ಕೆಲ್ಲ ಮುಖ್ಯ ಕಾರಣ ಅಜ್ಜ ಅಶ್ವತ್ಥರಾಯರು. ಕನ್ನಡ ನಾಲ್ಕನೆಯ ಇಯತ್ತೆಯಲ್ಲಿ ನಾನಿದ್ದಾಗಲೇ ನನಗೆ ಕುಮಾರವ್ಯಾಸ ಭಾರತವನ್ನು ಹೇಳಿಕೊಡಲು ಒಬ್ಬ ಶಿಕ್ಷಕನನ್ನೇ ನಿಯಮಿಸಿದ್ದರವರು. ಬೇಂದ್ರೆಯವರ ಬಗ್ಗೆ ನನ್ನಲ್ಲಿ ಅಭಿಮಾನ ಕುದುರುವುದಕ್ಕೆ ಅವರು ತಮ್ಮ ಮೊಮ್ಮಕ್ಕಳೆದುರು ಆಗೀಗ ಹೇಳುತ್ತಿದ್ದ ಅನುಭವಗಳೂ ಕಾರಣ. ಬೆಳಗಾಂವಿಯ ಸಾಹಿತ್ಯಸಮ್ಮೇಲನದಲ್ಲಿ ಬೇಂದ್ರೆಯವರು ‘ಹಕ್ಕಿ ಹಾರುತಿದೆ’ಯನ್ನು ಸಾದರಪಡಿಸಿ, ಕನ್ನಡ ಕಾವ್ಯದಲ್ಲಿ ನವೋದಯವನ್ನು ಸಾರಿದಾಗಿನ ಸಂದರ್ಭವನ್ನು ಅವರು ನಮ್ಮೆದುರು ವಿವರಿಸಿ ಹೇಳುತ್ತಿದ್ದಾಗ ನನಗೆಷ್ಟು ಅರ್ಥವಾಯಿತೊ ಹೇಳಲಾರೆ; ಆದರೆ ಏನೋ ಒಂದು ಅದ್ಭುತವನ್ನನುಭವಿಸಿದ ಭಾವನೆ ಮಾತ್ರ ನನ್ನಲ್ಲಿ ಆಗ ಮೂಡಿದುದನ್ನು ನಾನು ಮರೆಯಲಾರೆ. ಶಿವಮೊಗ್ಗ ಸಮ್ಮೇಲನಕ್ಕೆ ಹೋಗಿ ಬಂದನಂತರ ಪರಿಷತ್ಪತ್ರಿಕೆಯಲ್ಲಿ ಬಂದಿದ್ದ ಬೇಂದ್ರೆಯವರ ಭಾಷಣವನ್ನು ಅಶ್ವತ್ಥರಾಯರು ಒಂದು ದಿನ ನನ್ನಿಂದಲೇ ಓದಿಸಿ ಕೇಳಿದರು. ಓದುವಾಗ ನನ್ನಿಂದಾದ ತಪ್ಪುಗಳನ್ನು ತಿದ್ದಿ ಮತ್ತೆ ಮತ್ತೆ ಓದಿಸಿದರು. ಬಹುಶಃ ಅಂದು ಅಂಬಿಕಾತನಯರ ಕನ್ನಡ ಗಾಯಿತ್ರೀಸ್ತೋತ್ರ, ನೀರಿಳಿಯದ ನನ್ನ ಗಂಟಲಿಗೆ ಕಡುಬಂ ತುರುಕಿದಂತಾಗಿರಬೇಕು. ಆದರೆ ಅವರ ‘ಗಂಗಾವತರಣ’ದ ಭಗೀರಥ ಗಾನದ ನಾದ ಇಂದಿಗೂ ನನ್ನ ಕಿವಿಗಳಲ್ಲಿ ಧ್ವನಿಸುತ್ತಲೇ ಇದೆ.

---

1 ಶ್ರೀ ಅಶ್ವತ್ಥರಾಯರು ಈ ಲೇಖನವನ್ನು ೧೨-೭-೧೯೪೫ ರಂದು ಬರೆದು ಕಳಿಸಿದ್ದರು. ಆದರೆ ದುರ್ದೈವದಿಂದ ‘ಕವಿವರ ಬೇಂದ್ರೆ’ ಗ್ರಂಥ ಪ್ರಕಟವಾಗುವ ಮುನ್ನ ಅವರು ೧೨-೪-೧೯೬೬ ರಂದು ಬಸ್ ಅಪಘಾತವೊಂದರಲ್ಲಿ ಆಕಸ್ಮಿಕವಾಗಿ ನಿಧನಹೊಂದಿದರು.

೧೯೪೧ ರಲ್ಲಿ ಶಿರಹಟ್ಟಿಯ ಲೋಕಮಾನ್ಯ ವಾಚನಾಲಯ ತನ್ನ ಹೀರಕ ಮಹೋತ್ಸವವನ್ನು ಆಚರಿಸಿತು. ಅದೊಂದು ಪುಟ್ಟ ಸಾಹಿತ್ಯಸಮ್ಮೇಲನವೇ ಆಗಿರಬೇಕು. ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಮುಖ್ಯ ಅತಿಥಿಯಾಗಿದ್ದರು. ಆಲೂರ ವೆಂಕಟರಾಯರು, ಮುದವೀಡು ಕೃಷ್ಣರಾಯರು, ಬೇಂದ್ರೆಯವರು, ಬೆಟಗೇರಿ ಕೃಷ್ಣಶರ್ಮರು ಬಂದುದನ್ನು ನೋಡಿದ ನೆನಪು ನನಗೆ. ಬಹುಶಃ ಬೇಂದ್ರೆಯವರನ್ನು ನಾನು ಮೊದಲು ನೋಡಿದ್ದು ಆಗಲೇ ಇರಬೇಕು. ಆದರೆ ಆಗ ಅವರ ಮಾತು ಕೇಳಿದ ನೆನಪು ನನಗಿಲ್ಲ. ಅದಕ್ಕೂ ತುಸು ಮೊದಲು ಲಕ್ಷ್ಮೇಶ್ವರದಲ್ಲಾದ ಪಂಪಮಹೋತ್ಸವಕ್ಕೆ ಅಜ್ಜ ನನ್ನನ್ನು ಕರೆದುಕೊಂಡು ಹೋಗಿದ್ದರಾದರೂ ಅಲ್ಲಿ ಬೇಂದ್ರೆಯವರನ್ನು ನಾನು ನೋಡಿದ ನೆನಪಿಲ್ಲ. ಆದರೆ ಮುಂದೆ ೧೯೪೪ ರ ಕೊನೆಯಲ್ಲಿ ಆಗ ಸಾಂಗಲಿ ಸಂಸ್ಥಾನದ ಭಾಗವೇ ಆಗಿದ್ದ ರಬಕವಿಯಲ್ಲಿ ಸಾಹಿತ್ಯ ಸಮ್ಮೇಲನವು ಶ್ರೀ ಬಸವನಾಳರ ಅಧ್ಯಕ್ಷತೆಯಲ್ಲಿ ಜರುಗಿತು. ಶಿರಹಟ್ಟಿಯ ಗೆಳೆಯರ ಗುಂಪಿನವರು ಅಲ್ಲಿ ಅಭಿನಯಿಸುವುದಕ್ಕೆಂದು 'ಭೀಷ್ಮಪ್ರತಿಜ್ಞೆ' ಎಂಬ ನಾಟಕ ಕೂಡಿಸಿದ್ದರು. ಅದರಲ್ಲಿ ನನಗೆ ಯಾವ ಪಾತ್ರವೂ ಇರಲಿಲ್ಲವಾದರೂ ಅಜ್ಜನ ಮಧ್ಯಸ್ಥಿಕೆಯಿಂದ ನಾನು ಮತ್ತು ನನ್ನ ಇನ್ನೊಬ್ಬ ಸಾಹಿತ್ಯಪ್ರೇಮಿ ಗೆಳೆಯ ಈ ನಾಟಕ ತಂಡದೊಡನೆ ರಬಕವಿಗೆ ಹೋದೆವು. ಅಲ್ಲಿ ಬೇಂದ್ರೆಯವರನ್ನು ಕಂಡಾಗ ಇನ್ನಾರಿಗಿಂತಲೂ ಇವರು ಭಿನ್ನ ಎಂಬ ಭಾವನೆ ನನ್ನಲ್ಲಿ ಮೂಡಿದ್ದು ಇನ್ನೂ ಉಳಿದುಕೊಂಡಿದೆ. ಹಿಂದಿನ ಸಮ್ಮೇಲನಾಧ್ಯಕ್ಷರಾಗಿದ್ದ ಅವರು ಹೊಸ ಅಧ್ಯಕ್ಷರಿಗೆ ಸ್ಥಾನ ವಹಿಸಿಕೊಡಬೇಕಿತ್ತು. ಆ ಮುಹೂರ್ತ ಪ್ರಾಪ್ತವಾದಾಗ ಬೇಂದ್ರೆ ಕೈಯಲ್ಲೊಂದು ತೆಂಗಿನಕಾಯಿ ಹಿಡಿದುಕೊಂಡು ಎದ್ದು ಬಂದರು. ಮಠವೊಂದರ ಪೀಠಾಧಿಪತಿ ಮುಂದೆ ಬರಲಿರುವವರಿಗೆ ಕೊಡುವ ತೆರದಲ್ಲಿ ಬಸವನಾಳರಿಗೆ 'ಕಾಯಿ' ಕೊಟ್ಟರು.

ಮುಂದೆ ೧೯೪೭ ರಲ್ಲಿ ಹುಬ್ಬಳ್ಳಿಯಲ್ಲಿ ಶ್ರೀ ಅ. ನ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಧಾರವಾಡ ಜಿಲ್ಲಾ ಸಾಹಿತ್ಯಸಮ್ಮೇಲನ ನಡೆಯಿತು. ಆಗ ಧಾರವಾಡದಲ್ಲಿ ಹೈಸ್ಕೂಲ್ ವಿದ್ಯಾರ್ಥಿಗಳಾಗಿದ್ದ ನಾವು ನಾಲ್ಕು ಜನ ಗೆಳೆಯರು ಒಂದು ಬಗೆಯ 'ಭಕ್ತಿ'ಯಿಂದಲೇ ಸಮ್ಮೇಲನಕ್ಕೆ ಬಂದಿದ್ದೆವು. ಆಗ ಶಿರಹಟ್ಟಿಯಿಂದ ಮತ್ತಾರೂ ಬಂದಿರದ್ದರಿಂದ ನಮ್ಮನ್ನೇ ಈ ತಾಲೂಕಿನ ಪ್ರತಿನಿಧಿಗಳೆಂದು ಮನ್ನಿಸಿದರು. ಆದರಿಂದ ನಮಗಾದ ಆನಂದ ಅಷ್ಟಿಷ್ಟಲ್ಲ. ಆದರೆ ಅದಕ್ಕಿಂತ ಹೆಚ್ಚಿನ ಆನಂದ ನಮಗಿನ್ನು ಬರಲಿತ್ತು. ಶಿರಹಟ್ಟಿಯ ಪ್ರತಿನಿಧಿಗಳು ಬಂದಿದ್ದಾರೆಂದು ತಿಳಿದೊಡನೆಯೆ ಬೇಂದ್ರೆಯವರು ನಮ್ಮನ್ನು ಕಾಣಬಯಸಿದ್ದಾರೆಂದು ಶ್ರೀ ನರೇಗಲ್ಲ ಪ್ರಹ್ಲಾದರಾಯರು ನಮಗೆ ಹೇಳಿದರು. ಮಲ್ಲಿಕಾರ್ಜುನ ನಾಟ್ಯಗೃಹದ (ಈ ಸಾಹಿತ್ಯಸಮ್ಮೇಲನ ನಡೆದದ್ದು ಅಲ್ಲಿಯೇ) ಹೊರಬದಿಗೆ ಬೇಂದ್ರೆಯವರು ನಮ್ಮೆಲ್ಲರನ್ನೂ ಕಂಡು ಆತ್ಮೀಯತೆಯಿಂದ ಮಾತಾಡಿ-

ಸಿದರು. ಶಿರಹಟ್ಟಿಯ ತಮ್ಮೆಲ್ಲ ಮಿತ್ರರ ಯೋಗಕ್ಷೇಮವನ್ನೂ ವಿಚಾರಿಸಿದರು. ಶಿರಹಟ್ಟಿಯ ಶ್ರೀ ಘೋಡಪ್ಪ ದೇಶಪಾಂಡೆ, ಶ್ರೀ ಶಿವರಾಮಪಂತ ಭಾತಖಾಂಡೆ, ಶ್ರೀ ಬಾಪೂರಾವ ಮಂಗಸೂಳಿ, ದಿ. ರಾಮರಾವ ಬಾಳೇಹೊಸೂರ ಮುಂತಾದವರೆಲ್ಲ ಶ್ರೀ ಬೇಂದ್ರೆಯವರ ಮಿತ್ರರು.

ಇಲ್ಲಿ ಬೇಂದ್ರೆಯವರೊಡನೆ ಮೊದಲ ಬಾರಿ ಮಾತಾಡಿದ ನನಗೆ ನಮ್ಮೂರ ಬಗ್ಗೆ ಅವರಿಗಿರುವ ಆತ್ಮೀಯತೆಯನ್ನು ಕಂಡು ಪುಳಕಿವಾಯಿತು. ನಂತರದ ನಾಲ್ಕಾರು ವರ್ಷ ಅವರೊಂದಿಗೆ ವಿಶೇಷ ಸಂಪರ್ಕ ನನಗೆ ಬರಲಿಲ್ಲ. — ಅವರಾಗ ಸೊಲ್ಲಾಪುರದಲ್ಲಿ ವಾಸವಾಗಿದ್ದರಿಂದಲೋ ಏನೊ. ಆದರೆ ೧೯೪೯-೫೦ ರಲ್ಲಿ ನಾನು ಸಾಂಗಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಕಲಿಯುತ್ತಿದ್ದಾಗ ನಡೆದೊಂದು ಘಟನೆ ಪುನಃ ಬೇಂದ್ರೆ ಪರಿಚಯವನ್ನು ಪುನರುಜ್ಜೀವನಗೊಳಿತು. ನಮ್ಮ ಕಾಲೇಜಿನ ಕರ್ನಾಟಕ ಸಂಘದಲ್ಲಿ ಕವಿ ರನ್ನನ ಸಹಸ್ರವರ್ಷೋತ್ಸವ. ಪ್ರೊ. ಬೇಂದ್ರೆ ಮುಖ್ಯ ಅತಿಥಿ. 'ರನ್ನನ ಗದಾಯುದ್ಧದಲ್ಲಿ ವೀರರಸ' ಎಂಬ ಚಿಕ್ಕ ಪ್ರಬಂಧವನ್ನು ಸ್ನಾತಕೋತ್ತರ ವಿದ್ಯಾರ್ಥಿಯೊಬ್ಬರು ಬರೆದಿದ್ದರು. ಅಂದಿನ ಸಭೆಯಲ್ಲಿ ನಾನ-ದನ್ನು ಓದುವುದಿತ್ತು. ಕನ್ನಡದಲ್ಲಿರುವುದನ್ನು ಓದಲು ಪೂರ್ವಸಿದ್ಧತೆ ಅನಾವಶ್ಯಕ ವೆಂಬ ಗ್ರಹಿಕೆಯಿಂದ ನಾನು ವೇದಿಕೆಯ ಮೇಲೆ ನಿಂತಾಗಲೇ ಆ ಲೇಖನವನ್ನು ಸರಿಯಾಗಿ ನೋಡಿದ್ದು. ಆದರೆ ಆಗ ನನ್ನ ಕೈಯಲ್ಲಿ ರನ್ನನ ವೀರಗನ್ನಡ ವಿಕಟ ಕನ್ನಡವಾಗಿಬಿಟ್ಟಿತು. ನನ್ನ ಈ ಅವಸ್ಥೆ ಎದುರು ಕುಳಿತವರೆಲ್ಲರಿಗೂ ನಗು ಬರಿಸಿದರೆ, ಪ್ರಬಂಧ ಬರೆದವರು ತಲೆ ತಗ್ಗಿಸಿದ್ದರು. "ಹೀಗೆ ಓದುವುದಕ್ಕಿಂತ ಇದನ್ನು ಓದದಿದ್ದರೇನೇ ನೆಟ್ಟಗಿತ್ತು," ಎಂದು ಶ್ರೀ ಬೇಂದ್ರೆ ಉದ್ಗರಿಸಿದರು. ನಾನು ನಾಚಿಕೆಯಿಂದ ನೀರಾಗಿಬಿಟ್ಟೆ. ಅಂದು ರಾತ್ರಿ ಬೇಂದ್ರೆಯವರನ್ನು ಸೊಲ್ಲಾ-ಪುರಕ್ಕೆ ಹೋಗುವ ಗಾಡಿಯಲ್ಲಿ ಕೂಡಿಸಿಬರಲು ನಾನೂ ನನ್ನ ಇನ್ನೊಬ್ಬ ಮಿತ್ರರೂ ಮಿರಜಿಯವರೆಗೆ ಅವರೊಂದಿಗೇ ಹೋಗಬೇಕಾಯಿತು. ಅವರು ತಮ್ಮ ಕಾವ್ಯವನ್ನೊಳಗೊಂಡು ಹತ್ತಾರು ವಿಷಯಗಳನ್ನು ನಮ್ಮೊಂದಿಗೆ ಮಾತಾಡಿದರು, ಆದರೆ ಅಂದು ಬೆಳಿಗ್ಗೆ ಪ್ರಬಂಧವನ್ನೋದುವಾಗ ನನ್ನಿಂದಾದ ಪ್ರಮಾದದ ಕುರಿತು ಚಕಾರವನ್ನೂ ಎತ್ತಲಿಲ್ಲ. ಬದುಕಿದೆಯಾ ಬಡ ಜೀವವೆ ಎಂದುಕೊಂಡೆ.

ಅಲ್ಲಿಂದ ಮಾತ್ರ ಎಲ್ಲಿ ಭೆಟ್ಟಿಯಾದರೂ ಬೇಂದ್ರೆಯವರು ನನ್ನನ್ನು ಗುರು-ತಿಸುತ್ತಾರೆ; ಶಿರಹಟ್ಟಿಯನ್ನೊಳಗೊಂಡು ಹತ್ತೆಂಟು ವಿಷಯಗಳ ಬಗ್ಗೆ ಮಾತಾಡು ತ್ತಾರೆ.

ಮುಂದೆ ಎಷ್ಟೋ ಸಲ ಶ್ರೀ ಬೇಂದ್ರೆ ಶಿರಹಟ್ಟಿಗೆ ಬಂದು ಹೋಗಿದ್ದಾರೆ. ಗದುಗಿನ ಮೂಲಕವೋ, ಗುಡಿಗೇರಿ ಲಕ್ಷ್ಮೇಶ್ವರಗಳ ಮಾರ್ಗವಾಗಿಯೋ ಶಿರಹಟ್ಟಿಗೆ

ಬರುವಾಗಲೆಲ್ಲ ಸುಖವಾಗಿಯೇ ಅವರು ಬಂದಿದ್ದಾರಂತೆ. ಆದರೆ ಅಲ್ಲಿಂದ ಮರಳಿ ಹೋಗುವಾಗ ಮಾತ್ರ ಮುಕ್ಕಾಲು ಪಾಲು ಏನೇನೋ ಸಾಹಸಮಾಡಿಯೇ ಹೋಗಬೇಕಾಗುತ್ತಿತ್ತೆಂದು ಅವರು ಲಘು ಹಾಸ್ಯದಲ್ಲಿ ಹೇಳಿದ್ದನ್ನು ಕೇಳಿದ್ದೇನೆ.

ಕವಿ ಬೇಂದ್ರೆಯವರನ್ನು ಕರ್ನಾಟಕ ಬೇಗ ಗುರುತಿಸಿ ಗೌರವಿಸಿದೆ. ಐವತ್ತಕ್ಕೆ ಮುನ್ನವೇ ಅವರು ಸಾಹಿತ್ಯಸಮ್ಮೇಲನದ ಅಧ್ಯಕ್ಷರಾಗಿದ್ದರು. ಧಾರ-ವಾಡ ಅವರ ಐವತ್ತನೆಯ ವರ್ಧಂತಿಯನ್ನಾಚರಿಸಿದರೆ, ಸೋಲ್ಲಾಪುರ ವಜ್ರ-ಮಹೋತ್ಸವ ಮಾಡಿತು. ಬೇಂದ್ರೆ ತಮ್ಮವರು, ತಮ್ಮೂರವರೆಂದು ಹೇಳಿಕೊಳ್ಳುವು-ದರಲ್ಲೇ ಅಭಿಮಾನಪಡುತ್ತಿದ್ದ ಶಿರಹಟ್ಟಿಯ ನಾಗರಿಕರು ಎಪ್ಪತ್ತನೆಯ ಜನ್ಮ ದಿನದಂದು ಅವರನ್ನು ಗೌರವಿಸುವ ಮಹತ್ಕಾರ್ಯ ಮಾಡಿದರು. ನಮಗೆಲ್ಲ ಆದೊಂದು ಹಬ್ಬ. ಆಗ ಕರ್ನಾಟಕದ ಮುಖ್ಯ ಮಂತ್ರಿಯಾಗಿದ್ದ ಶ್ರೀ ನಿಜಲಿಂಗಪ್ಪ-ನವರು ಸಮಾರಂಭವನ್ನು ಉದ್ಘಾಟಿಸಿದರೆ, ಹೈಕೋರ್ಟಿನ ನ್ಯಾಯಮೂರ್ತಿ ಶ್ರೀ ತುಕೋಳರು ಅಧ್ಯಕ್ಷರಾಗಿದ್ದರು. ಬೇಂದ್ರೆಯುವರ ಮಿತ್ರರೂ, ಅಭಿಮಾನಿಗಳೂ ದೊಡ್ಡ ಸಂಖ್ಯೆಯಲ್ಲಿ ನೆರದಿದ್ದ ಅಂದಿನ ಸಭೆಯ ಚಿತ್ರ ಇಂದಿಗೂ ನನ್ನ ಕಣ್ಣೆದುರೇ ಕಟ್ಟಿದಂತಾಗುವುದಾದರೂ ಸಭೆ ಮುಗಿದ ನಂತರ ನನ್ನ ಪರಿಚಿತ ರೈತನೊಬ್ಬನ ಉದ್ಗಾರಮಾತ್ರ ನನ್ನ ನೆನಪಿನಲ್ಲಿ ಇನ್ನೂ ಹಸಿರಾಗಿಯೇ ಉಳಿದಿದೆ. “ ಹೌದು ಯಪ್ಪಾ ಇಂವಾ ಖರೆ ದೊಡ್ಡ ಮನಸ್ಯಾ ! ತೆಲ್ಯಾಗಿನ ಕೂದಲ ನೆರತರೂ ಮೀಸಿ ಕಪ್ಪಽ ಅದಾವ ನೋಡು ! ” ಎಂದನವ.

ಹಿಂದು–ಮುಸ್ಲಿಂ ಸಾಮರಸ್ಯದ ಸಂಕೇತದಂತಿರುವ ಶಿರಹಟ್ಟಿಯ ಶ್ರೀ ಫಕೀರಸ್ವಾಮಿಗಳ ಮಠದ ಪರಂಪರೆಯನ್ನು ಮೆಚ್ಚಿದ ಬೇಂದ್ರೆಯುವರು, ಶಿರ-ಹಟ್ಟಿಯಲ್ಲಾಗ ಆಡಿದ ಒಂದು ಮಾತಿನ ಬಗ್ಗೆ ನಂತರ ಅನಾವಶ್ಯಕ ಗುಲ್ಲೆದ್ದಿತು. “ ಸಭೆಯ ಅಧ್ಯಕ್ಷ ತುಕೋಳರು ಜೈನರು, ಉದ್ಘಾಟಕ ನಿಜಲಿಂಗಪ್ಪನವರು ಲಿಂಗಾಯತರು, ನಾನು ಬ್ರಾಹ್ಮಣ. ಆದರೆ ನಮ್ಮ ನಮ್ಮ ಧರ್ಮಗಳನ್ನು ನಾವೆಲ್ಲ ಮನೆಯಲ್ಲೇ ಕಟ್ಟಿಟ್ಟು ಬಂದಿದ್ದೇವೆ. ಇಲ್ಲಿ ನಮಗೆಲ್ಲ ಇರುವುದು ಮನುಷ್ಯಧರ್ಮವೊಂದೇ....” ಎಂದು ಅವರು ಹೇಳಿದ್ದನ್ನು, ಅಂದಿನ ಸಭೆಗೆ ಬಾರದಿದ್ದವರೊಬ್ಬರು, “ ಬೇಂದ್ರೆಯುವರು ಮುಖ್ಯಮಂತ್ರಿಗಳ ಜಾತಿಯನ್ನೆತ್ತಿ ಆಡಿಕೊಂಡರು. ” ಎಂದು ಟೀಕಿಸಿ ಪತ್ರಿಕೆಗಳಲ್ಲಿ ಬರೆದರು. ಸಭೆಯಲ್ಲಿ ಪ್ರತ್ಯಕ್ಷ ದರ್ಶಿಯಾಗಿದ್ದ ನಾನು ಕೊಟ್ಟ ಉತ್ತರ ಸಂಪಾದಕರ ಕಸದ ಬುಟ್ಟಿಯನ್ನು ಸೇರಿರಬೇಕು. ಅವರು ಅದನ್ನು ಪ್ರಕಟಿಸುವ ಗೋಜಿಗೆ ಹೋಗಲಿಲ್ಲ.

ಅಂದಿನ ಉತ್ಸಾಹದ ಭರದಲ್ಲಿ ಶಿರಹಟ್ಟಿಯ ನಾಗರಿಕರೂ, ಮುಂದಾಳುಗಳೂ ಆನೇಕ ಯೋಜನೆಗಳನ್ನು ಹಮ್ಮಿಕೊಂಡಿರುವುದಾಗಿ ಸಾರಿದರು. ಬೇಂದ್ರೆಯುವರ ಪೂರ್ವಜರ ಮನೆಯನ್ನು ಕಾಯ್ದಿಡುವುದಾಗಿಯೂ, ಅವರ ಹೆಸರಿನಲ್ಲಿ ಒಂದು

ಸಭಾಭವನ ಕಟ್ಟುವುದಾಗಿಯೂ ಸಾರಿದರು. ಸಭಾಭವನದ ಅಡಿಗಲ್ಲನ್ನೂ ಅಂದು ಹಾಕಲಾಯಿತು. ಆದರೆ ಕಾವು ಇಳಿದಂತೆ ಉತ್ಸಾಹವೂ ತಣ್ಣಗಾಗುತ್ತದೆ. ಹನ್ನೊಂದು ವರ್ಷಗಳ ನಂತರ ಬಹುಶಃ ಅಂದು ಚಪ್ಪಾಳೆತಟ್ಟಿ ಹರ್ಷಗೈದ ಎಲ್ಲರಿಗೂ ಅದೆಲ್ಲ ಮರೆತುಹೋಗಿರಲು ಬಹುದು.... ನಾವೆಲ್ಲ ಆರಂಭಶೂರರಂತೆ; ಹೌದೆ ?

ಶ್ರೀ ಬೇಂದ್ರೆ ಇತ್ತೀಚಿನ ವರ್ಷಗಳಲ್ಲಿ ಅದೆಷ್ಟೋ ವಾದವಿವಾದಗಳಿಗೆ ಕೇಂದ್ರ ವ್ಯಕ್ತಿಯಾಗಿ ಪರಿಣಮಿಸಿದ್ದಾರೆ. ಆದರೆ ಅವರಲ್ಲಿನ ‘ ಅಂಬಿಕಾತನಯ ’ನಿಗೆ ಮಾತ್ರ ಈ ಯಾವುದರ ಬಾಧೆಯೂ ತಟ್ಟುವುದಿಲ್ಲ. ಲೌಕಿಕದಲ್ಲಿದ್ದೂ ಅದನ್ನು ಮೀರಿನಿಂತ ಚೇತನ ಅದು .... ಆದರೂ ಲೌಕಿಕ ವ್ಯಾಪಾರಗಳಿಗೆ ಕೊನೆಯಿಲ್ಲ. ಅವರು ನಮ್ಮವರು ಎಂದು ಅಭಿಮಾನಪಡುವುದರ ಜೊತೆಗೆಯೇ, ನಮ್ಮೂರವರು ಎಂದು ಹೇಳಿಕೊಳ್ಳಲೂ ನಾವು ಮರೆಯುವುದಿಲ್ಲವಲ್ಲ.

§ § § §

೬೧

# ನಮ್ಮ ಸಾಹಿತ್ಯ, ಶಿಕ್ಷಣ ಹಾಗೂ ಜೀವನ

( ಬೇಂದ್ರೆಯವರೊಂದಿಗೆ ಸಹಚಿಂತನೆ )

ಸದಾನಂದ ನಾಯಕ

## ೧. ನನ್ನ ವಿಶ್ಲೇಷಣೆ:

ನಮ್ಮ ಕನ್ನಡ ಸಾಹಿತ್ಯವನ್ನು ಸ್ಥೂಲದೃಷ್ಟಿಯಿಂದ ನೋಡಿದಾಗ ಮುಖ್ಯ-ವಾಗಿ ಎರಡು ಭಾಗಗಳು ಕಂಡುಬರುವುವು. (ಅ)ಹಳೆಯದು. ಮತ್ತು (ಆ)ಹೊಸದು. ಅವುಗಳ ವೈಶಿಷ್ಟ್ಯವೆಂದರೆ :

ಅ. ಹಳೆಯದರಲ್ಲಿ ಜೈನ, ವೀರಶೈವ ಮತ್ತು ವೈಷ್ಣವ ಎಂಬ ವಿಭಾಗ-ಗಳಿವೆ. ಅವುಗಳ ಹಿನ್ನೆಲೆಯಲ್ಲಿ ಆಯಾ ವಿಚಾರಸರಣಿಗಳಿಗೆ ಹಾಗೂ ತಾತ್ತ್ವಿಕ ನಿರೂಪಣೆಗಳಿಗೆ ಸಂಬಂಧಿಸಿದ ಸಂಸ್ಕೃತ ಹಾಗೂ ಪ್ರಾಕೃತ ಗ್ರಂಥಗಳು ಆಧಾರ-ವಾಗಿವೆ.

ಆ. ಹೊಸದರಲ್ಲಿ ಆಂಗ್ಲ ಅಥವಾ ಪಾಶ್ಚಿಮಾತ್ಯ ಸಾಹಿತ್ಯದಿಂದ ಸ್ಫೂರ್ತಿ-ಗೊಂಡ ಸಾಹಿತ್ಯಪ್ರಕಾರಗಳಿಂದ ವಿವಿಧವಾಗಿ ಜೀವನವನ್ನು ಚಿತ್ರಿಸುವ ಪ್ರಯತ್ನ-ವಿದೆ.

ಅವುಗಳ ಸಾಮಾನ್ಯ ಲಕ್ಷಣವೆಂದರೆ —

೧. ಹಳೆಯದು ಮತಪ್ರಧಾನವಾಗಿದ್ದು ಕೆಳಗಿನ ಮತೇತರರನ್ನು ಪ್ರತಿ-ನಿಧಿಸುವುದಿಲ್ಲ :

ಅ. ಜೈನ, ವೀರಶೈವ ಹಾಗೂ ವೈಷ್ಣವ ಇವರನ್ನು ಒಳಗೊಳ್ಳದ ಇತರ ಹಿಂದುಗಳು.

ಆ. ಕನ್ನಡ ನಾಡೊಳಗಿನ ಹಿಂದುಗಳಲ್ಲದ ಮುಸಲ್ಮಾನ, ಕ್ರಿಸ್ತ, ಪಾರ್ಸಿ ಇತ್ಯಾದಿ ಗುಂಪುಗಳ ಸಾಹಿತ್ಯಸೃಷ್ಟಿ ಇಲ್ಲ ಅಥವಾ ಭಾವೈಕ್ಯದೃಷ್ಟಿಯಿಂದ ಪರ-ಸ್ಪರರ ಸಾಹಿತ್ಯಸೃಷ್ಟಿಯ ಕೊಡುಕೊಳಿಯು ಸಾಕಷ್ಟು ಇರುವುದಿಲ್ಲ.

೩. (ಅ) ಮತ್ತು (ಆ) ಗುಂಪುಗಳೊಳಗಿನ ಅಭಿಮಾನದ ಬೆಳವಣಿಗೆಯ ಮೂಲಕವಾಗಿ ಪರಸ್ಪರರ ಸಾಮಾಜಿಕ ಜೀವನದಲ್ಲಿ ಹೊಂದಿಕೆ ಇಲ್ಲ. ಮತಭೇದ ಗಳ ಬೆಳವಣಿಗೆಯಿಂದ ಜೀವನದಲ್ಲಿ ಸಾಮರಸ್ಯವಿಲ್ಲ, ಸಮಗ್ರತೆಯಿಲ್ಲ.

೨. ಹೊಸದು (Modern) ಪಾಶ್ಚಿಮಾತ್ಯ ಪ್ರಭಾವಗಳನ್ನು ಒಳಗೊಂಡು ವಿಧವಿಧವಾಗಿ ಬೆಳೆಯುತ್ತಲಿದೆ. ಎಲ್ಲ ವಿಭಾಗಗಳ ಜೀವನದ ವೈವಿಧ್ಯವನ್ನು ಬಿಚ್ಚಿ ತೋರಿಸುತ್ತಿದ್ದರೂ, ಎಲ್ಲರ ಹೊಂದಿಕೆ, ಸಾಮಾಜಿಕ ಉನ್ನತಿ ಹೇಗೆ ಆಗ ಬೇಕು ಎಂಬ ಸೂತ್ರವನ್ನು ಕಾಣುತ್ತಿಲ್ಲ.

೩. ಆಧುನಿಕ ಜೀವನದಲ್ಲಿ ಭಾರತೀಯ ದೃಷ್ಟಿಯಿಂದ ಕೆಲವೊಂದು ಮಹ- ತ್ವದ ಪ್ರಯತ್ನಗಳೂ, ಸ್ಥಿತ್ಯಂತರಗಳೂ ಆಗಿವೆ. ಭಾರತೀಯ ನವೋದಯ (Renaissance) ಪ್ರೇರಕರಾದ ಶ್ರೀ ರಾಮ ಮೋಹನರಾಯರಿಂದ ಹಿಡಿದು ಶ್ರೀ ನೆಹರೂರ ವರೆಗೆ (ಶ್ರೀ ರಾಮಕೃಷ್ಣ ಪರಮಹಂಸರು, ಸ್ವಾಮೀ ದಯಾನಂದ ಸರ- ಸ್ವತಿಯವರು, ಸ್ವಾಮೀ ವಿವೇಕಾನಂದರು, ಶ್ರೀಮತಿ ಎನಿಬೆಸೆಂಟರು, ಲೋಕ- ಮಾನ್ಯ ಟಿಳಕರು, ರವೀಂದ್ರರು, ಅರವಿಂದರು, ಗಾಂಧೀಜಿಯವರು, ಜಗದೀಶ- ಚಂದ್ರ ಬೋಸರು, ರಾಧಾಕೃಷ್ಣನ್ನರು) ಈ ವಿಸ್ತಾರವಿದೆ. ಸಾಹಿತ್ಯದಲ್ಲಿ, ವಿಜ್ಞಾನ ದಲ್ಲಿ, ತಾತ್ತ್ವಿಕತೆಯಲ್ಲಿ, ಸಮಾಜ ಸುಧಾರಣೆಯ ಪ್ರಗತಿಯಲ್ಲಿ ಅವರೆಲ್ಲರಿಂದ ಸಾಕಷ್ಟು ವಿಚಾರಮಂಥನವು ನಡೆದಿದೆ. ಹಿಂದೂಧರ್ಮದ ಹಿಂದಿನ ಇತಿಹಾಸವೇ ಬೇರೆ. ಇಂದಿನ ಹಿಂದೂಸಮಾಜವು ಆಧುನಿಕವಾದ ಕ್ರಾಂತಿಕಾರಕ ವಿಚಾರಗಳನ್ನು ಒಳಗೊಂಡು ಪ್ರಗತಿಪರವಾಗುವಂತೆ ಈ ವಿಚಾರ ಪ್ರವರ್ತಕರೆಲ್ಲರೂ ಭಾರತೀಯ ಭಾವೈಕ್ಯಕ್ಕೆ ಶ್ರಮಿಸಿದ್ದಾರೆ. ಆದರೆ ಜನಸಾಮಾನ್ಯರಲ್ಲಿ ಅಷ್ಟೇ ಅಲ್ಲ, ಕಲಿತವ- ರೆನಿಸುವವರಲ್ಲಿಯೂ ಈ ಹೊಸ ವಿಚಾರಗಳ ಸಮನ್ವಯದಿಂದ ಉದ್ಭವಿಸುವ ಹೊಸ ದೃಷ್ಟಿ, ಹೊಸ ಆಚರಣೆಗಳಿಗೆ ಆಸ್ಪದವಿರುವುದಿಲ್ಲ. ಯಾಕೆಂದರೆ ಅಂಥ ಆದರ್ಶ- ಗಳನ್ನು ಒಳಗೊಂಡ ಜೀವನವನ್ನು ಪ್ರತಿಬಿಂಬಿಸುವ ಸಾಹಿತ್ಯದ ಕೊರತೆ ಇದೆ. ಪ್ರತಿಬಿಂಬದ ಕೊರತೆಗೆ ಬಿಂಬದ ಅಭಾವವೇ ಕಾರಣವೆಂಬಂತೆ ತೋರುತ್ತದೆ— ನಮ್ಮ ಇಂದಿನ ಶಿಕ್ಷಣಕ್ರಮದಲ್ಲಿ ವಿಶಿಷ್ಟವಾದ ಹಂತಗಳಿಗೆ ಮೀಸಲಾಗಿರುವ ಅವ- ಧಿಯು ಕ್ರಮವಾಗಿ ೭ ವರ್ಷ, ೧೦ವರ್ಷ (S.S.L.C), ೧೨ವರ್ಷ (P.U.C) ೧೫ವರ್ಷ (Graduate) ಮತ್ತು ೧೭ವರ್ಷ (Post Graduate) ಹೀಗಿದ್ದು ಯಾವ ಹಂತದಲ್ಲಿಯೂ ಈ ಸಮನ್ವಯ ದೃಷ್ಟಿಯ ಹಾಗೂ ಹೊಸ ದೃಷ್ಟಿಯ ಲವ. ಲವಿಕೆಯ ಲವಲೇಶವೂ ಎದ್ದು ಕಾಣುವುದಿಲ್ಲ. ದೃಷ್ಟಿಯೇ ಇಲ್ಲದಿರುವಾಗ ಸೃಷ್ಟಿ ಎಲ್ಲಿ?

೪. ಹೊಸ ಜನಾಂಗದಲ್ಲಿ ಹೊಸ ದೃಷ್ಟಿಯು ಮೂಡಲೇಬೇಕು. ಅದರ ಪ್ರೇರಣೆ ಸಾಹಿತ್ಯದಿಂದಲೇ ಪಡೆಯಬೇಕಾಗುವುದು. ವಿದ್ಯಾರ್ಥಿ ದೆಸೆಯಲ್ಲಿ ಬೆಳೆದು

ಬರಬೇಕಾದ ವಿಶಾಲವಾದ ಮಾನವೀ ಮನೋಭಾವ, ಶೀಲಸಂಪನ್ನತೆ, ಇವು ಶಿಕ್ಷಣದ ಹಂತವು ೧೨ ವರ್ಷ ಮಧ್ಯಂತರವೆಂದು ತಿಳಿದರೂ ಅಷ್ಟು ದೀರ್ಘವಾದ ಅವಧಿಯಲ್ಲಿಯೂ ಬರುತ್ತಿಲ್ಲವೆಂದರೆ ಸದ್ಯದ ಕ್ರಮದಲ್ಲಿ ವಿಶೇಷವಾದ ಒಂದು ತಿರುವನ್ನು ಕಲ್ಪಿಸಬೇಕಾಗುವುದು. ಆ ತಿರುವಿಗೆ ಯೋಗ್ಯವಾದ ಆಚರಣಶೀಲ ಹಾಗೂ ಆದರ್ಶವ್ಯಕ್ತಿಗಳು ತಮ್ಮ ಕೊಡುಗೆಯನ್ನು ನೀಡಬೇಕು. ಅದು ಕೇವಲ ಪರೀಕ್ಷೆಗಳನ್ನು ಕಟ್ಟುವುದರಿಂದ ಯಾವ ವಿದ್ಯಾರ್ಥಿಯಲ್ಲಿಯೂ ಕಂಡುಬರಲಾರದು. ಅಲ್ಲಿ ಸಂಕಲ್ಪಗಳಿಗಿಂತ ವಿಕಲ್ಪಗಳೇ ಹೆಚ್ಚಾಗಿ ಪ್ರದರ್ಶಿತವಾಗುವುವು.

೫. ಇಂದು ಮುಖ್ಯವಾಗಿ ಬೇಕಾಗಿರುವುದು — ಸಮಗ್ರವಾದ ಸಮನ್ವಯ ದೃಷ್ಟಿಯಿಂದ ಪ್ರಾಚೀನ, ಅರ್ವಾಚೀನ ಅದರಂತೆಯೇ ಪಾಶ್ಚಿಮಾತ್ಯ ವಿಚಾರವಂತರು ಯಾವ ಸೃಜನಾತ್ಮಕ ಚಿಂತನೆಗಳನ್ನು ನಮ್ಮ ಮುಂದೆ ಮಂಡಿಸಿರುವರೆಂಬುದರ ಅರಿವು–ಅದು ನಮ್ಮ ವಿದ್ಯಾರ್ಥಿಗಳಿಗೆ ಬೇಕು. ಅಂಥ ವಿಚಾರಗಳನ್ನು ಪ್ರತಿಬಿಂಬಿಸುವ ಸಾಹಿತ್ಯವು ಬೆಳೆಯಬೇಕು. ಅದನ್ನು ತಿಳಿದುಕೊಂಡು ಅರಗಿಸಿಕೊಂಡ ಹಿರಿಯರೂ ಅವರ ಮಾರ್ಗದರ್ಶನದಲ್ಲಿ ಮುಂದುವರೆಯುವ ಕಿರಿಯರ ಬಳಗವೂ ಹೆಚ್ಚಾಗಿ ಬೆಳೆಯಬೇಕು. ಸಾಹಿತ್ಯವು ಜೀವನದ ಪ್ರತಿಬಿಂಬವಷ್ಟೇ ಅಲ್ಲ ಉತ್ತಮ ಜೀವನವೂ, ಉದಾತ್ತ ಸಾಹಿತ್ಯದ ಪ್ರತಿಬಿಂಬವಾಗಬೇಕು. ಜೀವನದ ಅಂಥ ಉತ್ತಮತೆಯನ್ನು ಒಳ್ಳೆಯ ಶಿಕ್ಷಣವು ಸಾಧಿಸುವಂತಾಗಬೇಕು. ಇದು ಭವಿಷ್ಯದಲ್ಲಿ ರೂಪಗೊಳ್ಳಬೇಕಾದ ಪ್ರಗತಿಪರವಾದ ಜೀವನದ ಲಕ್ಷಣವೆಂದು ತೋರುತ್ತದೆ.

ಇಂದಿನ ಜೀವನದಲ್ಲಿ ಆರ್ಥಿಕ ಉನ್ನತಿಯು ಸಾಮಾಜಿಕ ಸುಧಾರಣೆಯ ಕ್ರಮವೆಂದು ಭಾವಿಸಲಾಗಿದೆ. ಸಮಾಜವಾದದ ವಿಚಾರಸರಣಿಯು ಆ ಕ್ರಮವನ್ನು ಅನುಸರಿಸುತ್ತಲಿದೆ. ಆರ್ಥಿಕ ಉತ್ಪಾದನೆಯಲ್ಲಿ ತೊಡಗಿದ ವ್ಯಕ್ತಿನಿಷ್ಠವಾದ ಸ್ಪರ್ಧೆ–ಅಂತಃಸ್ಪರ್ಧೆಗಳು ಶೋಷಣೆಯ ವಲಯವನ್ನು ವಿಸ್ತಾರಗೊಳಿಸಿವೆ. ಅದರಿಂದಾಗಿ ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳು ಉರುಳಾಡಿ ಹೋಗಿರುವುದು ಸ್ವಾಭಾವಿಕವಾಗಿದೆ. ಅಂತೆಯೇ ಇಂದು ಸಾಹಿತ್ಯದ ಹಾಗೂ ಶಿಕ್ಷಣದ ಅಂತಃಶಕ್ತಿಯು ನಿಃಸತ್ವವಾದಂತಾಗಿದೆ. ಹೀಗೆ ಮುಗ್ಗಟ್ಟಿನಲ್ಲಿ ಸಿಲುಕಿದ ಜೀವನವನ್ನು ಚೇತರಿಸಲು Job - Oriented ಮಾತ್ರವಲ್ಲದೆ Value - Oriented (ಮೌಲ್ಯಪ್ರಧಾನ) ಶಿಕ್ಷಣವೂ ಅವಶ್ಯವಾಗಿರುವುದೆಂದು ಒತ್ತಿ ಹೇಳಬೇಕಾಗುವುದು. ಮೌಲ್ಯಪ್ರಧಾನವಾದ ಶಿಕ್ಷಣವನ್ನು ರೂಪಿಸುವ ಮಾರ್ಗದಲ್ಲಿ ಕ್ರಾಂತಿಕಾರಕ ದೃಷ್ಟಿಯನ್ನು ಹೊಂದಿರುವ ನವವಿಸರ್ಗದ ಸಾಹಿತ್ಯ ಸೃಷ್ಟಿಯಿಂದ ಕವಿವರ್ಯ ಬೇಂದ್ರೆಯವರು ಮಾನವಜನಾಂಗಕ್ಕೆಯೇ ಮಹತ್ವಪೂರ್ಣವಾದ ಕಾಣಿಕೆಯನ್ನು ಸಲ್ಲಿಸಿರುವರೆಂದು ನನ್ನ ಭಾವನೆ.

**೨. ಪೂಜ್ಯ ಬೇಂದ್ರೆಯವರ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು:**

೧. ಪಂಪನಂತೆ ಬೇಂದ್ರೆಯವರು ಒಂದು ಸಾಹಿತ್ಯ ನವವಿಸರ್ಗವಾಗುವ ಕಾಲಕ್ಕೆ ಉದಿಸಿದ್ದಾರೆ. ಪಂಪ ಹೇಳುತ್ತಾನೆ— ಲೌಕಿಕ ಕಾವ್ಯವೆಂದರೆ ಭಾರತ-ದಂತೆ ಅಣ್ಣ-ತಮ್ಮಂದಿರನ್ನು ಕೊಂದಾದರೂ ರಾಜ್ಯ ಗಳಿಸಬೇಕು. ಜೈನಕಾವ್ಯ ಗಳು ಭಾರತೀಯ ತತ್ವಪ್ರಣಾಳಿಗೆ ಬೇಸತ್ತು ಕಾಮಮುಕ್ತನಾಗಬೇಕು ಎನ್ನು-ತ್ತವೆ. ಆದರೆ ವೀರಶೈವರಲ್ಲಿ ಶೈವರುದ್ರಸಂಪ್ರದಾಯದವರು ಈ ಲೌಕಿಕ, ಪಾರಲೌಕಿಕ ಪ್ರಶ್ನೆಯನ್ನು ರೌದ್ರದಿಂದ ಬಿಡಿಸಬೇಕು, ಹಿಂಸೆಯಿಂದ ಬಿಡಿಸ-ಬಹುದು ಅನ್ನುತ್ತಾರೆ. ಆದರೆ ವಾಸುದೇವ - ಪ್ರತಿವಾಸುದೇವರಿಗೂ ಈ ಪ್ರಶ್ನೆ ಬಿಡಿಸಲಿಕ್ಕೆ ಆಗುವುದಿಲ್ಲ. ೬೩ ಶಲಾಕಾ ಪುರುಷರು ಲೆಕ್ಕಕ್ಕೆ ಮಾತ್ರ ೬೩. ಆದರೆ ಅವರು ಬಿಡಿಸಿದ್ದೇನು ?

೨. ಹರಿಹರನಿಂದ ಬಸವಣ್ಣನ ವರೆಗೆ ಇದೇ ಪ್ರಶ್ನೆ ಇಡಲಾಯಿತು. ಬಸ-ವಣ್ಣ ಜೀವಕ್ಕೆ ಬೇಸತ್ತು ಸಂಗಮನಾಥನಲ್ಲಿ ಐಕ್ಯಹೊಂದುತ್ತಾನೆ. ಕಲ್ಯಾಣ ಸಿದ್ಧಿಯಾಗುವುದಿಲ್ಲ. ಕೈಲಾಸಸಿದ್ಧಿ ತಪ್ಪುವುದಿಲ್ಲ. ಇದನ್ನೇ ಸರ್ವಜ್ಞ ಕೇಳು-ತ್ತಾನೆ: "ಭಕ್ತಭವಿ ಎಂಬ ಕವನ ಎತ್ತಣದು ?"

೩. ಈ ಭವಕ್ಕೆ ಬರಬೇಕು, ಬರಬಾರದು ಎಂಬ ನಿಲುವು ವೀರಶೈವ ಮತ್ತು ಜೈನರಿಗೆ ಬಿಡಿಸಲು ಆಗಲಿಲ್ಲ. ಆಗ ಹರಿಹರಮಾರ್ಗಿಯಾದ ರುದ್ರಭಟ್ಟ ತನ್ನ "ಜಗನ್ನಾಥ ವಿಜಯ" ಇಟ್ಟ, ಆ ಹಾದಿ ಹಾಗೆಯೇ ಮುಂದೆ ಹೋಗಿ, "ಏನು ಬೇಡಲಿ ನಿನ್ನ ಬಳಿಗೆ ಬಂದು ?'' ಎಂದು ಕೇಳಿದ ಪುರಂದರದಾಸರು "ಧಾರುಣಿಯೋ, ನಾರಿಯೋ, ಬಲು ಧನದ ಸಿರಿಯೋ ?'' ಎಂದು ಅವರು ಕೇಳಿದರು. ಒಬ್ಬ ಕನಕ, "ನಾನಾಗಿ ಜನಿಸಿ ಬಂದೆನೆ ದೇವ ?" ಎಂದು ಸವಾಲು ಹಾಕಿದ. ಇವನ ಸವಾಲನ್ನು ಜನ ತಿಳಿದುಕೊಳ್ಳಲಿಲ್ಲ. ‹‹ಅಕ್ಕಿ ತಿನ್ನುವ ಜನರಿಗೆ ಸೊಕ್ಕು ಬಹಳ, ರಾಗಿ ತಿನ್ನುವವರು ಭಕ್ತರು'' ಎಂದವರೂ ಸೊಕ್ಕಿನವರೇ. ಯಾಕೆಂದರೆ ಇವರು ರಾಗದ್ವೇಷದಿಂದ ಮಾತನಾಡುತ್ತಾರೆ.

೪. ಬೇಂದ್ರೆಯವರು ಪಾಶ್ಚಾತ್ಯ-ಪೌರ್ವಾತ್ಯ ಸಂಪರ್ಕ ಬಂದ ಕಾಲಕ್ಕೆ ಬಾಳಿದವರು. ಔತ್ತರೇಯ, ದಾಕ್ಷಿಣಾತ್ಯ ಎಂಬ ಸಂಘರ್ಷವೂ ಬರುತ್ತದೆ. ಬಹು ಭಾಗ ನೆಲವಿದ್ದ ಜನ ಒಳ್ಳೆಯವರೋ ಅಥವಾ ಸಮುದ್ರದಲ್ಲಿಯ ನಡುಗಡ್ಡೆಯಲ್ಲಿ-ರುವ ಜನ ಒಳ್ಳೆಯವರೋ ? ಈ ಮಾತಿಗೆ ಸದ್ಯದ ಸಂಘರ್ಷದಲ್ಲಿ ನಡುಗಡ್ಡೆ-ಯಲ್ಲಿರುವವರೇ ಒಳ್ಳೆಯ ಜನ, ಆತ್ಮಹತ್ಯೆ, ಪರಹತ್ಯೆ ಮಾಡುವವನು ವೀರ, ಹೆಣ್ಣನ್ನು ಬಂಜೆಗೆಡೆಸದಿದ್ದರೆ ಅವನು ಗಂಡೇ ಅಲ್ಲ, ದ್ಯಾಮವ್ವನ ಮೇಲೆ ಎಂದರೆ ಎಮ್ಮೆಯ ಮೇಲೆ ಕೋಣ ಅನ್ಯಾಯ ಮಾಡುವಂತೆ, ಆಕಳ ಮೇಲೂ ಮಾಡಬಹುದೇ?

ಗೂಳಿ ಬಸವ, ಆಕಳೆಲ್ಲಾ ಬಸವಿ ಎಂದು ತಿಳಿಯಬಹುದೇ ? ಮೊಹಂಜೊದಾರೊ ವೃಷಭನಿಗೂ ನೀಲಗಿರಿಯ ಮಹಿಷಪಾಲಕರಿಗೂ ಸಂಘರ್ಷ ಇಲ್ಲಿದೆ. ಇಂದು ಕುದುರೆ, ಕತ್ತೆಗಳಿಂದ ಹುಟ್ಟಿದ ಖೇಚರಗಳೇ ಶ್ರೇಷ್ಠವೆ ? ಎಂದರೆ ಆಕಾಶಗಾಮಿಗಳಾದ ವಿದ್ಯಾಧರರು ಶ್ರೇಷ್ಠರೇ ? ಎಂಬ ವಾದಕ್ಕೆ ಇಂದು ಬಂದಿದೆ. ಅಂದರೆ ಚಂದ್ರ, ಮಂಗಳ, ಶುಕ್ರ ತಮ್ಮ ಕೈಯಲ್ಲಿಟ್ಟುಕೊಂಡು ಭೂಮಿಯ ಮೇಲಿನವ-ರನ್ನು ನಿರ್ವಂಶ ಮಾಡಬಹುದೇ ? ತ್ರಿಪುರ ಸಂಹಾರ ಸಾಂಗತ್ಯ ಜೈನ ಪರವಾದ ಹೇಳಿಕೆ. ಕುಮಾರವ್ಯಾಸ ಶಲ್ಯನಿಂದ ಕರ್ಣನಿಗೆ ಹೇಳಿಸುವ ಆಶಯ ರಾಮಾ-ಯಣ-ಮಹಾಭಾರತದ ಹಾದಿಯೊಳಗಿನ ಮಾತು. ವೀರಶೈವರಂತೂ ಯಾವಾ-ಗಲೂ ಶೂನ್ಯಸಂಪಾದನೆ, ಅಭವತ್ವ ಪ್ರತಿಪಾದಿಸುವವರು.

೫. ಈ ಪುರಾಣ-ಕಥೆಗಳ ಹಗರಣದ ನಾಟಕ ಹೊತ್ತುಗಳೆಯುವ ರಾತ್ರಿಯ ಸಾಧನೆ. ಇಸ್ಪೀಟು, ಗಂಜೀಪು, ಚದುರಂಗ, ಪಗಡೆ ಆಡುತ್ತ ಕಾಲ ಕಳೆದ-ರೇನು ? ಹರಿಕಥೆ, ಪುರಾಣ, ಆಕಾಶವಾಣಿ ಕೇಳುತ್ತ ಕಾಲ ಕಳೆದರೇನು ? ಧರ್ಮಾರ್ಥಕಾಮ ಮೋಕ್ಷಕ್ಕೆ ಸರಿಯಾಗಿ ಅರ್ಥಹಚ್ಚುವುದು ಸಾಹಿತ್ಯದ ಕೆಲಸ, ಪ್ರಭುಸಮ್ಮಿತ, ಧ್ವನಿಕಾವ್ಯ ಶ್ರುತಿಪ್ರಧಾನ. ಅಲ್ಲಿ ಛಂದಸ್ಸಿಗೆ ಮಾಂತ್ರಿಕ ಚಲನ-ವಲನ ಬರುತ್ತದೆಂಬ ಪ್ರಾತಿಭ ಆವೇಶ ಬೇಂದ್ರೆಯವರಿಗೆ ಆದಂತೆ ಕಾಣು-ತ್ತದೆ. ಬೇಂದ್ರೆಯವರು ಮನೆತನದಿಂದ ಚಿತ್ಪಾವನ ಕೊಂಕಣಸ್ಥರು. ಪರಶುರಾಮ ಭೂಮಿಯವರು. ಸಿಂಧುವಿನ ಮುಖದಿಂದ ಕನ್ಯಾಕುಮಾರಿಯ ವರೆಗೆ ಅತಳ, ವಿತಳ, ಸುತಳ, ತಳಾತಳ, ಪಾತಾಳಾದಿ ಭೂತ ಸಂಸ್ಕೃತಿಯ ಬೇರುಗಳು ಅಲ್ಲಿವೆ-ಯಲ್ಲ, ಈ ಬೇರುಗಳನ್ನು ರಾಮ-ಕೃಷ್ಣರ ಭಾಗವತರ ಆಟವಾಡಿ ಬಿಡಿಸಬಹುದೇ ? ಅವರ ಇದಿರು ಏಳು, ಎಂಟರ ಪ್ರಶ್ನೆ ಇದೆ. ಕಾರ್ಬನ್ ಇದರ ಮುಂದಿನ ನೈಟ್ರೋ-ಜನ್, ಆಕ್ಸಿಜನ್ ಪ್ರಶ್ನೆ ಇದೆ. ಇದನ್ನು ಅವರು ತಮ್ಮ ಸಂಖ್ಯಾಶಾಸ್ತ್ರದಲ್ಲಿ ಹೀಗೆ ಇಡುತ್ತಾರೆ :

| | | | | |
|---|---|---|---|---|
| ೧ | ೨ | ೩ | ೪ | ೫ |
| | ೬ | ೭ | ೮ | ೯ |
| ೧೦ | ೧೧ | ೧೨ | ೧೩ | ೧೪ |
| ೧೫ | ೧೬ | ೧೭ | ೧೮ | ೧೯ |

೧೯ ಅಂದರೆ ಏಕೋನವಿಂಶತಿ ಮುಖದ ಪ್ರಶ್ನೆ. ಋಗ್ವೇದ ನಾಲ್ಕನೆಯ ಮಂಡಳದ ವಾಮದೇವ ಹಾಕಿದ್ದಾನೆ. "ಅಸ್ಯ ವಾಮಸ್ಯ"ಕ್ಕೆ ಅರ್ಥ ಬರೆದು ಏನು ಫಲ? "ನಾಸದೀಯ"ದಲ್ಲಿ ಎತ್ತಿದ ತಿರೋಧಾಭಾಸಾತ್ಮಕ ಕೂಟ ಪ್ರಶ್ನೆಗೆ ಉತ್ತರವಿಲ್ಲ. ಸಂಶಯ ವಿನಾಶವಾಗುವ ಬದಲು ತರ್ಕದ ಹೆಸರಿನಲ್ಲಿ ಸಂಶಯ ಹುಟ್ಟಿಸುವುದೇ

ವಿಜ್ಞಾನದ ಕೆಲಸ ಎಂಬ ವಾದ ಕೇಳಿಬರುತ್ತದೆ. (Engels) ಎತ್ತಿದ ವಿಜ್ಞಾನ ವಾದ ಮುಂದೆ (Haldane) ವಿಸ್ತಾರ ಮಾಡಿದ ಅದೇ ಭಾಗ ಇಂದೂ ಪ್ರತಿಷ್ಠಾ ಸ್ಥಾನದಲ್ಲಿದೆ. ಇದಕ್ಕೆ ಉತ್ತರ ಕೊಟ್ಟವರು ದಿವಂಗತ ಪಂಡಿತ ಮಧುಸೂಧನ ಓಝಾ, ದಿವಂಗತ ಕಾವ್ಯಕಂಠ ಗಣಪತಿ, ದಿವಂಗತ ಭಗವದ್ದತ್ತ ಆರ್ಯಸಮಾಜಿ. ಶ್ರೀ ಅರವಿಂದರು, ಮಾತೆಯವರು, ಜೆ. ಕೃಷ್ಣಮೂರ್ತಿಗಳು, ಹಳೆಯ ಥಿಯೋ-ಸೊಫಿಸ್ಟ ಕಜೀನ್ಸರವರೂ ಈ ಪ್ರಶ್ನೆಗಳನ್ನೇ ಇಟ್ಟಿದ್ದಾರೆ. ಆನಂದಕುಮಾರ ಸ್ವಾಮಿಯವರು ಇದೇ ಮಾತನ್ನೇ ಹೇಳಿದ್ದರು. ಆದರೆ ಪಾಶ್ಚಾತ್ಯ ಸಂಸ್ಕೃತ ವಿದ್ವಾಂಸರಿಗೆ ವೈದಿಕವಿಜ್ಞಾನ ಸರಿಯಾಗಿ ತಿಳಿದಿಲ್ಲ. ಅವರಿಗೆ ಅರ್ಥವಾಗದ ೪೬ ಕ್ರೊಮೊಝೋಂಸುಗಳ ರಹಸ್ಯ ವೈದಿಕರು ಬಲ್ಲರು. ಅಭವತ್ವದ ಆಸಕ್ತಿ ಮತ್ತು ಭವಕ್ಕೆ ಬರುವ ಅನಿವಾರ್ಯ – ಇವುಗಳಿಗೆ ಉತ್ತರ ಬೇಕಾಗಿದೆ. ವಿಷ್ಣುವಿನ ಹತ್ತು ಭವಗಳಿಗೆ ಉತ್ತರವಿಲ್ಲ. ಋಷಭತೀರ್ಥಂಕರರ ಹತ್ತು ಭವಗಳಿಗೂ ಉತ್ತರ ಏನು ? ಬಸವಣ್ಣನವರು ಏಳೇಳು ಭವಗಳಿಗೆ ಬಂದರಲ್ಲ ? ಇದಕ್ಕೆ ಉತ್ತರ ಏನು ?

೬. ಬೇಂದ್ರೆಯವರ ಕಾವ್ಯದ ನಿಲುವು ಇದು ಎಂದು ನಾನು ತಿಳಿದುಕೊಂಡಿದ್ದೇನೆ. ನಾನು ನನ್ನ ಸಂಶೋಧನಪ್ರಬಂಧ ಬರೆಯುವ ಕಾಲಕ್ಕೆ (Reading Maturity) — ಓದಿನ ಪಾಕ ಏನು ? ಎಂಬುದರ ಸಂಶೋಧನ ನಡೆಸಿದಾಗ (ವೇದ ಕೋಣದ ಬಾಯಿಂದ ಬಂದರೇನು? ಕತ್ತೆಯ ಮೇಲೆ ಹೇರಿದರೇನು ಎಂಬುದು ಪ್ರಶ್ನೆಯಲ್ಲ)—ಅವರನ್ನು ಸಂದರ್ಶಿಸಿದಾಗ ಋಷಿಯಾದ ಗುರ್ಜಿಫ್-ಒಸ್ಪೆನ್‌ಸ್ಕಿ ಸಂಪ್ರದಾಯದ ಅಮೇರಿಕೆಯ ಬೆನೆಟ್ ಎಂಬವರು ಬರೆದ Dramatic Universe ಒಂದನೆಯ ಭಾಗವನ್ನು ಅವರು ಓದುತ್ತಿದ್ದರು. ಅದರ ನಾಲ್ಕು ಭಾಗಗಳು ಈಗ ಮುಗಿದಿವೆ. ಡಾ. ಕೆನೆಥ್ ವಾಕರ್ ಎಂಬವರ ಲೇಖನಗಳನ್ನು ಓದಿದವರು ಕರ್ನಾಟಕದಲ್ಲಿ ಇರಲು ಸಾಕು. ಬೇಂದ್ರೆಯವರು ಪ್ರಶ್ನೆಗಳಿಗೆ ಉತ್ತರಗಳನ್ನು ತೆಗೆದಿಲ್ಲ. ಪ್ರಶ್ನೆ ಯಾವುದು ಎಂಬುದನ್ನು ಗಲಿಬಿಲಿಯ ಇಂಗ್ಲಿಷಿನಲ್ಲಿ ಇಟ್ಟರೇನು ? ಸಂಸ್ಕೃತದಲ್ಲಿ ಇಟ್ಟರೇನು ? ಅದರ ಹಿಂದಿರುವ ಮಹರ್ಷಿ ಕಪಿಲನ ಸಾಂಖ್ಯವನ್ನು, ಋಷಿ ವಾಮದೇವನ "ಏಕೋನವಿಂಶತಿ ಮುಖ"ವನ್ನು ಅನ್ವಯಿಸಿ ಹೇಳುವುದು ಹೇಗೆ ? ಇದು ಮುಖ್ಯವಾದ ಪ್ರಶ್ನೆ. ಇದನ್ನು ನಾಮರೂಪಾತ್ಮಕತೆಯಿಂದ ತಿಳಿಸಿಕೊಡುವುದು ಹೇಗೆ ? ಇದು ಕ್ಷೇಮಕರವೇ ? ಇದು ಶ್ರೇಯಸ್ಕರವೇ? ಬೇಂದ್ರೆಯವರು ತಮ್ಮ ತಾಯಿಯ ಹೊಟ್ಟೆಯಿಂದ ಹುಟ್ಟಿದ್ದು ಕೃತಕೃತ್ಯತೆ ಎಂದು ತಿಳಿಯುತ್ತಾರೆ. ಆದರೆ ಬಿಡಿಸದೇ ಬರುವ ಒಂದು ಪ್ರಶ್ನೆ ಅವರಿಗೆ ಇದೆ. ಅದು ಏನು ಎಂದರೆ ದುಡ್ಡಿನಭೂತ, ಕಾಮರಾಕ್ಷಸ, ಅಧಿಕಾರದ ಪಿಶಾಚಿ ಮತ್ತು ಇವರ ಪೂಜಾರಿಯಾದ ಸುಡುಗಾಡಸಿದ್ಧ ಕಾಪಾಲಿಕ ಇವರಿಗೆ ಮನೆ ಮಾಡುವುದರಿಂದ

ಅನ್ಯಾಯವಾಗಿದೆಯಂತೆ. ಅದಕ್ಕೆ ಉತ್ತರ ಏನು ? ಮನೆ ಮಾಡಿದವರೆಲ್ಲರೂ ಸಾಯಬೇಕು. ಪ್ರಪಂಚದ ಮಹಾಪಾಪದ ಫಲ ಎಂದು ಶೂನ್ಯದೊಳಗೆ ಅಡಗಬೇಕು. ಈ ಶೂನ್ಯಲಿಂಗ ಮಂಗೋಲಿಯನ್ ವಂಶದ ಮುಂಡರ ದೇವತಾ ಇದು. ಇದರ ಪ್ರಶ್ನೆ ಯಾಜ್ಞವಲ್ಕ್ಯರು ದೇವತೆಗಳು ಎಷ್ಟು ಎಂದು ಕೇಳಿದಾಗ ३೦೦३ ಎಂದು ಉತ್ತರವಿದೆ. ಆದರೆ ಉಪನಿಷತ್ತಿನ ಈ ಭಾಗದಲ್ಲಿ ಪಾಠಾಂತರಗಳಿವೆಯಂತೆ. ಇದೇ ಅಂಕೆಯ ಬಗ್ಗೆ ಅಮೇರಿಕನ್ ವಿಜ್ಞಾನಿಗಳು ತಲೆತುರಿಸಿಕೊಂಡಿದ್ದಾರೆ. ಅವರಿಗೆ ಯಾಜ್ಞವಲ್ಕ್ಯರು ತಲೆತುರಿಸಿಕೊಂಡಿದ್ದು ಗೊತ್ತಿಲ್ಲ. ಬೇಂದ್ರೆ ತಲೆತುರಿಸಿಕೊಂಡರೂ ಇನ್ನೂ ಸ್ವಲ್ಪ ಕೂದಲು ಅವರಿಗೆ ಇವೆಯಂತೆ. ತಲೆಗೂದಲು ಇವೆ ಎಂದ ಮೇಲೆ ತಲೆ ಇರಲೇಬೇಕು ಎಂಬುದು ಬೇಂದ್ರೆಯವರ ಸಿದ್ಧಾಂತ. ಆದರೆ ಬೋಳಿಯರು ಎಂದರೆ ದೇವತೆಗಳು ಎಂದಿರುವಾಗ ಬೇಂದ್ರೆಯವರು ಕೂದಲ ಪಕ್ಷ ಹಿಡಿದು ಮಾತಾಡುವುದು ಸರಿಯೇ ? ಕರೇಕೂದಲು ಎಂದರೆ ಕೇಶವ ಅಂತೆ. ಆದರೆ ಗೊಮ್ಮಟನಿಗೂ ಕುರುಳು ಇವೆಯಲ್ಲ ? ನಿಜವಾದ ಪ್ರಶ್ನೆ ಇದು. ಕೇಶವ-ಗೊಮ್ಮಟ=೧೫೪-೧೫೩=೧. ಶೂನ್ಯ ಇರಬಹುದು. ಆದರೆ, ೧ ನಾಶ ಹೇಗೆ ಆಗುತ್ತದೆ ? ದ್ವ್ಯಂಕ (ದ್ವಿ+ಅಂಕ) ಒಂದು, ಶೂನ್ಯ ಎಂಬ ವ್ಯಂಕ, ನೊಣ ಇದ್ದೇ ಇದ್ದಾರೆ. ಸೀನು ಮಾತ್ರ ಒಂದು ಸೀನು ಬಂದರೆ ಕೆಟ್ಟ, ಎರಡು ಸೀನು ಬಂದರೆ ಒಳ್ಳೆಯದು ಎಂಬ (New Mathematics) ಹೇಗೆ ಒಪ್ಪಿಕೊಳ್ಳಬೇಕು ?

೭. ಈದೆಲ್ಲ ನಾನು ಸರಿ ಬರೆದಿರುವೆನೋ, ತಪ್ಪು ಬರೆದಿರುವೆನೋ ಗೊತ್ತಿಲ್ಲ. ಹಿಂದೊಮ್ಮೆ ನಾನು ಬೇಂದ್ರೆಯವರ " ಕಥೆಗಳ ಕಥೆ " ಎಂಬ ಬರೆಹಕ್ಕೆ ಆಕೃತಿ ಹಾಕಿದ್ದೆ. ಆ ಲೇಖನ ಮಂಗಳೂರಿನ ಯಾವುದೋ ಕಥಾಸಾಹಿತ್ಯದಲ್ಲಿ ಅಡಗಿ ಹೋಗಿದೆ. ಅದು ಶಿವ-ಅಶಿವ, ಶಕ್ತಿ-ಅಶಕ್ತಿ—ಇವರಿಗೆ ಹೇಗೋ ಹುಟ್ಟಿದ ಗಣಪತಿ, ಷಣ್ಮುಖ ಏನು ಉತ್ತರ ಕೊಡುತ್ತಾರೋ. "ಗಣಾನಾಂ ತ್ವಂ ಗಣಪತಿಂ ಹವಾಮಹೇ, ಕವಿಂ ಕವೀನಾಂ'', ಹೀಗೆಂದು ಕೈಮುಗಿಯುತ್ತೇನೆ. ಯಾಕೆಂದರೆ ಇನ್ನು ಮುಂದೆ ಕೈಸಾಗುವುದಿಲ್ಲವೆಂದು.

೮. ಆದರೂ ಕೊನೆಗೆ ಒಂದು ಮಾತು. "ಶ್ರೀಗಣೇಶಾಯನಮಃ" "ಓಂನಮಃ ಸಿದ್ಧಂ" "ಜೀವನ ವೇಶಭೇದದಿಂದ ಮೂರುಬಗೆಯದು: ಆಟವಿಕ, ಗ್ರಾಮ್ಯ, ನಾಗರಿಕ. ಕಡಲಗಳ್ಳರ ರಾಜ್ಯ ತೀರ ಬೇರೆ, ಅವರು ಪೂರ್ಣಸ್ವಾತಂತ್ರ್ಯವುಳ್ಳವರು. ಕಡಲಗಳ್ಳರು ಆಟವಿಕರನ್ನು ಕಾಡುತ್ತಾರೆ. ಆಟವಿಕರು ಗ್ರಾಮ್ಯರನ್ನು ಕಾಡುತ್ತಾರೆ. ಗ್ರಾಮ್ಯರು ನಾಗರಿಕರನ್ನು ಕಾಡುತ್ತಾರೆ. ಹೀಗೆ ನಾಲ್ಕುಬಗೆ ಆಗಿ ಜೀವನಚದರಿದಾಗ ಈಪ್ರಪಂಚದಲ್ಲಿ ಐದನೆಯದಾಗಿ ಆಶ್ರಮ ಶಿಕ್ಷಣ ಕೊಡಬೇಕು. ಆ ಆಶ್ರಮದಲ್ಲಿ ನೀವು ರಾಮನಾ-

ಯಣವನ್ನೇ ಕಲಿಸಿರಿ, ಮಹಾಭಾರತವನ್ನೇ ಕಲಿಸಿರಿ. ಆದರೆ ಹಾದರದ ಕಥೆ, ಸೋದರವಧೆಯ ಕಥೆ ಹಚ್ಚಬಾರದು. ನಾಗರಿಕರು ನದಿಯ ದಂಡೆ ಹಿಡಿದಿರು-ತ್ತಾರೆ. ಗ್ರಾಮ್ಯರು ಹಳ್ಳದ ಹತ್ತಿರ ಬಯಲುಗಳಲ್ಲಿ ಇರುತ್ತಾರೆ. ಅಡವಿಯ ಬೇಡರೊಡನೆ ಪಶುಪಾಲಕರೂ, ಮೀನು ಬಲೆಗಾರರೂ, ಸುಡುಗಾಡಸಿದ್ಧರೂ ಸತ್ತ ಪ್ರಾಣಿಗಳ ಇದ್ದ ಪದಾರ್ಥ ಉಪಯೋಗ ಮಾಡಿ ಉಪಜೀವನ ಮಾಡುತ್ತಾರೆ. ದುರ್ಗ, ಬೆಟ್ಟ, ಪರ್ವತ, ಅರಣ್ಯ ಇತ್ಯಾದಿಗಳಲ್ಲಿ ಸುತ್ತಮುತ್ತ, ಅತ್ತಿತ್ತ ಇರು-ತ್ತಾರೆ. ಆಶ್ರಮದಲ್ಲಿದ್ದವರಿಗೆ ಗಡ್ಡೆ, ಜಡೆ, ಇರಲೇಬೇಕು ಎಂದಲ್ಲ, ಉದ್ದನ್ನ ಗಡ್ಡದವರಿಗೆ ಬುದ್ಧಿ ಇರುವುದಿಲ್ಲ ಎಂದು ಒಂದು ಮಾತು. ಈ ಗಾದೆಯ ಮಾತು ನಂಬಿ ಒಂದು ಮುಷ್ಟಿ ಗಡ್ಡ ಹಿಡಿದುಕೊಂಡು ಉಳಿದ ಉದ್ದದ ಭಾಗ ಚಿಮಣಿ ಎಣ್ಣೆ ದೀಪಕ್ಕೆ ಹಿಡಿದು ಇಡಿಯ ಗಡ್ಡ ಸುಟ್ಟುಕೊಂಡು ತನಗೆ ಬುದ್ಧಿ ಇರಲಿಲ್ಲ ಎನ್ನು-ವಷ್ಟು ಬುದ್ಧಿ ಇದೆ ಎಂದು ತಿಳಿದುಕೊಂಡನಂತೆ. ಇದು ಸಾಮಾನ್ಯ ನಿಯಮವೇನೂ ಅಲ್ಲ. ಜಡೆ ಇದ್ದವರಿಗೆ ತಲೆ ಇರುತ್ತದೆ. ಆದರೆ ಎಲ್ಲರ ತಲೆ ಸಮ ಇರುತ್ತದೆ ಎಂದೇನೂ ಅಲ್ಲ; ಇದ್ದದ್ದರ ಕೂಡ ಹೊಂದಿಕೊಂಡಿರುವುದೆ (Normal)—ಸಮ ಬುದ್ಧಿ. ತಲೆ ಕೆಡಿಸಿಕೊಂಡರೆ ಹುಚ್ಚರ ಆಸ್ಪತ್ರೆ ಸೇರಬೇಕಾಗುತ್ತದೆ. ಅದಕ್ಕೆ ಈಗ ಮಾನಸಆರೋಗ್ಯಧಾಮ ಎನ್ನುತ್ತಾರೆ. ಅಲ್ಲಿಯ ಬಿರುದು "ರೋಗಿದೇವೋ ಭವ'' ಎಂದಿದೆ. ಇನ್ನು ತಲೆ ಕೆಡಿಸಿಕೊಂಡು ಕೂಡಬಾರದು ಎಂದು ವೇದಾಂತ ಹೇಳುವ ಇನ್ನೊಂದು ವರ್ಗ ಇದೆ. ಅವರು ನಿರುಪದ್ರವಿಗಳು. ಅಹಿಂಸಾವಾದಿ-ಗಳು. ಹಳೆಯ ಪುರಾಣ ಓದುತ್ತ ಕುಳಿತರೇನು ? Encyclopaedia ಓದುತ್ತ ಕುಳಿತರೇನು ? ಎಲ್ಲಿಯ ವರೆಗೆ ಹುಟ್ಟು ಸಾವು ಇದೆಯೋ ಅಲ್ಲಿಯ ವರೆಗೆ ಧೈರ್ಯದಿಂದ ಬದುಕುವುದು ಅವಶ್ಯವೇ ಆಗುತ್ತದೆ. ಬದುಕುವುದು ಮಹಾ-ಪೌರುಷವಲ್ಲ. ಬಾಳುವುದು ಬಹಳ ಕಷ್ಟ'' 'ಅಸ್ಮಿತೆಯ ಕ್ಲೇಶ' ಎಂದು ಇದೆ. "ಅಸ್ಮಿತೆಯ ಆನಂದ" ಎಂದೂ ಒಂದು ಇದೆ. ಅದು ತರ್ಕ, ವಿಚಾರ, ಎಂದು ತಲೆಕೆಡಿಸಿಕೊಳ್ಳದ ವಿವೇಕಿಗಳಿಗೆ ಅಷ್ಟೇ ಸಾಧ್ಯ. ಶಂಕರಾಚಾರ್ಯರ ವಿವೇಕ ಚೂಡಾಮಣಿಯನ್ನಾಗಲೀ, ನಿಜಗುಣರ "ವಿವೇಕಚಿಂತಾಮಣಿ''ಯನ್ನಾಗಲೀ ತಲೆ-ದಿಂಬಿಗೆ ಇಟ್ಟುಕೊಂಡು ಸಾಧ್ಯವಾದರೆ ಶಾಂತಿಯನ್ನು ಪಡೆಯಬಹುದು. ಮುಖ್ಯ ಏನು ? ಬದುಕಿನ ದ್ವೇಷ ಇರಬಾರದು. ಬಾಳಿನ ಸಂತೋಷ ಬಹಳ ಅಪರೂಪದ ವಸ್ತು ಎಂದು ತಿಳಿಯಬೇಕು. ಇದು ಸಾಹಿತ್ಯ, ಇದು ಶಿಕ್ಷಣ, ಇದು ಜೀವನ. " ಸಂತೋಷಂ ಜನಯೇತ್ ಪ್ರಾಜ್ಞಃ'' '' ವಿದ್ಯಾಂ ಅರ್ಥಂ ಚ ಸಾಧಯೇತ್ '' '' ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್''—ಕುರುಕ್ಷೇತ್ರದಲ್ಲಿ ಪಾರ್ಥ–ಯೋಗೇಶ್ವರ ಭೆಟ್ಟಿಯಾದರೆ ಅದು ಧರ್ಮಕ್ಷೇತ್ರವಾಗುತ್ತದೆ. ಸಂಜಯ-ಧೃತರಾಷ್ಟ್ರ ಬಂದರೆ ಅದೇ ಹದಿನೆಂಟು ದಿವಸದೊಳಗೆ ಪ್ರಳಯಕ್ಷೇತ್ರ–

ವಾಗುತ್ತದೆ. ಉಳಿದಷ್ಟು ಧರ್ಮ ಕಲಿಯುಗದ ದಾರಿ ಕಾಯುತ್ತದೆ. ಕಲಿ ಅಂದರೆ ಬಡಿದಾಡುವುದಲ್ಲ. ಪೌರ್ವಾತ್ಯ ಸಂಸ್ಕೃತಿ ಶ್ರೇಷ್ಠವೋ? ಪಾಶ್ಚಿಮಾತ್ಯ ಸಂಸ್ಕೃತಿ ಶ್ರೇಷ್ಠವೋ? ದಿವಂಗತರಾದ ಗಾಂಧಿಯವರೊಡನೆ ಇದನ್ನಾದರೂ ನಾವು ನಂಬೋಣ; "ಈಶ್ವರ ಅಲ್ಲಾ ತೇರೇನಾಮ ಸಬಕೋ ಸನ್ಮತಿ ದೇ ಭಗ-ವಾನ್" ಎನ್ನೋಣ. ಗಾಂಧಿಯುಗ, ಅವರು ೧೯೪೮ ರಲ್ಲಿ ತೀರಿಕೊಂಡರಲ್ಲ, ಅಂದಿನಿಂದಲೇ ಪ್ರಾರಂಭವಾಗಿದೆ. ನಾವೀಗ ಗಾಂಧೀಶಕ ೩೦ ರಲ್ಲಿ ಇದ್ದೇವೆ. ಇದನ್ನು ಮರೆಯೋಣ ಬೇಡ. "ಜಯ್ ಜಗತ್".

§ § § §

೬೨

# ಮಹನೀಯ ಶ್ರೀ ಬೇಂದ್ರೆ

ವಿ. ಸೀತಾರಾಮಯ್ಯ

ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಅವರು ೪೦-೫೦ ವರ್ಷಗಳಿಂದಲೂ ಕರ್ನಾಟಕ ಸಾಹಿತ್ಯಜೀವನದಲ್ಲಿ ದೊಡ್ಡ ಹೆಸರಾಗಿರುವರು. ಅದಕ್ಕೆ ಸಮನಾಗಿ ಅಥವಾ ಹೆಚ್ಚಿಗೂ ದೊಡ್ಡ ಪ್ರಭಾವವಾಗಿ ಸಾಹಿತ್ಯ ಪ್ರಪಂಚದಲ್ಲಿ ಬೆಳಗಿರುವವರು. ಅವರ ಕಾವ್ಯನಾಮ 'ಅಂಬಿಕಾತನಯದತ್ತ' ಎಂದು. ಉತ್ತರ ಕರ್ನಾಟಕದ ಕಡೆಯ ಜನ ಬೇಂದ್ರೆ ಬೇರೆ—'ಅಂಬಿಕಾತನಯದತ್ತ' ಬೇರೆ ಎಂಬಂತೆ ತಮ್ಮನ್ನು ಕುರಿತು ನಡೆದುಕೊಳ್ಳುವುದುಂಟು. ಇದರಲ್ಲಿ ಒಂದು ಔಚಿತ್ಯವಿದೆ; ಅನುಕೂಲವಿದೆ. ತಾವು ನಿರ್ಮಾಣ ಮಾಡಿದ ಕೃತಿ ತಮಗೆ ದೈವದತ್ತವಾಗಿ ಬಂದದ್ದು. ಅಲ್ಲಿ ಸುಳಿಯುವ ಜೀವವಿಶೇಷ ತಮ್ಮ ದಿನಬಳಕೆಯ ಜೀವನದ ಒಂದು ಪ್ರಕಾಶನ ಮಾತ್ರ; ಒಂದು ಕ್ರಿಯೆ ಮಾತ್ರ ಎಂಬ ಭಾವನೆ ಬಂದು ಕೃತಿಗೆ ಅತಿಶಯವನ್ನು ತಂದುಕೊಡುತ್ತದೆ. ಅವರಿಗೆ ಈಚೆಗೆ ಡಾಕ್ಟರೇಟ್ ಪ್ರಶಸ್ತಿ ಬಂದಿತು. 'ಡಿ. ಆರ್.' ಎಂಬ ಹೆಸರಿನೊಳಗೆಯೇ ಡಾಕ್ಟರೇಟಿನ ಸುಡಿತವಿರುವಾಗ ಇವರಿಗಿನ್ನಾರು ಡಾಕ್ಟರೇಟ್ ಪ್ರಶಸ್ತಿ ಕೊಡಬೇಕು ಎನ್ನಿಸಿರುವುದುಂಟು. ಸಹಜವಾಗಿ ಹಾಕಿರುವ, ಅದಕ್ಕಿಂತ ಹೆಚ್ಚಿನ ಮಾನ್ಯತೆ ತಾವು ಇರುವ ಪ್ರದೇಶದಲ್ಲಿ ಪಡೆದವರಿಗೆ ಇದು ಎರಡು ಅರ್ಥಗಳಲ್ಲಿಯೂ ಉಪಾಧಿಯೇ ಆಗುತ್ತದೆ. ಅವರು ಪ್ರಧಾನವಾಗಿ ಕವಿಗಳು; ಅದರಲ್ಲಿಯೂ ಭಾವಗೀತದ ಕವಿ. ಅವರು— ಧಾರವಾಡದ ಸಾಧನ ಕೇರಿಯಲ್ಲಿ ಮೊದಲಿಂದಲೂ ಇರುವವರು. ವಿಕ್ಟೋರಿಯಾ ಹೈಸ್ಕೂಲಿನ ಉಪಾ-ಧ್ಯಾಯರಾಗಿದ್ದು ಸ್ವಾತಂತ್ರ್ಯಸಾಧನೆಯ ಕಾಲದಲ್ಲಿ ಯಾವುದೊ ಆಪಾದನೆ ದೇಶಭಕ್ತಿಯ ಕಾರಣದಿಂದ ಅವರ ಮೇಲೆ ಹೊತ್ತು ಆ ಕೆಲಸದಿಂದ ಹೊರಗೆ ಬರಬೇಕಾಯಿತು. ಕೆಲಕಾಲ ಇನ್ನಾವ ಉದ್ಯೋಗವನ್ನೂ ಹಿಡಿಯದೆ ಇದ್ದರು. ಆಮೇಲೆ ಪುಣೆಯಲ್ಲಿದ್ದುಕೊಂಡು ಬೊಂಬಾಯಿ ವಿಶ್ವವಿದ್ಯಾನಿಲಯದ ಎಂ. ಎ. ಪದವಿಯನ್ನು ಪಡೆದುಕೊಂಡರು. ಆಮೇಲೆ ಸೊಲ್ಲಾಪುರದ ಕಾಲೇಜೊಂದರಲ್ಲಿ ಕೆಲವು ಕಾಲ ಕನ್ನಡದ ಪ್ರಾಧ್ಯಾಪಕರಾಗಿದ್ದು ಅಲ್ಲಿಂದ ನಿವೃತ್ತಿಪಡೆದರು.

ಉಪಾಧ್ಯಾಯ ವೃತ್ತಿ ನೇರವಾಗಿ, ಪರೋಕ್ಷವಾಗಿ, ಶಾಲೆಗಳೊಳಗೆ, ಹೊರಗೆ ಮೊದಲಿಂದಲೂ ಅವರ ಮಾಸ್ತರಿಕೆಗೆ ಕೀರ್ತಿ ತಂದದ್ದು. ಆ ಕಡೆಯ ಜನ ಅವರನ್ನು ಮಾಸ್ತರೆಂದೇ ಎನ್ನುವುದು ರೂಢಿ. ಶಾಲೆಕಾಲೇಜುಗಳಲ್ಲಿ ಕಲಿಸಿ ಉಪಾಧ್ಯಾಯ ವೃತ್ತಿ ಮಾಡುವದು ಉದ್ಯೋಗವಾಗಿದ್ದವರೆಲ್ಲರೂ ಬೇಂದ್ರೆಯಂತಹ ಮಾಸ್ತರ-ರಾಗಲಾರರು. ಇವರು ಕಾವ್ಯಗುರು. ಕವಿಗಳನ್ನು ನಿರ್ಮಾಣ ಮಾಡಿದವರು. ಕವಿಸ್ಫೂರ್ತಿಯನ್ನು, ಕಾವ್ಯಸ್ಫೂರ್ತಿಯನ್ನು ಹುಟ್ಟಿಸಿ ಹೀವರಲ್ಲಿ ಆ ಉತ್ಸಾಹ ವನ್ನು ಬೆಳಸಿ ನಡೆಸಿದವರು. ಅದಕ್ಕೆ ತಕ್ಕಂತಹ ಉಪದೇಶಶಕ್ತಿ; ಅದರ ಹಿಂದೆ ವ್ಯಾಸಂಗ; ಅದರ ಹಿಂದೆ ಬುದ್ಧಿಮತ್ತೆ— ಒಂದು ವಿಶಿಷ್ಟ ರೀತಿಯಲ್ಲಿ ಅವರಲ್ಲಿ ಇದ್ದುದೇ ಕಾರಣ. ಕನ್ನಡ ಇವರ ಮನೆಯ ಮಾತಲ್ಲ. ಬೇಂದ್ರೆ ಮಹಾರಾಷ್ಟ್ರದ ಖನಿ ಚಿತ್‌ಪಾವನ ಬ್ರಾಹ್ಮಣರು. ಈಗಲೂ ಕನ್ನಡದಲ್ಲಿ ಎಷ್ಟು ಪ್ರಾಬಲ್ಯ ಪಡೆ-ದಿದ್ದಾರೋ ಮರಾಠಿಯಲ್ಲಿಯೂ ಅಷ್ಟೇ ಪ್ರಾಬಲ್ಯ ಪಡೆದಿದ್ದಾರೆ. ಕನ್ನಡದಲ್ಲಿ ಹೇಗೆ ವಿಮರ್ಶೆ, ಕವಿತೆ ಬರೆದಿದ್ದಾರೆಯೊ ಹಾಗೆಯೇ ಮರಾಠಿಯಲ್ಲಿಯೂ ಬರೆದು ಆ ಜನವರ್ಗದಲ್ಲಿ ಮಾನ್ಯರಾಗಿದ್ದಾರೆ. ಕನ್ನಡ ಸಾಹಿತ್ಯವನ್ನು ಅವರಿಗೆ ಬೆಳಗಿ ತೋರಿಸಿರುವಂತೆ ಮರಾಠಿ ಸಾಹಿತ್ಯದ ಸ್ವರೂಪ-ಲಕ್ಷಣಗಳನ್ನು, ಸಾಧನೆಯನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟು, ಎರಡೂ ಕಡೆ ಆ ಕೆಲಸಕ್ಕೆ ಸ್ಥಾನ, ಕೀರ್ತಿ ಬರುವಂತೆ ಮಾಡಿದ್ದಾರೆ. ಮರಾಠಿಯಲ್ಲಿಯೂ ಉದ್ದಂಡ ಧೋರಣೆ ಯಿಂದ ಮಾತನಾಡಬಲ್ಲರು ಅವರು ಆಧುನಿಕ ಕಾವ್ಯದ ಪರಿಚಯ, ಸಹವಾಸ, ವಿಶ್ವಾಸವುಳ್ಳವರು. ಹೀಗೆ ಎರಡು ಭಾಷಾವರ್ಗಗಳ ಆದರ, ಗೌರವಗಳಿಗೆ ಪಾತ್ರರಾಗಿರುವರು.

ಈ ಎರಡು ಗುಣಗಳ ಜೊತೆಗೆ ಅವರಿಗೆ ಸಂತಪಂಥದ ಮತ್ತು ಅನುಭಾವಿ ಪಂಥದವರ ವಿಷಯದಲ್ಲಿ ಅತೀವ ಭಕ್ತಿ, ಜ್ಞಾನ ಇವೆ. ಮಹಾರಾಷ್ಟ್ರ ಸಾಧು ಸಂತರ, ಕರ್ನಾಟಕದವರ, ಮಾನ್ಯರು, ಹಿರಿಯರು ಮಾತ್ರವೇ ಅಲ್ಲ; ವಿದೇಶೀಯ ಖಲೀಲ್ ಜಿಬ್ರಾನ್, ಎ. ಇ. ಯೇಟ್ಸ್, ಮುಂತಾದವರ, ಕ್ರಿಶ್ಚಿಯನ್ ಮತ್ತು ಇತರ ಪಂಥಗಳವರ Mystic ಮಾರ್ಗಗಳ ಪರಿಚಯವಿದೆ. ಇಲ್ಲಿ ಅರವಿಂದ-ಘೋಷ್ ಯೋಗಿಗಳ ಮತ್ತು ಪಾಂಡಿಚೇರಿಯ ಆಶ್ರಮದ ಶ್ರೀ ಮಾತೆಯವರ ಪ್ರಭಾವಗಳ ಅರಿವಿದೆ. ಎಲ್ಲ ಶಾಸ್ತ್ರವರ್ಗ, ತಾಂತ್ರಿಕ ವರ್ಗಗಳವರ ಸಾಹಿತ್ಯ ವನ್ನೂ ಅವರು ಓದಿಕೊಂಡಿದ್ದಾರೆ. ಸ್ವಂತವಾಗಿ ಒಂದು ಉಪಾಸನಾ ಮಾರ್ಗವನ್ನು ಇಟ್ಟುಕೊಂಡಿರುವರು. ಅವರ ದೃಷ್ಟಿಯಲ್ಲಿ, ವಾಕ್ಕಿನಲ್ಲಿ ಒಂದು ಅಸಾಮಾನ್ಯ ಶಕ್ತಿ ಇದೆ. ಅವರು ನುಡಿದುದು ಆಗುತ್ತದೆ ಎನ್ನುವ ಕೀರ್ತಿ ಅವರದು. ಜೊತೆಗೆ ಜೋತಿಷ್ಯದಲ್ಲಿ ಅವರ ಅನುಭವ ಆಳವಾದದ್ದೆಂದು ಹಲವರು ಬಲ್ಲರು. ಸಂಸ್ಕೃತ, ಪ್ರಾಕೃತ, ಇಂಗ್ಲೀಷ್ ಮೂರರಲ್ಲಿಯೂ ಕವಿತೆ, ಅನುಭವ, ದರ್ಶನವನ್ನು ಕುರಿತಾಗಿ

ಯಾವ ಉತ್ತಮ ಸಾಹಿತ್ಯನಿರ್ಮಾಣವಾಗಿದೆಯೊ ಅದನ್ನೆಲ್ಲ ತಮ್ಮಲ್ಲಿ ಸಂಗ್ರಹಿಸಿ ವಶಮಾಡಿಕೊಂಡಿದ್ದಾರೆ. ಅವರ ಪುಸ್ತಕಭಂಡಾರ ಅಸಾಧಾರಣಗಾತ್ರದ್ದು, ಗಣದ್ದು, ಅಲ್ಲಿಲ್ಲದ ಪ್ರಧಾನಕೃತಿಗಳೇ ಇಲ್ಲವೇನೋ ಎಂಬಷ್ಟು ಪ್ರಾಚೀನ, ನವೀನ ಶಾಸ್ತ್ರಗಳ, ಕವಿಗಳ, ಸಾಹಿತ್ಯಗ್ರಂಥಗಳಿವೆ: ಓಲೆಗರಿ ಪುಸ್ತಕಗಳಿವೆ; ನಾಣ್ಯ, ವಿಗ್ರಹ ಇವೆ; ಅವುಗಳನ್ನು ನೋಡಿದರೆ ಸಾಮಾನ್ಯರಿಗೆ ದಿಗ್ಭ್ರಮೆಯಾಗುತ್ತದೆ.

ಅವರು ಮಾತನಾಡಿದರೂ ಹೀಗೆಯೇ ಕೆಲವೇಳೆ ದಿಗ್ಭ್ರಮೆಯಾಗುತ್ತದೆ. ಯಾವುದನ್ನಾದರೂ ಹಿಡಿದು ಸಾಮಾನ್ಯ ಗೋಷ್ಠಿಗಳಲ್ಲಿಯಾಗಲಿ, ಸಭಾವೇದಿಕೆಗಳ ಮೇಲಿಂದಾಗಲಿ ಮಾತನಾಡಲು ನಿಂತರೆಂದರೆ ಆಯಿತು; ಅದನ್ನು ಅವರು ಬೆಳಸುವ ರೀತಿ ಒಂದು ರೀತಿ ಹುಟ್ಟಿದ ವಾದ ಅಥವಾ ಪ್ರತಿಪಾದನೆ ಮುಗಿಲುಮುಟ್ಟಿ ಭೂಮ್ಯಾಕಾಶಗಳನ್ನು ಒಂದು ಮಾಡುವಂತೆ ಬೆಳಸುವ ಮೋಡಿ ಅವರದು. ಅವರು ಮಾತನಾಡುವಾಗ ಸುತ್ತಲ ಮಂದಿ, ಎದುರಿನ ಸಭೆ ಒಂದು ಮಂತ್ರದ ಮೋಡಿಗೆ ಸಿಕ್ಕಿರುವಂತಿರುತ್ತದೆ. ಈ ಮೋಡಿಯದು ಮಿಂಚಿನ ಪ್ರಕಾಶ. ಕಣ್ಣು ಕುಕ್ಕು-ವಂಥದು. ಎಲ್ಲವನ್ನೂ ಒಮ್ಮೆಗೇ ಬೆಳಗಿ ಕಣ್ಣು ಮನಸ್ಸುಗಳನ್ನು ಕೋರೈಸುವಂಥದು. ಅಂಥ ಇನ್ನೊಬ್ಬರ ಮಾತುಗಾರಿಕೆ ಕನ್ನಡದಲ್ಲಿ ಈ ೫೦ ವರ್ಷಗಳಲ್ಲಿ ನಾನು ಕಂಡುದಿಲ್ಲ. ಅವರ ಅಭಿಪ್ರಾಯವನ್ನು, ನಿಲವನ್ನು ಒಪ್ಪುವವರು ಒಪ್ಪ-ಬಹುದು, ಬಿಡುವವರು ಬಿಡಬಹುದು; ಆದರೆ ಅವರ ಮನಸ್ಸು; ಮಾತು, ಹಾಯಿಸುವ ಬೆಳಕು, ವಿಷಯವನ್ನು ಆವರೆಗೆ ಕಾಣದಿದ್ದ ಬೆಳಕಿನಲ್ಲಿ ಕಾಣಿಸಬಲ್ಲದು. ಮಾತು, ಉಕ್ತಿವಿಲಾಸ, ಚಿತ್ರ, ರೂಪಕ ತಂತ್ರ, ಮೈತುಂಬ ಒಂದು ನಿಮಿಷದಲ್ಲಿ ಹೂ ಬಿಟ್ಟ ಲತಾವಲಯದಂತೆ ಸಿಂಗರಗೊಂಡು ಕಾಣುತ್ತದೆ. ಅದು ನಡೆಯುವವರೆಗೂ ಅದರ ಬಂದಿಗಳು ನಾವು. ಅದೇ ಲಕ್ಷಣ ಅವರ ಬರವಣಿಗೆಯಲ್ಲಿ ಕೂಡ. ಅಲ್ಲಿ ಕಾಣುವುದೂ ಒಂದು ವಿದ್ಯುಲ್ಲತೆಯ ಬೆಡಗು; ವಿದ್ಯುತ್ ಹೌದು; ಲತೆ ಹೌದು; ಬೆಡಗೂ ಹೌದು. ಇವರ ಕವಿತೆಯಲ್ಲಾಗಲಿ ವಾಗ್ವೈಭವದಲ್ಲಿಯಾಗಲಿ ರೂಪಗೊಳ್ಳುವ ಒಂದು ವೈಭವವೂ, ವಿಲಾಸವೂ ಆ ಸಮಯಕ್ಕೆ ಸತ್ಯದ ಇತರ ಎಲ್ಲ ಮುಖಗಳನ್ನೂ ಮರೆಮಾಡಿಬಿಟ್ಟರೂ ಆ ಮಿಂಚು ಮಾಯವಾದಮೇಲೆ ಲೋಕವನ್ನು ಮತ್ತಷ್ಟು ಮಬ್ಬಿಡಿದಂತೆ ಮಾಡುತ್ತದೆಯಾದರೆ ಅದರ ಹೊಳಪು ಎತ್ತಿ ಕಾಣಿಸುವ ರೇಖೆ, ಆಕೃತಿ, ಅರ್ಥ, ಚಿತ್ರ ಅತಿಶಯ ಕಾಂತಿಯುಳ್ಳದ್ದು. ಇದರ ಗುಣದೋಷಗಳೆರಡೂ ನೋಡುವವರಗೆ ಅನುಭವಿಸುವವರಿಗೆ ಬಡಿಯುತ್ತದೆ; ತಟ್ಟುತ್ತದೆ; 'ಅಬ್ಬಾ' ಎನಿಸುತ್ತದೆ; ಎಂತಹ ಕಾಂತಿ ಎನ್ನಿಸುತ್ತದೆ. ಮೋಹನಗೊಳಿಸಿ ಅವರ ಕಡೆಗೇ ಒಲಿವಂತೆ ಮಾಡುತ್ತದೆ. ಆ ಶಕ್ತಿಯನ್ನು ತಾಳಿಕೊಳ್ಳಲಾರದವರಿಗೆ ಸ್ವಂತ ಹೀನತಾ ಭಾವದ ಅರಿವು ಉಂಟಾಗುತ್ತದೆ. ಮಾತು, ಚಿತ್ರ, ಭಾವ, ಕಲ್ಪನೆಯ ತಾಂಡವ, ಚಿತ್ರದ ಹಿಂದೆ ನಿಲ್ಲುವ ಚಿತ್ರ; ಅರ್ಥದ

ಹಿಂದೆ ನುಡಿವ ಅರ್ಥ, ಅದರ ಒಳಗನ್ನು ಬೆಳಗುವ ಅರ್ಥ ಬೇರೆ ಬೇರೆ ಪದರಗಳಲ್ಲಿ ಉನ್ನತಿಗಳಲ್ಲಿ, ನೆಲಸುಗಳಲ್ಲಿ ಕಾಣುತ್ತದೆ. ನವನವೋನ್ಮೇಷಶಾಲಿನಿ ಎಂದು ಪ್ರತಿಭೆಗೆ ಸ್ವರೂಪ ಲಕ್ಷಣವನ್ನು ಹೇಳುತ್ತಾರೆ. ಬೇಂದ್ರೆಯವರ ಪ್ರತಿಭಾ ವಿಲಾಸ ಅಂಥದು. ಅದು ಸಹಜ, ಅವರೊಬ್ಬರಿಗೆ ಮಾತ್ರ ಇರುವಂಥದು. ಅವ ರನ್ನು ಅನುಕರಿಸುವೆವೆಂದರೆ ಮಿಂಚಿನ ಎದುರಿಗೆ ಒಂದು ಪಂಜೊ, ಒಂದು ಕಂದೀಲೊ ಎತ್ತಿ ನಿಂತಹಾಗೆ. ಆ ಕಲ್ಪನಾಶಕ್ತಿ, ಆ ಬೆಡಗು ಅವರಿಗೆ ಸಹಜ. ಆ ಇಂದ್ರಜಾಲ ಅವರೊಬ್ಬರಿಗೆ ಮಾತ್ರ ದಕ್ಕಿರುವ ಪುಣ್ಯ.

೧೯೨೦–೨೨ರ ಸಮಯದಲ್ಲಿ ಧಾರವಾಡದ ಕಡೆಯಿಂದ ಅಚ್ಚಾದ ಒಂದು ಕವನ ಸಂಕಲನದಲ್ಲಿ ಒಂದೆರಡು ಕವನಗಳನ್ನು 'ಅಂಬಿಕಾತನಯದತ್ತ'ರೆಂಬ ಹೆಸರಿನಲ್ಲಿ ಇತ್ತ ನಾವು ಓದಿದೆವು. ಬೆಂಗಳೂರು National High School ನ ಮುಖ್ಯೋಪಾಧ್ಯಾಯರಾದ ಶ್ರೀ ಸಂಪದ್ಗಿರಿರಾಯರು ಅದನ್ನು ಬರೆದಿರುವವರು ಬೇಂದ್ರೆ ಎಂಬವರೆಂದು, ಒಳ್ಳೆಯ ಪ್ರತಿಭಾಶಾಲಿಗಳೆಂದು ಹೇಳಿದ ಜ್ಞಾಪಕ. ಅವರು ಒಂದು ಸೇವಾದಳದ ಸಂಬಂಧದಲ್ಲಿ ಕಬ್ಬೂರ್, ಹರ್ಡೀಕರ್ ಮುಂತಾದವರ ಸಹವಾಸದಲ್ಲಿ ಒಂದು ಸ್ವಯಂಸೇವಕಪಳದ ಕಾರ್ಯಗಳಲ್ಲಿ ಪ್ರವೃತ್ತರಾಗಿದ್ದವರಾಗಿ ಧಾರವಾಡದ ಕಡೆಯವರ ಸಂಪರ್ಕ ಅವರಿಗೆ ವಿಶೇಷವಾಗಿತ್ತು. 'ಏಳು ಶೂರರ ಖನೀ,' ಎಂಬ ಒಂದು ಕವನವೂ, ಬಹುಶಃ 'ಕನಸಿನೊಳಗೊಂದು ಕಣಸು' ಎಂಬುದೂ ತಾಯಿ ಭಾರತಿ ಮೂದಲಿಸಿದ, ಪಣಹಾಕಿ ಆತ್ಮಬಲಿಯನ್ನು ಕೊಟ್ಟು-ಕೊಂಡು ಸೇವೆ ಸಲ್ಲಿಸೀಯೇನು? – ಎಂದೊ ಏನೊ ಮಗನನ್ನು ಕೇಳುವಂಥ ಪದ್ಯ.

ಅಲ್ಲಿಂದಾಚೆಗೆ ಅವರು ಗೆಳೆಯರ ಗುಂಪನ್ನು ಸ್ಥಾಪಿಸಿದರು. ಈಗ ಕೀರ್ತಿ-ಶಾಲಿಗಳಾದ ಹಲವು ಉತ್ತರಕರ್ನಾಟಕದ ಕವಿಗಳ ಗುಂಪನ್ನು ಕಟ್ಟಿದರು. ಅವರನ್ನು ವಾತ್ಸಲ್ಯದಿಂದ ಬೆಳಸಿದರು. ಆ ಕಡೆಯ ನುಡಿಗಟ್ಟು, ರೀತಿಛಂದ, ಮಾರ್ಗ ಇತ್ತಕಡೆಗಿಂತಲೂ ಪೂರ್ತಿ ಬೇರೆಯಾದರೂ ಒಂದು ಹೊಸ ವಿಲಾಸ ಬೆಳಗುವಂತೆ ಆ ಗುಂಪಿನವರಿಂದ ಮಾಡಿಸಿ ಒಂದು ಪಂಥವನ್ನೂ ವಿಶ್ವಾಸವನ್ನೂ ಕಟ್ಟಿದರು. ಗೋಕಾಕರು, ಮುಗಳಿ, ಆನಂದಕಂದ, ಶಂಬಾ, ಖಾನೋಳ್‌ಕರ್, ನರೇಗಲ್ – ಮುಂತಾದವರು, ಇನ್ನೊಂದು ಪಕ್ಕದಲ್ಲಿ ಮಧುರಚೆನ್ನ ಮುಂತಾ-ದವರು ಆ ವರೆಗೂ ಕನ್ನಡ ಸಾಹಿತ್ಯದಲ್ಲಿ ಇಲ್ಲದಿದ್ದ ಒಂದು ಬಗೆಯ ಸಾರಸ್ವತ ನಿರ್ಮಾಣದಲ್ಲಿ ತೊಡಗುವಂತೆ ಮಾಡಿದರು. ತರುವಾಯ ಆಲೂರರು ಜಯ-ಕರ್ನಾಟಕವನ್ನು ಸ್ಥಾಪಿಸಿ ನಡೆಸತೊಡಗಿದಾಗ ಅವರೊಡನೆ ಸಹಕರಿಸಿ ಈ ಗುಂಪಿ ನವರೆಲ್ಲರೂ ಈ ಹೊಸ ಕಾವ್ಯೋತ್ಸಾಹವನ್ನು ಕಾಣಿಸಿದರು. ಕವಿತೆ, ನಾಟಕ, ವಿಮರ್ಶೆ — ಎಲ್ಲ ಬಗೆಯ ನಿರ್ಮಾಣ ಕಾರ್ಯಗಳಿಗೂ ಆಲೂರರ ಮತ್ತು ಬೇಂದ್ರೆ

ಯವರ ನಾಯಕತ್ವ ಬೆಂಬಲ ದೊರೆತು ಒಂದು ವ್ಯಕ್ತಿ, ಒಂದು ಶಕ್ತಿಯಾಗಿಯೂ, ಒಂದು ಸಂಸ್ಥೆಯಾಗಿಯೂ ರೂಪಗೊಂಡಿತು. ೧೯೨೯ ರ ಬೆಳಗಾಂವ ಸಾಹಿತ್ಯ-ಸಮ್ಮೇಳನದಲ್ಲಿ ಈ ಗುಂಪಿನ ನಾಯಕರಾಗಿ ಬೇಂದ್ರೆಯವರು ರಂಗದ ಮೇಲೆ ಬಂದು 'ಹಕ್ಕಿಹಾರುತಿದೆ ನೋಡಿದಿರಾ' ಎಂಬ ಪದ್ಯವನ್ನು ಹಾಡಿದುದು ಒಂದು ಕ್ರಾಂತಿ-ದರ್ಶನದಂತೆ ಆಯಿತು. ದೋತ್ರ ಉಟ್ಟು, ಕೋಟು ಹಾಕಿಕೊಂಡು ತಲೆಗೆ ಮಹಾರಾಷ್ಟ್ರ ತರಹದ ರುಮಾಲು ಕಟ್ಟಿ, ಎಂದಿನಂತೆ ಕಣ್ಣು, ಮುಖ, ಕಾಲು, ಹುಬ್ಬು ಮಿಡಿಸಿ ಕೈಬೆರಳ ಹೂಟ, ಆ ಪಲ್ಲವಿಯನ್ನು ಚರಣಗಳ ಕೊನೆಯಲ್ಲಿ ಪ್ರತಿಯೊಂದು ಸಲ ಹೇಳಿದಾಗಲೂ ಈ ಹೊಸ ಹಕ್ಕಿಯ ಹಾರಾಟ ದಿಗ್ ದಿಗಂತ ವನ್ನೂ ಪುಳಕಗೊಳಿಸಿತು. ಅಂದಿನಿಂದ ಅವರು ಅಖಿಲಕರ್ನಾಟಕ ಪ್ರಭಾವ ವಾಗಿ ದೇಶದ ಮೇಲೆಲ್ಲ ಪ್ರಖ್ಯಾತರಾದರು. ಈಗ ಅವರು ಹೋಗದ ಸ್ಥಳವಿಲ್ಲ: ಅವರಿಗೆ ಪ್ರೀತಿ, ಭಕ್ತಿ, ವಿಶ್ವಾಸ ಇಲ್ಲದ ಊರಾಗಲಿ, ಸಾಹಿತಿ ವರ್ಗವಾಗಲಿ ಇಲ್ಲ. ಬೇಂದ್ರೆ ಎಂಬ ಹೆಸರು ಕನ್ನಡಿಗರ ಮನೆಮಾತಾಗಿದೆ.

ಇನ್ನೂ ಈಚಿನ ಕಾಲಗಳಲ್ಲಿ ಸಾಹಿತ್ಯ ಅಕಾಡೆಮಿ, ಆಕಾಶವಾಣಿಗಳಲ್ಲಿ ಉತ್ಪಾದಕ ಸಲಹೆಗಾರ, ಕಾವ್ಯಮಂಡಲಿಗಳಲ್ಲಿ, ಅಖಿಲಭಾರತ ಸಮಾರೋಹಗಳಲ್ಲಿ ಅವರ ಕೀರ್ತಿ ಪ್ರತಿಷ್ಠವಾಗಿದೆ. ಕನ್ನಡ ಸಾರಸ್ವತದಲ್ಲಿ ಅಖಿಲಭಾರತ ಕೀರ್ತಿ ಪಡೆದ ೪-೫ ಹೆಸರುಗಳಲ್ಲಿ ಅವರದೊಂದು ಪ್ರಧಾನವಾದದ್ದು. ಒಬ್ಬ ಸಣ್ಣ ಸ್ಕೂಲು ಮಾಸ್ತರು ಈ ಅಖಿಲಭಾರತ ಕೀರ್ತಿಯನ್ನೂ ವ್ಯಾಪಕತೆಯನ್ನೂ ಪಡೆದುದಕ್ಕೆ ಅವರ ಯೋಗ್ಯತೆ, ಚೈತನ್ಯಗಳ ಸ್ವರೂಪವೇ, ಚುರುಕೇ ಕಾರಣ.

ಜೊತೆಯವರೊಡನೆಯೂ, ಇತರರೊಡನೆಯೂ ಅವರು ನಡೆದು ನುಡಿದು ನಾಡಿನ ಸಾವಿರಾರು ಮಂದಿಗೆ ಸಂತೋಷವನ್ನೂ ಸ್ಫೂರ್ತಿಯನ್ನೂ ಕೊಟ್ಟಿದ್ದಾರೆ. ಧಾರವಾಡದಲ್ಲಂತೂ ಸಾಹಿತ್ಯಸಂಸ್ಕೃತಿ ಜೀವನಗಳಲ್ಲಿ ಅವರು ಭಾಗವಹಿಸದ ಸಮಾ ರಂಭ ಬಡವಾಗಿರುತ್ತದೆ. ಹೀಗೆ ಸ್ವಂತ ಕ್ರಿಯಾಚೈತನ್ಯದಿಂದ ಹತ್ತು ಜನ ವನ್ನೂ ವ್ಯಕ್ತಿಶಕ್ತಿಗಳನ್ನೂ ಮಿಡಿದು ಕಟ್ಟಿದ್ದು ಅವರ ಪ್ರಭಾವ, ಒಂದು ಹೊಸ ಭಾತಿಯ ಕೃತಿಯನ್ನು ನಿರ್ಮಾಣ ಮಾಡಿದ ಕಾರಯಿತ್ರೀ ಪ್ರತಿಭೆ ಬೇಂದ್ರೆ ಯವರನ್ನು ಆಧುನಿ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಒಂದು ದೊಡ್ಡ ಸತ್ವವನ್ನಾಗಿ ಮಾಡಿದೆ. ವ್ಯವಹಾರ, ಜೀವನದಲ್ಲಿ ಅವರ ಕಷ್ಟ ಸುಖಗಳು, ಅವರ ಕುಂದು ಕೊರತೆಗಳು, ಅವರಿಗೆ ಬಂದ ಕೀರ್ತಿ ನಿಂದೆಗಳು ಅವರನ್ನು ಇತರರಂತೆ ಮಾನವ ರನ್ನಾಗಿ ಉಳಿಸಿವೆ. ಸಮಾಜದಲ್ಲಿ ಬದುಕಬೇಕಾದವರೆಲ್ಲರಿಗೂ ಈ ಆಪತ್ತು ಎಡು ರಿಗೆ, ಪಕ್ಕದಲ್ಲಿ. ಸುತ್ತಮುತ್ತ ಕಾದೇ ಇರುತ್ತದೆ. ಅವರನ್ನು ಕಂಡವರಿಗೆಲ್ಲ ಇದೊಂದು ಅಸಾಧಾರಣವಾದ ಶಕ್ತಿ, ವ್ಯಕ್ತಿ, ಅಪೂರ್ವ ಚೈತನ್ಯ — ಎಂಬ ಅನು

ಭವ ಯಾರಿಗೂ ಎಲ್ಲಿಯೂ ಉಂಟಾದೀತು. ಇತರ ಯಾರಂತೆಯೂ ಅಲ್ಲ; ಈ ಬಗೆಯ ಚೈತನ್ಯ ಇವರೊಬ್ಬರದೇ, ಆ ಅಂಕಿತ, ಮುದ್ರೆ ಅನನ್ಯ ಲಭ್ಯ — ಎಂಬಷ್ಟು ಟಂಕಿತವಾದ ವ್ಯಕ್ತಿತ್ವ, ಮೂರ್ತಿತ್ವ ಅವರದು.

§•§ § §

‘ ಮಹನೀಯರು ’ ವಿನಿಂದ.

೧

# " ಅಡಿಗೆ ಮಾಡುವದು ಯಾರಿಗಾಗಿ ? "

ಬೇಂದ್ರೆಯವರ ಒಂದೊಂದು ಮಾತೂ ಒಂದು ಲೇಖಕ್ಕೋ ಪ್ರದೀರ್ಘ ಪ್ರಬಂಧಕ್ಕೋ ವಿಷಯವಾಗಬಲ್ಲದು. ಇದೊಂದು ಅಂಥ ಮಾತು. ರೇಡಿಯೊ ಶ್ರುತಿಗೊಳಿಸುವಾಗ ಅಕಸ್ಮಾತ್ತಾಗಿ ಕಿವಿಗೆ ಬಿದ್ದು ಮಾಯವಾದ ಮಾತು. ಜೊತೆಗೆ ಕಾವ್ಯ, ಸಾಹಿತ್ಯಗಳಿಗೆ ಸಂಬಂಧಿಸಿ ಒಂದೆರಡು ಮಾತುಗಳು ಕೇಳಿಸಿದವು. ಇವು ಅನ್ಯರವು. ಮುಂಬಯಿಯಲ್ಲಿ ಧಾರವಾಡ ಸ್ಟೇಶನ್ ಕೇಳಿಸುವದು ಅಪರೂಪ. ಮುಂದೆ ಎಷ್ಟು ಪ್ರಯತ್ನಿಸಿದರೂ ಎಲ್ಲವೂ ಕರ್‌ಕರ್, ಗರ್‌ಗರ್, ಆಯಿತು. ನಿರಾಶನಾಗಿ ಬೇರೆ ಕಾರ್ಯಕ್ರಮಗಳನ್ನು ಕೇಳಲು ಮನಸ್ಸಾಗದೆ ರೇಡಿಯೊ 'ಆಫ್' ಮಾಡಿದೆನು. ಆದರೂ ಅವರ ಇದೊಂದು ಮಾತು ತಲೆಯಲ್ಲಿ ಸುಳಿದಾಡುತ್ತಲೆ ಇತ್ತು.

ಮಧ್ಯಂತರದಲ್ಲಿ ಬೇಂದ್ರೆಯವರನ್ನು ಸಮಕ್ಷಮ ಕಾಣುವ ಯೋಗ ಒದ-ಗಿದ್ದರೂ ಆ ಈ ಮಾತುಗಳಲ್ಲಿ ಅವರ ಈ ಮಾತಿನ ಹೊಲಬನ್ನು ವಿಚಾರಿಸಲು ಸಮಯ ದೊರೆಯಲಿಲ್ಲ. ನೆನಪೂ ಆಗಲಿಲ್ಲ. ಇತ್ತೀಚೆಗೆ ಮಿತ್ರರೊಬ್ಬರು ಕೂಡಿದಾಗ ಈ ಪ್ರಸ್ತಾಪ ಬಂದಿತು. ಕೆಲವು ತಿಂಗಳು ಮೊದಲು ಧಾರವಾಡ ಜಿಲ್ಹಾ ಸಾಹಿತ್ಯ ಸಮ್ಮೇಲನ ಸೇರಿತ್ತು; ಬೇಂದ್ರೆ ಅದರಲ್ಲಿ ಭಾಗವಹಿಸಿದ್ದರು; ಬಹುಶಃ ಆ ಸಮ್ಮೇಲನ ಕಾರ್ಯಕ್ರಮ-ವರದಿಯಲ್ಲಿ ಬಿತ್ತರಿಸಿದ ಅವರ ಭಾಷಣದ ಅಂಶಗಳಲ್ಲಿ ಈ ಮಾತು ಬಂದಿರಬೇಕೆಂದು ಅವರಿಂದ ತಿಳಿಯಿತು.

ಕವಿ, ಕಾವ್ಯ, ಕಾವ್ಯನಿರ್ಮಿತಿ ವಿಷಯಗಳಿಗೆ ಸಂಬಂಧಿಸಿ ಬೇಕಾದಷ್ಟು ಸಾಹಿತ್ಯ ಹುಟ್ಟಿದೆ, ಹುಟ್ಟುತ್ತಲಿದೆ. ಆದರೆ ಬೇಂದ್ರೆಯವರ ಈ " ಅಡಿಗೆ ಮಾಡುವದು ಯಾರಿಗಾಗಿ ? " ಅಥವಾ " ಕಾವ್ಯ ನಿರ್ಮಿತಿ ಯಾರಿಗಾಗಿ ? " ಪ್ರಶ್ನೆಗೆ (ಬೇಂದ್ರೆಯವರ ಪ್ರಶ್ನೆಯನ್ನು ಹೀಗೆ ಅರ್ಥವಿಸಿಕೊಂಡಿರುವದು ಊಹೆ ಮಾತ್ರ. ವಸ್ತುಸ್ಥಿತಿ, ಪೂರ್ವಾಪರ ಸಂಬಂಧ ಏನಿದ್ದವೊ ತಿಳಿಯದು.) ಇಲ್ಲಿ ಉತ್ತರವಿಲ್ಲ. ನನಗೆ ತಿಳಿದ ಮಟ್ಟಿಗೆ ನಾಟ್ಯಶಾಸ್ತ್ರಕಾರ ಭರತನೊಬ್ಬನು ತನ್ನ ಕೃತಿರಚನೆಯ ಉದ್ದೇಶನಿರೂಪಣೆಯಲ್ಲಿ ಈ ಪ್ರಶ್ನೆಯನ್ನು ಉತ್ತರಿಸಿರುವನು.

ಆತನ ‘ ನಾಟ್ಯಶಾಸ್ತ್ರ’ —ನಾಟ್ಯ ಮತ್ತು ತದಂಗಭೂತವಾಗಿ ಕಾವ್ಯ, ಸಂಗೀತ (ಗೀತ, ವಾದ್ಯ, ನೃತ್ಯ) ವಿಷಯಗಳನ್ನು ಒಳಗೊಂಡಿರುವ ಪ್ರಾಚೀನತಮ ಗ್ರಂಥ. ಕಾಲಾಂತರದಲ್ಲಿ ಅದರಲ್ಲಿಯ ಒಂದೊಂದು ವಿಷಯವು ಒಂದೊಂದು ಶಾಸ್ತ್ರವಾಗಿ ಬೆಳೆದಿದೆ. ತನ್ನ ಗ್ರಂಥದಲ್ಲಿ ಭರತ—

> ದುಃಖಾರ್ತಾನಾಂ ಶ್ರಮಾರ್ತಾನಾಂ ಶೋಕಾರ್ತಾನಾಂ ತಪಸ್ವಿನಾಂ ।
> ವಿಶ್ರಾಂತಿ ಜನನಂ ಕಾಲೇ ನಾಟ್ಯಮೇತನ್ಮಯಾಕೃತಂ ॥
> ಧರ್ಮ್ಯಂ ಯಶಸ್ಯಮಾಯುಷ್ಯಂ ಹಿತಂ ಬುದ್ಧಿವಿವರ್ಧನಂ ।
> ಲೋಕೋಪದೇಶ ಜನನಂ ನಾಟ್ಯಮೇತದ್ಭವಿಷ್ಯತಿ ॥

—ನಾಟಕ ಮತ್ತು ಪರ್ಯಾಯದಿಂದ ಕಾವ್ಯಾದಿಗಳ ನಿರ್ಮಿತಿಯು ಬೇರೆ ಬೇರೆ ಪರಿಸ್ಥಿತಿಯಲ್ಲಿರುವ ಸಾಮಾಜಿಕರ ಐಹಿಕ-ಪಾರಮಾರ್ಥಿಕ ಹಿತಕ್ಕಾಗಿ, ಎಂಬುದನ್ನು ಸ್ಪಷ್ಟಪಡಿಸಿರುವನು. ಭರತನ ನಂತರ ಕಾವ್ಯರಚನೆಯ ರೀತಿ-ನೀತಿಗಳಲ್ಲಿ ಮತ ಭೇದಗಳಾದರೂ ಕಾವ್ಯದ ಉದ್ದೇಶ, ಪ್ರಯೋಜನ ಏನೆಂಬುವಲ್ಲಿ ಹೇಳಿಕೊಳ್ಳು ವಂಥ ವ್ಯತ್ಯಾಸವಾಗಲಿಲ್ಲ. ಶ್ರವಣಮಾತ್ರದಿಂದ ಸಾಮಾಜಿಕರ ಹೃದಯವನ್ನು ಮುಟ್ಟುವ ಸರಸ ಭಾವಾಭಿವ್ಯಕ್ತಿಯೇ ನಿಜವಾದ ಕಾವ್ಯ, ಕವಿಕರ್ಮ- ಎಂದು ಕವಿ, ಸಾಮಾಜಿಕ ಇಬ್ಬರೂ ಬಗೆದಿದ್ದರು. ಪರಸ್ಪರ ಒಲವು—ನಿಲವು, ಆಶೆ-ಆಕಾಂಕ್ಷೆಗಳಲ್ಲಿ ಅಧಿಕಾಂಶ ಹೊಂದಾಣಿಕೆ ಇದ್ದದರಿಂದ ಕವಿ, ಸಾಮಾಜಿಕರಲ್ಲಿ ನಿಕಟಸಂಬಂಧವಿದ್ದಿತು ಕಾವ್ಯದಿಂದ ಎಲ್ಲರಿಗೂ ಅವರವರ ಬೌದ್ಧಿಕ ಯೋಗ್ಯತಾ-ನುಸಾರ ರಸಾಸ್ವಾದ, ಜೊತೆಗೆ ಮನರಂಜನೆ ಮತ್ತು ಪ್ರಿಯೋಪದೇಶ (ಕಾಂತಾಸಂಮಿತತಾ) ದೊರೆಯುತ್ತಿದ್ದವು.

ಪಾಶ್ಚಾತ್ಯ ಸಂಪರ್ಕದೊಂದಿಗೆ ಕವಿ, ಸಾಮಾಜಿಕರಲ್ಲಿಯ ಈ ಬಗೆಯ ಸಂಬಂಧವು ಸಡಿಲಾಗತೊಡಗಿ ಇಂದು ಸಂಪೂರ್ಣ ಇಲ್ಲವೆನ್ನುವಷ್ಟು ಅಳಿ-ಸಲ್ಪಟ್ಟಿದೆ ಎನ್ನಬಹುದು; ಇದಕ್ಕೆ ಕವಿಕಾವ್ಯಗಳ ವಿಷಯದಲ್ಲಿ ಸಾಮಾಜಿಕರ ಹೆಚ್ಚುತ್ತಿರುವ ಅನಾಸ್ಥೆಯೇ ಸಾಕ್ಷಿ. ದೋಷವು ಕವಿ, ಸಾಮಾಜಿಕ ಇಬ್ಬರಲ್ಲೂ, ಇರಬಹುದು, ಇತರ ಕಾರಣಗಳೂ ಇರಬಹುದು. ಏನಿದ್ದರೂ ಇದ್ದುದರಲ್ಲಿಯೇ ಯುಕ್ತಮಾರ್ಗವನ್ನು ಕಂಡುಕೊಂಡು ಸಾಮಾಜಿಕರನ್ನು ತನ್ನತ್ತ ಆಕರ್ಷಿಸಿ ಕೊಳ್ಳುವುದು ಕವಿಯ ಹೊಣೆಗಾರಿಕೆ. “ ಉಣ್ಣುವವರೇ ” ಇಲ್ಲದಂತಾದರೆ ಅವನು “ ಅಡಿಗೆ ಮಾಡುವದಾದರೂ ಯಾರಿಗಾಗಿ ? ”

ಈ ಅನವಸ್ಥೆಯು ಕನ್ನಡಕ್ಕಷ್ಟೆ ಮಿತವಾಗಿಲ್ಲ. ಕನ್ನಡ ಕಾವ್ಯಪ್ರಪಂಚದಲ್ಲಿ ಇತ್ತೀಚೆಗೆ ಹುಟ್ಟಿಕೊಂಡ ಬೇರೆ ಬೇರೆ ‘ ಇಜಂ ’ ಗಳಿಗೆ ಸ್ಫೂರ್ತಿಸ್ಥಾನವಾದ



'ಜ್ಞಾನಪೀಠ ಪ್ರಶಸ್ತಿ' ಪಡೆದ ಇಬ್ಬರು ಕನ್ನಡದ ಮಹಾಕವಿಗಳು (ಬೇಂದ್ರೆ-ಕುವೆಂಪು)

ಬಾಹತ್ತರದ ಬೇಂದ್ರೆ

ಪಶ್ಚಿಮದಲ್ಲಿಯೂ ಹೀಗಾಗಿರುವುದನ್ನು ಈ ಕೆಳಗಿನ ಅವತರಣಿಕೆಯಿಂದ ಕಾಣಬಹುದು.

...Although poetic output is enormous, poetic quality to-day is generally in a depressed state. The prevalence of acclaimed poets – and of poetry reading – is deceptive. For the large number of established poets form a closed mutual-admiration society whose members double as critics. reviewing one another's books and seldom saying an unkind word in public. The problem of who should be celebrated, of course, is not created by the indulgent poet-critics alone. As Robert Lowell justly remarked not so long ago : " Our culture is so heroically receptive, so willing to imagine that every straw in the haystack is a needle, that the real needle cannot be discovered ".

At a time when many people are producing reams of declared verse, its fanciers all too often react like ornithologists examining a duck. The thing walks like a duck. its primaries are all in place, and its admirers-makers of ducks in their turn – discourse appreciatively on the exquisite joinery of wing and socket, the ingeneous solution to the problem of welding emphatic beak with awkward neck. What nobody seems to notice – or if they do, are too polite to remark – is that the goddam bird does not fly — (Time, 12-7-1971).

— ಈ ಮಾತುಗಳು ಅಮೇರಿಕೆಯ ವಿಶ್ವವಿದ್ಯಾಲಯೀನ ಪರಿಸರದಲ್ಲಿ ಕೈಕೊಂಡ ಸಮೀಕ್ಷೆಯ ಸಾಮಾನ್ಯ (ಅಂದರೆ ಕೆಲವು ಅಪವಾದಗಳನ್ನು ಬಿಟ್ಟು) ಫಲಿತಾಂಶಕ್ಕೆ ಸಂಬಂಧಿಸಿದ್ದರೂ ವ್ಯಾಪಕವಿದ್ದು ತುಸು ಹೆಚ್ಚುಕಡಿಮೆ ಇಂದಿನ ಕನ್ನಡ ಕಾವ್ಯಪ್ರಪಂಚಕ್ಕೂ (ಕೆಲವು ಅಪವಾದಗಳನ್ನು ಬಿಟ್ಟು) ಅನ್ವಯಿಸುವಂತಿವೆ.

ಕವಿಯ ಸ್ವಚ್ಛಂದವೃತ್ತಿ ಮತ್ತು ಆ ಮೂಲಕ ಉಂಟಾದ ಸಾಮಾಜಿಕರ ಒಲವು, ಅಭಿರುಚಿಗಳ ಉಪೇಕ್ಷೆ—ಇವು ಈ ಬಗೆಯ ಅನವಸ್ಥೆಗೆ ಕಾರಣವೆನ್ನಬಹುದಾಗಿದೆ. ಪಶ್ಚಿಮದವರನ್ನು ಅವರಷ್ಟಕ್ಕೆ ಬಿಟ್ಟು ನಮ್ಮ ಮಟ್ಟಿಗೆ; 'ಪುನಶ್ಚ ಹರಿಃ ಓಂ' ಎಂದು ಭರತನಿಗೆ ಶರಣು ಹೋಗಿ ಆತ ಮತ್ತು ನಂತರದ ಮಹಾವ್ಯಕ್ತಿಗಳು ನಿರೂಪಿಸಿದ ಕಾವ್ಯದ ಗೊತ್ತುಗುರಿ, ರೀತಿ-ನೀತಿಗಳನ್ನು ಅರಿತು, ಅವುಗಳೊಂದಿಗೆ ಪಶ್ಚಿಮದಿಂದ ಬರುವ ಸ್ಫೂರ್ತಿ ನಾವೀನ್ಯತೆಗಳ ಅಂಶಗಳನ್ನು ಸಾಮಾಜಿಕರ ಮನಸ್ಸಿಗೆ ಆಘಾತವಾಗದಂತೆ ಸಮರಸವಾಗಿಸಿಕೊಂಡು, ಮುನ್ನಡೆವಲ್ಲಿ ಶ್ರೇಯಸ್ಸಿದೆ ಎನ್ನಬಹುದು. ಕಾಲಕ್ರಮದಲ್ಲಿ ಗ್ರೀಕ, ಫಾರ್ಸಿ, ಮೊದಲಾದ ಪರಕೀಯ ಸಂಸ್ಕೃತಿಗಳಿಂದ ಅಷ್ಟಿಷ್ಟು ಪ್ರಭಾವಿತರಾದರೂ ಆ ಪ್ರಭಾವವನ್ನು ಅನಾದಿಕಾಲದ ತಮ್ಮ ಸಂಸ್ಕೃತಿಯೊಂದಿಗೆ ಈ ರೀತಿ ಸಮರಸವಾಗಿಸಿಕೊಂಡು ನಡೆದು ಬಂದಿರುವರು ನಮ್ಮ ಸಾಮಾಜಿಕರು. ಇದು ಐತಿಹಾಸಿಕ ಸತ್ಯ. ಅತ ಏವ ನಮ್ಮ ಕಾವ್ಯವಾಗಲಿ ಇತರ ಯಾವುದೆ ಕಲೆಯಾಗಲಿ ಹೀಗೆಯೆ ಬೆಳೆಯಬೇಕು. ಭಾರತೀಯರು ಕನ್ನಡಿಗರು ಎಂಬ ವೈಶಿಷ್ಟ್ಯದಿಂದ ಬಾಳಬೇಕಾದರೆ ಇದು ಅಗತ್ಯ. ಹೀಗಾದಲ್ಲಿ 'ಉಣ್ಣು-ವವರ' ಸಂಖ್ಯೆ ತಾನಾಗಿಯೆ ಹೆಚ್ಚುವದು; ಬಡಿಸಲು 'ಅಡಿಗೆ ಮಾಡಿದವನ' ಎರಡು ಕೈಗಳು ಸಾಲದಾಗುವವು. ಇದರಲ್ಲಿಯೇ ಅವನ ಪ್ರತಿಭೆ-ಪರಿಶ್ರಮಗಳ ಸಾರ್ಥಕ್ಯವಿದೆ.

"ಸಹೃದಯರಿಗೆ, ರಸಿಕರಿಗೆ, ಆನಂದವನ್ನು ಹಣಿಸಲು ಇರಿಸಿದ ಅರವಟ್ಟಿಗೆ ಯೆಂದರೆ ಕಾವ್ಯ" ಎಂಬ ಬೇಂದ್ರೆಯವರ ಮಾತಾದರೂ ಇದನ್ನೇ ಸಮರ್ಥಿಸು-ವದು. ಕಾವ್ಯಕ್ಕೆ ಸಂಬಂಧಿಸಿ ಆವರ ಪಶ್ನೆಯಲ್ಲಿ ಅಡಿಗೆಯ ಪ್ರತಿಮೆ ಬಂದಿದ್ದರೆ ಇಲ್ಲಿ ಅರವಟ್ಟಿಗೆಯ ಪ್ರತಿಮೆ ಬಂದಿದೆ, ಇಷ್ಟೇ ಭೇದ. ಅಡಿಗೆಯಾಗಲಿ, ಅರವಟ್ಟಿಗೆ ಯಾಗಲಿ ಸಾಮಾಜಿಕರ, ಕವಿಯ (ಅವನೂ ಒಬ್ಬ ಸಾಮಾಜಿಕ) ಹಸಿವು ನೀರಡಿಕೆ ಗಳ ತೃಪ್ತಿಗಾಗಿ, ಎಂಬುದು ಮಹತ್ವದ ಅಂಶ. *

—ಭೀಮರಾವ. ಚಿಟಗುಪ್ಪಿ.

§ § § §

* ಕವಿರಾಜಮಾರ್ಗದಲ್ಲಿ " ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯಪ್ರಯೋಗ-ಪರಿಣತಮತಿಗಳ್ " ಮಾತಿನಲ್ಲಿ ನೃಪತುಂಗನು ಎಲ್ಲ ಸಾಮಾಜಿಕರನ್ನು ಸಹೃದಯರು, ರಸಿಕರು ಎಂದು ಬಣ್ಣಿಸಿರುವುದನ್ನು ಈ ಸಂದರ್ಭದಲ್ಲಿ ಗಮನಿಸುವಂತಿದೆ.

೨

# ವರಕವಿ ಬೇಂದ್ರೆ ಅಭೀಪ್ಸೆ

ಡಾ|| ಮುಗಳಿಯವರ ಷಷ್ಠ್ಯಬ್ದಿ ಸಮಾರಂಭದ ಮೊದಲದಿನ ಗೆಳೆಯ-ರೊಬ್ಬರ ಜೊತೆ ಸಾಧನಕೇರಿಗೆ ವರಕವಿ ಬೇಂದ್ರೆಯವರ ದರ್ಶನವನ್ನು ಪಡೆಯಲು ಅವರ "ಶ್ರೀಮಾತಾ"ಗೆ ಹೋದೆವು. ಬೇಂದ್ರೆಯವರು ಬಾಗಿಲಲ್ಲೇ ಕಾಣಿಸಿ-ಕೊಂಡರು. ನಮಸ್ಕಾರಗಳನ್ನು ಅರ್ಪಿಸಿದಾಗ, ನಮಸ್ಕಾರಗಳು ಅವರಿಂದ ಕಾಣಿಸಿಕೊಂಡವು. ಮೊದಲೇ ನಮ್ಮ ಪರಿಚಯವೂ ಅವರಿಗಿರುವುದರಿಂದ 'ಏನು ಬಂದಿರಿ ಅದೂ ಮುಂಜಾವು, ಸಂತೋಷ'ವೆಂದು ನುಡಿದರು. ಅವರ ಬಲಗೈ ಬೆರಳುಗಳೆಲ್ಲ ಸುವರ್ಣದ ಉಂಗುರುಗಳಿಂದ ತುಂಬಿಕೊಂಡಿದ್ದವು. ಅವರ ಮಾತಿನ ವೈಖರಿಯ ಮಂಜರಿಯೇ ಹೊರಡುತ್ತಿರುವಾಗ ಹಾಗೇ ನಿಂತು ಕೇಳತೊಡಗಿದೆವು. ಅವರು ಒಳಗಡೆಗೆ ನಮಗೆಲ್ಲ ಕೂಡ್ರಿ ಎಂದು ಹೇಳಿ ಒಳಗೆ ಹೋಗಿ ಹೊರಬಂದರು. 'ಏನು ಬಂದ್ರಿ ಬೇಂದ್ರೆ ನೋಡಾಕಂತ ಮತ್ತೊಮ್ಮೆ. ಮೇಲಿಂದ ಮೇಲೆ ಬನ್ನಿರಿ ಬರುತ್ತಾ ಇರ್ರಿ ಬೇಂದ್ರೆ ಕಾಣಿಸಿಕೊಳ್ಳುತಾನ. ಹೊರಗಿನ ಬೇಂದ್ರೆನ ಬಹಳ ಮಂದಿ ನೋಡ್ಯಾರ ಒಳಗಿನ ಬೇಂದ್ರೆನ ಎಷ್ಟುಮಂದಿ ನೋಡ್ಯಾರ ನನಗ ಗೊತ್ತಆ ಆಗ-ಒಲ್ಲದು.' ಎಂದು ಮಾತು ನಿಲ್ಲಿಸಿದಾಗ; ನಾನು 'ಒಳಗಿನ ಬೇಂದ್ರೆನ ಕವನಗಳಿಂದ ಜನ ನೋಡತಾ ಇರುತ್ತಾರೆ; ಬೇಂದ್ರೆಯವರನ್ನ ಅರ್ಥ ಮಾಡಿಕೊಳ್ಳುತ್ತಾ ಇರುತ್ತಾರೆ'ಂದು ಹೇಳುತ್ತಿರುವಾಗ;"ನಿಲ್ಲಿ ನಿಲ್ಲಿ ಬೇಂದ್ರೆ ಬರೆದ ಕವಿತಾಗೋಳು ತಿಳಿ ಒಲ್ಲವು ಅಂತ ಅಡ್ಡೆದ ಮ್ಯಾಲ ತಿಣಿಕಿ ತಿಣಿಕಿ ಹೇಳತಾರ, ಅದೂ ಕವಿಗಳಾದವರೂ ಪಂಡಿತರು; ಆದರಾಗ ನೀವು ಕವಿತಾ ತಿಳಕೋತಾರ ಅಂತೀರಿ; ಅದ ಹ್ಯಾಂಗ ತಿಳಕೋತಾರ ಹೇಳ್ರಿ." ಅದೇ ಹೊತ್ತಿಗೆ ಗೆಳೆಯರು ಮಾತು ಪ್ರಾರಂಭಿಸಿದರು-" ನೀವು ಜನವಾಣಿಯ ಹೂವಾಗಿದ್ದೀರಿ ಶ್ರೀಸಾಮಾನ್ಯರು ತಿಳಕೊಳ್ಳುತ್ತಿದ್ದಾರೆ " ಎಂದಾಗ, ವರಕವಿ ಬೇಂದ್ರೆಯವರು—'ಅಲ್ಲೋ ನಿಲ್ಲು ನಿಲ್ಲು. ಶ್ರೀಸಾಮಾನ್ಯರು ಯಾರು ? ಯಾರು ? ನೀವ ಹೇಳ್ರಿ. ಶ್ರೀಸಾಮಾನ್ಯರ ಅರ್ಥ ಏನ ಮಾಡಿ-ದ್ದೀರಿ, ಹೇಳ್ರಿ."

ಗೆಳೆಯರು, "ನಿಮ್ಮ ಕವಿತೆಗಳನ್ನು ತಿಳಕೊಳ್ಳುವವರು ಹಾಡುವವರು."

ಬೇಂದ್ರೆಯವರು : "ನಿಮಗ ತಿಳದಿಲ್ಲ, 'ಇನ್ನೂ ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾಂವಾ' ಕವಿತಾ ಹಾಡಿದರ ಆಯ್ತೇನು ? ಒಳಗಿನ ಇಂಗಿತ ಏನು ? ನಿಮಗ ಗೊತ್ತದs ಏನು ?" ಎಂದಾಗ ಗೆಳೆಯರು ತಬ್ಬಿಬ್ಬಾದರು. 'ಕುಣಿಯೋಣು ಬಾ, ಕುಣಿಯೋಣು ಬಾ' ಹಾಡಿದರ ಒಳಗಿನ ಅರ್ಥ ಏನು ? ಎಂದಾಗ ಗೆಳೆಯರು ಮೌನವಾದರು. ನಾನು ಮಾತುಗಳನ್ನು ಬಿಚ್ಚಬೇಕೆಂದಾಗ, "ಹೇಳಿದವರು ತಿಳಕೊಳ್ಳಲಿಮೊದಲು ಬೇಂದ್ರೆ ಬರೇ ಬರದಿಲ್ಲ ಅದನ್ನು ತಿಳಿಯಹಚ್ಚಿದ್ದಾನೆ. ಜನ ತಿಳಿದಿಲ್ಲ ಅದಕ್ಕನ ಒಳಗಿನ ಬೇಂದ್ರೆನ ತಿಳದಿಲ್ಲ ಅನ್ನೋದು ನಾನು. ನನ್ನದನ್ನು ಬಹು ಕಠಿಣ ಅಂತಾರ, ಅಂತಾರ, ಹಾಂಗ ಅಂತಾರ, ಯಾಕ ಅಂತಾರೊs ಏನೋ ?"

ಶ್ರೀ ಅರವಿಂದರ ಭಾವಚಿತ್ರದ ಕಡೆಗೆ ಬಲಗೈಯಿಂದ ಐದೂ ಬೆರಳುಗಳನ್ನು ತೋರಿಸಿ, "ಯೋಗಾರಂಭದ ಮಾತುಗಳನ್ನು ಹೇಳಿದಾಗ, ಜನ ಭ್ರಾಂತರಾದರು. ಈಗ ಪೂಜೆ ಮಾಡತಾರ ಪೂಜೆ. ಅವರಿದ್ದಾಗ ರಾಜಕಾರಣಿಗಳ ಕರುಬತನ ಹರಿದುಹೋಯಿತು. ಅವರದು ತಿಳಿದವ್ರ್ಯಾಲ ತಲಿಮ್ಯಾಲ ಇಟಕೊಂಡು ಕುಣಿದರು. ಯಾಕ ಕುಣಿದರು ? ಗೊತ್ತೇನೋ ತಮ್ಮಾ ! ಶ್ರೀ ಅರವಿಂದರು ಅಂದ್ರ ಶ್ರೀ ಅರವಿಂದರು. ಅವರು ಭೂಮಿಗೆ ವಿಭೂತಿಪುರುಷರಾಗಿ ಬಂದಿದ್ರು. ಎಲ್ಲರಿಗೂ ಗೊತ್ತಿತ್ತು. ಆದ್ರ ಗೊತ್ತಾಗದ್ಹಾಂಗ ನಟಿಸಿದರು. ನಟಸಲಿ, ಮುಂದಿನವರು ನಂಬತಾರ ಅಂತ ಅವರು ಕಾರ್ಯಸಿದ್ಧಿ ಮಾಡಲಿಲ್ಲ; ಎಲ್ಲರೂ ನಂಬಲಿ ಅಂತೂ ಮಾಡಲಿಲ್ಲ; ಅವರಿಗೆ ತಿಳಿದದ್ದನ್ನೂ ಮಾಡಲಿಲ್ಲ; ಅವರಲ್ಲಿರುವ ವಿಭೂತಿ ಕಾರ್ಯ ಅವರನ್ನ ಮಾಡಾಕ ಹಚ್ಚಿತು; ಅದು ಅವರಿಗೆ ತಿಳಿದಿತ್ತು. ಅವರು ಮಾಡಿದ್ದಾರೆ. ನಾ ಮಾಡೀನಿ ಅಂದ್ರ ನನ್ನ ಅಳವು ಅಲ್ಲ; ನೀ ಮಾಡತೀನಿ ಅಂದ್ರ ನಿನ್ನ ಅಳವೂ ಅಲ್ಲ; ಆ ಅಳವು ಅವನದು, ಅವನದು (ದೇವನದು.) ಅವನು ನಿನಗೆ ಗೊತ್ತು ಇದ್ದಾನೇನೋ ತಮ್ಮಾ ! ಬಾ ಇಲ್ಲಿ"—ಎಂದು ಹೇಳಿ, ನಮ್ಮನ್ನು ಅಂಗಳಕೆ ಕರೆದುಕೊಂಡು ಹೋಗಿ, ಸೂರ್ಯದೇವನನ್ನು ಶ್ರೀ ಅರವಿಂದರ ಭಾವಚಿತ್ರ ತೋರಿಸಿದ ಹಾಗೆ ತೋರಿಸಿ, "ಅಂವ ಇದ್ದಾನ ನೋಡು, ಜನರಿಗಾಗಿ ಬೆಳಕ ಬೀರ್ತ್ಯಾನೋ ? ಕವಿಗಾಗಿ ಬೀರ್ತ್ಯಾನೋ ? ಭೂಮಿಗಾಗಿ ಬೀರ್ತ್ಯಾನೋ ? ಯಾರಿಗಾಗಿ ತನ್ನ ಪ್ರಕಾಶ ಹರಡ್ತ್ಯಾನು ಹೇಳು ? ತನ್ನ ಶಕ್ತಿಯಿಂದ ತಾನು ಇದ್ದಾನೆ. ಅವನ ಸುತ್ತ ಎಲ್ಲಾ ತಿರಗತಾವ. ಅವನು ತನ್ನ ಶಕ್ತಿಯಿಂದ ಇದ್ದಾಗ್ಯೂ ಅಂವ ಮುಣಗತಾನ ಹುಟ್ಟತಾನ ಅಂತಾ ಶಬ್ದ. ಬಹಳ ಬಿಸಿಲಾದ ಕೂಡಲೆ ಬಯ್ಯುತಾರ ಜನ. ಬಯ್ಯಲಿ, ಅಂಪಾವ್ರ ಅನಕೊಳ್ಳಲಿ ಯಾರ ಏನ ಮಾಡೂದಿದೆ. ಬಿಡಸಾಕ ಬರೋದಿಲ್ಲ. ಜನರ ಬಾಯಿ ಮುಚ್ಚಾಕ ಆಗೋದಿಲ್ಲ. ಮುಚ್ಚಿದರ ಮುಚ್ಚೋದಿಲ್ಲ. ನಾವ ತೆರಸೀವಿ ಅಂದ್ರ ತೆರಿಯೋದಿಲ್ಲ. ಇರಲಿ, ಶ್ರೀ ಅರವಿಂದರ

ಎಲ್ಲರಿಗೂ ತಿಳಿಸುವ, ಪ್ರಕಾಶ ಬೀರುವ ಶಕ್ತಿನೂ ಅದೇ ಅದೇ ಇತ್ತು, ಇದೆ, ಇರುತ್ತದೆ. ಅದನ್ನ ತಿಳಕೊಳ್ಳಬೇಕಷ್ಟೆ. ಶ್ರೀ ಅರವಿಂದರ ಅಭೀಪ್ಸೆಯನ್ನು ನೀವು ತಿಳಕೊಂಡಿದ್ದೀರೇನು ?" ಆಗ ಗೆಳೆಯರು ಇಲ್ಲೆಂದು ಮಾತನಾಡಿದರು.

"ನೋಡ್ರಿ, ವಿಷಯ, ಅನುಭವ, ಸಿದ್ಧಿ ಇವುಗಳನ್ನು ಕೂಡಿಕೊಂಡು ಭಗ-ವಂತನ ಸಲುವಾಗಿ ಮನ ಮಾಡುವುದೇ ಅಭೀಪ್ಸೆ. ಪ್ರಪಂಚದಲ್ಲಿದ್ದುಕೊಂಡು ಪ್ರಪಂಚದ ವಿಷಯ, ಅನುಭವ, ಸಿದ್ಧಿ ಇವುಗಳನ್ನು ತಿಳಕೊಂಡ್ರ ಪ್ರಪಂಚದ ಅಭೀಪ್ಸೆ; ಆಧ್ಯಾತ್ಮದೊಳಗಿದ್ದಲ್ಲಿ ಆಧ್ಯಾತ್ಮಿಕ ವಿಷಯ, ಆಧ್ಯಾತ್ಮಿಕ ಅನುಭವ, ಆಧ್ಯಾತ್ಮಿಕ ಸಿದ್ಧಿಗಳನ್ನು ದೊರಕಿಸಿ ಭಗವಂತನ ಸಲುವಾಗಿ ಮನ ಮಾಡುವುದೇ ಅವನ ಅಭೀಪ್ಸೆ; ವಿಜ್ಞಾನದ ಅಭ್ಯಾಸ ಮಾಡುವವರು ವಿಜ್ಞಾನದ ವಿಷಯ, ವಿಜ್ಞಾನದ ಅನುಭವ, ವಿಜ್ಞಾನದ ಸಿದ್ಧಿಯನ್ನು ಪಡೆಯುವವರು ವಿಜ್ಞಾನದ ಅಭೀಪ್ಸೆ ದೊರಕಿಸಿದಂತೆ. ನೀವೀಗ ಬೇಂದ್ರೆನ ತಿಳಕೊಳ್ಳಬೇಕೆಂದ್ರೆ ಬೇಂದ್ರೆಯ ವಿಷಯ, ಬೇಂದ್ರೆಯ ಅನುಭವ, ಬೇಂದ್ರೆಯ ಸಿದ್ಧಿ ತಿಳದ್ರ ಅದು ಬೇಂದ್ರೆಯ ಅಭೀಪ್ಸೆ. ಅಂದ್ರ ನಾ ದೊಡ್ಡಂವ ಅಂತ ಅಲ್ಲ. ನಾ ನಿಮಗ ತಿಳಿಸಿದೆ ಅಷ್ಟೇ. ಅಭೀಪ್ಸೆ ನಿಮಗ ಅರ್ಥ ಆಯಿತೋ ಇಲ್ಲೋ. ಬರೇ ನನಗಷ್ಟೇ ಅರ್ಥ ಆಗ-ಬಾರದು. ಇಲ್ಲಿ ನೋಡ್ರಿ ಈ ಗಿಡಾ ನಾ ಇಲ್ಲಿ ಬಂದಾಗ ಸಣ್ಣ ಸಸಿ ಇತ್ತು. ಆದರ ನನ್ನ ಎಷ್ಟುಪಟ್ಟ ಇದು ಬೆಳೀತು. ಇದರ ಅಭೀಪ್ಸೆ ಏನಂದರೆ – ನಾ ತಿಳ-ಕೊಳ್ಳಬೇಕು ಇದರ ವಿಷಯ ಏನು ? ಅಂದ್ರ ಬೀಜದಿಂದ ಮೊಳಿಕೆಯಾಯ್ತು. ಹಂಗ ಆಹಾರ ನೀರು ಭೂಮಿಯಿಂದ ಹೀರಿತು. ಭೂಮಿತಾಯಿ ಉಣ್ಣಿಸಿದಳು ಅನ್ರಿ. ಬಳಿಕ ಹವೆ, ಪ್ರಕಾಶ, ಪಡಕೊಂಡು ಅನೇಕ ದಿನಗಳ ಅನುಭವ ಪಡ-ಕೊಂಡು ಬೆಳೀತು; ಬೆಳೀತು ಹಂಗ ಬೆಳೀತು. ಮನುಷ್ಯಾನಕ್ಕಿಂತ ಉದ್ದ ಯಾಕ ಆಯ್ತು ? ವಿಷಯ ಹಾಂಗ ಅದ. ಅದರ ಅನುಭವನೂ ಹಂಗ ಅದ. ಬಳಿಕ ನೀವು ತಿಳಕೊಳ್ಳಬೇಕು. ಸಿದ್ಧಿ ಏನು ? ಹೂವು ಆಗತಾ ಇದೆ. ಕಾಯಿನೂ ಬಿಡತಾ ಇದೆ. ಅಷ್ಟ ಅಲ್ಲದ ಅದರ ಮುಖಾ ಅವನ ಕಡೆ ಅದ. ಇದು ಸಿದ್ಧಿ. ಭಗವಂತನ ಕಡೆ ಮುಖಾ ಮಾಡಿರುವುದೇ ಸಿದ್ಧಿ. ಇದನ್ನ ನಾ ಹೇಳಬೇಕಾಗಿಲ್ಲ. ಈ ಗಿಡಾ ಹೇಳತದ. ಆ ಕಂಟಿ ಹೇಳತದ. ಇದು ಬೇಂದ್ರೆ ಅಭೀಪ್ಸೆ ಅನ್ನಬ್ಯಾಡ್ರಿ. ಬೇಕಾದ್ರ ಅನ್ರಿ." ಎಂದು ಮಾತು ನಿಲ್ಲಿಸಿದಾಗ, ಗೆಳೆಯರು "ಶ್ರೀ ಬೇಂದ್ರೆಯವರ ಅಭೀಪ್ಸೆ". ಎಂದು ಹೇಳಿದರು. "ವರಕವಿ ಬೇಂದ್ರೆ ಅಭೀಪ್ಸೆ" ಎಂದು ನಾನು ನುಡಿದಾಗ ಎಲ್ಲರೂ ನಕ್ಕೆವು.

— ನಿಂಗಣ್ಣ ಸಣ್ಣಕ್ಕಿ

೩

"ಅ"

# ನನ್ನ ಜೀವನ ದೃಷ್ಟಿ

ನಾನೊಬ್ಬ ನಟ, ಕವಿ, ಪ್ರೊಫೆಸರ್, ಮಾಸ್ತರ, ಮಾತುಗಾರ-ಮಾತಾಳಿ, ವಿಮರ್ಶಕ, ಚಿಂತಕ ಇವೇ ಮೊದಲಾದ ಪಾತ್ರಗಳು.

ಬೇಂದ್ರೆ ಸಾಹಿತ್ಯವು ವಿವಿಧ ಪಾತ್ರಗಳ ಅನುಭಾವೋಕ್ತಿ

ಅಂತೆಯೇ ವಿವಿಧ ಮುಖ. ಆಡಿದ ನಾಟಕಗಳ ವಸ್ತು ಅನಪೇಕ್ಷಿತ, ಕಾಲ-ಸ್ಫೂರ್ತ; ಪ್ರೇಕ್ಷಕರ ಖುಷಿಯೇ ಸಂಬಳ, ಉಂಬಳಿ.

ಗೆಳೆಯ ನಟರ ಸಂಗತಿಯಿಂದ ತೇಲಲು ಕಲಿಯುತ್ತಿದ್ದೇನೆ. ನಮ್ಮ ಕಂಪನಿ ಮಾಲಕರು ಜಗದ್ವ್ಯಾಪಿ ಕೀರ್ತಿಯುವರು. ಅವರ ಎತ್ತರಕ್ಕೆ ನಾವು ಬರುವುದು ಕಷ್ಟ, ಆದರೂ ಕಂಪನಿ ಹೆಸರಿನಿಂದಲೂ ಬದುಕಿದ್ದೇನೆ. ತಾಯಿ ನನ್ನ ಹೃದ-ಯದ ಗುರು.

ಧಾರವಾಡ — ದತ್ತ
೧೪-೧೨-೬೫

---

ಕನ್ನಡ ಸಾಹಿತಿಗಳ "ಜೀವನ ದೃಷ್ಟಿ"ಯನ್ನು ಅವರವರ ಸ್ವಹಸ್ತಾಕ್ಷರದಲ್ಲಿ ಶ್ರೀ ಶ್ಯಾಮ ಹುದ್ದಾರರು ಸಂಗ್ರಹಿಸಿದ್ದಾರೆ. ಅವುಗಳಲ್ಲಿ ಬೇಂದ್ರೆಯವರ ಜೀವನ ದೃಷ್ಟಿಯಿದು.

## " ಬ "

ಶ್ರೀಮಾನ್ ದ. ರಾ. ಬೇಂದ್ರೆಯವರು ಒಂದು ಹೈಸ್ಕೂಲಿನ ಸ್ನೇಹ ಸಮ್ಮೇ-ಲನದಲ್ಲಿ ಅತಿಥಿಗಳಾಗಿ ಬಂದು ಮಾತನಾಡುತ್ತಿದ್ದರು. ಆ ಮಾತಿಗೆ ಇಂದು ೨೦ ವರ್ಷ ಸರಿದು ಹೋಗಿವೆ. ಅವರ ಅಂದಿನ ಭಾಷಣದ ವಿಷಯವಾಗಲಿ, ಹೇಳಿದ ವಿಚಾರಗಳಾಗಲಿ ನನ್ನ ನೆನಪಿನಲ್ಲಿ ಉಳಿದಿಲ್ಲ. ಆದರೆ ಒಂದು ಸಂದರ್ಭ ಬಂದಾಗ ಆ 'ದತ್ತವಾಣಿ' ಹೀಗೆ ಮಿಂಚಿತು.

"ಬಡವರ ಮಕ್ಕಳು ಮಣ್ಣ ಆಡತಿದ್ದರಽ ಮಂದಿ 'ಮಣ್ಣ ಮುಕ್ಕೊದು ಮುಂದ ಆದೇ ಅದಽ. ಈಗೇ ಯಾಕೆ ಮುಕ್ಕತೀ' ಅಂತಾರ. ಆದರಽ ಅದೇ ಮಣ್ಣನಽ ಶ್ರೀಮಂತರ ಮಕ್ಕಳು ಆಡಿದರ 'ನೋಡ್ರೀ, ಇಡೀ ಪೃಥ್ವಿನೇ ಎತ್ತಿ ಹಿಡೀತೀನಿ ಅಂತಽ ಈಗೇ ತೋರಸಲಿಕ್ಕೆ ಹತ್ಯಾನ' ಅಂತಾರ ಜನ" ಎಂದು ಹೇಳಿದರು.

— ಸಾರಸಂಗ್ರಹ : **ಶ್ಯಾಮ ಹುದ್ದಾರ**

§ § § §

## ೪

# ವರಕವಿ ದ. ರಾ. ಬೇಂದ್ರೆ ಅವರೊಂದಿಗೆ....

## (ಸಂದರ್ಶನ)

ಕರ್ನಾಟಕದಲ್ಲಿ ಕವಿಗಳಲ್ಲಿ ಶ್ರೇಷ್ಠತೆಯನ್ನು ಪಡೆದವರು ಇಬ್ಬರು. ಒಬ್ಬರು ರಾಷ್ಟ್ರಕವಿ ಕುವೆಂಪು; ಇನ್ನೊಬ್ಬರು ವರಕವಿ ದ. ರಾ.ಬೇಂದ್ರೆ. ಇವರಲ್ಲಿ ರಾಷ್ಟ್ರಕವಿ 'ಕುವೆಂಪು' ಅವರನ್ನು ಮೈಸೂರಲ್ಲಿ ಅವರ 'ಉದಯರವಿ'ವರೆಗೂ ಹೋಗಿ ದರ್ಶನಲಾಭ ಪಡೆದಿದ್ದೆ. ಇನ್ನೊಂದು ಆಶೆ ಉಳಿದಿತ್ತು- ವರಕವಿ ದ. ರಾ. ಬೇಂದ್ರೆ ಅವರನ್ನು ಕಾಣುವದು. ಆ ಸಮಯ ನನಗೆ ದಿನಾಂಕ ೯-೮-೧೯೬೪ ರಂದು ದೊರಕಿತು.

ಧಾರವಾಡಕ್ಕೆ ಹೋಗಿ ಶ್ರೀ ಬೇಂದ್ರೆಯವರು ಇರುವ ಸಾಧನಕೇರಿಯ ವಿಳಾಸ ಪಡೆದುಕೊಂಡು ಹೊರಟೆ. ವೇಳೆ ಮಧ್ಯಾಹ್ನ ಮೂರು ಗಂಟೆಯಾಗಿತ್ತು.

'ಬೇಂದ್ರೆಯವರು ಉತ್ತರ ಕರ್ನಾಟಕದಲ್ಲಿ ದೊಡ್ಡಕವಿಗಳು.'
'ನನ್ನನ್ನು ಭೆಟ್ಟಿ ಮಾಡಿಕೊಳ್ಳುವರೋ ಇಲ್ಲವೋ?'
'ಹೂಮಾಲೆ' ಪುಸ್ತಕ ನೋಡಿ ಏನಾದರೂ ಸೂಚನೆ ಕೊಡಬಹುದೆ?'

—ಎಂದೆಲ್ಲಾ ವಿಚಾರಗಳು ಮನಸ್ಸಿನಲ್ಲಿ ಬರತೊಡಗಿದವು. ಸಾಧನಕೇರಿಗೆ ಹೊಸದಾಗಿ ಹೋದದ್ದರಿಂದ ಶ್ರೀ ಬೇಂದ್ರೆಯವರ ಮನೆ ಸ್ವಲ್ಪ ವೇಳೆಯವರೆಗೆ ಗುರುತಿಸಲಿಕ್ಕಾಗಲಿಲ್ಲ. ಅಲ್ಲಿ ಹಾಯ್ದು ಹೋಗುತ್ತಿದ್ದ ಒಬ್ಬರನ್ನು ಕೇಳಿದೆ—

ನಾನು — ಕವಿ ಬೇಂದ್ರೆಯವರ ಮನೆ ಯಾವುದು ?

ದಾರಿಕಾರ — ಅಗೋ ನೋಡಿ; ಮೂರನೆ ಮನೆ ಕಾಣುವುದೇ ಬೇಂದ್ರೆಯವರು ಇರುವ ಮನೆ.

—ಎಂದು ನಾಲ್ಕು ಹೆಜ್ಜೆ ಬಂದು ತೋರಿಸಿ ಹೋದರು. ಅಂತೂ ಕವಿ ಬೇಂದ್ರೆಯವರ ಮನೆಗೆ ಬಂದೆನಲ್ಲಾ! ಎಂದು ಆನಂದ, ಅಭಿಮಾನಗಳು ಏಕಕಾಲಕ್ಕೆ ಉಂಟಾದವು.

ಕವಿ ಬೇಂದ್ರೆಯವರು ಇದ್ದಮನೆ ಸುಂದರವಾಗಿ ಕಂಡಿತು. ಸುತ್ತಲೂ ಗಿಡಗಳ ಗುಂಪು, ಅಲ್ಲಲ್ಲಿಗೆ ಹೂವಿನ ಗಿಡಗಳು ಕಣ್ಣಿಗೆ ಕಂಗೊಳಿಸುತ್ತಿದ್ದವು. ಹಚ್ಚಹಸುರಿನ ಹುಲ್ಲುಹಾಸಿಗೆ ಶೋಭಿಸುತ್ತಿತ್ತು. ವರಾಂಡದಾಟಿ ಒಳಬಾಗಿಲದ ಮೆಟ್ಟಲುಗಳನ್ನು ಹತ್ತಿ ಮನೆಯೊಳಗೆ ಹೋದೆ. ಯಾರ ಸಪ್ಪಳವೂ ಕೇಳಿಸಲಿಲ್ಲ. ಎಲ್ಲಕಡೆಗೂ 'ಶಾಂತ' ವಾತಾವರಣ ಹರಡಿದಂತಿತ್ತು! ಸಪ್ಪಳವಾದರೆ ಯಾರ ತಪಸ್ಸು ಹಾನಿಯಾಗುವದೋ ಅನ್ನಿಸುವಷ್ಟು ಶಾಂತತೆ ನೆಲಸಿತ್ತು. ಸ್ವಲ್ಪ ಹೊತ್ತು ಸುಮ್ಮನೇ ನಿಂತು ಆ ಮೇಲೆ — "ಸರ್, ಸರ್, "…. ಎಂದು ಕೂಗಿದೆ. ಯಾರೂ ಹೊರಗೆ ಬರಲಿಲ್ಲ. ಮತ್ತೆ — "ಸರ್, ಸರ್ "…. ಎಂದು ಕೂಗಿದೆ. ಸ್ವಲ್ಪ ಹೊತ್ತಿನಲ್ಲಿ "ಯಾರವರು, " ಎಂದೆನ್ನುತ್ತ ಶ್ರೀ ಬೇಂದ್ರೆಯವರೇ ಹೊರಗೆ ಬಂದರು! ಮಲಗಿದ್ದರಂತೆ ಕಾಣುತ್ತದೆ. ಉಟ್ಟಧೋತರದ ಹೊರತು ಮೈಮೇಲೆ ಏನೂ ಬಟ್ಟೆ ಇರಲಿಲ್ಲ. ಮೈಮೇಲೆ ಕೈಯಾಡಿಸಿಕೊಳ್ಳುತ್ತ, ಕಣ್ಣುಗಳನ್ನು ಒರಸಿಕೊಳ್ಳುತ್ತ — "ಕುಳಿತುಕೊಳ್ಳಿರಿ." ಎಂದರು. ನಾನು ಹಾಗೆಯೇ ಎದ್ದು ನಿಂತಿದ್ದು, ಅವರು ಕುಳಿತಮೇಲೆಯೇ ಕುಳಿತುಕೊಂಡೆ. 'ಮಲಗಿದ್ದವರನ್ನು ಎಬ್ಬಿಸಿದೆನಲ್ಲಾ, ಅಯ್ಯೋ'…. ಎಂದು ಅನ್ನಿಸಿತು ಮನಸ್ಸಿಗೆ. ಅನಂತರ — "ಏನು ಬಂದಿದ್ದಿರಿ? ನಿಮ್ಮದು ಯಾವೂರು?" ಎನ್ನುತ್ತ ಶ್ರೀ ಬೇಂದ್ರೆಯವರೇ ಪ್ರಶ್ನೆ ಮಾಡಿದರು. ಆಗ ನನಗಾದ ಆನಂದ ಅಷ್ಟಿಷ್ಟಲ್ಲ. ಬಹಳ ಸಂತೋಷದಿಂದ ಹೇಳಿದೆ.

ನಾನು :– "ನಾನು ರಾಮದುರ್ಗದವ ಸರ್, ತಮ್ಮ ಆಶೀರ್ವಾದ ಪಡೆಯಲು ಬಂದೆ." ಎಂದೆನ್ನುತ್ತ "ಹೂಮಾಲೆ" ಪುಸ್ತಕವನ್ನು ಅವರ ಕೈಯಲ್ಲಿ ಕೊಟ್ಟೆ.

ಕವಿಗಳು :– "ಏನು ಕೆಲಸ ಮಾಡುತ್ತಿದ್ದೀರಿ?"

ನಾನು :– ಪ್ರಾಥಮಿಕ (ಕನ್ನಡ) ಶಾಲೆಯ ಶಿಕ್ಷಕನಾಗಿದ್ದೇನೆ.

ಕವಿಗಳು :– ಇದಕ್ಕೆ ಮುನ್ನುಡಿಯನ್ನು ಬರೆಯಿಸಿದ್ದೀರಿ.

ನಾನು :– ಹೌದು ಸರ್, ನಾನು ಬೆಳಗಾಂವಿ ಕೆ. ಎಲ್. ಇ. ಟ್ರೇನಿಂಗ ಕಾಲೇಜಿನಲ್ಲಿದ್ದಾಗ ಶ್ರೀ ಬಿ. ಕೆ. ಹೊಸಮಠ, ಎಂಬ ಕನ್ನಡ ಪ್ರಾಧ್ಯಾಪಕರು ಪ್ರಿ. ಶ್ರೀ ಬ. ಗಂ. ತುರಮರಿ ಅವರು ಪ್ರೇಮದಿಂದ ಕಂಡು ಪ್ರೋತ್ಸಾಹಿಸಿದ್ದರಿಂದಲೇ ಈ ಹೂಮಾಲೆ ರೂಪತಾಳಿತು. ಅದಕ್ಕಾಗಿ ಅವರಿಂದಲೇ ಮುನ್ನುಡಿ ಬರೆಯಿಸಿದ್ದೇನೆ.

ಕವಿಗಳು :– ಇಷ್ಟು ಬೇಗನೆ ಅಚ್ಚಿಗೆ ಹಾಕಿಸಬಾರದಿತ್ತು.

ನಾನು :– ಏನೋ ಸರ್; ಹುಚ್ಚು ಹೊನಲು: ಗುರುಗಳ ಪ್ರೇರಣೆಯಿಂದ ಅಚ್ಚಿಗೆ ಹಾಕಿಸಬೇಕಾಯಿತು.

ಕವಿಗಳು :– ಈಗೀಗ ಕವಿಗಳಂತೂ ಹೆಚ್ಚಾಗಿಬಿಟ್ಟಿದ್ದಾರೆ. ನಾಲ್ಕಾರು ಕವನಗಳನ್ನು ಬರೆಯುವದು, ತಮ್ಮ ಹೆಸರು ಪ್ರಚಾರವಾಗುತ್ತದೆ; ಮಾರಾಟಮಾಡಿದರೆ ಹಣವೂ ಬರುತ್ತದೆ; ಎಂಬಾಸೆಯಿಂದ ಎಲ್ಲೆಲ್ಲೂ ಕವಿಗಳಾಗಿ ಬಿಟ್ಟಿದ್ದಾರೆ. ಹಾಗಾಗಬಾರದು. ಕವಿತೆಗಳನ್ನು ಬರೆಯಬೇಕು. ಬಹಳವಾಗಿ ಬರೆಯ ಬೇಕು. ಬರೆದವುಗಳನ್ನು ಕೆಲವು ಕಾಲದನಂತರ ಮತ್ತೆ ಮತ್ತೆ ಓದಬೇಕು. ಆಗ ನೀವು ಬರೆದ ತಪ್ಪು ನಿಮಗೇ ತಿಳಿಯುತ್ತದೆ. ನೀವು ಏನೋ ಪ್ರಯತ್ನಪಟ್ಟು ಬರೆದಿದ್ದೀರಿ. ಇದೋ ಇಲ್ಲಿ ಕುಳಿತಾರಲ್ಲ (ಎದುರಿಗಿದ್ದವ ರನ್ನು ತೋರಿಸುತ್ತ) ಇವರು ನಿಂತಲ್ಲಿಯೇ ಲಾವಣಿಪದಕಟ್ಟಿ ಹಾಡುತ್ತಾರೆ. ಎಷ್ಟೊಂದು ಅರ್ಥ ತುಂಬಿರುತ್ತದೆ. ಹಾಡಿಗೆ ಅರ್ಥವಿರಬೇಕು; ಲಯ–ವಿರಬೇಕು; ಭಾವ ತುಂಬಿರಬೇಕು.

ನಾನು :– ಹಾಗಾದರೆ ನಾನು ಹೇಗೆ ಪ್ರಯತ್ನ ಮಾಡಬೇಕು ಸರ್....

ಕವಿಗಳು :– ಕೇಳಿರಿ. ತಂಬಿಗೆ ನೀರಿನಲ್ಲಿ ನೊಣ ಬಿದ್ದರೆ ಏನು ಮಾಡುತ್ತಾರೆ ?

ನಾನು :– ಆ ತಂಬಿಗೆ ನೀರನ್ನೇ ಚೆಲ್ಲುತ್ತಾರೆ.

ಕವಿಗಳು :– ಮಾವಿನ ಹಣ್ಣಿನ ಶೀಕರಣಿಯ ಪಾತ್ರೆಯಲ್ಲಿ ನೊಣಬಿದ್ದರೆ ಏನು ಮಾಡುತ್ತಾರೆ ?

ನಾನು :– ನೊಣ ತೆಗೆದು ಹಾಕಿ ಶೀಕರಣಿ ಉಣ್ಣುತ್ತಾರೆ.

ಕವಿಗಳು :– ಹಾಗೆಯೇ ಕವಿತೆಗಳು. ಕವಿತೆಗಳು ನೀರಿನಂತೆ ನೀರಸವಾಗಿದ್ದರೆ ಬೀಸಾಕುತ್ತಾರೆ. ಕವಿತೆಗಳು ರಸವತ್ತಾಗಿದ್ದರೆ, ಸ್ವಲ್ಪ ದೋಷವಿದ್ದರೂ ಆಕರ್ಷಿಸುತ್ತಾರೆ. ಅದರಂತೆ ನೀವು ನಿಮಗೆ ಬರೆಯಬೇಕೆಂದು ಸ್ಫೂರ್ತಿ ಬಂದಾಗ ಬರೆಯಿರಿ. ಬಹಳಷ್ಟು ಬರೆಯಿರಿ. ಬರೆದುದನ್ನು ಕೆಲವು ಕಾಲದ ನಂತರ ನೀವೇ ಓದಿರಿ; ನೀವೇ ತಿದ್ದಿರಿ. ಅಂಥವುಗಳನ್ನು ನನ್ನ ಕಡೆಗೆ ಕಳಿಸಿರಿ. ನಿಮಗೆ ಮತ್ತೆ ಹೇಳುವ ಸಹಾಯ ಮಾಡುತ್ತೇನೆ. ಒಟ್ಟಿನ ಮೇಲೆ ನೀವು ಪದ್ಯವನ್ನು ಬರೆಯುವಾಗ ಒಂದು ಸಾಲು ಬರೆದು ನಿಲ್ಲಿಸಿ —'ನಾನು ಬರೆದದ್ದು ಏನು'? ಎಂದು ಪ್ರಶ್ನೆ ಮಾಡಿರಿ. ಅದಕ್ಕೆ ಉತ್ತರವನ್ನು ನೀವೇ ಹುಡುಕಿರಿ. ಆಗ ಅರ್ಥವಾಗುತ್ತದೆ. ಅದರಂತೆಯೇ ಬರೆಯುತ್ತ, ಪ್ರಶ್ನೆಗಳನ್ನು ಮಾಡುತ್ತ, ಅರ್ಥವನ್ನು ತಿಳಿಯುತ್ತ ಹೋದರೆ ನೀವೂ ದೊಡ್ಡ ಕವಿಗಳಾಗುತ್ತೀರಿ....

ನಾನು :– ಸಂತೋಷ ಸರ್. ಹಾಗೆಯೇ ಮಾಡುತ್ತೇನೆ.

ಕವಿಗಳು :– ನೀವು ಧಾರವಾಡದಲ್ಲಿ ಎಷ್ಟೆಲ್ಲ ಮಹಾನುಭಾವರನ್ನು ಬಿಟ್ಟು, ಸಾಧನ ಕೇರಿಗೆ ನನ್ನನ್ನು ಕೇಳುತ್ತ ಬಂದಿದ್ದೀರಿ ಆದರೆ ನಿಮಗೆ ಸಿಟ್ಟು ಮಾಡಿ

ಹೇಳಿದ್ದೇನೆ. ಇದುವೇ ನನ್ನ ಆಶೀರ್ವಾದ.... ಅಂದರು ನಗುತ್ತ. ಅಷ್ಟೊತ್ತಿಗೆ ೪|| ಗಂಟೆ ಆಗಿತ್ತು.

ನಾನು :- ನಮಸ್ಕಾರ ಸರ್. ಬರುತ್ತೇನೆ. ಸದಾ ನಿಮ್ಮ ಆಶೀರ್ವಾದವಿರಲಿ.

ಕವಿಗಳು :- 'ಬಾರೆ ಇಲ್ಲಿ, ಇವರಿಗೆ ಆಶೀರ್ವಾದ ಮಾಡಬೇಕಂತೆ'! ಎಂದು ಕೂಗಿದರು. ಒಳಗಿನಿಂದ ತಾಯಿಯವರು ಸಕ್ಕರೆ ಡಬ್ಬಿ ತಂದರು. ದಿನದ ರೂಢಿಯೋ ಏನೋ, ನನ್ನಂಥ ಅದೆಷ್ಟೋ ಜನರು ಬರುತ್ತಾ, ಹೋಗುತ್ತಾ ಇರಬೇಕು. ಕವಿ ಬೇಂದ್ರೆ ದಂಪತಿಗಳು ಸಕ್ಕರೆ ಕೊಡುತ್ತ — 'ಇದೋ ತೆಗೆದುಕೊಳ್ಳಿರಿ ಆಶೀರ್ವಾದ' ಎಂದು ಹರಸಿದರು.

ಆ ಮೇಲೆ ಕವಿಗಳು —

ಈಗ ನಮ್ಮ ಮಗ ಇದ್ದಿದ್ದರೆ ಒಂದು ನಾಟಕ ಪುಸ್ತಕ ಹೊಸ ಅಚ್ಚಾದದ್ದು ಕೊಡಿಸುತ್ತಿದ್ದೆ. ಮತ್ತೊಮ್ಮೆ ಬರ್ರಿ ನೀವು ಬರೆದುದನ್ನು ಕಳಿಸುತ್ತ ಇರ್ರಿ' ಅಂದರು.

ನಾನು ಪುನಃ ನಮಸ್ಕಾರ ಹೇಳಿ ಹೊರಗೆ ಬಂದೆ. ನನ್ನ ಜೊತೆಗೇನೆ ಕವಿ ಬೇಂದ್ರೆಯವರು ಕಂಪೌಂಡದ ವರೆಗೆ ಬಂದು— "ಬರುತ್ತೀರಾ; ನಮಸ್ಕಾರ." ಎಂದು ಹೇಳಿ ಒಳಗೆ ಹೋಗುವಾಗ 'ನಮಸ್ಕಾರ ಸರ್'.... ಅಂದೆ.... ಕವಿ ಬೇಂದ್ರೆಯವರು ಮನೆಯೊಳಗೆ ಹೋಗುವವರೆಗೂ ನೋಡುತ್ತ ನಿಂತೆ. ಉದ್ದವಾದ ತಲೆಗೂದಲು, ಮುಖಕ್ಕೆ ಒಪ್ಪುವ ಮೀಸೆ, ಗೌರವರ್ಣ, ನಗೆ ಮುಖದ ಪರಿಶುದ್ಧ ಹೃದಯದ ಕವಿ ಬೇಂದ್ರೆಯವರನ್ನು ಕಣ್ತುಂಬ ನೋಡಿದೆ; ಆನಂದಪಟ್ಟೆ. ಹಿಂತಿರುಗಿ ಬರುತ್ತಿದ್ದಂತೆ ಕವಿ ಬೇಂದ್ರೆಯವರೇ ಬರೆದ 'ದೊಡ್ಡವರು' ಎಂಬ ಹಾಡಿನ ಕೊನೆಯ ಮೂರು ಸಾಲುಗಳು ನೆನಪಾದವು....

ಕೃತಿಯು ಘನ
ಜಾಗೃತಿಯು ಘನ
ವಿಸ್ಮೃತಿಯು ಘನ
ದೊಡ್ಡವರು !

— ಸಂದರ್ಶಕರು, **ಮಾರ್ಕಂಡೇಯ ದೊಡಮನಿ**

§ § § §

೨೩

ಬೇಂದ್ರೆಯವರು ಆಗ ಸೊಲ್ಲಾಪೂರದಲ್ಲಿದ್ದರು. ನಾನು ಆಗ ಇಲ್ಲಿನ ಸಾಹಿತ್ಯ ಸಾಂಸ್ಕೃತಿಕ ಸಂಘದ ಅಧ್ಯಕ್ಷನಾಗಿದ್ದು ಒಂದು ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಬೇಕೆಂದು ಅವರಿಗೆ ಬರೆದೆ. ಬೇಂದ್ರೆಯವರಿಂದ ಉತ್ತರ ಬಂತು. ಅದರಲ್ಲಿ, ಧಾರವಾಡಕ್ಕೆ ಶ್ರೀ ವಿ. ಕೃ. ಗೋಕಾಕ ಇವರ ಕಡೆಗೆ ಹೋಗಬೇಕಾಗಿದೆ. ಅವರ ವಿಳಾಸಕ್ಕೆ ಪ್ರವಾಸ ಖರ್ಚನ್ನು ಮನಿಯಾರ್ಡರ ಮಾಡಿ ಅಂತಾ ತಿಳಿಸಿ, ತಾವು ಧಾರವಾಡದಿಂದ ಇಲ್ಲಿಗೆ ಬರುವ ತಾರೀಖು ತಿಳಿಸಿದರು. ಶ್ರೀ ಗೋಕಾಕರಿಗೆ ಆ ಪ್ರಕಾರ ಹಣ ಕಳಿಸಿದ್ದಾಯಿತು.

ಆದರೆ ಬೇಂದ್ರೆಯವರು ಬರಬೇಕಾದ ತಾರೀಖಿನ ಹಿಂದಿನ ದಿನ, ನಾನು ಕೋರ್ಟಿನಲ್ಲಿ ಕೆಲಸ ನಡಿಸುವಾಗ್ಗೆ, ಒಬ್ಬ ಮನುಷ್ಯ ಬಂದು ಬೇಂದ್ರೆಯವರು ಬಂದಿದ್ದಾರೆ ಮೋಟಾರ ಸ್ಟ್ಯಾಂಡಿನಲ್ಲಿದ್ದಾರೆ ಅಂತ ತಿಳಿಸಿದ. ನಾನು ನ್ಯಾಯಾಧೀಶರಿಂದ ಅಪ್ಪಣೆ ಪಡೆದು ಮೋಟರಸ್ಟ್ಯಾಂಡಿನತ್ತ ಬಂದೆ. ಅಲ್ಲಿ ಬೇಂದ್ರೆಯವರು ಸಲೀಸಾಗಿ ಕುಳಿತು ಸುತ್ತ ನೆರೆದ ಜನರಿಗೆ ಏನನ್ನೋ ವಿವರಿಸುತ್ತಿದ್ದರು. ನಾನು ಹೋಗಿ 'ಇದೇನು ನೀವು ನಾಳೆಗೆ ಬರುವವರಿದ್ದಿರಲ್ಲವೇ' ಎಂದು ಕೇಳಿದೆ. ಬೇಂದ್ರೆಯವರೆಂದರು: "ಹೌದಪ್ಪಾ ಹೌದು, ಆದರೆ ನಾನು ಧಾರವಾಡಕ್ಕೆ ಹೋಗಲೇ ಇಲ್ಲ. ಹೀಗೆಯೇ ಸೊಲ್ಲಾಪುರದಿಂದ ಬಂದೆ. ನೀವೆಲ್ಲ ನಾನು ಬಂದ ಮೇಲೆ ಇನ್ನೊಂದು ದಿನ ನಿಲ್ಲಿ ಅನ್ನುವವರೇ, ನನಗೆ ಗೊತ್ತು; ಆದ್ದರಿಂದ ಒಂದು ದಿನ ಮುಂಚೆಯೇ ಬಂದೆ" ಅಂದುಬಿಟ್ಟರು.

ಅವರನ್ನು ಮನೆಗೆ ಕರೆದುಕೊಂಡು ಬಂದದ್ದಾಯಿತು. ಮರುದಿನ ಕಾರ್ಯಕ್ರಮವೂ ಜರುಗಿತು.

—ಎಂ. ವ್ಹಿ. ಪಾಟೀಲ

೬

# 'ಗಂಗಾವತರಣ'ದ ಬೇಂದ್ರೆ

ಆಗ ನಾನಿನ್ನೂ ಕಾಲೇಜ ವಿದ್ಯಾರ್ಥಿ. ನಮ್ಮ ಕಾಲೇಜಿನ ಸಾಂಸ್ಕೃತಿಕ ಸಂಘದ ಆಶ್ರಯದಲ್ಲಿ ನಡೆದ ಒಂದು ಕಾರ್ಯಕ್ರಮಕ್ಕೆ ಶ್ರೀಯುತ ಬೇಂದ್ರೆಯವ-ರನ್ನು ಮುಖ್ಯ ಅತಿಥಿಗಳೆಂದು ಆಮಂತ್ರಿಸಲಾಗಿತ್ತು.

ಹೊತ್ತಿಗೆ ಸರಿಯಾಗಿ ಕಾರ್ಯಕ್ರಮವು ಆರಂಭವಾಯಿತು. ಅಂದು ಬೇಂದ್ರೆ ಯವರು ಸುಮಾರು ಒಂದು ತಾಸಿಗೂ ಮಿಕ್ಕಿ ತಮ್ಮದೇ ಆದ ಅಮೋಘವಾಣಿಯಲ್ಲಿ ಉದ್ಬೋಧಕ ಭಾಷಣ ಮಾಡಿದರು. ಬೇಂದ್ರೆಯವರ ಭಾಷಣವೆಂದರೆ ಕೇಳಬೇಕೆ? ಅದೊಂದು ರಸದೂಟ!

ಭಾಷಣ ಒಳ್ಳೆಯ ರಂಗಿಗೆ ಬಂದಿತ್ತು. ಒಮ್ಮೆಲೇ ಅವರ ಬಾಯಿಂದ ಅವರೇ ರಚಿಸಿದ 'ಗಂಗಾವತರಣ'ವು ಮಹಾಪೂರ ಬಂದ ಹೊಳೆಯಂತೆ ಅವರದೇ ಆದ 'ಗೆಂಡುಶೈಲಿ'ಯಲ್ಲಿ ನುಗ್ಗಿ ಹರಿಯುತೊಡಗಿತು. ಕವಿಗಳು ಭಾವನಾಪರವಶರಾಗಿ-ದ್ದರು. ಶ್ರೋತೃಗಳೂ ಭಾವಾಕಾಶದಲ್ಲಿ ಹಾರಾಡುತ್ತಿದ್ದರು.

'ಗಂಗಾವತರಣ'ವನ್ನು ಪೂರ್ತಿಯಾಗಿ ಅಂದು ಮೊದಲನೆಯ ನುಡಿಯನ್ನು ಪುನಃ ಅನ್ನತೊಡಗಿದರು :

> "ಇಳಿದು ಬಾ ತಾಯೆ ಇಳಿದು ಬಾ
> ಹರನ ಜಡೆಯಿಂದ
> ಹರಿಯ ಅಡಿಯಿಂದ
> ಋಷಿಯ ತೊಡೆಯಿಂದ ನುಸುಳಿ ಬಾ"

"ಈ ಊರ ಹೊಲದಲ್ಲಿ ಇಳಿದು ಬಾ" ಎಂದು ಒಂದು ಹೊಸ ಪದವನ್ನು ರಚಿಸಿ ಹೇಳಿದರು. ಮಳೆರಾಯ ಗುಡುಗಿದ! ಆಗಸದಲ್ಲಿ ಮಿಂಚು ಸಂಚರಿಸಿತು!! ಒಮ್ಮೆಲೇ ಮಳೆಯು ಧಾರಾಕಾರವಾಗಿ ಬೀಳತೊಡಗಿತು. ನಾವೆಲ್ಲರೂ, ಅಂದರೆ ಶ್ರೋತೃಗಳು ರಕ್ಷಣೆಗಾಗಿ ಓಡಿದೆವು. ಮಹತ್ವದ ಮಾತೆಂದರೆ ಆಗ ನಮ್ಮೂರಿನ

ಜನರಿಗೆ ಮಳೆಯ ಆವಶ್ಯಕತೆ ಇತ್ತು. ಆಗ ನನಗೆ ನಮ್ಮ ಪ್ರೊಫೆಸರರು ಹೇಳಿದ, "Poet is a prophet" ಎಂಬ ಮಾತಿನ ಸತ್ಯವು ಮನದಟ್ಟಾಯಿತು.

ಇಂದಿಗೂ ನಮ್ಮೂರಿನ ರೈತರು ಮಳೆ ಬಾರದಿದ್ದರೆ "ಆ ಬೇಂದ್ರೆಯವರನ್ನ ಕರಕೊಂಡು ಒಂದು ಹಾಡು ಹೇಳಸ್ರಪಾ. ಅಂದ್ರ ಮಳಿ ಬರತತಿ" ಎಂದು ಅನ್ನುವುದನ್ನು ನಾನು ಕೇಳಿದ್ದೇನೆ. ಇದು ವಿಚಿತ್ರವೆನಿಸಬಹುದು. ಆದರೆ ಸತ್ಯ! "ಗಂಗೆಯ ಕಾವ್ಯ"ವನ್ನು ಹಾಡಿದವರಿಗೆ ಗಂಗಾಮಾತೆ ಒಲಿಯದಿರುವಳೆ?

—ನಾರಾಯಣ ಧೂಳಖೇಡ

## ೭

# ಶ್ರೀ ಬೇಂದ್ರೆಯವರ ಜೊತೆ ಎರಡು ದಿನ

ಶ್ರೀ ಬೇಂದ್ರೆಯವರ ಜೊತೆ ಕಳೆದ ಎರಡು ದಿನಗಳನ್ನು ಕುರಿತು ಬರೆದರೆ ಒಂದು ಸಣ್ಣ ಪುಸ್ತಕವೇ ಆದೀತು. ಆ ಎರಡು ದಿನಗಳಲ್ಲಿಯ ೩-೪ ಘಟನೆಗಳ, ರಸನಿಮಿಷಗಳ ಬಗೆಗೆ ಮಾತ್ರ ಇಲ್ಲಿ ಹೇಳುವೆ.

'ಗೋಳಗುಮ್ಮಟ ಎಕ್ಸಪ್ರೆಸ್' ವಿಜಾಪೂರಕ್ಕೆ ಬೆಳಗಿನ ೪ ಗಂಟೆಯ ಸುಮಾರಿಗೆ ಬರುತ್ತದೆ. ಇತ್ತ ರಾತ್ರಿಯೂ ಅಲ್ಲ, ಅತ್ತ ನಸುಕೂ ಅಲ್ಲ. ಇನ್ನೂ ಮುಸುಕಿನಲ್ಲಿ ಇರುವ ವೇಳೆ. ಟ್ರೇನು ಬಂದು ನಿಂತಿತು. ಒಂದು ನಿಮಿಷ ಪ್ಲಾಟ್‌ಫಾರ್ಮಿನ ಮೇಲೆ ನಿಂತು 'ಫಸ್ಟ್‌ಕ್ಲಾಸ್'ಬೋಗಿಯತ್ತ ಕಣ್ಣುಹಾಯಿಸಿದೆ. ಅವರನ್ನು ಕರೆದುಕೊಂಡು ಬರಲುಹೋದ ಕಾರ್ಯಕರ್ತರೂ ಕಣ್ಣಿಗೆ ಬೀಳಲಿಲ್ಲ. ಗಡಿಬಿಡಿಯಿಂದ ಬೋಗಿಯನ್ನು ಹತ್ತಿ ಹುಡುಕಾಡಿದೆ. ಒಳಗಿನ ಕಂಪಾರ್ಟಮೆಂಟುಗಳು ಮುಚ್ಚಿಕೊಂಡಿದ್ದವು. ಮನಸ್ಸು ಒಂದು ಕ್ಷಣ ಗಲಿಬಿಲಿಯಾಯಿತು. ಅಷ್ಟರಲ್ಲಿ ಕಾರ್ಯಕರ್ತರು ಕಣ್ಣಿಗೆ ಬಿದ್ದರು. 'ಬೇಂದ್ರೆಯವರು ಬಂದಿದ್ದಾರೆಯೇ ?' ಎಂದು ಕೇಳಿದೆ. ಕಾರ್ಯಕರ್ತರೂ ಅರ್ಧ ನಿದ್ರಾವಸ್ಥೆಯಲ್ಲಿದ್ದರು. ಅವರು ಓಡುತ್ತ ಫಸ್ಟಬೋಗಿಯನ್ನು ಏರಿ ಒಂದು ಕಂಪಾರ್ಟಮೆಂಟನ್ನು ಬಡಿಯುತ್ತ ಸರ್ ಸರ್ ಎಂದು ಕೂಗಿದರು. ಅಷ್ಟರಲ್ಲಿ ಕಂಪಾರ್ಟಮೆಂಟ ತೆರೆಯಿತು. 'ವಿಜಾಪೂರ ಬಂತೇ' ಎಂಬ ಧ್ವನಿಯೂ ಬಂದಿತು. ಜೊತೆಗೆ ಬೇಂದ್ರೆಯವರೂ ಹೊರಗೆ ಬಂದರು. ಗಂಟೆಯಾಯಿತು. ಗಾರ್ಡ್ ವ್ಹಿಸಲ್ ಕೈಗೆ ತೆಗೆದುಕೊಳ್ಳುತ್ತಲೇ 'ದಯವಿಟ್ಟು ಒಂದು ನಿಮಿಷ' ಎಂದು ಸೂಚಿಸಿದೆ. ಅವರ 'ಹೋಲ್ಡಾಲ' ಹೊರತೆಗೆದು ಪ್ಲಾಟ್‌ಫಾರ್ಮಿನ ಮೇಲೆ ಇಟ್ಟು ಸರಿಪಡಿಸುತ್ತಿರುವಂತೆ ಟ್ರೇನು ಹೊರಟಿತು.

"ಇಷ್ಟೊತ್ತಿನತನಕಾ ಎಚ್ಚರೇ ಇದ್ದೆ. ಇದೀಗ ಕಣ್ಣು ಮುಚ್ಚಿಬಿಟ್ಟವು" ಎಂದು ಅವರು ನಗುತ್ತ ಹೇಳಿದಾಗ, ನನ್ನ ಮನಸ್ಸಿನ ದುಗುಡ, ಕಳವಳ ಮರೆತು, ಅವರ ಮುಖ ನೋಡಿದಾಗ, ಪ್ರವಾಸ ಹಾಗೂ ನಿದ್ರೆಯ ತೊಂದರೆಯಲ್ಲಿಯೂ ಕೂಡ ಉಲ್ಹಸಿತರಾಗಿಯೂ, ವಿನೋದಪರರಾಗಿಯೂ ಇದ್ದುದನ್ನು

ಕಂಡು ಮೂಕವಿಸ್ಮಿತನಾದೆ. ವಿಜಾಪೂರದಿಂದ ಹಾಗೇ ಸಿಂದಗಿಗೆ ಹೊರಟರೆ ಅವರ ಅಭಿಮಾನಿಗಳು ಅವರಿಗೆ ವಿಶ್ರಾಂತಿಗೆ ಅವಕಾಶ ಕೊಡುವದಿಲ್ಲವೆಂದು ತಿಳಿದು, ವಿಜಾಪೂರದ ಲಾಜಿಂಗ್‌ದಲ್ಲಿ ವಿಶ್ರಾಂತಿಗೆ ಏರ್ಪಾಡು ಮಾಡಲಾಗಿತ್ತು. ಅಲ್ಲಿಯ ಚೌಕೀದಾರನಿಗೆ ೪ ಗಂಟೆಯ ಸುಮಾರಿಗೆ ಬಾಗಿಲು ತೆರೆದೇ ಇಡಬೇಕೆಂದೂ ಸೂಚಿ-ಸಿದ್ದೆ. ನಾವು ಬರುವದರೊಳಗಾಗಿ ಆತ ಬೀಗ ಹಾಕಿಕೊಂಡು ಒಳಗೆ ಹೋಗಿದ್ದ.

೩-೪ ಸಲ ಕೂಗಿ ಕರೆದೆ. ಆತನ ಸುಳಿವೇ ಇಲ್ಲ. ನನಗೆ ಆತಂಕವೆನಿಸ-ಹತ್ತಿತ್ತು. ಬೇಂದ್ರೆಯವರಿಗೆ ವಿಶ್ರಾಂತಿ ಬೇಕು ಎಂಬ ಕಲ್ಪನೆ ನನಗೆ ಸ್ಪಷ್ಟ-ವಾಗಿತ್ತೆಂದೇ ಇಷ್ಟೆಲ್ಲ ಏರ್ಪಾಡು ಮಾಡಿದ್ದೆ. ಆದರೆ ಈಗ ಹೀಗಾಯಿತು. ೩-೪ ನಿಮಿಷ ಕಳೆಯಿತು. ಬೇಂದ್ರೆಯವರು ಏನನ್ನುವರೋ ಎಂದು ವಿಚಾರಿಸುತ್ತ ನಿಂತಿರುವಾಗಲೇ ಅವರ ಬಾಯಿಯಿಂದಲೂ ಬಂದೇಬಿಟ್ಟಿತು. 'ಇದೇನು ದೇವರ ಗುಡಿಯೋ? ಕೈಮುಗಿದು ಹೋಗಬೇಕೆಂಬ ನೇಮವೇನೂ ಇಲ್ಲ. ಕಾರು ಇದೆ ಹೊರಟೇ ಬಿಡೋಣ' ಎಂದರು ಅಷ್ಟರಲ್ಲಿ ಚೌಕೀದಾರ ಬಂದು ಬಾಗಿಲು ತೆರೆದ.

ವಿಶ್ರಾಂತಿಯ ನಂತರ ಮುಖಮಾರ್ಜನ ಮುಗಿಸಿ ಚಹಾ ಕುಡಿಯುವ ವೇಳೆಗೆ ಅದು ಹೇಗೋ ಅವರು ಅಲ್ಲಿ ಇಳಿದುಕೊಂಡ ಸಮಾಚಾರ ಕೆಲವರಿಗೆ ತಿಳಿದಿತ್ತು. ಕೆಲವು ವಿದ್ಯಾರ್ಥಿಗಳು, ಲಾಜಿಂಗದ ಮಾಲಕರು, ಮ್ಯಾನೇಜರ, ನೌಕರ ವರ್ಗ-ದವರು, ಬೇರೆ ಬೇರೆ ರೂಮಿನವರು ಅಲ್ಲಿ ಬಂದು ಸೇರಿದರು.

'ಏನ್ರೀ ನಾಡಗೌಡ್ರ— ನಿಮ್ಮ ಗೌಡಕಿ, ನಿಮ್ಮ ರೀತಿ ಇಲ್ಲೂ ನಡೆಯೋದು ಕಾಣಸ್ತದ' ಎಂದು ನನಗೆ ವಿನೋದ ಮಾಡಿದರು. ಅಲ್ಲಿ ಅವರ ವಿನೋದ-ಗೋಷ್ಠಿಗಾಗಿಯೇ ಜನ ಸೇರಿತ್ತು. ಬಂದವರ ಪರಿಚಯ ಮಾಡಿಕೊಂಡರು, ಅದರ ಜೊತೆಗೇ "ನಿಮ್ಮ ಹಿರಿಯರ ಬಗೆಗೆ ತಿಳಿದುಕೊಳ್ಳಿರಿ, ಅವರ ಪರಂಪರೆಯನ್ನು ಗುರುತಿಸಿಕೊಳ್ಳಿರಿ" ಎಂದು ಹೇಳಿದರಲ್ಲದೇ "ಇತಿಹಾಸ ಬೇರೇನಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಹಿಂದಿನ ತಲೆಮಾರಿನವರ ಬಗೆಗೆ, ಅವರ ಸಂಬಂಧಿಕರ ಬಗೆಗೆ ವಿಷಯ ಸಂಗ್ರಹಿಸಿದರೆ ಸಾಕು, ನೀವು ಇತಿಹಾಸಕ್ಕೆ ಕೊಡಬಹುದಾದ ದೊಡ್ಡ ಕಾಣಿಕೆ ಅದು?" ಎಂದು ವಿವರಿಸಿದರು.

ಅಂದು ಮೋಡ ಮುಸುಕಿತ್ತು. ಸಣ್ಣ ತುಂತುರ ಮಳೆ ಬೀಳುತ್ತಿತ್ತು. ಹವೆ ಬಹಳ ತಂಪಾಗಿತ್ತು. ಕೋಟು ಹಾಕಿಕೊಂಡು, ಕಿವಿ, ಕಪೋಲ ಮುಚ್ಚುವ ಉಲನ್ ಟೊಪ್ಪಿಗೆಯನ್ನು ಹಾಕಿಕೊಂಡು, ಹೆಗಲ ಮೇಲೆ ಶಾಲು ಹೊತ್ತುಕೊಂಡು ಎದ್ದರು. ಕೆಳಗೆ ಹೊಟೇಲ ಮಾಲಕರು, ವಿನಮ್ರತೆಯಿಂದ ಪೂಮಾಲೆಯನ್ನು ಅರ್ಪಿಸಿದರು, ಫೋಟೋಗ್ರಾಫರ ಬಂದು ನಿಂತಿದ್ದರು. ಅವರ ಹರಟೆ, ವಿನೋದ

ಸಾಗಿತ್ತು. ನಾನು 'ಫೋಟೋ ತೆಗೆಯುತ್ತಾರೆ ಸ್ವಲ್ಪ ಟೊಪ್ಪಿಗೆ ತೆಗೆಯುತ್ತೀರಾ' ಎಂದು ನಮ್ರವಾಗಿ ಸೂಚಿಸಿದೆ. ಗೋಣು ಹಾಕುತ್ತ 'ಇರಲಿ ಇದೊಂದು ಪೋಜು' ಎಂದು ನಗುತ್ತ ನುಡಿದರು.

ಮನೆಯಲ್ಲಿ ಊಟ ನಿಧಾನವಾಗಿ ಸಾಗಿತ್ತು. ಹರಟೆ ಜೋರಾಗಿ ನಡೆದಿತ್ತು. ಮಾತಿನ ಭರದಲ್ಲಿ 'ಚಟ್ನಿ'ಯನ್ನು ನಂಜಿಕೊಳ್ಳುವುದನ್ನು ಮರೆತರೇನೋ ಎನಿ-ಸಿತು. ನಾನು ಸಹಜವಾಗಿ ಸೂಚಿಸಿದೆ. 'ಚಟ್ನಿ' ಚೆನ್ನಾಗಿದೆಯೆಂದೂ ಸರ್ಟಿ-ಫಿಕೇಟನ್ನು ಕೊಟ್ಟೆ. 'ಹೀಗೋ' ಎಂದು ತೋರ ಬೆರಳನ್ನು ಚಟ್ನಿಗೆ ಸ್ವಲ್ಪ ತಾಗಿಸಿ ರುಚಿ ನೋಡಿದರು. 'ಭಲೋ ಆಗೇದ' ಎಂದು ಹೇಳಿದರು. ಆದರೆ ಕೊನೆಯವರೆಗೂ ಮುಟ್ಟಲೇ ಇಲ್ಲ. ನಂತರ ಹೇಳಿದರು, ಖಾರಾ ತಿನ್ನುವುದಿಲ್ಲ-ವೆಂದು. ಹರಟೆಯ ಮಧ್ಯದಲ್ಲಿ ಸೌ|| ಸಾವಿತ್ರಿ ಏನೋ ಕೇಳಿದಳು. "ಬಿಸಿ-ಸಕ್ಕರೆ" ಎಂದು ಕೇಳಿಸಿದಂತಾಯಿತು. "ಓಹೋ – ಅದೆಂತಹ ಬಿಸಿಸಕ್ಕರೆ! ಹಾಕ್ರಿ ನೋಡೋಣ" ಎಂದರು. ನಗೆ ಪುಟಿದೆದ್ದಿತು. ಅವರು ಚಪಾತಿಯನ್ನು ಹಾಲಿನಲ್ಲಿ ಮುರಿದುಹಾಕುತ್ತಿದ್ದುದರಿಂದ ಸೌ|| ಸಾವಿತ್ರಿ ಬೀಸಿದ ಸಕ್ಕರೆ ತಂದಿದ್ದಳು. ಅದು ಮಾತಿನ ಭರದಲ್ಲಿ ಬೀಸಿದ ಸಕ್ಕರೆ ಬಿಸಿಸಕ್ಕರೆಯಾಯಿತು.

ಫೋಟೋ ತೆಗೆಯಲು ಫೋಟೋಗ್ರಾಫರ ಸಜ್ಜಾಗಿದ್ದರು. ಊಟದ ನಂತರ ಬೇಂದ್ರೆಯವರ ಹರಟೆ ಇರದ್ದರಿಂದ ವಾತಾವರಣ ಸ್ವಲ್ಪ ಗಂಭೀರವಾಗಿತ್ತು. ನಮ್ಮ ಹುಡುಗರೂ ಫೋಟೋ ಪ್ರೋಗ್ರಾಮಕ್ಕೆ ನಿಲ್ಲಬೇಕಾಗಿತ್ತು. ಆದರೆ ಆ ಗಂಭೀರ ವಾತಾವರಣದಿಂದಾಗಿ ಅವರು ಹುದುಗಿಕೊಂಡಿದ್ದರು. ಸೌ|| ಸಾವಿತ್ರಿ ಹಾಗೂ ಅವಳ ಸಹೋದರಿಯರು ಸಂಕೋಚದಿಂದ ದೂರ ನಿಂತಿದ್ದರು. ಬೇಂದ್ರೆ ಯವರು ಫೋಟೋಗ್ರಾಫರನ ಎದುರಿಗೆ ಬಂದು 'ಹೂ ಆಗಲಿ, ಆವ್ರ ಫೋಟೋ-ದಾಗ ಶ್ರೀಖಂಡನೂ ಮೂಡಬೇಕು.' ಎಂದರು. ಹುಡುಗರಿಗೂ ನಮಗೂ ಕೂಡಿಯೇ ನಗೆಬಂದಿತು. ಗಾಂಭೀರ್ಯ ಕಡಿಮೆಯಾಯಿತು.

ಇಲ್ಲಿ, ಸಿಂದಗಿಯಲ್ಲಿ ನೋಡಬೇಕಾದ ಸಂಗನೇಶ್ವರ ಗುಡಿ, ನೀಲಗಂಗಮ್ಮನ ಗುಡಿ, ಭೀಮಾಶಂಕರ ಮಠ, ಜಕ್ಕಪ್ಪಯ್ಯನವರ ಸಮಾಧಿ ಮುಂತಾದವುಗಳನ್ನು ನೋಡಿದರಲ್ಲದೇ ಅವುಗಳ ಬಗೆಗೆ ವಿವರವಾದ ಮಾಹಿತಿಗಳನ್ನು ಕೇಳುತ್ತಿದ್ದರು. ಸಂಗಮೇಶ್ವರ ಗುಡಿಯಲ್ಲಿಯ ಶಿಲಾಮೂರ್ತಿಗಳ ಫೋಟೋ ತೆಗೆಸಿ ಕಾಯ್ದಿರಿಸ-ಬೇಕೆಂದೂ, ಮೂರ್ತಿಗಳನ್ನು ಕೂಡ ಕಾಪಾಡಬೇಕೆಂದೂ ತಿಳಿಸಿದರು.

ಸಭಾ ಸ್ಥಳಕ್ಕೆ ಬರುವದರೊಳಗಾಗಿ ಸಭಾಂಗಣ ಕಿಕ್ಕಿರಿದು ನೆರೆದಿತ್ತು. ಅನೇಕ ಸಂಘ-ಸಂಸ್ಥೆಗಳು, ಗಣ್ಯವ್ಯಕ್ತಿಗಳು ಸ್ವಯಂಪ್ರೇರಣೆಯಿಂದ ಮುಂದೆ ಬಂದು ಸತ್ಕರಿಸಿದ ದೃಶ್ಯ ಅಭೂತಪೂರ್ವವಾಗಿತ್ತು. ಆದರೆ ಅವರು ನಿರ್ವಿಕಾರ ಸ್ಥಿತಿ-ಯಲ್ಲಿಯೇ ಇದ್ದರು. ಪೂಮಾಲೆ ಅರ್ಪಿಸಲು ಸಾಹಿತ್ಯಪ್ರೇಮಿ, ವಯೋವೃದ್ಧ-

ರೊಬ್ಬರು ಮುಂದೆ ಬಂದಾಗ ಬೇಂದ್ರೆಯವರು ಅವರ ಕೈಯಿಂದ ಪೂಮಾಲೆಯನ್ನು ತೆಗೆದುಕೊಂಡು ಅವರಿಗೇ ಅರ್ಪಿಸಿ ಕೈಮುಗಿದ ಸನ್ನಿವೇಶ ಪ್ರತಿಯೊಬ್ಬರನ್ನೂ ಪುಲಕಿತರನ್ನಾಗಿ ಮಾಡಿತಲ್ಲದೆ, ಜನ ಪ್ರಚಂಡ ಕರತಾಡನ, ಹರ್ಷೋದ್ಗಾರವ್ಯಕ್ತ ಮಾಡಿತು. ಸುಮಾರು ೨೫ ಪೂಮಾಲೆಗಳು, ಅನೇಕ ರೇಶ್ಮೆಯ ವಸ್ತ್ರಗಳು, ಬೆಳ್ಳಿಯ ಅತ್ತರದಾನಿ,ಗುಲಾಬದಾನಿಗಳು, ಕವನಗಳು, ಅವರಿಗೆ ಅಂದು ಅರ್ಪಿತ-ವಾದವು. ತಮ್ಮ ಭಾಷಣ ಪ್ರಾರಂಭಿಸುತ್ತ 'ಸಿಂದಗಿಯ ಜನ ಇಷ್ಟು ಹುಚ್ಚರು ಎಂದು ನನಗ ತಿಳಿದಿರಲಿಲ್ಲ' ಎಂದು ಹೇಳಿದಾಗ ಕಿವಿ ಗಡಚಿಕ್ಕುವ ಹಾಗೆ ಚಪ್ಪಾಳೆ ತಟ್ಟಿದುದು, ತಮ್ಮ ಬಗೆಗೆ ಇರಿಸಿಕೊಂಡ ಈ ಹುಚ್ಚುತನ ಹಾಗೇ ಇರಲಿ ಎಂದು ಉತ್ತರಿಸಿದಂತಿತ್ತು.

ಗುರಣ್ಣ ಕುಲಕರ್ಣಿಯವರು ಅವರನ್ನು ಊಟಕ್ಕೆ ಆಮಂತ್ರಿಸಿದ್ದರು. ಬರಿ-ಮೈಯಿಂದ ಊಟಕ್ಕೆ ಕುಳಿತಿದ್ದರು. ಹರಟೆ, ಯಥಾಪ್ರಕಾರ ಸಾಗಿತ್ತು. ಊಟದ ನಂತರ ಕೂಡ ಹಾಲಿನಲ್ಲಿ ನಿಂತು ಹರಟೆ-ಮಾತು ನಡೆಯಿತು. ಅಂದೂ ಕೂಡ ಮೋಡ ಮುಸುಕಿತ್ತು. ಸ್ವಲ್ಪ ಸ್ವಲ್ಪ ಆಗಾಗ ಮಳೆಯಾಗುತ್ತಲಿತ್ತು. ಇದರಿಂದ ಹವೆ ತಂಪಾಗಿತ್ತು. ಆ ಚಳಿಯನ್ನು ಮರೆತು ಮಾತು ಸಾಗಿತ್ತು. ನಾನು ಅವರಿಗೆ ಅಂಗಿಯನ್ನು ತಂದುಕೊಟ್ಟೆ. ಅದನ್ನು ಹಾಕಿಕೊಳ್ಳುತ್ತ 'ಡಾಕ್ಟರರಿದ್ದಾರಂತೇ ಮೈಚಳಿ ಬಿಟ್ಟು ಮಾತಾಡಲಿಕ್ಕ ಹತ್ತೀನಿ, ನಿಮ್ಮ ಡ್ಯೂಟಿ ಮಾಡಿದಿರಿ.' ಎಂದಾಗ ಎಲ್ಲರ ಮುಖದಲ್ಲೂ ಮಂದಹಾಸ ಮೂಡಿತು.

ಸ್ಟೇಟ ಬ್ಯಾಂಕಿನಲ್ಲಿ ಚಹಾಕ್ಕೆ ಕರೆದಿದ್ದರು. ಅಲ್ಲಿ ಏನೋ ಸಂದರ್ಭ ಬಂದಾಗ ತಮ್ಮ ಬಾಲ್ಯದ ಜೀವನ ಕುರಿತು ಹೇಳುತ್ತಿರುವಾಗ ನಮ್ಮೆಲ್ಲರ ಹೃದಯ ತುಂಬಿ ಬಂದಿತು; ಹಾಗೇ ಶ್ರೀ ಮಾಸ್ತಿಯವರ ಸಹಾಯವನ್ನೂ, ಅವರ ಸ್ವಭಾವವನ್ನೂ ಹೇಳುತ್ತಿರುವಾಗ ಮಾಸ್ತಿಯವರ ಬಗೆಗೆ ನಮಗಿದ್ದ ಗೌರವದ ಜೊತೆಗೆ ಕನ್ನಡದ ಈ ಕವಿಋಷಿಯನ್ನು ಅಂದು ಅಂತಃಕರಣದಿಂದ ನೋಡಿದ ಬಗೆಗೆ ಇನ್ನಷ್ಟು ಅವರ ಬಗೆಗೆ ಅಭಿಮಾನ ಮೂಡಿತು; ಅಲ್ಲದೇ ಬೇಂದ್ರೆಯವರು ಕೂಡ ಅಷ್ಟೇ ವಿನಮ್ರ ಭಾವದಿಂದ ಮಾಸ್ತಿಯವರನ್ನು ಕಾಣುವದನ್ನು ನೋಡಿ 'ಕೃತಜ್ಞತೆ ಎಂದರೆ ಇದು' ಎಂಬ ಭಾವನೆ ಮೂಡಿತು.

—ಡಾ. ಬಿ. ಆರ್. ನಾಡಗೌಡ

೮

# ಕನ್ನಡದ ಗಾರುಡಿಗ—ದ. ರಾ. ಬೇಂದ್ರೆ

ಧಾರವಾಡ ನನಗೆ ತೀರ ಪರಿಚಿತ ನಗರವಾದರೂ, ಧಾರವಾಡದ ಎಲ್ಲ ಸಂದು-ಗೊಂದು ಸುತ್ತುವುದು ಸಾಧ್ಯವಾಗಿಲ್ಲ. ಏನೋ ಆಕಸ್ಮಿಕ ಕಾರಣಗಳಿಗಾಗಿ ಅತ್ತಿತ್ತ ಕೆಲ ಸಂದಿಗಳನ್ನು ಕಾಣುವ ಪ್ರಸಂಗ ಬಂದಿರಬಹುದು. ಈಗ ನಾನು ಧಾರ-ವಾಡಕ್ಕೆ ಬಂದರೆ ಗೆಳೆಯ ಬಿ. ವಾಯ್. ಬೆಟಗೇರಿಯವರಲ್ಲಿ ವಾಸ್ತವ್ಯ ಮಾಡುತ್ತಿರುವುದಿದೆ. ಅವರು ಇತ್ತೀಚೆ ಮಂಗಳವಾರಪೇಟೆಯ ಪ್ರೋತ್ನೀಸ ಓಣಿಯಲ್ಲಿ ಮನೆ ಹಿಡಿದಿದ್ದಾರೆ. ಅಲ್ಲ ಸುತ್ತಾಡುವ ಪ್ರಸಂಗ ಬಂದಿದ್ದು, ಆಕಸ್ಮಿಕವಾಗಿ ಅಲ್ಲಿನ ಗುಣಾರಿಯವರ ಮನೆಕಂಡು, "ಇದೇ ಕವಿವರ ಬೇಂದ್ರೆಯವರ ಜನ್ಮಸ್ಥಳವಲ್ಲವೆ?" ಎಂದು ಯಾವುದೋ ಒಂದು ಅವ್ಯಕ್ತಭಾವನೆ ಹೊಂದಿದವನಾಗಿದ್ದೇನೆ. ಓರ್ವ ಕವಿವರರ ಜನ್ಮಸ್ಥಳವೆಂದರೆ ಸಾಮಾನ್ಯವೇ ? ಆದರೂ ನಮ್ಮ ನಾಡಿದಲ್ಲಿ ಇದೂ ಕೂಡ ಒಂದು ಸಾಮಾನ್ಯ ಸಂಗತಿಯಾಗಿರಬಹುದು. ವಿದೇಶಗಳಲ್ಲಿ ಕವಿಗಳ, ಲೇಖಕರ ಸ್ಮಾರಕಗಳನ್ನು ಅದ್ದೂರಿಯಿಂದ ನಿರ್ಮಿಸಿದಾಗ, ನಮ್ಮ ದೇಶದಲ್ಲಿ ಅದೂ ನಮ್ಮ ನಾಡಿನಲ್ಲಿ ಕವಿಗಳ, ಲೇಖಕರ ಸ್ಮರಣಾರ್ಥವಾಗಿ ಒಂದೆರಡು ಸಾಮಾನ್ಯ ಕುರುಹು ಮಾತ್ರ ಕಾಣುತ್ತಿರುವುದು, ನಮ್ಮ ಜನತೆಯ ತಾತ್ಸಾರ ಪ್ರವೃತ್ತಿಯ ಸಂಕೇತವೇ ಆಗಿದೆ.

ಇನ್ನೂ ನಾನು ಹೈಸ್ಕೂಲಿನಲ್ಲಿದ್ದಾಗಲೇ ಬೇಂದ್ರೆಯವರ ಪ್ರಭಾವ ನನ್ನ ಮೇಲಾಗಿದೆ. ನಾನು ಎಂಟನೆಯ ವರ್ಗದಲ್ಲಿ ಓದುತ್ತಿರಬಹುದು. ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ' ಕವಿತೆ ನನ್ನನ್ನು ತುಂಬ ಆಕರ್ಷಿಸಿ, ನಾನೂ ಕೂಡ ಇದೇ ಮಾದರಿಯ ಎಂಥದೋ ಕವಿತೆ ಗೀಚುವಂತೆ ಪ್ರೇರೇಪಿಸಿದ್ದು, 'ವೃತ್ತಪತ್ರಿಕೆ ಹೋಗುತಿದೆ ನೋಡಿದಿರಾ' ಎಂಬ ಕವಿತೆ ಬರೆದೆ. ಆಗಿನ ಪಠ್ಯ ಪುಸ್ತಕಗಳಲ್ಲಿನ ಬೇಂದ್ರೆಯವರ ಇನ್ನಿತರ ಕವಿತೆಗಳು ನನಗಂತೂ ಮೋಡಿ ಹಾಕಿದ್ದವು.

ಬೇಂದ್ರೆಯವರನ್ನು ನಾನು ಮೊದಲು ಕಂಡಿದ್ದು, ಧಾರವಾಡದ ೧೯೫೭ರಲ್ಲಿ ಕನ್ನಡಸಾಹಿತ್ಯಸಮ್ಮೇಲನದಲ್ಲಿ. ಮಾತುಗಾರಿಕೆಯ ಮೋಡಿ, ಎಂಥವರನ್ನೂ ಮಂತ್ರ

ಮುಗ್ಧರನ್ನಾಗಿ ಮಾಡುವ ಅವರ ವ್ಯಕ್ತಿತ್ವ— ಆ ಸಮಯದಲ್ಲಿ ಪ್ರತ್ಯಕ್ಷ ಕಾಣುವ ಸುಯೋಗ ಒದಗಿತು. ೧೯೬೦ ರ ಮಣಿಪಾಲಸಮ್ಮೇಲನದಲ್ಲಿ ಬೇಂದ್ರೆಯವರು ಹಾಡಿದ 'ಕರಡಿ ಕುಣಿತ' ನಿಜವಾಗಿಯೂ ಕರಡಿ ಆಡಿಸುವವನಿಗಿಂತ ಶ್ರೋತೃಗಳ ಮೇಲೆ ಗಾರುಡಿಯಂತೆ ಹೆಚ್ಚಿಗೆ ಪರಿಣಾಮ ಮಾಡಿತ್ತು. ಕವಿತಾ ವಾಚನದಲ್ಲಿಯೂ, ತಮ್ಮ ಕವಿತೆಗಳನ್ನು ಸರಾಗವಾಗಿ ಹಾಡುವುದರಲ್ಲಿಯೂ 'ಸ್ಪೇಶಲ್ ಬೇಂದ್ರೆ ಬ್ರ್ಯಾಂಡ್' ಎಂಬುದೇ ಒಂದಿದೆ. ಅದು ಎಲ್ಲರಿಗೂ ಸಾಧಿಸಿಲ್ಲ; ಸಾಧಿಸುವಂಥದೂ ಅಲ್ಲ. ಎಂಥ ಹಳ್ಳಿಯ ಅಶಿಕ್ಷಿತನಿಂದ, ಸುಸಂಸ್ಕೃತ ಸುಶಿಕ್ಷಿತನವರೆಗೂ, ಎಲ್ಲರನ್ನು ತಮ್ಮ ಧ್ವನಿಯಲ್ಲಿ ಸೆರೆಹಿಡಿಯಬಲ್ಲ ಶಕ್ತಿ, ಗಾರುಡಿತನ ಬೇಂದ್ರೆಯವರ ಹದಗಾರಿಕೆಯ ಮಾತಿನಲ್ಲಿದೆ. ಬೇಂದ್ರೆಯವರು ಮಾಂತ್ರಿಕರು.

ಮಣಿಪಾಲ ಸಾಹಿತ್ಯಸಮ್ಮೇಲನದಲ್ಲಿಯೇ ಒಂದು ವಿನೋದದ ಪ್ರಸಂಗ ಜರುಗಿತು. ಸಮ್ಮೇಲನದ ಅಂಗವಾಗಿ ಕವಿಗೋಷ್ಠಿಯಲ್ಲಿ ಕೆಲವೇ ಜನ ಆಹ್ವಾನಿತ ಕವಿಗಳು ತಮ್ಮ ಕಾವ್ಯವಾಚನ ಮಾಡಿದ್ದರು. ಸಮ್ಮೇಲನಕ್ಕಾಗಿ ಬಂದ ಬಹಳಷ್ಟು ಜನ ತರುಣ ಕವಿಗಳಿಗೆ ಅವಕಾಶವಾಗುವಂತೆ ಬೇರೊಂದು ಕವಿತಾವಾಚನ ಕಾರ್ಯಕ್ರಮವನ್ನು ಬೇಂದ್ರೆಯವರೇ ಮುಂದಾಗಿ ಏರ್ಪಡಿಸಿದ್ದರು. ಇದಕ್ಕೆ ಹಿರಿಯ ಕವಿ ಡಾ. ಡಿ. ಎಸ್. ಕರ್ಕಿಯವರು ಅಧ್ಯಕ್ಷರಾಗಿದ್ದರು. ಕವಿಗೋಷ್ಠಿ ಪ್ರಾರಂಭವಾಯಿತು. ಮಂಗಳೂರಿನ ಕವಿಗಳೊಬ್ಬರು, ಹೈಸ್ಕೂಲಿನ ಶಿಕ್ಷಕರೆಂಡು ಕಾಣುತ್ತದೆ, ತಮ್ಮ ಕವಿತೆ ಓದಹತ್ತಿದರು. ಅವರಿಗೆ ಕಾವ್ಯದೇವಿ ಮೈಮೇಲೆ ಬಂದಿರಬಹುದು. ಅವರು ಸಾಭಿನಯದಿಂದ ಕವಿತಾವಾಚನ ಮಾಡುತ್ತಿದ್ದಂತೆ, ಮೈಕನ್ನಗಲಿ, ಆವೇಶಭರದಲ್ಲಿ ದೂರ ದೂರ ಸರಿಯಹತ್ತಿದರು. ಶ್ರೋತೃಗಳಿಗೆ ಸರಿಯಾಗಿ ಕೇಳದೆ, ಅವರ ವಿಚಿತ್ರ ನಡೆವಳಿಕೆ ಒಂದಿಷ್ಟು ಮೋಜನ್ನುಂಟು ಮಾಡಿತು. ಅಲ್ಲಿಯೇ ಕುರ್ಚಿಯಮೇಲಿದ್ದ ಬೇಂದ್ರೆಯವರು ಪರಿಸ್ಥಿತಿಯನ್ನರಿತು ಎದ್ದು, ಆ ಕವಿಗಳನ್ನು ಹಿಡಿದು ತಂದು ಮೈಕಿನೆದುರು ನಿಲ್ಲಿಸುವುದರಲ್ಲಿ, ಬೇಂದ್ರೆಯವರ ಸ್ಪರ್ಶದಿಂದ ಇನ್ನೂ ಪ್ರಭಾವಿತರಾದ ಆ ಕವಿಗಳು, ಬೇಂದ್ರೆಯವರಿಗೆ ಸಾಷ್ಟಾಂಗ ಹಾಕಿ ಅವರ ಎರಡೂ ಪಾದಗಳನ್ನು ಗಟ್ಟಿಯಾಗಿ ಹಿಡಿದು ಅಡ್ಡಾದರು. ಅವರನ್ನು ನೆಲದಿಂದ ಅಗಲಿಸುವ ಪ್ರಯತ್ನದಲ್ಲಿ ಬೇಂದ್ರೆಯವರು ಆ ಕವಿಗಳಿಗೆ ಸಾಷ್ಟಾಂಗ ಹಾಕಬೇಕಾಯಿತು. ಅರ್ಧಕ್ಕೆ ಎದ್ದ ಕವಿಗಳು ಮತ್ತೆ ಬೇಂದ್ರೆಯವರ ಕಾಲನ್ನು ಗಟ್ಟಿಯಾಗಿ ಹಿಡಿದರು. ಇದೊಂದು ಸಾಷ್ಟಾಂಗಸಮರವೇ ಆಯಿತೆನ್ನಬೇಕು. 'ಕವಿಗಳಿಗೆ ಈ ರೀತಿಯೂ ಹುಚ್ಚು ಸೇರುತ್ತದೆಂದು ಈಗ ಅರಿವಾಯಿತು' ಎಂಬ ಭಾವನೆ ಬೇಂದ್ರೆಯವರ ಮುಖದಲ್ಲಿ ಮೂಡಿತ್ತು. ಆ ಕವಿಗಳನ್ನು ಅಲ್ಲಿಂದ ಕಳಿಸಬೇಕಾದರೆ ಬೇಂದ್ರೆಯವರಿಗೆ ಸಾಕುಸಾಕಾಗಿತ್ತು.

ನಮ್ಮೂರು ಬನಹಟ್ಟಿ. ಶ್ರೀ ಗಜಾನನ ಉತ್ಸವಕ್ಕೆ ಬೇಂದ್ರೆಯವರನ್ನು ಆಮಂತ್ರಿಸಬೇಕೆಂದು ನನಗೆ ಬಲವಾದ ಇಚ್ಛೆಯಿತ್ತು. ನಮ್ಮಲ್ಲಿಯ ಜನತೆಗೂ ಬೇಂದ್ರೆಯವರನ್ನು ಕಾಣುವ, ಅವರ ಉಪನ್ಯಾಸ ಕೇಳುವ ಕುತೂಹಲ ತುಂಬಾ ಇತ್ತು. ಆದರೆ ಪತ್ರ ಬರೆದರೆ ಬರುವರೊ, ಇಲ್ಲವೊ ? ಪ್ರತ್ಯಕ್ಷ ಆಹ್ವಾನವನ್ನೀಯಲು ಧಾರವಾಡಕ್ಕೆ ಹೋಗಬೇಕೊ ಎನ್ನುವ ವಿಚಾರದಲ್ಲಿ ಒಂದು ಓಲೆ ಬರೆದೆ. ಬರುವುದಾಗಿ ಅವರಿಂದ ಮಾರುತ್ತರ ಬಂದಾಗ, ನನಗೆ ಸೋಜಿಗವಾಯಿತು. ಓರ್ವ ವರಕವಿ, ಒಮ್ಮೆಲೆ ಬರುವುದಾಗಿ ಒಪ್ಪಿಕೊಂಡಿದ್ದು ಸಂತೋಷದಂತೆ ಸೋಜಿಗ. ಧಾರವಾಡದಿಂದ ರೈಲಿನಲ್ಲಿ ಕುಡಚಿಯವರೆಗೆ ಬಂದಿದ್ದು, ಅಲ್ಲಿಂದ ಬೇಂದ್ರೆಯವರನ್ನು ಕರೆತರಲು ಕಾರನ್ನು ಒಯ್ದಿದ್ದೆವು. ಬರುವಾಗ ದಾರಿಯಲ್ಲಿ ಬೇಂದ್ರೆಯವರೇ ಹೇಳಿದರು. “ ಬೆಳಗಲಿ, ನೀವು ಕರೆದಿರಿ, ನಾನು ಬಂದೆ. ಕನ್ನಡದ ಕೆಲಸಕ್ಕಾಗಿ ನಾನು ಯಾವಾಗಲೂ ಹಿಂದೆಮುಂದೆ ನೋಡುವವನಲ್ಲ. ನಾಡುನುಡಿಯಂತೆ, ಕನ್ನಡ ಜನತೆಯ ಸಂಪರ್ಕವೂ ಬೇಕು. ಆದಕ್ಕಾಗಿ, ನನ್ನವರು ಕರೆದರೆ ಇಲ್ಲವೆಂದು ಹೇಳಲಿಕ್ಕಾಗುವದಿಲ್ಲ. ” ಇದೇ ಮಾತನ್ನು ಪ್ರಾರಂಭದಲ್ಲಿ, ತುಂಬಿದ ಸಭೆಯಲ್ಲಿ ಕೂಡ ಹೇಳಿದರು.

ಬೇಂದ್ರೆಯವರ ಉಪನ್ಯಾಸದ ಮಧ್ಯದಲ್ಲಿಯೇ ಒಂದು ಪ್ರಸಂಗ ಜರುಗಿತು. ಆದಾರೋ “ ನಿಮ್ಮ ಕವಿತೆ ‘ ಇನ್ನೂ ಯಾಕ ಬರಲಿಲ್ಲ ಅಂವಾ ಹುಬ್ಬಳಿಯಾಂವಾ ’ ಅಶ್ಲೀಲವಲ್ಲವೆ ? ” ಎಂದು ಬರೆದು ಚೀಟಿಕಳಿಸಿದರು. ಈ ಕವಿತೆಯ ನಿಜವಾದ ಸ್ವರೂಪವನ್ನು ಅರ್ಧ ಘಂಟೆಗಿಂತ ಹೆಚ್ಚಿಗೆ ವಿವರಿಸಿದ ಬೇಂದ್ರೆಯವರ ಮಾತಿಗೆ, ಪ್ರಶ್ನೆ ಕೇಳಿದವನಿಗೆ ತೋಬಾ ತೋಬಾ ಎಂದಾಗಿ, ಜನಕ್ಕೆ ನಿಜವಾದ ಅರ್ಥ ತಿಳಿದಿತ್ತು.

ಬೇಂದ್ರೆಯವರ ವಾಸ್ತವ್ಯದ ವ್ಯವಸ್ಥೆಯನ್ನು ಊರಿನ ಖ್ಯಾತ ಜವಳಿ ಉತ್ಪಾದಕರಾದ ಮಹದೇವಪ್ಪ ಭದ್ರಣ್ಣವರ ಅವರಲ್ಲಿ ಮಾಡಿತ್ತು. ಅಂದು ರಾತ್ರಿ ಪ್ರಖ್ಯಾತ ಜಾನಪದಗಾಯಕ ಬಾಳಪ್ಪ ಹುಕ್ಕೇರಿ ಅವರ ಕಾರ್ಯಕ್ರಮವಿದ್ದು ಅವರೂ ಬೇಂದ್ರೆಯವರ ಜತೆಗಾರರಾಗಿದ್ದರು. ಆ ರಾತ್ರಿ ನಮ್ಮಲ್ಲಿಯ ವಿಶೇಷ ವೆಂದು ಊಟಕ್ಕೆ ಎಣ್ಣೆ ಹೋಳಿಗೆ ಮಾಡಲಾಗಿತ್ತು. ಹೋಳಿಗೆಯ ವಿಶೇಷ ಊಟ, ಆದರಲ್ಲಿ ಉಪ್ಪಿನಕಾಯಿ, ಹಪ್ಪಳ, ಸಂಡಿಗೆಗಳಂತೆ ಹುಕ್ಕೇರಿ ಬಾಳಪ್ಪನವರ ಊಟದ ಹೊಗಳಿಕೆಯ ಮಾತುಗಳು, ಬೇಂದ್ರೆಯವರ ಹಾಸ್ಯ ಚಟಾಕಿಗಳು ಎಂದೂ ಮರೆಯುವಂತಹವಲ್ಲ.

ಬನಹಟ್ಟಿಗೆ ಬರುವ ಪೂರ್ವದಲ್ಲಿ ಹಾರೂಗೇರಿ ಹೈಸ್ಕೂಲಿನವರು ಬೇಂದ್ರೆ ಯವರನ್ನು ಆಮಂತ್ರಿಸಿದ್ದರಂತೆ. ಬೇಂದ್ರೆಯವರಿಗೆ ಯಾವುದೋ ಕಾರ್ಯ

ನಿಮಿತ್ತ ಅಲ್ಲಿಗೆ ಹೋಗಲಿಕ್ಕೆ ಆಗಿರಲಿಲ್ಲ. ಹಾರೂಗೇರಿ, ಬನಹಟ್ಟಿಗೆ ಸಮೀಪ ಎಂದು ತಿಳಿದ ಕೂಡಲೆ, ಅಲ್ಲಿಗೆ ಹೋಗಿ ಬರುವುದಾಗಿ ಬೇಂದ್ರೆಯವರು ತಿಳಿಸಿದರು. ಕೂಡಲೇ ಕಾರು ಬಂದು ನಿಂತಿತು. ಹಾರೂಗೇರಿಯ ವರೆಗೆ ಯಾವ ಪೂರ್ವ ಸೂಚನೆಯಿಲ್ಲದೆ, ಹೊರಟೆವು. ಅಂದು ಬುಧವಾರ ಹಾರೂಗೇರಿಯ ಸಂತೆಯ ದಿನ. ಮುಂಜಾನೆ ಶಾಲೆ. ನಾವು ಹೋಗುವುದರಲ್ಲಿ ಹೈಸ್ಕೂಲಿಗೆ ಬಿಡುವಾಗಿ, ವಿದ್ಯಾರ್ಥಿಗಳು ಮನೆಗೆ ಮರಳುತ್ತಿದ್ದರು. ನಾನೇ ದಾರಿಯಲ್ಲಿ ತಡೆದು, "ಬೇಂದ್ರೆಯವರು ಬಂದಿದ್ದಾರೆ, ಶಾಲೆಗೆ ನಡೆಯಿರಿ" ಎಂದಾಗ ಮತ್ತೆ ಎಲ್ಲ ವಿದ್ಯಾರ್ಥಿಗಳು ಕೂಡಲೇ ಸೇರಿದರು. ಅಲ್ಲಿನ ಹೈಸ್ಕೂಲಿನ ಶಿಕ್ಷಕ ವರ್ಗಕ್ಕಂತೂ ತುಂಬ ಅಚ್ಚರಿ. ಮತ್ತೆ ಅವಸರದಿಂದ ಸಭೆ ಸೇರಿಸಿದಾಗ, ತುಂಬ ಜನ ಸೇರಿತ್ತು. 'ಹಾರೂಗೇರಿ' ಊರ ಹೆಸರಿನ ಉತ್ಪತ್ತಿ ಬಗ್ಗೆ ಬೇಂದ್ರೆಯವರಿಗೆ ಶೋಧ ಮಾಡಬೇಕಿತ್ತು. ಊರ ಹಿರಿಯರ ಉತ್ತರದಿಂದ ತೃಪ್ತಿಕರ ಅಂಶ ದೊರೆಯಲಿಲ್ಲ. ಹಾಗೇ ಊರಿನ ಕೆಲವು ವಿಶೇಷ ಕಂಡು ಬನಹಟ್ಟಿಗೆ ಮರಳಿದೆವು.

ಮರುದಿನ ಬೇಂದ್ರೆಯವರು ಹೊರಡುವ ಸಮಯ. ಮಹಾದೇವಪ್ಪ ಅವರ ಮನೆಯ ಮಹಡಿಯ ಬೇಂದ್ರೆಯವರಿದ್ದ ಕೋಣೆಯಲ್ಲಿ ಗೋಡೆಗೆ ಒಂದು ದೊಡ್ಡದಾದ ಫೋಟೊ. ಕೃಷ್ಣ ಗೋಪಿಯರೊಡನೆ ಯಮುನಾತೀರದಲ್ಲಿ ರಾಸಲೀಲೆಯಲ್ಲಿ ಮಗ್ನನಾಗಿದ್ದ. ಕೃಷ್ಣನ ಆ ರೂಪ ಬೇಂದ್ರೆಯವರ ಕಾವ್ಯಕಣ್ಣಿಗೆ ಅಪರೂಪವಾಗಿ ಕಂಡಿರಬೇಕು. ಆ ಕೃಷ್ಣ ಪರಮಾತ್ಮನ ದಿವ್ಯ ಸ್ವರೂಪಕ್ಕೆ ಮೋಹಿತರಾದ ಬೇಂದ್ರೆಯವರು ತದೇಕಚಿತ್ತದಿಂದ ಆ ಚಿತ್ರವನ್ನೇ ನಿಟ್ಟಿಸುತ್ತಲಿದ್ದು, ಅದರ ಜಗೆಗೆ ತಮ್ಮದೇ ಆದ ವಿಚಾರಗಳನ್ನು ವಿವರಿಸತೊಡಗಿದರು. ಮಹಾದೇವಪ್ಪ ಅವರು ಆ ದೊಡ್ಡದಾದ ಚಿತ್ರವನ್ನು ಕಟ್ಟಿಸಿ, ತಮ್ಮ ಕಾಣಿಕೆಯೆಂದು ಬೇಂದ್ರೆಯವರಿಗೆ ಅರ್ಪಿಸಿದರು.

ಚಿಕ್ಕವರ ಬಗ್ಗೆ ಬೇಂದ್ರೆಯವರಿಗೆ ಮಮತೆ ಬಹಳ. ಯಾರಾದರೂ ನಮ್ಮೂರಿನವರು ಎಲ್ಲಿಯಾದರೂ ಬೇಂದ್ರೆಯವರಿಗೆ ಭೇಟಿಯಾದರೆ, ಅವರು ನನ್ನ ಬಗ್ಗೆ ಕ್ಷೇಮ ಸಮಾಚಾರ ಕೇಳುವವರೇ. ಧಾರವಾಡಕ್ಕೆ ಹೋದಾಗ "ಬಾರೊ ಸಾಧನಕೇರಿಗೆ" ಎಂದು ಅವರು ಕರೆಯದಿದ್ದರೂ, ನಾನು ಅವರ 'ಶ್ರೀಮಾತಾ'ದ ದರ್ಶನ ಪಡೆಯುವವನೆ ಆಗಿದ್ದೇನೆ. ಬೇಂದ್ರೆಯವರ ಮನೆಗೆ ಹೋದರೆ ನಿರಾಶೆಯೇ ಇಲ್ಲ. ಬೇಂದ್ರೆಯವರು ಊರಲ್ಲಿರದಿದ್ದರೆ ಅವರ ಮಗ ಡಾ ವಾಮನ ಇವರ ಜತೆ ಮಾತುಕತೆ, ಹರಟೆ ನಡೆಯುತ್ತಿದೆ. ಬೇಂದ್ರೆಯವರಿದ್ದರಂತೂ ತೀರಿತು. ಸಮಯ ಸರಿದದ್ದೇ ತಿಳಿಯುವದಿಲ್ಲ.

ಒಮ್ಮೆ ಒಂದು ಮಾತಿನ ಬಗ್ಗೆ ವಿಷಯ ಸಾಗಿತು. ಅದು ಅಶ್ಲೀಲವೆನಿಸಿದ್ದರೂ, ಅಶ್ಲೀಲವಾದ ಆ ಮಾತು ಜಗಬಳಕೆಯಲ್ಲ ಬಂದ ಬಗ್ಗೆ, ಅದರ ಮೂಲ ಉತ್ಪತ್ತಿ

ಬಗ್ಗೆ, ತಾಸಗಟ್ಟಲೆ ಸಾಧಾರ ಪೂರ್ವಕವಾಗಿ ಬೇಂದ್ರೆಯವರು ವಿವರಿಸಿ ಹೇಳಿದರು. ಬೇಂದ್ರೆಯವರ ಜತೆ ಚರ್ಚಿಸುವದೆಂದರೆ, ನವರಸ ಪೂರ್ಣವಾದ ಒಂದು ಸಜೀವ ವಿಶ್ವಕೊಶದ ಜತೆ ಮಾತನಾಡುತ್ತಿದ್ದಂತೆ ಒಂದು ದಿವ್ಯ ಅನುಭವ.

ಇನ್ನೊಮ್ಮೆ ಬೇಂದ್ರೆಯವರ ಜತೆ ಮಾತನಾಡುತ್ತಿದ್ದಾಗ, ಅವರ ಮಾತು ತರುಣ ಲೇಖಕರಿಗಾಗಿ ಒಂದು ಮಹತ್ವದ ಸಂದೇಶವೇ ಆಗಿತ್ತು. ನಮ್ಮ ಹಳ್ಳಿ ಪಳ್ಳಿಗಳಲ್ಲದೆ, ದಾಸರು, ಲಂಬಾಣಿಕರು, ಬಹುರೂಪಿಗಳು ಇನ್ನಿತರ ಸಂಚಾರಿ ಜನಾಂಗದ ನಡೆ-ನುಡಿ, ಹಾಡು-ಪಾಡು ಎಲ್ಲ ಅಭ್ಯಸಿಸಿ, ಸಂಗ್ರಹಿಸಿದರೆ, ಅದೇ ಒಂದು ಜಾನಪದ ಭಾಂಡಾರವಾಗಬಹುದೆಂದು ಹೇಳಿದರು. ಇದನ್ನು ಹಳ್ಳಿಗಳಲ್ಲಿದ್ದ, ಹಳ್ಳಿಯ ಸಮೀಪಕ್ಕಿದ್ದ ಸಾಹಿತ್ಯ ಅಭಿರುಚಿಯುಳ್ಳ ಯಾವುದೇ ತರುಣರು ಮಾಡಲೇಬೇಕಾದ ಕರ್ತವ್ಯವೆಂಬಂತೆ ತಿಳಿಸಿದರು. ಬೇಂದ್ರೆಯವರು ಹೇಳಿದಂತೆ ಈ ಬಗ್ಗೆ ಇನ್ನೂ ಸಾಕಷ್ಟು ಕಾರ್ಯ ಮಾಡಬೇಕಿದೆ. ಇದು ಕೂಡ ತರುಣ ಲೇಖಕರ ಕರ್ತವ್ಯವೇ ಆಗಿದೆ.

ಮತ್ತೊಮ್ಮೆ ಹೋದಾಗ ಅವರ ಮೇಜಿನಮೇಲೊಂದು ಚಿಕ್ಕ ಅಂಡ್ಯಾಳಕಲ್ಲು ಇತ್ತು. ಅದನ್ನು ಕಂಡಾಗ ಯಾವುದೋ ಒಂದು ಆಕಾರ. ಅದಕ್ಕೆ ಬೇಂದ್ರೆಯವರು " ಇದು ಮಾತಾ " ಎಂದು ಹೇಳಿದರು. ಆ ಕಲ್ಲಿನ ಸ್ವರೂಪ ಓರ್ವ ತಾಯಿ–ಯಂತೆಯೇ ಇತ್ತು. ಅದರ ಬಗ್ಗೆ ಒಂದು ತಾಸಿನ ವರೆಗೆ ಬೇಂದ್ರೆಯವರ ವಿವರಣೆ. ಕೇಳಲು ಎಳ್ಳಷ್ಟೂ ಬೇಸರವಾಗದು. ಅವರ ವಿವರಗಳನ್ನು ಕೂಡಲೇ ಒಪ್ಪಬೇಕು. ಅಂಬಿಕಾತನಯದತ್ತರ ಕಾವ್ಯಶಕ್ತಿ ಇತ್ತಿತ್ತ ಆಧ್ಯಾತ್ಮ ಸ್ವರೂಪ ಪಡೆಯುತ್ತಿದೆ. ಅವರ ದೃಷ್ಟಿ ಈಗ ಎಲ್ಲ ' ಮಾತಾಮಯ ' ವೇ ಆಗಿದೆ. ಬೇಂದ್ರೆಯವರ ದಿವ್ಯ ಸ್ವರೂಪವನ್ನು ಪೂರ್ತಿ ತಿಳಿಯಬೇಕಾದರೆ ಅವರನ್ನು ತೀರ ಹತ್ತಿರ ಕಂಡರೆ ಹೆಚ್ಚಿನ ಪ್ರಯೋಜನ. ಆಗಲೇ ಅವರ ಪರಿಪೂರ್ಣವಾದ ಕವಿತ್ವ, ಗಮಕಿತ್ವ, ವಾದಿತ್ವ, ವಾಗ್ಮಿತೆಯನ್ನು ಅರಿಯಬಹುದು. ಕನ್ನಡಕ್ಕೆ ಇವು ಮಹಾನ್ ಕೊಡುಗೆಗಳು—ಈ ಗಾರುಡಿಗ ಬೇಂದ್ರೆಯವರ ಕವಿತ್ವವಲ್ಲದೆ, ಗಮಕಿತ್ವ, ವಾದಿತ್ವ, ವಾಗ್ಮಿತೆಗಳು ಕೂಡ.

—ದು. ನಿಂ. ಬೆಳಗಲಿ

§ § § §

೬೩

# “ಪಾತರಗಿತ್ತಿ ಪಕ್ಕ” ಕವಿತೆಯ ಭಾಷಾವೈಜ್ಞಾನಿಕ ವಿಶ್ಲೇಷಣೆ

ಜಿ. ಎಂ. ಹೆಗಡೆ

೧-೧. ಕಾವ್ಯಭಾಷೆಯನ್ನು ಭಾಷಾವಿಜ್ಞಾನದ ದೃಷ್ಟಿಯಿಂದ ಅಧ್ಯಯನ ಮಾಡಿ ವಿವೇಚಿಸುವ ವಿಧಾನ ಕಾವ್ಯವ್ಯಾಸಂಗದ ಒಂದಂಗವಾಗಿ ನಡೆಯುತ್ತಿದೆ.[1] ಈ ರೀತಿ ಕಾವ್ಯದ ಭಾಷೆಯ ಸ್ವರೂಪವನ್ನು ವಿವರಿಸಿ ವಿಶ್ಲೇಷಿಸುವ ಬಗೆ ವಸ್ತು-ನಿಷ್ಠವಾದುದು. ಭಾಷಾವಿಜ್ಞಾನದಲ್ಲಿ ‘ಶೈಲಿವಿಜ್ಞಾನ’ (Stylistics) ಎಂಬ ದೊಡ್ಡ ಶಾಖೆಯೇ ಈ ಕಾರ್ಯದಲ್ಲಿ ಪ್ರವೃತ್ತವಾಗಿದೆ. ಭಾಷಾಭ್ಯಾಸಿಗಳ ಕುತೂ-ಹಲವನ್ನು ಕೆರಳಿಸಿರುವ ಶೈಲಿವಿಜ್ಞಾನ ಭಾಷೆಯ ಅಭಿವ್ಯಕ್ತಿಯ ಖಚಿತವಾದ ವಿಶ್ಲೇಷಣೆಯಲ್ಲಿ ಹೊಸ ಹೊಸ ಸಂಗತಿಗಳನ್ನು ಬೆಳಕಿಗೆ ತರುತ್ತಿದೆ. ಕನ್ನಡದ ವರಕವಿ ಬೇಂದ್ರೆಯವರ ಕಾವ್ಯಭಾಷೆ ಈ ದೃಷ್ಟಿಯಿಂದ ಅಧ್ಯಯನಕ್ಕೆ ಸಾಕಷ್ಟು ಸಾಮಗ್ರಿಗಳನ್ನು ಒದಗಿಸುತ್ತಿದ್ದು, ಅಂತಹ ವಿವರವಾದ ವ್ಯಾಸಂಗಕ್ಕೆ ದಿಕ್‌ಸೂಚಿ-ಯಾಗಿ ಈ ಪ್ರಬಂಧದಲ್ಲಿ ಕಾವ್ಯಭಾಷೆಯ ಪರಿಶೀಲನೆಯಲ್ಲಿ ವ್ಯಕ್ತವಾಗುವ ಸಂಗತಿಗಳನ್ನು ಪ್ರಸ್ತುತಪಡಿಸಲಾಗುತ್ತಿದೆ.

೧-೨. ನವೋದಯ ಕನ್ನಡ ಕಾವ್ಯದಲ್ಲಿ ಭಾಷೆಯ ಪ್ರಯೋಗದ ದೃಷ್ಟಿ-ಯಿಂದ ಬೇಂದ್ರೆಯವರ ಕಾವ್ಯ ಅತ್ಯಂತ ಮಹತ್ವಪೂರ್ಣವಾದುದು. ಜನಪದ

---

1. ಕಾವ್ಯಭಾಷೆಯನ್ನು ವೈಜ್ಞಾನಿಕವಾದ ವಿಶ್ಲೇಷಣೆಗೆ ಅನ್ವಯಿಸಿ ನೋಡುವ ಕುರಿತು ವಿದ್ವಾಂಸರಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಅವುಗಳ ಕಡೆಗೆ ಗಮನ ಸೆಳೆಯುವ ಗ್ರಂಥ-ಲೇಖನಗಳು ಪ್ರಕಟವಾಗಿವೆ. ಈ ಹಿನ್ನೆಲೆಯಲ್ಲಿ ಕಾವ್ಯಭಾಷೆಯ ಭಾಷಾ-ವೈಜ್ಞಾನಿಕ ವಿವೇಚನೆಯ ಅಗತ್ಯವನ್ನು ನಿರ್ದೇಶಿಸುವ ಕೆ. ಪಿ. ಭಟ್ಟರ “Linguistic Study of poetic Language”-Proceedings of the Third Dravidian Linguistic Conference. P. 46— Karnatak University Dharwar. P-279—283. ಇತ್ತೀಚೆ ಪ್ರಕಟವಾದ ಲೇಖನ ಗಮನಾರ್ಹ-ವಾದುದು.

ಭಾಷೆಯನ್ನು ಕಾವ್ಯಭಾಷೆಯನ್ನಾಗಿಸಿದ ಶ್ರೇಯಸ್ಸು ಶ್ರೀಯುತರಿಗಿದೆ. ಅಂದರೆ ಜನಪದಭಾಷೆ ಆಡುಮಾತಿನ (Spoken Language) ಪ್ರಾತಿನಿಧಿಕ ರೂಪ-ವಾಗಿರುವದರಿಂದ ಬೇಂದ್ರೆಯವರ ಕಾವ್ಯಭಾಷೆ ಎರಡು ಸ್ತರಗಳಲ್ಲಿ ಕಾವ್ಯಶಿಲ್ಪವನ್ನು ಪಡೆಯುತ್ತದೆ. ಅದರಲ್ಲಿ ಕನ್ನಡದ ಪ್ರಸಿದ್ಧ ಉಪಭಾಷೆಯಾದ ಧಾರವಾಡ ಕನ್ನಡದ ಆಡುಮಾತಿನ ಸ್ವರೂಪವನ್ನೂ, ಕನ್ನಡದ ಗ್ರಾಂಥಿಕ ಭಾಷೆಯನ್ನೂ ನೋಡುವುದು ಸಾಧ್ಯವಿದೆ. ಆಧುನಿಕ ಕನ್ನಡ ಸಾಹಿತ್ಯದ ನವೋದಯ ಕವಿಗಳಿಗೆ ಇರುವ ಭಾಷೆಯ ಅಭಿವ್ಯಕ್ತಿಯ ನಿರ್ವಹಣೆಯಲ್ಲಿ ಬೇಂದ್ರೆ ಇಂತಹ ನೂತನ ಧೋರಣೆಯನ್ನು ವಿಶಿಷ್ಟವಾದ ಮಾದರಿಯಲ್ಲಿ ತೋರ್ಪಡಿಸಿದ್ದಾರೆ. ಅವರ ಕೆಲವು ಕವಿತೆಗಳಲ್ಲಿ ಗ್ರಾಂಥಿಕ ಕನ್ನಡ ಮತ್ತು ಧಾರವಾಡ ಕನ್ನಡದ ರೂಪವೆರಡೂ ಬಳಸಲ್ಪಟ್ಟಿದೆ. ಇದರಿಂದ ಕವಿಗೆ ಭಾಷೆ ಕಾವ್ಯ ನಿರ್ಮಿತಿಯಲ್ಲಿ ಒಂದು ತೊಡಕಲ್ಲ; ಆದರೆ ಅದು ಪ್ರಯೋಗ-ಶೀಲವಾಗಿ ಕೆಲಸ ಮಾಡುತ್ತ ತನ್ನ ಜೀವನಾನುಭವಗಳನ್ನೂ, ಮನಸ್ಸಿನ ಭಾವನೆಗಳನ್ನೂ, ವ್ಯಕ್ತಪಡಿಸುವಲ್ಲಿ ನಿಶ್ಚಿತವಾದ ಗುರಿಯನ್ನು ಮುಟ್ಟುತ್ತದೆ, ಎಂಬುದೇ ಮುಖ್ಯವಾಗಿದೆ.

೧-೩. ಮಾನವನ ಸರ್ವತೋಮುಖ ಅಭಿವ್ಯಕ್ತಿಯ ಪ್ರಮುಖ ಸಾಧನ-ವಾದ ಭಾಷೆ ವ್ಯಾವಹಾರಿಕ, ಗ್ರಾಂಥಿಕವೆಂಬ ಎರಡು ಮುಖಗಳಲ್ಲಿ ಪ್ರವಹಿಸುತ್ತದೆ. ಭಾಷೆಯ ಪ್ರಮುಖ ಉದ್ದೇಶ ಸಾಮಾಜಿಕವಾಗಿ ಪರಸ್ಪರ ಸಂದೇಶಗಳ ವಿನಿಮಯವಾಗಿದ್ದರೂ ಕಾವ್ಯಭಾಷೆ ಭಾಷೆಯ ಅಭಿವ್ಯಕ್ತಿಯಲ್ಲಿ ಮರುಹುಟ್ಟನ್ನು ಪಡೆಯು-ತ್ತದೆ. ಮನುಷ್ಯನ ಆಳವಾದ ಅನುಭವಗಳನ್ನು ಸಂವೇದಿಸುವ ಕಾವ್ಯ ನಿರಂತರವಾಗಿ ಹರಿಯುವ ಪ್ರವಾಹದಂತೆ ಬದಲಾಗುತ್ತ ಸಾಗುತ್ತದೆ. ಹಾಗೆಯೇ ದಿನ-ಬಳಕೆಯ ವ್ಯಾವಹಾರಿಕ ಭಾಷೆ, ಕಾವ್ಯರೂಪವನ್ನು ಹೊತ್ತು ನಿಲ್ಲುವಾಗ ತನ್ನ ಮಹತ್ವವನ್ನು ಕಳೆದುಕೊಳ್ಳುವದರಿಂದ ಅನುಭವವನ್ನು ಅನಿರ್ವಚನೀಯವಾಗಿ-ಸಲು ಕಾವ್ಯ ಬದಲಾವಣೆ ಹೊಂದುವದು ಅತ್ಯವಶ್ಯವಾಗುತ್ತದೆ. ಕವಿಯಾದವನು ತಾನು ಪ್ರಜ್ಞೆಯ ಬೆಳಕಿನಲ್ಲಿ ಅನುಭವಿಸಿದ್ದನ್ನೆಲ್ಲ ಕಾವ್ಯದಲ್ಲಿ ತಂದು ಶಿಲ್ಪಿಸಲಾರ. ಅದು ಸಾಧ್ಯವೂ ಇಲ್ಲ. ಕವಿಯ ಕಾವ್ಯ ನಿರ್ಮಿತಿಯ ಶ್ರೇಯಸ್ಸಿನಲ್ಲಿ ಭಾಷಾತ್ಮಕ ಸ್ವರೂಪದ ಯಶಸ್ವಿಯಾದ ಬಳಕೆಯೂ ಸೇರಿಕೊಂಡಿದೆ. ಹೀಗೆ ಭಾಷೆಯ ಅನಂತ ಮುಖಗಳನ್ನು ಕಾವ್ಯಾಭಿವ್ಯಕ್ತಿಗೆ ದುಡಿಸಿಕೊಳ್ಳುವದು ಶ್ರೇಷ್ಠ ಕವಿಯಾದವನಿಗೆ ಮಾತ್ರ ಸಾಧ್ಯ.

ಬೇಂದ್ರೆಯವರೇ ಹೇಳುವಂತೆ—

"ಹಾಸಾದ ಮಿಂಚಿನಿಂದ
ಬೀಸಿದ್ದ ಸೆರಗಿನಿಂದ

ಸೆಳೆದಂತೆ ಎರಡು ನೂಲು
ಉಳಿದಾವ ನಾಕು ಸಾಲು."

"ಅನುಭವಕ್ಕೆ ಎಷ್ಟೋ ಸ್ತರಗಳಿರಬಹುದು. ಸಂಕೀರ್ಣತೆ ಇರಬಹುದು. ಭಾಷೆಯಲ್ಲಿ ಎಲ್ಲ ಸಂಕೀರ್ಣತೆಯನ್ನೂ, ಛಾಯೆಗಳನ್ನೂ ಸಾಧಿಸಬೇಕೆಂಬುದು ಒಂದು ಮಹತ್ವಾಕಾಂಕ್ಷೆಯೇ ಹೊರತು ವಾಸ್ತವಸತ್ಯವಾಗಲಾರದು. ಭಾಷೆ ಅಂಥ ಸಂಕೀರ್ಣತೆಯನ್ನೆಲ್ಲ ಧ್ವನಿಸಬಲ್ಲಷ್ಟು ಪಾರದರ್ಶಕವಾಗಿಲ್ಲ."[1] ಎಂಬ ಧೋರಣೆಯಿರುವದರಿಂದ ಕವಿತೆ ಭಾಷೆಯ ಮೂಲಕ ಕೆಲಮಟ್ಟಿಗೆ ತನ್ನ ಬಹುಮುಖ ಶಕ್ತಿಯನ್ನು ಪ್ರಕಟಿಸುವಲ್ಲಿ ಯಶಸ್ವಿಯಾಗುತ್ತದೆ.

೧-೪. ಭಾಷಾವೈಜ್ಞಾನಿಕ ವಿಶ್ಲೇಷಣೆಯಲ್ಲಿ ಕಾವ್ಯದ ಭಾಷೆಯ ರಚನೆ ಹಾಗೂ ಅರ್ಥರಚನೆಯನ್ನು ಪರಿವೀಕ್ಷಿಸಬೇಕಾಗುತ್ತದೆ. ಸಂಖ್ಯಾಶಾಸ್ತ್ರೀಯ ವಿಧಾನದಿಂದ ಕಾವ್ಯಭಾಷೆಯನ್ನು ವಿವೇಚಿಸಿದಾಗ, ಕವಿತೆಯಲ್ಲಿಯ ಧ್ವನಿ, ಆಕೃತಿಯ ಹಾಗೂ ವಾಕ್ಯರಚನೆಯ ವಿನ್ಯಾಸವನ್ನು ಕಂಡುಕೊಳ್ಳುವದರೊಂದಿಗೆ ಕವಿತೆಯ ಅರ್ಥರಚನೆಯನ್ನು ತಿಳಿಯುವುದು ಸಾಧ್ಯ. ಕವಿ ತಾನು ಬಳಸುವ ಭಾಷೆಯಲ್ಲಿ ಜನಸಾಮಾನ್ಯರ ಮತ್ತು ಶಿಷ್ಟಭಾಷೆಯ ರೂಪಗಳನ್ನು ಕವಿತೆಗೆ ಹೇಗೆ ಆಯ್ಕೆ ಮಾಡುತ್ತಾನೆ ಎಂಬುದೂ ಗಮನಿಸುವ ಅಂಶ. ಕವಿಯ ಮೇಲೆ ಅವನು ಬಳಸುವ ವ್ಯಕ್ತಿಭಾಷೆ, ಉಪಭಾಷೆ, ಭಾಷೆ, ಭಿನ್ನಭಾಷೆಗಳು ಹೇಗೆ ಪರಿಣಾಮವನ್ನುಂಟು ಮಾಡಿವೆ ಎಂಬುದನ್ನೂ ನಾವು ಪರಿಶೀಲಿಸಬಹುದು. ಹೀಗೆ "ಕಾವ್ಯ ಭಾಷೆಯ ಗ್ರಹಣ (Perception)ವನ್ನು ಕುರಿತು ವಿಶ್ಲೇಷಣೆ ನಡೆಸಲು ವಿಧಾನವೊಂದನ್ನು ರೂಪಿಸಹೊರಡುವ ಭಾಷಾವಿಜ್ಞಾನಿ ಏಕಕಾಲದಲ್ಲಿ ಎರಡು ಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ೧. ಭಾಷಾವಿಜ್ಞಾನಿಯಾಗಿ ಕಾವ್ಯದಿಂದ ದೊರೆತ ಶಾಬ್ದಿಕ ಹಾಗೂ ಛಾಂದಸಿಕ ಪರಿಕರಗಳನ್ನು ವಿಶ್ಲೇಷಿಸುವದು. ೨. ಈ ವಿಶ್ಲೇಷಣೆಯ ಫಲಿತಾಂಶಗಳನ್ನು ತಾನೇ ವಿಮರ್ಶಕನಾಗಿ ಆ ಕಾವ್ಯದ ಬಗೆಗೆ ಹೇಳಬಹುದಾದ ಮಾತುಗಳೊಂದಿಗೆ ಹೋಲಿಸುವದು[2] ಸಾಧ್ಯವಾಗುತ್ತದೆ. ಈ

---

1. ಗಿರಡ್ಡಿ ಗೋವಿಂದರಾಜ—"ಕಾವ್ಯ ಮತ್ತು ಭಾಷೆ" "ಶ್ರೀಕಂಠತೀರ್ಥ" (ಶೀ. ನಂ. ಶ್ರೀ ಸ್ಮಾರಕಗ್ರಂಥ) ಪು-೪೬೫ ಈ ಲೇಖನವು ವ್ಯಾವಹಾರಿಕ ಭಾಷೆ ಮತ್ತು ಕಾವ್ಯ ಭಾಷೆಗೂ ಇರುವ ಅಂತರವನ್ನು ಬಹು ಸ್ವಾರಸ್ಯಕರವಾಗಿ ಪರಿಚಯಿಸುತ್ತದೆ. ಕಾವ್ಯಭಾಷೆಯ ಅಭಿವ್ಯಕ್ತಿಯ ವಿವರವಾದ ಅವಲೋಕನಕ್ಕೆ I. A. Richardsರ Practical criticism ಎಂಬ ಗ್ರಂಥವನ್ನೂ ಪರಿಶೀಲಿಸಬಹುದು.

2. ಕೃಷ್ಣ ಪರಮೇಶ್ವರ ಭಟ್ಟ—"ಕಾವ್ಯಭಾಷೆ ಒಂದು ಭಾಷಾವೈಜ್ಞಾನಿಕ ವಿವೇಚನೆ" ಸಾಧನೆ. ಸಂ. ೩, ಸಂ. ೧, ಪು. ೧೧೫.

ಅಂಶಗಳನ್ನು ಗಮನದಲ್ಲಿರಿಸಿ (To demonstrate) ಬೇಂದ್ರೆಯವರ 'ಪಾತರಗಿತ್ತಿಪಕ್ಕ' [1] ಎಂಬ ಕವಿತೆಯ ವಿವೇಚನೆಗೆ ತೊಡಗಬಹುದು.

ಬೇಂದ್ರೆಯವರ "ಪಾತರಗಿತ್ತಿ ಪಕ್ಕ" ೬೬ ಪಂಕ್ತಿಗಳ ಒಂದು ನೀಳ್ಗವನ. ಪಾತರಗಿತ್ತಿಯ ಬಣ್ಣದ ಬದುಕಿನ ದೈನಂದಿನ ಕಾರ್ಯಗಳ ನಿರೂಪಣೆ-ಕವಿತೆಯ ವಸ್ತು. ೩೮ ದ್ವಿಪದಿಗಳಿಂದ ಕೂಡಿದ ಕವಿತೆ ಜಾನಪದ ಲಯದ ವೈವಿಧ್ಯಗಳ-ನ್ನೊಳಗೊಂಡಿದೆ. ಇದರ ಛಂದೋರಚನೆಯಲ್ಲಿ ೪ ಮಾತ್ರೆಯ ೩ ಗಣಗಳ ಸಂಯೋಜನೆ ಪ್ರತಿ ಪಂಕ್ತಿಯಲ್ಲಿ ಕಂಡುಬರುತ್ತಿದ್ದು, ಮಂದಾನಿಲರಗಳೆಯ ಗತಿ-ಯನ್ನು ಪ್ರಕಟಿಸುತ್ತದೆ. "ಅದರ ಒಂದು ಗಣವನ್ನು ಮೊಟಕು ಮಾಡಿದ್ದರಿಂದ ಲಯ ಇನ್ನೂ ಚುರುಕಾಗುತ್ತದೆ. ಇಲ್ಲಿ ಲಘು ಗುರುವಾಗುತ್ತದೆ. ಕೆಲವೆಡೆ ಗುರುವಿಗೆ ನಾಲ್ಕು ಮಾತ್ರೆಯ ಬೆಲೆ ಬರುತ್ತದೆ. "ಸಿದ್ದೀಗುಳ್ಯಾಡೀ" ಎಂಬಲ್ಲಿ ಸಿದ್ದೀ|ಳ|ಗು|ಳ್ಯಾಡೀ ಎಂದು ಓದಿಕೊಂಡರೆ, 'ದ್ದೀ' ಎಂಬುದಕ್ಕೆ ನಾಲ್ಕುಮಾತ್ರೆಯ ಬೆಲೆ ಬರುತ್ತದೆ. |ಸಿದ್ದೀ|ಳ|ಗು|ಳ್ಯಾಡೀ| ಎಂದು ಓದಿಕೊಂಡರೆ 'ಗುಳ್'ಗೆ ನಾಲ್ಕು ಮಾತ್ರೆಯ ಬೆಲೆ ಬರುತ್ತದೆ. ಚಿಟ್ಟೆಯ ಸ್ವಚ್ಛಂದ ಕುಣಿತಕ್ಕೆ ಸರಿಯಾದ ಗತಿ-ಯನ್ನು ಬೇಂದ್ರೆಯವರು ಭಾಷೆಯಲ್ಲಿ ಸಾಧಿಸಿದ್ದಾರೆ. [2] ಹಾಗೆಯೇ ಈ ಕವಿತೆಯಲ್ಲಿ ಸಹಜಯತಿ ಪ್ರತಿಚರಣದಲ್ಲಿ ಸ್ವಾಭಾವಿಕವಾಗಿ ಬರುತ್ತಿದ್ದು ಎರಡು ಪಂಕ್ತಿಗಳ ಮಧ್ಯೆ ಬಿಡುವೂ (Inter two line space) ಇದೆ. ಒಟ್ಟನಲ್ಲಿ ಇದರ ಗಣ-ವಿಭಾಗ ಮಾಡಿದಾಗ ೯೧೨ ಮಾತ್ರೆಗಳೂ ಹಾಗೂ ೨೨೮ ಗಣಗಳೂ ಇರುವದು ಸ್ಪಷ್ಟವಾಗುತ್ತದೆ.

೨-೨. ಕವಿತೆಯ ಛಂದಸ್ಸಿನ ವಿವೇಚನೆಯ ತರುವಾಯ, ಅದರಲ್ಲಿಯ ಧ್ವನಿ ಮತ್ತು ಧ್ವನಿಸಂಯೋಜನೆಯನ್ನು ಪರಿಶೀಲಿಸಬೇಕಾಗುತ್ತದೆ. ಆದುದರಿಂದ ಈ ಕವಿತೆಯಲ್ಲಿಯ ಧ್ವನಿ ಹಾಗೂ ಅವು ಆವೃತವಾಗುವ ಎಣಿಕೆಯ ಪಟ್ಟಿಯನ್ನು ಈ ಕೆಳಗಿನಂತೆ ಸಿದ್ಧಪಡಿಸಲಾಗಿದೆ.

| ಧ್ವನಿ | ಆವೃತಸಂಖ್ಯೆ | ವರ್ಣ |
|---|---|---|
| ಅ | ೭ | ಅ, ಅ, ಅ, ಅ, ಅ, ಅ, ಅ, |
| ಆ | ೬ | ಆ, ಆ, ಆ, ಆ, ಆ, ಆ, |

---

1. ದ. ರಾ. ಬೇಂದ್ರೆ – "ಪಾತರಗಿತ್ತಿ ಪಕ್ಕ" – "ಬಾ ಹತ್ತರ" ಪು. ೧೨೯–೧೩೨.

2. ಎಂ. ಚಿದಾನಂದಮೂರ್ತಿ–"ಛಂದಸ್ಸಿನ ಪ್ರಯೋಗಗಳು-ನವೋದಯ ಕಾವ್ಯದಲ್ಲಿ"; 'ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು' ಸಂ. ಜಿ. ಎಸ್. ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಣೆ. ೧೯೭೨ ಪು. ೧೨೧.

| ಧ್ವನಿ | ಆವೃತಸಂಖ್ಯೆ | ವರ್ಣ |
| --- | --- | --- |
| ಇ | ೪ | ಇ, ಇ, ಇ, ಇ, |
| ಊ | ೧ | ಊ, |
| ಎ | ೪ | ಎ, ಎ, ಎ, ಎ, |
| ಒ | ೧ | ಒ, |
| ಅಂ | ೩ | ಅಂ, ಅಂ, ಅಂ, |
| ಕ | ೩೮ | ಕ್ಕಾ, ಕ್ಕಾ, ಕ, ಕ್ಕಿ, ಕ್ಕಿ, ಕ್ಕಿ, ಕು, ಕು, ಕಾ, ಕೆ, ಕ್ಕ, ಕ, ಕ್ಕಾ, ಕ್ಕಿ, ಕಿ, ಕ, ಕ, ಕು, ಕು, ಕಿ, ಕಾ, ಕ್ಕಾ, ಕ್ಕಾ, ಕು, ಕೆ, ಕಿ, ಕಿ, ಕ, ಕ, ಕ, ಕ್ಕ, ಕು, ಕ್ಕ, ಕ್ಕ, ಕ, ಕ್ಕ, ಕ್ಕ, ಕಾ. |
| ಗ | ೫೮ | ಗಿ, ಗೆ, ಗಾ, ಗ, ಗಿ, ಗೆ, ಗಿ, ಗ, ಗ, ಗಾ, ಗ, ಗಿ, ಗ, ಗ್ಗಾ, ಗ, ಗ, ಗ, ಗ, ಗೆ, ಗೆ, ಗಿ, ಗ, ಗೆ, ಗು, ಗಿ, ಗಿ, ಗ, ಗ, ಗಿ, ಗಿ, ಗಿ, ಗಾ, ಗಿ, ಗೊ, ಗೆ, ಗೆ, ಗ, ಗೂ, ಗಿ, ಗಿ, ಗಿ, ಗ, ಗಿ, ಗ, ಗ, ಗು, ಗ, ಗು, ಗ, ಗ, ಗ, ಗಿ, ಗು, ಗ, ಗ, ಗಾ, ಗೊ, ಗೋ. |
| ಚ | ೧೧ | ಚ್ಚೆ, ಚು, ಚ್ಚೆ, ಚ್ಚೆ, ಚೆ, ಚೆ, ಚೆ, ಚ, ಚ, ಚ, ಚ್ಚೆ. |
| ಛ | ೧ | ಛ, |
| ಜ | ೨ | ಜಿ, ಜ, |
| ಟ | ೧೪ | ಟ್ಟು, ಟ್ಟು, ಟ, ಟ, ಟ, ಟ, ಟ, ಟ, ಟ, ಟ, ಟ, ಟ, ಟ, ಟ, |
| ಡ | ೩೧ | ಡಿ, ಡಿ, ಡಿ, ಡಿ, ಡು, ಡಿ, ಡಿ, ಡಿ, ಡು, ಡು, ಡ, ಡಿ, ಡಿ, ಡ, ಡ, ಡಿ, ಡಿ, ಡಿ, ಡಿ, ಡಿ, ಡಿ, ಡು, ಡ, ಡು, ಡು, ಡಿ, ಡಿ, ಡು, ಡ, ಡಿ, ಡಿ. |
| ಣ | ೯ | ಣ, ಣ್ಣ, ಣ್ಣ, ಣ್ಣ, ಣಿ, ಣ, ಣಿ, ಣಿ, ಣ, |
| ತ | ೩೪ | ತ, ತ್ತಿ, ತ್ತೊ, ತಾ, ತ, ತಿ, ತಿ, ತ, ತಾ, ತಿ, ತಾ, ತಾ, ತು, ತು, ತೊ, ತು, ತ್ತ, ತು, ತಾ, ತೂ, ತೂ, ತೂ, ತೂ, ತೆ, ತಾ, ತು, ತ್ತ, ತಿ, ತಾ, ತ, ತ, ತ, ತ್ತಾ, ತ್ತೋ, |

| ಧ್ವನಿ | ಆವೃತಸಂಖ್ಯೆ | ವರ್ಣ |
|---|---|---|
| ದ | ೩೪ | ದೆ, ದೆ, ದು, ದ್ದಾ, ದ್ದಾ, ದಾ, ದಾ, ದಿ, ದಿ, ದ, ಡಿ, ಡ, ದು, ದು, ದ್ರ, ದ, ದ, ದು, ದ್ದು, ದೂ, ದ, ದ, ದ, ದ, ದ್ದಿ, ದು, ದ, ದು, ದು, ದಾ, ದೆ, ದ, ದ, ದ. |
| ಧ | ೪ | ಧೂ, ಧಾ, ಧಾ, ಧಾ. |
| ನ | ೩೦ | ನೊ, ನ, ನ್ನ, ನಿ, ನ, ನ, ನೂ, ನು, ನ, ನ, ನ, ನ್, ನ, ನ, ನ, ನ, ನ, ನಿ, ನಾ, ನಾ, ನ, ನ, ನೆ, ನಿ, ನಿ, ನ್ಯಾ, ನು, ನ್ನು, ನ, ನ. |
| ಪ | ೧೩ | ಪಾ, ಪ, ಪಾ, ಪ, ಪ, ಪ, ಪಾ, ಪಿ, ಪ, ಪ, ಪ, ಪ, ಪ್ಪ. |
| ಬ | ೨೦ | ಬೆ, ಬ, ಬ, ಬ, ಬ, ಬಿ, ಬಿ, ಬ, ಬ, ಬೆ, ಬ, ಬೆ, ಬ, ಬಾ, ಬ್ಯಾ, ಬಿ, ಬ, ಬ್ಬಿ, ಬೆ, ಬ. |
| ಭ | ೨ | ಭ, ಭಾ. |
| ಮ | ೧೭ | ಮೆ, ಮ, ಮಾ, ಮಾ, ಮೇ, ಮು, ಮೊ, ಮೂ, ಮ, ಮ, ಮೆ, ಮಾ, ಮಾ, ಮ, ಮ, ಮಾ, ಮಾ. |
| ಯ | ೯ | ಯಾ, ಯ, ಯ, ಯಿ, ಯ, ಯಾ, ಯ, ಯ, ಯೆ. |
| ರ | ೨೭ | ರ, ರು, ರಿ, ರ, ರು, ರು, ರು, ರು, ರು, ರೆ, ರೆ, ರೆ, ಕೆ, ರು, ರ, ರಿ, ರು, ರು, ರ, ರ, ರಿ, ರ, ರ, ರಿ, ರ, ರಿ, ರ. |
| ಲ | ೨೫ | ಲ, ಲೆ, ಲ, ಲಾ, ಲ್ಲಾ, ಲ್ಲು, ಲ, ಲ್ಲಿ,ಲ್ಲಿ, ಲ್ಲಿ, ಲಿ, ಲ್ಲಿ,ಲಿ, ಲ,ಲ, ಲ್ಲಿ, ಲ್ಲಿ, ಲ, ಲ್ಲಾ, ಲ್ಲ, ಲ್ಲೋ, ಲ್ಯೂ, ಲ್ಯೂ, ಲ್ಲೊ, ಲ್ಲಿ. |
| ವ | ೧೯ | ವೆ, ವಿ, ವಿ, ವು, ವು, ವಿ, ವ, ವಿ, ವ, ವು, ವ, ವಿ, ವ, ವ, ವ, ವಿ, ವ್ವ, ವ, ವ. |
| ಶ | ೩ | ಶಿ, ಶ, ಶ. |
| ಷ | ೩ | ಷ್ಣ, ಷ್ಟ, ಷ್ಟ. |
| ಸ | ೧೬ | ಸಿ, ಸಿ, ಸು, ಸು, ಸೂ, ಸ್ನಾ, ಸಿ, ಸಿ, ಸಿ, ಸಿ, ಸು, ಸಿ, ಸ, ಸಿ, ಸಿ, ಸಿ. |
| ಹ | ೩೧ | ಹ, ಹ, ಹ, ಹೊ, ಹೂ, ಹೂ, ಹೂ, ಹು,ಹು,ಹು, ಹ, ಹು, ಹಾ, ಹು, ಹು, ಹೂ, ಹೂ, ಹಾ, ಹಿ, ಹೂ, ಹೊ, ಹು, ಹೂ, ಹು, ಹ, ಹಾ, ಹ, ಹು, ಹೊ, ಹ. ಹ್ಯಾ. |

| ಧ್ವನಿ | ಆವೃತಸಂಖ್ಯೆ | ವರ್ಣ |
|---|---|---|
| ಳ | ೨೯ | ಳ್ಳಿ, ಳಿ, ಳೆ, ಳಿ, ಳಿ, ಳಿ, ಳಿ, ಳಿ, ಳ್ಳಿ, ಳ, ಳ, ಳಿ, ಳ್ಳಿ, ಳಿ, ಳಿ, ಳ್ಳಿ, ಳ್ಳ ಳ್ಳಿ, ಳ್ಳಿ, ಳ, ಳ, ಳ, ಳ್ಯಾ, ಳ, ಳ, ಳ, ಳಿ, ಳ, ಳಿ. |
| ಷ | ೧ | ಷ್ಟಿ. |

ಒಟ್ಟು ೫೦೭

೨-೩. ಈ ಕವಿತೆಯಲ್ಲಿ ಸಂಯುಕ್ತ ವ್ಯಂಜನಗಳು ೬೯ ರಷ್ಟು ವಿಪುಲ-ವಾಗಿದ್ದು ಮೇಲಿನ ಧ್ವನಿಗಳ ಎಣಿಕೆಯ ಪರಿಣಾಮದಿಂದ ಕ್ರಮಾನುಗತವಾಗಿ ಬರುವ ಮುಖ್ಯ ೧೧ ಧ್ವನಿಗಳು ಈ ಕೆಳಗಿನಂತಿವೆ.

| | | | |
|---|---|---|---|
| ಗ | ೫೮ | ನ | ೩೦ |
| ಕ | ೩೮ | ಳ | ೨೯ |
| ದ | ೩೪ | ರ | ೨೭ |
| ತ | ೩೪ | ಲ | ೨೫ |
| ಹ | ೩೧ | ಬ | ೨೦ |
| ಡ | ೩೧ | | |

೨-೪. ಧ್ವನಿಸಂಯೋಜನೆಯ ದೃಷ್ಟಿಯಿಂದ ಒಂದೇ ತೆರನಾದ ವ್ಯಂಜನ-ಗಳ ಆವೃತಿ ಪ್ರತಿ ದ್ವಿಪದಿಗಳಲ್ಲಿ ಬರುತ್ತದೆ. ೪೫ ನೆಯ ಪಂಕ್ತಿಯ ಕೊನೆಯಲ್ಲಿ ಶರಣ ಎಂದಿದ್ದರೆ, ೪೬ ನೆಯ ಪಂಕ್ತಿಯಲ್ಲಿ ದೂರಿಂದ್ಣನ(ಣ–ನ) ಎಂದೂ, ಪಂಕ್ತಿ ೪೭ ರಲ್ಲಿ ಬಳ್ಳಿ ಹಾಗೂ ೪೮ ರಲ್ಲಿ ಮಂಚದಲ್ಲಿ (ಳ–ಲ); ಮತ್ತು ೬೯ ನೆಯ ಪಂಕ್ತಿಯಲ್ಲಿ ಗಂಡು ೭೦ ರಲ್ಲಿ ಅಂದು (ಡ-ದ) ರೂಪದಲ್ಲಿ ವ್ಯಕ್ತವಾಗಿದ್ದು ಉಳಿ-ದವು ಯಾವ ವ್ಯತ್ಯಾಸವಿಲ್ಲದೆ ಬರುವದನ್ನೂ ಇಲ್ಲಿ ನಿರೂಪಿಸಬಹುದು.

| ಧ್ವನಿ | ಧ್ವನಿಸಂಯೋಜನೆ | ಪಂಕ್ತಿಸಂಖ್ಯೆ |
|---|---|---|
| ಕ: | ಪಕ್ಕಾ–ಅಕ್ಕಾ | (೧–೨) |
| | ಚಿಕ್ಕಿ–ಅಕ್ಕಿ | (೫–೬) |
| | ಚಕ್ಕ–ತಕ್ಕ | (೬೭–೬೮) |

| ಧ್ವನಿ | ಧ್ವನಿಸಂಯೋಜನೆ | ಪಂಕ್ತಿಸಂಖ್ಯೆ |
| --- | --- | --- |
| ಗ: | ದಾಗ–ಹಾಂಗ | (೨೩–೨೪) |
| | ಛತ್ತ್ರಿಗ್ಯಾಗ–ಮೋಜಿನಾಗ | (೩೩–೩೪) |
| | ಬಳಿಗೆ–ಗಳಿಗೆ | (೩೭–೩೮) |
| | ತಾಗಿ–ಗಾಗಿ | (೪೩–೪೪) |
| | ತೂಗಿ–ಆಗಿ | (೪೯–೫೦) |
| | ಬಳ್ಳಿಯೊಳಗ–ತೆಳಗ | (೫೧–೫೨) |
| | ನೀರಿನ್ಯಾಗ–ಬ್ಯಾಗ | (೫೭–೫೮) |
| | ಹ್ಯಾಂಗ–ಸಿಕ್ಕಿಥಾಂಗ | (೬೯–೭೦) |
| ಚ: | ಚುಚ್ಚಿ–ಹಚ್ಚಿ | (೩–೪) |
| ಟ: | ತೋಟ–ಊಟ | (೨೯–೩೦) |
| | ಗಂಟ–ಗಿಂಟ | (೪೧–೪೨) |
| | ಗೋಟ–ತೋಟ | (೭೫–೭೬) |
| ಡ: | ಆಡಿ–ಹುಡಿ | (೨೧–೨೨) |
| | ಗುಳ್ಯಾಡಿ–ಆಡಿ | (೫೩–೫೪) |
| | ಕಂಡು–ಉಂಡು | (೬೧–೬೨) |
| | ಮಾಡಿ–ಆಡಿ | (೬೫–೬೬) |
| | ಮೂಡಿ–ಗೂಡಿ | (೭೩–೭೪) |
| ಣ: | ಬಣ್ಣ–ಕಣ್ಣ | (೧೩–೧೪) |
| ತ: | ಇಂತ–ಅಂತ | (೧೭–೧೮) |
| ದ: | ಕಡಿದು–ಕುಡಿದು | (೩೧–೩೨) |
| | ಮದ್ದು–ಮೆದ್ದು | (೩೯–೪೦) |
| | ಬಂದು–ತಿಂದು | (೬೩–೬೪) |
| ನ: | ತೀನ್ಷ–ತಾನ | (೯–೧೦) |
| | ಪಾನ–ಸ್ನಾನ | (೨೭–೨೮) |
| ಯ: | ನಯ–ಭಯ | (೧೫–೧೬) |

| ಧ್ವನಿ | ಧ್ವನಿಸಂಯೋಜನೆ | ಪಂಕ್ತಿಸಂಖ್ಯೆ |
|---|---|---|
| ರ: | ಪಾರು–ಆರು | (೧೧–೧೨) |
| ವ: | ತಾವ–ತಾವ | (೧೯–೨೦) |
| | ಹೂವ–ತಾವ | (೫೫–೫೬) |
| | ತಾವ–ಅವ್ವ | (೭೧–೭೨) |
| ಸ: | ಮೂಸಿ–ಹಾಸಿ | (೩೫–೩೬) |
| ಳ: | ಎಳಿ–ಸುಳಿ | (೭–೮) |
| | ಭಾಳ–ತಾಳ | (೩೫–೩೬) |

೩–೧. ಒಂದು ಕವಿತೆಯ ಶಬ್ದಸ್ತರೀಯ ವಿಶ್ಲೇಷಣೆಯನ್ನು ಮಾಡುವಾಗ ಅದರಲ್ಲಿ ಪ್ರಯುಕ್ತವಾದ ನಾಮವಾಚಕಪದ, ಕ್ರಿಯಾಪದ, ವಿಶೇಷಣ ಮುಂತಾದವುಗಳ ಮೂಲಕ ಪದಬಂಧದ ಸ್ವರೂಪವನ್ನು ಅರಿತುಕೊಳ್ಳಬಹುದು. ಆ ದೃಷ್ಟಿಯಿಂದಲೇ "ಪಾತರಗಿತ್ತಿಪಕ್ಕ" ಕವಿತೆಯ ಪದರಚನೆಯ ವೈವಿಧ್ಯವನ್ನೂ ವಿಂಗಡಿಸಿ ಪರಿಚಯಿಸಲಾಗುತ್ತದೆ.

೩–೨. **ನಾಮಪದಗಳು :** ಇಲ್ಲಿ ಬರುವ ನಾಮಪದಗಳು ಪ್ರಕೃತಿಯ ವಸ್ತುಗಳನ್ನು ನಿರ್ದೇಶಿಸುತ್ತವೆ. ಪಾತರಗಿತ್ತಿಯ ಕಾರ್ಯಕ್ಕೆ ಅವೆಲ್ಲವೂ ಸಂಬಂಧವನ್ನು ಸೂಚಿಸುವಂತಿವೆ.

೩-೨-೧. ಪಾತರಗಿತ್ತಿ, ಗುಬ್ಬಿ, ನಾಯಿ.

೩-೨-೨. ಹೂವು, ಪಕಳೆ, ರುದ್ರಗಂಟೆ, ವಿಷ್ಣುಗಂಟೆ, ಕಳ್ಳಿಹೂವು, ಗೊರಟಿಗೆ, ಅಂಚೆಗಂಟೆ, ಮದುಗುಣಿಕೆ, ಅಡವಿಮಲ್ಲಿಗೆ.

೩-೨-೩. ಹುಲ್ಲುಗಾವಲ, ಬನ, ಹೊಲ, ತೋಟ.

೩-೨-೪. ಬಳ್ಳಿ, ಮಾಲಿಂಗನಬಳ್ಳಿ, ಬೇಲಿ, ತೂಗುಮಂಚ, ಕಾಡಗಿಡ.

೩-೨-೫. ಗಾಳಿ, ನೀರು, ಹುಡಿ, ಪಗಡಿ, ತಾಳ, ಹಸಿರು, ಅರಿಶಿಣ, ಕುಂಕುಮ.

೩-೨-೬. ಕುಣಿತ, ಓಟ.

೩–೩. **ಕ್ರಿಯಾಪದಗಳು :** ಅರ್ಥರಚನೆಯ ದೃಷ್ಟಿಯಿಂದ ಕವಿತೆಯಲ್ಲಿ ತಳೆಯುವ ಕ್ರಿಯಾರೂಪಗಳಿಗೆ ವಿಶೇಷವಾದ ಮಹತ್ವವಿದೆ. ವಾಕ್ಯ ಹಾಗೂ

ಉಪವಾಕ್ಯಗಳಲ್ಲಿ ಅವು ಕವಿತೆಯಲ್ಲಿ ನಡೆಯುವ ಕ್ರಿಯೆಗನುಗುಣವಾಗಿ ವ್ಯಕ್ತ-ವಾಗುವ ಬಗೆ ಗಮನಾರ್ಹವಾದ ಅಂಶ.

೩-೩-೧. ಪಾತರಗಿತ್ತಿಯ ಒಂದೊಂದು ಕಾರ್ಯವನ್ನು ಪೂರ್ಣಗೊಳಿಸು-ವದಕ್ಕಾಗಿ, ಕವಿತೆಯಲ್ಲಿಯ ಉಪವಾಕ್ಯಗಳಲ್ಲಿ ಸಾಪೇಕ್ಷ ಕ್ರಿಯಾರೂಪಗಳನ್ನು ಬಳಸಲಾಗಿದ್ದು, ಅವು ಸಾಮಾನ್ಯವಾಗಿ "ಭೂತನ್ಯೂನ" ರೂಪಗಳನ್ನು ಪಡೆದಿವೆ. ಅಂದರೆ ಅರ್ಥಪೂರ್ಣವಾಗಿ ವಾಕ್ಯದಲ್ಲಿ ಮುಗಿಯುವ ಮೊದಲು ಕ್ರಿಯಾಪದದ ಕಾರ್ಯ ಉಂಟಾಗುವದಕ್ಕೆ ಪೂರ್ವದಲ್ಲಿ ಈ ಸಾಪೇಕ್ಷಕ್ರಿಯಾಪದದ ಕಾರ್ಯ ನಡೆದಿರುತ್ತದೆ.

| | |
|---|---|
| ಹಚ್ಚು → ಹಚ್ಚಿ | ಹಾಸು → ಹಾಸಿ |
| ಇಡು → ಇಟ್ಟು | ಮೆಯ್ಯು → ಮೆದ್ದು |
| ಎಳೆ → ಎಳೆದು | ತೂಗು → ತೂಗಿ |
| ಮಾಡು → ಮಾಡಿ | ಕಾಣು → ಕಂಡು |
| ಹೋಗು → ಹೋಗಿ | ಉಣ್ಣು → ಉಂಡು |
| ಆಡು → ಆಡಿ | ಕೂಡ್ರು → ಕೂತು |
| ಕಡಿ → ಕಡಿದು | ಕುಡಿ → ಕುಡಿದು |
| ಮೂಸು → ಮೂಸಿ | |

೩-೩-೨. ಧಾರವಾಡದ ಉಪಭಾಷೆಯಲ್ಲಿ ಭವಿಷತ್ ಕಾಲದ ತೃತೀಯ ಪುರುಷ ಬಹುವಚನ ಆಖ್ಯಾತ ಪ್ರತ್ಯಯ-"ಆರು" ರೂಪವನ್ನೂ, ವರ್ತಮಾನ-ಕಾಲದ ತೃತೀಯ ಪುರುಷ ಬಹುವಚನದ ಆಖ್ಯಾತ ಪ್ರತ್ಯಯ ತ-ಆವ ರೂಪಗಳು ಈ ಕೆಳಗಿನಂತಿವೆ—

ಮಾಡು → ಮಾಡಿದ್ದಾರು "ಆರು" — ಸ್ವತಂತ್ರವಾಗಿ

ತಿವಿ → ತಿವಿತಾವ

೩-೪. ವಿಶೇಷಣಗಳು : ಇಲ್ಲಿ ಬರುವ ವಿಶೇಷಣಗಳೂ ಪಾತರಗಿತ್ತಿಗೆ ಸಂಬಂಧಿಸಿದವು—

ಹೊನ್ನಚಿಕ್ಕಿ; ನವಿಲುಗಣ್ಣು; ರೇಶಿಮೆಪಕ್ಕ; ಧೂಳಿಸ್ನಾನ; ಪೇಸಿಗೆಹೂವು; ಕುಂಕುಮದೆಳೆ; ನಂದನವ ತೋಟ, ಇತ್ಯಾದಿ.

೩-೫. "ದ್ವಂದ್ವ ಪದಗಳು (Duplicate) ಈ ಕವಿತೆಯಲ್ಲಿ ಕೆಲವೆಡೆ ಕಾಣಿಸಿಕೊಳ್ಳುತ್ತವೆ. ಅಂದರೆ ಮೂಲಪದವು ಇಡಿಯಾಗಿ ಮಗುಚಿ ಬರುತ್ತದೆ. ಅದು ಕ್ರಿಯೆಯ ಆಧಿಕ್ಯವನ್ನು ಸೂಚಿಸುತ್ತದೆ.

೧. ಚಿಕ್ಕಿ-ಚಿಕ್ಕಿ (೫) ೪. ಬನ-ಬನ (೨೧)
೨. ಬಣ್ಣ-ಬಣ್ಣ (೧೩) ೫. ಹುಡಿ-ಹುಡಿ (೨೨)
೩. ತಿಳಿವು-ತಿಳಿವು (೧೮) ೬. ತಕ್ಕ-ತಕ್ಕ (೬೮)

**ಪ್ರತಿಧ್ವನಿಪದಗಳು :**

೩-೬. ಕವಿತೆಯಲ್ಲಿ ಪ್ರತಿಧ್ವನಿಪದಗಳು (Echo-Words) ಕೆಲವೆಡೆ ಬದ್ಧರೂಪಗಳಾಗಿಯೂ((Bound Forms)ಇನ್ನು ಕೆಲವು 'ಗಿ' ಮತ್ತು 'ಪಾ' ಪ್ರತಿನಿಧಾನಾತ್ಮಕವಾಗಿಯೂ ಇರುವ ಕೆಲವು ರೂಪಗಳು. ಇವು ಧಾರವಾಡದ ಉಪಭಾಷೆಯಲ್ಲಿ ಬಳಕೆಯಲ್ಲಿರುವ ಪದಗಳಾಗಿವೆ.

ಹಚ್ಚಿ-ಚುಚ್ಚಿ (೭) ಗಂಟೆ-ಗಿಂಟೆ (೪೨)
ಆರು-ಪಾರು (೧೧) ಹಾರ-ಹರಿಕೆ (೬೦)
ಗಿಡ-ಗಂಟೆ (೪೧) ಚಪ್ಪ-ಚಕ್ಕ (೬೭)

೪-೧. ೭೬ ಪಂಕ್ತಿಗಳುಳ್ಳ "ಪಾತರಗಿತ್ತಿಪಕ್ಕ" ಕವಿತೆಯಲ್ಲಿ ಉಪವಾಕ್ಯಗಳೇ ವಿಪುಲವಾಗಿದ್ದು ಮುಖ್ಯವಾಕ್ಯಗಳ ಸಂಖ್ಯೆ ೧೧.

೧-೨; ೩-೧೦; ೧೧-೧೨; ೧೩-೧೬; ೧೭-೨೦: ೨೧-೨೬; ೨೭-೨೮; ೨೯-೩೦; ೩೧-೫೬; ೫೭-೭೨; ೭೩-೭೬. ವಾಕ್ಯರಚನೆಯಲ್ಲಿ ಒಂದು ವ್ಯವಸ್ಥಿತವಾದ ವಿಭಜನ ಸಿದ್ಧಾಂತವೊಂದು ಈ ಕವಿತೆಯಲ್ಲಿರುವಂತಿದೆ.

೪-೨. ಪಾತರಗಿತ್ತಿ ಮಾಡುವ ಕಾರ್ಯ ಆದನ್ನು ಸೂಚಿಸುವ ಕ್ರಿಯಾಪದಗಳ ಮೂಲಿಕೆ ಪಂಕ್ತಿಯ ಅಂತ್ಯದಲ್ಲಿ ಬರುವ ಕೆಲವು ಉಪವಾಕ್ಯಗಳ ಬಂಧವನ್ನು ನೋಡಿ ಪಂಕ್ತಿಯ ಪೂರ್ವಾರ್ಧದಲ್ಲಿ ನಾಮವಿಶೇಷಣಗಳ ರಚನೆ ಕಂಡುಬರುತ್ತದೆ—

ಹಸಿರು ಹಚ್ಚಿ ಚುಚ್ಚಿ (೩) ಧಣಿದಾಂಗ ಆಗಿ (೫೦)
ನೇಲಕರಿಸಿಣ ಹಚ್ಚಿ (೪) ಸಿದ್ದಿಗುಳ್ಯಾಡಿ (೫೩)

ಯಾರು ಮಾಡಿದ್ದಾರು (೧೨)
ಗಲ್ಲಾ ಶಿವಿತಾವ (೨೦)
ಬನಬನದಾಗ ಆಡಿ (೨೧)
ಕಳ್ಳಿ ಹೂವ ಕಡಿದು (೩೧)
ಹೂತುಟನೀರ ಕುಡಿದು (೩೨)
ರುದ್ರಗಂಟೆ ಮೂಸಿ (೩೫)
ವಿಷ್ಣುಗಂಟೆ ಹಾಸಿ (೩೬)
ಹುರುಪಿಗಿಷ್ಟು ಮೆದ್ದು (೪೦)
ಸೀಗಿ ಬಳ್ಳಿ ತಾಗಿ (೪೩)
ಪಕ್ಕ ಬೆಳ್ಳಗಾಗಿ (೪೪)
ಗೊರಟಿಗೆಗೆ ಶರಣ (೪೫)

ಪಗಡಿಪಕ್ಕಾ ಆಡಿ (೫೪)
ಕುಶಲ ಕೇಳತಾವ (೫೬)
ಅಡವಿಮಲ್ಲಿಗಿ ಕಂಡು (೬೧)
ಅದರ ಕಂಪಸುಂಡು (೬೨)
ಹುಲ್ಲ ಹೊಲಕ ಬಂದು (೬೩)
ಗುಬ್ಬಿ ಬೆಳಸಿ ತಿಂದು (೬೪)
ಇಷ್ಟು ಎಲ್ಲಾ ಮಾಡಿ (೬೫)
ಸಪ್ಪಳಿಲ್ಲದಾಡಿ (೬೬)
ಸಿಕ್ಕಲ್ಲೋಡತಾವ (೭೧)
ಕಾಣದೆಲ್ಲೊ ಮೂಡಿ (೭೩)

೪-೩. ಇಲ್ಲಿನ ಉಪವಾಕ್ಯಗಳಲ್ಲಿ ಕ್ರಿಯೆ ತೀವ್ರವಾಗಿ ಸಾಗುವ ಚಿತ್ರವನ್ನು ಸೂಚಿಸಲು ಪದಗಳು ಪುನರಾವರ್ತನೆಯನ್ನು ಹೊಂದುವದುಂಟು.

**ಉದಾಹರಣೆಗೆ—**

ಮಾಲಿಂಗನ ಬಳ್ಳಿ
ತೂಗೂ ಮಂಚದಲ್ಲಿ
**ತೂಗಿ, ತೂಗಿ, ತೂಗಿ**
ಧಣಿಥಾಂಗ ಆಗಿ

ಎನ್ನುವಲ್ಲಿ ಪಾತರಗಿತ್ತಿಗೆ ದಣಿವಾಗುವದು, ತೂಗುವ ಕಾರ್ಯ ಜೋರಾಗಿ ನಡೆದಾಗ. ಅದಕ್ಕಾಗಿ ಕವಿ ತನ್ನ ಭಾಷೆಯ ಮೂಲಕ ಅಭಿವ್ಯಕ್ತಿಸುವಲ್ಲಿ ಪಾತರಗಿತ್ತಿ ಒಂದೆಡೆಯಿಂದ ಮುಂದಿನ ಜೇಲೀ ಬಳ್ಳಿಯೆಡೆಗೆ ಸಾಗುವಿಕೆಗೂ. ದಣಿಯುವಿಕೆಗೂ ಇರುವ ಕಾರ್ಯಕಾರಣ ಸಂಬಂಧವನ್ನೂ ಸೂಚಿಸಿದ್ದು ಕಂಡುಬರುತ್ತದೆ.

೫-೧. ಬೇಂದ್ರೆಯವರ 'ಪಾತರಗಿತ್ತಿಪಕ್ಕ' ಕವಿತೆಯ ಭಾಷೆಯ ರಚನೆಯನ್ನು ಈವರೆಗೆ ವಿವೇಚಿಸಲಾಯಿತು. ಅರ್ಥರಚನೆಯ ದೃಷ್ಟಿಯಿಂದ ವ್ಯಾವಹಾರಿಕ ಭಾಷೆಗೂ, ಕಾವ್ಯಭಾಷೆಗೂ ಇರುವ ಅಂತರವನ್ನು ನಿರೂಪಿಸುವಾಗ ಈ ಕವಿತೆಯ ಕೆಲವು ಸಾಲುಗಳು ಗಮನಾರ್ಹವಾದ ಅಂಶಗಳನ್ನು ಪ್ರಕಟಿಸುತ್ತವೆ. ಛಂದಸ್ಸು, ಲಯ, ಪದರಚನೆ, ಧ್ವನಿಸಂಯೋಜನೆ ಇವು ಯಾವ ರೀತಿಯಲ್ಲಿ

ಕಾವ್ಯದ ಚೌಕಟ್ಟಿನಲ್ಲಿ ಭಾಷೆಯು ದೃಷ್ಟಿಯಿಂದ ಕೆಲಸ ಮಾಡುತ್ತಿವೆಯೋ ಅದೇ ಕಾರ್ಯವನ್ನು ಅಲಂಕಾರಗಳೂ ನಿರ್ವಹಿಸುತ್ತವೆ. ವಾಸ್ತವವಾಗಿ ಅಲಂಕಾರ-ಗಳು ಕಾವ್ಯದಲ್ಲಿ ಭಾಷೆ ಮೈದಳೆಯುವ ನಾನಾ ತೆರನಾದ ವಿಧಾನಗಳು. "ಪಾತರ-ಗಿತ್ತಿ ಪಕ್ಕ" ಕವಿತೆಯಲ್ಲಿ ಉತ್ಪ್ರೇಕ್ಷಾಲಂಕಾರವಿದೆಯೆಂಬ ಅಭಿಪ್ರಾಯ ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಭಾಷೆಯ ದೃಷ್ಟಿಯಿಂದ ಪೂರ್ಣವಾಗಿ ಭಿನ್ನ ಅರ್ಥಗಳನ್ನು ಅದು ಪ್ರಕಟಿಸುತ್ತದೆ. ಕವಿ ಭಾಷೆಯ ಹಂತದಲ್ಲಿ ಅರ್ಥದ ತಿರುವನ್ನು ಹೇಗೆ ಸಾಧಿಸುತ್ತಾನೆ ಎಂಬುದು ಇಲ್ಲಿ ಪರಿಶೀಲಿಸುವಂತಿದೆ.

"ಗೊರಟಿಗೆಗೆ ಶರಣ<br>ಮಾಡಿ ದೂರಿಂದ್ಲನ''

''ಗುಲಬಾಕ್ಷಿಯ ಹೂವ<br>ಕುಶಲ ಕೇಳತಾವ''.

ಈ ಎರಡು ಪಂಕ್ತಿಗಳಿಗೆ ವ್ಯಾವಹಾರಿಕ ಭಾಷೆಯಲ್ಲಿ ಅರ್ಥದ ಮಹತ್ವವಿಲ್ಲ. ಗೊರಟಿಗೆಗೆ ಶರಣೆನ್ನುವದೂ, ಗುಲಬಾಕ್ಷಿಯ ಹೂವಿನ ಹತ್ತಿರ ಕುಶಲ ಕೇಳುವದೂ ತೀರ ಸತ್ಯಕ್ಕೆ ದೂರವಾದ ಮಾತು—ಎಂದೆನಿಸಿ ನಗೆ ತರಬಹುದು. ಆದರೆ ಕಾವ್ಯ ಭಾಷೆಯಲ್ಲಿ ಪಾತರಗಿತ್ತಿಯ ಕಾರ್ಯಗಳ ಹಂತದಲ್ಲಿ ಅದು ಅಮೂರ್ತವಾದ ಕವಿ-ಕಲ್ಪನೆಯ ಅರ್ಥವನ್ನು ನೀಡುತ್ತದೆ. ವಾಸ್ತವ ವಿಷಯ ಕಾವ್ಯಭಾಷೆಯಲ್ಲಿ ಹೊಸ ಅರ್ಥವನ್ನೂ ನಿಶ್ಚಿತವಾಗಿ ಕಟ್ಟಿಕೊಡುತ್ತದೆ. ಮತ್ತು ಬೇರೆ ತೆರನಾದ ಅನುಭವ-ವನ್ನೂ ಮೂಡಿಸುತ್ತದೆ.

೫-೨. 'ಪಾತರಗಿತ್ತಿ ಪಕ್ಕ' ಕವಿತೆಯಲ್ಲಿ ಇನ್ನೊಂದು ಮುಖ್ಯವಾದ ಸಂಗತಿ ಯೆಂದರೆ, ಇಲ್ಲಿನ ವಾಕ್ಯಗಳು ವ್ಯಾವಹಾರಿಕಸತ್ಯದ ಚಿತ್ರಕ್ಕಿಂತ ಬೇರೆ ತೆರನಾದ ಅರ್ಥವನ್ನು ಸೃಷ್ಟಿಸುವದು. ಅಂದರೆ ಪಾತರಗಿತ್ತಿಯ ದೈನಂದಿನ ಕಾರ್ಯಗಳ ನಿರೂಪಣೆ ತುಂಬಾ ವಿಶಿಷ್ಟವಾದ ಮಾದರಿಯಲ್ಲಿ ಅಭಿವ್ಯಕ್ತವಾಗುವದು ಕಂಡುಬರು ತ್ತದೆ. ಪಾತರಗಿತ್ತಿ "ಹೂವಿಗೆ ಹೋಗಿ ಗಲ್ಲ ತಿಪಿಯುವದೂ, ಬನಬನದಲ್ಲಿ ಆಡುವದೂ, ಧೂಳಿಸ್ನಾನ ಮಾಡುವದೂ, ನೀರ ಕುಡಿಯುವದೂ, ಮೋಜಿನಿಂದ ಕುಳಿತುಕೊಳ್ಳುವದೂ, ಮೂಸುವದೂ, ಗೊರಟಿಗೆಗೆ ಶರಣೆನ್ನುವದೂ, ತೂಗು ಮಂಚದಲ್ಲಿ ತೂಗಿ ದಣಿಯುವದೂ, ನಿದ್ದಿಗುಳ್ಯಾಡುವದೂ, ಕುಶಲ ಕೇಳುವದೂ, ಮಲ್ಲಿಗೆ ಕಂಪನ್ನುಣ್ಣುವದೂ, ಸಪ್ಪಳಿಲ್ಲದಾಡುವದೂ, ಕುಣಿಯುವದೂ, ಎಲ್ಲಾ-ಕಡೆ ಕಾಣಿಸಿಕೊಳ್ಳುವಿಕೆ'' ಮುಂತಾದ ಮಾನವೀಯ ಕಾರ್ಯಗಳನ್ನೂ ಮಾಡುವ ಹೇಳಿಕೆ (Personifcation) ನಿರೂಪಿತವಾಗಿದೆ. ಪಾತರಗಿತ್ತಿಗೆ ಆರೋಪಿತ-

ವಾದ ಈ ಮನುಷ್ಯನ ದೈನಂದಿನ ಕಾರ್ಯಗಳು ವ್ಯಾವಹಾರಿಕ ಭಾಷೆಯಲ್ಲಿ ಅರ್ಥದ ದೃಷ್ಟಿಯಿಂದ ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ. ಅವು ಪರಸ್ಪರ ವಿಸಂಗತಿಯನ್ನು ತೋರಬಹುದು. ಆದರೆ ಅಮೂರ್ತವಾದ ಮತ್ತು ನೂತನ-ವಾದ ಕಲ್ಪನೆಗಳನ್ನೂ, ಭಾವನೆಗಳನ್ನೂ ಕಾವ್ಯದಲ್ಲಿ ವ್ಯಕ್ತಪಡಿಸುವಾಗ ಕವಿ ಕಾವ್ಯಭಾಷೆಯಲ್ಲಿ ಬದಲಾವಣೆಯನ್ನು ಮಾಡಿಕೊಳ್ಳುತ್ತಾನೆ. ಇದು ಭಾಷೆಯ ಬಳಕೆಯ ದೃಷ್ಟಿಯಿಂದ ಯಾವುದೇ ಭಿನ್ನಾಭಿಪ್ರಾಯಕ್ಕೆ ಎಡೆಯಿಲ್ಲದೆ ಯೋಗ್ಯ-ವೆಂದೇ ಪರಿಗಣಿತವಾಗುತ್ತದೆ. ಹೀಗಾಗಿ ಕಾವ್ಯಭಾಷೆಯ ವಾಕ್ಯಗಳು ವ್ಯಾಕರಣ ನಿಯಮವನ್ನು ಮೀರಿ ಅಂದರೆ ಕ್ರಮ ವಿಪರ್ಯಯ (Permutation)ವಾಗಿ ಕಾವ್ಯಶಿಲ್ಪವನ್ನು ತಳೆದು ನಿಲ್ಲುತ್ತವೆ.

(೧) ಕಿರೇ ಸೂರೇಪಾನದಲ್ಲಿ
ಧೂಳಿ ಸ್ನಾನ

(೨) ತುರುಬಿ ತುಂಬಿತೋಟದಲ್ಲಿ
ದಿನದ ಊಟ



□ ಶೀರ್ಷಪದ
● ವಿಶೇಷಣಪದ
⊙ ಸ್ಥಾನವಾಚಿಪದ
↲ ಸಂಬಂಧಸೂಚಕಪದ

ಮೇಲಿನ ಎರಡು ವಾಕ್ಯಗಳನ್ನು ಕ್ರಮಕ್ಕನುಗುಣವಾಗಿ (Combination) ಹೊಂದಿಸಿಕೊಳ್ಳಬೇಕಾಗುತ್ತದೆ. ಆದರ ಎರಡನೆಯ ವಾಕ್ಯದಲ್ಲಿ 'ದಿನದ ಊಟ'ಕ್ಕೂ 'ತುರುಬಿ ತೋಟ'ಕ್ಕೂ ಸಂಬಂಧವನ್ನು 'ಅಲ್ಲಿ' ಎಂಬುದು ಸೂಚಿಸು-ತ್ತದೆಯೇ ಹೊರತು ವಾಸ್ತವವಾಗಿ ಅವು ಭಿನ್ನ ಅರ್ಥರಚನೆಯನ್ನೊಳಗೊಂಡವು. ಹೀಗೆ ಕ್ರಿಯಾಪದವಿಲ್ಲದೆ ಅರ್ಥ ಸ್ಫುಟವಾಗುತ್ತಿಲ್ಲ. ಅವುಗಳನ್ನೇ ಹೀಗೆ ರಚಿಸಿ ತೋರಿಸಬಹುದು.

<table>
<tr><td>ದಿನದ<br>ಊಟ</td><td>ದಿನದ ಊಟ</td><td rowspan="2">ದಿನದ ಊಟ ತುರುಬಿ ತುಂಬಿ<br>ತೋಟದಲ್ಲಿ</td></tr>
<tr><td>ತುರುಬಿ ತುಂಬಿ ತೋಟ<br>ಅಲ್ಲಿ</td><td>ತುರುಬಿತುಂಬಿ<br>ತೋಟದಲ್ಲಿ</td></tr>
</table>

ಹೀಗೆ ಕಾವ್ಯದ ಭಾಷೆ. ಆಡುಮಾತಿನ ಸ್ವರೂಪವನ್ನು ಮೈದುಂಬಿಸಿಕೊಂಡು ರೂಪಾಂತರ ಹೊಂದಿ ಮೊದಲಿನ ಅರ್ಥರಚನೆಗಿಂತ ಭಿನ್ನವಾದ ಅರ್ಥರೇಖೆಯನ್ನು ನಿರ್ಮಿಸುವ ರೀತಿ ತುಂಬಾ ಸ್ವಾರಸ್ಯಕರವಾದುದು. ಬೇಂದ್ರೆಯವರ ಇನ್ನಿತರ ಕವಿತೆಗಳನ್ನೂ ಈ ರೀತಿ ಭಾಷೆಯ ದೃಷ್ಟಿಯಿಂದ ಅಧ್ಯಯನ ಮಾಡುವುದು ತುಂಬಾ ಅಗತ್ಯವಾದ ಕಾರ್ಯ. ಆ ದೃಷ್ಟಿಯಿಂದ ಇದೊಂದು ಪ್ರಯತ್ನ ಮಾತ್ರ. ಇನ್ನು ಬೇರೆ ವಿಧಾನಗಳಿಂದಲೂ ವಿವೇಚಿಸುವದು ಸಾಧ್ಯ. ಅರ್ಥದ ರಚನೆಯ ದೃಷ್ಟಿ-ಯಿಂದ ಬೇಂದ್ರೆಯವರ ಕಾವ್ಯಭಾಷೆ ಭಾಷಾಭ್ಯಾಸಿಯ ಕುತೂಹಲವನ್ನು ಕೆರಳಿಸು-ತ್ತದೆ. ಹೊಸ ಹೊಸ ಆಯಾಮುಗಳನ್ನು ಕಾಣಿಸುತ್ತದೆ. ಹರಿಹರನ ರಗಳೆಗಳ ಭಾಷೆಯಂತೆ ಬೇಂದ್ರೆಯವರ "ಪಾತರಗಿತ್ತಿಪಕ್ಕ" ಬಿಡುವಿಲ್ಲದ ಕ್ರಿಯಾಪುಂಜ-ಗಳಿಂದ ಭಾಷೆಯ ಗತಿಯಲ್ಲಿ ಮಹತ್ವದ ಸಾಧನೆಯಾಗಿದೆ. ಕವಿ ತನ್ನ ಕವಿತೆಯಲ್ಲಿ ಸೃಷ್ಟಿಸುವ ಸಂಕೇತಗಳು ಹಾಗೂ ಪ್ರತಿಮೆಗಳು ಕಾವ್ಯಭಾಷೆಯ ದೃಷ್ಟಿಯಿಂದ ಮಹತ್ವಪೂರ್ಣವಾದವುಗಳು. ಬೇಂದ್ರೆಯವರ ಕವಿತೆಗಳಲ್ಲಿಯ ಸಂಕೇತಗಳನ್ನೂ, ಪ್ರತಿಮೆಗಳನ್ನೂ ಭಾಷೆಯ ಅರ್ಥರಚನೆಯ ದೃಷ್ಟಿಯಿಂದ ಅಧ್ಯಯನ ಮಾಡ-ಬೇಕಾದುದನ್ನು ಇಲ್ಲಿ ಸೂಚಿಸಬಹುದು.

§ § § §

೬೪

# ಕಾವ್ಯಾಭ್ಯಾಸಕ್ಕೆ ಕಂಪ್ಯೂಟರ್ ಸಹಾಯ

ಶ್ರೀನಿವಾಸ ಹಾವನೂರ

ಬರುವ ಸೃಷ್ಟಿಯು ಬೇಳೆಯೊಡೆದಿದೆ
ಶಬ್ದವಾಗಿದೆ! ಶಬ್ದ ಕೇಳಣ್ಣಾ,
— ದ. ರಾ. ಬೇಂದ್ರೆ

ಕನ್ನಡ ಕಾವ್ಯವಿಮರ್ಶೆ ಆರಂಭವಾಗಿ ನೂರು ವರ್ಷಗಳಾಗುತ್ತ ಬಂದಿವೆ. ಒಂದು ಕಾಲಕ್ಕೆ ವಿಮರ್ಶೆಯೆಂದರೆ, ಕವಿಯ ಜೀವನ ಚರಿತ್ರೆ, ಕಾಲ-ಮತ, ವಿಚಾರ, ಕಥಾಸಾರ ಮತ್ತು ಆಕರಗಳು, ಪಾತ್ರ ಪರಿಚಯ, ಒಂದಷ್ಟು ವರ್ಣನೆಗಳ ಹೃದ್ಯತೆ ಹಾಗೂ ರಸಾಲಂಕಾರ— ಇವಿಷ್ಟನ್ನು ಮಾತ್ರ ಒಳ-ಗೊಂಡಿದ್ದಿತು— ಈ ಶತಕದ ಪೂರ್ವಾರ್ಧದಲ್ಲಿ. ಇಂದು ಕಾವ್ಯವಿಮರ್ಶೆಯ ಸ್ವರೂಪ ವಿಸ್ತಾರಗೊಳ್ಳುತ್ತ ನಡೆದಿದೆ. ಅದಕ್ಕೆ ಹೊಸ ಆಯಾಮಗಳು ಮೂಡಿವೆ. ವಿಶೇಷತಃ ತೌಲನಿಕವಾಗಿ ಕಾವ್ಯಾಭ್ಯಾಸ ಮಾಡುವುದಕ್ಕೆ ಹೆಚ್ಚು ಮಹತ್ವ ಬಂದಿದೆ. ಕಥೆಯ ಆಕರಗಳನ್ನು, ವಿವಿಧ ವರ್ಣನೆಗಳನ್ನು ಗಮನಿಸುವಾಗ ಇತರರ ಪ್ರಭಾವ ವೆಷ್ಟು, ಈ ಕವಿಯ ಸ್ವೋಪಜ್ಞತೆಯ ಅಂಶಗಳಾವವು— ಎಂಬುದನ್ನು ಹೆಚ್ಚೆಚ್ಚಾಗಿ ತಿಳಿಯಬಯಸುತ್ತೇವೆ. ಅದರಂತೆ ಕವಿಯ ನುಡಿಕಟ್ಟನ್ನು, ಆ ಮೂಲಕ ಆಗಿನ ಕಾಲದ ಭಾಷಾಸ್ವರೂಪವನ್ನು ಗಮನಿಸುತ್ತೇವೆ. ಕಾವ್ಯದಲ್ಲಿಯ ಇತಿಹಾಸದ ಎಳೆಗಳನ್ನು, ಸಾಂಸ್ಕೃತಿಕ ಪರಿಸರವನ್ನು ಮತ್ತು ಸಾಮಾಜಿಕ ಸಂವೇದನೆಯನ್ನು ಹುಡುಕಿಕೊಂಡು ಹೋಗುತ್ತೇವೆ. ಇನ್ನೂ ಏನೆಲ್ಲ....

ಇಷ್ಟೊಂದು ವ್ಯಾಪಕ ಹಾಗೂ ಸೂಕ್ಷ್ಮವಾದ ಕಾವ್ಯಾಭಾಸಕ್ಕೆ ಆ ಕವಿಯ ಕೃತಿಗಳನ್ನು ಆಳವಾಗಿ, ಮತ್ತೆ ಮತ್ತೆ ಮನನ ಮಾಡಬೇಕು. ಅವನ ಕೃತಿ ಸಮುದಾಯ ದೊಡ್ಡದಿದ್ದರೆ ಅದು ಇನ್ನಷ್ಟು ಶ್ರಮಸಾಧ್ಯದ ಕೆಲಸ. ಹಾಗೆ ಮಾಡದಿದ್ದರೆ, ವಿಮರ್ಶನ ವಿಚಾರಗಳು ಅರೆಕೊರೆಯಾಗುತ್ತವೆ; ಅನೇಕ ಬಾರಿ ವಿಮರ್ಶಕನ ವೈಯಕ್ತಿಕ ಅನಿಸಿಕೆಗಳಾಗುತ್ತವೆ; ನಿರ್ದುಷ್ಟವೂ ವಸ್ತುನಿಷ್ಠವೂ

ಆಗಿರುವುದಿಲ್ಲ. ಶೆಕ್ಸ್‌ಪಿಯರನ ಸುನೀತವೊಂದರ ಈ ಕೆಲವು ಸಾಲುಗಳನ್ನು ಗಮನಿಸಿರಿ :

Let me not to the marriage of true mindes
Admit impediments, love is not love
Which alters when it alteration findes,
Or bends with the remover to remove.

ಸುಲಭವಾಗಿ ಅರ್ಥವಾಗದ ಈ ಸಾಲುಗಳನ್ನು ಕುರಿತು ಓರ್ವ ಪ್ರಸಿದ್ಧ ವಿಮರ್ಶಕನು They have precision, simplicity and dignity ಎಂದು ಹೊಗಳಿದ್ದಾನೆ ! ಹಾಗೆ ಇದ್ದಿರಲೂ ಬಹುದು ಅವನ ದೃಷ್ಟಿಯಲ್ಲಿ. ಆದರೆ ಅವನ ಈ ಹೇಳಿಕೆ ವೈಯಕ್ತಿಕವಾಗುವುದಲ್ಲದೆ ವಸ್ತುನಿಷ್ಠ ವಿಮರ್ಶೆ ಅನಿಸುವುದಿಲ್ಲ. ನಮ್ಮ ಸಮಕಾಲೀನ ನವೋದಯ ಮತ್ತು ನವ್ಯ ಲೇಖಕ-ಕವಿಗಳ ವಿಮರ್ಶೆಯ ಕಾಲದಲ್ಲಿಯೂ ಕೆಲವರು ಈ ಬಗೆಯ ವ್ಯಕ್ತಿಗತವೂ, ಅಸ್ಪಷ್ಟವೂ ಆದ ಅಭಿಪ್ರಾಯಗಳನ್ನು ವ್ಯಕ್ತಮಾಡಿಯೇ ಇದ್ದಾರೆ. (ಉದಾಗಳನ್ನೇನು ಕೊಡುವುದಿಲ್ಲ ! )

ಕೀಟ್ಸ್‌ನಿಗೆ ಪ್ರಿಯವಾದ ಬಣ್ಣಗಳಾವವು ? ಇಂಗ್ಲಂಡಿನ ನವೋದಯ ಕವಿಗಳ ವರ್ಣವಿಲಾಸವನ್ನು ಕುರಿತು ಒಂದು ಗ್ರಂಥ ಪ್ರಕಟವಾಗಿದ್ದು (Use of colours in the verse of English poets), ಅದರಲ್ಲಿ ಕೀಟ್ಸ್‌ನಿಗೆ ಇಂತಿಂಥ ಬಣ್ಣಗಳು ಪ್ರಿಯವೆಂದು ಹೇಳಲಾಯಿತು. ಆದರೆ ಕೀಟ್ಸ್‌ನ ಕವನಗಳಲ್ಲಿ ಬರುವ ಎಲ್ಲ ವರ್ಣವಾಚೀ ಶಬ್ದಗಳ ಪಟ್ಟಿ ಮಾಡಿ, ಬೇರೊಬ್ಬರು ವಿಶ್ಲೇಷಿಸಿದಾಗ, ಅವನ ನೆಚ್ಚಿನ ಬಣ್ಣಗಳು ಬೇರೆಯೇ ಇದ್ದುವಾಗಿ ಕಂಡು ಬಂತು.

ಎಮಿಲಿ ಡಿಕಿನ್ಸನ್ ಅಮೇರಿಕದ ಓರ್ವ ಪ್ರಸಿದ್ಧ ಕವಯಿತ್ರಿ. ಅವಳ ಭಾವಗೀತಗಳಲ್ಲಿ ಆಗೀಗ ಆತ್ಮನಿವೇದನೆಯ ಅಂಶ ಕಂಡುಬರುತ್ತದೆಂದು ವಿಮರ್ಶಕರು ಹೇಳಿದ್ದರು. ‘ ಆಗೀಗ ’ ಮಾತ್ರವೆ ? ಅದು ಎಲ್ಲ ಕವಿಗಳಲ್ಲೂ ಕಂಡು ಬರುವಂತಹದೇ ತಾನೆ. ಆದರೆ ಒಬ್ಬ ವಿಮರ್ಶಕ ಆಕೆ ಉಪಯೋಗಿಸಿದ ಎಲ್ಲಾ ಶಬ್ದಗಳ ಪಟ್ಟಿ ಮಾಡಿದ. ಆಗ ‘ ನಾನು ’ ‘ ನನ್ನ ’ ‘ ನನಗೆ ’ ಎಂಬೀ ಪ್ರಥಮ ಪುರುಷದ ಸರ್ವನಾಮಗಳು ಇತರ ಯಾವವೇ ಶಬ್ದಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದವು. ಅವನ್ನೆಲ್ಲ ಆ ಆ ಸಂದರ್ಭಗಳಲ್ಲಿ ವಿಶ್ಲೇಷಿಸಿದಾಗ ಆಕೆಯ ಜೀವನ ದರ್ಶನ ಅತ್ಯಂತ ಸಿಚ್ಚಳವಾಗಿ ತೋರಿಬಂತು.

W. B. ಯೀಟ್ಸ್ ಕವಿ, ಪ್ರತಿಮಾವಿಧಾನದ ಆದ್ಯ ಪ್ರವರ್ತಕರಲ್ಲಿ ಒಬ್ಬ. ಅನೇಕ ಪಶು-ಪ್ರಾಣಿಗಳನ್ನು ಸಾಂಕೇತಿಕ ಅರ್ಥದಲ್ಲಿ ಧಾರಾಳವಾಗಿ ಬಳಸಿದ್ದಾನೆ.

ಅದು ಗೊತ್ತಿದ್ದ ಮಾತೇ. ತಮಗೆ ಎಷ್ಟು ಬೇಕೊ ಅಷ್ಟರ ಮಟ್ಟಿಗೆ ಅವುಗಳ ಪ್ರಸ್ತಾಪ ಮಾಡಿ ವಿಮರ್ಶಕರು ಆ ಕುರಿತು ಬರೆದದ್ದೂ ಇದೆ. ಆದರೂ ಓರ್ವ ವಿಮರ್ಶಕನಿಗೆ ಏನೊ ಕೊರತೆ ಅನಿಸಿತು. ಯೇಟ್ಸ್ ತನ್ನ ಕಾವ್ಯದಲ್ಲಿ ತಂದಿರುವ ಪ್ರಾಣಿಗಳಾದರೂ ಯಾವವು, ಎಷ್ಟು ಸಲ ಮತ್ತು ಯಾವ ಸಂದರ್ಭಗಳಲ್ಲಿ ಬಂದಿವೆ— ಎಂಬುದರ ಪಟ್ಟಿ ಮಾಡಿದ :

> ಕುದುರೆ ೭೨ ಸಲ, ಮೊಲ ೨೩, ಸಿಂಹ ೨೦, ತೋಳ ೯,
> ಚಿರ್ಚ ೯, ಕರಡಿ ೩, ಚಿರತೆ ೩, ಕತ್ತೆ ೨ — ಇತ್ಯಾದಿ.

ಈ ವಿಶ್ಲೇಷಣೆಯಲ್ಲಿ ಹಿಂಸ್ರ ಪಶುಗಳ ಬಾಹುಲ್ಯ ಕಂಡು ಬಂತು. ವಿಮರ್ಶಕರು, ಆ ದೃಷ್ಟಿಯಿಂದ ಕವಿಯ ಜೀವನದೃಷ್ಟಿಯನ್ನು ವಿಮರ್ಶಿಸಿ ಖಚಿತವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಅವನ ಕಾವ್ಯವಿಮರ್ಶೆಯ ಆಯಾಮವನ್ನು ಹಿಗ್ಗಿಸಿದರು.

ಏನು ಹೇಳುವುದಕ್ಕೆ ಬಂದೆ ಎಂದರೆ — ಕಾವ್ಯವೊಂದರ ಕುರಿತು “ ಆಹಾ ! ಈ ಕಲ್ಪನೆ ಎಷ್ಟೊಂದು ಸೊಗಸಾಗಿದೆ ! ” ಎಂದುಬಿಟ್ಟರೆ ಅದರ ವಿಮರ್ಶೆ ಮುಗಿಯಲಿಲ್ಲ. ಅದಕ್ಕೂ ಹೆಚ್ಚಿನ ರಸಗ್ರಹಣ ಮಾಡುವಾಗ, ಮೊತ್ತದ (quantum) ದೃಷ್ಟಿಯಿಂದ ಸಾಮಗ್ರಿಯನ್ನು ವಿಂಗಡಿಸಿಕೊಂಡು ಅಧ್ಯಯನಕ್ಕೆ ತೊಡಗಿದರೆ ವಿಮರ್ಶೆ ಪರಿಪೂರ್ಣವಾಗಬಹುದು. ವಸ್ತುನಿಷ್ಠತೆ (objectivity) ಯ ಮೇಲುಗೈ ಆಗಬಹುದು.

ಕನ್ನಡದ್ದೇ ಒಂದು ಉದಾಹರಣೆ ನೋಡೋಣ. ನಾನು ಬೇರೊಂದು ಅಭ್ಯಾಸಕ್ಕಾಗಿ ಮುದ್ದಣ ಉಪಯೋಗಿಸಿದ ಸ್ತ್ರೀವಾಚಿ ಶಬ್ದಗಳ ಪಟ್ಟಿ ಮಾಡಿದೆ. (ಸು. ೯೦೦). ಕಮಲ, ಚಂದ್ರ ಮುಂತಾದ ಹಳೆಯ ಕ್ರಮದ ಹೋಲಿಕೆಗಳಿರುವವನ್ನು ಬೇರೆ ಮಾಡಿದೆ. ಹೆಣ್ಣಿನ ಕೇಶ, ಕಣ್ಣು, ಮುಖ, ಗಾತ್ರ— ಮೊದಲಾದ ಅಂಗಾಂಗಗಳನ್ನು ಹೇಳುವ ಶಬ್ದಗಳ ಪಟ್ಟಿಯನ್ನೂ ಬೇರೆಯಾಗಿ ಮಾಡಿದೆ ( ಛೀ, ಏನನ್ಯಾಯ ಎನ್ನಬೇಡಿ ! ). ಅದರಂತೆ ಸ್ತ್ರೀಯ ಸ್ವಭಾವಾದಿ ಲಕ್ಷಣಗಳನ್ನು ಹೇಳುವಂತಹ ಶಬ್ದಗಳನ್ನೂ ಪ್ರತ್ಯೇಕಿಸಲಾಯಿತು ( ಗಡಸುಗಾರ್ತಿ ಇ. ). ಈ ಕೊನೆಯ ಪಟ್ಟಿಯಲ್ಲಿಯ ಶಬ್ದಗಳನ್ನು ವಿಶ್ಲೇಷಿಸಿದಾಗ ಮುದ್ದಣ ಸ್ತ್ರೀಯನ್ನು ಎಷ್ಟೊಂದು ಆತ್ಮೀಯವಾಗಿ, ಆಳವಾಗಿ ಪರಿಭಾವಿಸಬಲ್ಲ — ಎಂಬುದು ಗೋಚರವಾಯಿತು. ಇನ್ನು ಸ್ತ್ರೀಯ ಅಂಗಾಂಗಗಳನ್ನು ವರ್ಣಿಸುವಾಗ, ನಿತಂಬ, ಸ್ತನ ಬರಬೇಕು. ಗಂಡಹೆಂಡತಿಯರ ಸರಸ ಸಲ್ಲಾಪವನ್ನು ಧಾರಾಳವಾಗಿ ವರ್ಣಿಸಿದ ತರುಣ ವಯದ ಮುದ್ದಣ ಅಂಥ ಪದಗಳನ್ನು ಎಷ್ಟು ಸಲ ತಂದಿದ್ದಾನೆನ್ನುತ್ತೀರಿ ?

೯೦೦ ರಲ್ಲಿ ಕೇವಲ ೭ ಸಲ ! ಅವುಗಳಲ್ಲಿ ಸಹ ‘ ಲಿಕುಚಸ್ತನಿ ’ ಎಂಬೊಂದು ಪದವನ್ನು ಬಿಟ್ಟರೆ ಉಳಿದ ಆರು ಶಬ್ದಗಳು ಸವಕಲು ನಾಣ್ಯಗಳೇ. ಎಂದರೆ ಮುದ್ದಣ ಪೂರ್ವದ ಹಳೆಯ ಕವಿಗಳು ಬೇಸರ ಬರುವಷ್ಟು ಬಳಸಿದವುಗಳು. ಕಾಳಿದಾಸನು ಪಾರ್ವತಿಯಂತಹಳನ್ನು, ವರ್ಣನಾವಸರದಲ್ಲಿ ನಿತಂಬಿನಿ ಎಂದು ಕರೆದಿದ್ದಾನೆಂಬುದನ್ನು ನೆನೆಯಬಹುದು.

ಈ ಏಳರ ಸಂಖ್ಯೆಯಿಂದ ಏನು ಕಂಡುಬರಬಹುದು ? ಮುದ್ದಣ ಎಷ್ಟೊಂದು ಸಂಕೋಚದ ಪ್ರಕೃತಿಯವ, ರುಚಿಶುದ್ಧಿಯುಳ್ಳವ— ಎಂದು ಹೇಳಬೇಕಲ್ಲವೆ ? ಮುದ್ದಣ ಹೋಟೆಲು ಮಾಲಿಕನ ಮಗಳ ಮೇಲೆ ಮೋಹಗೊಂಡು ಮಹಾಲಕ್ಷ್ಮಿ ಎಂಬ ಅವಳ ಹೆಸರನ್ನೆ ತನ್ನ ಕಾವ್ಯವೊಂದಕ್ಕೆ ಇರಿಸಿದ — ಎಂದು ಒಂದೆಡೆ ಹೇಳಲಾಗಿದ್ದು, ಅದನ್ನು ನಾವೀಗ ನೂರಕ್ಕೆ ನೂರು ಪೈಸೆ ಸತ್ಯದೂರವಾದದ್ದು— ಎಂದು ಹೇಳಬಹುದಲ್ಲವೆ ?

ಮೊತ್ತದ ಮೂಲಕವಾದ ಈ ಬಗೆಯ ಅಭ್ಯಾಸದಿಂದ, ಕೆಲವು ಸಂಪೂರ್ಣವಾದ ಹೊಸ ಅಂಶಗಳು ಅಕಸ್ಮಾತ್ ಹೊರಬರುವವು. ಇದೇ ಅಭ್ಯಾಸದಲ್ಲಿ ಮುದ್ದಣ ಉಪಯೋಗಿಸಿದ ರಾಮವಾಚಿ ಮತ್ತು ಶಿವವಾಚಿ ಶಬ್ದಗಳ ಪಟ್ಟಿ ಮಾಡಿದಾಗ, ಶಿವವಾಚಿ ಶಬ್ದಗಳು ಎರಡು ಪಟ್ಟು ಹೆಚ್ಚಾಗಿ ಇದ್ದದ್ದು ಕಂಡುಬಂತು. ಒಂದಲ್ಲ ಮೂರು ಕೃತಿಗಳಲ್ಲಿ ಶ್ರೀರಾಮಚಂದ್ರನೇ ಕಥಾನಾಯಕನಾಗಿರುತ್ತ, ಶಿವನು ಒಂದರಲ್ಲೂ ಹಾಗಿಲ್ಲದಾಗ ಏಕೆ ಈ ಬಾಹುಲ್ಯ ? ಶಿವ ಪ್ರಸ್ತಾಪದ ಸಂದರ್ಭಗಳನ್ನು ಒಂದೊಂದಾಗಿ ಹೆಕ್ಕಿ ನೋಡಿದಾದ, ಅವಶ್ಯ ಇರಲಿ ಬಿಡಲಿ, ಮುದ್ದಣನು ಶಿವನನ್ನು, ಅದೂ ಮಂಗಳಕರನಾದವನನ್ನು ಮೇಲಿಂದ ಮೇಲೆ ತರುತ್ತಿದ್ದುದು ಕಂಡುಬಂದಿತು. ಆಗ ಶಿವನೇ ಈ ಕವಿಯ ಆರಾಧ್ಯದೈವತ ಎಂದು ನಿರ್ಣಯಿಸಲಾಯಿತು. [1] ಇದು ವರೆಗೆ ವಿಮರ್ಶಕರಿಗೆ ಎಳ್ಳಷ್ಟು ಸುಳುಹು ಕೊಟ್ಟಿರದ ಈ ಅಂಶವನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ— ಏಕೆಂದರೆ ಅಂಕಿ ಸಂಖ್ಯೆಗಳ, ನಿಚ್ಚಳ ಉದಾಹರಣೆಗಳ ಬೆಂಬಲವಿದೆಯಲ್ಲ !

ಇಷ್ಟೆಲ್ಲ ವಿವರಿಸುವದರ ತಾತ್ಪರ್ಯವೆಂದರೆ, ಯಾರೊಬ್ಬ ಕವಿಯ ಶಬ್ದಗಳನ್ನು ಅದು ಬಂದ ಪ್ರಯೋಗವಾಕ್ಯದೊಂದಿಗೆ, ಒಂದೆಡೆ ಪಟ್ಟಿ ಮಾಡಿಕೊಂಡರೆ, ಆ ಕಾವ್ಯದ ಅಭ್ಯಾಸವು ಹೆಚ್ಚು ಪರಿಪೂರ್ಣವಾಗುತ್ತದೆ. ಆ ಶಬ್ದಗಳು ಅಕಾರಾದಿ ಕ್ರಮದಲ್ಲಿ ಇರಬೇಕು ಮಾತ್ರ. ಅದರಿಂದ ಯಾವದೊಂದು ಶಬ್ದವನ್ನು ಎಷ್ಟು ವಿವಿಧ ರೀತಿಯಲ್ಲಿ, ಕವಿ ಬಳಸಿದ್ದಾನೆಂಬುದು ಬೇಗ ಸುವ್ಯಕ್ತವಾಗುತ್ತದೆ. ಹಾಗೂ ಕವಿಯ ಯಾವೊಂದು ಆಶಯವನ್ನು ತಿಳಿಯಬೇಕಾದರೆ,

---

1 ಕರ್ಮವೀರ, ದೀಪಾವಳಿ ೧೯೭೪ರ ಸಂಚಿಕೆಯಲ್ಲಿ ವಿವರಗಳಿವೆ.

ಆ ಸಂದರ್ಭದ ಹುಡುಕಾಟದ ಶ್ರಮ ಉಳಿಯುತ್ತದೆ. ಶಬ್ದ ಮತ್ತು ಅದನ್ನೊಳಗೊಂಡಿರುವ ವಾಕ್ಯ ಸಹಿತವಾದ ಇಂಥ ಅಕಾರಾದಿ ಸೂಚಿಗೆ Concordance ಎಂದು ಹೆಸರು. ಕನ್ನಡದಲ್ಲಿ ಅದನ್ನು ‘ಶಬ್ದಪ್ರಯೋಗ ಕೋಶ’ ಎಂದು ಕರೆಯೋಣ.

ಇಂಥ ಕೋಶವನ್ನು ತಯಾರಿಸುವ ಸದ್ಯದ ಕ್ರಮವೆಂದರೆ, ಮೊದಲಿಗೆ ಒಂದೊಂದಾಗಿ ಕವಿ ಬಳಸಿದ ಶಬ್ದವನ್ನು ಒಂದು ಪಟ್ಟಿಕೆಯಲ್ಲಿ (slip) ಬರೆದು, ಅದರ ಬುಡದಲ್ಲಿ ಆ ಶಬ್ದ ಬಂದಿರುವ ಪದ್ಯದ ಸಾಲನ್ನು ಕಾಣಿಸಬೇಕು. ಅನಂತರ ಅವೆಲ್ಲ ಪಟ್ಟಿಕೆಗಳನ್ನು ಅಕಾರಾದಿಯಾಗಿ ಹೊಂದಿಸಬೇಕು. ಯಾವುದೊಂದು ಶಬ್ದವನ್ನು ಕವಿ ಹಲವಾರು ಸಲ ಬಳಸಿರಬಹುದು. ಆಗ ಅವೆಲ್ಲ ಸಂದರ್ಭಗಳು ಈ ಅಕಾರಾದಿ ಕ್ರಮದಲ್ಲಿ ಒಂದೇ ಕಡೆಗೆ ದೊರೆಯುವವು.

‘ನನ್ನ ಹರಣ ನಿನಗೆ ಶರಣ, ಸಕಲ ಕಾರ್ಯ ಕಾರಣ’ ಎಂಬ ಸಾಲನ್ನು ತೆಗೆದುಕೊಳ್ಳೋಣ. ಇದರಲ್ಲಿ ೭ ಶಬ್ದಗಳಿದ್ದು, ಅವುಗಳ ಅಕಾರಾದಿ ಶಬ್ದ-ಪ್ರಯೋಗ ಕೋಶ ಈ ರೀತಿ ಆಗುವುದು :

ಕಾರಣ

ನನ್ನ ಹರಣ ನಿನಗೆ ಶರಣ, ಸಕಲ ಕಾರ್ಯ ಕಾರಣ.

ಕಾರ್ಯ

ನನ್ನ ಹರಣ ನಿನಗೆ ಶರಣ, ಸಕಲ ಕಾರ್ಯ ಕಾರಣ.

ನನ್ನ

ನನ್ನ ಹರಣ ನಿನಗೆ ಶರಣ, ಸಕಲ ಕಾರ್ಯ ಕಾರಣ.

ನಿನಗೆ

ನನ್ನ ಹರಣ ನಿನಗೆ ಶರಣ, ಸಕಲ ಕಾರ್ಯ ಕಾರಣ.

—ಇದರಂತೆ ಶರಣ, ಹರಣ ಮತ್ತು ಸಕಲ, ಶಬ್ದಗಳು ಬರುತ್ತವೆ. ಹೀಗೆಯೇ ಬೇಂದ್ರೆಯವರ ಸಮಸ್ತ ಕವನಗಲ್ಲಿಯ ಪ್ರತಿಯೊಂದು ಶಬ್ದವನ್ನು ಪ್ರಯೋಗವಾಕ್ಯದೊಡನೆ ಬರೆದು ಆಮೇಲೆ ಅವನ್ನು ಅಕಾರಾದಿಯಾಗಿ ಹೊಂದಿಸಿದಾಗ ಬೇಂದ್ರೆ ಕಾವ್ಯದ ಶ. ಪ್ರ. ಕೋಶ ಸಿದ್ಧವಾಗುವುದು.

ಸುಪ್ರಸಿದ್ಧ ಸಂಸ್ಕೃತ ವಿದ್ವಾಂಸನಾಗಿದ್ದ ಬ್ಲೂಮ್‌ಫೀಲ್ಡ್ ವೇದಗಳ ಶಬ್ದ ಪ್ರಯೋಗ ಕೋಶವನ್ನು ೬೦ ವರ್ಷಗಳ ಹಿಂದೆ ತಯಾರಿಸಿದ. (Vedic Concordance). ಅದರಿಂದಾಗಿ ಇಂದ್ರ ಮೊದಲಾದ ದೇವತೆಗಳ

ಉಲ್ಲೇಖ ಎಲ್ಲೆಲ್ಲಿ ಮತ್ತು ಯಾವ ರೀತಿಯಾಗಿ ಬಂದಿದೆ ಎಂಬುದು ತಿಳಿದು ಬರುತ್ತದೆ. ವೇದಕಾಲದಲ್ಲಿ ಯಾವ ಯಾವ ದೇವತೆಗಳಿಗೆ ವಿಶೇಷ ಮಹತ್ವವಿತ್ತೆಂಬುದು ಥಟ್ಟನೆ ಗೊತ್ತಾಗುವುದು. ಇಂದಿಗೂ ಯಾರೊಬ್ಬ ದೇವತೆಯ ಕುರಿತು ಅಭ್ಯಾಸ ಮಾಡುವಾಗ ಈ ಶ. ಪ್ರ. ಕೋಶವನ್ನು ನೋಡಿಯೆ ಮುಂದೆ ಸಾಗಬೇಕು. ಈ ಕೋಶದಿಂದಾಗಿ, ನಿಷೇಧಾರ್ಥದ ಮಾ, ಶಬ್ದವು ಹೆಚ್ಚಾಗಿ ಕಂಡು ಬಂದು, ವೇದಗಳ ಅಧಿಕಾರವಾಣಿಯ ಸ್ವರೂಪವನ್ನು ತಿಳಿಯುವಂತಾಯ್ತು.

ಸರ್ವನಾಮದಂತಹ ಸಾಮಾನ್ಯ ಶಬ್ದಗಳ ಪಟ್ಟಿ ಮಾಡುವಲ್ಲಿಯೂ ಪ್ರಯೋಜನವಿದೆಯೆಂಬುದನ್ನು ಡಿಕಿನ್ಸನ್‌ಳ ಕೋಶದಿಂದ ಮನಗಂಡಿದ್ದೇವೆ. ಇಂಥ ಇನ್ನೂ ಹಲವಾರು ಪ್ರಯೋಜನಗಳಿವೆ. ಕವಿಯ ಒಟ್ಟಿನ ಶಬ್ದಸಂಪತ್ತು ಒಂದೆಡೆ ದೊರೆಯುವುದರಿಂದ ಅವನ ಭಾವಸಂಪತ್ತನ್ನು ರೂಪಿಸಬಹುದು. ಅವನ ಭಾಷಾ ಪ್ರಭುತ್ವವನ್ನು ಒಟ್ಟಂದದಲ್ಲಿ ಕಾಣಬಹುದು. ಆ ಕವಿಯ mannerism—ಎಂದರೆ ಅವನ ಒಲವಿನ ಕೆಲವೊಂದು ವಿಶಿಷ್ಟ ಶಬ್ದಪ್ರಯೋಗಗಳನ್ನು ಕಂಡುಕೊಳ್ಳಬಹುದು. ಒಂದು ಶಬ್ದದ ಒಂದಕ್ಕಿಂತ ಹೆಚ್ಚಿನ ಅರ್ಥಗಳನ್ನೂ ಅರ್ಥದ ಛಾಯೆಗಳನ್ನೂ ಪರಿಶೀಲಿಸಬಹುದು.

ನಿಸರ್ಗ ವರ್ಣನೆ, ಭಕ್ತಿ, ದೇಶಾಭಿಮಾನ, ಸಾಮಾಜಿಕ ಪ್ರಜ್ಞೆ, ವರ್ಣನೆಗಳು, ಒಲುಮೆ— ಮುಂತಾದ ಅಂಶಗಳನ್ನೆತ್ತಿಕೊಂಡು ಓರ್ವ ಕವಿಯ ಕಾವ್ಯ ಸಂಪದವನ್ನು ಅಭ್ಯಾಸಿಸುವುದಿದ್ದಾಗ, ಅವನ್ನು ಸೂಚಿಸುವ ಶಬ್ದಗಳನ್ನು ಹುಡುಕಿಕೊಂಡು ಹೋದರಾಯಿತು. ಆಗ ಕವಿಯ ಯಾವದೇ ವಿಚಾರವನ್ನು ಬಿಡದೆ ಪರಿಪೂರ್ಣವಾದ ವಿವೇಚನೆಯನ್ನು ಮಾಡಬಹುದು.

ಒಬ್ಬ ಪ್ರಮುಖ ಕವಿಗೆ ಸಂಬಂಧಿಸಿದ ಶ. ಪ್ರ. ಕೋಶವು ಸಿದ್ಧವಾದರೆ ಅದರ ಸಹಾಯದಿಂದ, ಆ ಕವಿಯ ಪ್ರಭಾವ ಇತರರ ಮೇಲೆ ಎಷ್ಟರ ಮಟ್ಟಿಗೆ ಆಗಿದೆಯೆಂಬುದನ್ನೂ ತಿಳಿಯಬಹುದು. ಗೋಕಾಕ, ಮುಗಳಿ, ಮಧುರಚೆನ್ನ, ಕಂಬಾರ ಇವರು ಬೇಂದ್ರೆಯವರಿಂದ ಪ್ರಭಾವಿತರಾದರೆ ? ಆಗಿದ್ದರೆ ಎಷ್ಟರ ಮಟ್ಟಿಗೆ ? ಆ ಪ್ರಭಾವಿತ ಕವಿಗಳ ಯಾವದೊಂದು ಭಾವವನ್ನು ಅದು ವ್ಯಕ್ತವಾದ ಶಬ್ದಗಳ ಮೂಲಕ, ಬೇಂದ್ರೆ ಶ. ಪ್ರ. ಕೋಶದಲ್ಲಿ ಹುಡುಕಿದರೆ ಸೈ. ಆಗ, ಆ ಭಾವವನ್ನು ಈ ಕವಿ ಬೇಂದ್ರೆಯವರಿಗಿಂತ ಹೇಗೆ ಮಾರ್ಪಡಿಸಿಕೊಂಡಿದ್ದಾನೆಂಬುದನ್ನು ಸಹ ತಿಳಿಯಬಹುದು. ಇನ್ನು ಇಬ್ಬರು ಕವಿಗಳಿಗೆ ಪ್ರತ್ಯೇಕ ಶ. ಪ್ರ. ಕೋಶಗಳಿದ್ದರಂತೂ ಅವರ ಪರಸ್ಪರ ತೌಲನಿಕ ಅಭ್ಯಾಸವು ಅತ್ಯಂತ ಸುಗಮವಾಗುವುದು.

ಶಬ್ದ-ಪ್ರಯೋಗ ಕೋಶಗಳನ್ನು ಗದ್ಯ, ನಾಟಕ ಗ್ರಂಥಗಳಿಗೂ ತಯಾರಿಸಬಹುದು. ಆದರೆ ಅದು ಹೆಚ್ಚು ಪ್ರಯೋಜನಕ್ಕೆ ಬೀಳುವುದು—ಕಾವ್ಯಾಭ್ಯಾಸ

ದಲ್ಲಿಯೇ. ಕವಿಗಳು ಎಷ್ಟೆಂದರೂ ಕಿರಿದರಲ್ಲಿ ಪಿರಿದರ್ಥವನ್ನು ಹೇಳುವವರು. ಶಬ್ದಗಳನ್ನು ವಿಶೇಷ ಗಮನಕೊಟ್ಟು ಬಳಸುವವರು. ಶಬ್ದವು ತನ್ನ ವಾಚ್ಯಾರ್ಥವನ್ನು ಮೀರಿ, ಲಾಕ್ಷಣಿಕರು ಹೇಳುವ ವ್ಯಂಗ್ಯಾರ್ಥ, ಧ್ವನ್ಯಾರ್ಥಗಳನ್ನು ನುಡಿಸುವ ಪ್ರಸಂಗ ಬರುವುದು ಕಾವ್ಯದಲ್ಲಿಯೇ. ಒಂದು ಶಬ್ದಕ್ಕೆ ವಿವಿಧ ಅರ್ಥಚ್ಛಾಯೆಗಳು ಹೊರಡಬಹುದು.[1] ಹೀಗೆ ಕವಿಯದು ವಿಶಿಷ್ಟ ಭಾಷೆ. ಅದಕ್ಕೆ ವಾಹಕವಾದದ್ದು ಶಬ್ದ. ಶಬ್ದವು ಎಂದಿಗೂ ಅಮೂರ್ತವಲ್ಲವೆಂದು ಬೇಂದ್ರೆಯವರು ಒಂದೆಡೆ ಹೇಳಿದ್ದಾರೆ. ಶ. ಪ್ರ. ಕೋಶವು ಇಂಥ ಪ್ರತಿಯೊಂದು ಶಬ್ದವನ್ನು, ಅದು ಪ್ರಯೋಗಿತವಾದ ಎಲ್ಲ ಸಂದರ್ಭಗಳೊಡನೆ ವ್ಯವಸ್ಥಿತ ರೂಪದಲ್ಲಿ ಕೊಡುವುದರಿಂದ ಕವಿಯ ಭಾವವನ್ನು ಸಂಪೂರ್ಣವಾಗಿ ಅರಿತುಕೊಳ್ಳುವುದು ಸಾಧ್ಯವಾಗುತ್ತದೆ. ಮುಖ್ಯವಾತೆಂದರೆ. ಶಬ್ದಪ್ರಯೋಗ ಕೋಶವು ಅಭ್ಯಾಸಿಗಳ ವೇಳೆ ಮತ್ತು ಶ್ರಮವನ್ನು ಉಳಿಸುತ್ತದೆ. ನಿಮ್ಮ ನೆನಪಿನ ಶಕ್ತಿಗೆ ವಿಶೇಷ ಭಾರವನ್ನು ಹಾಕಬೇಕಾದ್ದೇ ಇಲ್ಲ.

ಹೀಗೆ ಶ. ಪ್ರ. ಕೋಶವು ಬಹು ಪ್ರಯೋಜಕವೂ ಸಾರ್ವಕಾಲಿಕವೂ ಆಗಿರುವುದರಿಂದ ಈಗಾಗಲೇ ಜಾಗತಿಕ ಮಟ್ಟದಲ್ಲಿ ನೂರಾರು ಸಿದ್ಧವಾಗಿವೆ. ಅದರ ಇತಿಹಾಸವು ೧೩ನೆಯ ಶತಮಾನದಷ್ಟು ಹಿಂದೆ ಹೋಗುವುದಾದರೂ, ಅದು ಇಂದಿನ ಸ್ವರೂಪದಲ್ಲಿ ಕಾಣಿಸಿಕೊಳ್ಳತೊಡಗಿದುದು ಈಚಿನ ನೂರು ವರ್ಷಗಳಲ್ಲಿ. ಶೇಕ್ಸ್‌ಪಿಯರ್, ಮಿಲ್ಟನ್ ಮುಂತಾದ ಎಲ್ಲ ಪ್ರಮುಖ ಆಂಗ್ಲ ಕವಿಗಳ ಕೃತಿಗಳಿಗೆ ಶ. ಪ್ರ. ಕೋಶಗಳಿವೆ. ಪುರಾತನ ಗ್ರಂಥಗಳಾದ ವೇದ, ಉಪನಿಷತ್ತು, ಬೈಬಲ್, ಭಗವದ್ಗೀತೆಗಳಿಂದ ಹಿಡಿದು ಆಧುನಿಕ ಕೃತಿಗಳಿಗೂ ಶ. ಪ್ರ. ಕೋಶಗಳಿವೆ— ಮಾಮೋನ ಸೂತ್ರಗಳಿಗೆ ಸಹಿತ ! ಅಮೇರಿಕೆಯಲ್ಲಿ Concordance ತಯಾರಿಸುವವರ ಒಂದು ಸೊಸೈಟಿಯೇ ಅಸ್ತಿತ್ವದಲ್ಲಿದೆ.

ಕನ್ನಡದಲ್ಲಿ ? ಸುದೈವಕ್ಕೆ ಒಂದಾದರೂ ಇದೆ— ಎಸ್. ಆರ್. ಗುಂಜಾಳರು ಸಿದ್ಧಪಡಿಸಿದ 'ಬಸವಣ್ಣನವರ ವಚನ ಪದಪ್ರಯೋಗಕೋಶ.' (೧೯೬೩). ಸುಮಾರು ೧೨೦೦ ಪುಟಗಳ ಈ ಕೋಶವು ಬಸವಣ್ಣನವರ ವಚನಗಳನ್ನು ಅಭ್ಯಾಸ ಮಾಡುವವರಿಗೆ ಅಥವಾ ಅವುಗಳಲ್ಲಿಯ ಯಾವದೊಂದು ಅಂಶವನ್ನು ನೋಡಬಯಸುವವರಿಗೆ ಅತ್ಯುಪಯುಕ್ತವೆನಿಸಿದೆ. ವಚನ ಸಾಹಿತ್ಯದ, ಅದರಂತೆ ವೀರಶೈವ ಧರ್ಮದ ಪ್ರಮೇಯವೊಂದನ್ನು ತಿಳಿಯಬಯಸುವವರಿಗೂ ಅದು ನೆರವಾಗಬಲ್ಲುದು. ಈ ಕೋಶದ ಪ್ರಯೋಜನದ ಬಗ್ಗೆ ವ್ಯಕ್ತವಾಡಲಾದ ಒಂದು ಒಕ್ಕಣಿಕೆಯನ್ನು ಗಮನಿಸಬೇಕು :

---

1. ಅಭಿಜಾತ ಕವಿಗಳು ಗದ್ಯವನ್ನು ಸಹ ಕಾವ್ಯಾತ್ಮಕವಾಗಿ ಬರೆಯುತ್ತಾರಲ್ಲವೆ ?

"ನಮಗೆ ಇಷ್ಟಲಿಂಗದ ಕಲ್ಪನೆಯಾಗಲಿ, ಅದರ ವೈವಿಧ್ಯಮಯ ಪ್ರಯೋಗಗಳಾಗಲಿ ಬೇಕೆಂದರೆ ಇಲ್ಲಿಯ ತನಕ ನಾವು ಹಾಳೆ–ಲೇಖನಿಗಳನ್ನು ಹಿಡಿದು ಬಸವಣ್ಣನವರ ಪ್ರತಿ ವಚನವನ್ನು ಓದಿ, ಗುರುತುಹಾಕಿಕೊಂಡು ವರ್ಗೀಕರಿಸಿ ಅಭ್ಯಸಿಸಬೇಕಾಗುತ್ತಿತ್ತು.... ಈಗ ಮಾತ್ರ ನಮ್ಮ ಶ್ರಮ ಮತ್ತು ವೇಳೆಗಳೆರಡರ ಉಳಿತಾಯ. ಒಂದು ಪದದ ವೈವಿಧ್ಯಮಯ ಪ್ರಯೋಗಗಳು ವಿವಿಧಾರ್ಥಗಳನ್ನೊಳಗೊಂಡು ಒತ್ತಟ್ಟಿಗೇ ಸಿಕ್ಕುಬಿಡುತ್ತವೆ. ಮಾತ್ರವಲ್ಲದೆ ಎಲ್ಲ ಪದಗಳು ಒಂದರ ನಂತರ ಒಂದಾಗಿ ಒಂದೆಡೆಯಲ್ಲಿ ದೊರಕುವುದರಿಂದ ಪದವು ಗರ್ಭೀಕರಿಸಿಕೊಂಡಿರುವ ವಿಶಿಷ್ಟ ತತ್ವಗಳ ಸಮಗ್ರ ಕಲ್ಪನೆ ಕಣ್ಣ ಮುಂದೆ ಬರುವುದು. ಇದರಿಂದಾಗಿ ಬಿಡಿಬಿಡಿಯಾಗಿ ಅಭ್ಯಸಿಸಿ ಹಲವು ಬಾರಿ ಮರೆತು, ಮತ್ತೆ ಮತ್ತೆ ಓದುವ ಕಷ್ಟ ಈಗಿಲ್ಲ."

ಮೇಲೆ ಕಾಣಿಸಿದ ಅನುಕೂಲತೆಯು ಇತರ ಎಲ್ಲ ಶಬ್ದಪ್ರಯೋಗಕೋಶಗಳಿಗೂ ಅನ್ವಯಿಸುವಂತಹದು.

ಇಷ್ಟೊಂದು ಬಹುಮುಖ ಪ್ರಯೋಜನದ ಶ. ಪ್ರ. ಕೋಶ ತಯಾರಿಕೆಯಲ್ಲಿ ಕನ್ನಡಿಗರು ಏಕೆ ಮನಸ್ಸುಗೊಟ್ಟಿಲ್ಲ? ಅನೇಕರಿಗೆ ಇದರ ಉಪಯುಕ್ತತೆಯ ಕಲ್ಪನೆಯೇ ಇಲ್ಲ. ಕೆಲವರಿಗೆ ಗೊತ್ತಿದ್ದರೂ ಅಷ್ಟೊಂದು ಮನವರಿಕೆಯಾಗಿಲ್ಲ. ಇದರ ತಯಾರಿಕೆಯೋ ಅತ್ಯಂತ ಪರಿಶ್ರಮದ್ದು. ದೀರ್ಘಕಾಲ ತೆಗೆದುಕೊಳ್ಳುವಂತಹದು. ಹಾಗೂ ಅದರ ಸಂಕಲನ ಕಾರ್ಯ ಅತೀವ ಬೇಸರ-ದಣಿವನ್ನುಂಟುಮಾಡುವಂತಹದಾಗಿದೆ. ಒಂದು ವಾಕ್ಯ ಅಥವಾ ಪದ್ಯದ ಸಾಲಿನಲ್ಲಿ ೬–೭ ಶಬ್ದಗಳಿವೆಯೆಂದಾದರೆ ಅಷ್ಟು ಸಲವೂ ಅದನ್ನು ಪಟ್ಟಿಕೆಯಲ್ಲಿ ಬರೆದುಕೊಳ್ಳಬೇಕು. ಆಮೇಲೆ ಆ ಶಬ್ದಗಳನ್ನು ಅಕಾರಾದಿಯಾಗಿ ಜೋಡಿಸಬೇಕು. ಒಂದು ಶಬ್ದ ಹತ್ತೈವತ್ತು ಕಡೆಗೆ ಬರುತ್ತದಷ್ಟೆ. ಒಂದೇ ಶಬ್ದದ ಎಲ್ಲ ಪಟ್ಟಿಕೆಗಳನ್ನು, ಅವುಗಳ ಪ್ರಯೋಗ ವಾಕ್ಯದ ಅಕಾರಾದಿ ಇಲ್ಲವೆ ಪುಟಸಂಖ್ಯೆಯ ಕ್ರಮದಲ್ಲಿ ಮತ್ತೆ ಹೊಂದಿಸಿಕೊಳ್ಳಬೇಕು. ಕೊನೆಗೆ ಯಾವ ತಪ್ಪೂ ಉಳಿಯದಂತೆ, ಯಾವುದೂ ಬಿಟ್ಟುಹೋಗದಂತೆ ಮತ್ತೆ ಮತ್ತೆ ಚೆಕ್ ಮಾಡಬೇಕು.

ಬಸವಣ್ಣನವರ ೯೫೫ ವಚನಗಳಲ್ಲಿಯ ಶಬ್ದಗಳ ಪಟ್ಟಿಕೆಗಳನ್ನು ಸಿದ್ಧಪಡಿಸಲು ಗುಂಜಾಳರಿಗೆ ೭ ವರ್ಷ ತಗುಲಿತು. ಆ ಪಟ್ಟಿಕೆಗಳನ್ನು ಹೊಂದಿಸಲು ಮತ್ತೆರಡು ವರ್ಷಗಳು. ಬೈರನ್ನನ ಕಾವ್ಯಸಂಪದದ ಶ. ಪ್ರ. ಕೋಶ ತಯಾರಿಸಲು Mrs. Young ಎಂಬಾಕೆ ಅದನ್ನು ಕೈಗೊಂಡ ೨೫ ವರ್ಷಗಳ ಮೇಲೆ ಮುಗಿಸಿದಳಂತೆ. 'ಈ ತಾಪತ್ರಯ ನನ್ನ ವೈರಿಗಳಿಗೂ ಬರೋದು ಬೇಡ' ಎಂಬ ಆಶಯವನ್ನು ಆಕೆ ತನ್ನ ಪೀಠಿಕೆಯಲ್ಲಿ ಹೇಳಿದ್ದಾಳೆ.

ಒಂದೆಡೆ ಶ. ಪ್ರ. ಕೋಶದ ಅನನ್ವಿತ ಪ್ರಯೋಜನಗಳು; ಇನ್ನೊಂದೆಡೆ ಅದರ ತಯಾರಿಕೆಯಲ್ಲಿಯ ಅಡಚಣಿ, ಆಪತ್ತುಗಳು. ಇದಕ್ಕೆ ಪರಿಹಾರ ಇಲ್ಲವೆ? ಇದೆ :

ಅದುವೆ ಕಂಪ್ಯೂಟರ್ ! ಬರಿಯೆ ಗಣಿತ–ಗುಣಿತಗಳಲ್ಲಿ ತೊಡಗಿರುವ ಕಂಪ್ಯೂಟರಿಗೂ ನಮ್ಮ ಸಾಹಿತ್ಯಕ್ಕೂ ಅದಾವ ಸಂಬಂಧ-ಎಂದು ಅನಿಸಬಹುದು. ಕಂಪ್ಯೂಟರ್ ಚಂದ್ರ, ಮಂಗಳ ಗ್ರಹಗಳ ಯಾನವನ್ನು ನಿರ್ದೇಶಿಸಬಲ್ಲುದು, ಭಾರೀ ಎಂಜಿನಿಯರಿಂಗ್ ಸಮಸ್ಯೆಗಳನ್ನು ಬಿಡಿಸಬಲ್ಲುದು; ಆದರೆ ಸಾಹಿತ್ಯ ಸಂಶೋ–ಧನೆಗೆ ಅದೆಂತು ನೆರವಾದೀತು – ಎಂಬ ಸಂದೇಹ ಮೂಡುವುದು ಸಹಜವೇ. ಆದರೆ ವಿಶ್ವವ್ಯಾಪಿಯಾಗತೊಡಗಿರುವ ಕಂಪ್ಯೂಟರ್ ಪ್ರವೇಶಿಸದ ಕ್ಷೇತ್ರವೇ ಇಲ್ಲ. ಅದು ಸಂಗೀತವನ್ನು ನುಡಿಸುತ್ತದೆ. ವಧು–ವರರ ಜೋಡಣೆಯನ್ನು ಮಾಡಿಕೊಡುತ್ತದೆ. ಈಚೆಗೆ ಜರ್ಮನಿಯಲ್ಲಿ ಅಡಿಗೆ ಮಾಡುವ ಕಂಪ್ಯೂಟರ್ ಯಂತ್ರವು ಸಹ ಸಿದ್ಧ ವಾಗಿದೆಯೆಂದಾಗ, ಸಾಹಿತ್ಯ ಕ್ಷೇತ್ರದಲ್ಲಿ ಸಹ ಅದರ ಸಹಾಯವನ್ನು ಪಡೆಯ ಬಹುದು. ಪಡೆಯತೊಡಗಿದ್ದಾರೆ.

ಸಾಹಿತ್ಯ ರಂಗದಲ್ಲಿ ಅದರ ಬಳಕೆ ಮೇಲೆ ಹೇಳಿದ ಡಿಕಿನ್ಸನ್‌ಳ ಶಬ್ದ ಪ್ರಯೋಗ ಕೋಶದ ರಚನೆಯಿಂದ ಮೊದಲಾಯಿತು. (ಕಾರ್ನೆಲ್ ವಿಶ್ವವಿದ್ಯಾ–ಲಯ, ೧೯೫೯). ಗ್ರಂಥಕರ್ತೃತ್ವ ನಿರ್ಣಯ, ಶೈಲಿ, ಭಾಷಾಭ್ಯಾಸ, ಗ್ರಂಥ ಸಂಪಾದನ ಕಾರ್ಯ ಮುಂತಾದ ರಂಗಗಳಲ್ಲಿ ಅದು ಈಗಾಗಲೇ ಧಾರಾಳವಾಗಿ ನೆರವಾಗಿದೆ. ಈ ಬಗೆಯ ಸಂಶೋಧನೆಯನ್ನೇನು ಅದು ಮಾಡುವುದಿಲ್ಲ. ಸಾಹಿತ್ಯಿಕ ಕೃತಿಗಳ ಶಬ್ದಗಳನ್ನು, ಪಟ್ಟಿ ಅಥವಾ ಪ್ರಯೋಗಸಹಿತವಾದವುಗಳನ್ನು ಹೊಂದಿಸಿ ಕೊಟ್ಟು ನೆರವಾಗುತ್ತದೆ.

ಕೈಯಿಂದ ಈ ಕೆಲಸ ಮಾಡುವಾಗಿನ ಒದ್ದಾಟವನ್ನು ನಾವು ನೋಡಿದ್ದೇವೆ. ಕಂಪ್ಯೂಟರಿಗೋ ಅದು ನೀರು ಕುಡಿದಷ್ಟು ಸುಲಭ. ಕವಿಯ ಕಾವ್ಯ ಸಮುದಾಯ ವನ್ನು ಇದ್ದಕ್ಕಿದ್ದಂತೆ ಬರೆದು ಕಂಪ್ಯೂಟರಿನ ಯಂತ್ರದ ಬಾಯಿಗೆ ಕೊಟ್ಟುಬಿಟ್ಟ ರಾಯಿತು. ಅದು ಒಂದೊಂದು ಶಬ್ದವನ್ನು ತಾನೇ ಆಯ್ದುಕೊಂಡು, ಪ್ರಯೋಗ ವಾಕ್ಯವನ್ನು ಕೊಡುವುದಲ್ಲದೆ, ಅಕಾರಾದಿಯಾಗಿ ಜೋಡಿಸಿ ಮುದ್ರಿಸಿ ಬಿಡುವುದು ! ನೆನಪಿಡಿ, ನೀವು ಸ್ವಪರಿಶ್ರಮದಿಂದ ಮಾಡುವಾಗ ತಪ್ಪುಗಳಾಗಬಹುದು. ಯಾವು ದೊಂದು ಅಂಶ ಬಿಟ್ಟು ಹೋಗಬಹುದು. ಕಂಪ್ಯೂಟರ್ ಮಾತ್ರ ಎಂದಿಗೂ ಈ ವಿಚಾರದಲ್ಲಿ ಎಡಹುವುದಿಲ್ಲ. [1]

---

1 ಪದ್ಯದ ಸಾಲನ್ನು ಬರೆಯುವಾಗ ನೀವೇ ತಪ್ಪು ಮಾಡಿದರೆ, ಅದೂ ಮಾಡುತ್ತದೆ. ಆಗ ತಪ್ಪಿನ ಹೊಣೆ ನಿಮ್ಮದು ತಾನೇ !

ಶಬ್ದ ಪ್ರಯೋಗ ಕೋಶವು ಸಿದ್ಧವಾದರೆ ಅದೆಷ್ಟು ವೇಳೆ ಮತ್ತು ಶ್ರಮ ಉಳಿಯುವದೆಂಬುದನ್ನು ಯೋಚಿಸೋಣ. ಕ್ರೈಸ್ತ ತತ್ವಜ್ಞಾನವನ್ನು ಕುರಿತು ಥಾಮಸ್ ಎಕ್ವಿನಾಸ್ ಎಂಬ ಮಹಾ ಭಾಷ್ಯಕಾರ (೧೩ ನೆಯ ಶತ.) ಅನೇಕ ಗ್ರಂಥಗಳನ್ನು ಬರೆದ. ಅವನು ಒಟ್ಟು ಬಳಸಿದ ಶಬ್ದಗಳ ಸಂಖ್ಯೆ ಸುಮಾರು ೧॥ ಕೋಟಿ ! ಆದರೂ ಅವುಗಳ ಶ. ಪ್ರ. ಕೋಶ ತಯಾರಿಸುವ ಸಾಹಸಕ್ಕಿಳಿದ ರಾಬರ್ಟ್ ಬೂಸಾ ಎಂಬ ಪಾದ್ರಿ. ಐವತ್ತು ಜನ ವಿದ್ವಾಂಸರು ಈ ಕೆಲಸಕ್ಕೆ ಪೂರ್ಣಾವಧಿ ತೊಡಗಿದರೆ ಅದನ್ನು ಮುಗಿಸಲು ೪೦ ವರ್ಷಗಳು ಬೇಕಾಗುವ ವೆಂದು ಬೂಸಾ ಅಂದಾಜು ಮಾಡಿ ೧೯೩೮ ರ ಸುಮಾರಿಗೆ ಆರಂಭಿಸಿದ. ಅಷ್ಟರಲ್ಲಿ ಕಂಪ್ಯೂಟರಿನ ಆವಿರ್ಭಾವವಾಯಿತು. ಕೈಯಿಂದ ಪಟ್ಟಿಕೆಗಳನ್ನು ಬರೆಯುವ ಕೆಲಸ ವನ್ನು ಬದಿಗಿರಿಸಿ, ಕಂಪ್ಯೂಟರಿಗೆ ಸಾಮಗ್ರಿಯನ್ನು ಪೂರೈಸತೊಡಗಿದ — ೧೯೪೮ ರಿಂದ. ಆಗ ಅದಕ್ಕೆ ತಗುಲಿದ ವರ್ಷ ೫ ಮಾತ್ರ. ಹಾಗೂ ಇದರಲ್ಲಿ ತೊಡಗಿದ್ದ ವಿದ್ವಾಂಸರ ಸಂಖ್ಯೆ ೬೫. ಕಂಪ್ಯೂಟರ್ ತನ್ನ ಪಾಡಿನ ಕೆಲಸವನ್ನು ಎಂದೊ ಮುಗಿಸಿಬಿಟ್ಟಿದ್ದು, ಈಗ ಅದರ ಮುದ್ರಣ ಕಾರ್ಯ ಮುಂದುವರಿದಿದೆ.

ಕಂಪ್ಯೂಟರಿಗೆ ಪದ್ಯ ಸಮೂಹವೊಂದನ್ನು ಪೂರೈಸಿದ ಮೇಲೆ ಇನ್ನೂ ಹಲವು ಪ್ರಯೋಜನಗಳನ್ನು ಪಡೆಯಬಹುದು. ಅಕಾರಾದಿಯಾಗಿ ತಾನೇ ಹೊಂದಿಸಿ ಕೊಡುವುದೆಂಬುದನ್ನು ಗಮನಿಸಿದ್ದೇವೆ. ಹಾಗೆ ಹೊಂದಿಸಿದ ಕೆಲವು ಶಬ್ದಗಳಿವು :

ಅಬ್ರಹಾಮು, ಇಮಾಮು, ಸಿದ್ಧರಾಮು, ಸೀತಾರಾಮು.

ಇಲ್ಲಿಯ ಅನುಕ್ರಮ ಅ, ಇ, ಸಿ, ಸೀ ಎಂಬುದಾಗಿ ಇದೆಯಷ್ಟೆ. ಕಂಪ್ಯೂಟರ್ ವಿರುದ್ಧ ದಿಕ್ಕಿನ ಅನುಕ್ರಮುವನ್ನೂ ( Reverse indexing ) ಮಾಡಿ ಕೊಡಬಲ್ಲುದು— ಮು ದಿಂದ ಆರಂಭಿಸಿ. ಮು ಅಕ್ಷರ ನಾಲ್ಕರಲ್ಲಿಯೂ ಇದೆಯಾದ್ದ ರಿಂದ ಅದನ್ನು ಬಿಡೋಣ. ಅದರ ಹಿಂದಿನ ಅಕ್ಷರಗಳೆಂದರೆ, ಹಾ ಮಾ ರಾ (ದ್ಧ) ಮತ್ತು ರಾ (ತಾ). ವಿರುದ್ಧಾನುಕ್ರಮುದಲ್ಲಿ ಈ ಶಬ್ದಗಳು ಹೀಗೆ ಹೊಂದಿ ಕೊಳ್ಳುತ್ತವೆ :

ಇಮಾಮು
ಸೀತಾರಾಮು
ಸಿದ್ಧರಾಮು
ಅಬ್ರಹಾಮು

ಈ ಬಗೆಯ ಅನುಕ್ರಮುದಿಂದ ಕಾವ್ಯಾಭ್ಯಾಸಕ್ಕೆ ಏನು ಪ್ರಯೋಜನ ವೆಂದು ಕೇಳಬಹುದು. ಕನ್ನಡ ಮತ್ತು ಇತರ ಭಾರತೀಯ ಸಾಹಿತ್ಯಗಳಲ್ಲಿ

ಇದರಿಂದ ವಿಶೇಷ ಪ್ರಯೋಜನವಿದೆ : ಇಂಗ್ಲೀಷಿಗಿಂತ ನಮ್ಮಲ್ಲಿ ಕೂಡುನುಡಿಗಳು ಬಹು ದೊಡ್ಡ ಸಂಖ್ಯೆಯಲ್ಲಿರುತ್ತವೆ. ಅನೇಕ ಸಲ, ಉತ್ತರ ಪದಕ್ಕೆ ವಿಶೇಷ ಮಹತ್ವವಿರುವದರಿಂದ, ಉತ್ತರ ಪದಗಳಿಲ್ಲ ಪ್ರತ್ಯೇಕವಾಗಿ ಒಂದೆಡೆ ಸಿಕ್ಕುತ್ತವೆ. ಆಗ ಅದರ ಪ್ರಯೋಜನವನ್ನು ನೀವು ಪಡೆಯುವ ಅವಕಾಶ ದೊರೆಯುತ್ತದೆ. ಒಂದು ಉದಾಹರಣೆಯನ್ನು ಕೊಡುವೆ. ಮುದ್ದಣನ ಗ್ರಂಥಪಂಚಕದ ಕರ್ತೃತ್ವ ಇಂದು ಒಪ್ಪಿತವಾಗಿದ್ದರೂ, ಅವನ ಹಳಗನ್ನಡ ಕೃತಿಗಳ ಪ್ರಕಾಶಕರಾಗಿದ್ದ ರಾಮಾನುಜಯ್ಯಂಗಾರರು “ಯಾರು ಹೇಳಿದರೂ, ಶ್ರೀರಾಮಪಟ್ಟಾಭಿಷೇಕವನ್ನು ಸಹ ಅವನೇ ಬರೆದಿದ್ದಾನೆಂಬುದನ್ನು ನಾನು ಎಷ್ಟು ಮಾತ್ರಕ್ಕೂ ಒಪ್ಪಲಾರೆ” ಎಂದು ಕೊನೆವರೆಗೂ ಅಭಿಪ್ರಾಯ ತಳೆದಿದ್ದರು. ಅವನ ಗ್ರಂಥಕರ್ತೃತ್ವವನ್ನು ಸಿದ್ಧಪಡಿಸಲು, ನಮಗಿದ್ದ ಒಂದು ಆಂತರಿಕ ಪುರಾವೆ ಎಂದರೆ ಆತ ಕೂಡು ನುಡಿಗಳನ್ನು ಮಾಡಿಕೊಳ್ಳುತ್ತಿದ್ದ ರೀತಿ. ‘ಒಡೆಯ’ ‘ರಾಮ’ ಎಂಬ ಪದ ಗಳನ್ನು ಆತ ಜೋಡಿಸುವುದು ಅವನ Mannerism ಗಳಲ್ಲಿ ಒಂದಾಗಿತ್ತು. (ಅಲರ್ವೊಡೆಯ, ಸಗ್ಗಿಗರೊಡೆಯ, ಭೂತಳದೊಡೆಯ ಇ. ಇ.) ಸಾಮಾನ್ಯ ಅಕಾರಾದಿಯಲ್ಲಿ ಇವು ನಮ್ಮ ಕೈಗೆ ಸಿಕ್ಕುವುದಿಲ್ಲ. ವಿರುದ್ಧ ಅನುಕ್ರಮದ ಅಕಾರಾದಿಯಲ್ಲಿ ಅವನ್ನೆಲ್ಲ ನಾವು ಒಂದೆಡೆಯಲ್ಲಿಯೆ ಕಂಡುಕೊಳ್ಳಬಹುದು.

ಕಾವ್ಯಾಭ್ಯಾಸದಲ್ಲಿ ಕಂಪ್ಯೂಟರ್ ಸಹಾಯದ ವಿಚಾರ ತೀರ ಹೊಸತಾದ್ದ-ರಿಂದ ಇಷ್ಟೊಂದು ವಿವರವಾಗಿ ವರ್ಣಿಸಬೇಕಾಯಿತು. ಅದು ಸಿದ್ಧಪಡಿಸುವ ಶ. ಪ್ರ. ಕೋಶದ ಪ್ರಯೋಜನ ನಿಮಗೆ ಮನದಟ್ಟಾಗಿದೆಯೆಂದು ಭಾವಿಸಿ ಕನ್ನಡದ ದೃಷ್ಟಿ ಯಿಂದ ವಿಚಾರ ಮಾಡೋಣ. ಅದಕ್ಕಾಗಿ ಸುಸಂಘಟಿತ ಯೋಜನೆಗಳು ರೂಪು ಗೊಳ್ಳಬೇಕಾಗಿದೆ. ಮೊದಲಲ್ಲಿ ಪಂಪ, ರನ್ನ, ಹರಿಹರ, ಕುಮಾರವ್ಯಾಸ, ರತ್ನಾಕರ ವರ್ಣಿ, ಸರ್ವಜ್ಞ, ಮುದ್ದಣ, ಗೋವಿಂದ ಪೈ — ಮುಂತಾದ ಪ್ರಮುಖ ಕವಿಗಳ ಶ. ಪ್ರ. ಕೋಶ ಸಿದ್ಧವಾಗಬೇಕು. ದ್ವಿತೀಯ ಘಟ್ಟದಲ್ಲಿ ಆಯ್ದ ಶಾಸನಗಳು, ವಚನ, ದಾಸವಾಙ್ಮಯಗಳನ್ನು ಕೈಗೆತ್ತಿಕೊಳ್ಳಬೇಕು.

ಹಳಬರು ಅಥವಾ ಹಳೆಯ ಸಾಹಿತ್ಯದಷ್ಟೇ ಆಧುನಿಕ ಕವಿಗಳಿಗೆ ಇಂಥ ಕೋಶಗಳ ರಚನೆ ಹೆಚ್ಚು ಅಗತ್ಯದ್ದಾಗಿದೆ; ತುಸು ಮಟ್ಟಿಗೆ ಅನಿವಾರ್ಯವೂ ಅಹುದು. ಏಕೆಂದರೆ ಇಂದಿನ ಕವಿಗಳ ವಿಮರ್ಶೆ ಮಾಡುವಾಗ, ತಮ್ಮವರೆನ್ನು ವವರನ್ನು ಅತಿಯಾಗಿ ಹೊಗಳುವದುಂಟು. ಇನ್ನು ತಮಗೆ ಬೇಡವಾದವರು ಅಥವಾ ಎದುರು ಗುಂಪು, ಜಾತಿಯವರಿದ್ದರೆ ಅತಿಯಾಗಿ ತೆಗಳುವುದು ಅಷ್ಟೇ ದೊಡ್ಡ ಪ್ರಮಾಣದಲ್ಲಿ ಕಂಡುಬರುತ್ತದೆ. ಅದರಿಂದಾಗಿ ವಿಮರ್ಶೆ ಅತಿರೇಕದ ಅಂಚನ್ನು ಮುಟ್ಟುವುದು. “ಕುವೆಂಪು ಅವರ ಕಾವ್ಯವೆಲ್ಲ ಸಂಸ್ಕೃತಮಯ”— ಎಂದು ಹೇಳು ವವರು ಇದ್ದಾರೆ. ಅದು ಎಷ್ಟರ ಮಟ್ಟಿಗೆ ನಿಜ? ಅಥವಾ ಅವರು ಉಪ

ಯೋಗಿಸಿದ ಸಂಸ್ಕೃತ ಶಬ್ದಗಳಲ್ಲಿ ಎಷ್ಟೊಂದು ಅರ್ಥಪೂರ್ಣ ಇಲ್ಲವೆ ಅರ್ಥಹೀನ? ಇದನ್ನು ಖಚಿತವಾಗಿ ಹೇಳಲು ಅದಾವ ಪುರಾವೆ ಇದೆ? ಬೇಂದ್ರೆಯುವರ ಕಾವ್ಯದ ಬಗ್ಗೆಯೂ ಇಂಥದೇ ಬೇರೊಂದು ಟೀಕೆಯಿದೆ. "ಬೇಂದ್ರೆ ಒಂದು ಕಾಲಕ್ಕೆ ಸಮರ್ಥ ಕವಿಗಳಿದ್ದರೇನೊ ನಿಜ. ಈಗ ಮಾತ್ರ ಅವರು ಬರಿಯ ಶಬ್ದಗಳ ಡೊಂಬರಾಟದಲ್ಲಿ ತೊಡಗಿದ್ದಾರೆ"— ಎಂಬ ಅಭಿಪ್ರಾಯ ಘಂಟಾಘೋಷವಾಗಿ ಕೇಳಬರುತ್ತದೆ. ಇದನ್ನು ಅಧಿಕಾರವಾಣಿಯಿಂದ ನಿರ್ಣಯಿಸುವವರಾರು? ಮತ್ತು ಹೇಗೆ? ಅವರ ಕವನಗಳ ಶಬ್ದ-ಪ್ರಯೋಗಕೋಶ ಸಿದ್ಧವಾದರೆ ಮಾತ್ರ ಇದು ಸಾಧ್ಯ.

ಯಾರು ಏನೇ ಹೇಳಲಿ, ಬೇಂದ್ರೆಯುವರು ಹೊಸಗನ್ನಡದ ಶಬ್ದಬ್ರಹ್ಮರೆಂಬುದು ನಿಸ್ಸಂದಿಗ್ಧವಾದುದು. ಅವರು ಶಬ್ದಗಳಿಗೆ ಹೊಸ ಹೊಸ ಅರ್ಥಗಳನ್ನು ಕಲ್ಪಿಸುತ್ತಾರೆ. ಒಂದು ಶಬ್ದವು ವಾಚ್ಯಾರ್ಥ ಮಾತ್ರವಲ್ಲದೆ, ವ್ಯಂಗ್ಯಾರ್ಥ, ವಿರೋಧಾರ್ಥ, ಗೂಢಾರ್ಥ, ಮಂತ್ರಾರ್ಥ— ಏನೆಲ್ಲವನ್ನೂ ಹೊರಡಿಸಬಹುದು. ಮೇಲುನೋಟಕ್ಕೆ ಬಳಕೆಯ ನುಡಿಯೆಂದು ಕಂಡರೂ, ಮಹೋನ್ನತವಾದ ತಾತ್ವಿಕ ದರ್ಶನವು ಆ ಶಬ್ದದಲ್ಲಿ ವ್ಯಕ್ತವಾಗಬಹುದು. ಅವರ ಕಾವ್ಯದಲ್ಲಿ ರಮ್ಯ ಸಂಸ್ಕೃತ ಪದಗಳಿವೆ, ಉತ್ತರ ಕರ್ನಾಟಕದ ದೇಸಿ ಇದೆ. ಹಳಗನ್ನಡ ಶಬ್ದಗಳಿಗೆ ಹೊಸ ಅರ್ಥ ಬಂದಿದೆ. ನಿಸರ್ಗ ವರ್ಣನೆ ಇರಲಿ, ಸಾಮಾಜಿಕ ಸನ್ನಿವೇಶಗಳಿರಲಿ, ಅಂತರಂಗದ ಭಾವೋನ್ಮಾದವಿರಲಿ, ಬೇಂದ್ರೆಯುವರು ಅದಕ್ಕೆ ಸೂಕ್ತವಾದ ಶಬ್ದ ಶರೀರವನ್ನು, ಉಸಿರಾಡುವಷ್ಟು ಸಹಜ ರೀತಿಯಲ್ಲಿ ಒದಗಿಸುತ್ತಾರೆ. ಈ ಅಭಿವ್ಯಕ್ತಿಯಲ್ಲಿ ರೂಪಕಶಕ್ತಿಯದೇ ಮೇಲುಗೈ. ಗಿಡಗಂಟಿಯಾ ಕೊರಳು, ಕಣ್ಣ ಕಡೆಗೋಲು, ಎವಿ ದುಡುಕತಾವ, ತುಳುಕ್ಯಾಡತಾವ ತೂಕಡಿಕಿ, ನೀರೊಡೆದುವೆಲ್ಲ ಕಲ್ಲಿಗೆ — ಎಂಬಂಥ ಪದಗುಂಫನಗಳ ಲೀಲಾಜಾಲವಾದ ಸೃಷ್ಟಿ ಬೇಂದ್ರೆಯುವರಿಗೆ ಮಾತ್ರ ಮೀಸಲು. ಅವರಷ್ಟು ಶಬ್ದಗಳನ್ನು ಮೈಮುರಿದು ದುಡಿಸಿಕೊಂಡವರು ಹೊಸಗನ್ನಡದಲ್ಲಿ ಬೇರೊಬ್ಬರು ಕಂಡುಬರಲಾರರು. ಆದಕಾರಣ ಬೇಂದ್ರೆ ಕಾವ್ಯದಲ್ಲಿ ಬರುವ ಶಬ್ದಗಳ ಅರ್ಥವಿಶೇಷವನ್ನು ಕಂಡುಕೊಳ್ಳುವುದು ಉಚ್ಚ ಮಟ್ಟದ ಕಾವ್ಯಾಭ್ಯಾಸವೆನಿಸುವುದರಲ್ಲಿ ಸಂದೇಹವಿಲ್ಲ.[1] ಇದನ್ನು ತೋರ್ಪಡಿಸಲು, ಅವರ ಸಮಗ್ರ ಕಾವ್ಯದ ಶ. ಪ್ರ. ಕೋಶ ಸಿದ್ಧವಾಗಬೇಕು— ಕಂಪ್ಯೂಟರ್ ಸಹಾಯದಿಂದ.

---

1 ಬೇಂದ್ರೆಯುವರ ಗದ್ಯವಾದರೂ ಅಷ್ಟೇ ಅರ್ಥಗರ್ಭಿತ ಹಾಗೂ ಕಾವ್ಯಮಯ. ಅಲ್ಲಿಯೂ ಕೂಡ ಅವರು ಶಬ್ದಗಳನ್ನು ಬಗೆಬಗೆಯಾಗಿ ಮಣಿಸುತ್ತಾರೆ. ವಿಶೇಷಾರ್ಥವನ್ನು ಹೊರಡಿಸುತ್ತಾರೆ. ಮಾದರಿಯೆಂದು 'ಮಾತುಗಾರಿಕೆ' ಯನ್ನು ಕುರಿತ ಅವರ ಪ್ರಬಂಧವನ್ನು ಗಮನಿಸಬಹುದು. (ಸಾಹಿತ್ಯದ ವಿರಾಟ್ ಸ್ವರೂಪ, ಪು. ೯೩೧).

ಬೇಂದ್ರೆಯವರು ತಮ್ಮ ಕವನಗಳಲ್ಲಿ ತಂದಿರುವ ಶಬ್ದಗಳೆಷ್ಟು ? ಇದುವರೆಗೆ ಅವರು ೨೫ ಪ್ರತ್ಯೇಕವಾದ ಕವನ ಸಂಕಲನಗಳನ್ನು ಪ್ರಕಟಿಸಿದ್ದು, ಅವುಗಳಲ್ಲಿಯ ಒಟ್ಟು ಶಬ್ದಗಳು—ಒಂದು ಲಕ್ಷದ ವರೆಗೆ ಹೋಗಬಹುದು. ಇವುಗಳಲ್ಲಿ ಅನೇಕ ಶಬ್ದಗಳು ಒಂದಕ್ಕಿಂತ ಹೆಚ್ಚು ಸಲ ಬಂದೇ ಇವೆ. ಅವುಗಳನ್ನು ಬಿಟ್ಟರೆ, ಬೇಂದ್ರೆಯವರ ಪದಸಂಪತ್ತು ಎಷ್ಟೆಂಬುದನ್ನು ಹೇಳುವುದಕ್ಕೆ ಸಾಧನವಾವುದೂ ಇಲ್ಲ. ಎಲ್ಲ ಶಬ್ದಗಳನ್ನು ಬರೆದು ತೆಗೆದು, ಅವನ್ನು ಅಕಾರಾದಿಯಾಗಿ ಹೊಂದಿಸಿದಾಗಲೇ ಅದು ಸಾಧ್ಯ. ಇಷ್ಟೆಲ್ಲ ಕವನಗಳ ಶ. ಪ್ರ. ಕೋಶವನ್ನು ತಯಾರು ಮಾಡಲು ಹಲವು ವರ್ಷಗಳೇ ಬೇಕು. ಪ್ರಯೋಗಾರ್ಥವಾಗಿ ನಾವು ಕೇವಲ ನಾಲ್ಕು ಕವಿತೆಗಳನ್ನು ಮಾತ್ರ ತೆಗೆದುಕೊಂಡಿದ್ದೇವೆ. ಅವಾವುವೆಂದರೆ,

| | |
|---|---|
| ಗುರುದೇವ | ( 'ಸಖೀಗೀತ' ದಿಂದ ೧ನೇ ಕವನ. ೧೬ ಸಾಲು ) |
| ಹಾಡು ಪಾಡು | ( 'ಹಾಡು ಪಾಡು 'ದಿಂದ ೧ ನೇ ಕವನ ೬ ಸಾಲು ) |
| ನರಕದಲ್ಲಿ ಸ್ವರ್ಗ | ( ,, ೨ ನೇ ಕವನ ೮ ಸಾಲು ) |
| ನಾವು ಬರತೇವಿನ್ನ | ( ,, ೧೧ ನೇ ಕವನ ೫ ಸಾಲು ) |

ಶಬ್ದಗಳಿಗೆ ಪ್ರಯೋಗವಾಕ್ಯವನ್ನು ಕೊಡುವೆವಾದರೂ, ಅದು ಬಂದ ಸಂದರ್ಭವನ್ನು ಗುರುತಿಸಲು ಸಾಧ್ಯವಾಗಬೇಕಲ್ಲವೆ ? ಆದಕಾರಣ ಅವರ ೨೫ ಸಂಗ್ರಹಗಳಿಗೆ ಅನುಕ್ರಮ ನಂಬರನ್ನು ಕೊಟ್ಟಿದೆ. ಅವುಗಳಲ್ಲಿಯ ಒಂದೊಂದು ಕವನಕ್ಕೆ ಕ್ರಮಸಂಖ್ಯೆ ಇದ್ದೇ ಇರುತ್ತದೆ. ಅದನ್ನು ಗಮನಿಸಿದೆ. ಅದರಂತೆ ಆ ಕವನದಲ್ಲಿಯ ಒಂದೊಂದು ಸಾಲಿಗೂ ಅನುಕ್ರಮ ನಂಬರನ್ನು ಕೊಡಬೇಕಾಗುತ್ತದೆ. ಯಾರದೇ ಶ. ಪ್ರ. ಕೋಶವನ್ನು ಸಿದ್ಧಪಡಿಸುವದಿರಲಿ, ಸರಿ ಕಂಡ ರೀತಿಯಲ್ಲಿ ಈ ಬಗೆಯ ಸಾಂದರ್ಭಿಕ ಸಂಖ್ಯೆಯನ್ನು ಕೊಡುವುದು ಅಗತ್ಯವಾಗುತ್ತದೆ. 'ಗುರುದೇವ' ಪದ್ಯದಲ್ಲಿಯ ೨ ನೆಯ ಸಾಲಿನಲ್ಲಿ ಬರುವ 'ಹಿಗ್ಗಿನ' ಶಬ್ದಕ್ಕೆ ಕೊಡಬೇಕಾದ ನಂಬರು ಹೀಗಿದೆ. ೦೪,೦೧,೦೦೨. ಕವನದ ಒಂದೊಂದು ಸಾಲಿಗೆ ಮಾತ್ರ ಇಂಥ ನಂಬರನ್ನು ಕೊಟ್ಟರೆ ಸಾಕು. (ಕಂಪ್ಯೂಟರ್ ಅದರಲ್ಲಿಯ ಪ್ರತಿಯೊಂದು ಶಬ್ದಕ್ಕೆ ಅದೇ ನಂಬರನ್ನು ತಾನಾಗಿ ಕೊಡುವುದು) ಪದ್ಯಗಳ ಶೀರ್ಷಿಕೆಗಳಲ್ಲಿಯೂ ಶಬ್ದಗಳಿರುತ್ತವಷ್ಟೆ. ಅದನ್ನು ಸಾಲು ಎಂದು ತಿಳಿಯ ಬರುವುದಿಲ್ಲವಾದ್ದರಿಂದ ಸಾಲಿನ ಅಂಕಿಯನ್ನು ಶೂನ್ಯಾಂಕದಿಂದ ಸೂಚಿಸಿದೆ.

ಆದರೆ ಕಂಪ್ಯೂಟರಿಗೆ ಕನ್ನಡ ತಿಳಿಯುವದಿಲ್ಲವಲ್ಲ ! ಆದ್ದರಿಂದ ಮೂಲ ಕೃತಿಯನ್ನು ನಾವು ರೋಮನ್ ಲಿಪಿಯಲ್ಲಿ ಬರೆಯಬೇಕು. ರೋಮನ್ ಲಿಪಿಗೆ ಅನುವಾದ ಮಾಡಲು ( transliteration ), ಕೆಲವು ಉಚ್ಚಾರಣ ಚಿಹ್ನಗಳು ( diacritical marks ) ಇರುತ್ತವಷ್ಟೇ. ಅವೆಲ್ಲವೂ ಈ ಯಂತ್ರದ

ಮಟ್ಟಿಗೆ ಪ್ರಯೋಜನಕ್ಕೆ ಬರುವುದಿಲ್ಲ. ಕೆಲವು ವ್ಯತ್ಯಾಸಗಳನ್ನು ಮಾಡಿಕೊಳ್ಳ ಬೇಕಾಗುತ್ತದೆ.

೧) ಅ ಇ ಉ ಎ ಒ ಕ ಗ ಜ ತ ದ ನ ಪ ಬ ಮ ಯ ರ ಲ ವ ಸ — ಇವು ತತ್ಸಮಾನ ರೋಮನ್ ಅಕ್ಷರಗಳಿಗೆ ಹೊಂದಿಕೊಳ್ಳುತ್ತವೆ. ಬದಲಾ- ವಣೆ ಇಲ್ಲ.

೨) ಆ ಈ ಊ ಏ ಓ — ಈ ದೀರ್ಘಾಕ್ಷರಗಳನ್ನು + ಅಧಿಕ ಚಿಹ್ನದಿಂದ ನಿರ್ದೇಶಿಸಿದೆ. ( A +, I + ಇ. ಇ.).

೩) ಮಹಾಪ್ರಾಣ ವಿಚಾರದಲ್ಲಿ ಎಂದಿನಂತೆ H ಅಕ್ಷರ ಇದೆ (KH, PH, ಇ.)

೪) ಇನ್ನುಳಿದವುಗಳ ರೋಮನೀಕರಣ ಮಾಡುವಾಗ, ಡಾಲರ್ ಚಿಹ್ನವನ್ನು ರೋಮನ್ ಅಕ್ಷರದ ಹಿಂದೆ ಜೋಡಿಸಲಾಗಿದೆ.

ಕಂಪ್ಯೂಟರಿಗೆ ಹೊಂದಿಕೊಳ್ಳುವ ಕನ್ನಡಾಕ್ಷರಗಳ ರೋಮನೀಕರಣದ ಪಟ್ಟಿಯನ್ನು ಈ ಕೆಳಗೆ ಕೊಡಲಾಗಿದೆ :

| | | | | | | | | | | | |
|---|---|---|---|---|---|---|---|---|---|---|---|
| ಅ | A | ಎ | E | ಕ | K | ಞ | $Y | ಧ | DH | ಱ | $2I. |
| ಆ | A+ | ಏ | E+ | ಖ | KH | ಟ | $T | ನ | N | ಲ | L |
| ಇ | I | ಐ | $E | ಗ | G | ಠ | $TH | ಪ | P | ವ | V |
| ಈ | I+ | ಒ | Ø | ಘ | GH | ಡ | $D | ಫ | PH | ಶ | SH |
| ಉ | U | ಓ | Ø+ | ಙ | $1N | ಢ | $DH | ಬ | B | ಷ | $S |
| ಊ | U+ | ಔ | $Ø | ಚ | C | ಣ | $N | ಭ | BH | ಸ | S |
| ಋ | $1R | ಅಂ | AM | ಛ | CH | ತ | T | ಮ | M | ಹ | $I |
| ೠ | $1R+ | ಅಃ | A$M | ಜ | J | ಥ | TH | ಯ | Y | ಳ | SL |
| | | | | ಝ | JH | ದ | D | ರ | R | ೞ | $2L |

ಇಂಗ್ಲೀಶ್‌ನಲ್ಲಿ ಶಬ್ದಗಳು ಬಿಡಿಬಿಡಿಯಾಗಿ ಇರುತ್ತವೆ. ಆಗ ಒಂದೊಂದು ಶಬ್ದವನ್ನೆತ್ತಿಕೊಂಡು, ಶ. ಪ್ರ. ಕೋಶವನ್ನು ರಚಿಸುವುದು ಸುಲಭ. ನಮ್ಮ ಭಾರತೀಯ ಭಾಷೆಗಳಲ್ಲಿ ಹಾಗೆಲ್ಲಿದೆ ? ಎರಡು-ಮೂರು ಶಬ್ದಗಳು ಸಂಧಿ, ಸಮಾಸಾದಿ ನಿಯಮಾನುಸಾರ ಕೂಡುನುಡಿಯಾಗಿ ಬರುತ್ತವೆ. ಬಾಣನಂತಹರ ಗದ್ಯವಿದ್ದರಂತೂ ಶಬ್ದಗಳು ಒಂದಕ್ಕೊಂದು ಹೆಣೆದುಕೊಂಡು ಸಾಲುಗಟ್ಟಲೆ ಮುಂದುವರಿಯುತ್ತವೆ. ಬಹುವ್ರೀಹಿ ಸಮಾಸದ ಕೂಡುನುಡಿ ಇದ್ದರೆ, ಆ ಎರಡು ಶಬ್ದಗಳನ್ನು ಬಿಟ್ಟು ಮೂರನೆಯ ಅರ್ಥವೇ ಹೊರಡುತ್ತದೆ. ಶ. ಪ್ರ. ಕೋಶ

ತಯಾರಿಸುವಾಗ, ಕೂಡುನುಡಿಯಲ್ಲಿ ಬರುವ ಶಬ್ದಗಳನ್ನು ಬಿಡಿಯಾಗಿಯೂ, ತೆಗೆದುಕೊಳ್ಳಬೇಕಲ್ಲದೆ, ಒಟ್ಟಿನ ಕೂಡುನುಡಿಯನ್ನೂ ಗಮನಿಸಬೇಕಾಗುವುದು. ಕಂಪ್ಯೂಟರ್ ತಾನಾಗಿ ಈ ಕೆಲಸ ಮಾಡಬೇಕಾದರೆ, ಕೆಲವು ವಿಶಿಷ್ಟ ಚಿಹ್ನೆಗಳನ್ನು ಬಳಸಬೇಕಾಗುತ್ತದೆ. ನಾವು ಈ ದಿಸೆಯಲ್ಲಿ ಮಾಡಿಕೊಂಡ ವಿಧಾನಗಳು ಇಂತಿವೆ :

ಯಾವುದೊಂದು ಕೂಡುನುಡಿಗೆ ಈ ಕೆಳಗಿನ ಸಾಮಾನ್ಯ ಸೂತ್ರಗಳಿರುತ್ತವೆ:

೧) ಎರಡು ಪದಗಳು, ಪೂರ್ವಪದದ ಕೊನೆ ಮತ್ತು ಉತ್ತರ ಪದದ ಆರಂಭ ಇವುಗಳಲ್ಲಿ ಯಾವ ಬದಲಾವಣೆ ಇಲ್ಲದೆ ಕೂಡಿರುತ್ತವೆ. ಉದಾ.ಗೆ 'ಚಳಿ ಮುದ್ದು' ('ಗುರುದೇವ' ಕವನದಲ್ಲಿ). ಇಲ್ಲಿ ಯಾವ ಲೋಪ, ಆಗಮ ಆದೇಶಾದಿ ಕ್ರಿಯೆ ಇಲ್ಲ. ಈ ಎರಡು ಶಬ್ದಗಳ ಮಧ್ಯೆ / ಈ ರೀತಿಯ ಒಂದು ಗೆರೆ ಎಳೆದು ಎರಡೂ ಶಬ್ದಗಳನ್ನು ಪ್ರತ್ಯೇಕಿಸಿದ್ದೇವೆ. ಕಂಪ್ಯೂಟರ್ ಶ. ಪ್ರ. ಕೋಶವನ್ನು ಸಿದ್ಧಪಡಿಸುವಲ್ಲಿ ಚಳಿ, ಮುದ್ದು ಮತ್ತು ಚಳಿಮುದ್ದು ಈ ಮೂರರ ಅಡಿಯಲ್ಲಿಯೂ ಪ್ರತ್ಯೇಕವಾಗಿ ಆ ಪ್ರಯೋಗ ವಾಕ್ಯವನ್ನು ಕೊಟ್ಟಿದೆ.

೨) ಲೋಪಕ್ರಿಯೆ — ಸಂಧಿಯಾಗುವಾಗ ಒಂದೆರಡು ಅಕ್ಷರ ಲೋಪವಾಗುತ್ತವೆ. ಉದಾ.ಗೆ ಮರೆತೇವದನ ('ನಾವು ಬರತೇವಿನ್ನ' ಕವನ) ಮರೆತೇವು + ಅದನ — ಎಂಬೀ ಪದಗಳಲ್ಲಿ ಉಕಾರ ಲೋಪವಾಗಿದೆ. ಹೀಗೆ ಲೋಪ ಹೊಂದುವ ಅಕ್ಷರಗಳನ್ನು ಚೌಕು ಆವರಣ ಚಿಹ್ನೆಯಲ್ಲಿ ಕೊಟ್ಟಿದ್ದೇವೆ [ ]. Marete + v [ u ] / Adana. ಕಂಪ್ಯೂಟರ್ 'ಮರೆತೇವು', 'ಅದನ' ಎಂಬುವದನ್ನು ಹೇಳುವುದು ಮಾತ್ರವಲ್ಲ, ಆವರಣ ಚಿಹ್ನೆಯಲ್ಲಿರುವ ಉಕಾರವನ್ನು ತಂತಾನೆ ಬಿಟ್ಟುಕೊಟ್ಟು 'ಮರತೇವದನ' — ಎಂಬ ಕೂಡುನುಡಿಯನ್ನು ನಮಗೆ ಕೊಡುವಂತೆ ಯೋಜಿಸಲಾಗಿದೆ.

೩) ಆಗಮ ಕ್ರಿಯೆ — ಕೂಡುನುಡಿಯಲ್ಲಿ ಯಾವುದೊಂದು ಅಕ್ಷರ ಸಂಜ್ಞೆಯು ಆಗಮವಾಗಿ ಬರಬಹುದು. ಉದಾ.ಗೆ 'ಹೂವರಳಿ' ('ಹಾಡು-ಪಾಡು' ಕವನ) ಪದದಲ್ಲಿ 'ವ್' ಆಗಮವಾಗಿ ಬಂದಿದೆ. (ಹೂ+ವ್+ಅರಳಿ). ಹೀಗೆ ಹೆಚ್ಚಿಗೆ ಸೇರಿಕೊಂಡ ಅಕ್ಷರಗಳನ್ನು at ಎಂಬ ಸಂಕ್ಷಿಪ್ತ ರೂಪದಿಂದ ಹಿಡಿದಿಟ್ಟಿದೆ. ಮೇಲೆ ತಿಳಿಸಿದ ಕ್ರಮದಂತೆಯೇ ಕಂಪ್ಯೂಟರ್ ಹೂ, ಅರಳಿ ಇವುಗಳ ಪ್ರಯೋಗವಾಕ್ಯ ಕೊಡುವಾಗ ವ ಕಾರವನ್ನು ಬಿಟ್ಟುಕೊಡುವಂತೆಯೂ, ಕೂಡುನುಡಿಯಲ್ಲಿ ಸೇರಿಕೊಂಡಿರುವಂತೆಯೂ ಯೋಜಿಸಲಾಗಿದೆ.

ಇದಿಷ್ಟು ಪೂರ್ವಸಿದ್ಧತೆ ಮಾಡಿಕೊಂಡ ಮೇಲೆ. ಬೇಂದ್ರೆಯವರ ನಾಲ್ಕು ಕವಿತೆಗಳನ್ನು ಇದ್ದುದಿದ್ದಂತೆ ಬರೆದು ತೆಗೆದೆವು. ಕಂಪ್ಯೂಟರ್ ಮುದ್ರಿಸಿದ ಅದರ

ಒಂದು ಭಾಗವನ್ನು ಚಿತ್ರ ೧ರಲ್ಲಿ ನೋಡಬಹುದು. ಕಂಪ್ಯೂಟರಿನ ಮುಂದಿನ ಕೆಲಸವೆಂದರೆ, ಆ ಒಂದೊಂದು ಶಬ್ದವನ್ನು ಬೇರೆಯಾಗಿ ಎತ್ತಿಕೊಂಡು ಅದು ಬಂದ ಸಾಲು ಅಥವಾ ಪ್ರಯೋಗವಾಕ್ಯವನ್ನು ಕೆಳಗೆ ಕೊಡಬೇಕು. ಮತ್ತು ಶಬ್ದ ಗಳನ್ನು ಅಕಾರಾದಿಯಾಗಿ ಹೊಂದಿಸಬೇಕು. ಕಂಪ್ಯೂಟರ್ ಈ ನಾಲ್ಕು ಕವನ ಗಳಲ್ಲಿ ಬಂದಿರುವ ೩೩೦ ಶಬ್ದಗಳನ್ನು ಈ ರೀತಿಯಾಗಿ ಅಣಿಗೊಳಿಸಿ, ಮುದ್ರಿಸಿ ಕೊಟ್ಟಿದ್ದರ ಒಂದು ಭಾಗವನ್ನು ೨ನೆಯ ಚಿತ್ರದಲ್ಲಿ ನೋಡಬಹುದು ( ಅದರಲ್ಲಿ ‘ ತುಂಬಿದೆ ’ ಶಬ್ದದಿಂದ ಹಿಡಿದು ‘ ನಾವು ’ ವರೆಗಿನ ಶಬ್ದಗಳು, ಪ್ರಯೋಗವಾಕ್ಯ ಸಹಿತ ಬಂದಿವೆ. ) [ ಚಿತ್ರ 1-2-3 ಗಳನ್ನು ಪುಟ ೭೩೨-೩೪ ರಲ್ಲಿ ನೋಡಿ ]

ನಾವು ತೆಗೆದುಕೊಂಡದ್ದು ನಾಲ್ಕೇ ಪದ್ಯಗಳನ್ನು — ಮಾದರಿಗೆಂದು. ಅದ ರಲ್ಲಿಯ ಕೇವಲ ೩೩೦ ಶಬ್ದ ಮತ್ತು ಪ್ರಯೋಗಗಳಿಂದ ವಿಶಿಷ್ಟವಾದ ಅಂಶ ವಾವುದೂ ಕಂಡುಬಂದಿಲ್ಲ. ಅದು ಸಾಧ್ಯವೂ ಇಲ್ಲ. ಆದರೂ ಕೆಲ ಮಾತನ್ನು ಎತ್ತಿ ತೋರಿಸಬಹುದು. ಈ ಪಟ್ಟಿಯಲ್ಲಿ ಅದಿರುದುಟಿ, ಚಳಿಮುದ್ದು, ಬಿಸಿಲ್ದಣ್ಣು, ರಸನಿಧಿ, ವಿಧೀಮಾಯಿ -- ಎಂಬ ಸೊಗಸಾದ ಕೂಡುನುಡಿಗಳಿವೆ. ಕನ್ನಿ, ಚುಣುಕು, ತೋಟಿಗಳಂತಹ ಅ-ಸಾಮಾನ್ಯ ಶಬ್ದಗಳಿವೆ; ಹರಲಿ, ಧುರಂಧರಿ, ಸುಮುಗ್ಣ (ಸುಮ್ಮನೆ) — ಎಂಬೀ ಬಗೆಯ ಬಳಕೆ ನುಡಿಗಳು ತೋರಿಬರುತ್ತಿವೆ. ಬೇಂದ್ರೆಯವರ ಸಮಗ್ರ ಕಾವ್ಯಸಂಪದವನ್ನು ಕಂಪ್ಯೂಟರಿಗೆ ಪೂರೈಸಿದಾಗ ಅನೇಕಾನೇಕ ಅರ್ಥವಿಶೇಷಗಳು — ಮತ್ತು ನವೀನ ಕಾವ್ಯಾಂಶಗಳು ದ್ರಾಕ್ಷಾ ಪಾಕದಷ್ಟು ಸುಲಭವಾಗಿ ಕೈಗೆಟಕುವುದರಲ್ಲಿ ಸಂದೇಹವೇ ಇಲ್ಲ.

ಒಂದು ಲಕ್ಷ ಶಬ್ದಗಳಿರುವ ಬೇಂದ್ರೆಕವನಸಂಗ್ರಹಗಳ ಪುಟಸಂಖ್ಯೆ ಸುಮಾರು ೧೩೦೦, ಅದರ ಶ. ಪ್ರ. ಕೋಶವು ಏನಿಲ್ಲೆಂದರೂ ೬ ಸಾವಿರ ಪುಟ ಗಳಷ್ಟಾಗುವುದು. ಅಷ್ಟನ್ನು ಮುದ್ರಿಸುವುದಕ್ಕೆ ತುಂಬಾ ಹಣ, ತುಂಬಾ ಸಮಯ ಬೇಕು. ಮಾರಾಟದ ದೃಷ್ಟಿಯಿಂದ ಅವ್ಯವಹಾರ್ಯವೂ ಅನಿಸುವುದು. ಆದರೆ ಅದನ್ನು ಅಚ್ಚಿನ ಮೊಳೆಗಳಿಂದ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಮುದ್ರಿಸಲೇ ಬೇಕೆಂದೇನೂ ಇಲ್ಲ. ಕಂಪ್ಯೂಟರ್ ನೆರವಿನಿಂದ ಸಿದ್ಧವಾದ ಶ. ಪ್ರ. ಕೋಶದ ಹಲವಾರು ಪ್ರತಿಗಳನ್ನು ಕಂಪ್ಯೂಟರ್ ಪ್ರಿಂಟರ್‌ನಿಂದಲೇ ಪಡೆಯಬಹುದು. ಶ. ಪ್ರ. ಕೋಶವು ಅತಿ ದೊಡ್ಡದಿದ್ದಾಗ, ಅದರ ೬-೭ ಪ್ರತಿಗಳನ್ನು ತೆಗೆದು, ವಿಶ್ವವಿದ್ಯಾ ಲಯಗಳು, ಮತ್ತಿತರ ಕೆಲವೆಡೆ ಇಟ್ಟರೆ ಜಿಜ್ಞಾಸುಗಳು ಅಲ್ಲಿಗೆ ಹೋಗಿ ಅಭ್ಯಾಸಮಾಡಬಹುದು.

ಈ ರೀತಿಯಲ್ಲಿ ಕಂಪ್ಯೂಟರ್ ಹೊರಹಾಕುವ ಕೋಶವು ಕೂಡಾ ಇಂಗ್ಲೀಶ್‌ನಲ್ಲಿಯೇ ಇದೆಯಲ್ಲವೆ. ಆದರೆ ಅದು ಅಕಾರಾದಿಯಾಗಿರುವುದರಿಂದ ಅದರ ಪರಿ-

ಶೀಲನೆ ತಾಪದಾಯಕವೇನಲ್ಲ. ಆದರಲ್ಲಿ ಬರುವ ಅಧಿಕ ಚಿಹ್ನೆ, ಡಾಲರ್ ಮುಂತಾದ ಉಚ್ಚಾರಣ, ಸಂಕೇತಗಳ ರೂಢಿಯಾಗಿಬಿಟ್ಟರೆ ಸೈ. [1]

ಪ್ರಸ್ತುತ ಲೇಖದಲ್ಲಿ ಬೇಂದ್ರೆಯವರ ಕಾವ್ಯದ ಶಬ್ದಪ್ರಯೋಗಕೋಶದ ಪ್ರಸ್ತಾಪ ಮಾಡಿದ್ದರೂ, ನಮ್ಮ ಪ್ರಯೋಗದ ಯಶಸ್ವಿತೆಯನ್ನು ದೃಢೀಕರಿಸುವ ದೃಷ್ಟಿಯಿಂದ ಇನ್ನು ಹಲವರ ಕೃತಿಗಳ ಭಾಗಗಳನ್ನು ತೆಗೆದುಕೊಂಡು ಅಷ್ಟರ ಮಟ್ಟಿಗೆ ಶ. ಪ್ರ. ಕೋಶವನ್ನು ರಚಿಸಿ ಇಡಲಾಗಿದೆ. ಸಂಸ್ಕೃತದ ಮಾದರಿಯೆಂದು ಶ್ರೀ ಮಧ್ವಾಚಾರ್ಯರ ದ್ವಾದಶಸ್ತೋತ್ರದ ಒಂದೆರಡು ಸರ್ಗಗಳನ್ನು, ಹಳಗನ್ನಡದ ಬಗೆಯೆಂದು ಹರಿಹರನ ರಗಳೆಯೊಂದರ, ಹಲವು ಸ್ಥಲಗಳನ್ನು, ಮತ್ತು ನವ್ಯ ಕಾವ್ಯದ ಮಾದರಿಯೆಂದು ಗೋಪಾಲಕೃಷ್ಣ ಅಡಿಗರ ಕೆಲವು ಕವನಗಳನ್ನು ಕಂಪ್ಯೂಟರಿಗೆ ಪೂರೈಸಿ ನೋಡಿ, ನ್ಯೂನತೆಗಳನ್ನು ಸರಿಪಡಿಸಿಕೊಂಡಿದ್ದೇವೆ. ಸಮಸ್ಯೆಗಳಿಗೆ ಪರಿಹಾರ ಕಂಡುಕೊಂಡಿದ್ದೇವೆ. ಆದರೂ ಹೆಚ್ಚಿನ ಸುಧಾರಣೆಗೆ ಅವಕಾಶ ಇದ್ದೇ ಇದೆ.

ಕಂಪ್ಯೂಟರ್ ಯಂತ್ರವು ಇದೆಲ್ಲ ಕೆಲಸವನ್ನು ಹೇಗೆ ನಿಭಾಯಿಸುತ್ತದೆಂಬ ಕುತೂಹಲ ಉಂಟಾಗುವುದು ಸಹಜವೇ. ಅದನ್ನು ವಿವರಿಸಲು ಪ್ರತ್ಯೇಕ ಲೇಖನವನ್ನೇ ಬರೆಯಬೇಕಾಗುವುದು. ಅತ್ಯಂತ ಸ್ಥೂಲವಾಗಿ ಹೀಗೆ ಹೇಳಬಹುದು. ಕಂಪ್ಯೂಟರಿಗೆ ಏನು ಮಾಹಿತಿಯನ್ನು ಪೂರೈಸಬೇಕಾದರೂ, ಅದನ್ನು ಅಂಕಿಗಳಿಗೆ ತಿರುಗಿಸಬೇಕಾಗುತ್ತದೆ. Bendre ಶಬ್ದವನು ನಾವು ಕಾಗದದಲ್ಲಿ ಹಾಗೆಂದು ಬರೆಯಬಹುದು. ಕಂಪ್ಯೂಟರ್ ಆದನ್ನು ಅಂಕಿಗಳ ರೂಪದಲ್ಲಿ ಸ್ವೀಕರಿಸುತ್ತದೆ. ಬೇಂದ್ರೆ = ೨೫೦೫೪೯೦೭೫ ! ಒಂದು ನಿರ್ದಿಷ್ಟ ಆಕಾರದ ಕಾರ್ಡಿನಲ್ಲಿ ಇವನ್ನು Punch ಮಾಡಬೇಕು. ಈ ರೀತಿಯಾಗಿ ಕಂಪ್ಯೂಟರ್ ತನ್ನಲ್ಲಿ ಇಟ್ಟುಕೊಂಡ ಮಾಹಿತಿಯನ್ನು, ಯಾವ ರೀತಿಯಲ್ಲಿ ವಿಶ್ಲೇಷಿಸಬೇಕು ಎಂಬುದನ್ನು ಅದಕ್ಕೆ 'ವಿಧಿಸ'ಬೇಕಾಗುತ್ತದೆ. ಇದಕ್ಕೆ Paogramming ಎನ್ನುತ್ತಾರೆ. ಈ ವಿಧಿ-ನಿಯಮಗಳ ಪ್ರಕಾರ ಕಂಪ್ಯೂಟರ್ ಅತ್ಯಂತ ವೇಗದಿಂದ ಕೆಲಸ ಮಾಡಿ, ಅದಕ್ಕೆ

---

1 ಕಂಪ್ಯೂಟರಿಗೆ ಕನ್ನಡದಲ್ಲೇ ಸಾಮಗ್ರಿಯನ್ನು ಪೂರೈಸಿ, ಕನ್ನಡದಲ್ಲಿಯೇ ಆದರಿಂದ ಉತ್ತರ ಪಡೆಯುವ ಎತ್ತುಗಡೆ ನಡೆದಿದೆ ! ಆದರೆ ಅದಕ್ಕಿನ್ನೂ ೩-೪ ವರ್ಷ ಬೇಕಾದೀತು. ಕಂಪ್ಯೂಟರ್ ಹೇಳಿಕೇಳಿ ಒಂದು ಕುರುಡು ಯಂತ್ರ. ಅದು ಇಂಗ್ಲಿಶ್, ಚೈನಾ, ಕನ್ನಡ ಯಾವ ಲಿಪಿಯನ್ನಾದರೂ ಹೊರಡಿಸಬಹುದು. ಪರ್ಶಿಯನ್ ಲಿಪಿಯಲ್ಲಿರುವ ಹಾಫೀಜನ ಕವಿತೆಗಳಿಗೆ ಹಾಗೆ ಪ್ರಯೋಗ ಮಾಡಿ ನೋಡಲಾಗಿದೆ. ಈಚೆಗೆ ಹೈದ್ರಾಬಾದಿನ ಡಾ. ಕೋಟೇಶ್ವರ ರಾವ್, ಡಾ. ಶಾಸ್ತ್ರಿ ಮತ್ತು ಸಂಗಡಿಗರು (Electronics Corporation of India Ltd.) ತೆಲುಗು, ಹಿಂದೀ ಲಿಪಿಗಳಲ್ಲಿ ಕಿಂಚಿತ್ ಪ್ರಯೋಗ ಮಾಡಿ ನೋಡಿದ್ದಾರೆ.

ಜೋಡಿಸಿದ ಟೆಲಿಪ್ರಿಂಟರ್ ಮಾದರಿಯ ಯಂತ್ರದಿಂದ ಪಟಪಟನೆ ಅಕ್ಷರ ಅಥವಾ ಅಂಕಿಗಳನ್ನು ಮೂಡಿಸುತ್ತ ಹೋಗುತ್ತದೆ. ಬೇಕೆಂದರೆ ಅದನ್ನೆ ಫೋಟೋ ಕಂಪೋಸಿಂಗ್‌ನಿಂದ ಮುದ್ರಿಸಿ, ನೂರಾರು ಪ್ರತಿಗಳನ್ನು ಹೊರತರಲೂ ಬಹುದು.

ಅತ್ಯಂತ ವೇಗ— ಎಂದೆವು. ಆ ವೇಗ ನಿಮ್ಮ ಎಣಿಕೆಯನ್ನು ಮೀರಿ ಹೋಗುವಂಥಾದ್ದು ! ಮೇಲಿನ ೯೨ ಸಾಲುಗಳಲ್ಲಿಯ ೩೩೦ ಶಬ್ದಗಳನ್ನು ಪ್ರತ್ಯೇಕ ವಾಗಿ ಬರೆದು, ಪ್ರಯೋಗವಾಕ್ಯವನ್ನು ಕೊಟ್ಟು, ಅಕಾರಾದಿಯಾಗಿ ಹೊಂದಿಸಲು ಹಾಗೂ ೨೬ ಪುಟಗಳಷ್ಟನ್ನು ಮುದ್ರಿಸಲು ಕಂಪ್ಯೂಟರ್ ಎಷ್ಟು ವೇಳೆ ತೆಗೆದು ಕೊಂಡಿರಬಹುದು ? ಜನೆವರಿ ೨೬ ನೇ ತಾರೀಖಿನ ಸಂಜೆ ೬ ಘಂಟೆ, ೩೨ ಮಿನಿಟು ೨೦ ಸೆಕಂದಿನ ವೇಳೆಯಾದಾಗ ತನ್ನ ಕೆಲಸ ಆರಂಭಿಸಿತು. ಮುಗಿಸಿದ್ದು ಅದೇ ದಿನ ಸಂಜೆ ೬ ಗಂಟೆ, ೩೪ ಮಿನಿಟು, ೪೩ ಸೆಕಂದುಗಳ ಸಮಯಕ್ಕೆ. ಎಂದರೆ ಅದಕ್ಕೆ ತಗುಲಿದ ವೇಳೆ ಕೇವಲ ೨ ಮಿನಿಟು, ೨೩ ಸೆಕಂದುಗಳು ! (ಚಿತ್ರ ೩) ಇಷ್ಟನ್ನೆ ನಾವು ಕೈಯಿಂದ ಮಾಡಲು ಕುಳಿತಿದ್ದರೆ ಎಷ್ಟು ಗಂಟೆಗಳು ತಗುಲಬಹುದೆಂಬು ದನ್ನು ನೀವು ಊಹಿಸಿರಿ. ನೆನಪಿಡಿ, ನಾವು ಕೈಯಿಂದ ಬರೆಯತೊಡಗಿದಾಗ. ತಪ್ಪುಗಳು ನುಸುಳುವ ಸಂಭವವಿದ್ದರೆ, ಕಂಪ್ಯೂಟರ್ ಬಿಂದು ಮಾತ್ರವೂ ತಪ್ಪಿ-ಲ್ಲದೆ ಶ. ಪ್ರ. ಕೋಶವನ್ನು ಅಣಿಗೊಳಿಸುತ್ತದೆ.

ಸಾಹಿತ್ಯ ಕಾರ್ಯಕ್ಕೆ ಕಂಪ್ಯೂಟರನ್ನು ಬಳಸುವ ಈ ಎತ್ತುಗಡೆಯು ಕನ್ನಡ ದಲ್ಲಿ ಪ್ರಥಮತಃ ನಡೆಯುತ್ತಿದೆ. ಇಷ್ಟೇ ಅಲ್ಲ. ಭಾರತದ ಯಾವುದೇ ಸಾಹಿತ್ಯ ಕ್ಷೇತ್ರದಲ್ಲಿ ಇಂಥ ಕೆಲಸ ನಡೆದಿಲ್ಲ. ಶ. ಪ್ರ. ಕೋಶ, ಮತ್ತಿತರ ಕಾರ್ಯಗಳಿಗೆ ಕಂಪ್ಯೂಟರನ್ನು ಬಳಸಿ, ಇತರ ದೇಶಭಾಷಾ ಸಾಹಿತ್ಯಿಕರಿಗೆ ಮಾರ್ಗದರ್ಶನ ಮಾಡುವ ಹೊಣೆಯು ಕನ್ನಡಿಗರ ಮೇಲಿದೆಯೆಂದರೂ ಸರಿ. ನಮ್ಮ ರಾಜ್ಯದ ವಿಶ್ವ ವಿದ್ಯಾಲಯಗಳಲ್ಲಿಯ ಕನ್ನಡ ಕೇಂದ್ರಗಳು ಮತ್ತು ಇತರ ಕನ್ನಡ ವಿದ್ವಾಂಸರು ಈ ಕ್ರಾಂತಿಕಾರಿ ಸಾಧನದತ್ತ ತಮ್ಮ ಗಮನ ಹರಿಸಿ, ಸಾಹಿತ್ಯಸಂಶೋಧನೆಗೆ ಹೊಸ ಆಯಾಮಗಳನ್ನು ತಂದುಕೊಡುವಂತಾಗಲಿ. [1]

§ § § §

1 ಹೆಚ್ಚಿನ ಮಾಹಿತಿಗಾಗಿ ಲೇಖಕರಿಗೆ ಬರೆಯಬಹುದು. ಅವರ ವಿಳಾಸ :
Tata Instiute of Fundamental Research, Bombay-5.

* CONOORDANCE TO D. R. BENDREIS KANNASDA POEMS - A SPECIMEN

```
GURUDE+VA                                                    *0401,0
NUSDIDU DE+SATTA+GA DUSDI/DUSDIDU SATTA+GA                    *0401,0
JANAKA SHIGGINA SHA+SDU NI+SDA+MVA+                           *0401,0
NIN[NA]/SHA+NGA  A+SDA+KA NIN[NA]/SHA+NGA SHA+SDA+KA          *0401,0
PASDEDU BANDAVA BE+KO GURUDE+VA+                              *0401,0
MAKKASLA+GI[I]@Y@/A+SDI+DI SHAKYA+GI SHA+SDI+DI               *0401,0
CIKYA+GI NO+SDI+DI GURUDE+VA+                                 *0401,0
BASLLYA+GA KUSNIDI+DI BESLAKINYA+GA TASNIDI+DI                *0401,0
 SHU+VA+GI ARASLI+DI GURUDE+VA+                               *0401,0
BESL[illegible]+G[A]/I+SA+SDIDI GA+SLYA+GA BI+SA+SDI+DI       *0401,2
MASLIYA+GA KU+S[U]/A+SDI+DI GURUDE+VA+                        *0401,0
BISI[U]/SHASNNU UNSDI+DI BESLADINGASLA KANSDI+DI              *0401,2
GASLI/MUDDU KONSDI+DI GURUDE+VA+                              *0401,0
MU+SDALAKA MU+SDI+DI PASDUVALAKA O+SDI+DI                     *0401,0
DIKKELLA KU+SDI+DI GURUDE+VA+                                 *0401,0
 SHA+SDI SHASNNA+DI NI+ JAGADA KASNNA+DI NI+                  *0401,0
DUSDIDU SASNNA+DI NI+ GURUDE+VA+                              *0401,0
 SHA+SDU PA+SDU                                               *0801,0
KA+Y ENUTITTU KA+VANA/BASLLI                                  *0801,0
KA[S]N/KANGASLOSLU+ SHU+/@V@APASLI                            *0801,0
EDEVASDE PA+SDU OLAVINA SHA+SDU                               *0801,0
 SHASNNALI TUMBITU RASA MARASLI                               *0801,0
ELE RASA/NIDHIYE+ SHA+ SHATA VIDHIYE+                         *0801,0
MSE/TUMBIDE SELE/SELEYA+GI                                    *0801,0
NARAKADALLI SVARGA                                            *0802,0
TIRUGI TIRUGITIRUVA KASNNU MISTUKUTTISHAVU,                   *0802,0
ADIRUDUSII KECCANEYE ARASLUIISHAVU,                           *0802,0
SUSLLE SHA+SDUTTA ASDDA+SDUTIVE EDE SHALAVU,                  *0802,0
MABBU/[K]@G@AVIYUTISHAVU                                      *0802,0
YA+VA YAKSSISNI MA+YE YA+VA LO+KADA RU+PO                     *0802,0
KALPANEYA NILUKISIYU SHE+SLAL[U]/ARIYE,                       *0802,0
NETTARADA O+KUSLIYE APPUGSE/[T]@DEO+STIYE+                    *0802,0
A+SHA SVARGAVE ENDE NARAKA IEREYE,                            *0802,0
NA+VU BARATE+VINNA                                            *0811,0
NA+VU BARATE+VINNA NENAPIRALI TA+YI                           *0811,0
NAM/NAMASKA+RA NIMAGA                                         *0811,0
KA+YDIRI-/KU+SINSHA+NGA NAMAGA-                               *0811,0
NA+VU BARATE+VINNA...                                         *0811,0
JAGADA KU+SDA BANDEVU JAGASLA+SDI;                            *0811,0
KOSTITRI NINMA TOSDI,                                         *0811,0
ALLI NIDDE MA+SDI -EDDEVI+GA                                  *0811,0
YA+VUDO+ SHOSA+ NASUKINYA+GA,                                 *0811,0
NI+VU- TA+YITANA NASDISIDIRI                                  *0811,0
 SHA+LA KUSDISIDIRI                                           *0811,0
MARASLU A+SDISIDIRI KANASINYA+GA                              *0811,0
BESLAGU A+TU BHA+SLA BYA+GA.                                  *0811,0
KASNNA MUCCIKOSLLATA+VA CIKKI                                 *0811,0
CIVUGUSDATA+VA SHAKKI                                         *0811,0
KATTALI TALI KUKKI BA+NAMYA+GA,                               *0811,0
BESLAKU SHA+RYA+VA MU+SDALADA+GA                              *0811,0
NIMMA SERAGA MARI+ MA+SDIDIRI,                                *0811,0
LA+LI SHA+SDIRI                                               *0811,0
 A+STA A+SDIDIRI E+NO+ SHA+NGA@                               *0811,0
MARETEVU KASLEDA JANMADSHA+NGA                                *0811,0
JO+LI SHO+DA+GA A+DIRI KO+LU                                  *0811,0
 SHISDIDIRI NAMMA TO+LU                                       *0811,0
E+NU NIMMA MU+LU LO+KADA+GA?                                  *0811,0
NA+VU MARATE+V[U]/ADANA SHYA+NGA?                             *0811,0
AKKA-/TANGI-/MAGASLU-/TA+YI- SHASDEDA TA+YI                   *0811,0
```

TUMBIDE

2

MSE/TŨMBIDE SELE/SELEYA+GI *0801,006

TEREYE

A+SHA SVARGAVE ENDE NARAKA TEREYE. *0802,008

TOSDI

KOsTTIRI NIMMA TOsDI, *0811,006

TO+sTIYE+

NETTARADA O+KUsLIYE APPUGsE/[T]@D@O+STIYE+ *0802,007

TO+RISIDIRI

MAKKAsLA+STA TO+RISIDIRI SHA+RISIDIRI *0811,056

TO+RISIDIRI

TO+RISIDIRI MIsNUKU *0811,059

TO+LU

SHIsDIDIRI NAMMA TO+LU *0811,022

TAMAGA@

YA+KO+ KARUsNA BANTU TAMAGA@ *0811,031

DA+YI

KANNI-/GEsLAIT-/MAsDADI-/DA+YI- SA+KU/DA+YI *0811,026

DIKKELLA

DIKKELLA KU+sDI+DI GURUDE+VA+ *0401,014

DI+PADA+GA

MIsNU[KU]/MIsNUKU DI+PADA+GA *0811,060

DUsDI

NUsDIDU BE+SATTA+GA DUsDI/DUsDIDU SATTA+GA *0401,001

DUsDIDU

DUsDIDU SASNNA+DI NI+ GURUDE+VA+ *0401,016

DUsDIDU

NUsDIDU BE+SATTA+GA DUsDI/DUSDIDU SATTA+GA *0401,001

DUsDIDUsDIDU

NUsDIDU BE+SATTA+GA DUsDI/DUSDIDU SATTA+GA *0401,001

DHURANDHURI

SHAGALA+GALI DHURANDHURI JA+TRI *0811,038

DHYA+NA

MU+RU+ SHOTTINYA+GA NIMMA DHYA+NA *0811,046

NASDISIDIRI

NI+VU- TA+YITANA NASDISIDIRI *0811,009

NASDI+TIRALI

KA+RYA SUSU+TRA NAsDI+TIRALI *0811,036

NARAKA

SVARGA NARAKA YA+VUDU+ IRALI *0811,045

NARAKA

A+SHA SVARGAVE ENDE NARAKA TEREYE. *0802,008

NARAKADALLI

NARAKADALLI SVARGA *0802,000

NASUKINYA+GA

YA+ṼUDO+ SHOSA+ NASUKINYA+GA. *0811,008

A+VU

NA+VU BARATE+ṼINNA *0811,000

A+VU

NA+VU BARATE+ṼINNA NENAPIRALI TA+YI *0811,001

A+VU

NA+VU BARATE+ṼINNA *0811,033

A+VU

NA+VU BARATE+ṼINNA... *0811,062

A+VU

NA+VU SHARASNA BARALILLA SUMAGA@ *0811,032

A+VU

NA+ṼU BARATE+VINNA... *0811,004

A+VU

NA+VU MARATE+VIU]/ADANA SHYA+NGA? *0811,024

೬೫

# ಬೇಂದ್ರೆ ಕಾವ್ಯದ ಪ್ರತಿಮಾಸೃಷ್ಟಿ

ಶೇಷ ನವರತ್ನ

ಅಮೂರ್ತ ಭಾವನೆಗಳಿಗೆ ಅನುಭವಗಮ್ಯವಾದ ಆಕೃತಿಯನ್ನು ನೀಡುವ ಪ್ರತಿಮೆಗಳು ಕಾವ್ಯದಲ್ಲಿ ಕವಿಯು ಬಳಸುವ ಭಾಷೆಗೆ ಧ್ವನಿಪೂರ್ಣತೆಯನ್ನು ಒದಗಿಸುತ್ತವೆ. ಶಬ್ದಗಳ ಮೂಲಕ ಅಭಿವ್ಯಕ್ತವಾಗುವ ವಿಚಾರ ಅಥವಾ ಭಾವನೆಯು ಕೇವಲ ಅಮೂರ್ತವಾದರೆ, ನಿರಾಕಾರವಾದರೆ ಅಂಥ ಶಬ್ದಗಳು ಸಹೃದಯನಲ್ಲಿ ಅಪೇಕ್ಷಿತ ಪರಿಣಾಮವನ್ನುಂಟು ಮಾಡಲಾರವು. ಶಬ್ದಾರ್ಥವನ್ನು ಇಂದ್ರಿಯ ಸಂವೇದ್ಯವನ್ನಾಗಿ ಮಾಡುವದೇ [An appeal to the senses] ಪ್ರತಿ- ಮೆಯ ಮೂಲಕಾರ್ಯ. ಈ ಪ್ರತಿಮೆಗಳು ಕವಿ ಹಾಗೂ ಓದುಗನ ಮಧ್ಯದ ಅಂತರವನ್ನು ನಿವಾರಿಸಿ ಕವಿಯ ಕಲ್ಪನೆಯು ಓದುಗನ ಅನುಭವಕ್ಕೆ ಸಮೀಪಿಸು- ವಂತೆ ಮಾಡುತ್ತವೆ. ಅಂದರೆ ಕವಿ ಹೇಳಬಯಸುವದನ್ನು ಓದುಗ ಅರ್ಥಮಾಡಿ ಕೊಳ್ಳಲು ಶಕ್ತನಾಗುವಂತೆ ಈ ಪ್ರತಿಮೆಗಳು ಅವನಿಗೆ ನೇರವಾದ ಮಾರ್ಗದರ್ಶನ ಮಾಡುತ್ತವೆ.

ಅರ್ಥದ ಸ್ಫುರಣ, ಭಾವನೆಗಳ ಹಾಗೂ ವಿಚಾರದ ಆಕೃತೀಕರಣ ಪ್ರತಿಮೆಯ ನೇರವಾದ ಧ್ಯೇಯಗಳಾದರೆ ಅಷ್ಟೇ ಮಹತ್ವದ ಇನ್ನೆರಡು ಕಾರ್ಯಗಳನ್ನೂ ಈ ಪ್ರತಿಮೆಗಳು ನೆರವೇರಿಸುತ್ತವೆ. ಅವು ಓದುಗನಲ್ಲಿ ಪರಿಸರಕ್ಕೆ ಸಮರ್ಥವಾದ ಸಂವೇದನೆಯನ್ನು, ಅವನಲ್ಲಿ ಭಾವಕ್ಕೆ ತಕ್ಕುದಾದ ಪ್ರತಿಕ್ರಿಯೆಯನ್ನು ಜಾಗೃತ- ಗೊಳಿಸುವವಲ್ಲದೇ, ಕವಿಯ ಶಬ್ದಗಳಿಗೆ ಧ್ವನಿಪೂರ್ಣವಾದ ಅಭಿವ್ಯಂಜಕ ಶಕ್ತಿ ಯನ್ನು ನೀಡುತ್ತವೆ. ಹೀಗೆ ಕವಿ ಹಾಗೂ ಓದುಗನ ಮಧ್ಯದ ಔಪಾಧಿಕ ಸಂಬಂಧ ವನ್ನು [ಸಾಪೇಕ್ಷ] ದೃಢೀಕರಿಸುವ ಈ ಪ್ರತಿಮೆಗಳು ಗಿಡಕ್ಕೆ ಎಳೆಯ ಚಿಗುರು ಸ್ವಾಭಾವಿಕವೂ, ಆವಶ್ಯಕವೂ, ಸೌಂದರ್ಯವರ್ಧಕವೂ ಆಗಿರುವಂತೆ ಕಾವ್ಯದ ಸಾಫಲ್ಯಕ್ಕೆ ಅನಿವಾರ್ಯವಾದ, ಸಾರ್ಥಕವಾದ ಸಾಧನಗಳಾಗಿವೆ. ಇಲ್ಲದಿದ್ದರೆ ಶಬ್ದ ಗಳು ನಿರ್ಜೀವ ಅಕ್ಷರಸಮೂಹಗಳಾಗಿ, ವಾಚ್ಯವಾಗಿ ಬಿಡುವ ಸಾಧ್ಯತೆ ಇದೆ. ಕಾವ್ಯದಲ್ಲಿ ತಲೆದೋರಬಹುದಾದ ಸಂಭಾವ್ಯ ನೀರಸತೆಯನ್ನು ನಿರಾಕರಿಸುವ ಈ

ಪ್ರತಿಮೆಗಳು ಸಹೃದಯನ ಸಂವೇದನೆಯನ್ನು ಉದ್ದೀಪಿಸುತ್ತವೆ. ದೇವತ್ವದ ಅಮೂರ್ತ ಕಲ್ಪನೆಗಿಂತಲೂ ಒಂದು ವಿಶಿಷ್ಟ ಆಕಾರದ ಸುಂದರ ವಿಗ್ರಹವು ದೇವ-ತ್ವದ ಬಗೆಗಿನ ಅರಿವನ್ನು ಹೆಚ್ಚು ಪರಿಣಾಮಕಾರಿಯಾಗಿ ಮೂಡಿಸುವಂತೆ ಭಾವನೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಈ ಪ್ರತಿಮೆಗಳಿಗೆ 'ಶಬ್ದವಿಗ್ರಹ' ಗಳೆಂತಲೂ ಕರೆಯಬಹುದು.

ಮುಖ್ಯತಃ ಪ್ರತಿಮೆಗಳನ್ನು ಸಾಂಕೇತಿಕ ಪ್ರತಿಮೆಗಳು [Symbolic images] ಹಾಗೂ ಚಿತ್ರಪ್ರತಿಮೆಗಳು [Pictorial images] ಎಂದು ಎರಡು ರೀತಿಯಲ್ಲಿ ವಿಭಾಗಿಸಬಹುದು.

ಇವಲ್ಲದೇ ಮೂಲ ಪ್ರತಿಮೆಗಳು [Archetypal images], ಅಂದರೆ ಆಕಾಶ, ಸಾಗರ, ಸೂರ್ಯ, ವಾಯು ಮುಂತಾದ ಸನಾತನ ಪದಾರ್ಥಗಳು ಕಾಲ, ಹೃದಯ ಮುಂತಾದ ಅಮೂರ್ತಭಾವನೆಗಳನ್ನು ಸಾಂಕೇತಿಕವಾಗಿ ಚಿತ್ರಿ-ಸುತ್ತವೆ. ಉದಾಹರಣೆಗೆ ಕಾಲಸಮುದ್ರ, ಹೃದಯಾಕಾಶ, ಜ್ಞಾನಸೂರ್ಯ, ವಾಯುವಿನಂತೆ ವ್ಯಾಪ್ತವಾದ ಆತ್ಮ ಮುಂತಾದವುಗಳನ್ನು ವಿಶಿಷ್ಟವಾದ ಭವ್ಯತೆಯ ಹಾಗೂ ಔದಾತ್ಯದ ಭಾವನೆಯ ಹಿನ್ನೆಲೆಯಲ್ಲಿ ಸಾಂಕೇತಿಕ ಪ್ರತಿಮೆಗಳೆಂದೂ ಬಳಸಿಕೊಳ್ಳಬಹುದು.

ನಂತರ ಸ್ವಾಭಾವಿಕ ಸಂಕೇತಗಳ ಸ್ಥಾನ. ಈ ಸಂಕೇತಗಳು ಕವಿಯ ಅರ್ಥ ವ್ಯಾಪ್ತಿಯನ್ನು ಅತ್ಯಂತ ಕಿರಿದಾದ ಶಬ್ದವ್ಯಾಪ್ತಿಯಲ್ಲಿ ಹಿಡಿದಿಟ್ಟುಬಿಡುತ್ತವೆ. ಅಂದರೆ ಇಲ್ಲಿ ಕವಿಗೆ ಹೆಚ್ಚಿನ ಪದಗಳನ್ನು ನೀರಸವಾಗಿ, ವಾಚ್ಯವಾಗಿ ಇಡುವ ಆವಶ್ಯಕತೆಯೇ ಇಲ್ಲದಾಗುತ್ತದೆ. ಒಂದು ಸ್ವಾಭಾವಿಕವಾದ ಸಂಕೇತದ ಮೂಲಕ [Nutural symbol] ತಾನು ಹೇಳಬೇಕೆಂದಿರುವ ಗೂಢಾರ್ಥವನ್ನು, ಪ್ರಗಲ್ಭ ಪ್ರಸಂಗವನ್ನು, ವಿಶಾಲ ಭಾವನೆಯನ್ನು ಧ್ವನಿಸಿಬಿಡುತ್ತಾನೆ. ಉದಾ— ಕಾಲ-ವ್ಯಾಧನ ಕೈಯಲ್ಲಿ ಸಿಕ್ಕ ಜೀವ ಹಕ್ಕಿ. ಇಲ್ಲಿ ಕಾಲ ಹಾಗೂ ಜೀವ ಈ ಅಮೂರ್ತ ಭಾವನೆಗಳ ಹಿಂದೆ ಅತ್ಯಂತ ಗಂಭೀರವಾದ, ಭವ್ಯ ಅರ್ಥವ್ಯಾಪ್ತಿ ಇದೆ. ಕಾಲನ ಕೈಯ್ಯಲ್ಲಿ ವಿವಶನಾಗಿ ಸಿಕ್ಕ ಮಾನವಜೀವದ, ಪ್ರಾಣಿಜಾತದ ಅಸಹಾಯಕತೆ-ಯನ್ನು ವ್ಯಾಧನ ಕೈಯ್ಯಲ್ಲಿ ಸಿಕ್ಕ ಹಕ್ಕಿಯ ಸಂಕೇತದ ಮೂಲಕ ಸಾಂಕೇತಿಕವಾಗಿ ಹೇಳಲಾಗಿದೆ. ಹೀಗೆ ಪ್ರತಿಮೆಯೇ ಒಂದು ವಿಶಿಷ್ಟ ಹಿನ್ನೆಲೆಯಲ್ಲಿ ಸಂಕೇತವಾಗಿ ಬಳಸಲ್ಪಡುತ್ತದೆ. ಇವಕ್ಕೆ ಸಾಂಕೇತಿಕ ಪ್ರತಿಮೆಗಳೆನ್ನುತ್ತಾರೆ. ಪ್ರತಿಮೆ ಹಾಗೂ ಸಂಕೇತಗಳ ಸೂಕ್ಷ್ಮ ವ್ಯತ್ಯಾಸವೇನು ಎಂದು ಅರ್ಥಹೀನವಾದ ತಾಂತ್ರಿಕ ತೊಡ-ಕನ್ನುಂಟು ಮಾಡುವ ಪ್ರಶ್ನೆ ಕೇಳುವದಕ್ಕಿಂತ ಪ್ರತಿಮೆಯು ಯಾವಾಗ ಸಂಕೇತ-ವೆಂದೆನಿಸುವದು? ಎಂದು ಕೇಳುವದು ಉಚಿತವೆನಿಸುತ್ತದೆ. ಅಂದರೆ ಒಂದು ವಿಶಿಷ್ಟ ಪರಿಸರದ ಹಿನ್ನೆಲೆಯಲ್ಲಿ ಪ್ರತಿಮೆಯನ್ನೇ ಕವಿ ತನ್ನ ಗಂಭೀರವಾದ ಭಾವನೆ

ಯನ್ನು ಧ್ವನಿಸಲಿಕ್ಕೆ ಸಂಕೇತವನ್ನಾಗಿ ರೂಪಿಸಿ ಬಳಸಿಕೊಳ್ಳುತ್ತಾನೆ—ಎಂದು ಹೇಳಬಹುದು. ವಾಲ್ಮೀಕಿಯ ರಾಮಾಯಣದ ಪ್ರಾರಂಭದ ಪ್ರಸಂಗದಲ್ಲಿ ಬರುವ ಕ್ರೌಂಚಮಿಥುನದ ಕಥೆಯ ದಾರುಣ ವ್ಯಥೆ ಮುಂಬರುವ ರಾಮಾಯಣದ ವಿಸ್ತಾರವಾದ ಕಥೆಯಲ್ಲಿಯ ಕೇಂದ್ರ ಭಾವವಾದ ಕರುಣವನ್ನು ಸಾಂಕೇತಿಕವಾಗಿ ಧ್ವನಿಸಿ-ಬಿಡುತ್ತದೆ. 'ಪಡುವಣ ಶೈಲ ವಿಪುಲಸ್ತಂಭ ದೀಪಿಕೆಯಂತೆ ರವಿ ಮೆರೆದ' ಎನ್ನುವ ಭೀಷ್ಮಾವಸಾನ ಸಂದರ್ಭದಲ್ಲಿ ಕವಿ ಕುಮಾರವ್ಯಾಸ-ಬಳಸುವ ಸ್ತಂಭದೀಪಿಕೆಯ ಪ್ರತಿಮೆಯು ಭೀಷ್ಮನ ವ್ಯಕ್ತಿತ್ವದ ಔನ್ನತ್ಯವನ್ನು ಸಾಂಕೇತಿಕವಾಗಿ ಹೇಳಿಬಿಡು-ತ್ತದೆ. ಡಾಂಟೆ ಕವಿಯ 'ಡಿವೈನ್ ಕಾಮಿಡಿಯಲ್ಲಿ' ಬರುವ [ಮೊದಲ ಕ್ಯಾಂಟೊವಿನಲ್ಲಿ] ಬರುವ ಪ್ರಾಣಿಗಳು [Beasts] [A shewolf – ಹೆಣ್ಣುತೋಳ] [A Lion – ಸಿಂಹ], [A Leopard – ಚಿರತೆ] ಅನುಕ್ರಮವಾಗಿ ದುರಾಶೆ, ಅಹಂಕಾರ ಹಾಗೂ ಭ್ರಷ್ಟತೆಯ ಸಂಕೇತಗಳಾಗಿ ಮುಂಬರುವ ನಾರಕೀಯ ಜೀವನದ ದುರಂತವನ್ನು ಧ್ವನಿಸುತ್ತವೆ. ಶೇಕ್ಸಪಿಯರ್‌ನ ಸಾಂಕೇತಿಕ ಪ್ರತಿಮಾ ಶಕ್ತಿಯಂತೂ ಲೋಕೋತ್ತರವಾಗಿದೆ. T. S. Eliotನ ['Waste-Land'] ಮರುಭೂಮಿಯ ಪ್ರತಿಮೆಯು ಯುದ್ಧೋತ್ತರಕಾಲೀನ ಪಾಶ್ಚಾತ್ಯಜೀವನದ ದಯನೀಯ ಪತನವನ್ನು, ಅವರ ಮಾನಸಿಕ ನೈರಾಶ್ಯವನ್ನು, ಶಾಂತಿಗಾಗಿ ಹಂಬಲಿಸುವ ಹಪಾಪಿತನವನ್ನು ಸಾಂಕೇತಿಕವಾಗಿ ಚಿತ್ರಿಸುತ್ತದೆ. ಹೀಗೆ ಸಂಕೇತಗಳು ಅರ್ಥ-ವ್ಯಾಪ್ತಿಯನ್ನು, ವಿಚಾರಪ್ರಾಗಲ್ಭ್ಯವನ್ನು, ಭಾವನೆಯ ತೀವ್ರತೆಯನ್ನು, ಸಂವೇದನೆಯ ಉತ್ಕಟತೆಯನ್ನು ಅತ್ಯಂತ ಕಿರಿದಾದ ಶಬ್ದಾವಕಾಶದಲ್ಲಿ ಅತ್ಯಂತ ಸಬಲವಾಗಿ ಧ್ವನಿಸಲು ಸಹಾಯಕವಾಗುವದರಿಂದ ಪ್ರಾಯಶಃ ಜಗತ್ತಿನ ಸಾಹಿತ್ಯಸಂಸಾ-ರದ ಬಹುತೇಕ ಸಮರ್ಥ ಕವಿಗಳೆಲ್ಲ ಇದನ್ನೊಂದು ಪ್ರಬಲ ಸಾಧನವೆಂದು ಸ್ವೀಕರಿಸಿ ಬಳಸಿದ್ದಾರೆ.

ಇವುಗಳಲ್ಲದೇ ಇನ್ನೊಂದು ತರದ ವಿಶೇಷ ಪ್ರತಿಮೆಯಾದ [Heroic Image] ವೀರಪ್ರತಿಮೆಯು ಸ್ವರೂಪದಲ್ಲಿ ಕೇವಲ ಭಾವಾತ್ಮಕವಾಗಿರುತ್ತದೆ. ಉದಾಹರಣೆಗೆ ಬೇಂದ್ರೆಯವರ ಅನುವಾದಿತ ಸುಂದರ ಕವನವಾದ "ಮಹಾ-ಮರಣ"ದ ಚರಣಗಳಲ್ಲಿ ದೊರೆವ—

> " ಮುಂಜಾವಿನ ಕೆಂಜ ಬೆಳಕಿಗೆ
> ಕೆಂಪು ಕಡಿಮೆ ಬಿದ್ದಿದ್ದ್ರ
> ಥಳೀ ಹಾಕ್ರಿ ನಮ್ಮ ರಕ್ತದ ಹನಿ "

ಎಂಬಲ್ಲಿ ಕೆಂಜ ಬೆಳಕು, ಕೆಂಪು ಮುಂತಾದವುಗಳು ಭೌತಿಕವಾಗಿ [Colour-images] ವರ್ಣಪ್ರತಿಮೆಗಳಾದರೂ ಈ ದೃಶ್ಯಮಾನವಾದ ವರ್ಣಪ್ರತಿಮೆಗಳು

ಹಾಗೂ ರಕ್ತವು ಒಂದು ಉಜ್ವಲವಾದ ರಕ್ತಾರ್ಪಣದ ಉದ್ವೇಲಿತ ಭಾವನೆಗೆ,
ಅದರ ಸರ್ವೋತ್ತಮವಾದ ಸಶಕ್ತ ಅಭಿವ್ಯಕ್ತಿಗೆ ಕೇವಲ ನಿಮಿತ್ತಗಳಾಗಿ ಬರು-
ತ್ತವೆ. ಒಂದು ರೀತಿಯಲ್ಲಿ ಹೃದಯವನ್ನೇ ಝುಂಕೃತಗೊಳಿಸುವ ವಿಚಿತ್ರ ಭಾವ-
ನೆಯು ಸಮಗ್ರ ಪರಿಸರವನ್ನೂ ಆವರಿಸಿಬಿಡುತ್ತದೆ.

ಚಿತ್ರ ಪ್ರತಿಮೆಗಳನ್ನು ಹೀಗೆ ವರ್ಗೀಕರಿಸಬಹುದು. ಧ್ವನಿಪ್ರತಿಮೆಗಳು
[Images of Sound], ದೃಶ್ಯ ಪ್ರತಿಮೆಗಳು [Images of Sight],
ರಸಪ್ರತಿಮೆಗಳು [Images of taste], ಘ್ರಾಣ ಪ್ರತಿಮೆಗಳು [Images
of Smell], ಸ್ಪರ್ಶ ಪ್ರತಿಮೆಗಳು [Images of touch], ಚಲನ ಪ್ರತಿಮೆ
ಗಳು [Images of Movement or Kinaesthetic images].
ಹೀಗೆ ಅಮೂರ್ತ ಭಾವನೆಗಳು, ಹಾಗೂ ನಿರಾಕಾರ ವಿಚಾರಗಳು ಪ್ರತಿಮೆಗಳ
ಮೂಲಕ ಒಂದು ನಿರ್ದಿಷ್ಟ ಆಕೃತಿಯನ್ನು ಪಡೆದು ಕವಿಯ ಅಭಿವ್ಯಕ್ತಿಯನ್ನು
ಸಾರ್ಥಕಗೊಳಿಸುತ್ತವೆ. ಶಬ್ದಗಳಲ್ಲಿ ನಿಹಿತವಾದ ಅರ್ಥವು ಇಂದ್ರಿಯಾನುಭವಕ್ಕೆ
ಪಕ್ಕಾಗುತ್ತದೆ. ಅನುಭವಗಮ್ಯವಾಗುತ್ತದೆ.

ಇಷ್ಟು ಪೂರಕ ಹಿನ್ನೆಲೆಯೊಂದು ದೊರೆಯದಿದ್ದರೆ ನಾವು ಬೇಂದ್ರೆಯವರ
ಕಾವ್ಯಸೃಷ್ಟಿಯಲ್ಲಿ ನಿರ್ಮಾಣವಾದ ಪ್ರತಿಮಾಸಂವಿಧಾನವನ್ನು ಅರ್ಥಮಾಡಿಕೊಳ್ಳು
ವದು ದುಸ್ತರವಾಗುತ್ತದೆ. ಬೇಂದ್ರೆ ಕಾವ್ಯದ ಮೂಲಗುಣ ಅದರ ಧ್ವನಿಪೂರ್ಣ
ವಾದ ಅಭಿವ್ಯಂಜಕ ಶಕ್ತಿ. ಏಕಕಾಲಕ್ಕೆ ಬೇಂದ್ರೆಯವರ ಕಾವ್ಯದಲ್ಲಿ ಭಾವ ಹಾಗೂ
ಬುದ್ಧಿಗಳ ಅಪರೂಪವಾದ, ಆದರೆ ಬೇಂದ್ರೆಯವರಿಗೆ ಸ್ವಾಭಾವಿಕ ಗುಣವಾದ
ಮೇಳನ ಉಂಟಾಗುತ್ತದೆ. ಬೇಂದ್ರೆ ಪ್ರತಿಭೆಯ ಸ್ವೋಪಜ್ಞತೆಯಷ್ಟೇ [Origi-
nality] ಪ್ರಗಾಢವಾದ ಅವರ ವಿಷಯ ಗ್ರಹಣ ಸಾಮರ್ಥ್ಯವು [Percept-
iveness] ಅವರ ಕಾವ್ಯವನ್ನು ಅರಿಯಬಯಸುವ ಸಹೃದಯನಿಗೆ ಪ್ರಬಲವಾದ
ಆಹ್ವಾನವನ್ನೊಡ್ಡುತ್ತವೆ. ಪ್ರತಿಭೋದ್ದೀಪಿತವಾದ ಅವರ ಕಾವ್ಯದಲ್ಲಿ ಜೀವನದ
ಸಮಗ್ರತೆಯನ್ನು ಅತ್ಯಂತ ಆಸಕ್ತಿಯಿಂದ ಅನುಭವಿಸಿ ನಿರೂಪಿಸಿದ ಜೀವನಾನು-
ಭವವೂ, ಅದಕ್ಕೆ ಜತೆಯಾದ ವಿಶ್ವದ ಪ್ರಜ್ಞಾನ ಪರಂಪರೆಯ ಗಾಢಾವಲೋಕನ
ದಿಂದ ಒಡಮೂಡಿದ ತಾತ್ತ್ವಿಕ ಅಭಿವ್ಯಕ್ತಿಯೂ ಅಂತಸ್ಸ್ಯೂತವಾಗಿರುವದರಿಂದ
ಸ್ವಾಭಾವಿಕವಾಗಿ ಅವರ ಕಾವ್ಯಕ್ಕೆ ಆಗರ್ಭವಾದ ಅರ್ಥಶ್ರೀಮಂತಿಕೆ ಪ್ರಾಪ್ತವಾಗಿದೆ.
ಇಷ್ಟು ಸಾಂದ್ರವಾದ ಅನುಭವ ವೈಪುಲ್ಯವನ್ನು, ಉತ್ಕಟವಾದ ಭಾವಾನು-
ಶೀಲನವನ್ನು, ಗಾಢವಾದ ಸಂಸ್ಕಾರವಿಶೇಷವನ್ನು, ವಿಶಾಲವಾದ ಅಧ್ಯಯನ
ಶ್ರೀಮಂತಿಕೆಯನ್ನು ಏಕಕಾಲಕ್ಕೆ ಶಬ್ದಗಳಲ್ಲಿ ಹೊರವಡಿಸುವದು ಅತ್ಯಂತ ಕಷ್ಟ-
ತಮವಾದ ಕಾರ್ಯ. ಆದರೆ ಇಂಥ ಸಬಲ ಅಭಿವ್ಯಕ್ತಿಗೆ ನೆರವಾಗಬಲ್ಲ ಪ್ರತಿಭಾ-
ವಿಶೇಷವು ಕವಿ ಬೇಂದ್ರೆಯವರಲ್ಲಿ ನೈಸರ್ಗಿಕವಾಗಿರುವದರಿಂದ ಅವರು ಇಷ್ಟು
ಅರ್ಥಗರ್ಭಿತವಾದ, ಘನವಂತವಾದ ಕಾವ್ಯಸೃಷ್ಟಿಯನ್ನು ಮಾಡಲು ಸಮರ್ಥ-

ರಾಗಿದ್ದಾರೆಂದು ಹೇಳಬಹುದು.

ಬೇಂದ್ರೆ ಕಾವ್ಯವು ವಿನೂತನ ಪ್ರತಿಮಾ ಸೃಷ್ಟಿಗಾಗಿ ಪ್ರಖ್ಯಾತವಾಗಿದೆ. ಒಂದು ಮಹತ್ವದ ಅಂಶವೆಂದರೆ ಪ್ರತಿಮೆಗಳು ಅರ್ಥವನ್ನು ಇಂದ್ರಿಯವೇದ್ಯ-ವನ್ನಾಗಿ ಮಾಡುತ್ತವೆ. ಎಂದರೆ ಅನುಭವಗಮ್ಯವನ್ನಾಗಿಸುತ್ತವೆ ಎಂದು ಹೇಳಿ-ದೆವು. ಆದರೆ ಬೇಂದ್ರೆ ಕಾವ್ಯದಲ್ಲಿ ಭಾವನೆಗಳನ್ನು ಅನುಭವಗಮ್ಯವಾಗಿಸುವದರ ಜತೆಗೆ ಕೆಲವು ಆಧ್ಯಾತ್ಮಿಕ ರಹಸ್ಯಗಳನ್ನು ಅನುಭಾವಗಮ್ಯವಾಗಿಸುವ, ಅಂದರೆ ಕೇವಲ ಹೃದಯಸಂವೇದ್ಯವನ್ನಾಗಿ ಮಾಡಬಲ್ಲ ಅತೀಂದ್ರಿಯ ಪ್ರತಿಮೆಗಳೂ ಇವೆ. ಇವುಗಳನ್ನು ಸಾಕ್ಷಿಕ ಪ್ರತಿಮೆಗಳು ಹಾಗೂ ನಾದಪ್ರತಿಮೆಗಳೆಂದು ವರ್ಗೀಕರಿಸ-ಬಹುದು. ಇಲ್ಲಿ ಅರ್ಥವು ಪಂಚೇಂದ್ರಿಯಾನುಭವಗಮ್ಯವಾಗುವದರ ಜತೆಗೆ ಮನುಷ್ಯನ ಮೂಲಪ್ರಜ್ಞೆಗೆ, ಸಾಕ್ಷಿಗೆ, ಅಂತಃಕರಣಕ್ಕೆ [Conscience] ನೇರ ವಾಗಿ ಸ್ಪರ್ಶಿಸಿಬಿಡುತ್ತದೆ. ಅಲ್ಲಿಯೇ ಅಂತಃಕರಣವನ್ನು ಅರಳಿಸಿಬಿಡುತ್ತವೆ. ಇದೊಂದು ಬಹುಶಃ ವಿಶ್ವಸಾಹಿತ್ಯದಲ್ಲಿಯೇ ಅಪರೂಪವಾದ ಗುಣವಿಶೇಷ ಎನ್ನ-ಬಹುದು. ಉದಾಹರಣೆಗೆ ನಾಕುತಂತಿಯಲ್ಲಿಯ 'ಕಣ್ಣರಳು' ಎಂಬ ಕವಿತೆಯನ್ನು ಅವಲೋಕಿಸಬಹುದು. ಬೇಂದ್ರೆಯವರೇ ಹೇಳುವಂತೆ ಇದೊಂದು ನಿರುಕ್ತದ ಜಾತಿಯ ಕವನ. ಕಲ್ಲು ಅರಳಿದರೆ–ದೇವರು, ಮಣ್ಣು ಅರಳಿದರೆ–ಹತ್ತಿ, ನೀರು ಅರಳಿದರೆ–ತಾವರೆ, ದಿಕ್ಕರಳಿದರೆ–ಬೆಳಕು, ಮನ ಅರಳಿದರೆ–ಮುಕ್ತಿ, ಜೀವ ಅರ-ಳಿದರೆ ಜೀವಾಳ, ಮಾತೃಸ್ತನ ಅರಳಿದರೆ–ಮಗುವಿಗೆ ಹಾಲು ಹೀಗೆ ಕಾರ್ಯಕಾರಣ ಮಾಲೆಯೊಂದರಲ್ಲಿ ಬರುವ 'ಅರಳುವ' ಕ್ರಿಯೆಯು, ಅಂದರೆ ಹೂವು ಅರಳುವ ಕ್ರಿಯೆಯು ಲೌಕಿಕ ಭೂಮಿಕೆಯಲ್ಲಿ ಹೂವಿನ ರೂಪು ಅಥವಾ ವರ್ಣಾನುಗುಣ-ವಾಗಿ ದೃಶ್ಯಪ್ರತಿಮೆಯೋ ಅಥವಾ ಚಲನಪ್ರತಿಮೆಯೋ ಆಗಬಹುದೆನಿಸಿದರೂ ಅನುಭಾವದ ಭೂಮಿಕೆಯಲ್ಲಿ ಈ ಅರಳುವಿಕೆಗೊಂದು ವಿಶಿಷ್ಟ ಅರ್ಥ ನೀಡಲಾಗಿದೆ. ಅರಳುವಿಕೆಯು ಇಲ್ಲಿ ಜೀವನದ ವಿಕಸನವಾಗಿ, ಬೆಳಕಿನ ಸಂಕೇತವಾಗಿ, ಆಹ್ಲಾದದ, ಆನಂದದ ಕ್ರಿಯೆಯಾಗಿ ನಿರೂಪಿತವಾಗಿದೆ.

ಗರ್ಭಗುಡಿಯ ದೈವ। ದೀಪಕ್ಕ ಕಣ್ಣರಳಿ
ಹೊರಳಿ ನೋಡ್ಯಾವ ಒಳಗರಳಿ। ಕತ್ತಲೆಗು
ಹೌದೇನೊ, ಕಲ್ಲಿಗು ಕಣ್ಣು ಇರತಾವು ||

ಶುದ್ಧ ಬ್ರಹ್ಮವು ಅರಳಿ। ಶಬಲ ಬ್ರಹ್ಮದ ಸರಳಿ
ಸರಿಗಮಪಧನಿ ಅಂದಾವ। ಧನಿಯರಳಿ
ಅಂತರಂಗವೆ ಅರಳ್ಯಾವ। ಅರುಳರಳಿ || [1]

---

1. ನಾಕುತಂತಿ, ಪುಟ ೬೪.

ಹೀಗೆ 'ಅರಳುವಿಕೆ'ಯ ಭೌತಿಕ ಕ್ರಿಯೆಯು ಅಂತರಂಗದ ಅರಳುವಿಕೆಯ ಅಭೌತಿಕ ಕ್ರಿಯೆಗೆ ನೆಲೆಯಾಗುತ್ತದೆ. ಗರ್ಭಗುಡಿಯ ದೀಪದ ಅರಳುವಿಕೆ ಏಕಕಾಲಕ್ಕೆ ಹೊರಒಳಗನ್ನು ಪ್ರಕಾಶೀಕರಿಸುತ್ತದೆ. ಒಳಗಿನ ವಿಗ್ರಹದ ಕಲ್ಲರಳಿ ದೇವರಾಗುತ್ತದೆ. 'ಕಲ್ಲಿಗು ಕಣ್ಣು ಇರತಾವು' ಎಂಬಲ್ಲಿಯ ಅರ್ಥವಿಶೇಷವು ಅನುಭಾವಗಮ್ಯವಾಗಿದೆ. ಹೀಗೆ ಅರಳುವ ಕ್ರಿಯೆಯೇ ಇಲ್ಲಿ ಒಂದು ಪ್ರತಿಮೆಯಾಗಿ ಅದು ಕವಿ ಕಂಡ ದಾರ್ಶನಿಕ ಸತ್ಯಕ್ಕೆ ಧ್ವನಿಯಾಗುತ್ತದೆ. ಹೀಗೆಯೇ 'ಶ್ರೀಮಾತಾ' ಕವನ ಸಂಕಲನದಲ್ಲಿ ಬರುವ 'ನೆರಳು' ಎಂಬ ಕವಿತೆಯಲ್ಲಿಯ 'ನೆರಳಿನ' ಪ್ರತಿಮೆಯು ಅಂತರಂಗದಲ್ಲಿ ವ್ಯಾಪ್ತವಾದ 'ಅವಿದ್ಯಾ' ತತ್ತ್ವವನ್ನು ಅದ್ಭುತವಾಗಿ ಪ್ರತಿಬಿಂಬಿಸುತ್ತದೆ. ನೆರಳಿನ ಚಲನಕ್ರಿಯೆಯ ಸೂಕ್ಷ್ಮತೆಯನ್ನು ಶಬ್ದಗಳಲ್ಲಿ ಹಿಡಿದಿಟ್ಟ ಬೇಂದ್ರೆಯವರು ಈ ನೆರಳಿನ ಮೂಲಕ ಮಾನವಜೀವನದ ಶಾಶ್ವತತಥ್ಯವೊಂದನ್ನು ರೂಪಿಸಿಬಿಡುತ್ತಾರೆ.

ಹಿಂದ ಸರೀಬೇಕಾದ ನೆಳ್ಳು
ಮುಂದ ಮುಂದಃ ಅಡ್ಡ ಬಂದ್ರ ಕಷ್ಟ [1]

ಎಂಬಲ್ಲಿ ನೆರಳಿನ ಭೌತಿಕಚಲನೆಯೊಂದಿಗೆ ಏಕಕಾಲಕ್ಕೆ ಅವಿದ್ಯೆಯ ನಿರ್ಗಮನವಾಗುವ ಬದಲು ಅದರ ಆಕ್ರಮಣವಾದರೆ ಏನು ಗತಿ ಎಂಬ ಅವ್ಯಕ್ತ ಭೀತಿಯು ವ್ಯಕ್ತವಾಗುತ್ತದೆ. ಹೀಗೆ ನೆರಳು ಮೊದಲ ಹಂತದಲ್ಲಿ ಚಲನ ಪ್ರತಿಮೆಯಾಗಿ [ Image of Movement or Kinaesthetic image ] ನಂತರ ಕವಿಯ ಸಹಜಗುಣವಾದ, ಅನುಭಾವದ ಸ್ಪರ್ಶ ತಗುಲಿದಾಗ ಸಾತ್ವಿಕ ಪ್ರತಿಮೆಯಾಗುತ್ತದೆ. ಭೌತಿಕ ಸತ್ಯವೊಂದರ ಮೂಲಕ ಅನುಭಾವದ ಸತ್ಯದ ಸಾಕ್ಷಾತ್ಕಾರವಾಗುತ್ತದೆ.

ಹೀಗೆ ಬೇಂದ್ರೆಯವರ ಕಾವ್ಯದಲ್ಲಿ ಪ್ರತಿಮೆಗಳು ಏಕಕಾಲಕ್ಕೆ ಭೌತಿಕ ಅನುಭವವನ್ನೂ, ಆತ್ಮಿಕ ಅನುಭಾವವನ್ನೂ ಸಹೃದಯನಲ್ಲಿ ಉಂಟು ಮಾಡುತ್ತವೆ. ಹಾಗೆಂದು ಬೇಂದ್ರೆ ಎಲ್ಲ ಸಂದರ್ಭಗಳಲ್ಲೂ ಇಂಥ ದ್ವಿಮುಖ ಕ್ರಿಯೆಯನ್ನೇ ಪ್ರತಿಮೆಗಳ ಮೂಲಕ ಸಂಯೋಜಿಸುತ್ತಾರೆ ಎಂದಲ್ಲ. ಹೀಗೆ ಮಾಡುವದರಿಂದ ಒಂದು ತೊಂದರೆಯೂ ಉಂಟು. ಏಕೆಂದರೆ ಪ್ರತಿಯೊಂದು ಸಂದರ್ಭದಲ್ಲಿ ಆಧ್ಯಾತ್ಮಿಕ ಅರ್ಥದಿಂದಲೇ ಪ್ರತಿಮೆಗಳು ಆರೂಢವಾದರೆ ಅವುಗಳ ಮೂಲಭೌತಿಕತೆಗೇ ಬಾಧೆ ಬರುತ್ತದೆ. ಹೀಗಾಗಿ ಅರ್ಥವು ತನ್ನ ಕಾವು ಕಳೆದುಕೊಂಡು, ಭಾವನೆಯು ಆತ್ಮೀಯತೆಯನ್ನು ಕಳೆದುಕೊಂಡು ಕೇವಲ ಅಸ್ಪಷ್ಟವಾದ ಬಳಸುದಾರಿಯನ್ನು

1. ಶ್ರೀಮಾತಾ, ಪುಟ ೭೨.

ಹಿಡಿದು ಓದುಗನ ರಸಾನುಭವಕ್ಕೆ, ಅರ್ಥಾನುಸಂಧಾನಕ್ಕೆ ಧಕ್ಕೆ ತರುತ್ತದೆ. ಈ ಮೊದಲೇ ಹೇಳಿದಂತೆ ಇಂಥ ತಾಂತ್ರಿಕ ದೋಷಗಳನ್ನು ಸ್ವಾಭಾವಿಕವಾಗಿ ನಿವಾರಿಸ ಬಲ್ಲ ಪ್ರತಿಭಾಚಿಕಿತ್ಸಕಗುಣ ಬೇಂದ್ರೆಯವರಿಗೆ ದೈವದತ್ತವಾಗಿ ಲಭ್ಯವಾಗಿದೆ. ಹೀಗಾಗಿ ಅವರಲ್ಲಿ ಉತ್ಕಟ ಭಾವಾವಿಷ್ಟತೆಗೆ ಸಮಸಮನಾದ ಔಚಿತ್ಯಪ್ರಜ್ಞೆಯೂ ಕಾವ್ಯಕರ್ಮದಲ್ಲಿ ಸಕ್ರಿಯವಾಗಿ ಆಸಕ್ತವಾಗಿರುವದರಿಂದ ಯಾವ ಪ್ರತಿಮೆಗಳ ಮೂಲಕ ಏನನ್ನು ಸಾಧಿಸಬೇಕು ಎಂಬುದರ ನಿಶ್ಚಿತ ಅರಿವು ಬೇಂದ್ರೆಯವರಲ್ಲಿ ಸದಾಕಾಲ ಜಾಗೃತವಾಗಿದೆ. ಈಗ ಅವರ ಪ್ರತಿಮೆಗಳ ಸಾರ್ಥಕತೆಯನ್ನು ಸೋದಾಹರಣವಾಗಿ ಸಮರ್ಥಿಸಲಾಗಿದೆ.

ರತ್ನದ ರಸದಾ ಕಾರಂಜಿಯೂ
  ಪುಟಪುಟನೆ ಪುಟಿದೂ
ತಾನೇ–ಪುಟಪುಟನೆ ಪುಟಿದು

ಮುಘ ಮುಘಿಸುವಾ ಮುಗಿದ ಮೊಗ್ಗೀ
  ಪಟಪಟನೆ ಒಡೆದು
ತಾನೇ ಪಟಪಟನೆ ಒಡೆದು[1]

[ ಬೆಳಗು — ಕವನದಿಂದ ]

ರತ್ನದ ರಸ ಒಂದು ಅಮೂರ್ತಕಲ್ಪನೆ [ Abstract ]. ಬೆಳಕಿನ ಲಾಲಿಮ ವರ್ಣವು ಕಾರಂಜಿಯಂತೆ ಪುಟಪುಟನೆ ಪುಟಿಯುತ್ತಿದೆ. ಚಲನಪ್ರತಿ–ಮೆಯು ಎಷ್ಟು ಪ್ರಬಲವಾಗಿದೆ ನೋಡಿ. ಕಾರಂಜಿ ಪುಟಿದು ನೀರು ಹತ್ತಾರು ಕಡೆಗೆ ಹೊಮ್ಮುವ ಕ್ರಿಯೆಯ ತೀವ್ರತೆಯನ್ನು [Quickness] ಕಲ್ಪಿಸಿಕೊಂಡರೆ ಪೂರ್ವದ ಬಾನಲ್ಲಿ ಅರುಣವರ್ಣವು ಅಷ್ಟೇ ತೀವ್ರವಾಗಿ ಸಂವ್ಯಾಪ್ತವಾಗುವ ಗತಿಯ ತೀವ್ರತೆಯನ್ನು ಅರಿಯಬಹುದು. ಕಾರಂಜಿಯು ಪುಟಿಯುವ ಪ್ರತಿಮೆ ಕ್ರಿಯೆಯ ತೀವ್ರತೆಗೆ ಸಹಾಯಕವಾದಂತೆ ಭಾವನೆಯ ಉದ್ದೀಪನೆಗೂ ನೆರವಾಗುತ್ತದೆ. ಪುಟಿಯುವದು ಯಾವಾಗ? ಆನಂದದಿಂದ ಪುಲಕಿತವಾದಾಗ, ಸಂತೋಷದಿಂದ ಸಂಭ್ರಮಿತವಾದಾಗ. ಬೆಳಗಿನ ಪ್ರಹ್ಲಾದಿತ ಪರಿಸರದಲ್ಲಿ ಬಾನ ಹೃದಯಕ್ಕೂ ಬೆಡಗಿನ ಸಡಗರ ಉಂಟಾಗಿದೆ. ಅಂತೆಯೇ ನಭದ ಎದೆಯಲ್ಲಿ ಉಂಟಾದ ಅಮಿತ ಹರ್ಷದ ಪ್ರತಿಕ್ರಿಯೆಯೇ ರತ್ನದ ರಸದ [ಅರುಣಚ್ಛಾಯೆ] ಪುಟಿಯುವಿಕೆಯಲ್ಲಿ ಅಭಿವ್ಯಕ್ತವಾಗಿದೆ. ಹೀಗೆ ಮೂರ್ತ ಪ್ರತಿಮೆಯೊಂದರ ಮೂಲಕ ಅಮೂರ್ತಭಾವನೆಯ ಸಶಕ್ತ ಅಭಿವ್ಯಕ್ತಿ ಬೇಂದ್ರೆಯವರ ಕಾವ್ಯಕೃಷಿಯ ದೊಡ್ಡ ಹುಟ್ಟುವಳಿ. ಪಟ–

1. ಗರಿ, ಪುಟ ೧.

ಪಟನೆ ಒಡೆಯುವ ಮೊಗ್ಗೆಯೂ, ತೀವ್ರವಾಗಿ ಕಿರಣಗಳನ್ನು ಪಸರಿಸಿ ವಿಕಸಿಸುವ ಬಾಲರವಿಯೂ ವಿಕಸನದ ತೀವ್ರಕ್ರಿಯೆಯನ್ನು ಸಮಾನವಾಗಿ ಪ್ರತಿನಿಧಿಸುತ್ತಾರೆ. 'ಪುಟಪುಟನೆ ಪುಟಿ', 'ಪಟಪಟನೆ ಒಡೆ' ಎಂಬಲ್ಲಿಯ ಶಬ್ದಗಳು ಸಮರ್ಥವಾದ ಧ್ವನಿ ಪ್ರತಿಮೆಗಳೂ ಆಗಬಹುದು. ಪುಟಿಯುವಿಕೆಯ ಆ ಶಬ್ದ, ಒಡೆಯುವಿಕೆಯ ಆ ಸಪ್ಪಳ ನೇರವಾಗಿ ಶ್ರವಣಗಮ್ಯವಾಗುತ್ತವೆ. ಹೀಗೆ ಒಂದೇ ನುಡಿಯಲ್ಲಿ ಚಲನ, ದೃಶ್ಯ ಹಾಗೂ ಧ್ವನಿಪ್ರತಿಮೆಗಳು ಹೇಗೆ ಏಕಸಮಯದಲ್ಲಿ ಅರ್ಥಪೂರ್ಣವಾಗಿ ಸಂಯೋಜಿತವಾಗಿವೆ ಎಂಬುದನ್ನು ಅರಿತರೆ ಬೇಂದ್ರೆ ಕಾವ್ಯದ ಘನವಂತಿಕೆಯ ಅರಿವು ಮೂಡುತ್ತದೆ.

> ಮೊದಲಗಿತ್ತಿಯಂತೆ ಮೆರೆಯುವಿಯೇ ತಾಯಿ |
> ಮೊದಲಗಿತ್ತಿಯಂತೆ ಮೆರೆಯುತಿಹೆ || [1]
>
> [ ಮೊದಲಗಿತ್ತಿ ]

ಪಾಶವೀಶಕ್ತಿಗಳ ದೌರ್ಜನ್ಯದ ಅಕಾಲಕ್ರೌರ್ಯಕ್ಕೆ ಈಡಾಗಿ ರಕ್ತಾಭಿಷಿಕ್ತವಾದ ದೇಹ ಹೊತ್ತು ಬಳಲುವ ಭೂಮಿ(ತಾಯಿ)ಯ ಕನಸು – ನನಸುಗಳ ಅಂತರವನ್ನು 'ಮೊದಲಗಿತ್ತಿ'ಯ ಪ್ರತಿಮೆ ಎಷ್ಟು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿದೆ ನೋಡಿ.

> ಹಾಲಿನ ಹೃದಯಕ್ಕೆ ಕುಬ್ಬುಸವನು ತೊಡಿಸಿ
> ಹೂ ಮುಡಿಸಿಕೊಂಡೆಂದು ನೀನಲಿವೆ [2]
>
> [ ಮೊದಲಗಿತ್ತಿ ]

ಭೂಮಿ ತಾಯಿಗೆ ಇಲ್ಲಿ ಹಾಲಿನ ಹೃದಯವಿದೆ ಎಂದು ಹೇಳಲಾಗಿದೆ. ಹಾಲು ರುಚಿಕರವಾದ [Taste], ರಸಮಯವಾದ, ಪೋಷಕಶಕ್ತಿಯುಳ್ಳ, ಶುಭ್ರತೆಯುಳ್ಳ ಮೂರ್ತಪದಾರ್ಥ [Concrete]. ಹೃದಯ ಒಂದು ಅಮೂರ್ತಕಲ್ಪನೆ. ಭೂಮಿದೇವಿಯ ಹೃದಯ ಇನ್ನೂ ಅಮೂರ್ತಕಲ್ಪನೆ. ಆದರೆ ರಸವತಿಯಾದ ಭೂಮಿಯ ಸಜಲ ಅಂತಃಕರಣ ತನ್ನ ಮಕ್ಕಳಿಗೆ ಹಾಲಿನಂತೆ ಜೀವನದಾಯಕವಾಗಿದೆ. ಹೀಗೆ ಒಂದು ಉತ್ತಮ ರಸಪ್ರತಿಮೆಯು [Image of taste] ಅಮೂರ್ತಭಾವನೆಯೊಂದನ್ನು ಸುಂದರವಾಗಿ ಬಿಂಬಿಸುತ್ತದೆ.

---

1. ನಾದಲೀಲೆ, ಪುಟ ೪೧.
2. ನಾದಲೀಲೆ, ಪುಟ ೪೧.

ಇಷ್ಟ್ಯಾಕ ಹಲಬತೀ ಬಾಲಿ, ಬಂದೆ ಮೀನಾಕ್ಷಿ ।
ಪ್ರಾಣವೇ ಸಾಕ್ಷಿ
ನೀ ಕೊತಿ ಬೆಂಕಿಯನು ನಂಬಿ
ಪ್ರೀತಿಯುದಕೆಂಬಿ
ಕಪ್ಪುರದ ಗೊಂಬಿ । ಕಪ್ಪುರದ ಗೊಂಬಿ ।[1]

ಇಲ್ಲಿ ಜೀವಸತಿಗೆ ಪತಿ ಹೇಳುವ ಈ ಮಾತುಗಳಲ್ಲಿ ಬರುವ 'ಬೆಂಕಿ'ಯು ಸ್ಪರ್ಶ-ಪ್ರತಿಮೆಯಾಗಿ [ Image of touch or Thermal image ] ಭವದ ಬೇಗೆಯನ್ನು ಸಮರ್ಥವಾಗಿ ಧ್ವನಿಸಿದರೆ, 'ಕಪ್ಪುರದ ಗೊಂಬಿ'ಯ ದೃಶ್ಯಪ್ರತಿಮೆಯು [ Image of Sight ] ಭವದ ಬದುಕನ್ನೇ ನಂಬಿ ಕುಳಿತ ಮಾನವದೇಹದ ಅಶಾಶ್ವತತೆಯನ್ನು, ಕ್ಷೀಯಮಾಣತ್ವವನ್ನು ಪ್ರತಿನಿಧಿಸುತ್ತದೆ. 'ಕಪ್ಪುರದ ಗೊಂಬಿ' ಬೆಂಕಿಯ ಜಳಕ್ಕೆ ಕರಗಿಹೋಗುತ್ತದೆ. ಅನ್ನದ ಬಲದಿಂದ ಬದುಕಿದ ಈ ಕಾಯ, ಸಾವಿನ ಜಳ ಸ್ಪರ್ಶಿಸಿದಾಗ ಕರಗಿಹೋಗುತ್ತದೆ. ಅಂತೆಯೇ ಸಚ್ಚಿದಾನಂದದ ವಾಣಿಯು ಭೌತಿಕ ಪಾರವಶ್ಯವನ್ನು ಅಲ್ಲಗಳೆಯುತ್ತದೆ. ಈ ಮೂಲಕ ದೇವಪತಿ ಜೀವಸತಿಯನ್ನು ಅಮೃತತ್ವದ ಆರೋಹಣದತ್ತ ಅಭಿಮುಖೀಕರಿಸ-ಬಯಸುತ್ತಾನೆ. ಹೀಗೆ ಲೌಕಿಕ ಪ್ರತಿಮೆಗಳ ಮೂಲಕ ಹೊರಹೊಮ್ಮಿದ ಅನು-ಭಾವದ ಅರ್ಥವಿಶೇಷವನ್ನು ಮತ್ತೆ ಇಲ್ಲಿ ಗಮನಿಸಬಹುದು. 'ಮೂರ್ತಿ ಮತ್ತು ಕಾಮಕಸ್ತೂರಿ'ಯಲ್ಲಿಯ "ನನ್ನವಳು" ಪುಟ ೩೮ ಎಂಬ ಕವನದಲ್ಲಿ ಸಂಯೋಜಿತ-ವಾದ ಪ್ರತಿಮಾ ಮಾದರಿಗಳ ಸಾಂದ್ರಸಂಧಾನವು ಆ ಸುಂದರ ಭಾವಗೀತದ ಆವರಣ ದಲ್ಲಿ ಅನುಪಮವಾದ ರಸಸೃಷ್ಟಿಯನ್ನು ನಿರ್ಮಿಸಿದೆ.

ತಂಬುಲದ ತುಟಿಯ ತೋರಿ
ಮಲ್ಲಿಗೆಯ ಮುಡಿದುಕೊಂಡು
ಮೆಲ್ಲಗಾಗಿ ಬರುವಳ್ಯಾರ
ಸಂಜೆ ಏನ ?

ಇಲ್ಲಿ ಎಷ್ಟು ಸುಂದರವಾದ [ತಂಬುಲ-ಕೆಂಪು, ಮಲ್ಲಿಗೆ-ಶ್ವೇತದ ವರ್ಣ ಪ್ರತಿಮೆ ಗಳು] ಹಾಗೂ ಮೆಲ್ಲಗೆ ಬರುವ ಚಲನಪ್ರತಿಮೆಯು ವಾತಾವರಣ ರಸಿಕತೆಗೆ ಗಾಢತೆಯನ್ನು ನೀಡುತ್ತದೆ. 'ಕತ್ತಲಿನ ಕಡಲು' [ಕತ್ತಲೋಕತ್ತಲು] 'ತೇಜ-ಗಳ ತುಣುಕು' [ಕತ್ತಲೋಕತ್ತಲು] ಮುಂತಾದ ಈ ಪ್ರತಿಮಾ-ದ್ವಂದ್ವಗಳು

1. ನಾದಲೀಲೆ, ಪುಟ ೪೬.

[ಎರಡೂ 'ಮೂರ್ತಿ ಮತ್ತು ಕಾಮಕಸ್ತೂರಿ'ಯಲ್ಲಿ] ಸಮಾನಾಂತರವಾಗಿ ಭಾವದ ವೈಪರೀತ್ಯವನ್ನು [Contrast] ಬಿತ್ತರಿಸುತ್ತವೆ.

"ನೇತ್ರ ಪಲ್ಲವಿಯಿಂದ ಸೂತ್ರಗೊಂಬೀ ಹಾಂಗ
ಪಾತ್ರ ಕುಣಿಸ್ಯಾನ ಒಲುಮೀಗೆ ದಿನದಿನ
ಜಾತ್ರಿಯೆನಿಸಿತ್ತ ಜನುಮವು"

[ ಜನುಮದ ಜಾತ್ರಿ ]
[ ಮೂರ್ತಿ ಮತ್ತು ಕಾಮಕಸ್ತೂರಿ, ಪುಟ ೪೫ ]

ಬಾತುಗೋಳಿ ಹಾಂಗ ಚಾತಕದ ಜಾತ್ಯಲ್ಲ
ನಾತನೀರಾಗ ಅದರಾಟ, ಇದರೂಟ
ಮೀಸಲಳಿಯದ ಮಳಿಯಾಗ

[ ಒಲುಮೆಯ ಕಿಚ್ಚು ]
[ ಮೂರ್ತಿ ಮತ್ತು ಕಾಮಕಸ್ತೂರಿ, ಪುಟ ೪೬ ]

" ಮಾತೆಲ್ಲ ಮುತ್ತಿನ ಎಳಿ
ಜೇನಿನ ಥಳಿ
ಹಿಗ್ಗಿನ ತೊಳಿ "

[ ಸಂಸಾರ, ಪುಟ ೫೧ ]
[ ಮೂರ್ತಿ ಮತ್ತು ಕಾಮಕಸ್ತೂರಿ ]

ಎಷ್ಟು ಸುಂದರವಾದ ಪ್ರತಿಮೆಗಳು! ಇಷ್ಟು ಸುಂದರವಾದ ಕಾವ್ಯದ ಚರಣಗಳನ್ನು ಆಸ್ವಾದಿಸಿ ಸವಿಯಬೇಕೇ ಹೊರತು ಬರಿದೆ ವಿವರಿಸಿದರೆ ಸಾಲದು. ಇದು ಬೇಂದ್ರೆಪ್ರತಿಭೆಯ ಲೋಕೋತ್ತರ ಸಾಮರ್ಥ್ಯಕ್ಕೆ ಸೂರ್ಯಸಾಕ್ಷಿಯಾಗಿದೆ.

" ಹಣ್ಣಾದ ಬಿಸಿಲ ಬಣ್ಣನ್ನ ಕಳತು
ಬೆಳದಿಂಗಳಾತೊ ಏನೊ
ಹರದ್ಹದ ಬಾನ ಜೇನೊ "

[ಕೃಷ್ಣಕುಮಾರಿ ಮತ್ತು ಹಾಡುಪಾಡು, ಪುಟ ೨೪]

ಹಣ್ಣಾದ ಬಿಸಿಲು, ಅದರ ಬಣ್ಣ ಕಳತು ಬೆಳದಿಂಗಳಾಗಿದೆ. ಆಗ ಬಾನ ತುಂಬ ಜೇನು ಹರಿದಿದೆ. ಈ ಬೆಳದಿಂಗಳ ಬಾನಜೇನು ಎಂಬ ಕಲ್ಪನೆ, ವರ್ಣಪ್ರತಿಮೆ

ಹಾಗೂ ರಸಪ್ರತಿಮೆಗಳ ರಮಣೀಯ ಸಂಧಾನ. ಹೀಗೆ ಪ್ರತಿಮಾಸಂಧಾನಗಳಿಂದ ಕಾವ್ಯದ ರಸಾನುಭವಕ್ಕೆ ಹೃದಯಂಗಮತೆಯನ್ನು ನೀಡುವ ಶಕ್ತಿ ಬೇಂದ್ರೆ-ಕಾವ್ಯದ ವಿಶಿಷ್ಟತೆ.

ಗುಡ್ಡ ಗುಡ್ಡ ಸ್ಥಾವರಲಿಂಗ|
ಅವಕೆ ಅಭ್ಯಂಗ|
ಎರಿತಾವನ್ನೊ ಹಾಂಗ|
ಕೂಡ್ಯಾವ ಮೋಡ| ಸುತ್ತೆಲ್ಲ ನೋಡ ನೋಡ

[ಕೃಷ್ಣಕುಮಾರಿ ಮತ್ತು ಹಾಡುಪಾಡು, ಪುಟ ೩೫]

ಬೇಂದ್ರೆಯವರ ಪ್ರತಿಮಾಸೃಷ್ಟಿಕೌಶಲಕ್ಕೆ ತೋರಿಸಬಹುದಾದ ಸಫಲ-ಉದಾಹರಣೆ:

"ಲಯದ ಬಸಿರ ಬಯಲಲ್ಲಿ ದೇವ-ಭವ ಬೀಜ ಬಿತ್ತಿದಾಕೆ"

"ಗಾಯತ್ರಿಸೂಕ್ತ"

[ಕೃಷ್ಣಕುಮಾರಿ ಮತ್ತು ಹಾಡುಪಾಡು, ಪುಟ ೫೮]

ಎಂಬಲ್ಲಿ ಬರುವ ಸುಂದರ ಪ್ರತಿಮೆಗಳು ಅಧ್ಯಾತ್ಮದ ದೈವೀಭಾವಕ್ಕೆ ಸಂವಾದಿ-ಯಾಗಿವೆ.

'ನಾಕು ತಂತಿ' ಎಂಬ ಕವನದಲ್ಲಿ ಬಳಸಿದ ವೀಣೆಯ ತಂತ್ರಿಗಳ ಪ್ರತಿಮೆ ವಿಶಾಲವಾದ ಆಧ್ಯಾತ್ಮಿಕ ಅರ್ಥವನ್ನು ಒಳಗೊಂಡಿದೆ.

ಆವು ಈವಿನ ನಾವು ನೀವಿಗೆ
ಆನು ತಾನದ ತನನನಾ
ನಾನು ನೀನಿನ ಈ ನಿನಾನಿಗೆ
ಬೇನೆ ಏನೋ ಜಾಣಿ ನಾ
ಚಾರುತಂತ್ರಿಯ ಚರಣಚರಣದ
ಘನಘನಿತ ಚತುರಸ್ವನಾ[1]

[ನಾಕುತಂತಿ]

ನಾನು ತಂದೆ, ನೀನು ತಾಯಿ, ಆನು-ಇವರಿಬ್ಬರ ಆಧಾರವಾಗಿ ಬರುವ ಮಗು ತಾನು-ಎಂಬುದು ಶುಭಂ ಎಂಬುವ ಪರಮಾತ್ಮಶಕ್ತಿ ಸಮಷ್ಟಿ ಪ್ರಜ್ಞೆ. ಈ ನಾಲ್ಕೂ

---

1. ನಾಕುತಂತಿ, ಪುಟ ೮.

ತಂತಿಗಳ ಶ್ರುತಿಯು ಮೇಳೈಸದಿದ್ದರೆ ಬದುಕಿನಲ್ಲಿ ಅಪಸ್ವರವುಂಟಾಗುತ್ತದೆ. ಇಲ್ಲಿ ಬರುವ ತಾಯಿಯು ಜೀವನದಲ್ಲಿ ಧರ್ಮತತ್ತ್ವವನ್ನೂ, ತಂದೆಯು ಅರ್ಥತತ್ತ್ವವನ್ನೂ, ಮಗುವು ಕಾಮತತ್ತ್ವವನ್ನೂ, ಪರಮಾತ್ಮನ ಶುಭದ ಸಮಷ್ಟಿಯಾದ ತಾನು ಮೋಕ್ಷತತ್ತ್ವವನ್ನೂ ಪ್ರತಿನಿಧಿಸುತ್ತಾರೆ. ಧರ್ಮಾರ್ಥಕಾಮಮೋಕ್ಷಗಳ ಈ ಜೀವನರಂಗದಲ್ಲಿ ನಾಲ್ಕೂ ತಂತಿಗಳ ಸ್ವರಮೇಳದಿಂದುದ್ಭವಿಸುವ ಜೀವನಸಂಗೀತವು ದೇವಜನ್ಮದ ನಾಂದಿಯನ್ನು ಹಾಡುತ್ತದೆ. ಹೀಗೆ ಈ ಅಧ್ಯಾತ್ಮಭಾವವನ್ನು ವೀಣೆಯು ಪ್ರತಿಮಿಸುತ್ತದೆ. ಪರಾ, ಪಶ್ಯಂತಿ, ಮಧ್ಯಮಾ ಮತ್ತು ವೈಖರೀ ಎಂದಿರುವ ವಾಕ್‌ಶಕ್ತಿಯ ನಾಲ್ಕು ನೆಲೆಗಳನ್ನೂ ಈ ಪ್ರತಿಮೆ ಸಮರ್ಥವಾಗಿ ಧ್ವನಿಸುತ್ತದೆ.

'ಬಿನ್ನಾಣದ ಆರತಿ' ಕವನದಲ್ಲಿ ಬರುವ ಆರತಿಯ ಪ್ರತಿಮೆಯು ಆ ಇಡೀ ಕವನಕ್ಕೊಂದು ಬಗೆಯ ನಿರ್ದಿಷ್ಟ ಉದ್ದೇಶವನ್ನೊದಗಿಸಿಕೊಡುವದಲ್ಲದೇ ಅಮೂರ್ತವಾದ ಕವಿಭಾವನೆಗೆ ಆತ್ಮೀಯತೆಯ ಮೂರ್ತಚಿತ್ರಣವನ್ನೂ ಮಾಡು-ತ್ತದೆ.

ಬೆಳಕು ಬೆಡಗಿನಲಿ ಮಿಂಚಿ ಹೊತ್ತಿತೋ
ಬಿನ್ನಾಣದ ಆರತಿ ||
ಬರಲಿದೆ ಅಪೂರ್ವದಾ ಸಂಗತಿ [1]

ಬೆಣ್ಣಿ ಕರಗದs ಆದೀತು ಹ್ಯಾಂಗ ತುಪ್ಪಾ
ಒಳಗಿರತಾನ ನಮ್ಮಪ್ಪಾ [2]

[ ತುಂಬಿತ್ತು ಹಾಲಗೇರಿ ]

ಇಲ್ಲಿ ಹೊರನೋಟಕ್ಕೆ ಇದೊಂದು ರಸಪ್ರತಿಮೆ ಎನಿಸಿದರೂ ಜೀವಭಾವವು ದೇವ-ಭಾವವಾಗಿ ಪರಿವರ್ತನಗೊಳ್ಳುವ ಪರಿವರ್ತನ ಕ್ರಮವನ್ನು [ Process of Transformation ] ಈ 'ತುಪ್ಪ'ವು ಸಮರ್ಥವಾಗಿ ಪ್ರತಿಮಿಸುತ್ತಿದೆ. ತುಪ್ಪವಾದ ನಂತರವೇ ಅದು ದೇವರ ದೀಪಕ್ಕೆ ಸಂದೀತು. 'ನಮ್ಮಪ್ಪಾ' ಎಂಬಲ್ಲಿಯ 'ಅಪ್ಪಾ' ಎಂಬಲ್ಲಿ 'ಪ್ಪಾ' ಎಂಬ ಅಕ್ಷರದ ಮೇಲಿರುವ ಮಹತ್ವವು [Emphasis] ಭಗವಂತನ ಬಗೆಗೆ ಭಕ್ತನ ಆತ್ಮೀಯತೆಯನ್ನು ತೋರ್ಪಡಿಸು-ತ್ತದೆ. ಇಂಥದೇ ಇನ್ನೊಂದು ಸುಂದರ ಪ್ರತಿಮೆ "ದೇಹಾ ಖಂಬಾ ಖಂಬಾ;

---

1. ಮರ್‍ಯಾದೆ, ಪುಟ ೧೦.
2. ಮರ್‍ಯಾದೆ, ಪುಟ ೪೩.

ಜೀವಾ ಜೀವಾ ಪ್ರತಿಬಿಂಬಾ" ಎಂಬುದು ಅದೇ ಗೀತದಲ್ಲಿ [ತುಂಬಿತ್ತು ಹಾಲಗೇರಿ] ದೊರೆಯುತ್ತದೆ.

'ನಭೋವಾಣಿ' ಎಂಬ ಕವನಸಂಗ್ರಹದಲ್ಲಿ ಬರುವ 'ಬನ್ನಿಭಂಗಾರ' ಎನ್ನುವ ಕವಿತೆಯಲ್ಲಿ ದೊರೆಯುವ ಬನ್ನಿಬಂಗಾರದ ಸಾಂಪ್ರದಾಯಿಕ ಪ್ರತಿಮೆಗೆ ವಿಶಿಷ್ಟ ಅರ್ಥವು ನವೋನವವಾಗಿ ದೊರೆತಿದೆ. 'ಅಥಿತಿದೇವೋಭವ'ದಂತೆ ಮನೆಗೆ ಭಿಕ್ಷೆ- ಗಾಗಿ ಬಂದ ಭಿಕ್ಷುಕನು ಮದುವೆಯಾದ ಕನ್ಯೆಯನ್ನು ಪರಪತ್ನಿಯನ್ನು ಬಯಸಿದ್ದು ಸೀಮೋಲ್ಲಂಘನವೇ ಸರಿ. ಆದರೆ ಈ ಸೀಮೋಲ್ಲಂಘನದಿಂದ ಭಿಕ್ಷುಕನ ಮರಣ ವಾಗಿ, ಮರುವರುಷ ಆ ಗೃಹದ ಯಜಮಾನಿಗೆ ಮಗುವಾಗಿ ಅವಳ ಬಾಳು ಬಂಗಾರವಾಗುತ್ತದೆ. ಇಲ್ಲಿ ಬನ್ನಿ-ಭಂಗಾರದ ಜೋಡಿಯ ಸಮಾನಂತರಗಳ ಉಪಯೋಗದ ಮೂಲಕ [ Use of Parallelism ] ಕವಿ ಸನ್ನಿವೇಶದ ವೈಪರೀತ್ಯವನ್ನು ಧ್ವನಿಸಿದ್ದಾರೆ.

ಮರಣವೆ ಮಹಾನವಮಿ
ದಸರೆ-ದಶಮಿ-ಹೊಸಜನ್ಮ
ಸೀಮೋಲ್ಲಂಘನ !
ಬನ್ನಿ-ಭಂಗಾರ [1]

[ ಬನ್ನಿ-ಭಂಗಾರ ]

ಕೆಲವು ಸಲ ಒಂದೇ ಪ್ರತಿಮೆಯೇ ಇಡೀ ಕವನದುದ್ದಕ್ಕೂ ಆವರಿಸಿ ಆ ಒಂದು ವಿಶಿಷ್ಟ ಕವಿತೆಯೇ ಒಂದು ಪ್ರತಿಮಾ-ಕವನವಾಗಿ ರೂಪುಗೊಂಡ ಅನೇಕ ಉದಾ- ಹರಣೆಗಳನ್ನು ಧಾರಾಳವಾಗಿ ಬೇಂದ್ರೆಯವರ ಕವನಗಳಲ್ಲಿ ಕಾಣಬಹುದು. 'ನಾದ- ಲೀಲೆ'ಯಲ್ಲಿ ಬರುವ 'ಭಾವಗೀತ' ಕವಿತೆಯ 'ಭೃಂಗ'ದ ಪ್ರತಿಮೆ ಇದಕ್ಕೊಂದು ಜ್ವಲಂತ ಸಾಕ್ಷಿ. ಒಂದು ಭಾವಗೀತ ತನ್ನಿಂದ ತಾನೇ ಹುಟ್ಟಿ, ತಾನೇ ಬೆಳೆದು, ತನ್ನ ಹಿಗ್ಗಿನಿಂದಲೇ ಎಲ್ಲವನ್ನು ಹಿಗ್ಗಿಸಿ, ಆತ್ಮಸಂತೋಷವನ್ನು ಪಡೆಯುವ ಭೃಂಗ ಮಾರ್ಗವನ್ನು 'ಭೃಂಗ'ದ ಪ್ರತಿಮೆಯ ಮೂಲಕ ಅದ್ಭುತವಾಗಿ ತೋರಿಸಲಾಗಿದೆ. ಇಲ್ಲಿ ಬರುವ ಪ್ರತಿಮಾ-ಮಾದರಿಗಳು [Image-Patterns] ಶೇಕ್ಸಪೀಯರನ ಪ್ರತಿಮಾ ಮಾದರಿಗಳಂತೆ ಅದ್ಭುತವಾದ ಅಭಿವ್ಯಕ್ತಿ ಸಾಮರ್ಥ್ಯದ ಚಿರಂತನ ದ್ಯೋತಕಗಳಾಗಿವೆ. "ಜೋಗಿ" ಕೂಡ ಇಂಥದೇ ಇನ್ನೊಂದು ಸಫಲ ಪ್ರತಿಮಾ ಕವನ.

---

1. ಇದು ನಭೋವಾಣಿ, ಪುಟ ೪೦

ಹಾಗೆಯೇ ಅನಂತ ಪ್ರಣಯದ ಶಾಶ್ವತ ಬಂಧನವನ್ನು, ಸೂರ್ಯ-ಚಂದ್ರರ ರೂಪಕಗಳ ಮೂಲಕ ಸಾಂಕೇತಿಕ ಪ್ರತಿಮೆಗಳನ್ನಾಗಿ ರೂಪಿಸಿದ 'ಅನಂತ ಪ್ರಣಯ' ಕವಿತೆಯು ಕವಿ ಸಂಕೇತಗಳನ್ನು ಎಷ್ಟು ಸಶಕ್ತವಾಗಿ ಬಳಸಿಕೊಳ್ಳ-ಬಲ್ಲರು ಎಂಬುದನ್ನು ಸೂಚಿಸುತ್ತದೆ.

ಪ್ರತಿಮಾ ವಿಧಾನವು ಆನುಷಂಗಿಕವಾಗಿ ಅಲಂಕಾರಸಂಯೋಜನೆಯನ್ನು, ಸಂಕೇತಗಳ ಪ್ರಯೋಗವನ್ನು, ಪ್ರತೀಕಾತ್ಮಕ ರೀತಿಯನ್ನು ಒಳಗೊಂಡಿರುತ್ತದೆ. ಬೇಂದ್ರೆಯವರು ಸಂಸ್ಕೃತಕಾವ್ಯಸಿದ್ಧಾಂತಗಳ ಪರಂಪರೀಣ ನಿರೂಪಣೆಯನ್ನು ಹೋಲುವ ಅಲಂಕಾರಗಳನ್ನು [Figures of Speeh] ಧಾರಾಳವಾಗಿ ರಚಿ-ಸಿದ್ದಾರೆ. ಬೇಂದ್ರೆಯವರ ವೈಶಿಷ್ಟ್ಯವು ಕಂಡುಬರುವದು ಅವರು ನಿರ್ಮಿಸುವ ರೂಪಕಗಳಲ್ಲಿ. ಕನ್ನಡದಲ್ಲಿ ಕುಮಾರವ್ಯಾಸನ ನಂತರ ಅವನಷ್ಟೇ ಸುಂದರವಾದ, ಸಫಲವಾದ, ಮಹೋನ್ನತ ರೂಪಕಗಳನ್ನು ರಚಿಸಿದ ಬೇಂದ್ರೆಯವರನ್ನು 'ರೂಪಕ ಸಾಮ್ರಾಟ್' ಎಂದು ಕರೆಯಬಹುದು.

"ಹುಣ್ಣಿವೀ ಚಂದಿರನ ಹೆಣಾ ಬಂತೋ ಮುಗಿಲಾಗ ತೇಲುತ ಹಗಲ !"

ಎನ್ನುವ ಅದ್ಭುತರೂಪಕ ಆ ಸಮಸ್ತ ಕಾವ್ಯದ ವಿಷಾದದ ಗಂಭೀರತೆಗೆ ಹದವಾದ ವಾತಾವರಣವನ್ನು ನಿರ್ಮಿಸಿಬಿಡುತ್ತದೆ. 'ಇದು ಹಾಲಗಡಲಿನ ಸೀಮೆ' ಎಂಬ ರೂಪಕದಲ್ಲಿ ಮಧುವಿಯ ಸಂಭ್ರಮದ ಅನುಭವವು ಆಸ್ವಾದನೀಯವಾಗಿದೆ. "ನನ್ನ ಬಾಳುವೆಯಹುದು ಶ್ರಾವಣದ ಹಗಲು" ಎಂಬಲ್ಲಿ ಬರುವ ಶ್ರಾವಣದ ಹಗಲಿನ ರೂಪಕ ಜೀವನದ ದುರ್ಭರ ತುಯ್ದಾಟವನ್ನು, ಭಾವುಕ ಮನಸ್ಸಿನ ವೇದನೆಯ ತುಡಿತವನ್ನು ಸಮರ್ಥವಾಗಿ ಹೇಳುತ್ತದೆ.

ಹೀಗೆಯೇ ಪಟ್ಟೀ ಮಾಡುತ್ತ ಹೋದರೆ ಅದೊಂದು ದೊಡ್ಡ ಗ್ರಂಥವೇ ಆದೀತು. ಬೇಂದ್ರೆಯವರು ಪ್ರತಿಮೆಗಳನ್ನು ಸಾಮಾನ್ಯವಾಗಿ ತಾವು ಕಂಡ-ಉಂಡ ಸುತ್ತಲಿನ ಬದುಕಿನಿಂದಲೇ ಆಯ್ದುಕೊಳ್ಳುತ್ತಾರೆ. ನಮಗೆಲ್ಲ ಚಿರಪರಿಚಿತ ವಾದ ಸಾಮಾನ್ಯ ವಸ್ತುಗಳನ್ನೇ ಪ್ರತಿಮೆಗಾಗಿ ಆಯ್ದುಕೊಂಡು ಅವಕ್ಕಷ್ಟು ಅದ್ಭುತವಾದ, ನವೀನವಾದ ಅರ್ಥವನ್ನು ಅನುಲೇಪಿಸಿಬಿಡುತ್ತಾರೆ. ಭಾವನೆ ಗಳನ್ನು ಸಮರ್ಥವಾದ ಪ್ರತಿಮೆಗಳ ಮೂಲಕ ಅಭಿವ್ಯಕ್ತ ಮಾಡಿದ ಬೇಂದ್ರೆ-ಯವರು ಸಾಧಾರಣವಾಗಿ ತಾವು ಬಳಸಿದ ರೂಪಕ-ಉಪಮಾದಿ ಅಲಂಕಾರಗಳು ಕೂಡ ಕವಿಸಮಯದ ಕೃತಕತೆಯಿಂದ, ಅನುಚಿತ ಸಂಬಂಧದಿಂದ ಮಲಿನವಾಗಲು ಅವಕಾಶವನ್ನೇ ನೀಡಿಲ್ಲ. ಶೇಕಡ ಎಂಬತ್ತರಷ್ಟು ಪ್ರತಿಮೆಗಳು ಬದುಕಿನ ನೇರ-ಅನುಭವದಿಂದಲೇ, ನಿತ್ಯದ ಮಾತು-ಕ್ರಿಯೆಗಳಿಂದಲೇ ಪಡೆದುಕೊಂಡಂಥವುಗಳು. ಹೀಗಾಗಿ ಈ ಪ್ರತಿಮೆಗಳು ಮೂಲಭಾವನೆಯೊಂದಿಗೆ ನಿಕಟ ಸಂಪರ್ಕವನ್ನು

ಹೊಂದಿ ಜೀವಂತವಾದ ಅರ್ಥಪುಷ್ಟಿಯನ್ನೊದಗಿಸಿಕೊಟ್ಟಿವೆ. ಬಹುಶಃ ಪ್ರತಿಮೆ ಗಳನ್ನು ಜೋಡಿಸುವಾಗ ಎಲ್ಲಿಯೂ ಆಭಾಸವಾಗಲಿ, ಕವಿಗೆ ಅಸಹಜವಾದ ಶ್ರಮ ವಾಗಲೀ ಕಂಡುಬರಲಾರದು. ವಿಚಾರಗಳ ಸಹಯೋಗವನ್ನು [Association of ideas] ಸಾಧಿಸಬೇಕಾದಾಗ ಕವಿ ಪ್ರತಿಮಾ - ಮಾದರಿಗಳನ್ನೇ [Image patterns] ರಚಿಸಿಬಿಡುತ್ತಾರೆ. ಆದರೆ ಹೀಗೆ ಅನೇಕ ಪ್ರತಿಮೆಗಳ ನಿಚಯ ಗಳೇ ನಿರ್ಮಾಣಗೊಳ್ಳುವಾಗ ಯಾವುದೇ ಎರಡು ಪ್ರತಿಮಾ-ಮಾದರಿಗಳ ಮಧ್ಯೆ ಅಸಹಜವಾದ ಅಂತರ ಕಾಣಿಸಿಕೊಂಡು ಅರ್ಥದ ಕೋಟೆಯಲ್ಲಿ ಬಿರುಕುಂಟಾದ ಯಾವ ಉದಾಹರಣೆಯೂ ಬೇಂದ್ರೆ ಕಾವ್ಯದಲ್ಲಿ ದೊರೆಯಲಾರದು. ಒಂದು ಅಂಥ ಉದಾಹರಣೆಯಿಂದ ಈ ವಿಚಾರವನ್ನು ದೃಢಪಡಿಸಬಹುದು.

ಗುಡ್ಡ ಕೊರೆದು ಗುಡಿಯಕಟ್ಟಿ
ತಂತಿ ಮಿಡಿದು ಒಳವ ಮುಟ್ಟಿ
ನುಡಿಯ ಧೂಪ ಹಾಕಿದೆ.

ಹಾಡು ಬರಲಿ ರೆಕ್ಕೆಯೊಡೆದು
ರಾಗ ಬರಲಿ ಶ್ರುತಿಯ ಹಿಡಿದು
ಭಾವ ಬರಲಿ ದೇಹ ಪಡೆದು
ದಿವ್ಯವಿರಲಿ ಜೀವನ
ಅರಳುತಿರಲಿ ಜನಮನ[1]

[ಕೇಳಿ ನುಡಿ; ಕಂಡು ನಡೆ]

ಇಲ್ಲಿ ತಂತಿ ಮಿಡಿಯುವ, ಧೂಪ ಹಾಕುವ, ಶ್ರುತಿಯ ಹಿಡಿಯುವ ಕ್ರಿಯೆಗಳು ಒಂದನ್ನೊಂದು ನೇರವಾಗಿ ಸಂಪರ್ಕಿಸಿ, ಅವಲಂಬಿಸಿ ನಡೆಯುತ್ತವೆ. ಒಂದು ವಿಶಿಷ್ಟ ಪರಿಸರದ ನಿರ್ಮಾಣಕ್ಕೆ ನೇರವಾಗಿ ನೆರವಾಗುವ ಈ ಎಲ್ಲ ಕ್ರಿಯೆಗಳ ಮಧ್ಯೆ ಧ್ಯೇಯದ ಏಕಸೂತ್ರತೆಯಿರುವುದನ್ನು ಪರ್ಯಾಪ್ತವಾಗಿ ಗಮನಿಸಬಹುದು. ಬೇಂದ್ರೆಪ್ರತಿಮಾ ಮಾದರಿಗಳ ಮಧ್ಯೆ ಅನನ್ಯವಾದ ಏಕಸೂತ್ರತೆ ಇದೆ.

ಬೇಂದ್ರೆಯವರ ಕಾವ್ಯದಲ್ಲಿ ಸಂಕೇತ ಹಾಗೂ ಪ್ರತೀಕಗಳ ಸುಭಗವಾದ ಪ್ರಯೋಗವೂ ಆಗಿದೆಯೆಂದು ಈಗಾಗಲೇ ಹೇಳಲಾಗಿದೆ. ಪ್ರತೀಕ ಹಾಗೂ ಪ್ರತಿಮೆ ಗಳಲ್ಲಿರುವ ಸೂಕ್ಷ್ಮವಾದ ಅಂತರವೇನು ? ಇದೊಂದು ಗಮನಾರ್ಹವಾದ ತಾಂತ್ರಿಕ ಪ್ರಶ್ನೆ. ಪ್ರತೀಕವು ಕೇವಲ ಒಂದು ದೃಷ್ಟಾಂತವಾಗಿ, ಉದಾಹರಣೆ ಯಾಗಿ ಬಳಸಲ್ಪಡುತ್ತದೆ. ಅರ್ಥವ್ಯಾಪ್ತಿಯಲ್ಲಿ ಪ್ರತೀಕಕ್ಕಿಂತಲೂ ಪ್ರತಿಮೆಯ

1. ಅರಳು-ಮರಳು ಪುಟ ೪೧೯.

ಪಾತ್ರ ದೊಡ್ಡದು. ಪ್ರತಿಮೆಯು ಕಾವ್ಯದ ರಸಾನುಭವಕ್ಕೆ ನೇರವಾಗಿ ನೆರ-ವಾಗುತ್ತದೆ. ಆದರೆ ಪ್ರತೀಕವು ಪರೋಕ್ಷವಾದ ಹಿನ್ನೆಲೆಯಾಗಿ ಉಪಯೋಗಿ-ಸಲ್ಪಡುತ್ತದೆ.

ಸಂಕೇತಗಳಂತೂ ಕಾವ್ಯದ ಧ್ವನಿಪೂರ್ಣತೆಯ ಕೇಂದ್ರ ಆಧಾರಗಳು. ಸಂಕೇತಗಳಿಂದ ಕವಿ ತನ್ನ ಕವಿತೆಗೆ ಅಪೂರ್ವವಾದ ಅರ್ಥ-ಶ್ರೀಮಂತಿಕೆಯನ್ನು ನೀಡುತ್ತಾನೆ. ಕವಿಯ ಭಾವಮಾರ್ಗದ, ವಿಚಾರಪ್ರಣಾಲಿಯ ಮುಂದುವರಿಕೆ ಯನ್ನು, ಗತಿಶೀಲತೆಯನ್ನು ಈ ಸಂಕೇತಗಳೇ ನಿರ್ಧಾರಾತ್ಮಕವಾಗಿ ಸೂಚಿಸ-ಬಲ್ಲವು. ರೈಲು ಬಂದು ಮುಂದುವರಿಯುತ್ತದೆ ಎಂದು ಹೇಳಲಿಕ್ಕೆ ಸಿಗ್ನಲ್-ಸಂಕೇತ. ಹಾಗೆ ಈ ಕಾವ್ಯವು ನಮ್ಮ ಮನಸ್ಸಿನ ನೆಲೆಯನ್ನು ಸ್ಪರ್ಶಿಸಿ ಅದರ ಅರ್ಥದ ಗತಿಯು ಇನ್ನೂ ಮುಂದೆ ಮುಂದೆ ದೀರ್ಘವಾಗಿ ಸಾಗುತ್ತದೆ ಎನ್ನಲಿಕ್ಕೆ ಈ ಸಂಕೇತಗಳೇ ಸಾಧನ. ಉತ್ತಮ ಸಂಕೇತಗಳಿಂದಲೇ ಕವಿ ತನ್ನ ಭಾವನೆಯ, ವಿಚಾರದ ವೈಶಾಲ್ಯವನ್ನು ಸಬಲವಾಗಿ ಧ್ವನಿಸಿಬಿಡುತ್ತಾನೆ. ಬೇಂದ್ರೆಯವರ ಕಾವ್ಯವು ಶ್ರೀಮಂತ ಸಂಕೇತಗಳಿಂದ ನಿಬಿಡಿತವಾಗಿದೆ.

ಸಖೀಗೀತ ಖಂಡಕಾವ್ಯವು ಮಾನವಪ್ರಣಯದ ಚರಮಸಿದ್ಧಿಯನ್ನು, ರತಿಯ ರಸಾಪೇಕ್ಷೆಯ ಸಾಫಲ್ಯವನ್ನು ಸಾಂಕೇತಿಕವಾಗಿ ಚಿತ್ರಿಸುತ್ತದೆ.

ಪ್ರಣಯದ ವಾಣಿಯು ವೀಣಾ ಪ್ರವೀಣನು
ನುಡಿಸುವ ಮಿಡಿಸುವ ತಂತಿಯೊಲು
ಮನದೆಲ್ಲ ಮಾತನ್ನು ಮೌನದಿ ನೆನೆವಂತೆ—
ಎಳೆಯೆಲ್ಲ ಗಂಗುಣಿಸಿ ಬಿಡಿಸುವದು. [1]

ಅದು ಇದೆ ಎದೆಯಲ್ಲಿ ಬೆಳಕಿನ ಬದಿಯಲ್ಲಿ
ರಸಗಂಗಾ ನದಿಯಲ್ಲಿ ಅದರುಗಮ
ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು
ಆತ್ಮದ ನೀತಿಯು ಮಧುಸಂಗಮ. [2]

ದಾಂಪತ್ಯದ ಮಧುರತೆಯನ್ನು, ಅನ್ಯೋನ್ಯತೆಯನ್ನು ಎಷ್ಟು ಸಾಂಕೇತಿಕವಾಗಿ ಹೇಳಲಾಗಿದೆ! ಇಲ್ಲಿ ಬರುವ ಪ್ರತಿಮೆಗಳನ್ನೇ ಕವಿ ವಿಶಾಲ ಅರ್ಥದೀಪ್ತಿಯಿಂದ ಬೆಳಗಿಸಿ ಅವುಗಳನ್ನು ಸಾರ್ವತ್ರಿಕ ಸತ್ಯದ ಸಂಕೇತಗಳನ್ನಾಗಿ ಮಾಡುತ್ತಾನೆ.

---

1. ಸಖೀಗೀತ, ಪುಟ ೨೮.
2. ಸಖೀಗೀತ, ಪುಟ ೪೪.

ಹೀಗೆಯೇ 'ನಾಕುತಂತಿ' ಕವನಸಂಗ್ರಹದಲ್ಲಿ ಬರುವ "ಶ್ರೀ ವಿವೇಕಾನಂದ ಶಿಖರ ಪ್ರಗಾಥಾ" ಎಂಬ ಕವನದಲ್ಲಿ ಶ್ರೀಶೈಲ, ಕಲ್ಯಾಣ, ತಿರುಮಲೆ, ಉಡುಪಿ, ಆಳಂದಿ, ಪಂಢರಪುರ, ಗೊಮ್ಮಟ, ಕನ್ಯಾಕುಮಾರಿ, ಕಾಶ್ಮೀರ ಮೊದಲಾದ ಸ್ಥಳಗಳ ಮಹಾತ್ಮ್ಯವು ಸಾಂಕೇತಿಕವಾಗಿ ಹೇಳಲ್ಪಟ್ಟದೆ. ವಿವೇಕಾನಂದ ಎಂಬ ಶಬ್ದವೂ ಧರ್ಮದ ಸಂಸ್ಥಾಪನೆ ಹಾಗೂ ಪಾಲನೆ ಮಾಡುವ ವಿವೇಕದಿಂದುದ್ಭವಿ-ಸುವ ಆನಂದವನ್ನು ಸಾಂಕೇತಿಕವಾಗಿ ನಿರೂಪಿಸುತ್ತದೆ. ಹೀಗೆಯೇ 'ಯಕ್ಷ-ಯಕ್ಷಿ'ಯಲ್ಲಿ ಬರುವ 'ಬಯಲಿನ' ಸಂಕೇತವು ಉಪನಿಷತ್ತುಗಳ 'ನೇತಿ' ತತ್ತ್ವಕ್ಕೆ ಸಂವಾದಿಯಾಗಿದೆ.

ಹೀಗೆ ಈ ಸಂಕೇತಗಳು—೧. ಅರ್ಥವ್ಯಾಪ್ತಿಯನ್ನು ಹೆಚ್ಚಿಸುತ್ತವೆ. ೨. ಗೂಢವಾದ ಪ್ರತಿಪಾದನವನ್ನೊಳಗೊಂಡಿರುತ್ತವೆ. ೩. ಧ್ವನಿಪೂರ್ಣತೆಯನ್ನು ನೀಡು-ತ್ತವೆ. ೪. ಕವಿಯ ಆಂತರ್ಯದಲ್ಲಿ ಸುಪ್ತವಾದ ವಿಶೇಷ ಧ್ಯೇಯವನ್ನು ಪ್ರತಿನಿಧಿಸು-ತ್ತವೆ. ೫. ಕಾವ್ಯಕ್ಕೆ ಗತಿಶೀಲತೆಯನ್ನೂ, ಜೀವಂತಿಕೆಯನ್ನೂ ನೀಡಲು ಸಮರ್ಥವಾಗುತ್ತವೆ. ಬೇಂದ್ರೆಯವರು ಮೂಲತಃ ಧ್ವನಿಕಾವ್ಯದ ರಚನಾಕಾರರಾಗಿರು-ವದರಿಂದ ಸಮರ್ಥ ಸಂಕೇತಗಳ ಬಳಕೆ ಅವರ ಅನಿವಾರ್ಯವಾದ ಕಾವ್ಯತಂತ್ರ-ವಾಗಿದೆ. ಬೇಂದ್ರೆ ಕಾವ್ಯದಲ್ಲಿ ಪ್ರಯೋಗಿತವಾದ ಈ ಸಂಕೇತಗಳು ಒಂದು ಕಡೆಗೆ ಕವಿತೆಯ ಶಿಲ್ಪಿಕ ಹೊಂದಾಣಿಕೆಗೆ [ Structural adjustment ] ನೆರ-ವಾಗುವ ವೈಧಾನಿಕ ಪೂರೈಕೆಗಳಾದರೆ ಇನ್ನೊಂದೆಡೆಗೆ ಬೇಂದ್ರೆಯವರ ಗಾಢವಾದ ಸಂಸ್ಕಾರ ವಿಶೇಷವನ್ನು ಪ್ರತಿನಿಧಿಸುತ್ತವೆ. ಹಾಗೆಯೇ ಅವರ ದುರ್ದಮ್ಯವಾದ ವಿಷಯಗ್ರಹಣ ಸಾಮರ್ಥ್ಯದ ದ್ಯೋತಕಗಳಾಗಿವೆ. 'ಮೂರ್ತಿ ಮತ್ತು ಕಾಮ-ಕಸ್ತೂರಿ' ಹಾಗೂ 'ಕೃಷ್ಣಾಕುಮಾರಿ ಮತ್ತು ಹಾಡುಪಾಡು' ಮುಂತಾದ ಹೆಚ್ಚು ಲೌಕಿಕಪರವಾದ ಕಾವ್ಯಸಂಗ್ರಹಗಳಲ್ಲೂ ಕೂಡ ವೃಂದಾವನ, ಕೊಳಲು, ಕಲ್ಪ-ವೃಕ್ಷ ಮುಂತಾದ ರಮ್ಯಕಲ್ಪನೆಗಳು ಸಾಂಕೇತಿಕವಾಗಿ ಚಿತ್ರಿಸಲ್ಪಟ್ಟವೆ.'ಮೂರ್ತಿ' ಒಂದು ಸುಂದರವಾದ ಸಾಂಕೇತಿಕ ಕವನ. ಈ ಕವನದಲ್ಲಿ ಬರುವ ಒಂದು ಅತ್ಯಂತ ರಮ್ಯವಾದ ಉಪಮೆಯು ಬೇಂದ್ರೆಯವರ ಪ್ರಾತಿಭಶಕ್ತಿಯ ಸರ್ವೋತ್ತಮ ದ್ಯೋತಕಗಳಲ್ಲೊಂದು ಎಂದು ಹೇಳಬಹುದು.

> "ಸುತ್ತು ನೆರೆದ ರಮಣಿಮಣಿಯ
> ರೊಂದಿ ಸಮೆದ ಮಾಲೆಯಲ್ಲಿ
> ಮೆರೆವ ಹೃದಯಪದಕದಂತೆ" [1]
>
> [ ಮೂರ್ತಿ ]

---

1. ಮೂರ್ತಿ ಮತ್ತು ಕಾಮಕಸ್ತೂರಿ, ಪುಟ ೨೧.

ಒಂದು ಕಲ್ಲು ಮೂರ್ತಿಯಾಗಿ "ಜೀವ್ಯಪಡೆದ ಬಿಂಬವನ್ನು" ಸಾಂಕೇತಿಕವಾಗಿ ಚಿತ್ರಿಸ ಲಾಗಿದೆ. "ಸೂರ್ಯನ ಹೊಳೆ" (ಕೃಷ್ಣಕುಮಾರಿ ಮತ್ತು ಹಾಡುಪಾಡು) ಜೀವನ ಪ್ರವಾಹದ ಉತ್ಸಾಹದ ಗತಿಗೆ ಸಂಕೇತವಾಗಿ ಚಿತ್ರಿಸಿದ ಜೀವನದ ಗತಿಶೀಲತೆಯ ಸಂಭ್ರಮ ಪಯಣಕ್ಕೆ ಪೂರ್ವಭಾವಿಯಾದ ಸೂಚನೆಯಾಗಿದೆ. 'ಹಕ್ಕಿ ಹಾರುತಿದೆ ನೋಡಿದಿರಾ' (ಗರಿ)'ನಭೋವಾಣಿ' (ನಭೋವಾಣಿ) ಮುಂತಾದ ಕವನಗಳಲ್ಲಿ ಕವಿ [Archetypal Images] ಮೂಲ ಪ್ರತಿಮೆಗಳನ್ನು ಸಮರ್ಥವಾಗಿ ಬಳ. ಸಿದ್ದಾರೆ. ನಾಕುತಂತಿಯಲ್ಲಿ ಬರುವ "ಅಣು-ಮಹತ್' ಎಂಬ ಕವನವು ಮೂಲ ಪ್ರತಿಮಾಮಾದರಿಗಳನ್ನೇ [Archetypal image patterns] ಹೊಂದಿ ರಚಿತವಾದ ಭವ್ಯಕವನವಾಗಿದೆ. Sublime poem.]

ಹೀಗೆ ಬೇಂದ್ರೆಯವರ ಕಾವ್ಯಭಂಡಾರದಲ್ಲಿ ವಿಪುಲವಾದ ಪ್ರತಿಮಾರತ್ನಗಳಿವೆ. ವಿಮರ್ಶಕನಿಗೆ ಅವುಗಳಲ್ಲಿ ಶ್ರೇಷ್ಠವಾದವುಗಳನ್ನು ಉದಾಹರಣೆಗೆಂದು ಆಯ್ದು- ಕೊಳ್ಳುವದೇ ದುರ್ಧರವಾದ ಕಾರ್ಯ. ಏಕೆಂದರೆ ಯಾವುದನ್ನು ಉತ್ತಮವೆಂದು ಆಯ್ದುಕೊಳ್ಳಬೇಕು? ಎಲ್ಲ ಪ್ರತಿಮೆಗಳಲ್ಲೂ ಖಚಿತವಾದ ಉತ್ತಮಿಕೆ ಇದೆ; ಗಿತ್ಯದ ಆತ್ಮೀಯತೆ ಇದೆ; ಜೊತೆಗೆ ಹೊಸತನವಿದೆ.

ಬಹಳ ಮುಖ್ಯವಾಗಿ ವಿಮರ್ಶಿಸಿ ನಿರ್ಣಯಿಸುವ ಅಂಶವೆಂದರೆ ಬೇಂದ್ರೆ ಯವರು ನಿರ್ಮಿಸಿದ ಪ್ರತಿಮೆಗಳು ಪ್ರತಿಯೊಂದು ಕವಿತೆಯ ಶಿಲ್ಪದ ಮೂಲಭೂತ ಅಂಗಗಳಾಗಿಯೇ ಉದ್ಭವವಾಗಿವೆ. ಪ್ರತಿಮೆಗಳು ಹೆಚ್ಚಿನ [Additional] ಅಂಶಗಳಾಗದೇ ರಸಾನುಭವದ, ಕಾವ್ಯವಿನ್ಯಾಸದ ಅನಿವಾರ್ಯ ಅಂಶಗಳೇ ಆಗಿವೆ. ಅಲ್ಲಿ ಕೃತಕತೆಗೆ, ಅಲಂಕಾರಕ್ಕೆ ಅವಕಾಶವೇ ದೊರೆಯದು. ಈ ಪ್ರತಿಮಾವಿಧಾನ ವನ್ನು ಬೇಂದ್ರೆಯವರ ಕಾವ್ಯದ ರೀತಿಯ, ತಂತ್ರದ ವಿಧಾನವಿಶೇಷವೆಂದು ಸ್ವೀಕರಿ ಸುವದಕ್ಕಿಂತ ಹೆಚ್ಚಾಗಿ ಅವುಗಳನ್ನು ಅವರ ಕಾವ್ಯದ ಅಂತಸ್ಸತ್ವದ ಅನಿವಾರ್ಯ ಅಭಿವ್ಯಕ್ತಿ ಎಂತಲೇ ಅಂಗೀಕರಿಸಿದರೆ ಯಥಾರ್ಥವಾದ ವಿಮರ್ಶೆಗೆ ಅಪಚಾರ ಮಾಡಿದಂತಾಗುವದಿಲ್ಲ. ಬೇಂದ್ರೆಯವರ ಪ್ರತಿಮಾ ಸಂವಿಧಾನದಲ್ಲಿ ಅಂತರ್ಗತ- ವಾದ ವಿಷಯಗಳನ್ನು ಅಭ್ಯಾಸಿಗಳಿಗಾಗಿ ಈ ಕೆಳಗೆ ವಿಂಗಡಿಸಿ ಅನುಕೂಲವನ್ನುಂಟು ಮಾಡಿಕೊಡಲಾಗಿದೆ.

೧. **ಪ್ರತಿಮೆಗಳು:** ಇವುಗಳಲ್ಲಿ ಇಂದ್ರಿಯ ಸಂವೇದ್ಯವಾಗುವ ಅನುಭವ ಪ್ರತಿಮೆಗಳನ್ನೂ, ಅಂತಃಕರಣಸ್ಪರ್ಶಿಯಾದ ಅನುಭಾವ ಪ್ರತಿಮೆಗಳನ್ನೂ ಸೇರಿಸಿ ಕೊಳ್ಳಬೇಕು.

೨. **ಅಲಂಕಾರಗಳು :** ರೂಪಕ, ಉಪಮೆ, ಮುಂತಾದ ಕಾವ್ಯಾಲಂಕಾರ ಗಳು.

೩. **ಸಂಕೇತಗಳು :** ಕಾವ್ಯದ ಗತಿಶೀಲತೆ ಹಾಗೂ ಅರ್ಥವಿಸ್ತಾರಕ್ಕೆ ಪ್ರಯೋಗಿತವಾಗಿವೆ.

೪. **ಪ್ರತೀಕಗಳು :** ಕವಿಯ ವಿಚಾರಗಳನ್ನು ಪ್ರತಿನಿಧಿಸಲು ಇಲ್ಲಿ ಸಂಯೋಜಿತವಾಗಿವೆ.

೫. ಈ ಎಲ್ಲ ಪ್ರತಿಮಾ ಸಂವಿಧಾನದ ಅಂಶಗಳು ಕವಿಯು ಸಂಯೋಜಿಸಿದ ಶಿಲ್ಪತಂತ್ರದ ವಿಧಾನಗಳೆಂದು ಅರ್ಥಯಿಸುವದಕ್ಕಿಂತ ಹೆಚ್ಚಾಗಿ ಕವಿಯ ಅಭಿ-ವ್ಯಕ್ತಿಯ ಸತ್ವದ, ಸಾಮರ್ಥ್ಯದ ಅನಿವಾರ್ಯ ಮಾಧ್ಯಮಗಳು ಎಂದು ಅಂಗೀ-ಕೃತವಾದರೆ ಕವಿಯ ಯಥಾರ್ಥ ವಿಮರ್ಶೆಗೆ ಅನ್ಯಾಯಮಾಡಿದಂತಾಗುವದಿಲ್ಲ. ಇಷ್ಟು ಮೂಲನಿರ್ಣಯಗಳೊಂದಿಗೆ ಇಲ್ಲಿ ಬೇಂದ್ರೆ ಪ್ರತಿಮಾದೃಷ್ಟಿಯ ಒಂದು ಸ್ಥೂಲನೋಟವನ್ನೊದಗಿಸಲು ಸಾತ್ವಿಕ ಪ್ರಯತ್ನ ಮಾಡಲಾಗಿದೆ ಎಂದು ಮಾತ್ರ ಹೇಳಬಹುದು. ಈ ವಿಷಯಕವಾಗಿ ಪ್ರೌಢವಾದ ವಿಸ್ತಾರಗ್ರಂಥವನ್ನು ರಚಿಸಿದರೂ ಬೇಂದ್ರೆ ಪ್ರತಿಮಾ ಸೃಷ್ಟಿಯ ಬಗೆಗೆ ಪೂರ್ಣವಾಗಿ ಹೇಳಿದಂತಾಗಲಾರದು. ಆ ಅರ್ಥದಲ್ಲಿ ಇದೊಂದುಪೂರಕ ಭೂಮಿಕೆಯಾದೀತು ಎನ್ನುವದಷ್ಟೇ ಪ್ರಸ್ತುತ ಲೇಖನದ ಸದಾಶಯವಾಗಿದೆ.

§ § § §

೬೬

# ಅಂಬಿಕಾತನಯರ ಕವನಗಳಲ್ಲಿ ಮಾನವ ಭವಿಷ್ಯ ದರ್ಶನ

**ನಿ. ಶ್ರೀಶ ಬಲ್ಲಾಳ**

**ನಾಳೆಯ ಕನಸು :**

ಕವಿಯು ಭೂತಕಾಲದ ಒಂದು ಸಾಂಸ್ಕೃತಿಕ ಪರಂಪರೆಯನ್ನು ನಡೆಸಿಕೊಂಡು ಬರುವ ಸಾಂಕೇತಿಕ ವ್ಯಕ್ತಿ ಎಂದು ಅಂಬಿಕಾತನಯರು ತಮ್ಮ ಆತ್ಮಕಥನ (ಚತುರ್ಮುಖ)ದಲ್ಲಿ ಹೇಳಿದ್ದಾರೆ. ಪ್ರಾಯಶಃ ಒಂದು ಹಳೆಯ ಜಗತ್ತಿನಲ್ಲಿ ಒಂದು ಹೊಸಜೀವನದ ಅಂಕುರಾರ್ಪಣವಾಗುವ ಸಂಧಿಕಾಲದಲ್ಲಿ ಅಂಬಿಕಾತನಯರಂಥ ಸಿದ್ಧಕವಿಗಳು ಜನ್ಮತಾಳುತ್ತಾರೆ. ಇವರದು ಬರೇ ಕಾವ್ಯಸಾಧನೆಯಲ್ಲ, ಅದರಲ್ಲಿ ಸಿದ್ಧಿ ಇದೆ— ಎಂದು ಬಹಳ ಹಿಂದೆ ಮಾಸ್ತಿಯವರು ಬರೆದಿದ್ದರು. ಮಾನವಜೀವನದ ಗೊತ್ತುಗುರಿಗಳ ಬಗ್ಗೆ ಕವಿಹೃದಯದಲ್ಲಿ ಒಂದು ಹೊಸ ಎಚ್ಚರ ಮೂಡಿದೆ. ಅಂಬಿಕಾತನಯರು ತಾನು ಒಂದು ಹೊಸಕಾಲದ ಮುಂಜಾವದಲ್ಲಿ ಹುಟ್ಟಿದ್ದೇನೆ ಎಂಬ ಭಾವವನ್ನು ಮತ್ತೆ ಮತ್ತೆ ಕವನಿಸಿ ಹೇಳುತ್ತಾರೆ :

'ಚಂದ್ರ—ಸೂರ್ಯ ಸಾಲವೋ
ಬಂತು ಬೇರೆ ಕಾಲವು.' ('ಬಾಳಗರುಡಿ'—ನಾದಲೀಲೆ, ಪುಟ ೨೮)

'ಭೂಮಿ ತಾಯಿ ಏಳಲಿಹಳು
ತನ್ನ ದಿವ್ಯಲೀಲೆಗೆ.' ('ಹೆಣದ ಹಿಂದೆ'—ನಾದಲೀಲೆ, ಪುಟ ೨)

'ತೆರೆಮರೆಗಳನೆತ್ತರಿಸಿ ತೊಡಕುಗಳನು ಕತ್ತರಿಸಿ
ಹೊಸ ಬೆಳಕ ಬಿತ್ತರಿಸಿ ಶಕ್ತಿಯೊಂದು ಬರುವದು'
('ಅದುವರೆಗೂ'—ನಾದಲೀಲೆ, ಪುಟ ೪೫)

'ಪಡುವಲದ ಕೆನ್ನೀರ ತಳಿಯಲ್ಲಿ ಮುಳುಗಿದನು
ಕೆಂಡ ಕಾರುತ್ತ ಪ್ರೋಚ್ಚಂಡ ರವಿಯು

ಮೂಡಲದ ಮುಂಗಾಲು ಮೂಡಿದೊಡನೆಯೆ ಹಕ್ಕಿ
ಪಕ್ಕಿಗಳ ಒಡನೆಯೇ ಎದ್ದ ಕವಿಯು '
(' ಸಿದ್ಧರಾಮರ ವಚನವನ್ನು ನೆನೆದು ' ಗಂಗಾವತರಣ, ಪುಟ ೫೨)

' ನೆರೆತೆರೆಯಲುಂಟು ಸೌಂದರ್ಯಸತ್ಸಜ್ಜನಿಕೆ ಇರುವ ನೆಲೆಯು
ಸಿರಿಮನಸದ ವೈಭವದಿ ಮುಗಿಯಲಿಲ್ಲ ಈಶ್ವರನ ಸೃಷ್ಟಿಕಲೆಯು '
(' ಮಹಾಪ್ರಸ್ಥಾನ '— ಅರಳುಮರಳು, ಪುಟ ೧೩೪)

' ನಿರ್ಗತಿಕಳಲ್ಲ ಈ ಭೂಮಿ
ದುರ್ಗತಿಗೆ ಈಡಲ್ಲ ಈ ಮಾನವಜಾತಿ....'
(' ಸೌಭಾಗ್ಯದರ್ಶನ '— ನಮನ, ಪುಟ ೪)

**ಕನಸು ನನಸಾಗಬೇಕಾದರೆ :**

ಕನಸು ಕಾಣುವುದು ಕವಿಗೆ ಸಹಜ. ಆ ಕನಸು ನನಸಾಗಬೇಕಾದರೆ ಅದರಲ್ಲಿ ಶುದ್ಧಿ ಇರಬೇಕು; ಕನಸಿಗೆ ತಕ್ಕುದಾದ ಶ್ರದ್ಧೆಯಿಂದ ಕೂಡಿದ ಜೀವಪ್ರಯತ್ನವೂ ದೇವಕೃಪೆಯೂ ಸೇರಿಕೊಳ್ಳಬೇಕು.

' ಹಾರೈಕೆ ' (' ಅರಳುಮರಳು '— ಪುಟ, ೪೯) ಎಂಬ ಒಂದು ಕವನದ ಭಾವಸಂದರ್ಭವನ್ನು ಸೂಚಿಸುತ್ತಾ ಕವಿ ಹೀಗೆ ಬರೆದಿದ್ದಾರೆ :–

' ಹೊಸ ಕಾಲಕ್ಕೆ ತಕ್ಕ ಹೊಸ ಹಾರೈಕೆ ಬೇಕು. ಅದಾಗದೆ
ಹೊಸ ಕಾಲಕ್ಕೆ ಅರ್ಥ ಬರದು. '

' ತಾಯಿನುಡಿ ' (' ಅರಳುಮರಳು ' — ಪುಟ ೩೬೦) ಮತ್ತು ' ಸುದರ್ಶನದಲ್ಲಿ ' (' ಅರಳುಮರಳು '— ಪುಟ ೧೭೮ ) ಎಂಬ ಕವನಗಳ ಸಂದರ್ಭದಲ್ಲಿ ಹೇಳಿರುವ ಮಾತು : " ಹೊಸ ಕಾಲ ಉದಯವಾಗಿದೆ. ಆದರೆ ಆ ಉದಯ ಎಚ್ಚರಾಗಿ ಕಣ್ತೆರೆದು ಆಚರಣಶೀಲರಾದವರಿಗೆ ಮಾತ್ರ .... ಅದರ ಸೋಂಕಿಗೆ ಉತ್ತರಕೊಡುವ ಶಕ್ತಿ ಇಲ್ಲದವರು ಮನಸ್ಸಿನ ಘನಸಿದ್ದೆಯಲ್ಲೇ ಎಂದಿನಂತೆ ಹಿಂದಿನ ಕನಸು ಕಾಣುವರು. "

' ದೈವಯೋಜನೆ ' (' ಅರಳುಮರಳು ' — ಪುಟ ೪೫೨) ಎಂಬ ಕವನದ ಸಂದರ್ಭ :– ' ಎಲ್ಲ ಯೋಜನೆಗಳಿಗಿಂತಲೂ ದೈವಯೋಜನೆಯನ್ನು ಅರಿತು ಬಾಳುವದು ಸರಿಯಾದ ಯೋಜನೆ. ಆ ಪ್ರಜ್ಞೆ ಅಂಕುರಿಸಬೇಕು. ಅದು ಶಿಕ್ಷಣದ ಕಾರ್ಯ. '

**ಕನಸಿನೊಳಗಿನ ಕಣಸು :**

ಇಂಥ ಭವಿಷ್ಯದ್ದರ್ಶನದ ಮೂಲದಲ್ಲಿರುವುದು ಭೂತ-ವರ್ತಮಾನ-ಭವಿಷ್ಯಗಳನ್ನು ಏಕರಸವಾಗಿ ಕಾಣುವ — ಭಗವದ್ಭಕ್ತಿಯಿಂದ ಉದ್ದೀಪಿತವಾದ — ಆನಂದಮಯ ಸೃಷ್ಟಿದರ್ಶನ. ಇದು ನಿನ್ನಿನ ಕವನಲ್ಲ, ಇಂದಿನ ಕಣಸು, ಹೃದಯ-ಸಂವೇದ್ಯ ಅನುಭಾವ.

'ಈ ಸೃಷ್ಟಿ ಭಗವದ್ ದೃಷ್ಟಿ
ಇದರಂದವೇ ಭವಬಂಧ
ಅಭವಗಿದು ಮುಕ್ತಚ್ಛಂದ
ಮುಕ್ತ — ಭಕ್ತ — ಪ್ರಬಂಧ
ಬರಿ ವಿಸರ್ಜನವಲ್ಲ' .... (ಸೌಭಾಗ್ಯದರ್ಶನ—'ನಮನ' ಪುಟ ೧)

'ಅಂದಿಂದು ಮುಂದೆಂದು ಮೂರುಮುಖದಲ್ಲಿ ಮೂರು
ವೈಗೆ ಹೋಳಾಗಿ ನಿಂತಿತ್ತು ಹೊತ್ತು.
ಇಟ್ಟಡಿಯ ಕಿತ್ತಿ ಮೇಲೆತ್ತಿ ಇತ್ತಡಿ ನಡೆದು,
ಮೂರ ತಲೆಗಳನು ಮೆಟ್ಟಿತ್ತು ಚಿತ್ತು.
ವಾಸಕ್ಕೆ ಮನೆಯಂತೆ ಇಂದು ಸಾಕು,
ಹಿಂದು ಹಿತ್ತಲದಂತೆ ಒಗ್ಗಬೇಕು.
ಆಸೆಗಳ ಹೂಬಳ್ಳಿಯಾಗಿಕಂಗಳವು,
ಅಲ್ಲಿ ನೆಲಸಲಿ ನಮ್ಮ ಸಕಲಮಂಗಳವು.'
('ಮುಮ್ಮುಖದ ಹೊತ್ತು'—'ನಮನ' ಪುಟ ೭೨)

'ಈ ಘನದ ನೆಲೆ ಪಿಂಡಗೊಂಡಿಹ
ಆ ಮಹತ್ತಿನ ಉಂಡೆ ಗರ್ಭೀ-
ಕರಿಸಿ ಮೊಗ್ಗಾಗಿಹುದು ಮನದುನ್ಮನದ ಬಯಲಿನಲಿ.'
('ಕವಿಗೆ ಕಿವಿಗೊಡದಿಹರೆ'—ಉತ್ತರಾಯಣ ಪುಟ ೧೧)

ಮಾನವನಿಗೆ ಚಿರಂತನದ ಪರಿವೆ ಮತ್ತು ಬೆಳಕಿನ ಬಾಳಿನ ಅಭೀಪ್ಸೆ ಮೂಡಿರುವುದು ಈ ಕಣಸಿನ ಕಾಣ್ಕೆಯಿಂದಲೇ :

'ರಾತ್ರಿಯಲ್ಲ ನಮ್ಮ ಆದಿ ರಾತ್ರಿಯಲ್ಲ ಅಂತ್ಯವು
ತಾಯ ಬಸಿರ ಬೆಳಕೆ ನಮ್ಮ ಚಿರಂತನದ ಚಿಂತ್ಯವು.'
('ಅರಳುಮರಳು' — ಪುಟ ೨೩೫)

‘ ಆಸುರದ ಕೇವಲತೆಗೆಳೆವುದಾತ್ಮದ ತೇಜ,
ಭಕ್ತಿಲೀಲಾಸಾಮರಸ್ಯ ಪುರುಷನ ಬೀಜ
(‘ ಹರಿಹರ ಸಮರಸ’—ಸಂಚಯ, ಪುಟ ....)

‘ ನರನಾರಾಯಣನಾ ನವಕೋಟಿಯಿಂದಾ
ಆ ನಾಡಿನಿಂದಾ
ಈ ನಾಡಿಯಿಂದಾ
ನರನರಗಳ ಸಂಬಂಧಾ’ (‘ ಆನಂದತೀರ್ಥ ’ )

ಮಾನವನ ಭವಿಷ್ಯಚಿಂತನವು ಶುದ್ಧಿಯನ್ನು ಪಡೆಯಬೇಕಾದುದು ಈ ಕಣಸಿನ ಸ್ಪರ್ಶದಿಂದಲೇ. ಆ ಸ್ಪರ್ಶ ಬರೇ ಮಾತು — ಮಾಟಗಳಿಗೆ ಸಿಗುವಂಥದಲ್ಲ, ಮಾನವಹೃದಯವೇ ಆ ಸ್ಪರ್ಶಕ್ಕೆ ಸಿದ್ಧವಾಗಬೇಕು.

ನಾಳೆ ಎಂಬುವದು ನಿನ್ನಿನ ಮನಸು,
ಮುಂದೆ ಎಂಬುವದು ಇಂದಿನ ಕಣಸು
ಭೂತದಿಂದಲೇ ಭಾವವು ಬಂತು,
ಭಾವವಿಲ್ಲದೇ ಉದ್ಭವವೆಂತು ?
ಸತ್ ಎನ್ನುವುದು ಸತ್ತವಗಲ್ಲಾ,
ಇರುವ ಭಾಗ್ಯವದು ಅರಿವವಗೆಲ್ಲಾ
ಶಿವ ಕಲ್ಯಾಣವು ಕೂಡಲಸಂಗ,
ರುದ್ರವಿಲಾಸವು ಜೀವನಭಂಗ. ’
( ಅರಳುಮರಳು, ಪುಟ ೪೮೭ )

‘ ಇಂದಿನರಸನಿಗೇಕೆ ನಾಡನಾಳುವ ಚಿಂತೆ
ಇಂದು ರಸವನು ಸವಿವುದವನಿಗೆ ಸಾಜ.
ಇಂದು ಮುಳುಗದೆ, ನಾಳೆ ಹೊತ್ತು ಮೂಡುವದೇನು ?
ಹೊತ್ತು ಮೂಡಲು ಇಂದುಗಿಲ್ಲ ತೇಜ.....
ಹಿಂದುಮುಂದಿನ ಮುತ್ತ ಪವಣಿಸುವ ಇಂದು
ಎಂದೆಂದಿಗೂ ನೆಲೆಯು ಇರಲಂದಿಗಂದು ’
( ‘ ಇಂದು ’—ಉಯ್ಯಾಲೆ, ಪುಟ ೫೮ )

‘ ಹೃದಯುದುದಯ ಪರ್ವಕಾಲ, ಅದೇ ಬೇಕು ಸರ್ವಕಾಲ
ನಮ್ಮ ನಾಡಿನಾಡಿಗೆ.... ’
(‘ ನಮ್ಮ ಬಾಳುತೋರಿಕೆ’—ಅರಳುಮರಳು, ಪುಟ ೪೫೮)

ಈ ಕಣಸು ಮಾನವನ ದೇಹ, ಪ್ರಾಣ, ಮನಸ್ಸು, ಅಹಂಕಾರ — ಬುದ್ಧಿಯನ್ನು ಮೀರಿರುವುದಾದರೂ, ಮಾನವಹೃದಯದ ಆಳದಿಂದಲೇ ಅದು ಗೂಢವಾಗಿ ವ್ಯಾಪಾರ ಮಾಡುತ್ತದೆ :

‘ ದೇವ ಜೀವನ ಕೇಂದ್ರ
ಒಬ್ಬೊಬ್ಬನೂ ಇಂದ್ರ
ಏನಿದ್ದರೂ ಎಲ್ಲ ಇಲ್ಲೆ ತಿಳಿಯಾ. ’
(‘ ಬದುಕು ಮಾಯೆಯ ಆಟ ’— ಗಂಗಾವತರಣ, ಪುಟ ೬೦)

‘ ಪ್ರಾಣಪತಿ, ಜೀವೇಶ ಹೃದಯದಧೀಶ
ಅಂತರ್ಯಾಮಿಯು,
ಗುಟ್ಟನೊಳು ಸುಪ್ರೇಮಿಯು,
ಹುಟ್ಟಗೆಲ್ಲಕು ಸ್ವಾಮಿಯು.
ನಿದ್ದೆಮರೆಯಲಿ ಮಿದ್ದುತಿರುವನು
ಸರ್ವಕಾಮದ ಕಾಮಿಯು. ’
(‘ ಬೆಳಕು ತುಂಬಿದೆ ಒಡಲಲು ’—ಅರಳುಮರಳು, ಪುಟ ೬೦ )

**ಮಾನವನ ಪ್ರಕೃತಿ – ವಿಕೃತಿ :**

ಇಂಥ ಒಂದು ಮಹಾಜೀವನದ ಕಣಸು ಅನುಭಾವಗಮ್ಯ. ಶುದ್ಧಹೃದಯಕ್ಕೆ ಅದು ಸ್ಫುಟವಾಗಿ ಹೊಳೆಯಬಹುದು. ಆದರೆ ಮಾನವನ ಅಂತಃಕರಣವು ಅರ್ಥ—ಕಾಮಗಳ ಸುಳಿಯಲ್ಲಿ ಸಿಲುಕಿ, ಪ್ರಾಣಿಸಹಜವಾದ ವೈರವನ್ನೇ ಪ್ರೇಮವೆಂದು ಪುರಸ್ಕರಿಸುವುದು; ಹಳಸಿ ನಾರುವ ವಿಚಾರಗಳಿಗೆ ನವಸಂಸ್ಕೃತಿಯ ಮಾನಪತ್ರ ಸಲ್ಲಿಸುವುದು. ಆರ್ಥಿಕವ್ಯವಹಾರದಲ್ಲಿ ಮನುಷ್ಯನ ವಿಕೃತಿ ಪರಮಾವಧಿಯನ್ನು ಮುಟ್ಟುತ್ತದೆ. ವೈರವು ಅಸೂಯೆಯ ರೂಪವನ್ನು ತಾಳುತ್ತದೆ :

‘ ಅನ್ನವನು ಚಿನ್ನಗೊಳಿಸಿ
ತಿನ್ನಬರದ ಹಾಗೆ ಮಾಡಿ,
ಮನದ ಮನೆಗೆ ಮುಳ್ಳ ಚುಚ್ಚಿ,
ಬೆಳಕಿನೊಂದು ಕಣ್ಣ ಕಳೆದು,
ಗಾಳಿಬಟ್ಟೆಯನ್ನು ಕಟ್ಟಿ,
ಪ್ರಾಣ ನಿತ್ರಾಣಗೈದು,
ಎಲ್ಲ ದೇವರನ್ನು ಬೈದು,
ಸ್ವರ್ಗವಾಸಿಗಳನು ಮಾಡಿ....

ಶಾಂತಿ ಪಾಠ ಹೇಳುವವರೆ
ಅತ್ತ ಇತ್ತ ಸುತ್ತು ಮುತ್ತು '

('ಹೆಣದ ಹಿಂದೆ'— ನಾದಲೀಲೆ, ಪುಟ ೬೮)

'ಕಾಮುಕಿಲ್ಲ ಅಂತವು, ಅರ್ಥವಿಹುದಪಾರವು
ಅಂತೆ ಏನೊ ಅಂದರೂನೂ
ಈ ಎದೆಗಳು ಯಾರವೂ ?
ಇನ್ನೂನು ಆರವು...........
...............................
ಭೂತಕಾಲದೆವ್ವವು, ಬಲಿಬೇಡುವದೆಂದಿಗೂ
ಅಂತೆ ಏನೊ ಅಂದರೂನೂ
ಯುದ್ಧ ಇಹುದು ಇಂದಿಗೂ
ಕಾಲ ಸಂಧಿಸಂಧಿಗೂ.

('ಯಮದೇವನ ಒಕ್ಕಲು' — ಅರಳುಮರಳು, ಪುಟ ೬೨)

'ಹಳೆಯುವನು ಬಿದ್ದ ಹೊಸಹೊಸಬ ಗೆದ್ದ ನಡುವೆ ಕೋಡಂಗಿ ಎದ್ದ.
ನವೋನವದ ಬಯಲಾಟ ಭಾರಿತಾಂಡವದೆ ರಾಷ್ಟ್ರದುದ್ದ.

ಬಾಯಲ್ಲಿ ಶಾಂತಿ ತಲೆಯಲ್ಲಿ ಭ್ರಾಂತಿ ಸಂಕ್ರಾಂತಿ ಎದೆಯ ತುಂಬ.'

('ಮಧುವಾತಾ ಋತಾಯತೇ'— ಅರಳುಮರಳು, ಪುಟ ೪೮)

'ನರನ ಪ್ರಕೃತಿ ನರನ ವಿಕೃತಿ ವೈರಲೀಲೆ ಬೆಳಸಿದೆ,
ಕಳೆದುಕೊಂಡು ಬುದ್ಧಿಯನ್ನು ಜ್ಞಾನವನ್ನು ಗಳಿಸಿದೆ'

('ಭೀಷ್ಮ ಉತ್ತರಾಯಣ', ಪುಟ ೯)

ಅಕರ್ಮ — ( ನಿದ್ರೆ ) ವನ್ನೇ ಧರ್ಮವೆಂದೂ, ಅಭಾವ — ( ಶೂನ್ಯ ) ವನ್ನೇ ಮೋಕ್ಷವೆಂದೂ, ಭಯವನ್ನೇ ಭಕ್ತಿಯೆಂದೂ ಬೋಧಿಸುವುದು ಮಾನವವಿಕೃತಿಯ ಫಲ. 'ನಮನ'ದಲ್ಲಿ ಬರುವ 'ಸೌಭಾಗ್ಯದರ್ಶನ' ಎಂಬ ಮೊದಲಿನ ಕವನದ ಪ್ರಸ್ತಾವನೆಯಲ್ಲಿ ಇಂಥ ಮಾನವವಿಕೃತಿಯ ವೈಖರಿಗಳ ಜಾತ್ರೆಯನ್ನು ಕವಿ ಧ್ವನಿ ಪೂರ್ವಕವಾಗಿ ಚಿತ್ರಿಸಿದ್ದಾರೆ.

'ಅನ್ನಾವತಾರ' ಮತ್ತು 'ಭೂಮಿತಾಯಿಯ ಚೊಚ್ಚಿಲ ಮಗ' ಎಂಬ ಕವನಗಳ ಭಾವಸಂದರ್ಭವನ್ನು ಸೂಚಿಸಿ, ಕವಿ ೪೦ ವರ್ಷಗಳ ಹಿಂದೆ ಬರೆದಿರುವ ಮಾತು ಇಂದಿಗೂ ಮನಸೆಳೆಯುವಾಗಿಯೇ ಉಳಿದಿದೆ.

“ ಅನ್ನದ ಅವತಾರವಾಗದೆ ಪ್ರಾಣದ ಉದ್ಧಾರವಾಗುವಂತೆ ಇಲ್ಲ. ಈ ಅವತಾರವಾಗಬೇಕಾಗಿದೆ ಮಾನವನ ಮನೋಲೋಕದಿಂದ. ಆದರೆ ಅಲ್ಲಿ ಭಾವ ಕಷಾಯದಿಂದ ಜ್ಞಾನ-ಕರ್ಮಗಳ ಹಾದಿ ಹೀನವಾಗಿಬಿಟ್ಟದೆ....ಭಾವಶುದ್ಧಿಯನ್ನು ಒಪ್ಪಿಕೊಳ್ಳುವವರೆಗೆ ಹೊಸ ಮತ, ಹೊಸ ರಾಜ್ಯ, ಹೊಸ ಸುಖ ದುಃಖದ ಪರ್ಯಾಯಗಳು. ಅನ್ನವಿಚಾರದಲ್ಲಿ ಮಾನವನಿಗಿದ್ದ ದುರ್ಬುದ್ಧಿ ಅವನ ಮನೋದೌರ್ಬಲ್ಯದ ಪರಮಾವಧಿ...........ಇಂದಿನ ರಾಜ್ಯನೀತಿಯು ದುರ್ವಿಪಾಕದ ಒಂದು ಭಾಗ ಎಂದರೆ ಜಗತ್ತಿನ ಅನ್ನವನ್ನು ಬೆಳೆಸುವ ಒಕ್ಕಲಿಗನಿಗೆ ಒಂದು ಸಾಮಾನ್ಯ ಸುಖಜೀವನವನ್ನು ನಡೆಸಲು ಎಲ್ಲರ ಮುಖ ನೋಡಬೇಕಾಗುತ್ತದೆ. ಇಂಥ ದುಷ್ಕಾಲದಲ್ಲಿ ಜೀವನಕ್ಕಿಂತ ಮರಣದ ಮಹತಿಯನ್ನು ವರ್ಣಿಸುವ ತತ್ವಜ್ಞಾನದ ಭಾಸ ಹುಟ್ಟುತ್ತದೆ. ” (ನಾದಲೀಲೆ — ಭಾ.ಸ.ಸೂ.)

**ಶಾಂತಿಯ ತಳಹದಿ :**

ಭವಿಷ್ಯದಲ್ಲಿ ಬಾಳಬೇಕಾದ ಮನುಷ್ಯವ್ಯಕ್ತಿ ತನ್ನ ಸ್ವಂತಜೀವನದ ಅಹಂಕಾರ —ವಿಕಾರಗಳ ಬಗೆಗೆ ಎಚ್ಚರದಿಂದಿದ್ದು, ಸ್ವಂತಜೀವನದ ಶಾಂತಿಯನ್ನು ಕಾಪಾಡಿಕೊಳ್ಳಬೇಕಾದುದು ಮೊದಲ ಕರ್ತವ್ಯ. ಮನುಷ್ಯ ತನ್ನ ಅಂತರಂಗದಲ್ಲಿ ಶಾಂತಿಯ ನೆಲೆಯನ್ನು ಕಂಡುಕೊಂಡಾಗಲೆ ಅವನಿಗೆ ಉದ್ಧಾರದ ಹಾದಿ ಹೊಳೆದೀತು.

“ ಅನಿರುದ್ಧ ಶಾಂತಿ ತಳಹದಿಯು, ಅದುವೆ ಸಾಕ್ಷಿತ್ವ ಪ್ರಾಣಲಿಂಗ ”
(‘ ಮಧುವಾತಾ ಋತಾಯತೇ ’ —ಅರಳುಮರಳು, ಪುಟ ೪೮)

‘ ಮಾನವಚಾರಿತ್ರ್ಯದಲ್ಲಿ ಎಷ್ಟೋ ಪ್ರಳಯವಾಗಿವೆ.
.......................................................................
ನಾಗರಿಕತೆ ಮುಳುಗಿವೆ ಸಂಸ್ಕೃತಿಗಳು ಅರಳಿವೆ
ಅಧಃಪತನದವಾಗುತಿರಲು, ಅವತಾರವು ತೀಗುತಿರಲು
ಉದ್ಧಾರದ ಆಸೆಯಾಗಿ ಮೂಲಜಲಕೆ ಮರಳಿವೆ.
ಅಂತರಂಗದತ್ತ, ನಯನ ತಾನೆಯಾಗಿ ಹೊರಳಿವೆ.’
(‘ ಜಿಜ್ಞಾಸೆ ’—ಗಂಗಾವತರಣ, ಪುಟ ೮೨)

‘ ಬಿಚ್ಚುಮಾತು ಅಡತೀನೆಂತ
ಕಚ್ಚಬೇಡಿರಿ ಹಲ್ಲು ತುಟಿ
ಮುಚ್ಚಿ ಇಟ್ಟರ ಏನು ಬಂತು ಹುಚ್ಚಪ್ಪಗಳಿರಾ ?
ಸ್ವಚ್ಛಮನಸು ಮಾಡಿಕೊಂಡು

ಹೆಚ್ಚಿನ ನೆಲಿ ನೋಡಿಕೊಂಡು
ನೆಚ್ಚಿ ಮೆಚ್ಚಿ ಕಟ್ಟಬೇಕು ಅಚ್ಚಸಂಸಾರ '
('ಬಿಚ್ಚುಮಾತು '—ಅರಳುಮರಳು, ಪುಟ ೩೯)

'ಹೃದಯಸಮತೆ ಮೊದಲ ಪಾಠ
ಬಾಂಧವ್ಯವೆ ಜೀವದಾಟ........'
('ನವಯುಗಾರಂಭ '—ಅರಳುಮರಳು, ಪುಟ ೨೨)

ಇಂಥ ಪದ್ಯಗಳಿಗೆ ವ್ಯಾಖ್ಯಾನರೂಪವಾದ ವಿಚಾರಸರಣಿಯನ್ನು ಬೇಂದ್ರೆಯವರು 'ಕಾವ್ಯೋದ್ಯೋಗ ' ಎಂಬ ಲೇಖನದಲ್ಲಿ ಮಂಡಿಸಿದ್ದಾರೆ. :

"ಇಂದಿನ ಮಾನವ ನಾಳಿನ ಕಲ್ಯಾಣ ಕಾಣಬೇಕಾದರೆ, ತನ್ನ ಹೀನತೆಯನ್ನು ತಾನೇ ಕಂಡು ಕಳೆದು, ತನ್ನ ಉನ್ನತಿಯನ್ನು ಕಾಣುವ ಉತ್ಸಾಹ ತಾನೇ ತಾಳಬೇಕಾದೀತು. ವೀರರ ಗುಣ ಫಲ ಕೊಡುವ ವೈರವಲ್ಲ, ಬೀಜದ ಗುಣವನ್ನು ಫಲದಲ್ಲಿ ಪ್ರಕಟಿಸುವ ಅನಂತ ಸಾತ್ವಿಕ ಉತ್ಸಾಹ........ ಸ್ವಯಂ ಎಂಬುದು ಒರೆ, ಪ್ರಮಾಣ ಎಂಬುದು ಗೆರೆ. ಒರೆ— ಗೆರೆ ತೂಗಿ ನೋಡುವ ದೊರೆಯ ಸಾನ್ನಿಧ್ಯದಲ್ಲಿ ಸ್ವಸ್ಥತೆ ಇದೆ. ಆ ಸ್ವಸ್ಥತೆಯ ಸ್ವಯಂಭುತ್ವದಲ್ಲಿ ನೆಲೆಗಾಣಬೇಕಾಗಿದೆ, ಪ್ರತಿ ವ್ಯಕ್ತಿ ಇಂದಿನ ಭೂಮಂಡಲೈಕ ಸಾಮಾಜಿಕ ಕ್ರಾಂತಿಯಲ್ಲಿ. "

**ಮೈತ್ರಿಯ ಸಾಧನೆ :**

ಮನುಷ್ಯ ತನ್ನನ್ನು ತಾನೇ ಸಾಕ್ಷಿಯಾಗಿ ನಿರೀಕ್ಷಿಸುವವರೆಗೆ ಇನ್ನೊಬ್ಬರ ಗುಣಗಳಿಗೆ ಹಾರ್ದಿಕ ಗೌರವ ತೋರಿಸಲಾರನು.

'ದೇವ ಅಸುರ ಆರ್ಯನಾರ್ಯ
ನಿನ್ನ ನೀನೇ ಕೊಂದೆಯಾ
ಮತ್ತೆ ಬಂಧು ಎಂದೆಯಾ ? '
('ಊರು ಮತ್ತು ಖಾಲ್ಡಿಯಾ '— ಅರಳುಮರಳು, ಪುಟ ೩೯)

ಜಗತ್ತಿನೊಡನೆ ಕಾದಾಡುವುದನ್ನು ನಿಲ್ಲಿಸಿ ಅಂತರಂಗದ ಜೀವಂತ ಶಾಂತಿಗಾಗಿ —ಜೀವನ್ಮುಕ್ತಿಗಾಗಿ— ಪರಿತಪಿಸುವ ಮಾನವವ್ಯಕ್ತಿಗಳ ನಡುವೆ ನಿಜವಾದ ಸ್ನೇಹ ಸಾಧ್ಯವಾದೀತು.

'ಒಬ್ಬನೊಬ್ಬ ತಿಳಿಯಬೇಕು, ಅದುವೆ ಹಬ್ಬ ಭಾವಕೆ,
ಕೊಲ್ಲುವ ಕೋಲಾಹಲದಲ್ಲಿ ಸಾವೆ ಬಹುದು ಜೀವಕೆ '
('ಹಿಗ್ಗು ತರಲಿ ಬಿಡುಗಡೆ '—ಅರಳುಮರಳು, ಪುಟ ೭೬)

‘ ನಾನಾರೊ ? ನೀನಾರೋ ?
ಎನಬೇಡವೋ ಮೂರ್ತಿ
‘ ನಾ ನೀನು, ನೀ ನಾನು.... ಇದು ಆಶಾಪೂರ್ತಿ. ’
(ಇದು ನಭೋವಾಣಿ, ಪುಟ ೬)

ಮಾನವರೆಲ್ಲರೂ ಒಬ್ಬಳೇ ಭೂಮಿತಾಯಿಯ ಮಕ್ಕಳಾದರೂ ಸ್ವಾತಂತ್ರ್ಯ (ಲಿಬರ್ಟಿ), ಸಮಾನತೆ (ಇಕ್ವಾಲಿಟಿ) ಯ ಆಂದೋಲನಗಳಲ್ಲಿ ವೈಷಮ್ಯ ಬೆಳೆದಷ್ಟು ಸಹೋದರಭಾವ (ಫ್ರೆಟರ್ನಿಟಿ) ಬೆಳೆಯುವದಿಲ್ಲ. ವ್ಯಕ್ತಿ – ವ್ಯಕ್ತಿಯ ನಡುವೆ ಹಾರ್ದಿಕಸ್ನೇಹ ಕಡಿಮೆಯಾಗಿರುವುದೇ ಈ ವೈಷಮ್ಯಕ್ಕೆ ಕಾರಣ.

ಮೈತ್ರಿಯ ಸಾಧನೆ ಅಂಬಿಕಾತನಯರ ಮಾನವ್ಯದರ್ಶನದ ಒಂದು ಮುಖ್ಯ ಅಂಶ.

ಭಗವಂತನೆದುರು ಭಕ್ತಿರಸ ಉಕ್ಕಿಬರುವಾಗಲೂ ಕವಿಗೆ ಊರುಗೋಲು ಸ್ನೇಹಭಾವ.

‘ ಎಲೆ ಸುಹೃದ ಸರ್ವಭೂತಾಂತರಸ್ಥನೆ
ನರನೆ ನಾರಾಯಣನೆ,
ನಿನ್ನ ಮೈತ್ರಿಯ ಉಗಾಭೋಗ ಊರು ಈ ಹಕ್ಕಿಯಲ್ಲಿ,
ತುಂಬು ಜೀವನ ದೇವ........... ’
(‘ ಸುಹೃದ ’—ಉಯ್ಯಾಲೆ, ಪುಟ ೨೮)

‘ ನೀನೇ ಶರಣ್ಯನೈ, ನಾನು ಅಶರಣ ಭಕ್ತ
ಇಲ್ಲಿ ಕೂಡಿದೆ, ನಿಮ್ಮ — ನಮ್ಮ ಸಖ್ಯ ’
(‘ ಸಂಕಷ್ಟ ಹರಣಾಷ್ಟಕ ಮುಕ್ತಾವಲಿ ’—ಇದು ನಭೋವಾಣಿ, ಪುಟ ೧೬)

‘ ಹಾಸ್ಯಕಿರಣ ತದನುಸರಣ
ತದಿತರ ಪಥ ಕಾಣೆ ನಾ.... ”
(‘ ನನ್ನ ಹಾಡು ’— ಗರಿ, ಪುಟ ೧೫)

ಮಾನವವ್ಯಕ್ತಿಗಳ ಸಂಬಂಧದಲ್ಲೂ ಈ ಸ್ನೇಹಭಾವ ಬೆಳೆಯಬೇಕು :

‘ ಯಾ ಬಣ್ಣವಿದ್ದರೇನು,
ಯಾಕಣ್ಣ ಆದರ ಮಾತು ?
ಬೆಳಕಾಗಲೆಮ್ಮ ಬದುಕು,
ಬಂದೀತು ಜೀವ ಹೂತು. ’
(‘ ಭೂಮಿತಾಯಿ ’— ನಮನ, ಪುಟ ೧೮)

‘ ಇಳೆಯ ಮಕ್ಕಳೆಲ್ಲ ಬನ್ನಿ
ತಾಯ ತವರುಮನೆಗೆ
ಭೇದ ಬಲಿಸಿ ಬಳಲಬೇಡಿ
ಎಂದು—‘ ನನಗೆ, ನಿನಗೆ ’. ’
(ಪ್ರೇಮಬೀಜ — ಸೂರ್ಯಪಾನ— ಅರಳುಮರಳು ಪುಟ ೪೮೨)

ತತ್ತ್ವಕ್ಕೆ ಸಂಬಂಧಿಸಿ ಚಿಂತನ— ಮಂಥನದಲ್ಲೂ ಸ್ನೇಹಭಾವ ಬೇಕು.

‘ ದ್ವೈತದ ಅದ್ವೈತವು
ಅನೇಕದಲ್ಲಿ ಐಕ್ಯವು
ಬಾಳನುಳಿಯ ಸಾಹ್ಯವು.
ಅಭೇದದೊಳಗೆ ಭೇದವು
ಇದೆ ನವಸಂವೇದವು. ’
( ಕೇಳಿ ನುಡಿ, ಕಂಡು ನಡೆ—ಅರಳುಮರಳು— ಪುಟ ೩೧೧)

ರಾಷ್ಟ್ರಜೀವನದಲ್ಲೂ ಇದು ಬೇಕಾಗಿದೆ.

‘ ಹಳ್ಳಿ ಹಳ್ಳಿ ಸಕಲಭೋಜ್ಯ
ಭಾರತವಿದು ಅವಿಭಾಜ್ಯ
ಜಗತ್ತೆಲ್ಲ ಏಕರಾಜ್ಯ ಸಾರಲಿ ಶ್ರುತಿಗೆ. ’
(‘ ನವಯುಗಾರಂಭ ’—ಅರಳುಮರಳು, ಪುಟ ೩೯೯)

ಕರ್ನಾಟಕದ ಪ್ರಗತಿಗೂ ಇತರ ದೇಶಭಾಷೆಗಳೊಡನೆ ಸ್ನೇಹದ ಹೊಂದಾಣಿಕೆ ಬೇಕು.

‘ ಮರಾಟರಾಕೆ ಬಡಗಣ
ತೆಲುಗರೀಕೆ ಮೂಡಣ
ಕೇರಳಿ ಇರೆ ಪಡುವಣ
ತಮಿಳರಾಕೆ ತೆಂಕಣ
ಕೊಡಗು ತುಳುವು ಕೊಂಕಣ
ಕನ್ನಡ ಸಿರಿ ಕಂಕಣ
( ಕೇಳಿ ನುಡಿ, ಕಂಡು ನಡೆ—ಅರಳುಮರಳು ಪುಟ-೩೧೩)

ಕನ್ನಡಿಗರ ಭಾವೈಕ್ಯವಾಗಬೇಕಾದರೂ ಕನ್ನಡಸಂಸ್ಕೃತಿಯ ಹಲವು ಮುಖಗಳು ಒಮ್ಮುಖವಾಗಿ ಸಾಗಬೇಕು :

‘ ಕೂಡಲಿ ಜಿನ ಹರಿಹರ ಶರಣ
ನವಧರ್ಮದ ಐಕ್ಯಾವರಣ ’
(‘ ದಿವ್ಯಧ್ವನಿ ’— ಅರಳುಮರಳು — ಪುಟ ೩೦೫)

ದಾಂಪತ್ಯಪ್ರಣಯದಲ್ಲೂ ಕೌಟುಂಬಿಕ ಸುಖದುಃಖಗಳಲ್ಲೂ ಈ ಮೈತ್ರಿಯದೇ ಸೊಲ್ಲು :

‘ ಒಡಹುಟ್ಟಿಃ ತಂತಮ್ಮ ಒಗೆತನದ ಬಗೆಯ ಕಾಣಿರೆ,
ಜಂಭದಲಿ ಏನು ಸುಖವೋ ಕಾಣೆನು....’
(‘ ಒಡಲು ’—ಉಯ್ಯಾಲೆ- ಪುಟ ೧೩)

‘ ಎಂದಿನಿಂದಲೋ ಏನೊ ಒಳಗೊಂದು ಸಖಜೀವ
‘ ಸಖಿ; ಬಾರೆ ಬಾ; ’ ಎಂದು ಕೂಗುತಿದೆ.

‘ ಮುಂದಿನ ಪಥದಲಿ ಸಖಿಯಾಗು ಬಾ ! ’ ಎಂದು
ನನ್ನ ಮನೋರಥ ನೂಗುತಿದೆ. ’

ಬಾನಿಂದ ಬಾನಿಗೆ ಹಾಡಿನ ತಾನೊಂದು
ಸಖಿ — ಸಖಿ — ಸಖಿಯೆಂದು ಕೂಗುತಿದೆ.

ನಾನೂ ನೀನೂ ಸಖ — ಸಖಿ ಸಮ — ಸಖಿ
ಎಂದೆನುತ ಮುಂದಕೆ ಹೋಗುತಿದೆ; ’
(ಸಖೀಗೀತ — ಪುಟ ೪೪)

‘ ಮೈತ್ರಿಯ ಲೋಕದ ಮಿತ್ರನುದಯದ ಕಾಲ
ಹೊಸ — ಬಾಳ ಬದುಕಿಗೆ ಕರೆಯುವುದು. ’
( ಸಖೀಗೀತ — ಪುಟ ೪೩ )

ಇಂಥ ಮೈತ್ರಿಯ ಸಾಧನೆಯಿಂದ ಹೊಸ ರೀತಿಯ ಬದುಕು — ಬಾಳು ಹೊಮ್ಮಬಹುದು; ಮಾನವರಲ್ಲಿ ಐಕ್ಯ ಮೊಳೆಯಬಹುದು.

**ಪ್ರೀತಿಯ ರೀತಿ :**

ಹಾರ್ದಿಕಸ್ನೇಹದ ನೆಲೆಯಲ್ಲಿ ಪರಿಪಾಕಗೊಳ್ಳುವ ಮಾನವಜೀವನದಲ್ಲಿ ಪ್ರೇಮವನ್ನು ಸಾರ್ಥಕಗೊಳಿಸುವ ಶಕ್ತಿ ಬಂದೀತು.

‘ ರಸವೆ ಜನನ, ವಿರಸ ಮರಣ, ಸಮರಸವೇ ಜೀವನಾ ’ ಎಂಬುದು ಅಂಬಿಕಾತನಯರು ಕನ್ನಡಿಗರಿಗೆ ಬಹಳ ಹಿಂದೆ ನೀಡಿದ ಜೀವನಸೂತ್ರ. ಒಂದು ಜೀವ ಇನ್ನೊಂದು ಜೀವದೊಡನೆ ಸಮಗ್ರವಾಗಿ ಹೊಂದಿಕೊಳ್ಳಬೇಕಾದರೆ ಇಂಥ ಸುಖದುಃಖ ಸಾಮರಸ್ಯ ಬೇಕು. ಈ ಸಾಮರಸ್ಯದಲ್ಲೇ ಪ್ರೀತಿಯ ಉದಯ.

‘ ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆದುದು.

ಬಾಳಲ್ಲ ಬದುಕಲ್ಲ ಜೀವಜೀವಕೆ ಉ-
ದ್ದೀಪನವಾದುದೆ ಜೀವನವು.

ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ
ರಸಗಂಗಾ ನದಿಯಲ್ಲಿ ಅದರುಗವು.

ಹೆದರದಕೆ ಪ್ರೀತಿಯು, ಹಿಗ್ಗಿನ ರೀತಿಯು
ಆತ್ಮದ ನೀತಿಯು ಮಧುಸಂಗವು. ’

(ಸಖೀಗೀತ — ಪುಟ ೪೪)

ಮಣ್ಣು-ಹೆಣ್ಣು- ಹೊನ್ನುಗಳ ಬಗೆಗಿರುವ ದುರಾಶೆಯನ್ನು ನೀಗಿಸಿಕೊಂಡು ಬೆಳಕಿನ ಹಾದಿಯಲ್ಲಿ ಸಾಗುವ ಸ್ನಿಗ್ಧಜೀವಗಳಿಗೆ ಈ ಪ್ರೀತಿಯ ಸ್ವಾರಸ್ಯ ತಿಳಿಯುತ್ತದೆ.

ಇಂಥ ಪ್ರೀತಿ ಬಹುಜನರ ಜೀವನದಲ್ಲಿ ಪಾಕವಾಗುವುದು ದಾಂಪತ್ಯಮಯದಲ್ಲಿ, ಕೌಟುಂಬಿಕ ಕ್ಷೇತ್ರದಲ್ಲಿ. ಬೇಂದ್ರೆಯವರ ಮಾತಿನಲ್ಲೇ ಹೇಳುವುದಾದರೆ :

‘ ಸರ್ವಾವಸ್ಥೆಗಳಲ್ಲಿ ಅದಕ್ಕನುಗುಣವಾಗಿ ಸುಖದುಃಖದ ಅದ್ವೈತ ಉಣ್ಣುವ ಗಾರ್ಹಸ್ಥ್ಯ ಪ್ರೀತಿ ಎಲ್ಲ ಆಶ್ರಮಗಳಲ್ಲೂ ಹಿರಿಯ ಆಶ್ರಮ........ ಇಂಥ ಪ್ರೇಮಾದ್ವೈತಬದ್ಧ ಕುಟುಂಬಗಳ ಸಂಘ ರಾಷ್ಟ್ರ ರಾಷ್ಟ್ರಗಳ ಸಂಘ, ಮಾನವತೆ. ಮಾನವತೆಯ ಪರಿಪಾಕ ಪರಿಣಾಮವೇ ದೈವಿಕತೆ. ಸಮರಸಸಾಹಿತ್ಯವು ದೈವಿಕತೆಯ ಸ್ಥಾಯಿ. ವಿರಸವಾಗ್ವಾದವು ವ್ಯಭಿಚಾರಿಯ ಸಂಚಾರ. ’

ಕಾವ್ಯೋದ್ಯೋಗ :

ಸಹಜೀವನವನ್ನು ಬಾಳಬೇಕಾದ ಮಾನವನು ಕೌಟುಂಬಿಕ ಪ್ರೀತಿಯ ನೆಲೆಯಲ್ಲಿ ಅರಗಿಸಿಕೊಳ್ಳಬೇಕಾದ ಅನುಭವಗಳನ್ನು ಅಂಬಿಕಾತನಯರು ಚಿತ್ರಿಸುವ ರೀತಿ ಅನುಭಾವಪೂರ್ಣವಾದುದು. ಆದ್ದರಿಂದ ಅವರ ಪ್ರೇಮಗೀತಗಳು ಕೌಟುಂಬಿಕ ವಾತ್ಸಲ್ಯದ ಸಹಜತೆಯಿಂದಲೂ ಜಾನಪದ ಜೀವನದ ಗಡುಸುತನದಿಂದಲೂ ದೀರ್ಘಾವಧಿ ಬಾಳಬಲ್ಲವು.

ಕೌಟುಂಬಿಕ ವಿಕೃತಿಯಿಂದ ಮನುಷ್ಯಜೀವನದಲ್ಲಿ ನಡೆದಿರುವ ಉದರ—ಸ್ಮಶಾನ—ಪುರಾಣ ವೈರಾಗ್ಯಗಳ ಹಾವಳಿಯನ್ನು ಅವರ ಸಾಮಾಜಿಕ—ರಾಜಕೀಯ ಕವನಗಳು ಮಾರ್ಮಿಕವಾಗಿ ಚಿತ್ರಿಸುತ್ತದೆ.

‘ ನಾದಲೀಲೆ ’ಯಲ್ಲಿ ಬರುವ ‘ ಮನದನ್ನೆ ’ ಮತ್ತು ‘ ಹೆಣದ ಹಿಂದೆ ’ ಎಂಬ ಎರಡು ಕವನಗಳ ಭಾವಸಂದರ್ಭ ಸೂಚಿಸುತ್ತಾ ಕವಿಯು ಪ್ರೇಮದ ಕುರಿತು ಬರೆದಿರುವ ಮಾತುಗಳು ಬಹಳ ಮೌಲಿಕವಾಗಿವೆ :

‘ ಪತಿಗೆ ದೇಹಾದಿಯಾಗಿ ಸರ್ವಾರ್ಪಣ ಮಾಡಿದ ಸತಿ, ಸತಿಯಲ್ಲಿ ಮನಃಪೂರ್ವಕವಾಗಿ ಆಸಕ್ತನಾದ ಪತಿ ಇವರ ಭಾವಸಂಶುದ್ಧಿಯಾಗದೆ ಪ್ರೇಮದ ಜಗತ್ತು ಪ್ರಕಟವಾಗುವುದಿಲ್ಲ. ಅಲ್ಲಿಯವರೆಗಾಗುವ ಸಂಸಾರಸಂಗ್ರಾಮಗಳು ಕುರುಕ್ಷೇತ್ರಕ್ಕಿಂತಲೂ ದುರಂತ. ಸಂವಾದಕ್ಕಿಂತಲೂ ವಾದದ ಹಾದಿಯನ್ನು ಹಿಡಿದ ದಂಪತಿಗಳ ಗತಿಯಂತೂ ಹೇಳತೀರದು. ಸಮಗ್ರ ಸಾಮರಸ್ಯ ಇಲ್ಲಿ ಹುಟ್ಟದಿದ್ದರೆ ಇನ್ನು ಎಲ್ಲಿ ಹುಟ್ಟಬೇಕು ?........... ಅನಾಥಳಾದೊಡನೆ ಅಗತಿಕಳಾಗಿ ಕೂಗುವ ಒಂದು ಹೆಣ್ಣುಧ್ವನಿ ನಿನದಿಸುವವರೆಗೂ ಭೂಮಿಯಲ್ಲಿ ಶಾಂತಿಗೆ ಸ್ಥೈರ್ಯವಿಲ್ಲ. ದೇಶದೇಶಗಳ ಪಾರತಂತ್ರ್ಯಕ್ಕೂ ಹೆಣ್ಣಿನ ಅಗತಿಕತೆಗೂ ಸ್ವಾತಂತ್ರ್ಯಸಂಗ್ರಾಮಗಳಿಗೂ ನಿಕಟಸಂಬಂಧವಿದೆ. ತಾಯಿಯೇ ಶಾಂತಿಯುಗದ ಪ್ರಥಮ ಮನು. ’

‘ ಮನದನ್ನೆ ’ ಕವನದ ಕೊನೆಯ ಸಾಲುಗಳು ಇಂತಿವೆ :

‘ ನಾನೆಂದರೂ ಒಂದೆ
ನೀನೆಂದರೂ ಒಂದೆ
ಹೊಂದುಗೂಡಿಕೆ ಇರದ ಜನಕೆ ನೊಂದೆ.
ನೀನು ನನ್ನವಳೆಂದು ಬಳಿಗೆ ಬಂದೆ.
ಹೊಸಹುಟ್ಟು ಬರುವದಿದೆ ಇನ್ನು ಮುಂದೆ
ಆಗೋಣ ಆ ಜಗದ ತಾಯಿ ತಂದೆ. ’

(ನಾದಲೀಲೆ — ಪುಟ ೬೬)

ಕಾಮ — ಪ್ರೇಮಗಳ ಸಂಬಂಧ ಹೇಗೆ ? ಇದು ಬಾಳನ್ನೇ ಒಗಟಾಗಿ ಮಾಡಿರುವ ಒಂದು ಪ್ರಶ್ನೆ.

‘ ಸರಸ ವಿರಸವಾಗಿ ಮೌನ ನೀರಸವಾಗಿ
ಒಗಟೆಯಾಗುವ ಬಾಳು ಒಡೆಯದಿದೆ. ’

(ಸಖೀಗೀತ — ಪುಟ ೪೦)

ಅಂಬಿಕಾತನಯರ “ ಸಖೀಗೀತ ”, ‘ ಮೂರ್ತಿ ಮತ್ತು ಕಾಮಕಸ್ತೂರಿ ’, ‘ ಕನ್ನಡ ಮೇಘದೂತ ’ದಲ್ಲಿ ಈ ಸಮಸ್ಯೆಯ ಚಿತ್ರಣ ಇದೆ. ‘ ಸಖೀಗೀತ ’ದಲ್ಲಿ “ ಅಗ್ನಿಸಾಕ್ಷಿಯಾಗಿ ದಾನವಾಗಿ ಬಂದ ಕನ್ನೆಯನ್ನು ಸುಖದುಃಖಗಳಲ್ಲಿ ಸಮ-

ಭಾಗಿಯಾಗುವ ಸಹಾನುಭೂತಿಯ ಅಂತಃಕರಣದಿಂದ ಸಖಿಯನ್ನಾಗಿ ಮಾಡುವ ಕ್ರಮದ" ಚಿತ್ರಣವಿದೆ. 'ಕಾಮುಕಸ್ತೂರಿ'ಯಲ್ಲೂ, 'ಕನ್ನಡ ಮೇಘದೂತ'ದಲ್ಲೂ ಪೀಠಿಕಾಭಾಗದಲ್ಲೂ ಕಾಮದ ಮೂಲಸ್ವರೂಪದ ಶೋಧನೆ ಇದೆ.

"ಒಂದೊಡೆದು ಎರಡಾದ ಸತ್ವವೇ ಪುನಃ ಒಂದಾಗುವ ಅದಮ್ಯದಾಹವಲ್ಲದಿದ್ದರೆ, ಈ ಕಾಮುಕ್ಕೆ ಬೇರೆ ಅರ್ಥ ಏನು ?" ಎಂದು ಕವಿ 'ವಿಚಾರಮಂಜರಿ' ಯಲ್ಲಿ ಕಾಮದ ಸ್ವರೂಪಶೋಧನೆ ಮಾಡಿದ್ದಾರೆ.

'ಕನ್ನಡ ಮೇಘದೂತ' ಪೀಠಿಕಾಭಾಗದಲ್ಲಿ ವಿಷಯ — ಕಾಮ, ಕಾವ್ಯ— ಕಾಮ, ಭಕ್ತಿ — ಕಾಮ ಎಂಬ ೩ ಹಂತಗಳಲ್ಲಿ ಕಾಮದ ಬೆಂಕಿ ಬೆಳಕಾಗಿ ಮಿಂಚುವ ಸಾಧ್ಯತೆಯನ್ನು ವರ್ಣಿಸಿದ್ದಾರೆ.

> 'ಅನ್ನಪ್ರಾಣಗಳ ಮಿಥುನದಂತೆ ಮೈಯೆರಡು ಕಲೆತು ಬೆರೆತು,
> ಮನದ ಕಾವಿನಲಿ ಕಾಮುವಾಗಿ ಮನದಾಚೆಗೇನೋ ಅರಿತು,
> ಚಿತ್ತದಲ್ಲಿ ನಿಷ್ಕಾಮರತಿಯಾಗಿ ರಸಪಾಕವಾಗಿ ನಿಂತು,
> ಧಾರೆಗೆಡದೆ ಭಗವಂತನಲ್ಲಿ ಚಿರಭಕ್ತಿಯಾಗಿ ಬಂತು.'
>
> (ಕನ್ನಡ ಮೇಘದೂತ — ಪೀಠಿಕಾ ಭಾಗ)

ಹೋಳಾಗಿ ಬಿದ್ದಿರುವ ಜೀವಸವನ್ನು ಒಂದುಗೂಡಿಸಬೇಕಾದುದೇ ಕಾಮ-ದೇವನ ಮೂಲ ಉದ್ದೇಶ. ಮೂಲದಲ್ಲಿ ರತಿಯನ್ನು ಬಿಟ್ಟು ಕಾಮ ಇರಲಿಲ್ಲ.

> 'ಜಗದ ತಂದೆತಾಯಿಯರ ಕಂಡ ಅವತರಿಸೆ ಜೀವನಾಗಿ
> ಬಂತು ಪೂರ್ವದಲ್ಲಿ ದೇವ — ಕಾಮವೇ ಕಾಮದೇವನಾಗಿ.
> ರತಿಯನಗಲಿಸಿದರಯ್ಯೊ ಪಾಪಿಗಳು ಕಾಮನನ್ನು ರಮಿಸಿ....'
>
> (ಮೇಘದೂತ—ಪೀಠಿಕೆ)

ಈ ಉದ್ದೇಶ ಭಂಗವಾದಾಗ ರತಿ — ಕಾಮರ ವಿರಹ ಉಂಟಾಯಿತು. ಕಾಮವು ರತಿವಿರಹದಲ್ಲಿ ವಿಷಯರುಚಿಗೆ ಸಿಕ್ಕಿ ವ್ಯಭಿಚಾರಿಯಾಯಿತು.

> 'ಕವಲು ಕವಲಾಗುತಿದೆ ಆಸೆ, ಕುಣಿಯುತಿದೆ ಪ್ರಾಣ.
> ಮಂತ್ರವನೆ ನುಂಗಿತೊ ತಂತ್ರ ?
> ಎಲೆ ಕನ್ನೆ ಮನದನ್ನೆ ?'
>
> (ಸಂತತಿ — ಉಯ್ಯಾಲೆ, ಪುಟ ೯)

ಕಾವ್ಯ — ಕಾಮದಲ್ಲಿ, ಭಕ್ತಿ — ಕಾಮದಲ್ಲಿ ಕಾಮ — ರತಿಯರ ಪುನ-ರ್ಮಿಲನವಾಗಿ ಕಾಮದ ಕಾವು ಬೆಳಕಿಗೆ ಪೋಷಕವಾಗುತ್ತದೆ.

" ಕಾಮಿ ಬಗ್ಗುವನು ' ದೇಹಿ ' ಎಂದು........
ಕವಿಯು ಒಗ್ಗುವನು ತನ್ನನಂಗು ಭಾವಕ್ಕೆ ಮಾತ ತೊಡಿಸಿ,
ಭಕ್ತ ಹಿಗ್ಗುವನು ತನ್ನ ಜೀವ ಹಸಮಾಡಿ ದೇವನಾಗಿ,
ಒಬ್ಬ ನೊಲಿಸುತಿಹ ಒಂದೆ ನೂಲಿನಲಿ ಎಲ್ಲ ಕಾವನಾಗಿ "
(ಮೇಘದೂತ— ಪೀಠಿಕೆ)

ಮಾನವಪ್ರಣಯದಲ್ಲಿ ಒಂದು ಚಿರವಿರಹದಕಾಮ ಪ್ರೇಮವನ್ನು ಶುದ್ಧೀಕರಿಸುವುದು.

" ಭೂಮಿತಾಯಿ ಬಾನೊಡೆಯನಿಂದ ಅಗಲಿಹಳನಾಡಿಯಿಂದ
ವಿರಹಬವಣೆಯಲಿ ತಿರುಗುವಳು ಹೊತ್ತು ಸುತ್ತಿನಿಂದ "
(ಕನ್ನಡ ಮೇಘದೂತ ಪೀಠಿಕೆ)

" ಭೂವನ ಕುಸುಮಿಸಿ ಪುಲಕಿಸಿ ಮರಳಿಸಿ
ಕೋಟಿ ಕೋಟಿ ಸಲ ಹೊಸಯಿಸಿತು.
ಮಿತ್ರನ ಮೈತ್ರಿಯ ಒಸಗೆ ಮಸಗದಿದೆ
ಮರುಕದ ಧಾರೆಯ ಮಸೆಯಿಸಿತು. "
(' ಅನಂತಪ್ರಣಯ '—ನಾದಲೀಲೆ, ಪುಟ ೫೦)

ಇಂಥ ವಿರಹಾಗ್ನಿಯಲ್ಲಿ ಪಾಕವಾದಾಗಲೇ ಮಾನವಜೀವಕ್ಕೆ ಕಾಮ-ಪ್ರೇಮ ಗಳ ಸಂಬಂಧ ಸುಸೂತ್ರವಾಗಿ ಹೊಳೆದೀತು ಎಂಬ ಸಂವೇದನೆಯನ್ನು ಈ ಪದ್ಯ ಗಳಲ್ಲಿ ಕಾಣಬಹುದು. :

" ತನ್ನ ಕಿಚ್ಚಿನೊಳೆ ಬೆಂಕಿ ಸುಟ್ಟು ಬೆಳಕಾಗಿ ಮಿಂಚಬಹುದು,
ಮೂಲಕಾಮದಲಿ ವಿರಹ ಬೆಳೆದು ಸುಪ್ರೇಮವರಳಲಹುದು. "
(ಕನ್ನಡ ಮೇಘದೂತ—ಪೀಠಿಕೆ)

**ಕನ್ನಡದ ನಾಡಿನಲಿ ಮುನ್ನಡೆಯ ಹೆಜ್ಜೆಯಲಿ :**

" ಜನ್ಮ ಕೊಟ್ಟ ತಾಯಿ ಹೆಚ್ಚಿನವಳು. ಆದರೆ ಅವಳಿಗಿಂತ ಅವಳ ಹೃದಯದ ಮಾತು ಆದಕ್ಕೂ ಹಿರಿದಾದ ಒಂದು ಜನ್ಮವನ್ನು ನಮಗೆ ಕೊಡುತ್ತದೆ. ಅದೇ ದ್ವಿಜತ್ವದ ದೀಕ್ಷೆ. "

—ನಾದಲೀಲೆಯಲ್ಲಿ ಬರುವ ' ತಾಯಿ ' ಎಂಬ ಕವನದ ಭಾವಸಂದರ್ಭ ಸೂಚಿಸುತ್ತಾ ಅಂಬಿಕಾತನಯರು ಭಾಷೆಯಿಂದ ಮಾನವನಿಗೆ ಸಿಗಬೇಕಾದ ಸಂಸ್ಕಾ ರದ ಕುರಿತು ಮೇಲಿನ ಮಾತುಗಳನ್ನು ಬರೆದಿದ್ದಾರೆ. ಆ ಕವನದ ಕೆಲವು ಸಾಲು ಗಳು ಇಂತಿವೆ:

"ಒಡಲ ಹುಟ್ಟು ಮೊದಲ ಹುಟ್ಟು,
ಮಾತಿನಿಂದ ಪೂತನಾಗಿ
ತಾಯಿ ಮನದ ಮೂರ್ತಿಯಾಗಿ
ಅವಳ ಎದೆಯ ಗರ್ಭಗುಡಿಯ
ಮಿಣುಕು ಮಿಣುಕು ಬೆಳಕಿನಲ್ಲಿ
ಮುಗುಳ ನಗೆಯನರಳಿಸುತ್ತ
ನಿಲ್ಲಲಾಗ ಮರಳುಹುಟ್ಟು.
ಆ ಹುಟ್ಟೆ ನಮ್ಮ ಹುಟ್ಟು—
ನಮ್ಮ ಜನ್ಮದೆಲ್ಲ ಗುಟ್ಟು
ಅಲ್ಲಿ ಇಹುದು ಅಲ್ಲೆ ಇಹುದು."

(ನಾದಲೀಲೆ — ಪುಟ ೭೯)

ಭಾಷಾಸಂಸ್ಕೃತಿಯು ರಾಷ್ಟ್ರಸಂಸ್ಕೃತಿಯ ಹಾಗೂ ಮಾನವವಿಕಾಸದ ಒಂದು ಅನಿವಾರ್ಯ ಅಂಗ. ಭಾವೈಕ್ಯಕ್ಕಾಗಿ ಹುಟ್ಟಿದ ಭಾಷೆಗಳನ್ನು ಜಗಳಕ್ಕಾಗಿಯೇ ಬಳಸುವುದು ಮಾನವ ದೌರ್ಬಲ್ಯ. ಅದು ಭಾಷೆಯ ದೋಷವಲ್ಲ.

"ಕನ್ನಡದ ನಾಡಿನಲಿ ಮುನ್ನಡೆಯ ಹೆಜ್ಜೆಯಲ್ಲಿ
ವಿಶ್ವಮೈತ್ರಿಯ ಮೋಡಿ ಮೂಡಲುಂಟು.
ರೋಷಸಂತೋಷಗಳ ಮಲ್ಲಗಾಳಗದಲ್ಲಿ
ಎದೆಯ ಕಾವಳ ಮಟ್ಟು ಜಡಲುಂಟು."
(ಸಿದ್ಧರಾಮರ ವಚನವನ್ನು ನೆನೆದು—ಗಂಗಾವತರಣ, ಪುಟ ೫೨)

'ಇಂದೇ ಮುಂದೇ ಎಂದೇ ಕರ್ನಾಟಕ ಒಂದೇ
ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ
...............................................
ನಮ್ಮದು ನಿಮ್ಮದು ಅವರದು ಈ ಆಸ್ತಿಪಾಸ್ತಿ,
ನಾಡಿನ ತಾಯಿಗೆ ಸೇರಿದೆ, ಬೇರೆಯ ಮನೆ ನಾಸ್ತೀ
ಕನ್ನಡ ಕಾಯಕದಲ್ಲಿಲ್ಲವು ಕಮ್ಮೀ ಜಾಸ್ತೀ,
('ಒಂದೇ ಕರ್ನಾಟಕ' —ಗಂಗಾವತರಣ, ಪುಟ ೪೨)

ದಾಸ-ರಾಗ-ಕಾಲದಲ್ಲಿ
ಶರಣವಚನ ತಾಲದಲ್ಲಿ

ತೀರ್ಥಂಕರ ಉದಯವು
ಅದೆ ಕನ್ನಡ ಹೃದಯವು
(‘ ಕೇಳಿಸುಡಿ ’— ಅರಳುಮರಳು, ಪುಟ-೪೧೮)

ಮೇಲಿನ ಸಾಲುಗಳು ಅಂಬಿಕಾತನಯರಲ್ಲಿ ಕನ್ನಡ ನಾಡ— ನುಡಿಯ ಬಗ್ಗೆ ಮೂಡಿರುವ ಅಪೂರ್ವ ಕನಸಿನ ಚಿತ್ರಗಳು.

‘ ನಮನ ’ದಲ್ಲಿ ಬರುವ ‘ ನನ್ನದು ಈ ಕನ್ನಡನಾಡು ’ ಎಂಬ ಕವನದಲ್ಲಿ ಈ ಕನಸು-ಕಣಸುಗಳ ಭಾವಪುಷ್ಪಗಳನ್ನು ಮೂರೆಳೆಯ ಒಂದು ಮಾಲೆಯಾಗಿ ಪೋಣಿಸಲಾಗಿದೆ.

ಐರೋಪ್ಯ ಭಾಷೆಗಳನ್ನಷ್ಟೇ ಅಂತಾರಾಷ್ಟ್ರೀಯ ಭಾಷೆಗಳೆಂದು ಸ್ವಾಗತಿಸುವ ಕನ್ನಡಿಗರಿಗೆ ಕನ್ನಡ ಭಾಷೆಯಲ್ಲಿ ಹುದುಗಿರುವ ಸಂಸ್ಕೃತಿಸತ್ವದ ಪರಿಚಯ ಇನ್ನಷ್ಟು ಆಗಬೇಕು.—ಈ ಮಾತನ್ನು ಕವಿ ತನ್ನ ಆತ್ಮಕಥನ (‘ ಚತುರ್ಮುಖ ’) ದಲ್ಲಿ ಹೇಳಿದ್ದಾರೆ. ಪಂಪ, ಕುಮಾರವ್ಯಾಸ, ಪ್ರಭುದೇವ, ಬಸವಣ್ಣ, ರತ್ನಾಕರ, ಪುರಂದರದಾಸ, ಸರ್ವಜ್ಞ, ವಿದ್ಯಾರಣ್ಯ, ಜಯತೀರ್ಥ, ಶಂಕರ, ಜಗನ್ನಾಥದಾಸ, ಚಿಕ್ಕದೇವರಾಯ ಇತ್ಯಾದಿಗಳ ವಿಚಾರಗರ್ಭವನ್ನು ಮೈಗೂಡಿಸಿಕೊಂಡ ಕನ್ನಡಿಗರು ಉದಯವಾಗಬೇಕೆಂಬುದೇ ಕವಿಯ ಆಶಯ.

ಶಿವಶರಣರು, ಹರಿದಾಸರು, ಕುಮಾರವ್ಯಾಸಲಕ್ಷ್ಮೀಶಾದಿಗಳು ಬೆಳೆಸಿದ ಭಕ್ತಿ ಕಾವ್ಯದ ಪರಂಪರೆಯನ್ನು ಅಂಬಿಕಾತನಯರು ಒಂದು ವಿಶಿಷ್ಟಕ್ರಮದಲ್ಲಿ ಮುನ್ನಡೆಸಿಕೊಂಡು ಬಂದಿದ್ದಾರೆ. ಅವರು ಬರೆದ ‘ ನನ್ನ ಹಾಡು ’, ‘ ಗಂಗಾವತರಣ ’, ‘ ನೃಸಿಂಹಸ್ತೋತ್ರ ’, ಮೊದಲಾದ ಪದ್ಯಗಳು ಈಗಾಗಲೇ ಕನ್ನಡದ ಭಕ್ತಿಕಾವ್ಯಗಳ ಪಂಕ್ತಿಯಲ್ಲಿ ಸೇರಿಬಿಟ್ಟವೆ.

**ಭಾರತಿಯ ಭಾರ :**

ಹಲವು ಕುಟುಂಬಗಳೂ ಹಲವು ಭಾಷಾಸಂಸ್ಕೃತಿಗಳೂ ಒಂದಾಗಿ ಯುಗ-ಯುಗಾಂತರದಲ್ಲಿ ಸಾಧಿಸಿದ ಭಾವೈಕ್ಯದಿಂದ ಒಂದು ರಾಷ್ಟ್ರಜೀವನ ರೂಪುಗೊಳ್ಳುವುದು ಎಂಬ ಬೇಂದ್ರೆಯವರ ವಿಚಾರಸರಣಿಯನ್ನು ಈಗಾಗಲೇ ಪರಿಶೀಲಿಸಿದ್ದೇವೆ. ಭಾರತವಂತೂ ಜಗತ್ತನ್ನೇ ತನ್ನಲ್ಲಿ ತುಂಬಿಕೊಳ್ಳಲು ಹವಣಿಸಿದ ರಾಷ್ಟ್ರ. ಕೆಳಗೆ ಬರೆದ ಸಾಲುಗಳು ಅಂಬಿಕಾತನಯರ ಭಾರತಭಾಗ್ಯದರ್ಶನದ ಕೆಲವು ತುಣುಕುಗಳು :

‘ ಪುರಾತನವು ಚಿರನೂತನ....
ಭಾರತಮಾತೆಯ ಚೇತನ

‘ ಸಾರುತಿಹುದು ಸಹಜೀವನ
ಪುರಾತನದ ನವನೂತನ ’:

(ಅರಳುಮರಳು, ಪುಟ ೨೯೬ )

‘ ಕಣ್ಣುತುಂಬು ಎದೆಯತುಂಬು ಹೊಟ್ಟೆತುಂಬು ಬಾಳುವೆ.
ಓ ಭಾರತ ಭಟ್ಟಾರಿಕೆ ಭೃತ್ಯಳಾಗಿ ಆಳುವೆ.
ಬ್ರಹ್ಮಕರ್ಮದೊಂದು ಭಾರ ಭಾರತಿಯೇ ತಾಳುವೆ
ಆಡದೆಯೇ ಮಾಡಿ ಕಾರ್ಯ ಆ ಮೇಲೆಯೇ ಹೇಳುವೆ.

‘ ಮಾನವ್ಯದ ನವಧರ್ಮಕೆ ಭಾರತವಿದೆ ದೀಕ್ಷಿತ
ಮಹಾಪುರುಷಯಜ್ಞದಿಂದ ಯುಗಯುಗದಲಿ ರಕ್ಷಿತ,
ಪಂಚಪ್ರಾಣ ಪಂಚಶೀಲ ಅದರ ಕೀಲಧರ್ಮವು,
ಸಜ್ಞ ವಿಜ್ಞ ಭಕ್ತಿಯುಕ್ತ ಜೀವನವೇ ಕರ್ಮವು. ’

(ಅರಳುಮರಳು, ಪುಟ ೪೦೬-೭)

‘ ಸಮರದಲ್ಲಿ ಅಮರರಾದ ಧೀರಪೂರ್ವಜರು ಅವರು
ಈ ನಾಡು ಅವರ ತವರು
ನೂರು ವರ್ಷ ಆದರೇನು ಬಂದೆ ಬರುವರು.
ಬಂಧನದಾ ಕುಣಿಕೆ ಬಿಚ್ಚಿ ಮುಕ್ತಿಮಾಲೆ ತರುವರು.
ಬಂಧನ ಬಂದಷ್ಟು ಸಲವು ಸ್ವಾತಂತ್ರ್ಯವ ತರುವರು
ಅದರ ಹೊಣೆಯ ಹೊರುವರು........

(ನಮನ, ಪುಟ ೪೮)

‘ ಭಾರತಿಯ ದ್ವಾರದಲಿ ಆರತಿಯನಂಟಿಸಿದೆ
ಮಾರುತರ ಹಾವಳಿಯ ಇರುಳಿನಲ್ಲಿ
ಜಾರುತಿವೆ ಜಾವಗಳು ಹಾರುತಿವೆ ಭಾವಗಳು
ಮೂರುತಿಯ ಮಾಟವಿದೆ ಕರುಳಿನಲ್ಲಿ. ’

(ಸೌಭಾಗ್ಯದರ್ಶನ — ನಮನ, ಪುಟ ೪)

‘ ಭಾರತದ ಭಾರತಿಗೆ ಉತ್ತರವೆ ಇಲ್ಲಾ
ಪ್ರಶ್ನೆಯಲ್ಲಾ........... ’

(‘ ನಾಕು ತಂತಿ ’— ಪುಟ ೫೭)

‘ ಇಳೆಗೆ ಭಾರತಮಹಿಮೆ ಅವತರಿ–
ಸುತ್ತಿರಲು ಕನ್ನಡದ ಹೊಕ್ಕರ–
ಣೆಯಲ್ಲಿ ಘನಸೋಪಾನರಚನೆಗೆ ಇಂಬುದೊರೆಕೊಳಿಸಿ,
ಸಾವಿರದ ಕೊರಳಿಂದ ಹೊರಟದೆ
ತಾನತಾನ ವಿತಾನ ಸುಭಗತೆ
ಕವಿಗೆ ಕಿವಿಗೊಡದಿಹರೆ ಎದೆಯುಳ್ಳವರು ಅರುಳಿನಲಿ ’
( ಉತ್ತರಾಯಣ, ಪುಟ ೧೨ )

ತಿಲಕ, ಗಾಂಧಿ, ಟಾಗೋರ ಮೊದಲಾದ ರಾಷ್ಟ್ರನಾಯಕರು ಭಾರತೀಯ ಜೀವನಮೌಲ್ಯಗಳನ್ನು ವಿಶೇಷವಾಗಿ ಗೌರವಿಸುತ್ತಿದ್ದರು. ಮಾನವಭವಿಷ್ಯವನ್ನು ರೂಪಿಸುವುದರಲ್ಲಿ ಭಾರತದೇಶವು ಮಹತ್ತರವಾದ ಪಾತ್ರ ವಹಿಸಬೇಕಾಗಿದೆ ಎಂದು ಅರವಿಂದ ಘೋಷರು ಯೋಗಪೀಠಾರೂಢರಾಗಿ ಘೋಷಿಸಿದರು. ಮಹಾತ್ಮಾ ಗಾಂಧಿಯವರ ಬೋಧನೆಗಳಲ್ಲೂ ಅಂಥದೇ ಆತ್ಮವಿಶ್ವಾಸವಿತ್ತು. ಇತ್ತೀಚೆಗೆ ಈ ಆತ್ಮವಿಶ್ವಾಸ ತೆರೆಯ ಮರೆಯಲ್ಲಿದ್ದಂತೆ ಕಂಡರೂ, ಅಂಬಿಕಾತನಯರ ಕಾವ್ಯ ಸ್ರೋತದಲ್ಲಿ ಭಾರತಮಾತೆ ಧ್ವನಿಬಲದಿಂದಲೇ ಠೇಂಕರಿಸುತ್ತಾಳೆ.

ತಿಲಕ, ಅರವಿಂದ, ಗಾಂಧಿ, ಟಾಗೋರ್ ಮೊದಲಾದ ಮಹಾಭಾರತೀಯರ ಸಂದೇಶದ ವೈಶಿಷ್ಟ್ಯವನ್ನು ಗುರುತಿಸಿ ಹೇಳುವುದು ಇಂಥ ಕವನಗಳ ತಾತ್ಪರ್ಯ.

ಭಾರತವು ಹಲವು ಮತಧರ್ಮಗಳನ್ನು ಹಲವು ಭಾಷೆಗಳನ್ನು ದೇಹಾತೀತ—ಆತ್ಮಧರ್ಮದ ನೆಲೆಯಲ್ಲಿ ಸಮನ್ವಯಗೊಳಿಸಿದ ರಾಷ್ಟ್ರ. ಈ ಅಧ್ಯಾತ್ಮಕೇಂದ್ರದಿಂದಲೇ ಮಾನವರಲ್ಲಿ ನೈಜಬಾಂಧವ್ಯದ ಅಭಿಜ್ಞೆ ಹರಡಬೇಕಾಗಿದೆ.

‘ ಉತ್ತರಧ್ರುವ ಭಾರತಮುಖವಾಗಿ
ಜ್ಞಾನಸಾಗರವ ಕುಡಿಯಲಿದೆ.
ನರಸಿಂಹನ ಭಾರತ ನಖವಾಗಿ
ಹಿರಣ್ಯದೈತ್ಯನ ಒಡೆಯಲಿದೆ. ’
(‘ ಕಿಡಿ – ಕಿಡಿ ’ ಅರಳುಮರಳು, ಪುಟ ೩೯೩)

**‘ ಹೊಸ ಸೃಷ್ಟಿಯೆ ಬರಬಹುದು ’ :**

‘ ಅಖಂಡ ಮಾನವತೆಗೆ ದೈವಿಕಗರ್ಭವಿಲ್ಲದೆ ಉಪಾಯವಿಲ್ಲ .... ಅರವಿಂದರು ಆ ಯೋಗವನ್ನು ಸಮೃದ್ಧಿಗೊಳಿಸುತ್ತಿದ್ದಾರೆ. ’ ಎಂದು ಅರವಿಂದದರ್ಶನವನ್ನು ಕವಿ ಬೇಂದ್ರೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. (‘ ಕಾವ್ಯೋದ್ಯೋಗ ’)

ಅಂಬಿಕಾತನಯರ ಇತ್ತೀಚಿನ ಹೆಚ್ಚಿನ ಕವನಸಂಕಲನಗಳಲ್ಲಿ ಅರವಿಂದರ ತತ್ವ ಪ್ರಣಾಳಿಗೂ, ಯೋಗಸಾಧನೆಗೂ ಸಂಬಂಧಿಸಿದ ಅನುಭಾವಗಳೂ ದರ್ಶನಲಹರಿಗಳೂ ಕನ್ನಡಭಾಷೆಗೆ ಇಳಿದುಬಂದಿವೆ. ಅರವಿಂದರ ಭವಿಷ್ಯತಿ — ದರ್ಶನದ ಸಾರವನ್ನು ಅಂಬಿಕಾತನಯರು ಕನ್ನಡಿಸುವ ರೀತಿಯಲ್ಲಿ ಮಾತಿನಲ್ಲೇ ಮಂತ್ರಶಕ್ತಿ ತುಂಬಿದಂತೆ ಅನುಭವವಾಗುತ್ತದೆ. ಮಾತೆಲ್ಲ ಜ್ಯೋತಿಯಾಗಿ ಮಿಂಚುತ್ತದೆ.

" ಎಲ್ಲೆಲ್ಲೂ ಸೃಷ್ಟಿದೇವಿಗಿಟ್ಟ ಧೂಪಧೂಮಾ,
ಲಹರಿ ಲಹರಿ ಕಂಪಬಳ್ಳಿ ಚಿತ್ತರಂಗ ಭೂಮಾ
ದಾಂಗುಡಿಗಳ ಬಿಡುತಲಿತ್ತು ಅರಳಲಿತ್ತು ಪ್ರೇಮಾ...."
(' ಭಾವಗೀತ '— ನಾದಲೀಲೆ, ಪುಟ ೮೪)

" ಪಾಶವಿಕ ಗ್ರಂಥಿ ಬಿಡಿಸಿತ್ತು ಎಂತೊ ಮಾನವ್ಯದೊಂದು ರೀತಿ
ಮಾನವನ ಹೃದಯವನೆ ಯೋನಿಗೊಳಿಸಿ ಬರಲಿಹುದು ದೇವಜಾತಿ. "
( ಮಹಾಪ್ರಸ್ಥಾನ — ಅರಳುಮರಳು, ಪುಟ ೧೩೪ )

' ಬರುವ ಸೃಷ್ಟಿಯು ಬೇಳೆಯೊಡೆದಿದೆ,
ಮೊಳಕೆ ಮೂಡಿದೆ,
ಶಬ್ದವಾಗಿದೆ, ಶಬ್ದ ಕೇಳಣ್ಣಾ. '
(' ನುಡಿ '— ಅರಳುಮರಳು, ಪುಟ ೩೭೨)

" ಅಂಕುರಿಸಿದೆ ಅರವಿಂದ ಉಪಜ್ಞೆ
ನರನಾರಾಯಣ ಜನಧರ್ಮಿ,
ಅಗ್ನಿಗರ್ಭದಲಿ ಶರದ ದರ್ಭೆಯಲಿ
ಶಿವಕಲ್ಯಾಣದ ನವ ಊರ್ಮಿ. "
(ನವ-ಊರ್ಮಿ— ಅರಳುಮರಳು, ಪುಟ ೩೭೩)

" ಫಲವೆಂದೆ ಬರಲಿ ಯುಗಯುಗವು ತಾಳಿ ಎಡೆಗೆಡದೆ ಇರುವನಾತ,
ಗೊಣಗುಡದೆ ಆವನು ಅವಘಡವ ಸಹಿಸಿ ಎದುರಿಸುವ ವೀರಜಾತ,
ಸಡಿಲಿಸನು ಅವನು ಹವಣಿಕೆಯ ಹಿಡಿತ ಶತಕಾನುಶತಕವಾಗಿ,
ಸಿದ್ಧಿಸಲಿ ಬಿಡಲಿ ಸಮತೆಯನು ಕಳೆದುಕೊಳನಾತ ಸಾಮ್ಯಯೋಗಿ. "
(' ನಾಳಿನ ಮಗು '— ಅರಳುಮರಳು, ಪುಟ ೩೮೬)

ಇಂಥ ಕಾವ್ಯರಚನೆಯಲ್ಲಿ ಭವಿಷ್ಯಚಿಂತನ ಒಂದು ಅನಿವಾರ್ಯವಾದ ಅಂಶ ಎಂದು ಕಾಣುತ್ತದೆ. ಈ ಅಂಶವನ್ನು ಸ್ವೀಕರಿಸದೆ ಹೋದರೆ, ಅಂಬಿಕಾತನಯರು

ಅನುಭಾವಿಕ — ದಾರ್ಶನಿಕ ನೆಲೆಯಲ್ಲಿ ಬರೆದ ಎಷ್ಟೋ ಕವನಗಳ ಮೂಲ ವಸ್ತುವೇ ಅಪಾರ್ಥಕ್ಕೀಡಾದೀತು.

ತಾತ್ವಿಕ — ದಾರ್ಶನಿಕ ಪ್ರಭಾವದಿಂದ ಅಂಬಿಕಾತನಯರ ಕಾವ್ಯಪಾಕವು ಕಲಸುಮೇಲೋಗರವಾಗಲಿಲ್ಲ. ಕನ್ನಡದ ಜನಸಾಮಾನ್ಯರಿಗೂ ನಿಲುಕುವ ಹಾಗೆ, ಅಚ್ಚಗನ್ನಡದ ಜಾನಪದ ಶೈಲಿಯಲ್ಲಿಯೇ ‘ನಾಳಿನ ಬಾಳಿಗೆ’ ಬೇಕಾಗುವ ಒಂದು ದಾರ್ಶನಿಕವಾಣಿಯನ್ನು ಕನ್ನಡಿಸಿದ ಕೀರ್ತಿ ಅಂಬಿಕಾತನಯರದು.

§ § § §

## ಅನುಬಂಧ ೧.

# ಕೃತಿಪರಿಚಯ

### ೧೯೨೨ ರಿಂದ ೧೯೭೫ರ ವರೆಗೆ ಪ್ರಕಟವಾದ ಗ್ರಂಥಗಳು

ಸಾಹಿತ್ಯಿಕ ಜೀವನ : ಅಂಬಿಕಾತನಯದತ್ತ

**ಕವನ ಸಂಗ್ರಹಗಳು :**

೧೯೧೬ ಕವಿತೆ, ಲೇಖನ ವಿಪುಲವಾಗಿ ಬರೆಯಲು ಪ್ರಾರಂಭ
೧೯೨೨ ಕೃಷ್ಣಾಕುಮಾರಿ
೧೯೩೨ ಗರಿ
೧೯೩೪ ಸಖೀಗೀತ
೧೯೩೮ ಉಯ್ಯಾಲೆ
೧೯೩೮ ನಾದಲೀಲೆ
೧೯೪೩ ಮೇಘದೂತ
೧೯೪೬ ಹಾಡು-ಪಾಡು
೧೯೫೧ ಗಂಗಾವತರಣ
೧೯೫೬ ಅರಳು-ಮರುಳು
೧೯೫೬ ಸೂರ್ಯಪಾನ
೧೯೫೬ ಹೃದಯಸಮುದ್ರ
೧೯೫೬ ಮುಕ್ತಕಂಠ
೧೯೫೭ ಚೈತ್ಯಾಲಯ
೧೯೫೭ ಜೀವಲಹರಿ
೧೯೫೮ ನಮನ
೧೯೫೯ ಸಂಚಯ
೧೯೬೦ ಉತ್ತರಾಯಣ
೧೯೬೧ ಮುಗಿಲ ಮಲ್ಲಿಗೆ
೧೯೬೨ ಯಕ್ಷಯಕ್ಷಿ
೧೯೬೪ ನಾಕು ತಂತಿ

೧೯೬೬ ಮರ್ಯಾದೆ
೧೯೬೮ ಶ್ರೀಮಾತಾ
೧೯೬೯ ಬಾ ಹತ್ತರ
೧೯೭೦ ಇದು ನಭೋವಾಣಿ
೧೯೭೨ ವಿನಯ
೧೯೭೩ ಮತ್ತೆ ಶ್ರಾವಣಾ ಬಂತು

**ವಿಮರ್ಶೆ :**

೧೯೩೭ ಸಾಹಿತ್ಯ ಮತ್ತು ವಿಮರ್ಶೆ
೧೯೪೦ ಸಾಹಿತ್ಯ ಸಂಶೋಧನೆ
೧೯೪೫ ವಿಚಾರ ಮಂಜರಿ
೧೯೫೪ ಕವಿ ಲಕ್ಷ್ಮೀಶನ ಜೈಮಿನೀಭಾರತಕ್ಕೆ ಮುನ್ನುಡಿ
೧೯೫೯ ಮಹಾರಾಷ್ಟ್ರ ಸಾಹಿತ್ಯ
೧೯೬೨ ಕಾವ್ಯೋದ್ಯೋಗ
೧೯೬೮ ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕರತ್ನಗಳು
೧೯೭೪ ಸಾಹಿತ್ಯದ ವಿರಾಟ್ ಸ್ವರೂಪ
೧೯೭೬ ‘ ಕುಮಾರವ್ಯಾಸ ’ ಪುಸ್ತಿಕೆ

**ನಾಟಕ :**

೧೯೩೬ ಹುಚ್ಚಾಟಗಳು
೧೯೫೦ ಹೊಸ ಸಂಸಾರ ಮತ್ತು ಇತರ ನಾಟಕಗಳು

**ಸಣ್ಣ ಕತೆ, ಹರಟೆ :**

೧೯೪೦ ನಿರಾಭರಣ ಸುಂದರಿ

**ಭಾಷಣಗಳು :**

೧೯೬೧ ಮಾತೆಲ್ಲ ಜ್ಯೋತಿ

**ಕನ್ನಡಕ್ಕೆ ಅನುವಾದ :**

೧೯೨೮ ಉಪನಿಷತ್ ರಹಸ್ಯ [ಮೂಲ : ಇಂಗ್ಲೀಷ್ ಗ್ರಂಥ :
ಗುರುದೇವ ರಾನಡೆಯವರದು ]
೧೯೩೬ ಭಾರತೀಯ ನವಜನ್ಮ [ಮೂಲ : ಇಂಗ್ಲೀಷ್ ಗ್ರಂಥ :
ಶ್ರೀ ಅರವಿಂದರದು]

೧೯೪೭ ಶ್ರೀ ಅರವಿಂದರ ಯೋಗ, ಆಶ್ರಮ ಮತ್ತು ತತ್ತ್ವೋಪದೇಶ

೧೯೬೬ ಗುರುಗೋವಿಂದ ಸಿಂಗ [ಮೂಲ : ಇಂಗ್ಲೀಷ್]

೧೯೬೭ ನೂರೊಂದು ಕವನ [ಮೂಲ : ರವೀಂದ್ರನಾಥ ಟಾಗೋರ, ಸಾಹಿತ್ಯ ಅಕಾಡಮಿಗಾಗಿ]

೧೯೬೮ ಕಬೀರವಚನಾವಲಿ [ಮೂಲ: ಹಿಂದೀ, ಸಾಹಿತ್ಯಅಕಾಡಮಿಗಾಗಿ]

೧೯೭೩ ಭಗ್ನಮೂರ್ತಿ [ಮೂಲ : ಮರಾಠಿ. ಶ್ರೀ ಅ. ರಾ. ದೇಶಪಾಂಡೆ. ಸಾಹಿತ್ಯ ಅಕಾಡಮಿಗಾಗಿ]

**ಮರಾಠಿಯಲ್ಲಿ ಗ್ರಂಥರಚನೆ :**

೧೯೬೫ ಸಂವಾದ-ಕವನ ಮತ್ತು ವಿಮರ್ಶೆ, ಲೇಖನ ಇವುಗಳ ಸಂಗ್ರಹ

೧೯೬೫ ವಿಟ್ಠಲ ಸಂಪ್ರದಾಯ-ಒಂದು ಭಾಷಣ

೧೯೭೩ ಶಾಂತಲಾ [ಮೂಲ : ಕನ್ನಡ ಸಾಹಿತ್ಯ ಅಕಾಡಮಿಗಾಗಿ]

§ § § §

## ಅನುಬಂಧ ೨.

### ದ. ರಾ. ಬೇಂದ್ರೆಯವರನ್ನು ಕುರಿತು ಗ್ರಂಥಗಳು

೧ ಕವಿವರ ಬೇಂದ್ರೆ—ಲಲಿತ ಸಾಹಿತ್ಯಮಾಲೆ, ೧೯೪೬

೨ ದತ್ತವಾಣಿ—ಮನೋಹರ ಗ್ರಂಥ ಪ್ರಕಾಶನ ಸಮಿತಿ, ೧೯೪೬

೩ ಬೇಂದ್ರೆ ವಾಙ್ಮಯ ದರ್ಶನ—ಎಚ್. ಜಿ. ಜೋಶಿ ಸಂಪಾದಿತ, ೧೯೪೬

೪ ದತ್ತಸಾಹಿತ್ಯ—ಸಿಂಪಿ ಲಿಂಗಣ್ಣ

೫ ಕವಿ ಅಂಬಿಕಾತನಯದತ್ತ—ಶೇ. ಗೋ. ಕುಲಕರ್ಣಿ ಸಂಪಾದಿತ, ೧೯೪೬

೬ ನಮ್ಮ ಬೇಂದ್ರೆಯವರು— ಕರ್ನಾಟಕ ಸಂಘ, ಸೆಂಟ್ರಲ್ ಕಾಲೇಜ, ಬೆಂಗಳೂರು, ೧೯೫೭

೭ ಬೇಂದ್ರೆ—ಪ್ರೊ. ಬಿ. ಎಚ್. ಶ್ರೀಧರ. ಮಹಾತ್ಮಾ ಗಾಂಧೀ ಮೆಮೋರಿಯಲ್ ಕಾಲೇಜ ಪ್ರಕಟಣೆ, ೧೯೫೬

೮ ಬೇಂದ್ರೆ ಹಾಗೂ ಕನ್ನಡ ಕಾವ್ಯದ ಸ್ವರೂಪ—ಪ್ರೊ. ಕೀರ್ತಿನಾಥ ಕುರ್ತಕೋಟಿ, ಕನ್ನಡ ಸಾಹಿತ್ಯ ಸಂಘ, ಕಲಬುರ್ಗಿಯ ಪ್ರಕಟಣೆ, ೧೯೬೧

೯ ಶ್ರೀ ಬೇಂದ್ರೆಯವರ ಕಾವ್ಯಮೀಮಾಂಸೆ — ಡಾ|| ಶಂಕರ ಮೊಕಾಶಿ, ಸಮಾಜ ಪುಸ್ತಕಾಲಯ, ಧಾರವಾಡದ ಪ್ರಕಟಣೆ, ೧೯೬೨

೧೦ ಜೋಗಿಯ ನಾದಧ್ವನಿ— ಪ್ರೊ. ಆರ್. ಜಿ. ಕುಲಕರ್ಣಿ. ಶ್ರೀ ಅರವಿಂದ ಮಂಡಳ ಪ್ರಕಾಶನ, ಬೆಂಗಳೂರು, ೧೯೬೯.

೧೧ ಕವಿ ಶ್ರೀಮಾಲಾ— ಸಂ. ಮತ್ತು ಅನು: ಎಸ್. ಎಸ್. ಕೃಷ್ಣಮೂರ್ತಿ ರಾಷ್ಟ್ರಭಾಷಾ ಪ್ರಚಾರ ಸಮಿತಿ, ವರ್ಧಾ. ೧೯೬೨ (ಕೆಲವು ಕನ್ನಡ ಕವನಗಳ ಹಿಂದೀ ಅನುವಾದ)

೧೨ ಕಾವ್ಯತರಂಗಿಣಿ (ಸಂಪುಟ ೨)—ಶ್ರೀ ಸಿ. ಜಿ. ಪುರುಷೋತ್ತಮ ಸಂಪಾದಿತ. ನಾಲ್ಕು ಕವನಗಳ ಸಂಸ್ಕೃತ ಅನುವಾದ

೧೩ *Bendre: Poet and Seer*— Dr. V. K. Gokak, Somaiya Publications, Bombay, 1970

೧೪ *Dr. D. R. Bendre's 'Four Strings'*: Selection from 'NAKUTANTI Translated by-

Dr. K. Raghavendra Rao, Dr. V. D. Bendre and Prof. K. S. Sharma.

೧೫ ಚತುರ್ಮುಖಸೌಂದರ್ಯ, ಲೀಲೆ, ಕೀರ್ತಿ— ಕವನಗಳು ಜರ್ಮನ್ ಭಾಷೆಯಲ್ಲಿ ಅನುವಾದಗೊಂಡಿವೆ.

೧೬ 'ನಾಕು ತಂತಿ' ಹಿಂದೀ ಅನುವಾದ— ಡಾ|| ಪುತ್ರನ್, ಭಾರತೀಯ ಜ್ಞಾನಪೀಠ ಪ್ರಕಾಶನ, ೧೯೭೪

೧೭ 'ನಾಕು ತಂತಿ' ಮರಾಠಿ ಅನುವಾದ—ಶ್ರೀ ವ್ಹಿ.ಎಲ್. ಜೋಶಿ, ಬೆಳಗಾಂವ [ಅಚ್ಚಿನಲ್ಲಿ]

೧೮ ಬೇಂದ್ರೆ ವಾಙ್ಮಯ ದರ್ಶನ — ಸಂ. ಪಂಢರೀನಾಥಾಚಾರ್ಯ ಗಲಗಲಿ ಸಂಪಾದಿತ— ಪಂಚಾಮೃತ ಪ್ರಕಾಶನ, ಗದಗ, ೧೯೭೪

೧೯ ಬೇಂದ್ರೆ ಸಾಹಿತ್ಯ ಸೌರಭ— ಸಂ. ಕೊಟ್ಟಲಗಿ, ಗದಗಕರ. ಸಮಾಜ ಪುಸ್ತಕಾಲಯ, ಧಾರವಾಡ, ೧೯೭೫

೨೦ ಕವಿ ಬೇಂದ್ರೆ— ಸಂ. ಡಾ|| ಜಿ. ಎಸ್. ಶಿವರುದ್ರಪ್ಪ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಟಣೆ, ೧೯೭೫

೨೧ ವರಕವಿ— ಸಂ. ಸು. ರಂಗಸ್ವಾಮಿ. ಹಂಸಧ್ವನಿ ಪ್ರಕಾಶನ, ಬೆಂಗಳೂರು, ೧೯೭೫

೨೨ ಭೃಂಗದ ಬೆನ್ನೇರಿ— ಪ್ರೊ. ಕೀರ್ತಿನಾಥ ಕುರ್ತಕೋಟಿ. ಮನೋಹರ ಗ್ರಂಥಮಾಲಾ, ಧಾರವಾಡ, ಡಿಸೆಂಬರ ೧೯೭೫

೨೩ ಇಳಿದು ಬಾ ತಾಯಿ — ಸಂ. ಡಾ. ಹಿಂಗಮಿರೆ, ಸಮಾಜ ಪುಸ್ತಕಾಲಯ, ಧಾರವಾಡ.

'ಜೀವನ' 'ಸುಧಾ', 'ಕರ್ಮವೀರ', 'ಮಕರಂದ', 'ತಾಯಿ-ನುಡಿ'. 'ತೇಜಸ್ವಿ' 'ಪಂಚಾಮೃತ' ಮೊದಲಾದ ಪತ್ರಿಕೆಗಳವರು ಕಾಲಕಾಲಕ್ಕೆ ವಿಶೇಷ ಸಂಚಿಕೆಗಳನ್ನು ಪ್ರಕಟಪಡಿಸಿದ್ದಾರೆ.

§ § § §

# ಅನುಬಂಧ ೩.

## ದ. ರಾ. ಬೇಂದ್ರೆಯವರಿಗೆ ಗೌರವಗಳು

### ೧೯೩೦ ರಿಂದ ೧೯೭೬

೧೯೩೦ ಮೈಸೂರು ಲೇಖಕರ ಗೋಷ್ಠಿ ಅಧ್ಯಕ್ಷ

೧೯೩೫ ಮುಂಬೈ ಕವಿ ಸಮ್ಮೇಳನ ಅಧ್ಯಕ್ಷ

೧೯೪೩ ಶಿವಮೊಗ್ಗಾ, ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷ

೧೯೪೬ ೫೦ನೆಯ ಹುಟ್ಟುಹಬ್ಬ, ಧಾರವಾಡ

೧೯೫೬ ೬೦ನೆಯ ಹುಟ್ಟುಹಬ್ಬ. ಸೊಲ್ಲಾಪೂರ. ಧಾರವಾಡ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರಿನಲ್ಲಿ ಸನ್ಮಾನ.

೧೯೫೯ ‘ಅರಳು–ಮರುಳು’ ಕವನ ಸಂಗ್ರಹಗುಚ್ಛಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿ ಬಹುಮಾನ

೧೯೬೫ ಮರಾಠೀ ‘ಸಂವಾದ’ ಗ್ರಂಥಕ್ಕೆ ಕೇಳಕರ ಪ್ರಶಸ್ತಿ

೧೯೬೬ ೭೦ನೆಯ ಹುಟ್ಟುಹಬ್ಬ, ಶಿರಹಟ್ಟಿ. ಕರ್ನಾಟಕ ಸರಕಾರದಿಂದ ಆಜನ್ಮ ವಿಶ್ರಾಂತಿವೇತನ ಗೌರವ. ‘ಸಾಹಿತ್ಯ ಆಚಾರ್ಯ’ ಪ್ರಶಸ್ತಿ, ಹಿಂದೀ ಪ್ರಚಾರ ಸಭಾ, ಹೈದ್ರಾಬಾದ. ಮೈಸೂರು ವಿಶ್ವವಿದ್ಯಾ-ನಿಲಯದಿಂದ ಗೌರವ ಡಾಕ್ಟರೇಟ ಪದವಿ.

೧೯೬೮ ‘ಪದ್ಮಶ್ರೀ’ ಪ್ರಶಸ್ತಿ. ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ ಪದವಿ.

೧೯೬೯ ಫೆಲೋ ಸಾಹಿತ್ಯ ಅಕಾಡಮಿ (ದಿಲ್ಲಿ) ಗೌರವ

೧೯೭೨ ‘ಕರ್ನಾಟಕ ಕವಿಕುಲತಿಲಕ’ ಪ್ರಶಸ್ತಿ— ಶ್ರೀ ಅದಮಾರುಮಠ— ಉಡುಪಿ–ಪರ್ಯಾಯಮಹೋತ್ಸವ

೧೯೭೪ ೭೫ನೆಯ ಹುಟ್ಟುಹಬ್ಬದ ನಿಮಿತ್ತ ಸೊಲ್ಲಾಪೂರದಲ್ಲಿ ಸನ್ಮಾನ

೮–೧೧–೧೯೭೪ ‘ನಾಕು ತಂತಿ’ ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ

೧೯೭೫ ೭೫ನೆಯ ಹುಟ್ಟುಹಬ್ಬದ ನಿಮಿತ್ತ ಪುಣೆಯಲ್ಲಿ ಸನ್ಮಾನ

೧೯–೨–೧೯೭೬ ಕಾಶೀ ವಿದ್ಯಾಪೀಠ, ವಾರಣಾಸಿ ಇವರಿಂದ ಗೌರವ ಡಾಕ್ಟರೇಟ ಪದವಿ.

§ § § §

# ಈ ಸಂಪುಟದ ಲೇಖಕರು

'ಶ್ರೀನಿವಾಸ'
**ಡಾ|| ಮಾಸ್ತಿ ವೆಂಕಟೇಶ ಐಯ್ಯಂಗಾರ**
೪೪, ಗವೀಪುರ ವಿಸ್ತರಣ, ಬೆಂಗಳೂರು-೧೯.

**ಡಾ|| ವಿ. ಕೃ. ಗೋಕಾಕ**
ಬೃಂದಾವನ, ವೈಟ್ ಫೀಲ್ಡ, ಬೆಂಗಳೂರು.

**ವ್ಹಿ. ಎ. ನಾಡಗೀರ,**
ಇಂಗ್ಲೀಷ ಅಧ್ಯಾಪಕ, ಕರ್ನಾಟಕ ಕಾಲೇಜ, ಧಾರವಾಡ.

**ಡಾ|| ಜಿ. ವರದರಾಜರಾವ್**
ಮುಖ್ಯಸ್ಥರು, ಸ್ನಾತಕೋತ್ತರ ಕನ್ನಡ ಅಧ್ಯಯನ ವಿಭಾಗ,
ಮಂಗಳ ಗಂಗೋತ್ರಿ, ಕೊಣಾಜೆ, ಮಂಗಳೂರು-೨.

**ಡಾ|| ಜಿ. ಎಸ್. ಶಿವರುದ್ರಪ್ಪ**
ನಿರ್ದೇಶಕ, ಕನ್ನಡ ಅಧ್ಯಯನಕೇಂದ್ರ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬.

**ಬಿ. ಎಚ್. ಶ್ರೀಧರ**
ನಿವೃತ್ತ ಪ್ರಿನ್ಸಿಪಾಲ್, ಎಂ. ಜಿ. ಸಿ. ಆರ್ಟ್ಸ ಕಾಲೇಜು
ಸಿದ್ದಾಪುರ (ಉ. ಕ.)

**ಗೌರೀಶ ಕಾಯ್ಕಿಣಿ**
ಭದ್ರಕಾಳಿ ಗುಡಿ ರಸ್ತೆ, ಗೋಕರ್ಣ (ಉ. ಕ.)

**ಡಾ|| ಕೆ. ಕೃಷ್ಣಮೂರ್ತಿ**
ಮುಖ್ಯಸ್ಥ, ಸಂಸ್ಕೃತ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಡಾ|| ಡಿ. ಎಸ್. ಕರ್ಕಿ**
ಹೊಸೂರು, ಹುಬ್ಬಳ್ಳಿ

**ಆರ್. ಜಿ. ಕುಲಕರ್ಣಿ,**
ಕನ್ನಡ ಅಧ್ಯಾಪಕ, ಶ್ರೀ ಸತ್ಯಸಾಯಿ ಆರ್ಟ್ಸ್ ಮತ್ತು ಸಾಯನ್ಸ್,
ಕಾಲೇಜು, ಕಾಡುಗೋಡಿ, ವೈಟ್ ಫೀಲ್ಡ್, ಬೆಂಗಳೂರು.

**ಡಾ|| ಸಾ. ಶಿ. ಮರುಳಯ್ಯ**
ಕನ್ನಡ ಅಧ್ಯಾಪಕ, ೬೦/೧, ೪ನೆಯ ಮುಖ್ಯ ರಸ್ತೆ, ೫ನೆಯ ಕ್ರಾಸ್,
ಚಾಮರಾಜಪೇಟೆ, ಬೆಂಗಳೂರು-೧೮.

**ಡಾ|| ಗುರುಲಿಂಗ ಕಾಪಸೆ**
ಅಧ್ಯಾಪಕ, ಕನ್ನಡ ವಿಭಾಗ, ಕರ್ನಾಟಕ ಕಾಲೇಜು, ಧಾರವಾಡ.

**ಗುಂಡ್ಮಿ, ಚಂದ್ರಶೇಖರ ಐತಾಳ**
ಕನ್ನಡ ಅಧ್ಯಾಪಕ, ಸ್ನಾತಕೊತ್ತರ ಕೇಂದ್ರ,
ಮಂಗಳಗಂಗೋತ್ರಿ, ಮಂಗಳೂರು-೩.

**ಭುಜೇಂದ್ರ ಮಹೀಶವಾಡಿ,**
ಅಧ್ಯಾಪಕ, ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**‘ ಎನ್ಕೆ ’**
**ಎನ್. ಕೆ. ಕುಲಕರ್ಣಿ,**
ಯು. ಬಿ. ಹಿಲ್, ಧಾರವಾಡ

**ಜಿ. ಡಿ. ನಾಡಕರ್ಣಿ**
ಕನ್ನಡ ಅಧ್ಯಾಪಕ, ಜೆ. ಎಸ್. ಎಸ್. ಕಾಲೇಜು, ಧಾರವಾಡ.

**ಡಾ|| ರಂ. ಶ್ರೀ. ಮುಗಳಿ**
‘ ಶ್ರೀ ಕಮಲಾಲಯ ’, ೯೫-ಬಿ, ಮೊದಲನೆಯ ಬ್ಲಾಕ್,
ರಾಜಾಜಿನಗರ, ಬೆಂಗಳೂರು-೧೦.

**ಜಿ. ರಮೇಶ ಉಪಾಧ್ಯಾಯ**
ಬೇಳಾಲ (ಬೆಳ್ತಂಗಡಿ ತಾಲೂಕು, ದ. ಕ.)

**ಚೆನ್ನವೀರ ಕಣವಿ**
ಡೈರೆಕ್ಟರ್, ವ್ಯಾಸಂಗ ವಿಸ್ತರಣ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಡಾ|| ಕೆ. ರಾಘವೇಂದ್ರರಾವ್**
ರಾಜ್ಯಶಾಸ್ತ್ರ ಅಧ್ಯಾಪಕ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಡಾ|| ಟಿ. ಆರ್. ಭಟ್ಟ**
ಅಧ್ಯಾಪಕ, ಹಿಂದೀ ವಿಭಾಗ,
ಕರ್ನಾಟಕವಿಶ್ವವಿದ್ಯಾಲಯ, ಧಾರವಾಡ.

ದಿವಂಗತ ರಾಮಚಂದ್ರ ಕೊಟ್ಟಲಗಿ, ಧಾರವಾಡ.

**ಜಿ. ಎಂ. ಹೆಗಡೆ**
ಕನ್ನಡ ಅಧ್ಯಾಪಕ, ಕಿಟೆಲ್ ಕಾಲೇಜು, ಧಾರವಾಡ.

**ಎಸ್. ಪಿ. ಪಾಟೀಲ**
ಸಂಶೋಧನ ಸಹಾಯಕ, ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವದ್ಯಾಲಯ, ಧಾರವಾಡ.

**ಸ ಸ. ಮಾಳವಾಡ**
' ಪ್ರಶಾಂತ ', ಕಲ್ಯಾಣನಗರ, ಧಾರವಾಡ.

**ಶೇಷ ನವರತ್ನ**
ರಿಸರ್ಚ್‌ಸ್ಕಾಲರ್, ಇಂಗ್ಲೀಷ್ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಶ್ರೀಮತಿ ಚಂಪಾಬಾಯಿ ಸೆಟ್ಲೂರ**
ಅಧ್ಯಾಪಕಿ, ಬೆಂಗಳೂರು.

**ಶ್ರೀಮತಿ ಆರ್. ಕೆ. ಪರ್ವತಿ**
ಸಂಗಮೇಶ್ವರ ಕಾಲೇಜು, ಸೊಲ್ಲಾಪುರ.

**ಚಿ. ನ. ಮಂಗಳಾ**
ಪ್ರಿನ್ಸಿಪಾಲ್, ಎನ್. ಎಂ. ಕೆ. ಆರ್. ವಿ. ಕಾಲೇಜ್ ಫಾರ್-ವಿಮೆನ್,
ಜಯನಗರ, ಬೆಂಗಳೂರು.

**ಆರ್. ಎಸ್. ಸುಂಕದ**
ಪತ್ರಕರ್ತ, ವಿಶಾಲ ಕರ್ನಾಟಕ, ಹುಬ್ಬಳ್ಳಿ.

**ಪ್ರಹ್ಲಾದ. ಬ. ನರೇಗಲ್ಲ**
ತಬೀಬ ಲ್ಯಾಂಡ್, ಹುಬ್ಬಳ್ಳಿ.

**ಜಿ. ಎನ್. ಕುಂದರಗಿ**
ತತ್ತ್ವಶಾಸ್ತ್ರ ಅಧ್ಯಾಪಕ, ಚೌಗುಲೆ ಕಾಲೇಜು,
ಮಡಗಾಂವ (ಗೋವಾ).

**ಎಲ್. ಎಸ್. ಶೇಷಗಿರಿರಾವ್**
'ಜ್ಯೋತಿ', ೨೬೭, ಮೂರನೆಯ ಬ್ಲಾಕ್,
ಜಯನಗರ, ಬೆಂಗಳೂರು-೧೧.

**ಪಂಢರೀನಾಥಾಚಾರ್ಯ ಗಲಗಲಿ**
ಶಾಂತಿ ಕಾಲನಿ, ಹುಬ್ಬಳ್ಳಿ-೨೨.

**ಕೀರ್ತಿನಾಥ ಕುರ್ತಕೋಟಿ**
ಇಂಗ್ಲಿಷ್ ಅಧ್ಯಾಪಕರು, ವಲ್ಲಭ ವಿದ್ಯಾನಗರ, ಆನಂದ (ಗುಜರಾಥ)

**'ಸಿ. ಪಿ. ಕೆ.'**
**ಡಾ|| ಸಿ. ಪಿ. ಕೃಷ್ಣಕುಮಾರ**
ಕನ್ನಡ ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ ಮೈಸೂರು-೬.

**ಡಾ|| ವ್ಹಿ. ಎ. ದಿವಾಣಜಿ**
೯೬೪, ಉತ್ತರ ಸದರ ಬಜಾರ, ಸೊಲ್ಲಾಪುರ-೩.

**ಡಾ|| ಜಿ. ಎಸ್. ಆಮೂರ**
ಮುಖ್ಯಸ್ಥರು, ಇಂಗ್ಲೀಷ್ ವಿಭಾಗ, ಮರಾಠವಾಡ ವಿಶ್ವವಿದ್ಯಾಲಯ,
ಔರಂಗಾಬಾದ (ಮಹಾರಾಷ್ಟ್ರ).

**ಸುಮತೀಂದ್ರ ನಾಡಿಗ್**
ಕರ್ನಾಟಕ ಬುಕ್ ಹೌಸ್, ಗಾಂಧಿಬಜಾರ, ಬೆಂಗಳೂರು.

**ಕೆ. ಎಸ್. ನಿಸಾರ್ ಅಹಮದ್**
ಜಿಯಾಲಜಿ ಅಧ್ಯಾಪಕ, ಸರ್ಕಾರಿ ಸೈನ್ಸ್ ಕಾಲೇಜು, ಬೆಂಗಳೂರು-೧.

**ಡಾ|| ಶಂಕರ ಮೊಕಾಶಿ ಪುಣೇಕರ**
ಇಂಗ್ಲೀಷ್ ಅಧ್ಯಾಪಕ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ವೇಣುಗೋಪಾಲ ಸೊರಬ**
ಇಂಗ್ಲೀಷ ಅಧ್ಯಾಪಕ, ಕನಕಪುರ ಕಾಲೇಜು, ಬೆಂಗಳೂರು

**ಚೆನ್ನಣ್ಣ ವಾಲೀಕಾರ**
ಕನ್ನಡ ಅಧ್ಯಾಪಕ, ಎಲ್. ವಿ. ಡಿ. ಕಾಲೇಜು, ರಾಯಚೂರು

**ದೇವೇಂದ್ರಕುಮಾರ ಹಕಾರಿ**
ಕನ್ನಡ ಅಧ್ಯಾಪಕ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಡಾ|| ವರದರಾಜ ಹುಯಿಲಗೋಳ**
ಸಾಧನಕೇರಿ, ಧಾರವಾಡ.

**ಮುರಳೀಧರ ಉಪಾಧ್ಯ ಹಿರಿಯಡಕ**
ನೀಲಿಮಾನಿಲಯ, ಹಿರಿಯಡಕ (ದ. ಕ.)

**ಡಾ|| ವಾಮನ ಬೇಂದ್ರೆ**
ಕನ್ನಡ ಅಧ್ಯಾಪಕ, ಕಿಟೆಲ್ ಕಾಲೇಜು, ಧಾರವಾಡ.

**ಡಾ|| ಪು. ತಿ. ನರಸಿಂಹಾಚಾರ್**
೭೮, ೨ನೆಯ ಮುಖ್ಯ ರಸ್ತೆ, ಜಯಲಕ್ಷ್ಮಿಪುರಂ, ಮೈಸೂರು–೧೨.

**ಗೋ. ವೆಂ. ಚುಳಕಿ**
ಮಾಳಮಡ್ಡಿ, ಧಾರವಾಡ.

**ಸಿಂಪಿ ಲಿಂಗಣ್ಣ**
ಅರವಿಂದ ಗ್ರಂಥಾಲಯ, ಚಡಚಣ, (ವಿಜಾಪುರ ಜಿಲ್ಲೆ)

**ಡಾ|| ಗೊರೂರು ರಾಮಸ್ವಾಮಿ ಅಯ್ಯಂಗಾರ್**
ಗೊರೂರು (ಹಾಸನ ಜಿಲ್ಲೆ)

**ರಾ. ವೆಂ. ಕರಗುದರಿ**
೫೯–ಎ, ಅಶೋಕನಗರ, ಹುಬ್ಬಳ್ಳಿ.

**'ಸರೋಜಿನಿ'**
**ಸರೋಜಿನಿ** ಗೂಗಿ, ಹಲಸಂಗಿ
ಪಾಂಡೀಚೇರಿ.

**ದ. ಲ. ಕೆರೂರ**
ಪತ್ರಕರ್ತ, ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ.

**ಡಾ|| ರಾ. ಯ. ಧಾರವಾಡಕರ**
ಸತ್ಯದೀಪ, ಸಾರಸ್ವತಪುರ, ಧಾರವಾಡ.

ಕೃಷ್ಣಮೂರ್ತಿ ಪುರಾಣಿಕ
‘ ಆಶೀರ್ವಾದ ’, ಗೋಕಾಕ(ಬೆಳಗಾಂವ ಜಿಲ್ಲೆ).

ಮ. ಗ. ಶೆಟ್ಟಿ
ಮಡಗಾಂವ (ಗೋವಾ).

ಸೌ. ವಿಶಾಖಾ ಬೇಂದ್ರೆ
ಶ್ರೀಮಾತಾ, ಸಾಧನಕೇರಿ, ಧಾರವಾಡ.

ಮಾಧವ ಮಹಿಷಿ
ಪತ್ರಕರ್ತ, ಕಸ್ತೂರಿ, ಹುಬ್ಬಳ್ಳಿ.

ಡಾ|| ಸದಾನಂದ ನಾಯಕ
ಟಿ. ಸಿ. ಡಬ್ಲ್ಯು., ಧಾರವಾಡ.

ವಿ. ಸೀತಾರಾಮಯ್ಯ
೧, ಎರಡನೆಯ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮

ಡಾ|| ಶ್ರೀನಿವಾಸ ಹಾವನೂರ
ಗ್ರಂಥಪಾಲ, ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್, ಕೊಲಾಬಾ, ಬೊಂಬಾಯಿ-೫.

ನಿ. ಶ್ರೀಶ ಬಲ್ಲಾಳ
ಅರ್ಥಶಾಸ್ತ್ರ ಅಧ್ಯಾಪಕ, ಎಂ. ಜಿ. ಎಂ. ಕಾಲೇಜು ಉಡುಪಿ.

§ § § §

